

# ಷೇಕ್ಸ್ಪಿಯರಿಗೆ ನಮಸ್ಕಾರ

ಮಹಾಕವಿ ವಿಲಿಯಂ ಷೇಕ್ಸ್ಪಿಯರ್ ಸಹಸ್ರಾರು ಮೈಲಿಗಳಾಚೆಯ ಇಂಗ್ಲಂಡಿನಲ್ಲಿ ಹುಟ್ಟಿ ಇಂಗ್ಲಿಷಿನಲ್ಲಿ ಬರೆದವನಾದರೂ ಅವನು ಕನ್ನಡ ಜನತೆಗೆ 'ಇವನು ನಮ್ಮ ಕವಿಗಳಲ್ಲೊಬ್ಬನೇ' ಎನ್ನುವಷ್ಟು ಅಚ್ಚುಮೆಚ್ಚು. ನಮ್ಮಲ್ಲಿ ಕಾಲೇಜು ಕಂಡವರೆಲ್ಲರೂ ಅವನ ನಾಟಕಗಳಲ್ಲಿ ಒಂದೆರಡನ್ನಾದರೂ ಓದಿ, ಅವನೊಡನೆ ಅತ್ತು, ನಕ್ಕು, ಕೆರಳಿ, ಮರುಗಿ, ಭಾವನೆಗಳನ್ನು ಅರಳಿಸಿಕೊಂಡಿದ್ದೇವೆ; ಅವನ ಕಾವ್ಯದ ಸೆಲೆಯಲ್ಲಿ ಮಿಂದು ಆನಂದಿಸಿದ್ದೇವೆ. ಈ ಋಣ ದೊಡ್ಡದು.

1964ರಲ್ಲಿ ಜಗತ್ತು ಈ ಮಹಾಕವಿಯ ನಾನೂರನೆ ವರ್ಧಂತಿಯನ್ನು ವಿಜೃಂಭಣೆಯಿಂದ ಆಚರಿಸಿತು. ಆ ಶುಭ ಸಂದರ್ಭದ ನೆನಪಾಗಿ, ಕವಿಯ ಬಗ್ಗೆ ಕನ್ನಡಿಗರಿಗಿರುವ ಆದರ, ಅಭಿಮಾನ, ಕೃತಜ್ಞತೆಗಳ ಪ್ರತೀಕವಾಗಿ ನಿರ್ಮಿತಗೊಂಡ ಸ್ಮಾರಕ ಈ ಗ್ರಂಥ. ಇದನ್ನು ಹವಣಿಸಿ ಒಪ್ಪಿಸುತ್ತಿರುವುದು ಷೇಕ್ಸ್ಪಿಯರನ ಹೆಸರನ್ನು ಕೇಳಿ ಆದರ ಬೆಳಸಿಕೊಂಡೂ ಅವನ ಬಗ್ಗೆ ಹೆಚ್ಚು ತಿಳಿಯುವ ಅವಕಾಶವಿಲ್ಲದ, ಅವನ ಕೃತಿಗಳನ್ನು ಮೂಲದಲ್ಲಿ ಓದಿ ಸವಿಯುವ ಸೌಭಾಗ್ಯ ಪಡೆಯದ ಕನ್ನಡ ಶ್ರೀಸಾಮಾನ್ಯರಿಗೆಂದು. ಇದರಲ್ಲಿ ಮೂರು ವಿಭಾಗಗಳಿವೆ. ಮೊದಲನೆಯ ಲೇಖನ ವಿಭಾಗದಲ್ಲಿ ಷೇಕ್ಸ್ಪಿಯರನ ಸಾಹಿತ್ಯಸೃಷ್ಟಿಯ ಬೇರೆ ಬೇರೆ ಮುಖಗಳ ಮೇಲೆ ಬೆಳಕು ಚೆಲ್ಲುವ, ಕನ್ನಡ ಸಾಹಿತ್ಯ ರಂಗಭೂಮಿಗಳ ಮೇಲೆ ಅವನ ಪ್ರಭಾವ ಎಷ್ಟೆಂದು ಅಳೆದು ತೋರಿಸುವ ಹದಿನಾರು ಪಾಂಡಿತ್ಯಪೂರ್ಣ ಲೇಖನಗಳಿವೆ.

ಎರಡನೆಯ ಭಾಷಾಂತರ-ವಿಭಾಗದಲ್ಲಿ ಮುಖ್ಯವಾಗಿ ಈವರೆಗೆ ಹೊಸಗನ್ನಡದಲ್ಲಿ ಅನುವಾದವಾಗದೆ ಉಳಿದ ಕವನಗಳ, ಗೀತಗಳ, ನಾಟಕಗಳಿಂದ ಆರಿಸಿದ ರಸಭಾಗಗಳ ಮೂವತ್ತಕ್ಕೂ ಹೆಚ್ಚು ಭಾಷಾಂತರಗಳಿವೆ. ಕನ್ನಡದಲ್ಲೇ ಮೊಟ್ಟಮೊದಲ ಬಾರಿಗೆ ಕವಿಯ ಹದಿನಾರು ಸಾನೆಟ್ಟುಗಳು ಇಲ್ಲಿ ಅನುವಾದಿತವಾಗಿವೆ. ಈಗ ದುರ್ಲಭವಾದ ಹಿಂದಿನ ಒಂದೆರಡು ಕಾವ್ಯಾನುವಾದಗಳೂ ಇಲ್ಲಿವೆ.

ಮೂರನೆಯದಾದ 'ಕೃತಿ-ಪರಿಚಯ'ದಲ್ಲಿ ಷೇಕ್ಸ್ಪಿಯರನ ಒಂದೊಂದು ಕೃತಿಯನ್ನೂ ಪ್ರತ್ಯೇಕವಾಗಿ ಎತ್ತಿಕೊಂಡು ಸ್ಥೂಲವಾಗಿ ಪರಿಚಯ ಮಾಡಿಕೊಡಲಾಗಿದೆ.

ಪ್ರಸ್ತಾವನೆಯಲ್ಲಿ ಕವಿಯ ಜೀವನ, ಕೃತಿ, ಸಾಧನೆಗಳ ಒಂದು ಹಕ್ಕಿನೋಟವಿದೆ.

ಈ ಗ್ರಂಥ ಸುಮಾರು ನಲವತ್ತು ಜನ ಅಗ್ರಪಂಕ್ತಿಯ ಹಿರಿಕಿರಿಯ ಕನ್ನಡ ಕವಿಸಾಹಿತಿಗಳಿಂದ ವರ್ಣಪರಿಮಳಭರಿತವಾದ ಒಂದೊಂದು ಹೂ ತಂದು ಕಟ್ಟಿ, ಕವಿಚಕ್ರವರ್ತಿಯ ನೆನಪಿಗೆ ಅರ್ಪಿಸಿದ ಹೂಗೊಂಚಲು.

ಬೆಲೆ : ೨೫ ರೂಪಾಯಿಗಳು

ಶಾಶ್ವತ ಪ್ರೀತಿಯ ಕಾಣಿಕೆ
~ ಅರುಣ.



ನಾನೂರನೆ ವರ್ಧಂತಿಯ ನೆನಪಾಗಿ ಕವಿಚಕ್ರವರ್ತಿಗೆ
ಸಲ್ಲಿಸಿದ ಕನ್ನಡ ಗ್ರಂಥಾಂಜಲಿ

# ಷೇಕ್ಸ್ಪಿಯರಿಗೆ ನಮಸ್ಕಾರ

ಸಂಪಾದನ ಮತ್ತು ಮುದ್ರಣವಿನ್ಯಾಸ:
**ಶಾ. ಬಾಲುರಾವ್**

ಚಿತ್ರವಿನ್ಯಾಸ:
**ಆರ್. ಎಸ್. ಎನ್.**

ಕನ್ನಡ-ಭಾರತೀ
4/10, ವೆಸ್ಟರ್ನ್ ಎಕ್ಸ್‌ಟೆನ್‌ಷನ್
ಕರೋಲ್ ಬಾಗ್, ಹೊಸ ದಿಲ್ಲಿ-5.

**Shakespearige Namaskara**

A quatercentenary homage, in Kannada, to William Shakespeare consisting of articles on, translations from and short introductions to the works of the Poet contributed by distinguished Kannada writers.

*Edited, designed & produced by*

**S. Balu Rao**

*Illustrated by*

**R. S. Naidu**

*Published by*

**Kannada Bharati**

4/10 W. E. A., Karol Bagh

New Delhi-5

*Printed at*

**The Printsman**

New Delhi-5

*Cover printed at*

**Shuchi Private Limited**

New Delhi-5

*Bound & tooled by*

**Rajadhani Book Binding House**

New Lajpat Rai Market, Delhi-6

*Published in*

August, 1966



**Price : Rs 25**

# ಕನ್ನಡ-ಭಾರತಿಯ ನಮಸ್ಕಾರ

ಏಷ್ಟೋ ಮೈಲಿಗಳ ದೂರ ನಡೆಯಬೇಕಾಗಿ ಗುರಿ ಮುಟ್ಟುವುದು ಎಂದೋ ಎಂತೋ ಎಂದು ಗಳಿಗೆ ಗಳಿಗೆಗೆ ಹೆಜ್ಜೆ ಭಾರವಾಗುತ್ತಾ ಬಂದಾಗ್ಯೂ ಧೃತಿಗೆಡದೆ ಮುಂದುವರಿಯುತ್ತಿದ್ದಾಗ ಕೊನೆಮುಟ್ಟಿತೆಂದು ಒಮ್ಮೆಗೇ ಮನವರಿಕೆಯಾದೊಡನೆಯೇ ಯಾತ್ರಿಕನಿಗೆ ದೊರೆಯುವ ಆನಂದ ವರ್ಣನೆಗೆ ನಿಲುಕದ್ದು. ತನ್ನ ಸಾತ್ವಿಕ ಸಾಹಸ ಕೊನೆಗೂ ಫಲ ಬಿಟ್ಟಿತಲ್ಲ ಎಂದು ಮಾತಿಗೆ ಮೀರಿದ ತೃಪ್ತಿ. ಇಂದು ಕನ್ನಡ-ಭಾರತಿಗೆ ಅಂತಹ ಆನಂದದ ದಿನ; ಹಿಡಿದ ಕಾರ್ಯ ಹೊನ್ನಾಯಿತಲ್ಲ ಎಂಬ ತೃಪ್ತಿಯ ದಿನ. ಇಂತಹ ದಿನ ಉದಯಿಸಲು ಕಾರಣರಾದವರು ಒಬ್ಬಿಬ್ಬರಲ್ಲ; ಕನ್ನಡ-ಭಾರತಿಯ ನೂರಾರು ಶ್ರೇಯೋಭಿಲಾಷಿಗಳು— ಪಾಂಡಿತ್ಯಪೂರ್ಣ ಲೇಖನ ಹಾಗೂ ಅನುವಾದಗಳನ್ನೊದಗಿಸಿದ ಕನ್ನಡ ನೆಲದ ವಿದ್ವದ್ರಸಿಕರು; ವಿವಿಧ ರೂಪಗಳಲ್ಲಿ ದ್ರವ್ಯಸಹಾಯ ನೀಡಿದ ಕನ್ನಡಾಭಿಮಾನಿಗಳು; ದುಡಿತದಿಂದಲೇ ಹಳ್ಳ ತುಂಬಿಸಿದ ರಾಮಭಕ್ತರು. ಇವರೆಲ್ಲರಿಗೂ ಇದೋ ಕನ್ನಡ-ಭಾರತಿಯ ಹೃತ್ಪೂರ್ವಕ ನಮಸ್ಕಾರ.

ಈಗ್ಗೆ ಮೂವತ್ತು ತಿಂಗಳ ಹಿಂದಿನ ಮಾತು. ಕನ್ನಡ-ಭಾರತೀ ಹುಟ್ಟಿ ಸ್ವಲ್ಪ ಹೆಚ್ಚು ಕಡಿಮೆ ಒಂದು ವರ್ಷ ಸಂದಿತ್ತು. ನುಡಿಯ ಋಣ ತೀರಿಸಲು ರಂಗವೊಂದೇ ಸಾಲದೆಂದೂ ಅದರ ಜೊತೆಗೆ ಪ್ರಕಾಶನ ಕಾರ್ಯವೂ ಅಗತ್ಯವೆಂದೂ ಮನಗಂಡು ಒಂದು ಪ್ರಕಾಶನ ವಿಭಾಗವನ್ನೂ ಕನ್ನಡ-ಭಾರತೀ ರೂಪಿಸಿ ಅದರ ಮೊದಲ ಕುಸುಮವಾಗಿ ಗೆಳೆಯ ಶಾ. ಬಾಲುರಾಯರ 'ಕೈಗೆ ಬಂದ ತುತ್ತು' ನಾಟಕವನ್ನು ಕ್ರೋಧಿ ಸಂವತ್ಸರದ ಯುಗಾದಿಯಂದು ಹೊರತಂದಿತ್ತು. ಆ ವರ್ಷ (1964) ಷೇಕ್‌ಸ್ಪಿಯರ್ ಮಹಾಕವಿಯ ನಾನೂರನೆ ಜಯಂತ್ಯುತ್ಸವದ ವರ್ಷ. ವಿಶ್ವದ ನಾನಾ ಭಾಗಗಳಲ್ಲಿ ಸಂಸ್ಥೆಗಳೂ ಸಾಹಿತ್ಯಕೂಟಗಳೂ ತಮ್ಮ ನೆನಪುಗಳನ್ನು ಆ ಕವಿಪುಂಗವನಿಗೆ ಒಂದಲ್ಲ ಒಂದು ಬಗೆಯಲ್ಲಿ ಸಲ್ಲಿಸುತ್ತಿರುವಾಗ ತನ್ನ ಚೈತನ್ಯಕ್ಕೆ ಒಪ್ಪುವಂತೆ ಸರಳ ರೀತಿಯಲ್ಲಿ ತಾನೂ ಆ ನಾಟಕಬ್ರಹ್ಮನನ್ನು ನೆನೆದು ವಿಶ್ವದ ಹೂರಾಶಿಗೆ ತನ್ನ ಹೂವೊಂದನ್ನೂ ಅರ್ಪಿಸಬೇಕೆಂದು ಕನ್ನಡ-ಭಾರತೀ ಯೋಚಿಸಿತು. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಕನ್ನಡಿಸಿದ ಷೇಕ್‌ಸ್ಪಿಯರನ ರುದ್ರನಾಟಕಗಳಲ್ಲಿ ಶ್ರೇಷ್ಠವೆನಿಸಿದ 'ಮ್ಯಾಕ್‌ಬೆತ್' ನಾಟಕದ ಪ್ರದರ್ಶನ, ವಿಮರ್ಶನಾತ್ಮಕ ಲೇಖನಗಳನ್ನೂ ಇದುವರೆಗೆ ಕನ್ನಡಕ್ಕೆ ಬಂದಿರದ ಮೂಲ ಭಾಗಗಳನೇಕಗಳ ಅನುವಾದಗಳನ್ನೂ ಷೇಕ್‌ಸ್ಪಿಯರನ ನಾಟಕಗಳ ಪರಿಚಯಗಳನ್ನೂ ಒಳಗೊಂಡ 'ನೆನಪಿನ ಹೊತ್ತಗೆ'ಯ ಪ್ರಕಟಣೆ— ಈ ಎರಡು ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಮುಂದೆ ಸಾಗಿತು. ನಾಟಕಪ್ರದರ್ಶನ 1964ರ ಅಕ್ಟೋಬರ್ ತಿಂಗಳಿನಲ್ಲೇ ನಡೆಯಿತಾದರೂ 'ನೆನಪಿನ ಹೊತ್ತಗೆ'ಯ ಕಾರ್ಯ ಮುಂದುವರಿಯುತ್ತಲೇ ಹೋಯಿತು,

ಬೆಳೆಯುತ್ತಲೂ ಹೋಯಿತು. ಗ್ರಂಥ ಬೆಳಕಿಗೆ ಬರಲು ಇಷ್ಟು ಕಾಲ ಹಿಡಿಯಿತು ನಿಜ; ಆದರೆ ಗ್ರಂಥದ ಪುಟಗಳನ್ನು ಕೊನೆಯಿಂದ ಕೊನೆಯವರೆಗೆ ಒಮ್ಮೆ ತಿರುವಿಹಾಕಿದರೆ ಈ ವಿಳಂಬಕ್ಕೆ ಕಾರಣ ಯಾರಿಗಾದರೂ ಗೊತ್ತಾದೀತು.

ಲೇಖನ ಹಾಗೂ ಅನುವಾದಗಳ ಸಂಗ್ರಹಣೆ ಮತ್ತು ಅವುಗಳ ಸಂಪಾದನಕಾರ್ಯ, ದೆಹಲಿಯಲ್ಲೇ ಅಚ್ಚುಕೂಟವನ್ನು ಅನುವು ಮಾಡಿಕೊಂಡು ಕಣ್ಣೆದುರಿಗೇ ನಡಸಿದ ಮುದ್ರಣ ಕಾರ್ಯ, ರೇಖಾಚಿತ್ರಗಳನ್ನು ಬಿಡಿಸಿ ಅವುಗಳಿಂದ ಪಡಿಯಚ್ಚುಗಳ ಸಿದ್ಧತೆ, ಮುದ್ರಣ ಕಾರ್ಯದಲ್ಲಿ ಲವಲೇಶವೂ ಕುಂದು ಬರದಂತೆ ಎಲ್ಲಾ ಹಂತಗಳಲ್ಲೂ ಕಣ್ಣಲ್ಲಿ ಕಣ್ಣಿಟ್ಟು ನಡೆಸಬೇಕಾಗಿ ಬಂದ ಮೇಲ್ವಿಚಾರಣೆ ಮತ್ತು ಇಂತಹ ಇನ್ನೆಷ್ಟೋ ಸಮಸ್ಯೆಗಳು ಕೆಲಸಕ್ಕೆ ತಡೆಯೊಡ್ಡಿದವು. ಆದರೆ ಇವೆಲ್ಲವನ್ನೂ ಎದುರಿಸಿ ಹಿಡಿದ ಪಟ್ಟನ್ನು ಸಡಿಲಿಸದೆ ಕಾರ್ಯ ವನ್ನು ಕೊನೆಮುಟ್ಟಿಸಿದ ಸಂಪಾದಕ ಶಾ. ಬಾಲುರಾಯರಿಗೆ ಕನ್ನಡ-ಭಾರತೀ ಋಣಿ ಯಾಗಿದೆ. ಈ ಗ್ರಂಥ ಸಾಕಾರಗೊಂಡದ್ದು ಅವರ ಸಾಹಸದಿಂದಲೇ.

ಈ ಗ್ರಂಥದ ಮುದ್ರಣದ ಹೊಣೆಯನ್ನು ಹೊತ್ತ ದಿಲ್ಲಿಯ ಪ್ರಿಂಟ್ಸ್‌ಮನ್ ಮುದ್ರಣಾ ಲಯದ ಶ್ರೀ ಗೋಪೀನಾಥ್ ಸೇಠ್, ಶ್ರೀ ದೀಪಕ್ ಸೇಠ್, ಪುಟಗಳನ್ನು ಮುದ್ರಣಕ್ಕೆ ಸಿದ್ಧಪಡಿಸಿದ ಶ್ರೀ ನಾರಾಯಣ ಮೂರ್ತಿ, ರೇಖಾಚಿತ್ರಗಳನ್ನು ಬಿಡಿಸಿ ಕಳುಹಿಸಿದ ಹೆಸರಾಂತ ಕಲೆಗಾರ ಶ್ರೀ ಆರ್. ಎಸ್. ನಾಯ್ಡು ಇವರುಗಳಿಗೆ ಕನ್ನಡ-ಭಾರತೀ ಅತ್ಯಂತ ಆಭಾರಿಯಾಗಿದೆ.

ಷೇಕ್‌ಸ್ಪಿಯರ್ ಮಹಾಕವಿಯ ಬಗ್ಗೆ ವಿದ್ವತ್ಪೂರ್ಣ ಲೇಖನಗಳನ್ನೂ ಆತನ ನಾಟಕ ದೃಶ್ಯಗಳ ಹಾಗೂ ಸಾನೆಟ್ಟುಗಳ ಸುಂದರವಾದ ಅನುವಾದಗಳನ್ನೂ ಒದಗಿಸಿ ಕನ್ನಡ ಸಾರಸ್ವತ ಸಂಪತ್ತಿಗೆ ಈ ಗ್ರಂಥ ಒಂದು ಅಪೂರ್ವ ಕಾಣಿಕೆಯಾಗುವಂತೆ ಮಾಡಿದ ಸಹೃದಯ ಸಾಹಿತಿಗಳಿಗೆ ಕನ್ನಡ-ಭಾರತಿಯ ಸಹಸ್ರ ಸಹಸ್ರ ನಮಸ್ಕಾರಗಳು.

'ಷೇಕ್‌ಸ್ಪಿಯರಿಗೆ ನಮಸ್ಕಾರ' ಗ್ರಂಥ ಹೊರಬಂದಾಯಿತು. ಕನ್ನಡ-ಭಾರತಿಯ ಎರಡನೆಯ ಕೊಡುಗೆ ಇದು. ಮುಂದೇನು? ಈ ಪ್ರಶ್ನೆಯನ್ನು ಕನ್ನಡ-ಭಾರತೀ ಎದುರಿಸ ಬೇಕು ನಿಜ. ಆದರೆ ಇದಕ್ಕೆ ಉತ್ತರ ನೀಡುವ ಹೊಣೆಗಾರಿಕೆ ಓದುಗರಿಗೂ ಕನ್ನಡದಲ್ಲಿ ಒಳ್ಳೆಯ ಕೆಲಸಗಳಾಗಬೇಕೆನ್ನುವ ಕನ್ನಡ ಕೋವಿದರಿಗೂ ಸೇರಿದೆ. ತಾಯ್ನೆಲದಿಂದ ದೂರ ಬಂದಷ್ಟೂ ತಾಯ್ನುಡಿಯ ಮೇಲಿನ ಮಮತೆ ಹೆಚ್ಚುವುದಂತೆ. ಈ ಮಮತೆಗೆ ನೀರೆರೆಯುವುದರಿಂದ ಭಾಷೆಯ ವೃದ್ಧಿಗೂ ಪ್ರಸಾರಕ್ಕೂ ಪುಷ್ಟಿ ಒದಗುವುದು. ದೆಹಲಿಯ ಕನ್ನಡಿಗರೂ ಸಹ ಕರ್ನಾಟಕದಿಂದ ಎಷ್ಟೇ ದೂರದಲ್ಲಿರಲಿ ಕನ್ನಡ ನುಡಿಯ ಸಂಪತ್ತನ್ನೂ ಸಂಸ್ಕೃತಿಯನ್ನೂ ವ್ಯಾಪಕಗೊಳಿಸಲು ಮುಂದೆ ಬರುವುದಾದರೆ ಆ ಪ್ರಯತ್ನಗಳಿಗೆ ಪುಟ ವಿಟ್ಟು ರೂಪಗೊಳಿಸಲೂ ಪ್ರಕಾಶನ ವಿಭಾಗದ ಮೂಲಕ ಸಾಹಿತ್ಯಸೇವೆಯನ್ನು ವಿಸ್ತೃತ ಗೊಳಿಸಿ ಇನ್ನು ಮುಂದೆಯೂ ಇಂತಹ ಆಣಿಮುತ್ತುಗಳನ್ನು ಬೆಳಕಿಗೆ ತರಲೂ ಕನ್ನಡ-ಭಾರತೀ ಸರ್ವದಾ ಸಿದ್ಧವಿದೆ.

ಸಿರಿಗನ್ನಡಂ ಗೆಲ್ಗೆ

15 ಆಗಸ್ಟ್ 1966
ಹೊಸ ದಿಲ್ಲಿ

ಕಾರ್ಯಕಾರೀ ಸಮಿತಿ
**ಕನ್ನಡ-ಭಾರತೀ**

# ಸಂಪಾದಕನ ಬಿನ್ನಹ

ಕನ್ನಡದಲ್ಲಿ 'ಗಜಪ್ರಸವ'ವೆಂಬ ರೂಢಿಯ ಮಾತೊಂದುಂಟು. ಆನೆಯ ಬಗ್ಗೆ ಹೇಗೊ ಏನೊ, ಆನೆಯ ಗಾತ್ರದ ಕೆಲಸಗಳ ವಿಷಯದಲ್ಲಂತೂ ಈ ಮಾತು ಹದಿನಾರಾಣೆ ನಿಜ. ಮಹಾಕವಿ ವಿಲಿಯಂ ಷೇಕ್‌ಸ್ಪಿಯರನ ನಾನೂರನೆ ವರ್ಧಂತಿಯ ವರ್ಷವಾದ 1964ರ ಏಪ್ರಿಲ್ ತಿಂಗಳಿನಲ್ಲಿ ಕೈತೊಡಗಿಸಿ, ಆ ವರ್ಷದ ಕೊನೆಯೊಳಗೇ ಮುಗಿಸಬಹುದೆಂದು ಆಶಿಸಲಾಗಿದ್ದ ಈ ಗ್ರಂಥದ ಸಂಪಾದನ ಮುದ್ರಣಗಳ ಕಾರ್ಯ ಇದೀಗ ಹತ್ತಿರ ಹತ್ತಿರ ಎರಡೂವರೆ ವರ್ಷಗಳ ನಂತರ, ಆ ಕಾಲಾವಧಿಯ ದೀರ್ಘತೆಗೆ ಸರಿತೂಗುವಷ್ಟೇ ಪ್ರಮಾಣದ ನಿರಂತರ ಶ್ರಮಸಾಹಸಗಳ ಫಲವಾಗಿ ಅಂತಿಮ ಘಟ್ಟ ಮುಟ್ಟಿದೆ. ಈ ಎರಡೂವರೆ ವರ್ಷಗಳಲ್ಲಿ ಮೊದಲ ಒಂದು ವರ್ಷ ಪತ್ರವ್ಯವಹಾರ, ಲೇಖನ ಭಾಷಾಂತರಗಳ ಸಂಗ್ರಹಕ್ಕೂ ಉಳಿದ ಕಾಲ ಮುದ್ರಣಾದಿಗಳಿಗೂ ವಿನಿಯೋಗವಾಯಿತು. ಇದು ಅಚ್ಚಾದುದು ಕನ್ನಡ ನೆಲದಿಂದ ಎರಡು ಸಾವಿರ ಮೈಲಿಗಳ ದೂರದ ದಿಲ್ಲಿಯಲ್ಲಿ. ಊಹಿಸಬಹುದಾದಂತೆಯೇ ಇದರ ದಾರಿ ತಡೆದ ಅಡ್ಡಿ ಆತಂಕಗಳು ಹಲವಾರು. ಅವು ಏನೇ ಇರಲಿ, ಹಿಡಿದ ಕೆಲಸ ಹಣ್ಣಾಗುತ್ತಿರುವುದು ತೃಪ್ತಿಸಂತೋಷಗಳ ಸಂಗತಿ.

ಈ ಗ್ರಂಥ ಸಾಧ್ಯವಾಗಿರುವುದು ಇದಕ್ಕೆ ಲೇಖನ ಭಾಷಾಂತರಗಳನ್ನು ಒದಗಿಸಿದ ನಲವತ್ತು ಮಂದಿ ಕವಿಸಾಹಿತಿಗಳ ಪ್ರೀತಿಯ ಸಹಕಾರದಿಂದ. ಅವರಲ್ಲಿ ಹಲವರು ನನ್ನ ಬದುಕಿಗೆ ದಾರಿದೀಪವಾದ ಹಿರಿಯರು; ಕೆಲವರು ವಿದ್ಯೆ ಕಲಿಸಿದ ಗುರುಗಳು; ಉಳಿದವರು ಕೆಳೆಯೆರೆದ ಗೆಳೆಯರು — ಎಲ್ಲರೂ ಏಕರೀತಿಯಲ್ಲಿ ಪ್ರೀತಿ ವಿಶ್ವಾಸಗಳ ಹಾಲೂಡಿಸಿ ಬೆಳಸುತ್ತಿರುವವರು. ಇಂತಹ ಗ್ರಂಥವೊಂದರ ಸಂಪಾದನೆಯ ಹೊಣೆ ಹೊತ್ತಿರುವೆನೆಂದು ಹೇಳಿ ಅವರ ಬಳಿ ಹೋದಾಗ ತಟ್ಟಿದ ಬಾಗಿಲು ತೆರೆಯದೆ ಇರಲಿಲ್ಲ, ಒಡ್ಡಿದ ಕೈ ಬರಿದೆ ಹಿಂದಿರುಗಲಿಲ್ಲ. ಅವರಲ್ಲಿ ಪ್ರತಿಯೊಬ್ಬರೂ ಆ ಹೊಣೆ ತಮ್ಮದೇ ಎಂಬಷ್ಟು ಮಮತೆಯಿಂದ ಹಲವು ಕಾರ್ಯಭಾರಗಳ ನಡುವೆಯೂ ಲೇಖನ ಅನುವಾದಗಳನ್ನು ಕಳಿಸಿ ಹರಸಿದರು, ಶುಭವಾಗಲೆಂದು ಹಾರೈಸಿದರು, ಉದ್ದಕ್ಕೂ ಆಸಕ್ತಿಯಿಂದ ಪ್ರಗತಿ ಕೇಳಿ ಬಲವಿತ್ತರು. ಅವರು ನನ್ನಲ್ಲಿಟ್ಟ ಪ್ರೀತಿಯ ಪ್ರತೀಕವಾಗಿ ಮೈದಾಳಿದೆ ಈ ಗ್ರಂಥ. ನನ್ನ ಮೇಲೆ ಅವರು ಹೊರಿಸಿರುವುದು ನುಡಿಗೊಟ್ಟು ತೀರಿಸಲಾರದ ಋಣ. ಶಬ್ದಾಭಾವದಿಂದಾಗಿ ಬರಿಯ 'ಅನಂತ ಕೃತಜ್ಞತೆಗಳು' ಎಂಬಷ್ಟೇ ಹೇಳಿ ಅವರ ಉಪಕಾರ ಸ್ಮರಿಸುವೆ.

ಈ ಆಭಾರದಲ್ಲಿ ಕಲಾವಿದ ಶ್ರೀ ಆರ್. ಎಸ್. ನಾಯ್ಡು ಅವರೂ ಸಮಭಾಗಿ. ಅವರ ರೇಖಾಚಿತ್ರಗಳಿಲ್ಲದಿದ್ದರೆ ಗ್ರಂಥ ಈಗಿನಷ್ಟು ಶೋಭಿಸುತ್ತಿರಲಿಲ್ಲ. ಹಿಂದಿನ ಹಲಕೆಲವು ಸಾಹಿತ್ಯೋದ್ಯಮಗಳಲ್ಲಿಯಂತೆಯೇ ಇದರಲ್ಲೂ ಅವರ ಕುಂಚ ನನಗೆ ಊರೆಯಾಗಿದೆ; ಅವರ ಮಿತ್ರಹೃದಯ ಎಂದಿನಂತೆ ನನ್ನನ್ನು ತಾಳಿಕೊಂಡು ಕಾಪಾಡಿದೆ.

ಗ್ರಂಥದ ಪ್ರಕಟನೆಯ ಭಾರವನ್ನು ಹೊತ್ತು ಅದನ್ನು ಯಶಸ್ವಿಯಾಗಿ ಕೊನೆ ಮುಟ್ಟಿಸಿದ ಶ್ರೀಯ ಕನ್ನಡ-ಭಾರತಿಯ ಮಿತ್ರರದು. ವರ್ಧಂತಿಯ ವರ್ಷದಲ್ಲಿ ಅದನ್ನು ಹೇಗೆ ಆಚರಿಸಬಹುದೆಂಬ ಪ್ರಶ್ನೆ ಎದ್ದಾಗ ಇಂತಹ ಗ್ರಂಥವೊಂದರ ಪ್ರಕಾಶನ ಯೋಗ್ಯ ಸ್ಮಾರಕವಾಗುವುದೆಂಬ ಸೂಚನೆಯನ್ನು ಅವರ ಮುಂದಿಟ್ಟೆ. ಅವರು ಅದನ್ನು ಮೆಚ್ಚಿ, ಒಪ್ಪಿ, ಅದರ ಸಂಪಾದನ ಮುದ್ರಣಗಳ ನಿರ್ವಹಣೆಯನ್ನು ನನ್ನ ಪಾಲಿಗೇ ವಹಿಸಿದರು. ಮೊದಲು ಸಾವಿರ ರೂಪಾಯಿಯ ವೆಚ್ಚದಲ್ಲಿ ನೂರು ಪುಟಗಳ ಚಿಕ್ಕ ಹೊತ್ತಗೆ ಸಿದ್ಧ ಮಾಡು ವುದೆಂದಿದ್ದುದು ಬರುಬರುತ್ತ ಆಸೆ ಬೆಳೆದಂತೆ ಗ್ರಂಥದ ಗಾತ್ರವೂ ಬೆಳೆದು ಈಗ ಹತ್ತು ಸಾವಿರ ರೂಪಾಯಿಗಳ ವೆಚ್ಚದಲ್ಲಿ 440 ಪುಟಗಳಷ್ಟಾಗಿದೆ. ಇಷ್ಟೆಲ್ಲ ಖರ್ಚಿನ ಕಷ್ಟನಿಷ್ಠುರ ಗಳನ್ನು ಲೆಕ್ಕಿಸದೆ, ಬೇಕಾದಂತೆ ಮಾಡೆನ್ನುವ ಸ್ವಾತಂತ್ರ್ಯ ಕೊಟ್ಟು ನನ್ನನ್ನು ವಿಶ್ವಾಸ ದಿಂದ ನಡಸಿಕೊಂಡ ಆ ಮಿತ್ರರೆಲ್ಲರಿಗೆ, ಅದರಲ್ಲೂ ವಿಶೇಷವಾಗಿ ನನ್ನ ಸುಹೃದರಾದ ಸಂಘದ ಕಾರ್ಯದರ್ಶಿ ಶ್ರೀ ಎಂ. ವಿ. ನಾರಾಯಣರಾಯರಿಗೆ ನನ್ನ ಕೃತಜ್ಞತೆಗಳು.

ಈ ಗ್ರಂಥದ ಹೆಸರಿಗೆ ಸೂಚನೆ ದೊರೆತದ್ದು ಪರೋಕ್ಷವಾಗಿ ಶ್ರೀ ಡಿ. ವಿ. ಜಿ. ಅವರಿಂದ. ಗ್ರಂಥಕ್ಕೆ ಏನು ಹೆಸರಿಡಬೇಕೆಂಬ ಯೋಚನೆ ಎದ್ದು, ಅಂಥ ಸಂಪುಟ, ಇಂಥ ಗ್ರಂಥ ಎಂದು ಯಾವಯಾವದೊ ಹಲವು ಹೆಸರುಗಳೊಡನೆ ಮನಸ್ಸು ಗುದ್ದಾಟ ನಡಸಿದ್ದ ಹೊತ್ತಿನಲ್ಲಿ ಅವರ ಲೇಖನ ಕೈ ಸೇರಿ, ಅದರ ನೇರವೂ ಮನೋಹರವೂ ಆದ ಶೀರ್ಷಿಕೆ ಸಮಸ್ಯೆಗೆ ತಾನೇತಾನಾಗಿ ಉತ್ತರ ಒದಗಿಸಿತು. ಇದಕ್ಕೆ ನಾನು ಅವರಿಗೆ ಋಣಿ. ಕನ್ನಡ ಸಾರಸ್ವತ ಪ್ರಪಂಚದಲ್ಲಿ ಶ್ರೀ ಡಿ. ವಿ. ಜಿ. ಅವರಿಗಿರುವ ಹಿರಿಯ ಸ್ಥಾನ, ಹೊಸ ಗನ್ನಡ ಷೇಕ್‌ಸ್ಪಿಯರ್ ಸಾಹಿತ್ಯದಲ್ಲಿ ತಮ್ಮ 'ಮ್ಯಾಕ್‌ಬೆತ್' ನಾಟಕದ ಭಾಷಾಂತರದ ಮೂಲಕ ಅವರು ಹಾಕಿಕೊಟ್ಟ ಹೆದ್ದಾರಿ, ಹಾಗೂ ಸ್ವತಃ ಅವರ ಲೇಖನದ ಗರಿಮೆ ಗಳಿಂದಾಗಿ ಗ್ರಂಥದಲ್ಲಿ ಅದಕ್ಕೇ ಅಗ್ರತಾಂಬೂಲ ಸಂದಿರುವುದು ಯುಕ್ತವೇ ಆಗಿದೆ.

ಕನ್ನಡದಲ್ಲಿ 'ಷೇಕ್ಸ್‌ಪಿಯರ್', 'ಶೇಕ್ಸ್‌ಪೀಅರ್' ಮುಂತಾಗಿ ಷೇಕ್‌ಸ್ಪಿಯರ್ ಪದದ ಕೆಲವಾರು ರೂಪಗಳು ಬಳಕೆಯಲ್ಲಿವೆ. ಇವುಗಳಲ್ಲಿ 'ಷೇಕ್ಸ್‌ಪಿಯರ್' ಎಂಬುದೇ ಹೆಚ್ಚು ಪ್ರಚಲಿತ. ಆದರೆ ಗ್ರಂಥದಲ್ಲಿ ಉದ್ದಕ್ಕೂ ಬಳಸಿದ ರೂಪ 'ಷೇಕ್‌ಸ್ಪಿಯರ್'. ರಾಬರ್ಟ್ ಗ್ರೀನನ 'Shake-scene' ಎಂಬ ಅಣಕ, ಆಕ್ಸ್‌ಫರ್ಡಿನ ಅರ್ಲ್ ಭಲ್ಲೆ (spear) ತಿರುವು ವುದರಲ್ಲಿ (shaking) ನಿಪುಣನಿದ್ದುದರಿಂದ ಅವನೇ ಷೇಕ್‌ಸ್ಪಿಯರ್ (Shake-speare) ಎಂಬ ಜೆ. ಟಿ. ಲೂನಿಯ ಕರ್ತೃತ್ವಸಮಸ್ಯೆಯ ವಾದಕ್ಕೆ ಆಧಾರವಿತ್ತ ಸಂಗತಿ, ಮೊದಲ ಫೋಲಿಯೊದ ಪ್ರಾಸ್ತಾವಿಕ ಪುಟಗಳಲ್ಲಿ ಅಚ್ಚಾಗಿರುವ ಲಿಯನಾರ್ಡ್ ಡಿಗ್ಸ್‌ನ ಕವಿತೆಯ ಮೊದಲ ಪದದಲ್ಲೇ 'ಷೇಕ್' ಮತ್ತು 'ಸ್ಪಿಯರ್'ಗಳ ನಡುವೆ ಕಾಣಿಸಿದ ಕೂಡುಗುರುತು ಮುಂತಾದವು ಇಲ್ಲಿ ಬಳಸಿದ ರೂಪಕ್ಕೆ ಪುಷ್ಟಿ ಕೊಡುತ್ತವೆ.

ಲೇಖನಗಳ ನಡುವೆ ಮೂಲಕೃತಿಗಳ ಉದ್ಧರಣಗಳು ಬಂದಾಗ ಅವನ್ನು ಬಹುವಾಗಿ ಭಾಷಾಂತರರೂಪದಲ್ಲಿ ಕೊಡಲಾಗಿದೆ. ಶ್ಲೇಷೆ, ಪ್ರಾಸ ಮುಂತಾದ ಭಾಷೆಗೆ ಸಂಬಂಧಿಸಿದ ಅಂಶಗಳನ್ನು ವಿವರಿಸುವಲ್ಲಿ ಮಾತ್ರ ಇಂಗ್ಲಿಷ್ ಮೂಲವನ್ನು ಹಾಗೆಯೇ ಉಳಿಸಿಕೊಂಡಿದೆ. ಕನ್ನಡದಲ್ಲಿ ಉದ್ಧರಣಗಳನ್ನು ಕೊಡುವಾಗ ಆ ಭಾಗಗಳ ಹೊಸಗನ್ನಡ ಅನುವಾದ ದೊರೆಯುವಂತಿದ್ದಲ್ಲಿ ಅವನ್ನೇ ಬಳಸಿಕೊಳ್ಳಲಾಗಿದೆ. ಈ ಕಾರ್ಯದಲ್ಲಿ ಅತಿ ಹೆಚ್ಚಿನ ನೆರವು ದೊರೆತದ್ದು ಶ್ರೀ ಶ್ರೀನಿವಾಸರ ಹಾಗೂ ಶ್ರೀ ಎ. ಎನ್. ಮೂರ್ತಿರಾಯರ 'ಷೇಕ್ಸ್

ಪಿಯರ್' ಗ್ರಂಥದಲ್ಲಿನ ಭಾಷಾಂತರಗಳಿಂದ. ಈ ಹಿರಿಯರಿಬ್ಬರೂ ಹೊಸಗನ್ನಡ ಷೇಕ್ಸ್ಪಿಯರ್ ಸಾಹಿತ್ಯಸಂಪದವನ್ನು ಅನನ್ಯ ರೀತಿಯಲ್ಲಿ ಬೆಳಸಿ ಸೇವೆ ಸಲ್ಲಿಸಿದವರು. ಇವರಿಬ್ಬರಿಗೂ ಸಂಪಾದಕನ ವಿಶೇಷ ಕೃತಜ್ಞತೆಗಳು.

ಉದ್ಧೃತ ಭಾಗಗಳ ಪಾಠಕ್ಕೆ ಹಾಗೂ ಸಂದರ್ಭ-ಸೂಚನೆಗಳ ನಿರ್ದೇಶಕ್ಕೆ ಸರ್ ಆರ್ಥರ್ ಕ್ವಿಲರ್-ಕೂಚ್ ಮತ್ತು ಜಾನ್ ಡೋವರ್ ವಿಲ್ಸನ್‌ರಿಂದ ಸಂಪಾದಿತವಾದ ನ್ಯೂ ಕೇಂಬ್ರಿಜ್ ಸಂಸ್ಕರಣವನ್ನು ಅನುಸರಿಸಲಾಗಿದೆ.

ಭಾಷಾಂತರಗಳನ್ನೂ ಹರ್ಷನಾಟಕ ರುದ್ರನಾಟಕಗಳ ಪರಿಚಯಗಳನ್ನೂ ಕೃತಿ ರಚನೆಯ ಕಾಲಾನುಕ್ರಮದಲ್ಲಿ ಕೊಡಲಾಗಿದೆ. ಇಲ್ಲಿ ಅನುಸರಿಸಿರುವುದು ಎಫ್. ಇ. ಹ್ಯಾಲಿಡೇ ಅವರು ತಮ್ಮ 'ಎ ಷೇಕ್ಸ್ಪಿಯರ್ ಕಂಪ್ಯಾನಿಯನ್' ಗ್ರಂಥದಲ್ಲಿ ಬಹುಮತದ ಆಧಾರದ ಮೇಲೆ ನಿರ್ದೇಶಿಸಿರುವ ಕಾಲಾನುಕ್ರಮ. ಕಥಾಸರಣಿ ಮುರಿಯದಿರಲೆಂಬ ಉದ್ದೇಶದಿಂದ ಚಾರಿತ್ರಕ ನಾಟಕಗಳ ಪರಿಚಯಗಳನ್ನು ಮಾತ್ರ ರಚನೆಯ ಕಾಲಾನುಕ್ರಮದ ಬದಲು ಅವುಗಳ ಚಾರಿತ್ರಕ ಘಟನೆಗಳ ಕಾಲಾನುಕ್ರಮದಲ್ಲಿ ಕೊಡಲಾಗಿದೆ.

ಭಾಷಾಂತರ ವಿಭಾಗದಲ್ಲಿ ಒಂದೊಂದು ಅನುವಾದಕ್ಕೂ ಪೂರ್ವಭಾವಿಯಾಗಿ ಸಣ್ಣ ಸಣ್ಣ ಟಿಪ್ಪಣಿ ಕೊಟ್ಟು ಅದರ ಸಂದರ್ಭವನ್ನು ವಿವರಿಸಲಾಗಿದೆ. ಆ ಟಿಪ್ಪಣಿಗಳು ಸಂಪಾದಕನವು; ಅವುಗಳಲ್ಲಿ ಅರೆಕೊರೆಯಿದ್ದರೆ ಆ ಹೊಣೆ ಅವನದೇ, ಭಾಷಾಂತರಕಾರರದಲ್ಲ.

ಕೃತಿ-ಪರಿಚಯಗಳ ಬಗ್ಗೆ ಒಂದು ವಿವರಣೆ ಅಗತ್ಯ: ಮೊದಲು ಒಂದೊಂದು ಕೃತಿಯನ್ನೂ ಅದರ ಕಥಾಸಾರದ ಜೊತೆಗೆ ಸುದೀರ್ಘ ಚರ್ಚೆ ವಿಮರ್ಶೆಗಳೊಡನೆ ಪರಿಚಯ ಮಾಡಿಕೊಡುವುದೆಂಬ ವಿಚಾರವಿತ್ತು. ಹಾಗೆ ಮಾಡಿದ್ದಾದರೆ ಗ್ರಂಥದ ಗಾತ್ರ ಈಗಿನ ಒಂದೂವರೆಯಷ್ಟು ಬೆಳೆದು ಪ್ರಕಟನೆಯಲ್ಲಿ ಇದ್ದಿದ್ದೂ ವಿಳಂಬವಾಗುವುದೆಂಬ ಅಂಜಿಕೆಯಿಂದ ಆ ವಿಚಾರವನ್ನು ಕೈಬಿಡಬೇಕಾಯಿತು. ಸದ್ಯಃ ಸುದೀರ್ಘ ಚರ್ಚೆಯ ಗೊಡವೆಗೆ ಹೋಗದೆ ಕೃತಿಗಳ ಕಥಾಸಾರವನ್ನಷ್ಟೇ ಅವುಗಳ ರಚನೆ ಪ್ರಕಟನೆಗಳ ಕಾಲ, ಆಕರಗಳು ಹಾಗೂ ಎಂಟು ಹತ್ತು ಸಾಲುಗಳ ಚಿಟಿಕೆಯ ವಿಮರ್ಶೆಯೊಡನೆ ಸುಮಾರು ಮೂರು ಪುಟಗಳ ಮಿತಿಯಲ್ಲಿ ಕೊಡಲಾಗಿದೆ. ಕೆಲವೊಮ್ಮೆ, ಅದರಲ್ಲೂ ಮಹಾ ರುದ್ರನಾಟಕಗಳ ಪರಿಚಯಗಳಲ್ಲಿ, ಅವುಗಳ ಸಾರ್ಥತೆ ಸಂಕೀರ್ಣತೆಗಳಿಂದಾಗಿ ಈ ಪುಟಮಿತಿ ಮೀರಿರುವುದುಂಟು. ಮೊದಲೇ ಷೇಕ್ಸ್ಪಿಯರನ ಕಥೆಗಳದು ತೊಡಕಿನ ಕಟ್ಟಡ. ಮೇಲೆ ಪಾತ್ರಗಳು ಬಹಳ, ಸೂಕ್ಷ್ಮಗಳು ಅನೇಕ. ಹಾಕಿಕೊಂಡ ಪುಟಮಿತಿಯಲ್ಲಿ ಸಮಗ್ರವಾಗಿ ಕಥೆ ಹೇಳುವುದು ಕಷ್ಟದ ಕೆಲಸವೇ ಸರಿ. ಆದರೂ ಅತಿಮುಖ್ಯವಲ್ಲವೆನಿಸಿದುದನ್ನು ತೂರಿ, ಉಳಿದುದನ್ನು ಸಂಬದ್ಧವಾಗಿ ಕಟ್ಟಿ, ಕಥೆಯ ಜೊತೆಗೆ ಪಾತ್ರಕಲ್ಪನೆ, ಕೃತಿಯ ಘನತೆ, ಗುಣವಿಶೇಷಗಳೂ ಅಲ್ಲಲ್ಲಿ ಕವಿಯ ಮಾತಿನಲ್ಲೇ ಮೂಡಿಬರುವಂತೆ ಪ್ರಯತ್ನಿಸಲಾಗಿದೆ.

ಇಂಗ್ಲಿಷ್ ಅಂಕಿತನಾಮಗಳನ್ನು ಲಿಪ್ಯಂತರ ಮಾಡುವಲ್ಲಿ ಬಲ್ಲವರೊಡನೆ ಚರ್ಚಿಸಿ, ಹೆಚ್ಚು ಸರಿಯೆಂದು ತೋರಿದ ರೂಪಗಳನ್ನೇ ಬಳಸಲಾಗಿದೆ. ಅನೇಕ ಹೆಸರುಗಳ ಉಚ್ಚಾರಣೆ ಇಂಗ್ಲಿಷಿನಲ್ಲಿ ಸಹ ಅನಿರ್ದಿಷ್ಟ. ಗ್ರ್ಯಾನ್ ವಿಲ್-ಬಾರ್ಕರ್ ಅವರು ತಮ್ಮ 'ಪ್ರಿಫೇಸಸ್ ಟು ಷೇಕ್ಸ್ಪಿಯರ್' ಗ್ರಂಥದಲ್ಲಿ 'ಕೊರಿಯೋಲಿ', 'ಕೊರಿಯೊಲೇನಸ್' ಪದಗಳ ಹಲವು ರೂಪಗಳನ್ನು ತೋರಿಸಿ ಅವುಗಳಲ್ಲಿ ಯಾವದು ಸರಿಯೆಂದು ಕೇಳಿರುವುದನ್ನು ಇಲ್ಲಿ ನೆನೆಯಬಹುದು. ಭಾಷಾಂತರಗಳಲ್ಲಿ ಮಾತ್ರ ಛಂದಲಯಗಳಿಗೆ ಭಂಗ

ಬರದಿರಲೆಂದು ಹೆಚ್ಚಾಗಿ ಭಾಷಾಂತರಕಾರರು ಕೊಟ್ಟ ರೂಪವನ್ನೇ ಉಳಿಸಿಕೊಳ್ಳಲಾಗಿದೆ. ಒಮ್ಮೊಮ್ಮೆ ಕೈತಪ್ಪಿನಿಂದ ಒಪ್ಪಿ ಬಳಸಿದ ರೂಪದಲ್ಲಿ ವ್ಯತ್ಯಯ ಬಂದಿರಲೂಬಹುದು. ಅಂತೂ ಈ ವಿಷಯದಲ್ಲಿ ಓದುಗರ ಸಹಾನುಭೂತಿ ಕೋರುವೆ.

ಇಲ್ಲಿನ ರೇಖಾಚಿತ್ರಗಳು ವಿವಿಧ ಮೂಲಗಳನ್ನು ಮುಂದಿಟ್ಟು ಮಾಡಿದ ಪ್ರಮಾಣ ಬದ್ಧವಾದ ಪ್ರತಿಕೃತಿಗಳು. ನಾಟಕದೃಶ್ಯಗಳಿಗೆ ಇಂಗ್ಲಂಡಿನ ಓಲ್ಡ್ ವಿಕ್ ಕಂಪನಿಯ ಪ್ರದರ್ಶನಗಳ ಛಾಯಾಚಿತ್ರಗಳು ಆಧಾರ ಒದಗಿಸಿವೆ. ಪರಿಚಯವಿದ್ದವರು ಅವುಗಳಲ್ಲಿ ಜಾನ್ ಗೀಲ್‌ಗಡ್, ಲಾರೆನ್ಸ್ ಆಲಿವಿಯರ್, ರಿಚರ್ಡ್ ಬರ್ಟನ್, ವಿವಿಯನ್ ಲೀ ಮುಂತಾದ ವಿಖ್ಯಾತ ಷೇಕ್‌ಸ್ಪಿಯರ್ ನಟನಟಿಯರನ್ನು ಗುರುತಿಸದೆ ಇರರು.

ಈ ಚಿತ್ರಗಳ ಅಡಿಯಲ್ಲಿ ಹಲವೆಡೆ ಶೀರ್ಷಿಕೆಯ ಜೊತೆಗೆ ದೃಶ್ಯದ ಸಂದರ್ಭವನ್ನು ವಿವರಿಸುವ ಒಂದೆರಡು ಕಾವ್ಯಪಂಕ್ತಿಗಳನ್ನೂ ಕೊಟ್ಟಿದೆ. ಇವನ್ನು ಶ್ರೀಯುತರುಗಳಾದ ಡಿ. ವಿ. ಜಿ. (ಪುಟ 7), ಶ್ರೀನಿವಾಸ (ಪುಟ 33), ಕುವೆಂಪು (ಪುಟ 70, 72, 73, 154) ಅವರ ಭಾಷಾಂತರಗಳಿಂದ ಕೃತಜ್ಞತಾಪೂರ್ವಕವಾಗಿ ಎತ್ತಿಕೊಳ್ಳಲಾಗಿದೆ. ಸೂಕ್ತ ಅನುವಾದ ದೊರೆಯದ ಕಡೆ ಸಂಪಾದಕನೇ ಅದಕ್ಕೆ ಕೈಹಾಕಿರುವುದುಂಟು. ಈ ಚೇಷ್ಟೆ ಓದುಗರಿಗೆ ಅಪ್ರಿಯವೆನಿಸದಿದ್ದರೆ ಸರಿ.

ಲೇಖನದ ಕೊನೆಗೆ ಕೊಟ್ಟಿರುವ ಅಡಿಚಿತ್ರಗಳಲ್ಲಿ ಕವಿಯ ಕಾಲದ, ಅಂದರೆ, ಎಲಿಜಬೆತ್ ಯುಗದ ಜನಜೀವನದ ವಿವಿಧ ಮುಖಗಳ ಚಿತ್ರಣವಿದೆ. ಅದಕ್ಕೆ ಎ. ಹೆಚ್. ಡಾಡ್ ಅವರ 'ಲೈಫ್ ಇನ್ ಎಲಿಜಬೆತನ್ ಇಂಗ್ಲಂಡ್' ಪುಸ್ತಕದಲ್ಲಿ ದೊರೆಯುವ ನಾನೂರು ವರ್ಷಗಳ ಹಿಂದಿನ ಕೆತ್ತನೆಗಳು, ರೇಖಾಚಿತ್ರಗಳು ಆಧಾರ. ಅವನ್ನು ಕೊಟ್ಟಿರುವ ಉದ್ದೇಶ ಹಾಗೂ ಒಟ್ಟಿನಲ್ಲಿ ಗ್ರಂಥಕ್ಕೆ ಅಳವಡಿಸಿದ ಮುದ್ರಣವಿನ್ಯಾಸಕ್ರಮ ಬರಿಯ ಅಲಂಕರಣವಷ್ಟೇ ಅಲ್ಲ, ಗ್ರಂಥಕ್ಕೆ ಆ ಕಾಲದ ಕಳೆ ಕಟ್ಟಿ ಓದುಗರಲ್ಲೂ ಅದರ ಭಾವ ಮೂಡುವಂತಾಗಲೆಂದು. ಸಾಫಲ್ಯ ಏನೇ ಇರಲಿ, ಕಣ್ಣ ಮುಂದಿದೆ.

ಗ್ರಂಥದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಷೇಕ್‌ಸ್ಪಿಯರನ ಶ್ರೀಮುಖ ಮೊದಲ ಫೋಲಿಯೊದಲ್ಲಿನ ಡ್ರೂಷೌಟ್ ಕೆತ್ತನೆಯ ಆಧಾರದ ಮೇಲೆ ಶ್ರೀ ನಾಯ್ಡು ಅವರು ರಚಿಸಿದ ಪುನಃಸೃಷ್ಟಿ; ಅಂತೆಯೇ ಹೊರಹೊದಿಕೆಯದು ಇನ್ನೊಂದು ಸುಪ್ರಸಿದ್ಧ ಚಿತ್ರವಾದ 'ಷ್ಯಾಂಡೋಸ್ ಷೇಕ್‌ಸ್ಪಿಯರ್'ದು. ಎರಡೂ ಎರಡು ಬಗೆ; ಎರಡೂ ವಿಶಿಷ್ಟ.

ಇದರ ಹೆಚ್ಚಿನ ಭಾಗದ ಮೊಳೆ ಜೋಡಿಸಿ ಅಚ್ಚಿಗೆ ಸಿದ್ಧಮಾಡಿದವರು ಶ್ರೀ ನಾರಾಯಣ ಮೂರ್ತಿ. ಯಾವುದೋ ಬೇರೊಂದು ನಿಮಿತ್ತವಾಗಿ ದಿಲ್ಲಿಗೆ ಬಂದವರನ್ನು ಸುದೈವ ಈ ಗ್ರಂಥದ ಕೆಲಸಕ್ಕೆ ಒದಗಿಸಿ ಅವರಿಂದ ಬಂಟತನ ಮಾಡಿಸಿತು. ಅವರ ತಾಳ್ಮೆ ಅಗಾಧವಿತ್ತೆಂದೇ ಮುದ್ರಣಕಾರ್ಯ ಯಶಸ್ವಿಯಾಗಿ ಕೊನೆಮುಟ್ಟುವುದು ಸಾಧ್ಯವಾಯಿತು. ಅವರಿಗೆ ನಾನು ಆಭಾರಿ.

ತಮ್ಮ ತಮ್ಮ ಕುಂದಣದಲ್ಲಿ ಗ್ರಂಥಕ್ಕೆ ಒಪ್ಪವಿಟ್ಟ ಪ್ರಿಂಟ್ಸ್‌ಮನ್‌ನ ಶ್ರೀ ಗೋಪೀನಾಥ್ ಸೇಠ್, ಶ್ರೀ ದೀಪಕ್ ಸೇಠ್, ಶುಚಿ ಪ್ರೈವೆಟ್ ಲಿಮಿಟೆಡ್‌ನ ಶ್ರೀ ದೇವರಾಜ್, ರಾಜಧಾನಿ ಬುಕ್ ಬೈಂಡಿಂಗ್ ಹೌಸ್‌ನ ಶ್ರೀ ಉದ್ಧವ ಸಿಂಗರಿಗೆ ನಾನು ಕೃತಜ್ಞ.

ಆಗಸ್ಟ್, 1966
ಹೊಸ ದಿಲ್ಲಿ

**ಶಾ. ಬಾಲುರಾವ್**

## ವಿಷಯಸೂಚಿ



## ಪ್ರಸ್ತಾವನೆ



### ಭಾಗ ಒಂದು

### ಲೇಖನಗಳು

## ಭಾಗ ಎರಡು

## ಭಾಷಾಂತರಗಳು

### ಸಾನೆಟ್ ಮತ್ತು ಇತರ ಕವನಗಳು

ಗೀತಗಳು



ನಾಟಕಗಳಿಂದ ಆರಿಸಿದ ಭಾಗಗಳು

## ಭಾಗ ಮೂರು

## ಕೃತಿ-ಪರಿಚಯ

ಶಾ. ಬಾಲುರಾವ್

ಕವನಗಳು

**ಚಾರಿತ್ರಕ ನಾಟಕಗಳು**



**ಹರ್ಷನಾಟಕಗಳು ಮತ್ತು ರುದ್ರನಾಟಕಗಳು**

## ಅನುಬಂಧಗಳು





# ರೇಖಾಚಿತ್ರಗಳ ವಿವರ



## ಅಡಿಚಿತ್ರಗಳು



# ಕವೀಂದ್ರನಿಗೆ ರವೀಂದ್ರ-ನಮಸ್ಕಾರ

**ಯೇದಿನ ಉದಿಲೆ ತುಮಿ, ವಿಶ್ವಕವಿ, ದೂರ ಸಿಂಧುಪಾರೆ,**
**ಇಂಗ್ಲಂಡೇರ್ ದಿಕ್‌ಪ್ರಾಂತ ಪೇಯೆಛಿಲ್ ಸೇದಿನ ತೊಮಾರೆ**
**ಆಪನ್ ವಕ್ಷೇರ್ ಕಾಛೆ, ಭೇಬೆಛಿಲ್ ಬುಝಿ ತಾರಿ ತುಮಿ**
**ಕೇವಲ್ ಆಪನ್ ಧನ್ ; ಉಜ್ವಲ ಲಲಾಟ ತವ ಚುಮಿ**
**ರೇಖೆಛಿಲ್ ಕಿಛುಕಾಲ್ ಅರಣ್ಯಶಾಖಾರ್ ಬಾಹುಜಾಲೆ,**
**ಡೇಕೆಛಿಲ್ ಕಿಛುಕಾಲ್ ಕುಯಾಶಾ-ಅಂಚಲ-ಅಂತರಾಲೆ,**
**ವನಪುಷ್ಪ-ವಿಕಸಿತ ತೃಣಧನ ಶಿಶಿರ-ಉಜ್ವಲ**
**ಪರೀದೇರ್ ಖೇಲಾರ್ ಪ್ರಾಂಗಣೆ। ದ್ವೀಪೇರ್ ನಿಕುಂಜತಲ**
**ತಖನೋ ಓಠೆ ನಿ ಜೆಗೆ ಕವಿಸೂರ್ಯ-ವಂದನಾ-ಸಂಗೀತೆ।**
**ತಾರ ಪರೆ ಧೀರೆ-ಧೀರೆ ಅನಂತೇರ್ ನಿಃಶಬ್ದ ಇಂಗಿತೆ**
**ದಿಗಂತೇರ್ ಕೋಲ್ ಛಾಡಿ ಶತಾಬ್ದೀರ್ ಪ್ರಹರೆ ಪ್ರಹರೆ**
**ಉಠಿಯಾಛ್ ದೀಪ್ತಜ್ಯೋತಿ ಮಧ್ಯಾಹ್ನೇರ್ ಗಗನೇರ್ 'ಪರೆ ;**
**ನಿಯೇಛ್ ಆಸನ ತವ ಸಕಲ ದಿಕೇರ್ ಕೇಂದ್ರ ದೇಶೆ**
**ವಿಶ್ವಚಿತ್ತ ಉದ್ಭಾಸಿಯಾ, ತಾಯಿ ಹೇರೊ ಯುಗಾಂತರ-ಶೇಷೆ**
**ಭಾರತ ಸಮುದ್ರತೀರೆ ಕಂಪಮಾನ ಶಾಖಾಪುಂಜೆ ಆಜಿ**
**ನಾರಿಕೇಲಕುಂಜವನೆ ಜಯಧ್ವನಿ ಉಠಿತೇಛೆ ಬಾಜಿ।**

**— ರವೀಂದ್ರನಾಥ ಠಾಕೂರ್**

ವಿಶ್ವಕವಿಯೆ, ನೀನಾ ದಿನ ಉದಿಸಲು ದೂರದ ಮುನ್ನೀರಿನ ದಡದಿ
ಕೊಂಡೆತ್ತಿತ್ತು ನಿನ್ನನು ಇಂಗ್ಲಂಡ ದಿಗಂತವು ತನ್ನೆದೆಯ ಬದಿ,
ಭಾವಿಸಿದಳು ಆಕೆಯು ಬಹುಶಃ ನೀನಿಹೆ ಕೇವಲ ತನ್ನದೆ ತನ್ನ ಧನ;
ಮುದ್ದಿಸಿ ಭಾಲ ಸಮುಜ್ವಲ ಮರೆಗಿರಿಸಿದ್ದಳು ಕೆಲಕಾಲದವರೆ ನಿನ್ನ
ಘನವನ ಶಾಖೆಯ ನೀಳ್ತೋಳಿನ ಜಾಲವ ಬಿಗಿಯುತ ಕೆಲಕಾಲದ ತನಕ
ಮುಚ್ಚಿರಿಸಿದ್ದಳು ಹೊಚ್ಚುತ ಮತ್ತೊಚ್ಚುತ ಮಂಜಿನ ಬೆಳ್ಸೆರಗಿನ ಮುಸುಕ,
ಸುಮ ವಿಕಸಿತ ತೃಣಘನ ಶಿಶಿರ ಕಣಂಗಳ ಭಾಸ್ವತ್ ಲೀಲಾಂಗಣದಿ
ಕ್ರೀಡಿಪರಾವೆಡೆ ಅಚ್ಚರಸಿಯರಾ ಬೆಡಗಿನ ಆವರಣದ ಬನದಿ.
ದ್ವೀಪ ನಿಕುಂಜ ಧ್ವನಿಸದು ಕವಿಸೂರ್ಯನ ವಂದನ ಗುಂಜಾರವವಿನ್ನೂ
ಮೆಲ್ಲಗೆ ಮೆಲ್ಲಗನಂತರ ಮುಗಿವಿಲ್ಲದ ಕಾಲದ ಇಂಗಿತವನ್ನು —
ಮನ್ನಿಸಿ ಎದ್ದೆ ದಿಗಂತದ ತೊಡೆ ತುಂಬಿ ಶತಾಬ್ದಿ ಪ್ರಹರ ಪ್ರಹರ
ಏರೇರುತ ದೀಪ್ತಜ್ಯೋತಿ ಸಮೇತವೆ ನಡುವಗಲಿನ ಗಗನದಿ ನೇರ.
ಮಂಡಿಸಿದೆ ಸಕಲ ದಿಕ್ಕೇಂದ್ರದಿ, ಲೋಕದ ಚಿತ್ತವು ಉದ್ಭಾಸಿತವಾಗೆ
ಎಂದೇ ಇಂದು ಯುಗಾಂತರದಂತ್ಯದಿ ಭಾರತ-ಸಿಂಧುವಿನಂಚಿನ ಮೇಗೆ
ಕಂಪಮಾನ ಶಾಖಾಪುಂಜದಿ ಜನಿಸಿದೆ ಕವಿ ನಿನ್ನಯ ಜಯಘೋಷ
ತೊಂಗಲು ತೊಂಗಲು ತೆಂಗಿನ ಕುಂಜದಿ ಅದುರಿತದರ ಮಂಜುಲ ಉಲ್ಲಾಸ.

ಅನುವಾದ : **ನಾರಾಯಣ ಸಂಗಮ**



# ವಿಲಿಯಂ ಷೇಕ್‌ಸ್ಪಿಯರ್

## 1564-1616

## ಪ್ರಸ್ತಾವನೆ

ಅಂದು ವಿಶ್ವಸೃಷ್ಟಿಯ ಆರನೆ ದಿನ. ದೇವರು ಭೂಮಿ-ಆಕಾಶ, ಬೆಳಕು-ಕತ್ತಲು, ನೀರು ನೆಲಗಳಿಲ್ಲದರ ಸೃಷ್ಟಿಯನ್ನು ಮುಗಿಸಿ, ಭೂಮಿಯ ಮೇಲೆ ಗಿಡಗೆಣ್ಣೆಗಳನ್ನು ನೆಟ್ಟು, ಪ್ರಾಣಿಪಕ್ಷಿಗಳನ್ನು ಆಡಬಿಟ್ಟು, ಕೊನೆಗೆ ಈ ಎಲ್ಲ ಅದ್ಭುತಗಳನ್ನು ಅನುಭವಿಸಲೆಂದು ನೆಲದಿಂದ ಹಿಡಿಮಣ್ಣೆತ್ತಿ, ತನ್ನ ರೂಪಾಕಾರಗಳಲ್ಲಿಯೇ ಮೊದಲ ಬೊಂಬೆಯನ್ನು ಕಡೆದು ಆದಕ್ಕೆ ಪ್ರಾಣ ಉಸುರಿದ. ಆದಮನ ಅವತಾರವಾಯಿತು, ಅವನ ಎದೆಮೂಳೆಯಿಂದ ಈವ್ ಹುಟ್ಟಿಬಂದಳು. ಹೊರಡುವ ಮುನ್ನ ದೇವರು ಭೂಮಿಯ ಕಡೆ ಬೊಟ್ಟು ಮಾಡಿ ತನ್ನ ಮಕ್ಕಳಿಗೆ ಹೇಳಿದ: 'ಇದೊ, ಈ ಮಹಾಸಾಮ್ರಾಜ್ಯ ನಿಮ್ಮದು. ಕೊಳ್ಳಿ, ಆಳಿ, ಬಾಳಿ, ಕಾಪಾಡಿ.' ಆದಮ್ ಈವ್ ಅಳುತ್ತ ನಿಂತುಕೊಂಡರು. ಯಾವದೋ ಕೊರಗು ಮಾತಿನ ಅಭಿವ್ಯಕ್ತಿ ಪಡೆಯಲಾರದೆ ಅವರ ಮುಖದಲ್ಲಿ ಮೋಡ ಕಟ್ಟಿತ್ತು. ಅದೇನೆಂದು ದೇವರಿಗೆ ಅರ್ಥವಾಯಿತು. ಅವನು ನಕ್ಕು ನುಡಿದ: 'ನನ್ನಿಂದ ದೂರವಾಗಬೇಕೆಂಬ ಚಿಂತೆಯೆ? ಭಯ ಬೇಡ. ನಾನು ನಿಮ್ಮ ನಡುವೆಯೇ ಇರುತ್ತೇನೆ, ಪ್ರತಿಭೆಯ ರೂಪ ದಲ್ಲಿ ಬಂದು, ನಿಮ್ಮ ಮಕ್ಕಳುಮರಿಯಲ್ಲಿ ಮತ್ತೆ ಮತ್ತೆ ಕಾಣಿಸಿಕೊಂಡು ನಿಮ್ಮನ್ನು ನಲಿಸು ತ್ತೇನೆ. ಧೈರ್ಯದಿಂದಿರಿ.' ಆದಮ್ ಈವ್‌ರ ಮುಖದಲ್ಲಿ ಆತಂಕ ಹರಿದು ನಗೆ ಮೂಡಿತು.

—ಹೀಗೊಂದು ಕಥೆ. ಕಥೆಯೇನೋ ಕಟ್ಟುಕತೆ. ಕಟ್ಟದೆ ಆದ ಕಥೆ ಯಾವದು? ಆದರೆ ಅದು ಸಾರುವ ತಥ್ಯ ದೊಡ್ಡದು: ಪ್ರತಿಭೆ ದೈವಾಂಶ. ಕಲೆ, ಸಾಹಿತ್ಯ, ವಿಜ್ಞಾನ ಹೀಗೆ ಯಾವದೇ ಮೂಡಲೊಡೆದು ಮಿಂಚಲಿ, ಆ ಬೆಳಕು ಜಗತ್ತಿಗೆ ಶುಭ, ಎಂತಲೇ ಪೂಜ ನೀಯ. ಮೊನ್ನೆ 1964ಕ್ಕೆ ನಾನೂರು ವಸಂತಗಳನ್ನು ಮುಗಿಸಿ ಮೆರೆದ ಮಹಾಕವಿ ವಿಲಿಯಂ ಷೇಕ್‌ಸ್ಪಿಯರ್ ಅಂತಹ ದಿವ್ಯಪ್ರತಿಭೆಯ ಖನಿ. ಆ ಶುಭಸಂದರ್ಭದ ನೆನಪಾಗಿ, ಅವನಿಂದ ನಾವು ಪಡೆಯುತ್ತ ಬಂದಿರುವ ಕಾವ್ಯಋಣದ ಕುರುಹಾಗಿ ಇದೊ ಆ ಪ್ರತಿಭೆಗೆ ಕನ್ನಡ ಕವಿಕುಲದ ಈ ಗ್ರಂಥನಮಸ್ಕಾರ.

## ಜೀವನ — ಕೃತಿ

ಮೊದಲ ಫೋಲಿಯೊ ಅಥವಾ ಷೇಕ್‌ಸ್ಪಿಯರ್ ರಚನಾವಳಿಯ ಪ್ರಥಮ ಸಂಸ್ಕರಣದ ಲೆಕ್ಕದ ಮೇರೆಗೆ ಅವನು ರಚಿಸಿದ್ದು 36 ನಾಟಕಗಳು; ಜೊತೆಗೆ 154 ಸಾನೆಟ್ಟುಗಳು, ಎರಡು ಕಥನ-ಕವನಗಳು, ಕವಿತೆ ಅಥವಾ ಕವಿತಾಗುಚ್ಛಗಳು ಮೂರು. ಇವೆಲ್ಲದರ ಒಟ್ಟು ಪಂಕ್ತಿಗಳ ಸಂಖ್ಯೆ ಒಂದು ಲಕ್ಷಕ್ಕೂ ಮಿಗಿಲು; ಅವು ಹರಹಿರುವುದು ಸಣ್ಣ ಅಕ್ಷರಗಳಲ್ಲಿ ಅಚ್ಚಾದ ದೊಡ್ಡ ಆಕಾರದ ಸುಮಾರು ಸಾವಿರ ಪುಟಗಳ ಬೃಹತ್ ವಿಸ್ತಾರದಲ್ಲಿ: ಅವು ಗಳಲ್ಲಿ ವಿಜೃಂಭಿಸಿದ ಪಾತ್ರಸಂಖ್ಯೆ ಕಡಿಮೆಯೆಂದರೆ ಸಾವಿರ. ಷೇಕ್‌ಸ್ಪಿಯರ್ ಇಷ್ಟೆಲ್ಲ ಬ್ರಹ್ಮಾಂಡವನ್ನು ಸೃಷ್ಟಿಸಿದ್ದರೂ ಆ ಕಾವ್ಯಬ್ರಹ್ಮನ ಬಗ್ಗೆ ನಮಗೆ ತಿಳಿದಿರುವುದಾದರೋ ತೀರಾ ಅಲ್ಪ. ಅವನ ಜೀವನವನ್ನು ಕುರಿತು ನಮಗೆ ಸಿಗುವ ನಿರ್ದಿಷ್ಟವಾದ ದಾಖಲೆಗಳು ಬೆರಳೆಣಿಕೆಯಷ್ಟು. ಇವುಗಳ ಹೊರತು ಅವನ ಬಗ್ಗೆ ಮಾಹಿತಿ ಕೊಡುವ ಇನ್ನೊಂದು ಮೂಲವೆಂದರೆ ಅವನ ಕಾಲಾನಂತರ ಅವರಿವರು ಹಾರಿಸಿದ, ಬಹುವೇಳೆ ಒಂದಕ್ಕೊಂದು ವಿರೋಧವಾದ, 'ಯಾರೋ ಅಂದರು' ಜಾತಿಗೆ ಸೇರುವಂತಹ ಐತಿಹ್ಯಗಳ ಕಂತೆ. ಷೇಕ್‌ಸ್ಪಿಯರ್ ಹೇಗಿದ್ದ, ಹೇಗೆ ಬಾಳಿದನೆಂದು ತಿಳಿಯುವ ನಮ್ಮ ಕುತೂಹಲವನ್ನು ಇವುಗಳ ಮೇಲಿಂದ ಹಾಗೂ ಕೃತಿಪಾತ್ರಗಳ ಪರದೆಯ ಸಂದಿನಿಂದ ಆಗಾಗ್ಗೆ ಹಣಿಕುವ ಅವನ ವ್ಯಕ್ತಿತ್ವದ ಮೇಲಿಂದ ಚಿತ್ರಕಲ್ಪನೆ ಮಾಡಿಕೊಂಡು ತೀರಿಸಿಕೊಳ್ಳಬೇಕಷ್ಟೆ!

### ಜನನ ಮತ್ತು ಧರ್ಮಸ್ನಾನ

'ಮಚ್ ಆ್ಯಡೂ ಅಬೌಟ್ ನಥಿಂಗ್' ನಾಟಕದ ಮಾತಿನ ಮಲ್ಲಿ ಬೀಯಟ್ರಿಸ್ ಒಂದೆಡೆ ಸರಸಕ್ಕೆ ಹೇಳುತ್ತಾಳೆ: 'ಮೇಲೊಂದು ತಾರೆ ಕುಣಿದಿತ್ತು, ಅದರಡಿ ನಾನು ಹುಟ್ಟಿದೆ'. 1564ರ ಏಪ್ರಿಲ್ ತಿಂಗಳ ಕೊನೆಯ ವಾರದಲ್ಲೊಂದು ದಿನ, ಪ್ರಾಯಶಃ 23ನೆ ತಾರೀಕೊ ಏನೊ, ಲಂಡನಿನಿಂದ 92 ಮೈಲಿ ಪಶ್ಚಿಮಕ್ಕೆ ಏವನ್ ನದಿಯ ದಂಡೆಯ ಮೇಲೆ ನಿಂತ ಸ್ಟ್ರ್ಯಾಟ್‌ಫರ್ಡ್ ಪಟ್ಟಣದ ಮುಗಿಲಿನಲ್ಲಿ ಅಂತೆಯೇ ಒಂದು ತಾರೆ, ಅಲ್ಲ ಇಡಿಯ ತಾರಾ ಪುಂಜಗಳೇ ಎದ್ದು ಕುಣಿದಿದ್ದವೇನೊ! ಬೀಯಟ್ರಿಸ್‌ಳಂತಹ ನೂರಾರು ಬಗೆಯ ಪಾತ್ರ ಗಳಿಗೆ ಜೀವ ಕೊಟ್ಟ ವಿಲಿಯಂ ಷೇಕ್‌ಸ್ಪಿಯರ್ ಅಲ್ಲಿ, ನಂಬಿಕೆಯ ಪ್ರಕಾರ ಆ ದಿನ, ಜನ್ಮವೆತ್ತಿದ. ಸ್ಟ್ರ್ಯಾಟ್‌ಫರ್ಡಿನ ಪ್ಯಾರಿಷ್ ಚರ್ಚಿನ ದಸ್ತಾವೇಜಿನಲ್ಲಿ ಬರೆದಿಟ್ಟ ದಾಖಲೆ ಯಂತೆ ಮಗು ಷೇಕ್‌ಸ್ಪಿಯರಿಗೆ 'ಬ್ಯಾಪ್ಟಿಸಂ' ಅಥವಾ ಧರ್ಮಸ್ನಾನವಾದದ್ದು ಆ ಏಪ್ರಿಲ್ 26ರಂದು. ಹುಟ್ಟಿದ ತಾರೀಕು ನಿರ್ದಿಷ್ಟವಾಗಿ ತಿಳಿಯದು. ಮುಂದೆ ಷೇಕ್‌ಸ್ಪಿಯರ್ ದೇಹವಿಟ್ಟದ್ದು ಸಹ ಅಂಥದೇ ಇನ್ನೊಂದು ಏಪ್ರಿಲ್ 23ನೆ ತಾರೀಕಾದ್ದರಿಂದ ಹುಟ್ಟಿದುದೂ 23ರಂದೇ ಎಂದು ವಾಡಿಕೆಯಾಗಿ ನಂಬಲಾಗಿದೆ!

ಷೇಕ್‌ಸ್ಪಿಯರನ ತಂದೆ ಜಾನ್, ಉತ್ತರದ ಸ್ನಿಟರ್‌ಫೀಲ್ಡ್‌ನಿಂದ ಬಂದು ಸ್ಟ್ರ್ಯಾಟ್ ಫರ್ಡಿನಲ್ಲಿ ನೆಲಸಿದ ಒಕ್ಕಲುಮಗ. ತಾಯಿ ಮೇರಿ ಆರ್ಡೆನ್, ಗಣ್ಯ ಮನೆತನವೊಂದರ ಹೆಣ್ಣುಮಗಳು. ವಿಲಿಯಂ ಅವರ ಮೂರನೆ ಮಗು, ಮನೆಯ ಮೊದಲ ಗಂಡು ಮಗ.

ಸ್ಟ್ರ್ಯಾಟ್‌ಫರ್ಡ್ ಆ ಕಾಲಕ್ಕೆ ಪ್ರಮುಖ ಪಟ್ಟಣವಾಗಿತ್ತು. ಇಂಗ್ಲಂಡಿನ ಹೃದಯ ಪ್ರಾಯವೆನಿಸಿದ್ದ ವಾರ್‌ವಿಕ್‌ಷೈರ್ ಪ್ರಾಂತದಲ್ಲಿದ್ದು ಕೃಷಿ, ಉದ್ಯೋಗ, ವ್ಯಾಪಾರ



ಸ್ಟ್ರ್ಯಾಟ್‌ಫರ್ಡಿನ ಹೆನ್ಲಿ ಸ್ಟ್ರೀಟ್‌ನಲ್ಲಿರುವ ಷೇಕ್‌ಸ್ಪಿಯರ್ ಹುಟ್ಟಿದ ಮನೆ

ಗಳಲ್ಲಿ ಮುಂದಿದ್ದ ಆ ಊರು ಸ್ವತಃ ಲಂಡನ್ ನಗರಕ್ಕೇ ಸಲ್ಲದ ಒಂದು ಮಹತ್ವವನ್ನು ಗಳಿಸಿಕೊಂಡಿತ್ತು. ಎರಡಂತಸ್ತಿನ ಮನೆಗಳಿಂದ ಕಿಕ್ಕಿರಿದ ನಾಲ್ಕಾರು ಬೀದಿಗಳು, ಊರಿನ ರೈತಜನರಿಂದ ಕೊಡುಕೊಳ್ಳುತ್ತ ಅವರ ಅಗತ್ಯ ಪೂರೈಸುವ ಹಲವಾರು ಅಂಗಡಿಗಳು, ಒಂದು ಚರ್ಚು, ಒಂದು ಗ್ರಾಮರ್ ಸ್ಕೂಲು, ಊರಿನ ಸುತ್ತಮುತ್ತಲೂ ಹಸನಾದ ಹೊಲಗದ್ದೆಗಳು, ಹಸುರಾದ ಹುಲ್ಲುಬಯಲುಗಳು, ಬಣ್ಣಬಣ್ಣದ ಹೂಹಕ್ಕಿಗಳಿಗೆ ಆಸರೆ ಕೊಟ್ಟ ಹಣ್ಣಿನ ತೋಟಗಳು, ಏವನ್ ನದಿಯ ಮಧುರ ಕಲಕಲ — ಇದು ಷೇಕ್‌ಸ್ಪಿಯರಿಗೆ ತೊಟ್ಟಿಲು ತೂಗಿದ ಸ್ಟ್ರ್ಯಾಟ್‌ಫರ್ಡಿನ ಪರಿಸರ.

ದಾಖಲೆಗಳು ನುಡಿಯುವಂತೆ ಜಾನ್ ಈ ಊರಿನಲ್ಲಿ ಮುಖ್ಯವಾಗಿ ಗ್ಲೋವ್ ಅಥವಾ ಚರ್ಮದ ಕೈಚೀಲ ತಯಾರಿಸುವ ಉದ್ಯೋಗ ನಡಸಿದ್ದ; ಚೂರುಪಾರು ಭೂಮಿ ಕಾಣಿಯೂ ಇದ್ದು ಜಮೀನ್ದಾರನೆಂದೂ ಕರಸಿಕೊಂಡಿದ್ದ. ಷೇಕ್‌ಸ್ಪಿಯರನ ಕಾಲಾನಂತರ ಎಷ್ಟೋ ವರ್ಷಗಳ ಮೇಲೆ ಜಾನ್ ಆಬ್ರೆ ಮತ್ತು ನಿಕೊಲಸ್ ರೋವೆ ಬರೆದ ಅವನ ಜೀವನ ಚರಿತ್ರೆಗಳಲ್ಲಿನ ಸಂಗತಿಗಳು ನಿಜವಿದ್ದರೆ ಜಾನ್ ಉಣ್ಣೆ, ಬಾರ್ಲಿಯ ವ್ಯಾಪಾರಗಳಂತಹ ಇನ್ನೂ ಹಲವು ಧಂಧೆಗಳನ್ನು ನಡಸಿದ್ದನೇನೊ, ಒಂದು ಕಸಾಯಿಯ ಅಂಗಡಿಯೂ ಇತ್ತೇನೊ. ಅಂತೂ ಜಾನ್ ಸ್ಟ್ರ್ಯಾಟ್‌ಫರ್ಡಿನ ಒಬ್ಬ ಗಣ್ಯವ್ಯಕ್ತಿ. ಊರಿನ ಪೌರಸಭೆಯಲ್ಲಿ ಆಲ್ಡರ್‌ಮನ್, ಬೇಲಿಫ್ ಮುಂತಾದ ಹಲವು ಅಧಿಕಾರಗಳು ಅವನ ಪಾಲಿಗೆ ಸಂದಿದ್ದವು.

## ಗ್ರಾಮರ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ

ಷೇಕ್‌ಸ್ಪಿಯರನ ಬಾಲ್ಯ, ವಿದ್ಯಾಭ್ಯಾಸಗಳ ಬಗ್ಗೆ ನಮಗೆ ಯಾವ ದಾಖಲೆಯೂ ಸಿಗದು.

ಊರ ಗಣ್ಯವ್ಯಕ್ತಿಯ ಮಗನೆಂದ ಮೇಲೆ, ಊರಿನಲ್ಲಿದ್ದ ಒಂದು ಶಾಲೆ ಉಚಿತ ಶಿಕ್ಷಣ ಕೊಡುತ್ತಿತ್ತೆಂದ ಮೇಲೆ ಷೇಕ್ಸ್‌ಪಿಯರನ ವಿದ್ಯಾರ್ಜನೆ ಆ ಶಾಲೆಯಲ್ಲೇ ಆಗಿರಬೇಕು. ಉಚ್ಚ ಶಿಕ್ಷಣಕ್ಕೆ ಹೆಚ್ಚು ಅವಕಾಶವಿದ್ದಿಲ್ಲದ ಆ ಕಾಲದಲ್ಲಿ ಸ್ಟ್ರ್ಯಾಟ್‌ಫರ್ಡಿನ ಗ್ರಾಮರ್ ಸ್ಕೂಲ್‌ನಂತಹ ಶಾಲೆಗಳು ಹೆಸರಿಗೆ ಶಾಲೆಗಳೆಂದು ಕರಸಿಕೊಂಡರೂ ಬದುಕಿಗೆ ಜೀವಿ ಕೊಡಲು ಸಾಕಾಗುವಷ್ಟು ಉನ್ನತಮಟ್ಟದ ಶಿಕ್ಷಣವನ್ನೇ ಕೊಡುತ್ತಿದ್ದವು. 'ಷೇಕ್-ಸ್ಪಿಯರಿಗೆ ಗೊತ್ತಿದ್ದುದು ಅಲ್ಪ ಲ್ಯಾಟಿನ್, ಗ್ರೀಕಂತೂ ಇದ್ದಿದ್ದೂ ಕಡಿಮೆ' ಎಂದು ಬೆನ್ ಜಾನ್‌ಸನ್ ಅಂದಿನ ಕವಿಗಳಿಗಿರುತ್ತಿದ್ದ ಗ್ರೀಕ್ ಲ್ಯಾಟಿನ್ ಪಾಂಡಿತ್ಯದ ಗುಡ್ಡದೆತ್ತರದಿಂದ ಅಳೆದು ಆಡಿದ್ದಿರಬಹುದಾದರೂ ಷೇಕ್ಸ್‌ಪಿಯರ್ ಮುಂದೆ ತನಗೆ ಆಕರವೊದಗಿಸಿದ ಆವಿಡ್, ಸೆನೆಕ, ಪ್ಲಾಟಸ್ ಮುಂತಾದವರ ಕೃತಿಗಳನ್ನು ಮೂಲಭಾಷೆಯಲ್ಲೇ ಓದಿ ಸವಿಯುವಷ್ಟು ಲ್ಯಾಟಿನ್ ಭಾಷಾಜ್ಞಾನ ಪಡೆದಿದ್ದನೆಂದು ತೋರುತ್ತದೆ. ಆದರೂ ಒಟ್ಟಿನ ಮೇಲೆ ಅವನ ವಿದ್ಯಾಭ್ಯಾಸ ಸಾಧಾರಣ, ಅಪೂರ್ಣ ಎಂದೇ ಅನ್ನಬೇಕು. ಅವನು ಹದಿಮೂರು ಮುಟ್ಟುವ ವೇಳೆಗೆ ತಂದೆಯ ಆರ್ಥಿಕ ಸ್ಥಿತಿಗತಿ ಹದಗೆಟ್ಟಿತು, ಸಣ್ಣಪುಟ್ಟ ಪೌರ ಅಪರಾಧ ಗಳಿಗೆ ಕಾರಣನಾದನೆಂದು ದಂಡಗಳಾದವು, ಸಾಮಾಜಿಕವಾಗಿ ಸ್ಥಾನಮಾನ ಇಳಿಯಿತು. ಷೇಕ್ಸ್‌ಪಿಯರ್ ಶಾಲೆಗೆ ಶರಣು ಹೊಡೆದು, ಮನೆಗೆ ನೆರವಾಗಲು ಉದ್ಯೋಗಕ್ಕೆ ಕೈಹಚ್ಚ ಬೇಕಾಯಿತೆಂದು ತೋರುತ್ತದೆ. ತಂದೆಯ ಕಸಾಯಿ ಅಂಗಡಿಯಲ್ಲಿ ಶೀವಿಯ ಭಾಷಣ ಬೀರುತ್ತ ಕರುಗಳನ್ನು ಕೊಲ್ಲುತ್ತಿದ್ದನೆಂದು ಆಬ್ರೆಯ ಜೀವನಚರಿತ್ರೆ ತಿಳಿಸುತ್ತದೆ.

## ಕರ್ತೃತ್ವ-ಸಮಸ್ಯೆಯ ವಾದ

ಷೇಕ್ಸ್‌ಪಿಯರಿಗೆ ದೊರೆತಿದ್ದುದು ಹಳ್ಳಿಯ ಗ್ರಾಮರ್ ಸ್ಕೂಲಿನ ಸಾಧಾರಣ ಶಿಕ್ಷಣವೆಂಬ ಕ್ಷುಲ್ಲಕ ಕಾರಣದ ಮೇಲೆ ಅವನು ಬರೆದ ಕೃತಿಗಳು ಅವನವೇ ಅಲ್ಲವೆಂಬ ಜಾಣತನದ ಒಂದು ಹುಚ್ಚು ವಾದ ಶತಮಾನ ಕಾಲದಿಂದ ನಡೆದು ಬಂದಿದೆ (ಪುಟ 30-44). ಅರೆ ಬರೆ ಕಲಿತ, ನಾಗರಿಕ ಸಭ್ಯತೆಗಳ ಪರಿಚಯವಿಲ್ಲದ ಒಬ್ಬ ಹಳ್ಳಿಯ ಮುಕ್ಕನಿಗೆ ಇತಿಹಾಸ ದರ್ಶನ ವಿಚಾರಾದಿಗಳಿಂದ ಪ್ರಬುದ್ಧವಾದ, ಉಚ್ಚಕಾವ್ಯಸಂಪನ್ನವಾದ ಮೇರುಕೃತಿಗಳು ಸಿದ್ಧಿಸಿದುದಾದರೂ ಹೇಗೆ? ಷೇಕ್ಸ್‌ಪಿಯರನ ಹೆಸರಿನಲ್ಲಿ ಮಹಾಪಂಡಿತ ಫ್ರಾನ್ಸಿಸ್ ಬೇಕನ್ ಅವನ್ನು ಬರೆದಿರಬೇಕು — ಎಂಬುದು ಈ ವಾದದ ಹುರುಳು. ಮೊದಲಿಗೆ ಅಮೆರಿಕದಲ್ಲಿ ಜೋಸೆಫ್ ಹಾರ್ಟ್ ಮತ್ತು ಡೀಲಿಯಾ ಬೇಕನ್ ಎಂಬವರಿಂದ ಶುರು ವಾದ ಈ ವಾದ ಕ್ರಮೇಣ ಯೂರೋಪಿಗೂ ಹರಡಿ ಅಲ್ಲಿನ ಕುತರ್ಕ ವಾಚಸ್ಪತಿಗಳ ಬೆಂಬಲ ಪಡೆಯಿತು. ಬರುಬರುತ್ತ ಹಲವು ಕುಡಿಗಳಾಗಿ ಒಡೆದು ಬೇಕನನಿಗೆ ಗಿಟ್ಟಿದ್ದ ಪುಕ್ಕಟೆಯ ಕವಿಪಟ್ಟ ಕ್ರಿಸ್ಟಫರ್ ಮಾರ್ಲೊ, ಆಕ್ಸ್‌ಫರ್ಡ್, ರಟ್ಲೆಂಡ್, ಡರ್ಬಿಗಳ ಅರ್ಲರು ಮುಂತಾಗಿ ಹಲವರ ನಡುವೆ ಪಾಲಾಯಿತು. ಈವರೆಗೆ ಅದರ ವಿವಿಧ ಮುಖಗಳನ್ನು ಮಂಡಿಸುವ 25,000ಕ್ಕೂ ಹೆಚ್ಚು ಗ್ರಂಥಗಳು ಹೊರಬಿದ್ದಿವೆ! ಹುಟ್ಟಿನಿಂದ ಕವಿಯೂ ಚಿಂತನಶೀಲನೂ ಆದೊಬ್ಬ ಪ್ರತಿಭಾಪುರುಷ ವಿಧಿವತ್ತಾದ ವಿದ್ಯಾಭ್ಯಾಸವಿಲ್ಲದೆಯೂ ಪ್ರಕೃತಿ-ಮಾನವರ ಎದೆ ಹೊಕ್ಕು, ಅಲ್ಲಿ ತಾನು ಕಂಡು ಉಂಡ ಸೂಕ್ಷ್ಮಾನುಭವಗಳನ್ನು ಕಾವ್ಯವಾಗಿ ಹರಿಸುವುದು ದೈವಚಮತ್ಕಾರದಲ್ಲಿ ಸುಲಭಸಾಧ್ಯವೆಂಬುದನ್ನು ಈ ವಾದದ

ತರ್ಕಪ್ರಿಯ ಅನುಯಾಯಿಗಳು ನಂಬರು. ಅವರ ಪಾಡೇನೇ ಇರಲಿ, ಕಾಡಿನ ಬೇಡನೊಬ್ಬನಿಗೆ ಆದಿಕವಿಯ ಕಿರೀಟವಿಟ್ಟು, ಕುರುಬರ ಹೈದನೊಬ್ಬನನ್ನು ಕವಿಕುಲಗುರುವನ್ನಾಗಿ ಒಪ್ಪಿದ ನಮಗೆ ಷೇಕ್ಸ್‌ಪಿಯರನ ಕೃತಿಗಳನ್ನು ಸ್ಟ್ರಾಟ್‌ಫರ್ಡಿನ ಕಸಾಯಿಯ ಮಗನೇ ಬರೆದನೆಂದು ನಂಬುವುದು ಕಷ್ಟವಲ್ಲ!

ಬ್ಯಾಪ್ಟಿಸಂನ ನಂತರ ಷೇಕ್ಸ್‌ಪಿಯರನನ್ನು ಕುರಿತ ನಮಗೆ ಸಿಗುವ ಮುಂದಿನ ದಾಖಲೆಯೆಂದರೆ 1582ರ ನವಂಬರ್‌ನಲ್ಲಿ, ಅವನು ಹತ್ತೊಂಬತ್ತನೆಯ ವಯಸ್ಸಿನವನಿದ್ದಾಗ ಚರ್ಚಿನಿಂದ ಮದುವೆಗೆ ದೊರೆತ ಅಪ್ಪಣೆಯದು. ಹೆಂಡತಿ ಆ್ಯನ್ ಹ್ಯಾತವೆ, ಹತ್ತಿರದ ಷಾಟರಿ ಎಂಬ ಹಳ್ಳಿಯವಳು. ಮದುವೆ ನಡೆದ ಸಂದರ್ಭ ಸ್ವಲ್ಪ ರಹಸ್ಯವೇ: ಎಲ್ಲೂ ತಂದೆತಾಯಿಯ ಹೆಸರಿಲ್ಲ; ಹುಡುಗಿ ಗಂಡನಿಗಿಂತ ಎಂಟು ವರ್ಷ ದೊಡ್ಡವಳು; ಹುಡುಗ ಕಾನೂನಿನಂತೆ ಪ್ರಾಯಕ್ಕೆ ಬರುವ ಮೊದಲೇ ಊರ ಹಿರಿಯರಿಬ್ಬರು ಜಾಮೀನು ನಿಂತು ತರಾತುರಿಯಲ್ಲಿ ಮದುವೆಗೆ ವಿಶೇಷ ಅಪ್ಪಣೆ ದೊರಕಿಸಿಕೊಟ್ಟರು; ಅದಾದ ಆರೇ ತಿಂಗಳಿಗೆ ಮೊದಲ ಮಗುವಾಯಿತು — ಇವನ್ನು ನೋಡಿದರೆ ಷೇಕ್ಸ್‌ಪಿಯರ್ ಸಾಹಸಿಯಾಗಿದ್ದನೆಂದೇ ಹೇಳಬೇಕು! ಅವನ ದಾಂಪತ್ಯಜೀವನ ಹೇಗಿತ್ತೆಂದು ಯಾರಿಗೂ ತಿಳಿಯದು. ಮುಂದೆ ಉಯಿಲಿನಲ್ಲಿ ಅವನು ಹೆಂಡತಿಗೆ ಬಿಟ್ಟದ್ದು ಮನೆಯ ಒಳ್ಳೆಯ ಮಂಚಗಳಲ್ಲಿ ಮೊದಲನೆಯದರ ಬದಲು ಎರಡನೆಯದೆಂಬ ಕಾರಣದಿಂದಾಗಿ ಹಾಗೂ ನಾಟಕಗಳಲ್ಲಿ ಸಿಗುವ ಕೆಲವು ಪರೋಕ್ಷ ಆಧಾರಗಳ ಮೇಲೆ ದಾಂಪತ್ಯ ಅಷ್ಟೇನೂ ಸುಖಕರವಾಗಿರಲಿಲ್ಲವೆಂದು ಊಹಾಪೋಹೆಗಳಿವೆ. ಅದೇನೇ ಇರಲಿ, ಮದುವೆಯಂತೂ ಪ್ರೇಮ ಸಾಹಸಗಳ ಫಲವೇ ಇರಬೇಕು. ಷೇಕ್ಸ್‌ಪಿಯರನ ರಕ್ತದಲ್ಲಿ ಅಷ್ಟೂ ಕೆಂಪಿಲ್ಲದಿದ್ದರೆ ಮುಂದೆ ಅವನ ಕೃತಿಗಳು ಅಸಂಖ್ಯ ಪ್ರೇಮಪ್ರಸಂಗಗಳಿಂದ ರಂಗೇರುತ್ತಿದ್ದುದಾದರೂ ಹೇಗೆ!

ಷೇಕ್ಸ್‌ಪಿಯರಿಗೆ ಮೂವರು ಮಕ್ಕಳು: ಮೊದಲನೆಯವಳು ಮದುವೆಯ ತರುಣದಲ್ಲಿ ಹುಟ್ಟಿದ ಸುಸ್ಯಾನ; ಉಳಿದಿಬ್ಬರು ಹ್ಯಾಮ್ನೆಟ್-ಜೂಡಿತ್, ಅವಳಿ ಗಂಡು-ಹೆಣ್ಣು, 1585ರ ಫೆಬ್ರವರಿಯಲ್ಲಿ ಹುಟ್ಟಿದವರು.

## ಲಂಡನಿನಲ್ಲಿ ಷೇಕ್ಸ್‌ಪಿಯರ್

ಇದಾದ ನಂತರ ನಾವು ಮತ್ತೆ ಷೇಕ್ಸ್‌ಪಿಯರನ ಸುದ್ದಿ ಕೇಳುವುದು ಏಳು ವರ್ಷಗಳ ತರುವಾಯ 1592ರಲ್ಲಿ, ಲಂಡನ್ ನಗರದಲ್ಲಿ. ಈಗ ಅವನು ಅಪ್ಪನ ಕಸಾಯಿಯಂಗಡಿಯಲ್ಲಿ ಕರು ಕೊಲ್ಲುತ್ತ ನಿಂತ ಹಳ್ಳಿಯ ಹುಂಬನಲ್ಲ; ನಗರದ ಕವಿ ಸಾಹಿತಿ ಆಸ್ಥಾನಿಕರಂತಹ ಉಚ್ಚ ಜನರೊಡನೆ ಕೈಕುಲುಕುತ್ತ ಓಡಾಡುವ ನಟ, ನಾಟಕಕಾರ. ನಮಗೆ ಈ ಸಂಗತಿ ತಿಳಿಯುವುದು ರಾಬರ್ಟ್ ಗ್ರೀನ್ ಎಂಬ ಆ ಕಾಲದ ನಾಟಕಕಾರನೊಬ್ಬನು ಷೇಕ್ಸ್‌ಪಿಯರನ ಮೇಲೆ ಕಾರಿದ ಅಸೂಯೆಯ ವಿಷದಿಂದ; ಅದನ್ನು ಒರಸಿ ಹಾಕಿ, ಅವನನ್ನು ಅಪವಾದದಿಂದ ಪಾರುಮಾಡಿದ ಹೆನ್ರಿ ಷೆಟಲ್ ಎಂಬ ಇನ್ನೊಬ್ಬ ಲೇಖಕನ ಬರೆಹದಿಂದ. ಗ್ರೀನ್ ಆಕ್ಸ್‌ಫರ್ಡ್, ಕೇಂಬ್ರಿಜ್‌ಗಳಲ್ಲಿ ಕಲಿತು ಅಂದಿನ 'ವಿಶ್ವವಿದ್ಯಾನಿಲಯದ ವಿದಗ್ಧ'ರ (University Wits) ಗುಂಪಿಗೆ ಸೇರಿದ ನಾಟಕಕಾರ. ಆದರೂ ಹಾಳು ಬಾಳು ನಡಸಿ, ಬದುಕಿನಲ್ಲಿ ಬಯಸಿದುದನ್ನು ಪಡೆಯದೆ ಸತ್ತ. ತಾನು ನಾಟಕ ಬರೆದು ಬಡ

ಪಾಯಿಯಾಗಿಯೇ ಉಳಿಯಬೇಕಾಯಿತು, ಅದನ್ನು ಆಡಿದವರು ಉದ್ಧಾರವಾದರೆಂದು ಅವನಿಗೆ ನಟರನ್ನು, ಅದರಲ್ಲೂ ಷೇಕ್ಸ್ಪಿಯರನನ್ನು ಕಂಡು ಕರುಬು. ಅವರ ಬಗ್ಗೆ ಎಚ್ಚರಿಕೆ ನೀಡಿ ಸಾಯುವ ಮುನ್ನ ಗುರುತಿನ ಒಂದಿಬ್ಬರು ನಾಟಕಕಾರರಿಗೆ ಕಾಗದ ಬರೆದ:

> 'ಅವರನ್ನು ನಂಬಬೇಡಿ. ಅವರಲ್ಲೊಬ್ಬ ನಮ್ಮ ಪುಕ್ಕಗಳಿಂದ ಚೆಲುವು ಪಡೆದು ತಲೆಯೆತ್ತಿ ಮೆರೆದಿರುವ ನಿನ್ನೆಮೊನ್ನೆಯ ಕಾಗೆ. ನಟನ ಚರ್ಮ ಹೊದ್ದ ಹುಲಿಯೆದೆಯ ಆತನು ನಿಮ್ಮಲ್ಲಿ ಅತಿ ಶ್ರೇಷ್ಠರಾದವರಿಗಿಂತ ಚೆನ್ನಾಗಿ ಸರಳರಗಳೆ ಕೊಚ್ಚಬಲ್ಲನೆಂದು ತಿಳಿದಿದ್ದಾನೆ. ಆ ಸರ್ವಕಾರ್ಯ ಪ್ರವೀಣ ತಾನು ನಾಡಿನ ಏಕೈಕ 'ಷೇಕ್-ಸೀನ್' (ಕಂಪನಕಾರಿ ದೃಶ್ಯ) ಎಂಬ ಕಲ್ಪನೆಯಲ್ಲಿದ್ದಾನೆ.'

'ನಟನ ಚರ್ಮ ಹೊದ್ದ ಹುಲಿಯೆದೆ'ಯೆಂಬ ಮಾತು ಅದಕ್ಕೆ ಒಂದೆರಡು ವರ್ಷಗಳ ಹಿಂದೆ ಷೇಕ್ಸ್ಪಿಯರ್ ಬರೆದ 'ಹೆನ್ರಿ ದಿ ಸಿಕ್ಸ್ತ್'ನ ಮೂರನೆ ಭಾಗದಲ್ಲಿ ಬರುವ 'ಹೆಣ್ಣು ಚರ್ಮ ಹೊದ್ದ ಹುಲಿಯೆದೆ'ಯೆಂಬ ಪಂಕ್ತಿಯ ವಿಕಟಾನುಕರಣ; 'ಷೇಕ್-ಸೀನ್' ಕಂಡಂತೆಯೇ ಕವಿಯ ಹೆಸರಿನ ಮೇಲೆ ಮಾಡಿದ ಅಣಕ.

ಗ್ರೀನ್ ತೀರಿಕೊಂಡ ಮೇಲೆ ಹೆನ್ರಿ ಷೆಟಲ್ ಅವನ ಬರೆಹಗಳನ್ನು 'ಗ್ರೀನ್ಸ್ ಗ್ರೋಟ್ಸ್‌ವರ್ತ್ ಆಫ್ ವಿಟ್ ಬಾಟ್ ವಿತ್ ಎ ಮಿಲಿಯನ್ ಆಫ್ ರಿಪೆಂಟೆನ್ಸ್' ಎಂಬ ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸಿದ; ಅದರಲ್ಲಿ ಈ ಐತಿಹಾಸಿಕ ಪತ್ರವೂ ಎಡೆಕಂಡಿತು. ಅದರ ಪ್ರಕಟನೆ ಹಲವರಿಗೆ ಬೇಸರ ತಂದಿರಬೇಕು. ಮುಂದೆ ಅದೇ ವರ್ಷ ಪ್ರಕಟವಾದ ತನ್ನ 'ಕೈಂಡ್ ಹಾರ್ಟ್ಸ್ ಡ್ರೀಮ್' ಪುಸ್ತಕದ ಮುನ್ನುಡಿಯಲ್ಲಿ ಷೆಟಲ್ ಅದನ್ನು ಪ್ರಕಟಿಸಿದುದಕ್ಕೆ ಷೇಕ್ಸ್ಪಿಯರನ ಕ್ಷಮಾಪಣೆ ಕೇಳಿಕೊಂಡದ್ದಲ್ಲದೆ ಅವನ 'ಸಭ್ಯವಾದ ನಡತೆ, ಉತ್ತಮ ಗುಣ, ಪ್ರಾಮಾಣಿಕತೆಯ ಕುರುಹಾದ ನೇರವಾದ ವ್ಯವಹಾರ ವರ್ತನೆ, ಅವನ ಕಲೆಯನ್ನು ಮೆರೆದ ನಾಜೂಕಿನ ಶೈಲಿ'ಗಳನ್ನು ಕೊಂಡಾಡಿದ.

## ಊಹೆಗಳು ಹೇಳುವ ಕಥೆ

ಷೇಕ್ಸ್ಪಿಯರ್ ಲಂಡನಿಗೆ ಬಂದು ನೆಲಸಿ, ನಟ ನಾಟಕಕಾರನಾಗಿ ಬೇರೂರಿದ, ನಿಜ. ಆದರೆ 1585ರಿಂದ 92ರ ನಡುವಣ ಅವನ ಬದುಕಿನ ಪ್ರಾಣಪ್ರಾಯವಾದ ಯೌವನದ ಏಳೆಂಟು ವರ್ಷಗಳನ್ನು ಅವನು ಹೇಗೆ ಕಳೆದ? ಸ್ಟ್ರ್ಯಾಟ್‌ಫರ್ಡ್ ಬಿಟ್ಟದ್ದು ಏಕೆ? ಹೇಗೆ? ಯಾವಾಗ? ಅವನನ್ನು ನಾಟಕರಂಗಕ್ಕೆ ಸೆಳೆದು ತಂದ ಆ ಪುಣ್ಯಪ್ರಭಾವ ಯಾವದು? ಅದಕ್ಕೆ ಬೆಂಬಲವೊದಗಿಸಿದ ಹಿನ್ನೆಲೆ ಕೂಡಿಬಂದದ್ದು ಎಲ್ಲಿಂದ? — ಇವೆಲ್ಲವೂ ಮಹತ್ವದ ಪ್ರಶ್ನೆಗಳು. ದುರ್ಭಾಗ್ಯವೆಂದರೆ ಊಹೆ ಇಲ್ಲವೇ ಅಲ್ಲಲ್ಲಿ ದೊರೆಯುವ ಒಂದೊಂದು ಐತಿಹ್ಯದ ಹೊರತು ಇವಕ್ಕೆ ಬೇರೆ ಉತ್ತರವೇ ಸಿಗದು. ಹುಡುಕಿದಷ್ಟೂ ಆ ಕಾಲಖಂಡವನ್ನು ಮುಸುಕಿದ ಕತ್ತಲ ಪರದೆ ನಮ್ಮ ಕಾಲ್ತೊಡರುತ್ತದೆ.

ಇರುವ ಊಹೆ, ಐತಿಹ್ಯಗಳ ಆಧಾರದ ಮೇಲೆ ಕಟ್ಟಬಹುದಾದ ಚಿತ್ರ ಇದು: ಜೂಡಿತ್-ಹ್ಯಾಮ್ನೆಟ್ ಹುಟ್ಟಿದುದು 1585ರ ಫೆಬ್ರವರಿಯಲ್ಲಿ. ಅಂದಮೇಲೆ 84ರ ನಡುವಿನವರೆಗೆ ಷೇಕ್ಸ್ಪಿಯರ್ ಸ್ಟ್ರ್ಯಾಟ್‌ಫರ್ಡಿನಲ್ಲೇ ಇದ್ದಿರಬೇಕು. ಮದುವೆಯಾಗಿತ್ತು, ಮಕ್ಕಳಾಗಿದ್ದವು, ದಿನೇ ದಿನೇ ಜವಾಬ್ದಾರಿ ಹೆಚ್ಚುತ್ತಲೇ ನಡೆದಿತ್ತು. ಅತ್ತ ತಂದೆಯ ವ್ಯವಹಾರಗಳು ಕೆಟ್ಟು ಹಳಸಿದ್ದವು; ಸಾಲಸೋಲ ಬೆಳೆದು ಮನೆತನದ ಸ್ವತ್ತು ಒಂದೊಂದಾಗಿ

ಕೈಬಿಟ್ಟಿತ್ತು. ಷೇಕ್‌ಸ್ಪಿಯರಿಗೆ ಸ್ವತಂತ್ರವಾಗಿ ಏನಾದರೂ ವೃತ್ತಿ ಕೈಗೊಳ್ಳದೆ ಸಂಸಾರ ನಿರ್ವಹಣೆ ಸಾಧ್ಯವೇ ಇರಲಿಲ್ಲ. ಕೆಲ ಕಾಲ ಉಪಾಧ್ಯಾಯನಾಗಿದ್ದನೆಂದು ತಾನು ಕೇಳಿದ್ದು ದಾಗಿ ಆಬ್ರೆ ಹೇಳುತ್ತಾನೆ. ಇರಬಹುದು, ಬೇರೆ ಯಾವ ವೃತ್ತಿ ತಾನೆ ಸಾಹಿತ್ಯಸಾಧನೆಗೆ ಅದರಷ್ಟು ಪೋಷಕವಾಗಬಲ್ಲದು ? ಹಾಗೆ ಸಾಹಿತ್ಯದಲ್ಲಿ ಆಕಸ್ಮಿಕವಾಗಿ ಹುಟ್ಟಿದ ಆಸಕ್ತಿಯೇ ಮುಂದೆ ಬದುಕಿಗೆ ಮಾರ್ಗದರ್ಶಿಯಾಯಿತೊ ಏನೊ !

ಆ ಕಾಲದಲ್ಲಿ ಲಂಡನಿನ ನಾಟಕ ಮಂಡಳಿಗಳು ಒಳನಾಡಿನಲ್ಲಿ ಪ್ರವಾಸ ಕೈಗೊಂಡು ಆಗಾಗ್ಗೆ ಸ್ಟ್ರ್ಯಾಟ್‌ಫರ್ಡಿಗೂ ಬರುತ್ತಿದ್ದುದುಂಟು. 1569ರಲ್ಲಿ, ಷೇಕ್‌ಸ್ಪಿಯರ್ ಇನ್ನೂ ಮಗುವಾಗಿದ್ದಾಗ, ಪೌರಾಧಿಕಾರದಲ್ಲಿದ್ದ ಅಪ್ಪ ಜಾನ್ ಅಂತಹ ಎರಡು ಮಂಡಳಿಗಳನ್ನು ಕರಸಿದ್ದ. ಮುಂದೆ 86-87ರಲ್ಲಿ ಒಮ್ಮೆಲೇ ಐದು ಮಂಡಳಿಗಳು ಅಲ್ಲಿಗೆ ಬಂದಿದ್ದವು; ಇವುಗಳಲ್ಲಿ ಒಂದನ್ನು ಸೇರಿ ಷೇಕ್‌ಸ್ಪಿಯರ್ ಲಂಡನ್ ಕಂಡನೆಂದು ಇನ್ನೊಂದು ಊಹೆ.

ಇದಕ್ಕಿಂತ ರಂಜಕವಾದ ಪ್ರತೀತಿಗಳೂ ಕೆಲವಿವೆ: ಹುಡುಗ ತುಡುಗ; ಚೇಷ್ಟೆಗೋ ಅಗತ್ಯತೆಯ ಒತ್ತರದಿಂದಲೋ ಸರ್ ಥಾಮಸ್ ಲೂಸಿ ಎಂಬ ನೆರೆಯೂರ ಹೆಗ್ಗಡೆಯ ಬನದಿಂದ ಆಗಾಗ್ಗೆ ಮೊಲಜಿಂಕೆಗಳನ್ನು ಕದಿಯುತ್ತಿದ್ದು ಕೊನೆಗೊಮ್ಮೆ ಲೂಸಿ ಕಟ್ಟಲೆ ನಡಸಿದ; ಷೇಕ್‌ಸ್ಪಿಯರ್ ಸೇಡಿಗೆ ಅವನ ಮೇಲೆ ಅಣಕವಾಡು ಕಟ್ಟಿದ; ಶಿಕ್ಷೆ ಇದ್ದಿದ್ದೂ ಖಂಡಿತವಾಯಿತು; ಅದರಿಂದ ಪಾರಾಗಲು ಷೇಕ್‌ಸ್ಪಿಯರ್ ಹೇಳದೆ ಕೇಳದೆ ಊರು ಬಿಟ್ಟುಹೋಗಬೇಕಾಯಿತು — ರೋವೆ ಹಾಗೂ ಷೇಕ್‌ಸ್ಪಿಯರನ ಬಗ್ಗೆ ಕೆಲವು ಟಿಪ್ಪಣಿಗಳನ್ನು ಬಿಟ್ಟುಹೋಗಿರುವ ರಿಚರ್ಡ್ ಡೇವಿಸರ ಕಥನ ಇದು. ಇದಕ್ಕೆ ಬೆಂಬಲವಾಗಿ, ಹನ್ನೆರಡು 'ಲೂಸ್'ಗಳ ಬಿರುದಾಂಕಿತನೆಂದು [ಇದು luce (ಈಟಿ), louse (ಹೇನು) ಪದಗಳನ್ನು ಕುರಿತ ಶ್ಲೇಷೆ] ಹಾಸ್ಯಮಾಡಿಸಿಕೊಳ್ಳುವ 'ದಿ ಮೆರಿ ವೈವ್ಸ್'ನ ನ್ಯಾಯಾಧೀಶ ಷ್ಯಾಲೊ ಷೇಕ್‌ಸ್ಪಿಯರ್ ಸರ್ ಲೂಸಿಯ ಮೇಲೆ ಮಾಡಿದ ವಿಡಂಬನೆಯೆಂದು ಹೇಳಲಾಗಿದೆ. ಆದರೆ ಇನ್ನು ಕೆಲವು ಸಂಶೋಧಕರ ಪ್ರಕಾರ ಲೂಸಿ ಜಿಂಕೆಯನ್ನೇ ಸಾಕಿರಲಿಲ್ಲ!

ಇದಲ್ಲದೆ, ಷೇಕ್‌ಸ್ಪಿಯರ್ ದಂಡು ಸೇರಿ ಯೋಧನಾದ; ಸಂಚಾರಮೋಹಕ್ಕೆ ಬಿದ್ದು ದೇಶ ಸುತ್ತಿದ; ಮುದ್ರಕ, ವಕೀಲರಲ್ಲಿ ನೌಕರಿಗಿದ್ದ — ಹೀಗೆ ಅದು ಇದು ಏನೇನೋ ಆಗಿದ್ದನೆಂದು ಒಬ್ಬೊಬ್ಬ ಸಂಶೋಧಕ ಪಂಡಿತನೂ ತನ್ನ ತನ್ನ ವಾದಕ್ಕೆ ಅನುವಾಗುವಂತೆ ಷೇಕ್‌ಸ್ಪಿಯರಿಗೆ ಬಗೆಬಗೆಯ ವೃತ್ತಿಗಳನ್ನು ಒದಗಿಸಿದ್ದಾನೆ!

ಈ ತೆರನಾದ ಐತಿಹ್ಯಗಳು ಷೇಕ್‌ಸ್ಪಿಯರ್ ಲಂಡನ್ ತಲಪಿದ ಮೇಲೂ ಅವನ ಬೆನ್ನು ಬಿಟ್ಟುದಿಲ್ಲ. ಷುರುವಿಗೆ ಅಲ್ಲಿನ ನಾಟಕಶಾಲೆಗಳ ಮುಂದೆ ಶ್ರೀಮಂತರ ಕುದುರೆ ಕಾಯುತ್ತಿದ್ದನೆಂದು ಅವನ ಸಮಕಾಲೀನನಾದ ವಿಲಿಯಂ ದ ಆ್ಯವೆನೆಂಟನ ಹೇಳಿಕೆಯ ಪ್ರಮಾಣಕೊಟ್ಟು ರೋವೆ ತಿಳಿಸುತ್ತಾನೆ.

## ಆ ಕಾಲದ ರಂಗಭೂಮಿ

ಷೇಕ್‌ಸ್ಪಿಯರ್ ಲಂಡನ್ ಸೇರಿದ ಹೊತ್ತಿನಲ್ಲಿ ನಾಟಕ ರಂಗಭೂಮಿಗಳಿನ್ನೂ ಅದೇ ಆಗ ತಮ್ಮ ಮರಿಗಣ್ಣು ತೆರೆದಿದ್ದವು; ರೆಕ್ಕೆ ಮೂಡಿಬರುತ್ತಿತ್ತು. ಆಗ ನಾಟಕ ಪ್ರದರ್ಶನಗಳು ನಡೆಯುತ್ತಿದ್ದುದು ಹೆಚ್ಚಾಗಿ ನಗರದ ಛತ್ರ (inn) ಗಳಲ್ಲಿ. ಅವುಗಳಲ್ಲಿ ಬೆಲ್ ಸ್ಯಾವೇಜ್,

ಬುಲ್, ಕ್ರಾಸ್‌ಕೀಸ್ ಹೆಸರಾಂತವು. ಇವು ತಮ್ಮ ವಿಶಾಲವಾದ ಒಳ ಅಂಗಳಗಳನ್ನು ಆಟದವರಿಗೆ ಬಾಡಿಗೆಗೆ ಕೊಡುತ್ತಿದ್ದವು. ಇವುಗಳ ಹೊರತು ಆಗಿದ್ದ ವ್ಯವಸ್ಥಿತ ನಾಟಕ ಶಾಲೆಗಳೆಂದರೆ ಎರಡೇ: 1576 ಮತ್ತು 77ರಲ್ಲಿ ಸ್ಥಾಪಿತಗೊಂಡಿದ್ದ 'ಥಿಯೇಟರ್' ಮತ್ತು 'ಕರ್ಟನ್'ಗಳು. ಷೇಕ್‌ಸ್ಪಿಯರ್ ಲಂಡನ್ ತಲಪಿದ್ದು 1587ರ ನಂತರವಾದರೆ ಆ ವರ್ಷ ಪುನರ್‌ನಿರ್ಮಾಣಗೊಂಡ 'ರೋಸ್' ಎಂಬ ಮೂರನೆಯದೂ ಒಂದಿತ್ತು.

## ನಾಟಕಶಾಲೆಗಳ ರೂಪರಚನೆ

ಈ ಆಟದ ಅಂಗಳಗಳ ಹಾಗೂ ನಾಟಕಶಾಲೆಗಳ ರೂಪರಚನೆ ಹೇಗಿತ್ತೆಂದರೆ (ಪುಟ 110-24) ಮೇಲೆ ತೆರೆದ ಆಕಾಶ, ಕೆಳಗೆ ದುಂಡನೆಯ ಇಲ್ಲವೇ ಬಹುಭುಜಾಕಾರದ ನೆಲ, ಅದರ ಸುತ್ತ ಜನ ಕುಳಿತುಕೊಳ್ಳಲೆಂದು ಏರಿಸಿ ಚಪ್ಪರ ಹೊದಿಸಿದ ಮೂರಂತಸ್ತಿನ ಗ್ಯಾಲರಿ, ಅಲ್ಲೇ ಒಂದೊತ್ತಿಗೆ ಅಂಗಳದ ಮಧ್ಯಕ್ಕೆ ಸ್ವಲ್ಪ ಚಾಚಿದಂತೆ ಕಟ್ಟಿದ ಮರದ ಅಟ್ಟ, ಅದರ ಮೇಲೆ ನಡುಹಗಲೇ ಆಟ. ಮುಂದೆ ಪರದೆಯಿಲ್ಲ, ಹಿಂದೆ ಸೀನರಿಯಿಲ್ಲ. ನಟರ ಕೈ ಬಾಯಿ, ಪ್ರೇಕ್ಷಕರ ಕಲ್ಪನಾಶಕ್ತಿಗಳೇ ಪ್ರದರ್ಶನದ ಬಂಡವಾಳ.

ನಾಟಕ ನೋಡಲು ಬರುತ್ತಿದ್ದವರಲ್ಲಿ ಸಾಮಾನ್ಯರಿಂದ ಹಿಡಿದು ಆಸ್ಥಾನಿಕರು, ಶ್ರೀಮಂತರು, ವಕೀಲಸಂಘಗಳ (inns of court) ಸದಸ್ಯರಂತಹ ಸುಸಂಸ್ಕೃತ ವಿದ್ಯಾವಂತರವರೆಗೆ ಎಲ್ಲ ಬಗೆಯ ಜನಗಳೂ ಇರುತ್ತಿದ್ದರು. ಉಚ್ಚ ಜನರು ಒಂದೆರಡು ಪೆನ್ನಿ ಹೆಚ್ಚು ಹಣ ಕೊಟ್ಟು ಗ್ಯಾಲರಿಗಳಲ್ಲಿ ಕೂರುತ್ತಿದ್ದರೆ ಸಾಮಾನ್ಯರು ಅಂಗಳದಲ್ಲಿ ನಿಂತೊ ಅಟ್ಟದ ಮೂರೂ ಕಡೆ ಅಂಚಿಗೆ ಹತ್ತಿದಂತೆ ಕುಳಿತೊ ನಾಟಕ ನೋಡುತ್ತಿದ್ದರು. ಈ 'ನೆಲದಣ್ಣ'ಗಳು (groundlings) ನಾಟಕದಲ್ಲಿ ಅರಸುತ್ತಿದ್ದುದು ಮನೋರಂಜನೆಯಷ್ಟೆ. ಷೇಕ್‌ಸ್ಪಿಯರನೇ ಒಂದೆಡೆ ಹೇಳಿರುವಂತೆ ಅವರ ಗ್ರಹಣಶಕ್ತಿಗೆ ನಿಲುಕುತ್ತಿದ್ದುದು ಬರಿಯ 'ಮೂಕಾಟ, ಹುಯಿಲು' (dumbshow and noise). ಅವರನ್ನು ಮೆಚ್ಚಿಸುವುದು, ನಂಬಿಸುವುದು, ನಗಿಸುವುದು, ಅಳಿಸುವುದು, ಎಲ್ಲವೂ ಸುಲಭದ ಕೆಲಸವಾಗಿತ್ತು. ಕಾವ್ಯ, ಕಾವ್ಯದ ಗೇಯತೆ ಹಾಗೂ ನಾಟಕದ ಇತರ ಸೂಕ್ಷ್ಮಗಳು ಅವರ ಮಂದಬುದ್ಧಿಗೆ ಹಿಡಿಸದಿದ್ದರೂ ನಾಟಕದ ಜೀವಾಳವಾದ ಮಾನವಜೀವನದ ಚಿತ್ರಣ, ಕರುಣೆ ಹಾಸ್ಯಗಳಂತಹ ಮೂಲಭೂತ ಭಾವನೆಗಳ ವ್ಯಂಜನ ಅವರ ಅನುಭವಕ್ಕೆ ಹೊಗದೆ ಇರುತ್ತಿರಲಿಲ್ಲ. ಒಟ್ಟಾರೆ ಈ ಜನರೇ ಆಗಿನ ರಂಗಭೂಮಿಯ ನೆಲಗಟ್ಟು; ಅದನ್ನು ರೂಪಿಸಿದ್ದು ಅವರ ರುಚಿ.

ಆ ಕಾಲದಲ್ಲಿ ನಾಟಕವೃತ್ತಿಗೆ ತೊಡಗಿದವರು ಜನಸಾಮಾನ್ಯರ ಮೆಚ್ಚಿಕೆ ಗಳಿಸಿಕೊಂಡಿದ್ದರೂ ಮಡಿವಂತ ಗೌರವಸ್ಥರ ಕಣ್ಣಲ್ಲಿ ಮಾತ್ರ ಪುಂಡಪೋಕರಿಗಳೂ ಸಮಾಜ ಘಾತಕರೂ ಆಗಿದ್ದರು. ಲಂಡನಿನ ನಗರಪಾಲಕರಂತೂ ಆ ವೃತ್ತಿಗೆ ಸಾಕ್ಷಾತ್ ಬಹಿಷ್ಕಾರವನ್ನೇ ಹಾಕಿ, ನಗರದೊಳಗೆಲ್ಲೂ ನಾಟಕಶಾಲೆಗಳು ತಲೆಯೆತ್ತದಂತೆ ಕಟ್ಟುಪಾಡು ಮಾಡಿದ್ದರು. ಥಿಯೇಟರ್, ಕರ್ಟನ್, ರೋಸ್‌ಗಳು ಹಾಗೂ ಮುಂದೆ ಅಸ್ತಿತ್ವಕ್ಕೆ ಬಂದ ಉಳಿದೆಲ್ಲ (ಬ್ಲಾಕ್ ಫ್ರೈಯರ್ಸ್ ಒಂದರ ಹೊರತು) ನಾಟಕಶಾಲೆಗಳಿದ್ದುದೂ ನಗರದ ಗಡಿಯಾಚೆ ಉತ್ತರ ದಕ್ಷಿಣಕ್ಕೆ. ದಕ್ಷಿಣದಲ್ಲಿ ಅವಕ್ಕಿದ್ದ ನೆರೆಯೆಂದರೆ ಸೆರೆಮನೆ, ಸೂಳೆಮನೆಗಳು! 84ರಲ್ಲೊಮ್ಮೆ ಒಂದು ದೊಂಬಿಯೆದ್ದಾಗ ಅದು ಒಬ್ಬ ನಟನಿಂದ ಉಗಮಿಸಿತೆಂಬ



ಗ್ಲೋಬ್ ನಾಟಕಶಾಲೆ (ಒಂದು ಹಳೆಯ ಕೆತ್ತನೆ)

ಕಾರಣದ ಮೇಲೆ ಲಂಡನಿನ ನಗರಾಧ್ಯಕ್ಷ ಥಿಯೇಟರ್, ಕರ್ಟನ್‌ಗಳನ್ನು ಕೆಡವಬೇಕೆಂದು ಸರಕಾರಕ್ಕೆ ಅರಿಕೆ ಮಾಡಿಕೊಂಡಿದ್ದ!

## ರಂಗಭೂಮಿಯ ರಕ್ಷಣಾಶಕ್ತಿಗಳು

ಇತ್ತ ಲಂಡನಿನ ಮಡಿವಂತ ನಾಗರಿಕರೂ ನಗರಪಾಲಕರೂ ರಂಗಭೂಮಿಯ ಮಾರಕ ಶಕ್ತಿಯಾಗಿ ಅದನ್ನು ತುಳಿಯಹೊರಟಿದ್ದರೆ ಅತ್ತ ಅದಕ್ಕಿಂತ ಪ್ರಬಲವಾದ ಬೇರೆ ಒಂದು ತಾರಕ ಶಕ್ತಿ ಅದಕ್ಕೆ ಉತ್ತೇಜನಕೊಟ್ಟು ಬೆಳಸುತ್ತಿತ್ತು. ಆಗ ಇಂಗ್ಲಂಡನ್ನು ಆಳಿದ್ದ ಎಲಿಜಬೆತ್ ರಾಣಿಯೇ ಸ್ವತಃ ನಾಟಕದಲ್ಲಿ ಗಾಢವಾದ ಆಸಕ್ತಿ ಹೊಂದಿದ್ದಳು. ವರ್ಷದಲ್ಲಿ ಹಲವಾರು ಸಲ ನಾಟಕ ಮಂಡಳಿಗಳವರನ್ನು ಆಹ್ವಾನಿಸಿ, ಆಸ್ಥಾನದಲ್ಲಿ ಅವರ ಆಟ ಆಡಿಸಿ ನೋಡಿ ಸಂತೋಷಪಡುತ್ತಿದ್ದಳು. 83ರಲ್ಲಿ, ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಅವಳು ತನ್ನದೇ ಒಂದು ಮಂಡಳಿಯಾಗಬೇಕೆಂದು ಅಪ್ಪಣೆ ಮಾಡಿದಳು. ಕ್ವೀನ್ಸ್ ಮೆನ್ ಮಂಡಳಿ ಅಸ್ತಿತ್ವಕ್ಕೆ ಬಂದದ್ದು ಹೀಗೆ.

ಅವಳಂತೆ ಅವಳ ಆಸ್ಥಾನಿಕರಿಗೂ ನಾಟಕದಲ್ಲಿ ತುಂಬ ಆಸೆ. ಒಬ್ಬೊಬ್ಬ ಆಸ್ಥಾನಿಕನೂ ಒಂದೊಂದು ಮಂಡಳಿಗೆ ಕೃಪಾಪೋಷಣೆ ನೀಡಿ ಅದು ತನ್ನ ಹೆಸರಿನಿಂದ ಕರೆದುಕೊಳ್ಳಲು ಅನುಮತಿಯಿತ್ತಿದ್ದ. ಇದು ಕೊಟ್ಟವ ಕೊಂಡವರಿಬ್ಬರಿಗೂ ಗೌರವದಾಯಕವೆನಿಸಿತ್ತು. ಹೀಗೆ ಆಸ್ಥಾನಿಕರ ಹೆಸರನ್ನು ಹೊತ್ತ ಮಂಡಳಿಗಳು ಅಧಿಕಾರಿಗಳ ಕಿರಕುಳದಿಂದಲೂ ಸುರಕ್ಷಿತವಾಗಿರುತ್ತಿದ್ದವು. ಲಿಸ್ಟರ್ಸ್ ಮೆನ್, ಎಸೆಕ್ಸ್ ಮೆನ್, ಸ್ಟ್ರೈಫರ್ಡ್ಸ್ ಮೆನ್ — ಇವು 87ರ ಸುಮಾರಿಗಿದ್ದ ಇಂತಹ ಕೆಲವು ಮಂಡಳಿಗಳು. ಇವು ಸಾಧಾರಣವಾಗಿ ಚಳಿಗಾಲದಲ್ಲಿ ಲಂಡನಿನಲ್ಲೂ ಬೇಸಗೆಯಲ್ಲಿ ಪ್ರವಾಸ ಹೊರಟು ಸುತ್ತಮುತ್ತಣ ಹಳ್ಳಿಪಟ್ಟಣಗಳಲ್ಲೂ ಆಟ ತೋರಿಸುತ್ತಿದ್ದವು. ಒಬ್ಬ ಪೋಷಕ-ಆಸ್ಥಾನಿಕ ತೀರಿಕೊಂಡರೆ ಅವನ ಮಂಡಳಿ ಚದರಿ, ಅದರ ನಟರು ಇತರ ಮಂಡಳಿಗಳಲ್ಲಿ ಒಮ್ಮೊಮ್ಮೆ ಒಟ್ಟಾಗಿಯೇ ನೌಕರಿ ಹಿಡಿಯುತ್ತಿದ್ದರು.

1594ರಲ್ಲಿ ಅಸ್ತಿತ್ವಕ್ಕೆ ಬಂದ ಲಾರ್ಡ್ ಚೇಂಬರ್‌ಲೆನ್ಸ್ ಮೆನ್ ಎಂಬ ಇಂತಹ ಒಂದು ಹೊಸ ಮಂಡಳಿಯ ನಟವರ್ಗದಲ್ಲಿ ಷೇಕ್‌ಸ್ಪಿಯರನೂ ಒಬ್ಬನಾಗಿದ್ದ. ಆ ವರ್ಷ ಆಸ್ಥಾನದಲ್ಲಿ ಪಾತ್ರನಾಡಿ ಸಂಭಾವನೆ ಪಡೆದವರಲ್ಲಿ ಅವನ ಹೆಸರೂ ನಮೂದಾಗಿದೆ. ಹಿಂದೆ ಹೇಳಿದ ರಾಬರ್ಟ್ ಗ್ರೀನನ ಉಲ್ಲೇಖವನ್ನು ಬಿಟ್ಟರೆ, ಆದರ ನಂತರ ಷೇಕ್‌ಸ್ಪಿಯರನನ್ನು ನಿಶ್ಚಿತವಾಗಿ ನಟನೆಂದು ತೋರಿಸುವುದು ಇದೇ. 86-87ರಲ್ಲಿ ಸ್ಟ್ರ್ಯಾಟ್‌ಫರ್ಡಿಗೆ ಭೇಟಿಕೊಟ್ಟಿದ್ದ ನಾಟಕ ಮಂಡಳಿಗಳಲ್ಲೊಂದಾದ ಲೆಸ್ಟರ್ಸ್ ಮೆನ್ ಮರು ವರ್ಷ ಲೆಸ್ಟರನ ನಿಧನಾನಂತರ ಲಾರ್ಡ್ ಸ್ಟ್ರೇಂಜ್ಸ್ ಮೆನ್ ಎಂದು ಪುನರ್ರಚಿತವಾಗಿ, ಮುಂದೆ ಡರ್ಬೀಸ್ ಮೆನ್ ಎಂದು ಹೆಸರು ಬದಲಾಯಿಸಿ, ಕೊನೆಗೆ ಚೇಂಬರ್‌ಲೆನ್ಸ್ ಮೆನ್ ಆಯಿತೆಂದೂ ಷೇಕ್‌ಸ್ಪಿಯರ್ ಸ್ಟ್ರ್ಯಾಟ್‌ಫರ್ಡಿನಲ್ಲೇ ಲೆಸ್ಟರನ ಮಂಡಳಿ ಸೇರಿ ಅದರ ಭಾಗ್ಯದ ತಾಳಕ್ಕೆ ತಾನೂ ಹೆಜ್ಜೆಯಿಟ್ಟು ಕೊನೆಗೆ ಚೇಂಬರ್‌ಲೆನನ ಮಂಡಳಿ ಕಂಡನೆಂದೂ ವಾಡಿಕೆಯಾಗಿ ನಂಬಲಾಗಿದೆ. ಚೇಂಬರ್‌ಲೆನನ ಮಂಡಳಿ ಸೇರುವ ಮೊದಲು ಅವನು ಪೆಂಬ್ರೋಕ್ಸ್ ಮೆನ್, ಸಸೆಕ್ಸ್ ಮೆನ್, ಕ್ವೀನ್ಸ್ ಮೆನ್‌ಗಳಲ್ಲಿದ್ದನೆಂದೆಲ್ಲ ಊಹೆಗಳಿವೆ. ಏನೇ ಇರಲಿ, ಚೇಂಬರ್‌ಲೆನನ ಮಂಡಳಿ ಸೇರಿದ್ದು ಷೇಕ್‌ಸ್ಪಿಯರನ ಜೀವನದ ನಿರ್ದಿಷ್ಟವೂ ಮಹತ್ವಪೂರ್ಣವೂ ಆದ ಘಟ್ಟ; ಅದು ಸಂದ 1594 ಅವನ ಜೀವನದ ಭಾಗ್ಯವರ್ಷ.

**ನಾಟಕದ ಪ್ರಾಕೃತರೂಪ: 'ಮಿರಕಲ್ಸ್', 'ಮೊರಾಲಿಟೀಸ್'**

ಷೇಕ್‌ಸ್ಪಿಯರ್ ಕಣ್ತೆರೆದ ಹೊತ್ತಿನಲ್ಲಿ ರಂಗಭೂಮಿಯಂತೆ ನಾಟಕ ಸಹ ಇನ್ನೂ ಪಾಕಗೊಂಡು ಹರಳು ಬಿಟ್ಟಿರಲಿಲ್ಲ; ಸಾಹಿತ್ಯವೆನಿಸಿಕೊಳ್ಳುವ ಪಕ್ವತೆ ಅದಕ್ಕೆ ಕೂಡಿಬಂದಿರಲಿಲ್ಲ. ಆವರೆಗೆ ಚರ್ಚಿನವರೂ ಪೌರಸಂಘಗಳವರೂ ಮಧ್ಯಯುಗೀನ ಲ್ಯಾಟಿನ್ ಪರಂಪರೆಯನ್ನೇ ಮುಂದುವರಿಸಿ, ಏಸುಕ್ರಿಸ್ತನ ಹಾಗೂ ಕ್ರೈಸ್ತ ಸಾಧುಸಂತರ ಜೀವನ ಪ್ರಸಂಗಗಳನ್ನೆತ್ತಿಕೊಂಡು ನಾಟಕ ಮಾಡಿ ಹಬ್ಬದ ದಿನಗಳಲ್ಲಿ ಆಡಿ ತೋರಿಸುತ್ತಿದ್ದರು. ಇವುಗಳ ಹೆಸರು 'ಮಿರಕಲ್ ಪ್ಲೇಸ್'; ಗುರಿ ನೀತಿಬೋಧೆ, ಧರ್ಮಪ್ರಚಾರ.

ಮುಂದೆ ಈ 'ಮಿರಕಲ್ ಪ್ಲೇಸ್'ನಿಂದಲೇ 'ಮೊರಾಲಿಟಿ ಪ್ಲೇಸ್' ಎಂಬ ಇನ್ನೊಂದು ಪ್ರಭೇದ ಹುಟ್ಟಿ ಬಂದು, ಹೊರಗೆ ನಾಟಕ ಮಂಡಳಿಗಳವರಲ್ಲಿ ಪ್ರಚಾರ ಪಡೆಯಿತು. ನೋವಾನ ಕಥೆ, ಏಬ್ರಹಾಂ-ಐಸಾಕರ ಕಥೆಗಳಂತಹ ಮಾನವ ಜೀವಿಗಳ ಸುತ್ತ ಹೆಣೆದ ಬೈಬಲಿನ ಕಥೆಗಳನ್ನು ಆರಿಸಿ, ನಡುವೆ ವಿವಿಧ ಸದ್ಗುಣ ದುರ್ಗುಣಗಳಿಗೆ ಪುರುಷರೂಪ ಕೊಟ್ಟು ಸೇರಿಸಿ ಕಟ್ಟಿದ ರಚನೆಗಳಿವು. ಇವೆಲ್ಲವೂ ಘಟನೆಗಳನ್ನು ಒಂದಕ್ಕೊಂದು ಪೋಣಿಸಿ ಹೆಣೆದ ಸರಗಳು; ನಾಟಕಕ್ಕಿಂತ ದೃಶ್ಯಾವಳಿಯೆಂಬ ಹೆಸರು ಇವಕ್ಕೆ ಹೆಚ್ಚು ಒಪ್ಪುತ್ತದೆ. ಇವುಗಳಲ್ಲಿ ಕಾಲೈಕ್ಯ, ಸ್ಥಳೈಕ್ಯ, ಕೊನೆಗೆ ಕ್ರಿಯೈಕ್ಯ ಸಹ ಇರುತ್ತಿರಲಿಲ್ಲ; ಇನ್ನು ಕಾವ್ಯಗುಣ, ನಾಟಕೀಯ ಬೆಳವಣಿಗೆ, ಸಮಂಜಸ ಪಾತ್ರಪೋಷಣೆಗಳಂತೂ ದೂರದ ಮಾತೇ. ಒಮ್ಮೊಮ್ಮೆ ಹಳೆಯ ಐತಿಹಾಸಿಕ ಪ್ರಸಂಗಗಳೂ ಇದೇ ಪ್ರಕ್ರಿಯೆಯಲ್ಲಿ ನುರಿತು 'ಕ್ರಾನಿಕಲ್ ಪ್ಲೇಸ್' ಎಂಬ ಹೆಸರಿನಿಂದ ರಂಗ ಕಾಣುತ್ತಿದ್ದವು.

ಹದಿನಾರನೆ ಶತಮಾನದ ಪೂರ್ವಾರ್ಧದಲ್ಲಿ ಈ ಧಾರ್ಮಿಕ ಕೃತಿಗಳ ಹೊರೆಯಿಳಿಸುವ 'ಇಂಟರ್‌ಲೂಡ್ಸ್' ಎಂಬ ಒಂದು ಪ್ರಕಾರ ಪ್ರಚಲನೆಗೆ ಬಂದಿತು. ಮೊರಾಲಿಟಿಗಳ

ದೀರ್ಘದೃಶ್ಯಗಳ ನಡುವೆ ಅವುಗಳ ಏಕತಾನದಿಂದ ಬಿಡುವು ಕೊಡಲೆಂದು ಹವಣಿಸಿದ ಅಂಕಮಧ್ಯ ದೃಶ್ಯಗಳಿವು. ಇವುಗಳ ನೆಲಸು ಲೌಕಿಕ, ಉದ್ದೇಶ ವಿನೋದ. (ಹಿಂದೆ ನಮ್ಮ ಪೌರಾಣಿಕ ನಾಟಕಗಳ ನಡುವೆಯೂ ಇದೇ ಬಗೆಯ 'ಕಾಮಿಕ್' ಅಥವಾ ನಕಲಿ ದೃಶ್ಯಗಳಿರುತ್ತಿದ್ದುದನ್ನು ಇಲ್ಲಿ ನೆನೆಯಬಹುದು.) ಮೊದಮೊದಲಿಗೆ ಬರಿಯ ಅಂಕ ಮಧ್ಯ ದೃಶ್ಯಗಳಾಗಿದ್ದ ಈ ಇಂಟರ್‌ಲೂಡ್‌ಗಳು ಬರುಬರುತ್ತ ಹಿಗ್ಗಿ ಬೆಳೆದು ಇಡಿಯ ನಾಟಕಗಳೇ ಆಗಿ, ಮಧ್ಯಯುಗೀನ ನಾಟಕಕ್ಕೂ ಎಲಿಜಬೆತ್ ಕಾಲೀನ ನಾಟಕಕ್ಕೂ ನಡುವಿನ ಸೇತುವೆಯಾಗಿ ಪರಿಣಮಿಸಿದವು.

## ನವೋದಯದ ಹೊಸ ಬೆಳಕು

ಇದೇ ಸಮಯಕ್ಕೆ ಇಂಗ್ಲಂಡಿನಲ್ಲಿ ವಿಚಾರಕ್ರಾಂತಿಯ ಒಂದು ಹೊಸ ವರ್ಷಧಾರೆ ಆರಂಭ ವಾಯಿತು. ಆವರೆಗೆ ಕೂಪಮಂಡೂಕಗಳಂತೆ ತಮ್ಮ ಧರ್ಮಾಂಧತೆಯಲ್ಲಿ ಮುಳುಗಿ ತೊಳಲಾಡಿದ್ದ ಅಲ್ಲಿನ ವಿದ್ಯಾವಂತ ಜನ ಕಣ್ಪೊರೆ ಕಳಚಿ, ಗ್ರೀಸ್ ರೋಮ್‌ಗಳ ಕ್ಲಾಸಿಕಲ್ ಪರಂಪರೆಯ ಪುನಃಶೋಧನೆಗೆ ತೊಡಗಿದರು. ಪರಿಣಾಮವಾಗಿ, ನವೋ ದಯದ ಕಿಡಿ ಹಾರಿ ಜನಜೀವನದಲ್ಲಿ ಅಭೂತ ಜಾಗೃತಿ ಮೂಡಿತು. ಈ ಕಿಡಿ ಕಲೆಸಾಹಿತ್ಯ ಗಳ ಇತರ ಪ್ರಕಾರಗಳಂತೆ ನಾಟಕಕ್ಷೇತ್ರವನ್ನೂ ಬೆಳಗದೆ ಇರಲಿಲ್ಲ. ಶತಮಾನದ ಉತ್ತ ರಾರ್ಧದ ಹೊತ್ತಿಗೆ ಶಾಲಾಕಾಲೇಜುಗಳ ವಿದ್ಯಾರ್ಥಿಗಳೂ ವಕೀಲಸಂಘಗಳವರೂ ಸಂಪ್ರದಾಯದ ಜಾಡು ತೊರೆದು ಹೊಸ ನಾಟಕಗಳನ್ನು ಹುಡುಕಿ ಆಡತೊಡಗಿದರು. ಲ್ಯಾಟಿನಿನ ಟೆರೆನ್ಸ್ ಪ್ಲಾಟಸರ ಹರ್ಷನಾಟಕಗಳೂ ಸೆನೆಕನ ರುದ್ರನಾಟಕಗಳೂ ಇಂಗ್ಲಿಷಿಗೆ ಇಳಿದು ಬಂದವು. ಜೊತೆಗೆ ಇಟಲಿಯ ಪ್ರಭಾವವೂ ಕೂಡಿ ಬಂದು ಬಣ್ಣ ಕಟ್ಟಿತು. ಅನುವಾದಗಳಿಂದ ಷುರುವಾದ ಈ ಹೊಸ ನಡೆ ಬರುಬರುತ್ತ ಕ್ಲಾಸಿಕಲ್ ಅಚ್ಚಿನಲ್ಲಿ ದೇಶೀಯ ವಸ್ತುವಿಷಯಗಳನ್ನು ಎರಕ ಹೊಯ್ದು ಮಾಡಿದ ಮೂಲಕೃತಿಗಳಿಗೆ ಎಡೆ ಕೊಟ್ಟಿತು. ಈ ಹೊಸ ಹುಟ್ಟಿನ ಪೋಷಕರಲ್ಲಿ ಎಲಿಜಬೆತ್ ರಾಣಿಯೂ ಇದ್ದಳು. 1580ರ ಸುಮಾರಿಗೆ ಅವಳ ಆಸ್ಥಾನದಲ್ಲಿ ನಡೆಯುತ್ತಿದ್ದುದು ಈ ಹೊಸ ನಾಟಕಗಳೇ.

## 'ಯೂನಿವರ್ಸಿಟಿ ವಿಟ್ಸ್'

ಇದು ಎಲಿಜಬೆತ್‌ಯುಗೀನ ನಾಟಕಸಾಹಿತ್ಯದ ಮೊದಲ ತೊರೆ. ಇದಾದ ಒಂದೆರಡು ವರ್ಷ ಗಳಲ್ಲಿಯೇ ವಿಶ್ವವಿದ್ಯಾನಿಲಯಗಳಲ್ಲಿ ತರಪೇತಿ ಪಡೆದ ವಿದಗ್ಧರ (University Wits) ಒಂದು ತಂಡ ನಾಟಕರಚನೆಗೆ ಕೈಯಿಟ್ಟು ತೊರೆ ಬಲಿಸಿ ಹೊಸ ನೀರಿನ ನೆರೆ ಹರಿಸಿತು. ಆಕ್ಸ್‌ಫರ್ಡಿನ ಲಿಲಿ, ಪೀಲ್, ಲಾಡ್ಜ್, ಕೇಂಬ್ರಿಜ್‌ನ ಗ್ರೀನ್, ಮಾರ್ಲೊ, ನ್ಯಾಷ್ ಈ ಗುಂಪಿನ ದಿಗ್ಗಜಗಳು. ಇವರ ಜೊತೆಗೆ ವಿಶ್ವವಿದ್ಯಾನಿಲಯದಾಚೆಯಿಂದ ಕಿಡ್ ಬಂದು ಕೂಡಿಕೊಂಡ. ಇವರೆಲ್ಲರೂ ಸಮರ್ಥರು, ಕ್ಲಾಸಿಕಲ್ ಸಂಪ್ರದಾಯದಲ್ಲಿ ನುರಿತವರು. ರೂಪಾಕಾರಗಳಿಲ್ಲದೆ ಹುಡಿಹಿಟ್ಟಾಗಿ ಚೆಲ್ಲಿದ್ದ ನಾಟಕ ಪ್ರಕಾರವನ್ನು ಇವರು ಸಂವಿಧಾನ, ಕ್ರಿಯೆ, ನಾಟಕೀಯತೆ, ಭಾಷಾಶೈಲಿಗಳಲ್ಲಿ ಮೆದ್ದು ಮೂರ್ತರೂಪ ಕೊಟ್ಟರು, ಕಾವ್ಯದ ಪ್ರಾಣ ಉಸುರಿ ಸಚೇತನಗೊಳಿಸಿ ನಿಲ್ಲಿಸಿದರು. ಇವರಲ್ಲೆಲ್ಲ ಲಿಲಿ ಆದ್ಯ. ಅವನದು

'ಯೂಫುಯಿಸಂ' ಎಂಬ ಅಂಕಿತದಿಂದ ಕರಸಿಕೊಂಡ ನಾಜೂಕಿನ ಶೈಲಿ, ರೀತಿನೀತಿಯ ತಂತ್ರ. ಪೀಲ್ ರಾಷ್ಟ್ರೀಯ ಚರಿತ್ರೆಯ ಕಡೆ ಗಮನ ಹರಿಸಿ ಚಾರಿತ್ರಕ ನಾಟಕರಚನೆಗೆ ಕೈಯಿಟ್ಟವರಲ್ಲಿ ಮೊದಲಿಗ. ರಸಾವೇಶ, ಭಾವೋದ್ರೇಕಗಳ ಹೊಸ ರುಚಿ ಅಟ್ಟಿ ಬಡಿಸಿದ್ದು ಕಿಡ್‌ನ ಕೈ. ಸ್ತ್ರೀಪಾತ್ರಗಳಿಗೆ ಕೋಮಲತೆಯೆರೆದು ಮಾನವೀಕರಿಸಿದವನು ಗ್ರೀನ್. ಇವರೆಲ್ಲರೂ ಶೈಲಿ ತಂತ್ರಗಳಲ್ಲಿ ನಾವೀನ್ಯ ತಂದು ಬೆಳಸಿದರೆ 'ಮದಿಸಿದ ಕಾವ್ಯವೈಭವದ ತುಂಬು ಹಾಯಿ' ಮಾರ್ಲೋ ಒಟ್ಟಂದಕ್ಕೆ, ನಾಟಕಮಾಧ್ಯಮವಾದ ಕಾವ್ಯಕ್ಕೆ ಓಜ ತುಂಬಿದ. 86-87ರಲ್ಲಿ ಹೊರಬಂದ ಕಿಡ್‌ನ 'ದಿ ಸ್ಪ್ಯಾನಿಷ್ ಟ್ರ್ಯಾಜೆಡಿ', ಮಾರ್ಲೋನ 'ಟ್ಯಾಂಬುರ್‌ಲೆನ್'ಗಳು ಹೊಸ ದಿಶೆಯ ದಾರಿಗುರುತುಗಳಾದವು. ನಾಟಕ ಮಂಡಳಿಗಳವರು ಮೊರಾಲಿಟಿ, ಇಂಟರ್‌ಲೂಡ್‌ಗಳ ಹಳಸನ್ನು ಬದಿಗೊತ್ತಿ, ಇವರ ಕೃತಿಗಳನ್ನು ಬಯಸಿ ಬಾಯಿ ಚಪ್ಪರಿಸಿದರು. ಇಲ್ಲವಾದರೆ ಎಲಿಜಬೆತಳ ಆಸ್ಥಾನದಲ್ಲಿ ತೋರಿಸುವುದೇನನ್ನು? ಅಲ್ಲಿ ಸಂದದ್ದು ಹೊರಗೆ 'ನೆಲದಣ್ಣ'ಗಳಿಗೂ ಸಂದಿತು!

**ಸೂರ್ಯೋದಯ**

ಈ ಸುಮಾರಿಗೆ ಷೇಕ್‌ಸ್ಪಿಯರ್ ನಟನಾಗಿ ನೌಕರಿ ಮಾಡಿಕೊಂಡಿದ್ದ. ಆ ಕಾಲದಲ್ಲಿ ನಾಟಕ ಮಂಡಳಿಗಳ ಕಾರ್ಯವರ್ಗದಲ್ಲಿ ಲೇಖನಕಲೆಯರಿತ ಒಬ್ಬಿಬ್ಬರು ಕವಿಗಳಿರುತ್ತಿದ್ದರು. ಹೊರಗಿನ ಲೇಖಕರಿಂದ ಕೊಂಡ ನಾಟಕಗಳನ್ನು ರಂಗಭೂಮಿಯ ರುಚಿಗೆ ಒಗ್ಗುವಂತೆ ತಿದ್ದಿ ತೇಪೆ ಹಾಕುವುದು, ಸರಿಯಾದ ನಾಟಕಗಳು ದೊರೆಯದಿದ್ದಾಗ ತಾವೇ ನಾಟಕ ಬರೆಯುವುದು ಅವರ ಕಸುಬು. ಜನ್ಮತಃ ಪ್ರತಿಭಾಶಾಲಿಯಾಗಿದ್ದ ಷೇಕ್‌ಸ್ಪಿಯರ್ ತಾನಿದ್ದ ಮಂಡಳಿಯಲ್ಲಿ ನಟನ ಹುದ್ದೆಯ ಜೊತೆಗೆ ಈ ಹೊಣೆಯನ್ನೂ ನಿರ್ವಹಿಸಿದ್ದನೆಂದು ಕಾಣುತ್ತದೆ. 'ವಿದಗ್ಧ'ರ ಕೃತಿಗಳು ಅವನನ್ನು ಕೆಣಕಿದವು. ಅವರ ಮಾದರಿಯನ್ನನುಸರಿಸಿ ತಾನೂ ನಾಟಕ ಬರೆಯಲಾರಂಭಿಸಿದ. ತೂಬು ತೆರೆದದ್ದೇ ತಡ, ಅವನ ನಿರ್ಮಾಣಶಕ್ತಿ ಹುಚ್ಚೆದ್ದು ಹರಿಯಿತು. ಅವರಲ್ಲಿ ಬಿಡಿಬಿಡಿಯಾಗಿ ಹರಡಿ ಹಂಚಿದ್ದ ಪ್ರತಿಭೆ ಇವನಲ್ಲಿ ಒಟ್ಟುಗೂಡಿ ಒಮ್ಮೊಗವಾಗಿ ಹೊರಬಂದಿತು; ಅವರ ಬೇರೆ ಬೇರೆ ಬಣ್ಣಗಳು ಇವನಲ್ಲಿ ಕಾಮನ ಬಿಲ್ಲಾಗಿ ಬೆರೆತವು; ಅವರೆಲ್ಲರ ಸತ್ವಗಳನ್ನೂ ಇವನೊಬ್ಬನೇ ನುಂಗಿ ಜೀರ್ಣಿಸಿದ. ಪೀಲ್ ಹಾಗೂ ಮಾರ್ಲೋರ ಪ್ರೇರಣೆ ಚರಿತ್ರೆಗೆ ಕೈ ತೊಡಗಿಸಿ 'ಹೆನ್ರಿ ದಿ ಸಿಕ್ಸ್ತ್' ನಾಟಕ ಚಕ್ರಕ್ಕೆ ಜನ್ಮ ಕೊಟ್ಟರೆ ಕಿಡ್‌ನ ರಂಜಕ ದೃಷ್ಟಿ 'ಟೈಟಸ್ ಆಂಡ್ರೋನಿಕಸ್'ಗೆ, ಲಿಲಿಯ ಮಾತಿನ ನಾಜೂಕು, ಜಾಣ್ಮೆಗಳು 'ಲವ್ಸ್ ಲೇಬರ್ಸ್ ಲಾಸ್ಟ್'ಗೆ, ಗ್ರೀನನ ನಯ ಕೋಮಲತೆಗಳು 'ಟು ಜೆಂಟಲ್‌ಮೆನ್ ಆಫ್ ವೆರೋನ'ದ ಸಿಲ್ವಿಯಾ, ಜೂಲಿಯಾರ ಸೃಷ್ಟಿಗೆ ಸ್ಫೂರ್ತಿ ಒದಗಿಸಿದವು. ಷೇಕ್‌ಸ್ಪಿಯರ್ ಅವರಂತೆ ಆಕ್ಸ್‌ಫರ್ಡ್, ಕೇಂಬ್ರಿಜ್‌ಗಳ ಊಟೆಯ ನೀರು ಕುಡಿದು ಪ್ರಕಾಂಡತೆ ಪಡೆಯದಿದ್ದರೂ ಅವರೆಲ್ಲರನ್ನೂ ಮೀರಿಸಿ ಬರೆದ. ಅವರಿಗಿಲ್ಲದ ರಚನಾಕೌಶಲ, ಶೈಲಿಗಳು ಇವನಿಗೆ ಸಿದ್ಧಿಸಿದವು. ಕೊನೆಗೆ ಅವರು ತಮಗೇ ಮೀಸಲೆಂದುಕೊಂಡಿದ್ದ ಸರಳ ರಗಳೆ ಸಹ ಇವನ ಕೈಯಲ್ಲಿ ವಿಶಿಷ್ಟ ಶಕ್ತಿ, ಮಧುರತೆಗಳನ್ನು ಪಡೆಯಿತು.

ಷೇಕ್‌ಸ್ಪಿಯರನ ಸೈಪೇ ಸೈಪು. ಒಂದು ಕಡೆ ಪ್ರತಿಭಾಶ್ರೀ ಅವನಿಗೆ ಒಲಿದಿದ್ದರೆ ಇನ್ನೊಂದು ಕಡೆ ಭಾಗ್ಯಶ್ರೀ ಅವನನ್ನು ವರಿಸಿದಳು. ಮೊದಲ ಐದಾರು ವರ್ಷಗಳು

ವಿದಗ್ಧರೊಡನೆ ಸೆಣಸಬೇಕಾಗಿಬಂದರೂ 1594ರಲ್ಲಿ ಅವನು ಚೇಂಬರ್‌ಲೆನ್ ಮಂಡಳಿ ಸೇರುವ ಹೊತ್ತಿಗೆ ಅವನ ಪ್ರತಿಸ್ಪರ್ಧಿಗಳಲ್ಲಿ ಗ್ರೀನ್, ಕಿಡ್, ಮಾರ್ಲೊ ತೀರಿಕೊಂಡಿದ್ದರು. ಉಳಿದವರು ನಾಟಕರಚನೆಗೆ ಶರಣು ಹೊಡೆದಿದ್ದರು. ದಾರಿ ತೆರವಾಯಿತು. ಷೇಕ್ಸ್ಪಿಯರ್ ಈಗ ಎಲಿಜಬೆತ್-ಯುಗೀನ ನಾಟಕದ ಅಪ್ರತಿರಥ, ಏಕಚಕ್ರಾಧಿಪತಿ.

## ಕಥನ-ಕವನಗಳು

1593-94 ಇನ್ನೂ ಒಂದು ದೃಷ್ಟಿಯಿಂದ ಷೇಕ್ಸ್ಪಿಯರನ ಜೀವನದ ಮಹತ್ವಪೂರ್ಣ ವರ್ಷಗಳಾದವು. ಅದುವರೆಗೆ ಬರಿಯ ನಟ ನಾಟಕಕಾರನಾಗಿ ಬೆಳಕಿಗೆ ಬಂದಿದ್ದ ಅವನು ಸಾಹಿತ್ಯಪ್ರಪಂಚದಲ್ಲಿ ಕವಿಯಾಗಿ ಸ್ಥಾನ ಗಳಿಸಿದ್ದು ಆ ವರ್ಷಗಳಲ್ಲಿ. 92ರ ಜೂನ್ ಇಂದ 94ರ ಏಪ್ರಿಲ್‌ವರೆಗಿನ ಅವಧಿಯಲ್ಲಿ ಲಂಡನಿನಲ್ಲಿ ಪ್ಲೇಗಿನ ಪಿಡುಗಾಗಿ ನಾಟಕಶಾಲೆಗಳು ಮುಚ್ಚಿದ್ದವು. ಈ ಬಲವಂತದ ಬಿಡುವನ್ನು ಹೇಗೆ ರೂಢಿಸುವುದು? ಅವನು ಕಾವ್ಯ ರಚನೆಗೆ ಕೈಯಿಟ್ಟ. (ಸ್ಟ್ರ್ಯಾಟ್‌ಫರ್ಡ್ ಬಿಡುವ ವೇಳೆಗಾಗಲೇ ಷೇಕ್ಸ್ಪಿಯರ್ ಕಾವ್ಯ ರಚನೆ ಮಾಡಿದ್ದನೆಂದು ಇನ್ನೊಂದು ಅಭಿಪ್ರಾಯವಿದೆ.) ಇದರ ಹಿಂದೆ ಕಾವ್ಯ ಬರೆಯ ಬೇಕೆಂಬ ಲೋಕೋತ್ತರ ಒತ್ತರದೊಡನೆ ಪ್ರಾಯಶಃ ಒಂದು ಲೌಕಿಕ ದೃಷ್ಟಿಯೂ ಬೆರೆತಿತ್ತೇನೊ: ಅವನು ಅದುವರೆಗೆ ಬರೆದಿದ್ದುದು ನಾಲ್ಕು ಐದು ನಾಟಕಗಳನ್ನು ಮಾತ್ರ. ಅವು ರಂಗ ಕಂಡು, ಹೆಸರು ತಂದಿದ್ದವಾದರೂ ಅವುಗಳಿಂದ ದೊರೆತಿದ್ದ ಆರ್ಥಿಕ ಲಾಭ ಅಷ್ಟಕ್ಕಷ್ಟೆ. ಮತ್ತೆ ನಾಟಕಶಾಲೆಗಳು ತೆರೆಯುವವರೆಗೆ ನಾಟಕ ಬರೆದರೂ ಹೊಟ್ಟೆ ತುಂಬುವಂತಿರಲಿಲ್ಲ. ಅಂದಿನ ಸಮಾಜದಲ್ಲಿ ಕವಿಯಾದವನಿಗೆ ನಟ ನಾಟಕಕಾರರಿಗಿಂತ ಹೆಚ್ಚಿನ ಮನ್ನಣೆ ದೊರೆಯುತ್ತಿತ್ತು. ಸ್ವತಃ ಎಲಿಜಬೆತ್ ರಾಣಿ ಕವಿಗಳಿಗೆ ಪೋಷಣೆ ಕೊಟ್ಟಿದ್ದಳು. ಅವಳ ಆಸ್ಥಾನದ ಅರ್ಲರು ತಮ್ಮ ಬಳಗದಲ್ಲಿ ಒಬ್ಬೊಬ್ಬ ಕವಿಯನ್ನಿರಿಸಿಕೊಂಡು ಪೋಷಿಸಿದ್ದರು. ಈ ಬಗೆಯ ಆಶ್ರಯದಿಂದ ಕವಿಗಳಿಗೆ ಅಲ್ಪ ಸ್ವಲ್ಪ ಹಣ ಸಂಪಾದನೆಯಾಗುತ್ತಿದ್ದುದಲ್ಲದೆ ಆಸ್ಥಾನಿಕರ ಉಚ್ಚ ವರ್ತುಲಗಳಲ್ಲಿ ಪ್ರವೇಶವಿರುತ್ತಿತ್ತು. ಆ ಜನರ ಸಭ್ಯತೆ, ಸಂಸ್ಕೃತಿ, ಕಲಾಭಿರುಚಿಗಳಲ್ಲಿ ಕವಿಗಳಿಗೂ ಪಾಲು ದೊರೆಯುತ್ತಿತ್ತು. ಇದು ಷೇಕ್ಸ್ಪಿಯರನ ವ್ಯವಹಾರಬುದ್ಧಿ, ಮಹತ್ವಾಕಾಂಕ್ಷೆಗಳನ್ನು ಕೆಣಕಿರಬೇಕು! ತಾನೂ ಶ್ರೀಮಂತ ಆಸ್ಥಾನಿಕರಲ್ಲಿ ಗಣ್ಯನಾದೊಬ್ಬನನ್ನೇ ಹಿಡಿದು ಅವನ ಆಶ್ರಯ ದೊರಕಿಸಿಕೊಂಡು ಕಾವ್ಯರಚನೆಗೆ ಆರಂಭಿಸಿದ. ಆ ಶ್ರೀಮಂತ ಸೌತ್ಯಾಂಪ್ಟನಿನ ಅರ್ಲನಾದ ಹೆನ್ರಿ ರಿಯೋಥಿಸ್ಲಿ. ಷೇಕ್ಸ್ಪಿಯರನ ಮೊದಲ ಕಥನ-ಕವನವಾದ 'ವೀನಸ್ ಅಂಡ್ ಆ್ಯಡೋನಿಸ್' 93ರಲ್ಲೂ, ಎರಡನೆಯ 'ದಿ ರೇಪ್ ಆಫ್ ಲೂಕ್ರೀಸ್' 94ರಲ್ಲೂ (ಪುಟ 235-38) ಬೆಳಕು ಕಂಡು, ಎರಡು ಕವನಗಳೂ ಆ ಮಹನೀಯನಿಗೆ ಅರ್ಪಿತವಾದವು. ಆ ಅರ್ಪಣೆಯ ಒಕ್ಕಣೆಗಳಲ್ಲಿ ಅತೀವ ಗೌರವಾಭಿಮಾನಗಳು ತುಂಬಿ ಸೂಸಿವೆ.

ಈ ಕಥನ-ಕವನಗಳು ಮೈಗೊಂಡಿರುವ ವಿಷಯವೆಂದರೆ ಶೀಲದ ಮೇಲೆ ಕಾಮು ನಡಸುವ ಹಲ್ಲೆ. ಒಂದರ ಆಧಾರ ಪುರಾಣ; ಇನ್ನೊಂದರದು ಇತಿಹಾಸ. ಎರಡರಲ್ಲೂ ಹರೆಯದ ಕೆಂಪಿದೆ, ಬಿಸಿಯಿದೆ. ಒಟ್ಟಿನಲ್ಲಿ ಕಥೆ, ಅದನ್ನು ಹೇಳಿರುವ ರೀತಿ, ಬಳಸಿರುವ ತಂತ್ರ ಸಾಧಾರಣವಾದರೂ ಅವುಗಳ ಕರ್ತೃ ಅಸಾಧಾರಣ ಪ್ರತಿಭೆಯವನೆಂದು ಎತ್ತಿ

ಸಾರುವ ಹಲವು ಸೊಗಸುಗಳು ಈ ಕವಿತೆಗಳಲ್ಲಿ ನಮಗೆ ದೊರೆಯದೆ ಇಲ್ಲ. ಮುಖ್ಯವಾಗಿ ಕಾವ್ಯದ ಹರಿವು, ಶೈಲಿಯ ಒನಪು, ಸ್ಟ್ರ್ಯಾಟ್‌ಫರ್ಡಿನ ಹಳ್ಳಿಗಾಡಿನಿಂದೆತ್ತಿ ನಿರ್ಮಿಸಿದ ಪ್ರತಿಮೆಗಳ ಮಿನುಗು ನಮ್ಮನ್ನು ಸೆರೆ ಹಿಡಿಯುತ್ತವೆ. ಕಾವ್ಯಮಾರ್ಗ ಬೆಳೆದು ಬದಲಾಗಿರುವ ನಮ್ಮ ಕಾಲದ ಅಭಿರುಚಿಗೆ ಈ ಕವಿತೆಗಳು ಕಸರಾಗಿ ಕಂಡರೂ ಅಂದಿನ ಎಲಿಜಬೆತ್ ಯುಗದಲ್ಲಿ ಅವು ಜನಪ್ರಿಯವಾಗಿದ್ದವೆಂಬುದಕ್ಕೆ ಒಂದರ ಹಿಂದೊಂದರಂತೆ ಅವು ಹಲವಾರು ಸಂಸ್ಕರಣಗಳನ್ನು ಕಂಡದ್ದೇ ಸಾಕ್ಷಿ.

## ಸಾನೆಟ್ಟುಗಳು

ಷೇಕ್ಸ್ಪಿಯರನ ಸೃಷ್ಟಿಭಂಡಾರದಲ್ಲಿ ಮೊದಲ ಸ್ಥಾನ ನಾಟಕಗಳಿಗಾದರೆ ಎರಡನೆ ಸ್ಥಾನ ಅವನು ಬರೆದ 154 ಸಾನೆಟ್ಟುಗಳಿಗೆ (ಪುಟ 45-56, 166-177). 1594ರ ಸುಮಾರಿಗಾಗಲೇ ಅವನು ಅವುಗಳಲ್ಲಿ ಹೆಚ್ಚಿನವನ್ನು ಬರೆದು ಮುಗಿಸಿದ್ದನೆಂದು ಕಾಣುತ್ತದೆ. ವಿಷಯದ ಆಧಾರದ ಮೇಲೆ ಇವುಗಳಲ್ಲಿ ಮೊದಲ 126 ಒಂದು ಗುಂಪಿಗೂ ಉಳಿದವು ಇನ್ನೊಂದು ಗುಂಪಿಗೂ ಸೇರುತ್ತವೆ. ಅವುಗಳ ಅಚ್ಚಿನ ಕ್ರಮ ಆನುಕ್ರಮಿಕವಾದರೂ ರಚನೆ ಏಕಕಾಲಿಕವೆಂದು ಪಂಡಿತರ ಮತ. ಮೊದಲ ಗುಂಪು ಒಬ್ಬ ಚೆಲುವ ಹುಡುಗನನ್ನು ಕುರಿತದ್ದು; ಎರಡನೆಯದು ಒಬ್ಬ ಕಪ್ಪು ಹೆಣ್ಣನ್ನು.

ಈ ಸಾನೆಟ್ಟುಗಳದ್ದೊಂದು ರೋಮಾಂಚಕ ಕಥೆ. ಕವಿ ಹಾಗೂ ಒಬ್ಬ ಶ್ರೀಮಂತ ಆಶ್ರಯದಾತನ (ಅವನು ಸೌತ್ಯಾಂಪ್ಟನಿನ ಅರ್ಲನೇ ಎಂದು ಬಹುಮತ) ನಡುವಿನ ಸಂಬಂಧವನ್ನು ಕುರಿತಿದ್ದು, ಅವು ಹೇಳುವ ಕಥೆ ಷೇಕ್ಸ್ಪಿಯರನ ಆತ್ಮವೃತ್ತವೇ ಎಂಬುದರಲ್ಲಿ ಸಂಶಯವಿಲ್ಲ. ಆ ಶ್ರೀಮಂತ ಕವಿಗಿಂತ ವಯಸ್ಸಿನಲ್ಲಿ ಚಿಕ್ಕವನು; ಯುವಕ, ಚೆಲುವ. ಸಾಧಾರಣವಾಗಿ ಕವಿ-ಆಶ್ರಯದಾತರ ನಡುವೆ ಇರಬಹುದಾದುದಕ್ಕಿಂತ ಹೆಚ್ಚು ಗಾಢವಾದ ಸ್ನೇಹಸಂಬಂಧ ಅವರ ನಡುವೆ ಕೂಡಿಬಂದಿತ್ತು. ಆಶ್ರಯದಾತ — ಅವನನ್ನು ಚೆನ್ನಿಗನೆನ್ನೋಣ — ಅವಿವಾಹಿತ. ಏಕೋ ಏನೋ ಅವನಿಗೆ ಮದುವೆಯೆಂದರೆ ಜರಿಕೆ. ಪ್ರಾಯಶಃ ಅವನ ತಾಯಿಯ ಚಿತಾವಣೆಯಿಂದಾಗಿ ಕವಿ ಅವನು ಅವಿವಾಹಿತನಾಗಿ ಉಳಿದರೆ ಪ್ರಕೃತಿಗೆ ಲೋಪವಾಗುವುದೆಂದು ವಿವರಿಸಿ, ಬೇಗನೆ ಮದುವೆಯಾಗಿ ತಂದೆಯಾಗೆಂದು ಗೋಗರೆದ. ಮೊದಮೊದಲ ಸಾನೆಟ್ಟುಗಳಲ್ಲಿನ ವಸ್ತು ಇದು.

ಹೀಗೆ ಮುಗ್ಧವಾಗಿ ಶುರುವಾಗುವ ಕವಿ-ಚೆನ್ನಿಗರ ಸಂಬಂಧ ಬರುಬರುತ್ತ ತೊಡಕಾಯಿತು. ಕವಿಗೆ ಚೆನ್ನಿಗನ ಮೇಲೆಯೇ ಪ್ರೀತಿ ಬೆಳೆದು, ಅದು ಸಲಿಂಗರತಿಪ್ರೇರಿತವೋ ಎನ್ನುವಷ್ಟು ದೂರ ಹೋಯಿತು. ಮುಂದಿನ ಹಲವು ಸಾನೆಟ್ಟುಗಳಲ್ಲಿ ಕವಿ ಚೆನ್ನಿಗನ ಚೆಲುವನ್ನು ಹೊಗಳಿ ಹಾಡಿ, ಅದು ತನ್ನ ಮನಸ್ಸಿನ ಮೇಲೆ ಉಂಟು ಮಾಡಿದ ವಿವಿಧ ಪರಿಣಾಮಗಳಿಗೆ ಅಭಿವ್ಯಕ್ತಿ ಕೊಟ್ಟ. ಇದು ಸಾನೆಟ್ಟುಗಳ ಎರಡನೆ ಮುಖ.

ಈ ಹೊತ್ತಿಗೆ ಒಬ್ಬ ಹೆಣ್ಣು ಅವರ ಬದುಕಿನಲ್ಲಿ ಪ್ರವೇಶಿಸಿದಳು. 'ಲವ್ಸ್ ಲೇಬರ್ಸ್ ಲಾಸ್ಟ್', 'ರೋಮಿಯೊ ಅಂಡ್ ಜೂಲಿಯೆಟ್'ಗಳ ರಾಸಲಿನ್‌ರಂತೆ ಅವಳು ಬಣ್ಣದಲ್ಲಿ ಕಪ್ಪು. ಆದರೂ ಕವಿಗೆ ಚೆಲುವಾಗಿಯೇ ಕಂಡಳು, ಅವನು ಮರುಳಾದ. ಅವಳೋ ಮಹಾಚಂಚಲೆ. ಅವಳನ್ನು ತನಗೆ ಒಲಿಸಿಕೊಡೆಂದು ಕವಿ ಆಶ್ರಯದಾತನನ್ನೇ ಕೇಳಿ

ಕೊಂಡ. ಆದರೆ ಆ ಭೂಪ ಕವಿಗೆ ನೆರವಾಗುವ ಬದಲು ತಾನೇ ಅವಳ 'ಕಾಗೆಕಪ್ಪಿನ ಹುಬ್ಬುಗಳ' ಬಲೆಯಲ್ಲಿ ಸಿಕ್ಕುಬಿದ್ದ; ಗಂಟು ಗೋಜಾಯಿತು! ಹೀಗಾಗಬಹುದೆಂದು ಮೊದಲೇ ಸಂಶಯಿಸಿದ್ದ ಕವಿಗೆ ವ್ಯಥೆ ಬಡಿಯಿತು. ಕಪ್ಪು ಹೆಣ್ಣು ಕವಿಯನ್ನು ತಾತ್ಸಾರದಿಂದ ಕಂಡಳು, ಬಹಿರಂಗವಾಗಿ ಜರೆದಳು. ನಂತರ ಅವನ ಒಲವನ್ನು ಒಪ್ಪಿದಂತೆ ಮಾಡಿ ಹತ್ತಿರ ಕರೆದುಕೊಂಡಳು. ಮತ್ತೆ ವಿಶ್ವಾಸಘಾತಕಿಯಾದಳು. ಕವಿಯ ಮನಸ್ಸು ಪ್ರೀತಿ ದ್ವೇಷಗಳ ಇಕ್ಕಟ್ಟಿನಲ್ಲಿ ಸಿಕ್ಕು ಒಡೆಯಿತು. ಅವನು ನೊಂದ, ಆತ್ಮದೂಷಣೆ ಮಾಡಿಕೊಂಡ. ಕಪ್ಪು ಹೆಣ್ಣಿನ ಸಂಗದಲ್ಲಿ ಕವಿ ಉಂಡ ಈ ಕಹಿ ಅನುಭವ ಮೂರನೆ ಮುಖ.

ನಾಲ್ಕನೆಯದರಲ್ಲಿ ಕವಿ-ಚೆನ್ನಿಗರ ನಡುವೆ ಒಬ್ಬ ಸಮರ್ಥನಾದ ಎದುರಾಳಿ ಕವಿ ಅಡ್ಡ ಬಂದು, ಕವಿಯನ್ನು ಸ್ಥಾನಪಲ್ಲಟಗೊಳಿಸಿ ಚೆನ್ನಿಗನ ಆಸರೆ ಮನ್ನಣೆಗಳನ್ನು ಗಳಿಸಿಕೊಂಡ. ಅದು ಕವಿಗೆ ಇನ್ನೊಂದು ಬಗೆಯ ದುಃಖ ತಂದಿತು.

ಸಾನೆಟ್ಟುಗಳಲ್ಲಿ ಗುರುತಿಸಬಹುದಾದ ಘಟನೆಗಳು ಇವು. ಈ ಘಟನೆಗಳ ಚೌಕಟ್ಟಿನಲ್ಲಿ ಕವಿಹೃದಯದ ಹಿಗ್ಗುಕುಗ್ಗಿನ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳು ವ್ಯಂಜನಗೊಂಡಿವೆ. ಮೊದಮೊದಲು ಹರ್ಷ, ಮುನ್ನಡೆದಂತೆ ದುಃಖ: ನಾಳೆಗೇನೆಂಬ ಚಿಂತೆ, ಸಮಾಜದಲ್ಲಿ ಮನ್ನಣೆ ಸಾಲದಾಯಿತೆಂಬ ಕೊರಗು, ಬದುಕಿನ ಪರಿಸ್ಥಿತಿಯನ್ನು ಕುರಿತು ಚಿಂತಿಸಿದಾಗ ಆತಂಕ, ವಿಧಿಯ ಮುಸಲಧಾರೆಯಿಂದುಂಟಾದ ನೋವು, ಇವೆಲ್ಲವನ್ನೂ ಕಳೆಯುವ ಸ್ನೇಹದ ಮಧುರಾನುಭವ — ಹೀಗೆ ಸಾನೆಟ್ಟುಗಳು ಹಲವು ಬಗೆಯ ಭಾವನೆಗಳಿಂದ ತುಂಬಿ ಬಿರಿದಿವೆ. ಷೇಕ್ಸ್‌ಪಿಯರನ ಜೀವನಕ್ಕೆ ಇವು ಕನ್ನಡಿ ಹಿಡಿಯುವಷ್ಟು ಅವನ ಬೇರೆ ಯಾವ ಕೃತಿಯೂ ಹಿಡಿಯದು. ವರ್ಡ್ಸ್‌ವರ್ತ್ ಅಂದಂತೆ ಷೇಕ್ಸ್‌ಪಿಯರ್ ತನ್ನ ಹೃದಯದ ಬಾಗಿಲನ್ನು ತೆರೆದದ್ದು ಈ ಸಾನೆಟ್ಟುಗಳ ಬೀಗದ ಕೈಯಿಂದಲೇ!

**ಸಮಸ್ಯೆಗಳ ಸುರಿಮಳೆ**

ಷೇಕ್ಸ್‌ಪಿಯರನ ಜೀವನ-ಕೃತಿಗಳ ಬೇರೆ ಯಾವ ಒಂದು ಮುಖದ ಬಗ್ಗೆಯೂ ನಡೆಯದಷ್ಟು ಊಹೆ, ಚರ್ಚೆ, ವಾದ-ವಿವಾದ ಈ ಸಾನೆಟ್ಟುಗಳನ್ನು ಕುರಿತು ನಡೆದುಬಂದಿದೆ. ಇವು ಗ್ರಂಥರೂಪದಲ್ಲಿ ಪ್ರಕಟವಾದದ್ದು 1609ರಲ್ಲಿ; ಪ್ರಕಾಶಕ ಥಾಮಸ್ ಥಾರ್ಪ್. ಪುಸ್ತಕ 'ಈ ಸಾನೆಟ್ಟುಗಳ ಏಕೈಕ ಜನ್ಮದಾತ ಮಿಸ್ಟರ್ ಡಬ್ಲ್ಯು. ಹೆಚ್. ಗೆ' ಎಂದು ಥಾರ್ಪನ ಅಂಕಿತದಲ್ಲಿ ಅರ್ಪಿತವಾಗಿದೆ. 1. ಈ ಅರ್ಪಣೆಯಲ್ಲಿ ಷೇಕ್ಸ್‌ಪಿಯರನ ಪಾಲೆಷ್ಟು? ಹಾಗೆ ಪಾಲಿರುವುದಾದರೆ ಆ 'ಡಬ್ಲ್ಯು. ಹೆಚ್.' ಯಾರು? ಸೌತ್ಯಾಂಪ್ಟನಿನ ಅರ್ಲನ ಹೆಸರಿನ (Henry Wriothesley) ಮೊದಲ ಅಕ್ಷರಗಳು ಅದಲುಬದಲಾಗಿ ಡಬ್ಲ್ಯು. ಹೆಚ್. ಆದವೆ? ಅಥವಾ ಅವನು ಬೇರೆ ಒಬ್ಬನೆ? ಅವನಿಗೂ ಷೇಕ್ಸ್‌ಪಿಯರಿಗೂ ಇದ್ದ ಸಂಬಂಧವೇನು? 2. ಸಾನೆಟ್ಟುಗಳ ರಚನೆಯ ಕಾಲ ಯಾವದು? ಅವೂ ಕಥನ ಕವನಗಳೂ ಒಂದೇ ಸುಮಾರಿಗೆ ರಚಿತವಾದವೆ? ಅಥವಾ ಮುಂದೆ 1598ರಲ್ಲಿ ಫ್ರಾನ್ಸಿಸ್ ಮಿಯರ್ಸ್ ತನ್ನ 'ಪಲ್ಲಾಡಿಸ್ ಟೇಮಿಯ'ದಲ್ಲಿ ಅವುಗಳನ್ನು ಕುರಿತಾಡುವ ಹಿಂಚಿನವರೆಗೆ ರಚನೆ ನಡೆಯಿತೆ? 3. ಥಾರ್ಪನ ಸಂಸ್ಕರಣದಲ್ಲಿ ಅವು ಅಚ್ಚಾಗಿರುವ ಕ್ರಮ ಸರಿಯೆ? ಆ ಕ್ರಮ ರಚನೆಯ ಕಾಲಕ್ರಮಕ್ಕೆ ಹೊಂದಿಕೆಯಾಗುತ್ತದೆಯೆ? 4. ಅವು ಷೇಕ್-

ಸ್ಪಿಯರನ ಜೀವನಾನುಭವದ ದಾಖಲೆಯೆ? ಅಥವಾ ತರುಣ ಕವಿ ತನ್ನ ತರಪೇತಿಗೆಂದು ಹೊಸೆದ ಕಲ್ಪನಾಕುಸುಮವೆ? 5. ಅವುಗಳಿಂದ ಹೊಮ್ಮುವ ಕಥೆ ನಿಜವಾದರೆ ಅಲ್ಲಿನ ಪಾತ್ರಧಾರಿಗಳಾದ ಚೆನ್ನಿಗ, ಕಪ್ಪು ಹೆಣ್ಣು, ಎದುರಾಳಿ-ಕವಿಗಳು ಯಾರು? — ಹೀಗೆ ಸಾನೆಟ್ಟುಗಳಲ್ಲಿ ಸಂಶೋಧಕರು ಎದುರಿಸುವುದು ಸಮಸ್ಯೆಗಳ ಸುರಿಮಳೆಯನ್ನು. ಅಂತಿಮ ವಾಗಿ ಇವುಗಳ ಉತ್ತರ ಏನೇ ಇರಲಿ, ನಿರ್ಣಯ ಯಾವ ಕಡೆಗೇ ತೂಗಲಿ, ಅಥವಾ ಬಿಡಲಿ, ಒಟ್ಟಿನಲ್ಲಿ ಸಾನೆಟ್ಟುಗಳು ಒದಗಿಸಿರುವ ಆಸಕ್ತಿ ಲಾಭಗಳು ಅಪಾರ.

## 'ಗ್ಲೋಬ್'ನ ಸಂಸ್ಥಾಪನೆ

1594ರ ಹೊತ್ತಿಗೆ ಹೆಮ್ಮೆಯ ಹಂತ ಮುಟ್ಟಿದ್ದ ಷೇಕ್‌ಸ್ಪಿಯರನ ಸಾಹಿತ್ಯಸಾಧನೆ ಅವನು ಮುಂದೆ 1610ರ ಸುಮಾರಿಗೆ ರಂಗಭೂಮಿಗೆ ವಿದಾಯ ಹೇಳಿ, ಲಂಡನ್ ಬಿಟ್ಟು ಸ್ಟ್ರ್ಯಾಟ್‌ಫರ್ಡಿಗೆ ಹಿಂದಿರುಗಿ ಹೋಗಿ ನೆಲಸುವವರೆಗೆ ಭರದಿಂದ ಮೇಲೇರುತ್ತ ಮುನ್ನಡೆ ಯಿತು. ಈ ನಡುವಣ ಹದಿನೈದು ವರ್ಷಗಳು ಅವನ ಬದುಕಿನ ಹೂಹಣ್ಣಿನ ಕಾಲ. ಈ ಕಾಲಾವಧಿಯಲ್ಲಿ ಅವನು ಬರೆದದ್ದು ಸರಾಸರಿ ವರ್ಷಕ್ಕೆ ಎರಡು ನಾಟಕಗಳಂತೆ. ಈ ಹದಿನೈದು ವರ್ಷವೂ ಅವನು ಚೇಂಬರ್‌ಲೆನ್ ಮಂಡಳಿಯ ಪ್ರಮುಖ ನಾಟಕಕಾರ ನಾಗಿ ಉಳಿದು ಅದರ ಬೆನ್ನೆಲುಬಾಗಿ ನಿಂತ. ಅವನ ಸಿದ್ಧಿ, ಅದರ ಭಾಗ್ಯಗಳೆರಡೂ ಜೊತೆಜೊತೆಗೇ ಅರಳಿದವು. ಮಂಡಳಿ 'ಚೇಂಬರ್‌ಲೆನ್ಸ್ ಮೆನ್' ಎಂದು ಕರೆದುಕೊಂಡಿ ದ್ದರೂ ಅದಕ್ಕೆ ಚೇಂಬರ್‌ಲೆನ್ (ಅರಮನೆಯ ಪಾರುಪತ್ಯಗಾರ) ನೊಡನಿದ್ದ ಸಂಬಂಧ ಬರಿಯ ಹೆಸರಿನ ಕೃಪಾಪೋಷಣೆಯದಷ್ಟೆ! ಅದನ್ನು ಕಟ್ಟಿ ನಡಸಿದ್ದವರು ಎಂಟು ಜನ ಉತ್ಸಾಹಶಾಲಿಗಳಾದ ನಟರು. ಅವರಲ್ಲಿ ಅಂದಿನ ಸುಪ್ರಸಿದ್ಧ ರುದ್ರನಟ ರಿಚರ್ಡ್ ಬರ್ಬೇಜನೂ ಒಬ್ಬ; ರಿಚರ್ಡ್ ಇಂಗ್ಲಂಡಿನ ಮೊಟ್ಟಮೊದಲಿನ ನಾಟಕಶಾಲೆಯಾದ 'ಥಿಯೇಟರ್' ಅನ್ನು ಕಟ್ಟಿಸಿ ಅದರ ಎಂಟ್ರಾಣೆ-ಪಾಲುಗಾರನಾಗಿದ್ದ ಜೇಮ್ಸ್ ಬರ್ಬೇಜನ ಮಗ. ಮೊದಮೊದಲು ಮಂಡಳಿಗೆ ಆಡಲು ಸರಿಯಾದ ನಾಟಕಶಾಲೆ ದಿಕ್ಕಿರಲಿಲ್ಲ; ಛತ್ರ ಗಳ ಅಂಗಳಗಳಿಗೇ ಮೊರೆ ಹೋಗಬೇಕಾಗಿತ್ತು. ಆದರೆ ಷೇಕ್‌ಸ್ಪಿಯರನಂತಹ ಶ್ರೇಷ್ಠ ನಾಟಕಕಾರ, ರಿಚರ್ಡನಂತಹ ನಟ ಅದಕ್ಕೆ ತಮ್ಮ ಪ್ರಕಾಶ ಹರಿಸಿ, ತೇಜ ತುಂಬಿದ ರೆಂದ ಮೇಲೆ ಕೇಳಬೇಕೆ? ಅದು ಬಲು ಬೇಗ ದೇಶದ ಮುಂಚೂಣಿಯ ನಾಟಕಮಂಡಳಿ ಯಾಯಿತು. ಛತ್ರಗಳ ಬದಲು 'ಥಿಯೇಟರ್' ಅದರ ಆಟದ ರಂಗವಾಯಿತು. 1599ರಲ್ಲಿ 'ಥಿಯೇಟರ್'ನ ಒಡೆತನ ವ್ಯಾಜ್ಯಕ್ಕೆ ಬಿದ್ದಾಗ ಬರ್ಬೇಜನ ಬಂಧುಮಿತ್ರರು (ಅವರಲ್ಲಿ ಷೇಕ್‌ಸ್ಪಿಯರ್ ಇದ್ದನೊ ಇಲ್ಲವೊ ನಮಗೆ ತಿಳಿಯದು!) ಕೈಯಲ್ಲಿ ಹಾರೆಗುದ್ದಲಿ ಹಿಡಿದು ಹೊರಟು, 'ಥಿಯೇಟರ್'ಅನ್ನು ಕೆಡವಿ, ಅದರ ಮರಮುಟ್ಟುಗಳಿಂದಲೇ ಹೊಸ ನಾಟಕ- ಶಾಲೆಯೊಂದನ್ನು ಕಟ್ಟಿದರು. ಅದೇ ಹೆಸರಾಂತ 'ಗ್ಲೋಬ್'. ಅದರ ಒಡೆತನದಲ್ಲಿ ಷೇಕ್‌ಸ್ಪಿಯರನದೂ ಹತ್ತನೆ-ಒಂದು ಅಂಶ ಪಾಲಿತ್ತು. ಈ ಹೊತ್ತಿಗೆ ಅವನ ಅಗ್ಗಳಿಕೆ ಸಮಸಾಮಯಿಕ ಲೇಖಕರಿಂದ ಅವರ ಕೃತಿಗಳಲ್ಲಿ ಲಿಖಿತ ಪ್ರಶಂಸೆ ಪಡೆಯುವಷ್ಟು ಔನ್ನತ್ಯಕ್ಕೇರಿತ್ತು. ಫ್ರಾನ್ಸಿಸ್ ಮಿಯರ್ಸ್ ಎಂಬಾತ 1598ರಲ್ಲಿ ಪ್ರಕಟವಾದ ತನ್ನ 'ಪಲ್ಲಾಡಿಸ್ ಟೇಮಿಯ: ವಿಟ್ಸ್ ಟ್ರೆಷರಿ'ಯಲ್ಲಿ ಆವಿಡರಂತಹ ಸಾಹಿತ್ಯ ಜಗತ್ತಿನ ಪ್ರಾತಃ

ಸ್ಮರಣೀಯರೊಡನೆ ಷೇಕ್‌ಸ್ಪಿಯರಿಗೆ ಸಮಾನಸ್ಥಾನ ಕಲ್ಪಿಸಿ ಪ್ರತಿಷ್ಠಿಸಿದ್ದಾನೆ. ಅವನ ಹರ್ಷ, ರುದ್ರನಾಟಕಗಳಲ್ಲಿ ಆರು ಆರನ್ನು ಹೆಸರಿಸಿ, ಲ್ಯಾಟಿನಿನ ಪ್ಲಾಟಸ್, ಸೆನೆಕರು ಆ ಆ ಪ್ರಕಾರಗಳಲ್ಲಿ ಗಣನೀಯರಾಗಿರುವಂತೆ ಇಂಗ್ಲಿಷ್ ಲೇಖಕರಲ್ಲಿ ಷೇಕ್‌ಸ್ಪಿಯರ್ ಒಬ್ಬನೇ ಎರಡೂ ಪ್ರಕಾರಗಳಲ್ಲಿ ಶ್ರೇಷ್ಠನೆಂದಿದ್ದಾನೆ. ವಾಗೀಶ್ವರಿ ಇಂಗ್ಲಿಷಿನಲ್ಲಿ ಮಾತಾಡುವುದಿದ್ದರೆ ಅದು ಷೇಕ್‌ಸ್ಪಿಯರನ ವಜ್ರಸಾಣೆ ಹಿಡಿದ ವಾಕ್ಯಗಳಲ್ಲಿಯಂತೆ! ಈ ಮೆಚ್ಚಿಕೆ ದೊರೆತದ್ದು ಷೇಕ್‌ಸ್ಪಿಯರಿಗೆ ಇನ್ನೂ ಮೂವತ್ತೈದು ತುಂಬುವ ಮೊದಲೇ; 'ಎ ಮಿಡ್ ಸಮ್ಮರ್-ನೈಟ್ಸ್ ಡ್ರೀಮ್'ನ ಹೊರತು ಮಹಾಹರ್ಷಕಗಳಲ್ಲಿ ಉಳಿದವಾಗಲಿ ಮಹಾ ರುದ್ರನಾಟಕಗಳಲ್ಲಿ ಯಾವೊಂದಾಗಲಿ ಸೃಷ್ಟಿಯಾಗುವ ಮುನ್ನವೇ!

ಗ್ಲೋಬ್‌ನ ಸಂಸ್ಥಾಪನೆ ಷೇಕ್‌ಸ್ಪಿಯರನನ್ನು ಸಿದ್ಧಿಯ ತುತ್ತತುದಿಗೆ ಕರೆದೊಯ್ದು ಮುಟ್ಟಿಸಿತು. ಅದಕ್ಕೆ ತೋರಣ ಕಟ್ಟಿದ ವರ್ಷ ಅವನ ಮೊದಲ ಪೂರ್ಣಗಂಭೀರ ರುದ್ರ ನಾಟಕವಾದ 'ಜೂಲಿಯಸ್ ಸೀಸರ್' ಬೆಳಕು ಕಂಡಿತು. ಅದು ಶಿಖರದ ಹೊಸಲು. ಅಲ್ಲಿಂದ 1608ರವರೆಗಿನ ಮುಂದಿನ ಎಂಟೊಂಬತ್ತು ವರ್ಷಗಳಲ್ಲಿ ಷೇಕ್‌ಸ್ಪಿಯರನ ಸಾಹಿತ್ಯನಿರ್ಮಾಣಪ್ರತಿಭೆ ಬಿಟ್ಟದ್ದು ಹೊಂಬೆಳಸು; ಕರೆದದ್ದು ದಿವ್ಯಾಮೃತ. ಪ್ರಪಂಚದ ಸಾಹಿತ್ಯದಲ್ಲಿ ಅವಕ್ಕೆ ಸರಿಸಾಟಿಯೇ ಇಲ್ಲವೆಂಬಂತಹ, ರಸಿಕ ಜಗತ್ತು ಅವಕ್ಕಾಗಿ ಅವನಿಗೆ ಎಂದೆಂದೂ ಋಣಿಯಾಗಿರುವಂತಹ ಅಪ್ರತಿಮ ಕೃತಿರತ್ನಗಳು, 'ಆ್ಯಸ್ ಯು ಲೈಕ್ ಇಟ್', 'ಟ್ವೆಲ್ಫ್ತ್ ನೈಟ್', 'ಹ್ಯಾಮ್ಲೆಟ್', 'ಅಥೆಲ್ಲೊ', 'ಲಿಯರ್', 'ಮೆಕ್‌ಬೆತ್', ನಂತಹ ಮಹೋನ್ನತ ಹರ್ಷ, ರುದ್ರನಾಟಕಗಳು ಹೊರಬಂದದ್ದು ಈ ಅವಧಿಯಲ್ಲಿಯೇ.

### 'ಕಿಂಗ್ಸ್ ಮೆನ್'

1603ರಲ್ಲಿ ಎಲಿಜಬೆತ್ ರಾಣಿ ತೀರಿಕೊಂಡು ಒಂದನೆ ಜೇಮ್ಸ್ ಪಟ್ಟಕ್ಕೆ ಬಂದ ಮೇಲೆ ಚೇಂಬರ್‌ಲೆನನ ಮಂಡಳಿಯ ಅದೃಷ್ಟ ಇದ್ದಿದ್ದೂ ಖುಲಾಯಿಸಿತು. ನಾಟಕ ರಂಗಭೂಮಿಗಳ ಅಭಿರುಚಿಯಲ್ಲಿ ಜೇಮ್ಸನದು ಎಲಿಜಬೆತಳಿಗಿಂತ ಒಂದು ಕೈ ಮೇಲೆಯೇ. ಅಧಿಕಾರಕ್ಕೆ ಬಂದ ಎಂಟು ದಿನಗಳೊಳಗಾಗಿಯೇ ಅವನು ಮಂಡಳಿಗೆ ಕೃಪಾಪೋಷಣೆ ಘೋಷಿಸಿ, ದೇಶದಲ್ಲಿ ಎಲ್ಲಿ ಬೇಕಾದರೂ ಅದು ತನ್ನ ನಟನಕಲಾಪ್ರತಿಭೆಗಳನ್ನು ಪ್ರದರ್ಶಿಸಬಹುದೆಂದು ರಾಜಾಜ್ಞೆ ಹೊರಡಿಸಿದ; ಅಲ್ಲಿಂದಾಚೆಗೆ ಮಂಡಳಿಗೆ 'ಕಿಂಗ್ಸ್ ಮೆನ್' ಎಂದು ಪುನರ್‌ನಾಮಕರಣವಾಯಿತು. ಮಾರನೆ ವರ್ಷ ನಡೆದ ಜೇಮ್ಸನ ಪಟ್ಟಾಭಿಷೇಕೋತ್ಸವದಲ್ಲಿ ಷೇಕ್‌ಸ್ಪಿಯರ್ ಆದಿಯಾಗಿ ಎಲ್ಲ ನಟರೂ ಭಾಗವಹಿಸಿದ್ದರು.

### 'ಬ್ಲ್ಯಾಕ್ ಫ್ರೈಯರ್ಸ್'

1608ರಲ್ಲಿ ಕಿಂಗ್ಸ್ ಮೆನ್ ಮಂಡಳಿ ಗ್ಲೋಬ್‌ನ ಜೊತೆಗೆ 'ಬ್ಲ್ಯಾಕ್ ಫ್ರೈಯರ್ಸ್' ಎಂಬ ಇನ್ನೂ ಒಂದು ನಾಟಕಶಾಲೆಯ ಒಡೆತನ ಪಡೆಯಿತು. ಅದು ನಗರದೊಳಗಿದ್ದ ಖಾಸಗೀ ಮನೆ. ಆವರೆಗೆ ಅದನ್ನು ಚರ್ಚಿನ ಹುಡುಗರು ತಮ್ಮ ಪ್ರದರ್ಶನದ ಅಭ್ಯಾಸಕ್ಕೆ ಉಪಯೋಗಿಸುತ್ತಿದ್ದರು. ನಗರದ ಹೊರವಲಯದಲ್ಲಿದ್ದ ಸಾರ್ವಜನಿಕ ನಾಟಕಶಾಲೆಗಿಂತ ರೂಪರಚನೆಯಲ್ಲಿ ಅದು ಭಿನ್ನವಾಗಿತ್ತು — ಆಕಾರ ದುಂಡಲ್ಲ, ಮನೆಯಂತೆ ಚೌಕ; ಮೇಲಿ

ಮುಚ್ಚಿದ ಚಾವಣಿ; ಒಳಗೆ ಅಂಗಳದಲ್ಲಿ ಬರಿಯ ಮಣ್ಣು ನೆಲದ ಬದಲು ಕೂರಲು ಕುರ್ಚಿಗಳಿದ್ದವು. ರೂಪರಚನೆಗಳಲ್ಲಿನ ಈ ತೆರನಾದ ಅಂತರ ನಾಟಕದ ಬಗೆ, ನಟನೆಯ ಶೈಲಿಗಳಲ್ಲಿಯೂ ಮಾರ್ಪಾಡು ತಂದಿತು. ಷೇಕ್‌ಸ್ಪಿಯರನ ಕೊನೆಗಾಲದ ನಾಟಕಗಳು ಈ ಅಂತರಕ್ಕೆ ಹೊಂದಿಕೊಂಡಂತಹವು. ನಗರದೊಳಗಿದ್ದು ಮೇಲೆ ಮುಚ್ಚಣಿಕೆಯಿಂದ ಕೂಡಿತ್ತೆಂಬ ಕಾರಣದಿಂದಾಗಿ (ಇಂಗ್ಲಂಡ್ ಚಳಿದೇಶ) ಬ್ಲ್ಯಾಕ್ ಫ್ರೈಯರ್ಸ್ ಕಾಲಕ್ರಮೇಣ ಗ್ಲೋಬ್ ಹಾಗೂ ಅದರಂತಹ ಇತರ ಹಳೆಯ ಕಾಲದ ನಾಟಕಶಾಲೆಗಳಿಗಿಂತ ಹೆಚ್ಚು ಜನಪ್ರಿಯವಾಯಿತು. ಷೇಕ್‌ಸ್ಪಿಯರ್ ಇದರಲ್ಲಿಯೂ ಪಾಲುಗಾರನಾಗಿದ್ದ.

## ವ್ಯವಹಾರಕುಶಲ

ಕಂಡಂತೆಯೇ ಷೇಕ್‌ಸ್ಪಿಯರನ ಸಾಹಿತ್ಯಸಾಧನೆಯ ಜೊತೆಜೊತೆಗೇ ಪ್ರಾಪಂಚಿಕವಾಗಿಯೂ ಅವನ ಸ್ಥಿತಿಗತಿಗಳು ಉತ್ತಮಗೊಂಡವು. ಅವನು ಕವಿಯಾದರೂ ಸಾಂಪ್ರದಾಯಿಕವಾಗಿ ಕವಿಗಳ ಸ್ವಭಾವಕ್ಕೆ ಒಗ್ಗದುದೆನಿಸಿಕೊಂಡ ಸೂಕ್ಷ್ಮ ವ್ಯವಹಾರಕುಶಲತೆ ಅವನಿಗಿತ್ತು. ಚೇಂಬರ್‌ಲೆನನ ಮಂಡಳಿ ಆರಂಭವಾದ ಎರಡು ವರ್ಷಗಳೊಳಗೇ ಹಿಂದೆ ಮೊಲಜಿಂಕೆಗಳನ್ನು ಕದ್ದು ಊರು ಬಿಟ್ಟೋಡಿದ್ದ (ಆ ಕಥೆ ನಿಜವಿದ್ದರೆ) ತುಂಟ ಹುಡುಗ ಸ್ಟ್ರ್ಯಾಟ್‌ಫರ್ಡಿನ ಗಣ್ಯ ಶ್ರೀಮಂತರಲ್ಲೊಬ್ಬನಾದ. ಆ ಕಾಲದಲ್ಲಿ ದೇಶದ ಗೌರವಸ್ಥ ಜನ ದೊಡ್ಡಸ್ತಿಕೆಯ ಕುರುಹಾಗಿ ಸರಕಾರದಿಂದ ತಮ್ಮ ಮನೆತನಕ್ಕೊಂದು ಲಾಂಛನ (Coat of Arms) ಬೇಡಿ, ಅದನ್ನು ಕವಚದ ಮೇಲೆ ತೊಡುತ್ತಿದ್ದುದು ಪದ್ಧತಿ. ಷೇಕ್‌ಸ್ಪಿಯರನ ಅಪ್ಪ ಜಾನ್ ಪೌರಾಧಿಕಾರದಲ್ಲಿದ್ದಾಗ ಅಂತಹ ಲಾಂಛನಕ್ಕೆ ಪ್ರಯತ್ನಿಸಿದ್ದ, ಆದರೆ ಅದು ದಕ್ಕಿರಲಿಲ್ಲ; 96ರಲ್ಲಿ ಷೇಕ್‌ಸ್ಪಿಯರ್ ತನ್ನ ವರ್ಚಸ್ಸಿನಿಂದ ಅಪ್ಪನಿಗೆ ಅದನ್ನು ದೊರಕಿಸಿಕೊಟ್ಟ. 97ರಲ್ಲಿ ಹಣ ಹಾಕಿ 'ನ್ಯೂ ಪ್ಲೇಸ್' ಎಂಬ ದೊಡ್ಡ ತೋಟದ ಮನೆಯನ್ನು ಕೊಂಡ. ಮುಂದಿನ ವರ್ಷಗಳಲ್ಲಿ ಇನ್ನೂ ಹಲಕೆಲವು ಆಸ್ತಿಪಾಸ್ತಿಗಳನ್ನು ಕೂಡಿಸಿದ— ಎಲ್ಲವನ್ನೂ ಸ್ಟ್ರ್ಯಾಟ್‌ಫರ್ಡಿನಲ್ಲಿಯೇ. ಬದುಕಿನ ಬಹುಭಾಗವನ್ನು ಲಂಡನಿನಲ್ಲಿ ಕಳೆದು, ನಗರಜೀವನದ ಅದರಲ್ಲೂ ಆಸ್ಥಾನದ ಮಾದಕ ಸವಿಯುಂಡು ಬೆಳೆದಿದ್ದರೂ ಷೇಕ್‌ಸ್ಪಿಯರ್ ಆ ಅಮಲಿಗೆ ತೊತ್ತಾಗಲಿಲ್ಲ. ತನಗೆ ಜನ್ಮವಿತ್ತ ಹಳ್ಳಿಯ ಋಣಾನುಬಂಧವನ್ನು ತೊಡೆದುಕೊಳ್ಳದೆ, ಮುಂದೊಂದು ದಿನ ಅಲ್ಲಿಗೆ ಹಿಂದಿರುಗಿ ಹೋಗಿ ನೆಲಸುವ ದೂರಾಲೋಚನೆಯಿಂದ ಸ್ಟ್ರ್ಯಾಟ್‌ಫರ್ಡಿನಲ್ಲಿಯೇ ಆಸ್ತಿ ರೂಢಿಸಿದ. ರಂಗಭೂಮಿಯೊಡನೆ ಸಂಪರ್ಕವಿದ್ದ ಹದಿನೈದು ವರ್ಷಗಳ ಕಾಲವೂ ಒಂದೇ ಮಂಡಳಿಯ ಸೇವೆಯಲ್ಲಿದ್ದು ಅದನ್ನು ಊರ್ಜಿಸಿ ತಾನೂ ಊರ್ಜಿತನಾದದ್ದು ಒಂದು ಬಗೆಯ ನಿಷ್ಠೆಯಾದರೆ ಇದು ಇನ್ನೊಂದು ಬಗೆಯ ನಿಷ್ಠೆ. ಷೇಕ್‌ಸ್ಪಿಯರ್ ಎಂತಹ ಮನುಷ್ಯನಾಗಿದ್ದನೆಂದು ತಿಳಿಯಲು ಗೊತ್ತಾದ ಜೀವನ ಚರಿತ್ರೆಗಳಿಲ್ಲದಿದ್ದರೇನಂತೆ, ಇಂತಹ ಸಣ್ಣ ಸಂಗತಿಗಳು ಸಾಲವೆ?

## ಭರತದ ಇಳಿತ — ಮತ್ತೆ ಸ್ಟ್ರ್ಯಾಟ್‌ಫರ್ಡಿಗೆ

ಹೊತ್ತಿದ ಉರಿ ಆರಲೇ ಬೇಕು, ಏರಿದ ಭರತ ಇಳಿಯಲೇ ಬೇಕು — ಇದು ಯಾರನ್ನೂ ಬಿಡದ ಪ್ರಕೃತಿಧರ್ಮ. ಬ್ಲ್ಯಾಕ್ ಫ್ರೈಯರ್ಸ್‌ನ ಆರಂಭಕಾಲದಲ್ಲಿಯೇ ಷೇಕ್‌ಸ್ಪಿಯರನ



ಷೇಕ್‌ಸ್ಪಿಯರ್ ಸಮಾಧಿ ಕಂಡ ಸ್ಟ್ರ್ಯಾಟ್‌ಫರ್ಡಿನ ಹೋಲಿ ಟ್ರನಿಟಿ ಚರ್ಚ್

ಜೀವನದಲ್ಲಿ ಒಂದು ಪ್ರಬಲವಾದ ಪರಿವರ್ತನೆಯುಂಟಾಯಿತು. ಅವನ ಆ ಬಳಿಕದ 'ಪೆರಿಕ್ಲಿಸ್', 'ಸಿಂಬೆಲೈನ್' ಇತ್ಯಾದಿ ಕೃತಿಗಳೇ ಸ್ಪಷ್ಟಪಡಿಸುವಂತೆ ಹಿಂದಿನ ಮಹಾರುದ್ರ ನಾಟಕಗಳಿಗೆ ಜೀವಾಧಾರವಾಗಿದ್ದ ಬದುಕಿನ ಉಬ್ಬಸ ನಿಂತು, ಕಾವಿಳಿದು ಸ್ತಿಮಿತತೆ ನೆಲಸಿತು; ಸಮುದ್ರದ ಹುಚ್ಚು, ಕದಡು ತಿಳಿದು ಅದಕ್ಕೆ ಸರೋವರದ ಶಾಂತಿ, ನಿಶ್ಚಲತೆ ಗಳು ಲಭಿಸಿದವು; ಜೀವನದೃಷ್ಟಿ ಮಾಗಿತು. ಜೊತೆಗೆ ಎರಡು ದಶಕಗಳಿಂದ ಒಂದೇ ಸಮನೆ ನೋಡುತ್ತ ಬಂದಿದ್ದ ನಗರದ ಗೌಜುಗದ್ದಲ, ಆಸ್ಥಾನದ ಮಿಂಚುಮಿನುಗು, ರಂಗದ ಬಣ್ಣಬೆಳಕುಗಳು ಬೇಸರ ತಂದು ವಿರಕ್ತಿ ಹುಟ್ಟಿಸಿದ್ದವೇನೊ. 1610ರ ಸುಮಾರಿಗೆ ಷೇಕ್‌ಸ್ಪಿಯರ್ ಲಂಡನ್ ಬಿಟ್ಟು, ಮೊದಲೇ ಸಿದ್ಧತೆ ಮಾಡಿಕೊಂಡಿದ್ದಂತೆ ಸ್ಟ್ರ್ಯಾಟ್‌ಫರ್ಡಿಗೆ ಹಿಂದಿರುಗಿ ಹೋಗಿ ನೆಲಸಿದ. ಹಳ್ಳಿಯ ಪರಿಸರ ಹೊಸ ಜೀವನದೃಷ್ಟಿಗೆ ಪುಷ್ಟಿ ಕೊಟ್ಟಿತು. ಸ್ಟ್ರ್ಯಾಟ್‌ಫರ್ಡಿನಲ್ಲಿಯೇ 'ದಿ ವಿಂಟರ್ಸ್ ಟೇಲ್', 'ದಿ ಟೆಂಪೆಸ್ಟ್'ಗಳ ರಚನೆಯಾಯಿತು. ನಾಟಕದಂತೆ ಷೇಕ್‌ಸ್ಪಿಯರ್ ರಂಗಭೂಮಿಯ ಜೀವತಂತುವನ್ನೂ ಪೂರ್ತಿ ಕಡಿದು ಕೊಳ್ಳಲಿಲ್ಲ. ಕಿಂಗ್ಸ್ ಮೆನ್ ಮಂಡಳಿಯೊಡನೆ ವ್ಯವಹಾರಸಂಬಂಧವನ್ನು ಮುಂದುವರಿಸಿ ಆಗಾಗ್ಗೆ ಲಂಡನಿಗೆ ಬಂದು ಹೋಗುತ್ತಿದ್ದ.

## ಕೊನೆಯ ವಿದಾಯ

1613ನೆ ಜೂನ್ 29ರ ರಾತ್ರಿ. ಗ್ಲೋಬ್‌ನಲ್ಲಿ 'ಹೆನ್ರಿ ದಿ ಏಟ್ತ್' ಪ್ರದರ್ಶನ ನಡೆದಿತ್ತು. ಪ್ರಾಯಶಃ ಷೇಕ್‌ಸ್ಪಿಯರನೂ ಆಗ ಅಲ್ಲಿದ್ದನೇನೊ. ಉಲ್ಸಿಯ ಮನೆಯಲ್ಲಿ ಕುಣಿತದ ಕೂಟದ ದೃಶ್ಯ. ಹೆನ್ರಿಯ ಪ್ರವೇಶ ಸಾರಿ ಗುಂಡು ಹಾರಿತು. ಅದರಿಂದೆದ್ದ ಕಿಡಿ ಹುಲ್ಲು ಚಾವಣಿಗೆ ತಗಲಿ ಬೆಂಕಿ ಹೊತ್ತಿತು. ಕಣ್ಣುಮುಚ್ಚಿ ಬಿಡುವುದರೊಳಗಾಗಿ ಷೇಕ್‌ಸ್ಪಿಯರನ

ವೈಭವಕ್ಕೆ ಮಣೆ ಹಾಕಿದ್ದ ಅವನ ನೆಚ್ಚಿನ ನಾಟಕಶಾಲೆ, ಆ ಯುಗದ ಹೆಮ್ಮೆ ಗ್ಲೋಬ್ ಉರಿದು ಬೂದಿಯಾಯಿತು. ಅದರೊಡನೆಯೇ ಷೇಕ್ಸ್ಪಿಯರಿಗೆ ಬದುಕಿನಲ್ಲಿ ವೈರಾಗ್ಯ ಹುಟ್ಟಿ ಅವನು ನಾಟಕ ರಂಗಭೂಮಿಗಳಿಗೂ, ಕಿಂಗ್ಸ್ ಮೆನ್ ಮಂಡಳಿಗೂ ಅಂತಿಮ



ಚರ್ಚ್‌ನ ಆವರಣದಲ್ಲಿ ನಿರ್ಮಿಸಲಾಗಿರುವ
ಪ್ರತಿಮಾಯುಕ್ತ ಶಿಲಾಸ್ಮಾರಕ

ವಿದಾಯ ಸಲ್ಲಿಸಿದಂತಿದೆ. ಮುಂದಿನ ಮೂರು ವರ್ಷಗಳು ಷೇಕ್ಸ್ಪಿಯರ್ ನಮ್ಮ ಪಾಲಿಗೆ ಅಜ್ಞಾತವಾಸಿ. ಅವನ ಕೊನೆಗಳಿಗೆಯ ಕಷ್ಟಸುಖಗಳೊಂದು ನಮಗೆ ತಿಳಿಯದು. 1616ರ ಏಪ್ರಿಲ್ 23ರಂದು, ಸೇಂಟ್ ಜಾರ್ಜ್‌ನ ಪುಣ್ಯದಿನ, 52ರ ನಡುವಯಸ್ಸಿನಲ್ಲಿ, ಜಗತ್ತಿನ ಸಾಹಿತ್ಯಕ್ಕೆ ದೀಪ್ತಿತಿಲಕವಿಟ್ಟ ಆ ಮಹಾತಾರೆ ತೀರಿ ಮರೆಯಾದುದೊಂದೇ

ಗೊತ್ತು. ಅವನು ಅದಕ್ಕೆ ಒಂದು ತಿಂಗಳ ಮುಂಚೆ, ಅವನ ದಾಂಪತ್ಯಜೀವನದ ಬಗ್ಗೆ ಹಲವೊಂದು ಊಹೆಗೆ ಆಸ್ಪದವಿತ್ತಿರುವ ಉಯಿಲು ಬರೆದು ಸಹಿ ಹಾಕಿದ್ದ. ಸಾವಿನಲ್ಲೂ ಪ್ರತೀತಿಯ ಭೂತ ಅವನ ಬೆನ್ನು ಬಿಡಲಿಲ್ಲ. ಕವಿ ಬೆನ್ ಜಾನ್‌ಸನ್, ಡ್ರೇಟನ್‌ರೊಡನೆ ಮೋಜಿಗೆ ಕೂಡಿ ಚೆನ್ನಾಗಿ ಕುಡಿದನೆಂದೂ ಅದರ ಪರಿಣಾಮವಾಗಿ ತೀವ್ರ ಜ್ವರ ಬಂದು ತೀರಿಕೊಂಡನೆಂದೂ ಹದಿನೇಳನೆ ಶತಮಾನದ ಜಾನ್ ವಾರ್ಡ್ ಎಂಬಾತ ಟಿಪ್ಪಣಿ ಬರೆದಿಟ್ಟಿದ್ದಾನೆ. ಸ್ಟ್ರ್ಯಾಟ್‌ಫರ್ಡಿನ ಹೋಲಿ ಟ್ರಿನಿಟಿ ಚರ್ಚಿನಲ್ಲಿ ಷೇಕ್‌ಸ್ಪಿಯರನ ಸಮಾಧಿಯಾಯಿತು. ಮುಂದೆ ಅವನ ಬಂಧುಮಿತ್ರರು ಅದರ ಬಳಿ ಸ್ಮಾರಕ ಕಟ್ಟಿ ಅವನದೊಂದು ಪ್ರತಿಮೆ ನಿಲ್ಲಿಸಿದರು. ಸಮಾಧಿಯ ಮೇಲೆ 'ಇದನ್ನು ಅಗೆದು ಒಳಗಿನ ನನ್ನ ಮೂಳೆಗಳನ್ನು ಕದಲಿಸಿದವನು ಹಾಳಾಗ' ಎಂಬ ಕುಕವಿತೆ ಕೆತ್ತಿದೆ. ವ್ಯಂಗ್ಯವೆಂದರೆ ಷೇಕ್‌ಸ್ಪಿಯರನೇ ಸಾಯುವ ಮುನ್ನ ಅದನ್ನು ಬರೆದಿಟ್ಟಿದ್ದನೆಂದು ಜನಶ್ರುತಿ!

### ಮೊದಲ ಫೋಲಿಯೊ

ಷೇಕ್‌ಸ್ಪಿಯರನ ಜೀವಮಾನದಲ್ಲಿ ಗ್ರಂಥಸ್ಥವಾಗಿದ್ದುದು ಅವನು ಪೂರ್ಣವಾಗಿ ತಾನೇ ಇಲ್ಲವೇ ಅಂಶತಃ ಇತರರೊಡನೆ ಜತೆಗೂಡಿ ಬರೆದ ಒಟ್ಟು 38 ನಾಟಕಗಳಲ್ಲಿ 18 ಮಾತ್ರ. ಆ ಕಾಲದಲ್ಲಿ ನಾಟಕಕಾರರು ತಮ್ಮ ಕೃತಿಗಳನ್ನು ಮುಖ್ಯತಃ ಪ್ರದರ್ಶನಕ್ಕೆಂದೇ ಬರೆದು ಅಷ್ಟು ಇಷ್ಟು ಹಣಕ್ಕೆ ನೇರವಾಗಿ ಮಂಡಳಿಯ ಮಾಲಿಕರಿಗೆ ಮಾರುತ್ತಿದ್ದರು. ಆ ನಾಟಕಗಳ ಒಡೆತನ ಸಾಧಾರಣವಾಗಿ ಮಂಡಳಿಯವರ ವಶದಲ್ಲಿರುತ್ತಿತ್ತು. ಅಚ್ಚಾಗಿ ಪುಸ್ತಕ ರೂಪದಲ್ಲಿ ದೊರೆತರೆ ಅವು ಬೀದಿಯ ಸ್ವತ್ತಾಗಿ ಎದುರಾಳಿ ಮಂಡಳಿಗಳೂ ಅವನ್ನು ಆಡಿಬಿಡಬಹುದೆಂಬ ಭಯದಿಂದಲೊ, ಜನ ನಾಟಕ ನೋಡುವ ಬದಲು ಓದಿಯೇ ತೃಪ್ತಿ ಪಡೆದು ಪ್ರದರ್ಶನಕ್ಕೆ ನಷ್ಟ ತಟ್ಟುವುದೆಂಬ ವ್ಯವಹಾರದೃಷ್ಟಿಯಿಂದಲೊ ಮಂಡಳಿಯವರು ಅವುಗಳ ಪ್ರಕಟನೆಗೆ ಅಷ್ಟಾಗಿ ಆಸ್ಪದ ಕೊಡುತ್ತಿರಲಿಲ್ಲ. (ಈ ಸ್ಥಿತಿ ಮೊನ್ನೆಮೊನ್ನೆಯವರೆಗೆ ನಮ್ಮಲ್ಲೂ ಇದ್ದದ್ದೇ. 'ಸದಾರಮೆ', 'ಗುಲೇಬಕಾವಲಿ'ಗಳಂತಹ ಎರಡು ಮೂರು ದಶಕಗಳ ಹಿಂದಿನ ಜನಪ್ರಿಯ ರಂಗನಾಟಕಗಳ ಮುದ್ರಿತ ಪ್ರತಿಗಳನ್ನು ಕಂಡಿರುವವರಾರು?) ಆದರೆ ಪ್ರಕಾಶಕರು ಚತುರರು. ನಟರನ್ನು ಹಿಡಿದು ಪುಸಲಾಯಿಸಿ, ಅವರ ಬಾಯಿಂದ ತಪ್ಪೊ ನೆಪ್ಪೊ ನಾಟಕದ ಪಾಠಗಳನ್ನು ಹೇಳಿಸಿ ಬರೆದುಕೊಂಡು, ಅವನ್ನು ಹೇಗೋ ಹೊಂದಿಸಿ ನಾಟಕಗಳನ್ನು ಅಚ್ಚು ಹಾಕಿ ಹಣ ಮಾಡಿಕೊಳ್ಳುತ್ತಿದ್ದರು. ಷೇಕ್‌ಸ್ಪಿಯರನ ಆರು ನಾಟಕಗಳು ಮೊದಲು ಬೆಳಕಿಗೆ ಬಂದದ್ದು ಹೀಗೆ. ಇನ್ನು 12 ಅಧಿಕೃತವಾಗಿಯೇ ಪ್ರಕಟವಾಗಿದ್ದವು. ಆಕಾರದ ಮೇಲಿಂದ ಇವು ಪಡೆದ ಹೆಸರು 'ಕ್ವಾರ್ಟೊ'.

ಷೇಕ್‌ಸ್ಪಿಯರ್ ತೀರಿಕೊಂಡ ಏಳು ವರ್ಷಗಳ ಅನಂತರ, 1623ರಲ್ಲಿ, ಅವನು ಚೇಂಬರ್‌ಲೆನನ ಮಂಡಳಿ ಸೇರಿದಾಗಿನಿಂದ ಹಿಡಿದು ಕೊನೆಯ ದಿನದವರೆಗೆ ಎರಡು ದಶಕಗಳಿಗೂ ಹೆಚ್ಚು ಕಾಲ ಅವನ ಆಪ್ತರೂ ಸಹೋದ್ಯೋಗಿಗಳು ಆಗಿದ್ದ ಜಾನ್ ಹೆಮಿಂಗ್ ಮತ್ತು ಹೆನ್ರಿ ಕಾಂಡೆಲ್ ಎಂಬ ಇಬ್ಬರು ನಟರು ಅವನ ಮೂವತ್ತಾರು ನಾಟಕಗಳನ್ನು ('ಪೆರಿಕ್ಲಿಸ್' ಮತ್ತು 'ಟು ನೋಬಲ್ ಕಿನ್ಸ್‌ಮೆನ್'ಗಳನ್ನುಳಿದು) ಒಟ್ಟುಗೂಡಿಸಿ ತಮ್ಮ ಹಾಗೂ ಇತರ ಮಿತ್ರರ ಶ್ರದ್ಧಾಂಜಲಿಗಳೊಡನೆ ಪ್ರಕಟಮಾಡಿದರು. ಈ ಸಂಸ್ಕರಣಕ್ಕೆ ಅದರ

ಬೃಹದಾಕಾರದಿಂದಾಗಿ 'ಫೋಲಿಯೊ' ಎಂಬ ಹೆಸರು ಬಂದಿದೆ. ಮುಂದಿನ ಅರವತ್ತು ವರ್ಷಗಳಲ್ಲಿ ಇದು ಮತ್ತೆ ಮೂರು ಮುದ್ರಣಗಳನ್ನು ಕಂಡಿತಾದ್ದರಿಂದ ಇದರ ನಿರ್ದೇಶ 'ಮೊದಲ ಫೋಲಿಯೊ' ಎಂದು. ಈ ಬಗೆಯ ಸುಮಾರು ಸಾವಿರ ಪುಟಗಳ ಸಂಕಲನದ ಸಂಪಾದನೆ ಪ್ರಕಟನೆಗಳು ಯಾವ ಕಾಲಕ್ಕೂ ಭೀಮಸಾಹಸವೆ! ಹೆಮಿಂಗ್, ಕಾಂಡೆಲ್ ಅದನ್ನು ನಿರ್ವಹಿಸಿರುವುದು ಅತ್ಯಂತ ಪ್ರೀತಿಭಕ್ತಿಗಳಿಂದ. ಷೇಕ್ಸ್ಪಿಯರನ ಬಗ್ಗೆ ಅವರಿಗಿದ್ದ ಶ್ರದ್ಧೆ ನಮ್ಮ ಪಾಲಿನ ಶ್ರೀಮಂತಿಕೆಯಾಗಿದೆ. ಮೊದಲ ಫೋಲಿಯೊ ಪ್ರಕಟವಾಗದೆ ಕವಿಯ ಎಲ್ಲ ಕೃತಿಗಳೂ ಈಗಿನಂತೆ ಒಂದೆಡೆ ಒಟ್ಟಾಗಿ ದೊರೆಯದೆ ಹೋಗಿದ್ದರೆ ಅವನಿಗೆ ಸಾಹಿತ್ಯದಲ್ಲಿ ಯಾವ ಸ್ಥಾನವಿರುತ್ತಿತ್ತೆಂಬುದು ಒಂದು ಕುತೂಹಲಕಾರಿಯಾದ ಪ್ರಶ್ನೆಯೆ!

## ಕೃತಿಗಳ ಕಾಲನಿರ್ಣಯ

ಪಟ್ಟದಾನೆ ಕೊಟ್ಟು ಉಪಕರಿಸಿದ ಹೆಮಿಂಗ್ ಮತ್ತು ಕಾಂಡೆಲರಿಗೆ ಜೊತೆಗೆ ಅಂಬಾರಿಯನ್ನೂ ಕೊಡಬೇಕೆಂಬುದು ಮರೆಯಿತೊ ಅಥವಾ ಅದರ ಅಗತ್ಯ ಕಾಣಲಿಲ್ಲವೊ, ಮೊದಲ ಫೋಲಿಯೊದಲ್ಲೆಲ್ಲೂ ಅವರು ನಾಟಕಗಳ ರಚನೆಯ ಕಾಲವನ್ನು ತೋರಿಸಿಲ್ಲ. ಯಾವದೇ ಸಾಹಿತ್ಯಿಕ ಕೃತಿಯ ವಿಷಯದಲ್ಲಾಗಲಿ, ಅದರ ರಚನಾಕಾಲ ಚಾರಿತ್ರಕವಾಗಿ ಮೌಲಿಕ. ಒಬ್ಬ ಸಾಹಿತಿಯ ಕೃತಿಗಳನ್ನು ಅವನ ಜೀವನದೊಡನೆ ಹೊಂದಿಸಿ, ಅವನಿಗೆ ದೊರೆತ ಪ್ರೇರಣೆ ಪ್ರಭಾವಗಳನ್ನು ಗುರುತಿಸಿ, ಅವನ ಕಲೆಯ ನಡೆಯನ್ನು, ಬೆಳವಣಿಗೆಯನ್ನು ಗೊತ್ತುಹಚ್ಚಲು ಸಹಾಯಕವಾಗುವುದು ಈ ಅಂಶ. ಷೇಕ್ಸ್ಪಿಯರನ ಜೀವನದಂತೆ ಅವನ ಕೃತಿಗಳ ರಚನೆಯ ಕಾಲನಿರ್ಣಯಕ್ಕೆ ಸಹ ನಮಗೆ ಊಹೆಯೇ ಬಹುಮಟ್ಟಿಗೆ ಊರೆಗೋಲು. ಅದನ್ನು ನಾಟಕಗಳ ಬಾಹ್ಯ ಹಾಗೂ ಆಂತರಿಕ ಪ್ರಮಾಣಗಳ ಆಧಾರದ ಮೇಲೆ ನಿರ್ಧರಿಸಬೇಕಷ್ಟೆ. ಸಮಕಾಲೀನ ಸಾಹಿತ್ಯ ವ್ಯವಹಾರಗಳಲ್ಲಿ ಅವುಗಳ ಬಗ್ಗೆ ದೊರೆವ ಸೂಚನೆಗಳು, ಪ್ರದರ್ಶನಗಳ ದಿನಾಂಕ, ಕ್ವಾರ್ಟೊಗಳ ಪ್ರಕಟನೆಯ ವರ್ಷಾಂಕ, ಅಂದಿನ ಸ್ಟೇಷನರ್ಸ್ ದಾಖಲೆಗಳಲ್ಲಿನ ನಮೂದು, ನಾಟಕಗಳಲ್ಲೇ ಸಿಗಬಹುದಾದ ಸಾಮಯಿಕ ಸಂಗತಿಗಳ ಸೂಚನೆಗಳು, ಭಾಷೆ ಶೈಲಿ ಛಂದಸ್ಸುಗಳಲ್ಲಿ ತೋರಿಬರುವ ಮಾರ್ಪಾಡು — ಇವು ಕಾಲನಿರ್ಣಯಕ್ಕೆ ನೆರವಾಗುವ ಕೆಲವು ಸಂಗತಿಗಳು. ಷೇಕ್ಸ್ಪಿಯರ್ ಪಂಡಿತರು ಇವುಗಳನ್ನು ವಿಶದವಾಗಿ ಸಂಶೋಧಿಸಿ ಅವನ ಒಂದೊಂದು ಕೃತಿಯ ರಚನಾಕಾಲವನ್ನೂ ನಿರ್ಣಯಿಸಿದ್ದಾರೆ. ಅವರ ನಡುವೆ ಈ ವಿಷಯದಲ್ಲಿ ಶೇಕಡಾ ನೂರರಷ್ಟು ಸಹಮತವಿಲ್ಲದಿದ್ದರೂ ಹೆಚ್ಚಿನವುಗಳ ಬಗ್ಗೆ ಅದು ಸಾಧ್ಯವಾಗಿದೆ.

## ಒಂದು ಗೊಂಚಲು — ಹಲ ಬಗೆಯ ಹೂ

ಷೇಕ್ಸ್ಪಿಯರನದು ಒಂದೇ ಕಾಲಕ್ಕೆ, ಒಂದೇ ಗೊಂಚಲಲ್ಲಿ, ಬಣ್ಣ ಆಕಾರ ಕಂಪುಗಳಲ್ಲಿ ಬಹು ಭಿನ್ನವಾದ ಹಲವು ಬಗೆಯ ಹೂ ಬಿಟ್ಟ ಬಹುಮುಖಪ್ರತಿಭೆ. ಅವನ ಎಲ್ಲ ಕೃತಿಗಳನ್ನೂ ಒಟ್ಟಾಗಿ ಗಮನಿಸಿದರೆ ಮಾತ್ರ ನಮಗೆ ಆ ಪ್ರತಿಭೆಯ ಸರಿಯಾದ ಅರಿವು ದೊರೆಯುವುದು. ಅದು ಎಷ್ಟೇ ಶ್ರೇಷ್ಠವಾದರೂ ಅವನ ಯಾವದೇ ಒಂದು ಕೃತಿಯನ್ನಾಗಲಿ ಎತ್ತಿ ಹಿಡಿದು 'ಇದು ಷೇಕ್ಸ್ಪಿಯರನ ಪ್ರತಿಭೆಯ ಪ್ರತಿನಿಧಿ' ಎನ್ನಬರುವಂತಿಲ್ಲ. ಅವನ

ಸೃಷ್ಟಿಯಲ್ಲಿ ಹ್ಯಾಮ್ಲೆಟ್, ಕ್ಲಿಯೊಪಾಟ್ರರಂತಹ ಭವ್ಯಕಲ್ಪನೆಗಳಿರುವಂತೆಯೇ ಅಷ್ಟೇ ಮುಖ್ಯರಾದ ಮುಟ್ಠಾಳ ಲಾನ್ಸರೂ ಹುಂಬ ಬಾಟಮರೂ ಇದ್ದಾರೆ; 'ಬದುಕಿರಲೆ, ಬಾಳಿ ಗಂತವ ತರಲೆ?' ಎಂಬಂತಹ ಆತ್ಮಚಿಂತನೆಗಳಷ್ಟೇ ಅಶ್ಲೀಲ ವಿನೋದಗಳೂ ಅಗ್ಗದ ಶ್ಲೇಷೆ ಗಳೂ ತುಂಬಿಕೊಂಡಿವೆ; ಅಂದವಾದ ದಿವಾನಖಾನೆಗಳ ಜೊತೆಗೆ ಕೊಳಕು ಬಚ್ಚಲುಗಳೂ ಸೇರಿ ಅವನ ಸಾಹಿತ್ಯಸೌಧದ ನಿರ್ಮಾಣವಾಗಿದೆ. ಎಂತಲೇ, ಅವನ ಕೃತಿಗಳೆಲ್ಲವನ್ನೂ ಒಟ್ಟುಗೂಡಿಸಿ ನೋಡಿದಾಗಲೇ ಅವನದೆನ್ನುವ ಒಂದು ಕೃತಿ ಹೊಮ್ಮುವುದೆಂದು ಆಧುನಿಕ ಕವಿ ವಿಮರ್ಶಕ ಈಲಿಯಟ್ ಅಂದಿರುವ ಮಾತು ಮಾರ್ಮಿಕ, ಸತ್ಯ.

ಷೇಕ್ಸ್ಪಿಯರ್ ಹೀಚಿನಲ್ಲಿಯೇ ಹಣ್ಣಾಗಿ ಮೊದಲಿನಿಂದ ಕೊನೆಯವರೆಗೆ ಪರಮ ಪರಿಪಕ್ವ ಕೃತಿಗಳನ್ನೇ ಬರೆದವನಲ್ಲ. ಅವನದು ಹೆಜ್ಜೆಹೆಜ್ಜೆಗೆ ಮಾರ್ಪಾಡಾಗುತ್ತ, ಕ್ರಮ ಬದ್ಧವಾಗಿ ವಿಕಾಸವಾಗುತ್ತ ನಡೆದ ಕಲೆ. ಈ ವಿಕಾಸ ತುಳಿದ ಹಾದಿಯನ್ನು ಗುರುತಿಸಲು ಅನುಕೂಲವಾಗುವಂತೆ ಅವನ ಕೃತಿಗಳನ್ನು ಅವುಗಳ ರಚನಾಕಾಲದ ಮೇರೆಗೆ, ಅವನ ವ್ಯಾವಹಾರಿಕ ಜೀವನಗತಿಗೆ ಹೊಂದಿದಂತೆ ನಾಲ್ಕು ಘಟ್ಟಗಳಾಗಿ ವಿಂಗಡಿಸುವುದು ವಾಡಿಕೆಯಾಗಿದೆ. ಈ ಬಗೆಯ ವಿಂಗಡ ಕೃತಕವೆನಿಸಬಹುದಾದರೂ ಹದಿನಾರಾಣೆ ನಿಕರ ವಾಗಲಾರದಾದರೂ ಅದು ಗತಿಮಾಪನಕ್ಕೆ ಅವಶ್ಯಕ, ಅನಿವಾರ್ಯ. ಹಾಗೆ ವಿಂಗಡಿಸಿ ಅದರ ಚೌಕಟ್ಟಿನಲ್ಲಿ ಅವನ ಕಲೆಯ ವಿಕಾಸವನ್ನು ಗಮನಿಸಿದರೆ ಅದರಲ್ಲಿ ನಾವು ಕಾಣುವುದು ದಿನದ ವಿಕಾಸ, ಬದುಕಿನ ವಿಕಾಸಗಳನ್ನು; ಅವುಗಳ ಸಂಸಿದ್ಧಿ, ವಿಲಾಸ, ವೈಭವಗಳನ್ನು.

## 1594 ರವರೆಗಿನ ಮೊದಲ ಘಟ್ಟ

ರಂಗಭೂಮಿಗೆ ಕಾಲಿಟ್ಟಾಗಿನಿಂದ ಮೊದಲು ಮಾಡಿ ನಟ ನಾಟಕಕಾರನಾಗಿ ಚೇಂಬರ್ ಲೇನ್ ಮಂಡಳಿ ಸೇರಿದ 1594ರವರೆಗಿನದು ಷೇಕ್ಸ್ಪಿಯರನ ನಾಟಕನಿರ್ಮಾಣಕಾಲದ ಮೊದಲ ಘಟ್ಟ. ಇದು ಆದೇ ಆಗ ಕತ್ತಲೊಡೆದು ಎಲ್ಲೆಲ್ಲೂ ಹೊಂಬೆಳಕಿನ ಕಿರಣಗಳನ್ನು ಚೆಲ್ಲತೊಡಗಿದ ನಸುಕು; ಹುರುಪಿನಿಂದ ಬುಡುಬುಡು ಅಂಬೆಗಾಲಿಟ್ಟು ಅಂಗಳದಲ್ಲೆಲ್ಲಾ ನಡೆದಾಡಲಾರಂಭಿಸಿದ ಬಾಲ್ಯ. ಈ ಕಾಲದ ಕೃತಿಗಳು ಇವು:

| ಹರ್ಷಕ | ಚಾರಿತ್ರಕ |
|---|---|
| ದಿ ಕಾಮಿಡಿ ಆಫ್ ಎರರ್ಸ್ | ಹೆನ್ರಿ ದಿ ಸಿಕ್ಸ್ತ್ (ಮೂರು ಭಾಗಗಳು) |
| ದಿ ಟೇಮಿಂಗ್ ಆಫ್ ದಿ ಷ್ರೂ | ರಿಚರ್ಡ್ ದಿ ಥರ್ಡ್ |
| ರುದ್ರ | |
| ಟೈಟಸ್ ಆಂಡ್ರೋನಿಕಸ್ | |

ಇವೆಲ್ಲವೂ ಷೇಕ್ಸ್ಪಿಯರ್ ತನಗಿಂತ ಮುಂಚೆ ನಾಟಕ ರಚಿಸಿ ಸಫಲರಾಗಿದ್ದ ವಿದಗ್ಧರಿಂದ ಪ್ರಭಾವಿತನಾಗಿ, ಅಂದಿನ ಜನಪ್ರಿಯ ನಾಟಕತಂತ್ರ, ಸಂಪ್ರದಾಯಗಳ ಅಚ್ಚಿನಲ್ಲಿ ಪ್ರತಿ ಯಿಳಿಸಿದ ಮೊದಲ ಪ್ರಯತ್ನಗಳು. ಮುಂಬರುವ ಮಹಾವೈಭವದ ಮುನ್ನೋಟವೊ ಎನ್ನು ವಂತೆ ಈ ಕಾಲದ ಸೃಷ್ಟಿ ನಾಟಕದ ಮೂರೂ ಪ್ರಭೇದಗಳಾದ ಹರ್ಷ, ರುದ್ರ, ಚಾರಿತ್ರಕಗಳ ಬೀಸಿನಿಂದ ಕೂಡಿದೆ. ಆದರೂ ಹೆಚ್ಚಿನ ಒಲವು, ಒತ್ತು ಚಾರಿತ್ರಕಗಳ ಕಡೆಗೆ. ವ್ಯವಹಾರ ಕುಶಲನಾದ ಷೇಕ್ಸ್ಪಿಯರನ ಗುರಿ ಬರಿಯ ನಾಟಕಕಾರನಾಗುವುದಷ್ಟೇ ಆಗಿರಲಿಲ್ಲ;

ಯಶಸ್ಸಿನ ಗಳಿಕೆಯ ಮೇಲೆಯೂ ಅವನ ಕಣ್ಣಿತ್ತು. ನವೋದಯದ ನಂತರ ಜನತೆಯ ಭಾವನೆ ಧರ್ಮದಿಂದ ರಾಷ್ಟ್ರೀಯತೆಯ ಕಡೆಗೆ ಹರಿದಿದ್ದುದನ್ನು ಅವನು ಗಮನಿಸಿದ್ದ. ಸರಿ, ಆ ಭಾವನೆಯನ್ನೇ ಬಂಡವಾಳ ಮಾಡಿಕೊಂಡು, 'ಕ್ರಾನಿಕಲ್ ಪ್ಲೇಸ್'ನಿಂದ ಪ್ರೇರಣೆ ಪಡೆದು ಚಾರಿತ್ರಕ ವಸ್ತುವಿಗೆ ಕೈ ತೊಡಗಿಸಿದ. ಮೂರು ಭಾಗಗಳಲ್ಲಿ 'ಹೆನ್ರಿ ದಿ ಸಿಕ್ಸ್ತ್' ಸಿದ್ಧವಾಯಿತು. ಈ ಮೂರು ಹಾಗೂ ಮುಂದಿನ 'ರಿಚರ್ಡ್ ದಿ ಥರ್ಡ್' ಸೇರಿ ಒಂದು ಚತುರ್‌ನಾಟಕಚಕ್ರ (Tetralogy) ವಾಗುತ್ತದೆ. ಕವಿ ತನ್ನ ಜೀವಮಾನದಲ್ಲಿ ಬರೆದ ಎರಡು ಚತುರ್‌ನಾಟಕಚಕ್ರಗಳಲ್ಲಿ ಚಾರಿತ್ರಕ ಕಾಲಮಾನದಿಂದ ಇದು ಉತ್ತರ ಕೃತಿಯಾದರೂ ರಚನೆಯ ದೃಷ್ಟಿಯಿಂದ ಮೊದಲನೆಯದು. ಎರಡನೆ ರಿಚರ್ಡನ ಪದಚ್ಯುತಿಯ ಪಾಪ ದೇಶಕ್ಕೆ ತಟ್ಟಿ, ಅದರ ಫಲವಾಗಿ ಫ್ರಾನ್ಸ್ ಕೈ ಬಿಟ್ಟು, 'ಗುಲಾಬಿಗಳ ಒಳಜಗಳ' ಮೊದಲಾಗಿ, ವರ್ಷಗಳ ಕಾಲ ದಾಯಾದಿಗಳ ರಕ್ತದ ಹೊಳೆ ಹರಿದು, ಆ ರಾಷ್ಟ್ರಪಾಪವೆಲ್ಲವೂ ರಾಕ್ಷಸ ಮೂರನೆ ರಿಚರ್ಡ್‌ನಲ್ಲಿ ಘನಿಸಿ, ಕೊನೆಗೆ ಅವನ ಸಾವಿನಲ್ಲಿ ದೇಶ ವಿಮೋಚನೆ ಪಡೆಯುವುದು ಈ ನಾಟಕಚಕ್ರ ಸುತ್ತಿದ ನಡೆ. ರಾಷ್ಟ್ರದ ಉನ್ನತಿಯಲ್ಲಿಯೇ ವ್ಯಕ್ತಿಯ ಉದ್ಧಾರ ಅಡಗಿದೆಯೆಂದು ನಂಬಿ ನಡೆದಿದ್ದ ಅಂದಿನ ಇಂಗ್ಲಂಡಿನ ಜನತೆಗೆ ಈ ನಾಟಕಚಕ್ರ ಎಷ್ಟು ಮೆಚ್ಚಿಕೆಯಾಯಿತೆಂದು ಊಹಿಸುವುದು ಕಷ್ಟವಲ್ಲ. ಅದರಿಂದಾಗಿ ಅದರ ಕರ್ತೃ ಅವರಿಗೆ ಪ್ರಿಯನಾದ. ಇಲ್ಲಿ ನೆನೆಯಬಹುದಾದ ಒಂದು ಸಂಗತಿಯೆಂದರೆ ಅಲ್ಲಿಯವರೆಗೆ ನೀತಿಬೋಧೆಯನ್ನೇ ಉದ್ದೇಶವಾಗಿಟ್ಟು, ರೂಪದಲ್ಲಿ ಕೇವಲ ಘಟನೆಗಳ ಸರಪಳಿಯಾಗಿದ್ದ ಚಾರಿತ್ರಕ ನಾಟಕಪ್ರಭೇದ ತನ್ನ ಹೆಸರು, ಅರ್ಥಗಳ ನಿಜವಾದ ಸಾರ್ಥಕತೆ ಪಡೆದು, ಸಾಹಿತ್ಯಿಕವಾಗಿ ಮಾನ್ಯತೆ ಗಳಿಸಿದ್ದು ಷೇಕ್ಸ್ಪಿಯರನ ಕೈಯಲ್ಲಿಯೇ. ಇನ್ನೂ ಒಂದು ಸೋಜಿಗವೆಂದರೆ ಅವನಿಂದ ಘಟಿಸಿದ ಆ ಪ್ರಭೇದ ಅವನಿಗಾಗಿಯೇ ಮಾಡಿಟ್ಟದ್ದಂತೆ ಅವನ ಅನಂತರ ಮೂಲೆಗೆ ಬಿದ್ದು ಹಳಸಿತು!

**ಹರ್ಷ, ರುದ್ರನಾಟಕಗಳಲ್ಲಿನ ಪ್ರಥಮ ಪ್ರಯತ್ನಗಳು**

ಈ ಮೊದಲ ಹಂತದ ಹರ್ಷನಾಟಕಗಳಿಗೆ ಮಾದರಿಯಾಗುವುದು ಅಂದಿನ ಕ್ಲಾಸಿಕಲ್ ಸಂಪ್ರದಾಯಕ್ಕೆ ಸೇರಿದ 'ದಿ ಕಾಮಿಡಿ ಅಫ್ ಎರರ್ಸ್' ಪ್ರಹಸನ. ಅವನ ಹರ್ಷನಾಟಕಗಳೆಲ್ಲಕ್ಕೂ ಜೀವದವಾದ ಸ್ವಚ್ಛಂದ ಉಲ್ಲಾಸ ಮೊಟ್ಟಮೊದಲಿನದಾದ 'ಕಾಮಿಡಿ'ಯಲ್ಲಿಯೇ ಧಾರಾಳವಾಗಿ ಸ್ಫುರಿಸಿದೆ. ಬಂಧ ತೊಡಕಿನದಾದರೂ ಕವಿ ಅದನ್ನು ಚಮತ್ಕಾರಿಕವಾಗಿ ನಿರ್ವಹಿಸಿದ್ದಾನೆ. ಪಾತ್ರಕಲ್ಪನೆಯಲ್ಲಾಗಲೇ ವೈವಿಧ್ಯದೃಷ್ಟಿ ಬರತೊಡಗಿದೆ. ಸಾಧಾರಣವಾಗಿ ಮೇಲ್ಮೈಯಲ್ಲಿಯೇ ಓಡಾಡುತ್ತಿದ್ದ ಶಿಲ್ಪಿಯ ಕೈ ಈಗ ಒಮ್ಮೊಮ್ಮೆ ಕಲ್ಲಿನ ಆಳಕ್ಕಿಳಿದು ರಸಸ್ಥಾನಗಳನ್ನು ಸೃಷ್ಟಿಸಿ, ಭಾವನೋದ್ವೇಗಗಳನ್ನು ಉಕ್ಕಿಸುತ್ತದೆ.

'ಟೈಟಸ್' ರುದ್ರನಾಟಕ ರಚನೆಯಲ್ಲಿ ಪ್ರಥಮ ಪ್ರಯತ್ನ; ಕಿಡ್‌ನ ಪ್ರಭಾವದಿಂದ ಬರೆದದ್ದು; ಸೇಡಿನ ವಸ್ತು (Revenge Play): ಉದ್ದಕ್ಕೂ ರಕ್ತ, ಪ್ರತೀಕಾರ, ಘೋರ.

ಒಟ್ಟಿನಲ್ಲಿ ಈ ಮೊದಮೊದಲಿನ ಕೃತಿಗಳು ಅಪಕ್ವವೆಂದೇ ಅನ್ನಬೇಕು. ಅವುಗಳಲ್ಲಿನ್ನೂ ಹೊಸತಿನ ಹಸಕು, ಒಗರು ಕಳೆದಿಲ್ಲ. ಕಲ್ಪನೆಯ ಕಣ್ಣು ತಾಗಿದ ಎತ್ತರಕ್ಕೆ ನಿರ್ವಹಣೆಯ ಕೈ ಎಟುಕದು. ಶೈಲಿ ವಾಗಾಡಂಬರದಿಂದ ಭಾರವಾಗಿದೆ. 'ನೆಲವಣ್ಣ'

ರಂತಹ ಅರಸಿಕ ಪ್ರೇಕ್ಷಕರನ್ನು ಮೆಚ್ಚಿಸುವ ಜನಪ್ರಿಯತೆಯ ತಂತ್ರಗಳಾದ ಶ್ಲೇಷೆ, ಪ್ರಸರುಕ್ತಿಗಳು ಅಲ್ಲಲ್ಲಿ ಕಾಣಿಸಿಕೊಂಡಿವೆ. ರಗಳೆ ಬಿಗಿ, ಅದಕ್ಕೆ ಲಯವೈವಿಧ್ಯವಿನ್ನೂ ಸಾಧಿಸಿಲ್ಲ.

ಆದರೆ ಈ ಕಾಲಾವಧಿಯ ಕೊನೆಮುಟ್ಟುವ ಮೊದಲೇ ಕವಿಯ ಶಕ್ತಿ ವೃದ್ಧಿಸುವುದನ್ನು ನಾವು ಕಾಣುತ್ತೇವೆ. ರಗಳೆಗೆ ಹೆಚ್ಚಿನ ಕಸುವು ಬರುತ್ತದೆ. ಪಾತ್ರಗಳು ಸುಸ್ಪಷ್ಟವಾಗಿ ತಮ್ಮದೇ ವ್ಯಕ್ತಿತ್ವ ಪಡೆಯುತ್ತವೆ. ತಂತ್ರ ಪ್ರಜ್ಞೆ ಬೆಳೆಯುತ್ತದೆ. 'ರಿಚರ್ಡ್ ದಿ ಥರ್ಡ್' ಬರೆಯುವ ಹೊತ್ತಿಗಾಗಲೇ — ಅದರ ಮೇಲೆ ಮಾರ್ಲೊನ 'ಟ್ಯಾಂಬುರ್‌ಲೇನ್'ನ ನೆರಳು ಹಾದಿದ್ದರೂ — ಕವಿ ಎದ್ದು ತಲೆಯೆತ್ತಿ ತಾನೇತಾನಾಗಿ ನಿಲ್ಲುತ್ತಾನೆ. ಅದು ಅವನ ಮೊದಲ ಪರಿಣಾಮಕಾರಿಯಾದ ಕೃತಿ.

**1594-99 : ಹುಚ್ಚು ಹರೆಯದ ಎರಡನೆ ಘಟ್ಟ**

ಎರಡನೆ ಘಟ್ಟ ಚೇಂಬರ್‌ಲೇನ್ ಮಂಡಳಿ ಸೇರಿದಾಗಿನಿಂದ ಹಿಡಿದು ಗ್ಲೋಬ್‌ನ ಸಂಸ್ಥಾಪನೆಯಾಗಿ ಅದರಲ್ಲಿ ಷೇಕ್ಸ್‌ಪಿಯರ್ ಪಾಲುಗಾರನಾಗುವವರೆಗಿನ 94-99ರ ನಡುವಿನದು. ಇದು ಕತ್ತಲು ಕಳೆದು ಹೊಗರೆದ್ದ ದಿನದ ಹೊಂಬೆಳಗು; ಮಿಂಚಿನ ಓರೆನೋಟ ತುಳುಕಿಸಿ ಚೆಲ್ಲಾಟವಾಡಿದ ಬದುಕಿನ ಹುಚ್ಚು ಹರೆಯ. ಈ ಕಾಲಾವಧಿಯ ಕೃತಿಗಳೆಂದರೆ:

| | |
|---|---|
| ಹರ್ಷಕ | ಚಾರಿತ್ರಕ |
| ಟು ಜೆಂಟಲ್‌ಮೆನ್ ಆಫ್ ವೆರೋನ | ರಿಚರ್ಡ್ ದಿ ಸೆಕಂಡ್ |
| ಲವ್ಸ್ ಲೇಬರ್ಸ್ ಲಾಸ್ಟ್ | ಕಿಂಗ್ ಜಾನ್ |
| ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್ | ಹೆನ್ರಿ ದಿ ಫೋರ್ತ್ (ಎರಡು ಭಾಗಗಳು) |
| ದಿ ಮರ್ಚೆಂಟ್ ಆಫ್ ವೆನಿಸ್ | ಹೆನ್ರಿ ದಿ ಫಿಫ್ತ್ |
| ಮಚ್ ಆ್ಯಡೂ ಅಬೌಟ್ ನಥಿಂಗ್ | ರುದ್ರ |
| ದಿ ಮೆರಿ ವೈವ್ಸ್ ಆಫ್ ವಿಂಡ್ಸರ್ | ರೋಮಿಯೊ ಅಂಡ್ ಜೂಲಿಯೆಟ್ |

ಕಂಡಂತೆಯೇ ಈ ಅವಧಿಯಲ್ಲಿ ಕವಿಯ ಆಸಕ್ತಿ ಗಮನಗಳು ಚಾರಿತ್ರಕ, ಹರ್ಷಕಗಳ ನಡುವೆ ಹಂಚಿವೆ. ಅವನ ಪ್ರತಿಭೆ ಅವುಅವಕ್ಕೆ ಅಗತ್ಯವಾದಂತಹ — ಒಂದಕ್ಕೆ ಗಾಂಭೀರ್ಯ, ಆಡಂಬರಗಳ, ಇನ್ನೊಂದಕ್ಕೆ ಗೆಲವು, ಬಿಡುಬೀಸುಗಳ — ಶೈಲಿಗಳನ್ನು ಒದಗಿಸಿಕೊಂಡು ಬಗೆಬಗೆಯ ಪ್ರಯೋಗಗಳಲ್ಲಿ ತೊಡಗುತ್ತದೆ.

'ಹೆನ್ರಿ ದಿ ಸಿಕ್ಸ್ತ್' ನಾಟಕಚಕ್ರಕ್ಕೆ ದೊರೆತ ಯಶಸ್ಸು ಷೇಕ್ಸ್‌ಪಿಯರನಲ್ಲಿ ಇನ್ನೂ ಹೆಚ್ಚು ಚಾರಿತ್ರಕಗಳನ್ನು ಬರೆಯುವ ಚಪಲ ಕೆರಳಿಸಿತೇನೊ. ಅದರಲ್ಲಿನ ಪರಿಣಾಮಕ್ಕೆ ಹೇತುವಾದ ಮುಂಚಿನ ಎರಡನೆ ರಿಚರ್ಡ್‌ನ ಪದಚ್ಯುತಿಯ ಮೂಲಘಟನೆಯನ್ನೆತ್ತಿಕೊಂಡು, ಅವನು 'ರಿಚರ್ಡ್ ದಿ ಸೆಕಂಡ್' ಅನ್ನು ರಚಿಸಿದ. ಹಿಂದೆಯೇ ಎರಡು ಭಾಗಗಳಲ್ಲಿ 'ಹೆನ್ರಿ ದಿ ಫೋರ್ತ್', ಆಮೇಲೆ 'ಹೆನ್ರಿ ದಿ ಫಿಫ್ತ್'ಗಳು ಹುಟ್ಟಿಬಂದು, ಗುಣದಲ್ಲಿ ಮೊದಲಿನದನ್ನು ಮೀರಿಸುವ ಎರಡನೆಯ ನಾಟಕಚಕ್ರ ಸಿದ್ಧವಾಯಿತು. 'ರಿಚರ್ಡ್ ದಿ ಸೆಕಂಡ್'ನದು ವಿಧ್ಯುಕ್ತವಾದ ಮಧ್ಯಯುಗೀನ ವಾತಾವರಣ; ಆದರೆ ಅದೇ 'ಹೆನ್ರಿ ದಿ ಫೋರ್ತ್'ನಲ್ಲಿ ನಾವು ಕಾಣುವುದು ಕಟ್ಟು ಕಳಚಿದ ಕವಿಯ ಕಾಲದ ಇಂಗ್ಲಂಡನ್ನು. ಇನ್ನೂರು ವರ್ಷಗಳ ಹಿಂದಿನ ಚಾರಿತ್ರಕ ವಸ್ತುವನ್ನು ತನ್ನ ಕಾಲದ ಹಾಸಿನಲ್ಲಿ ಒಮ್ಮೆಲೇ

ಹರ್ಷ ರುದ್ರ ಭಾವಗಳನ್ನು ಬೆರಸಿ ನೇಯ್ದುದು 'ಅದೇ ಸರಿ' ಎನಿಸಿಕೊಂಡುದು ಮಹಾಕವಿಯ ಅಗ್ಗಳಿಕೆ. ಅದರಲ್ಲಿನ ಹಾಸ್ಯವೀರ ಫಾಲ್‌ಸ್ಟಾಫ್, ಜಾಣಮಾತಿನ ಚಟಾಕಿ ಹಾರಿಸುತ್ತ ನಮ್ಮನ್ನು ರಂಜಿಸಿ ಒಲಿಸಿಕೊಳ್ಳುವ ಆ ಹಗಲುಕುಡುಕ ಸರ್ ಜಾನ್ ಕವಿಯ ಕಂಠಹಾರದ ಸ್ಯಮಂತಕ ಮಣಿ; ಅವನು ಕೊಟ್ಟದ್ದು ಒಂದು ಓದಿಗೆ ಹತ್ತು ಹೊರೆ ನಗೆಬಂಗಾರ! 'ಹೆನ್ರಿ ದಿ ಫಿಫ್ತ್'ನ ಕಾವ್ಯಪಂಕ್ತಿಗಳಲ್ಲಿ ಮೊಳಗಿರುವುದು ಉಚ್ಚವಾಗ್ಘೋಷ. ಇಂಗ್ಲಂಡಿನ ನಿಜವಾದ ಜಾಯಮಾನ ವ್ಯಕ್ತವಾಗಿರುವುದು ಈ ಎರಡನೆ ನಾಟಕಚಕ್ರದಲ್ಲಿಯೇ.

## ಚಾರಿತ್ರಕಗಳ ತತ್ವ: 'ದೇಶವೇ ದೇವರು'

ಎರಡು ಚಕ್ರಗಳಲ್ಲಿನ ಎಂಟು ನಾಟಕಗಳು, 'ಕಿಂಗ್ ಜಾನ್' ಮತ್ತು ಮುಂದೆ ಫ್ಲೆಚರನ ಸಹಕರ್ತೃತ್ವದಲ್ಲಿ ರಚಿತವಾದ ಕೊನೆಗಾಲದ 'ಹೆನ್ರಿ ದಿ ಏಟ್ತ್' — ಷೇಕ್‌ಸ್ಪಿಯರ್ ಇಂಗ್ಲಿಷ್ ಚರಿತ್ರೆಯ ಆಧಾರದ ಮೇಲೆ ಬರೆದದ್ದು ಈ ಹತ್ತು ನಾಟಕಗಳು. ಕವಿ ಹಾಗೆ ಉದ್ದೇಶಿಸಿದ್ದನೊ ಇಲ್ಲವೊ, ವಿಮರ್ಶಕರು ಇವುಗಳಲ್ಲಿ ಒಟ್ಟಿನ ಒಂದು ಐಕ್ಯವನ್ನು, ಏಕ ಸೂತ್ರವನ್ನು ಕಂಡುಕೊಂಡಿದ್ದಾರೆ. ಇವುಗಳಲ್ಲಿನ ಕವಿದೃಷ್ಟಿ ಎಲಿಜಬೆತ್ ಯುಗದ ಜನತೆ ಇತಿಹಾಸವನ್ನು ಕಂಡ ದೃಷ್ಟಿ, ದೇಶವೇ ದೇವರೆಂಬ ಉಚ್ಚ ರಾಷ್ಟ್ರೀಯತೆಯ ದೃಷ್ಟಿ. ಮಾನವ ಸಮಾಜವನ್ನು ಸುವ್ಯವಸ್ಥೆಯ ಕಟ್ಟಿನಲ್ಲಿ ತರುವುದು ಹೇಗೆಂಬುದನ್ನು ಕುರಿತ ಗಹನವಾದ ವಿಚಾರಗಳೂ ಆದರ್ಶ ಭಾವನೆಗಳೂ ಈ ನಾಟಕಗಳಲ್ಲಿ ಅಡಕ ವಾಗಿದ್ದು ಇವು ರಾಜ್ಯಶಾಸ್ತ್ರ, ಸಮಾಜಶಾಸ್ತ್ರಗಳಲ್ಲಿನ ಗಾಢವಾದ ಸಿದ್ಧಾಂತ-ಪ್ರತಿ ಪಾದನೆಗಳಂತಿವೆ. ಇಡಿಯ ಜಾಗತಿಕ ಸಾಹಿತ್ಯದಲ್ಲಿಯೇ ಇವಕ್ಕೆ ಸರಿದೊರೆಯಾಗಿ ನಿಲ್ಲುವ ಬೇರೆ ಚಾರಿತ್ರಕ ನಾಟಕಗಳು ಇಲ್ಲವೆಂದು ಬಲ್ಲವರ ಅಭಿಪ್ರಾಯ.

## ಹರ್ಷನಾಟಕಗಳಲ್ಲಿನ ಸ್ವಚ್ಛಂದ ಉಲ್ಲಾಸ

ಹರ್ಷನಾಟಕಗಳಲ್ಲಿ ಮೊದಲಿನ ಎರಡು — 'ಟು ಜೆಂಟಲ್‌ಮೆನ್ ಆಫ್ ವೆರೋನ' ಮತ್ತು 'ಲವ್ಸ್ ಲೇಬರ್ಸ್ ಲಾಸ್ಟ್' — ವಿದಗ್ಧರ ಪ್ರಭಾವದಿಂದ ಬಿಡುತೆ ಪಡೆದಿಲ್ಲ. ಅವನ್ನು ಗುಣಮಾನದ ಮೇಲೆ ಹಿಂದಿನ ಹಂತಕ್ಕೆ ಸೇರಿಸಿದರೂ ಸರಿಯೆ. ಅವುಗಳ ರಚನೆಯ ನಂತರ ಕವಿ ಸರ್ವತಂತ್ರಸ್ವತಂತ್ರ. ಹರ್ಷನಾಟಕಕಾರನಾಗಿ ಅವನು ಪ್ರತಿಷ್ಠೆ ಪಡೆಯುವುದು 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್'ನ ರಚನೆಯೊಂದಿಗೆ. ಅದರ ಬಗೆ ಶುದ್ಧ ಗೇಯ; ಅದರಲ್ಲಿ ನಾವು ಕಾಣುವುದು ಕಿನ್ನರ ಕ್ರೀಡೆ, ಅಚ್ಚರಸಿಯರ ಆಟ; ಹೆಸರಿನಂತೆ ಗುಣರೂಪಗಳಲ್ಲೂ ಅದೊಂದು ಸವಿಗನಸೇ. 'ದಿ ಮರ್ಚೆಂಟ್ ಆಫ್ ವೆನಿಸ್' ರಮ್ಯ ರುದ್ರ ಹರ್ಷಕ್ಕೆ (Romantic Tragi-comedy) ಮಾದರಿ. ವಸ್ತು ಬಾಲಿಶವಾದರೂ ರಂಗದ ಮೇಲೆ ಅದರಷ್ಟು ಜನಪ್ರಿಯತೆ ಗಳಿಸಿದ ಇನ್ನೊಂದು ನಾಟಕವಿಲ್ಲ. ಹೀಗೆ ಈ ಹರ್ಷ ನಾಟಕಗಳಲ್ಲಿ ಒಂದೊಂದೂ ಒಂದೊಂದು ಬಗೆಯಾದರೂ ಅವೆಲ್ಲದರಲ್ಲೂ ಎದ್ದು ಕಾಣು ವುದು ಹಿಂದೆ ಹೇಳಿದ ಅದೇ ಸಾಮಾನ್ಯ ಲಕ್ಷಣವೆ: ನಿರ್ಮಿಷ್ಟ, ಸ್ವಚ್ಛಂದ ವಸಂತೋ ಲ್ಲಾಸ: ತೊರೆಯ ಝುಳುಝುಳು ತಿಳಿನಗೆ, ತಂಗಾಳಿಯ ಗೆಲವು, ಹೂಬಿಸಿಲಿನ ಚೆಲ್ಲಾಟ (ಕವಿ ಇದಕ್ಕೆ ಸ್ವಲ್ಪ ಹಿಂದೆ, 92-94ರ ಪ್ಲೇಗಿನ ಸಮಯದಲ್ಲಿ ಇಟಲಿಗೆ ಭೇಟಿ ಕೊಟ್ಟು,

ಅಲ್ಲಿಂದ ಹೊಂಬಣ್ಣದ ಹೂಬಿಸಿಲನ್ನು ಬವರಿ ತಂದು ನಾಟಕಗಳಲ್ಲಿ ಚಿಮುಕಿಸಿದನೆಂದೂ ಒಂದು ನಂಬಿಕೆಯಿದೆ). ಆ ಉಲ್ಲಾಸ ಕವಿಗೆ ದೈವದತ್ತವಾಗಿ ದೊರೆತಿದ್ದ ವಿಶಿಷ್ಟ ವರ.

## ರುದ್ರ, ಚಾರಿತ್ರಕಗಳನ್ನೂ ಬಿಡದ ಗೇಯತೆ

'ರೋಮಿಯೊ ಅಂಡ್ ಜೂಲಿಯೆಟ್' ಒಂದೇ ಈ ಕಾಲದ ರುದ್ರನಾಟಕ. ಹರೆಯದಲ್ಲಿ ಕವಿಯ ಎದೆಯೊಳಗೆ ಅದಾವ ಹಕ್ಕಿ ಹಾಡಿತ್ತೊ, ಅದಾವ ವೀಣೆ ನುಡಿದಿತ್ತೊ ಅದರಿಂದೆದ್ದ ಮಧುಮಧುರ ಗೇಯಸ್ವನ ಹರ್ಷನಾಟಕಗಳಲ್ಲಷ್ಟೇ ಅಲ್ಲದೆ ಈ ರುದ್ರನಾಟಕದಲ್ಲೂ (ಅಂತೆಯೇ 'ರಿಚರ್ಡ್ ದಿ ಸೆಕಂಡ್' ನಂತಹ ರುದ್ರಚಾರಿತ್ರಕದಲ್ಲೂ) ಪ್ರತಿಧ್ವನಿಸಿ, ಅದಕ್ಕೆ ಗೀತದ ಗುಣ ಒದಗಿಸಿದೆ. ಇದರ ಕಾವ್ಯ ಒಂದು ವಿಶಿಷ್ಟ ಕಾಂತಿಯಿಂದ ಬೆಳಗಿದೆ. ಅಲ್ಲಲ್ಲಿ ಒಂದೊಂದು ಭಾಗ ಬಿಗಿಯೆನಿಸಿದರೂ ಆ ಕಾವ್ಯಕ್ಕೆ ನೇರವಾಗಿ ಎದೆ ಹೊಗುವ, ಎದೆ ಮಿಡಿಸುವ ಶಕ್ತಿಯಿದೆ. ನಾಟಕದಲ್ಲಿ ಅಭಿವ್ಯಕ್ತವಾಗಿರುವುದು ಮುಗ್ಧತೆಯಿಂದ ತುಂಬಿದ ಮೊದಲೊಲವಿನ ರೋಮಾಂಚ. ಇವತ್ತಿಗೂ ಅಂತಹ ಪ್ರೇಮಿಗಳನ್ನು ನಾವು ಗುರುತಿಸುವುದು ಆ ನಾಯಕನಾಯಕಿಯರ ಹೆಸರಿನಿಂದಲೇ! ಆ ಆ ಪ್ರಭೇದಗಳಲ್ಲಿ ಇದು ಮತ್ತು 'ಡ್ರೀಮ್' ಈ ಕಾಲದ ಎರಡು ಶ್ರೇಯಃಕೃತಿಗಳು.

ಈ ಕಾಲಾವಧಿಯಲ್ಲಿ ನಾವು ಕವಿಯ ರಚನಾತಂತ್ರ ಸುಧಾರಿಸುತ್ತ ಹೋಗುವುದನ್ನು ನೋಡುತ್ತೇವೆ. 'ಹೆನ್ರಿ ದಿ ಫೋರ್ತ್'ನ ಹೊತ್ತಿಗೆ ಗದ್ಯಶೈಲಿ ಗಟ್ಟಿಗೊಂಡು ಪರಿಪೂರ್ಣತೆಯ ಮಟ್ಟ ಮುಟ್ಟುತ್ತದೆ. ಅಂತೆಯೇ ಕಾವ್ಯವೂ ಹೊಸ ಹೊಸ ಎತ್ತರಕ್ಕೆ ಏರುತ್ತ ನಡೆಯುತ್ತದೆ. ಪ್ರತಿಮಾನಿಷ್ಠೆ ಬೆಳೆದು ಮಾತು ಅಲಂಕಾರವಾಗುತ್ತದೆ. ಈಗ ಕವಿಗೆ ಶಬ್ದಗಳ ಬಳಕೆಯ ಮೇಲೆ ಹತೋಟಿ ಬಂದಿದೆ. ಅವನು ಹೆಚ್ಚು ಪದಗಳನ್ನೂ ಬಳಸಬಲ್ಲ; ಪದಗಳಿಂದ ಹೆಚ್ಚು ಅರ್ಥವನ್ನೂ ಹೊರಡಿಸಬಲ್ಲ. ರಗಳೆಯ ಗತಿಯನ್ನು ಬೇಕಾದಂತೆ ನಿಯಂತ್ರಿಸಿ ಅದರಲ್ಲಿ ಏರಿಳಿತಗಳನ್ನು ತರಬಲ್ಲ. ಜೊತೆಗೆ ಪ್ರಾಸಬದ್ಧವಾದ ದ್ವಿಪದಿಗಳನ್ನೂ ಸೇರಿಸಿ, ಅವನ್ನೂ ಸಮರ್ಥ ಸಂವಾದಮಾಧ್ಯಮವನ್ನಾಗಿ ಮಾಡಬಲ್ಲ.

## ಹರ್ಷನಾಟಕಗಳ ಮರ್ಮ

ಷೇಕ್‌ಸ್ಪಿಯರನ ಹರ್ಷನಾಟಕ ರಚನೆ ಹಿಂದಿನ ಹಂತದಲ್ಲಿ ಮೊಗ್ಗೊಡೆದು, ಮುಂದಿನ ರುದ್ರಕಾಲದ ಮೊದಲಿನ 'ಆ್ಯಸ್ ಯು ಲೈಕ್ ಇಟ್', 'ಟ್ವೆಲ್ಫ್ತ್ ನೈಟ್'ಗಳಲ್ಲಿ ಫಲ ತೊಟ್ಟು ಸಿದ್ಧಿಸಿದ್ದರೂ ಅದು ಹಲಬಗೆಯ ಪ್ರಯೋಗಗಳಾಗಿ ಅರಳಿದ್ದು ನಡುವಿನ ಈ ಅವಧಿಯಲ್ಲಿಯೇ. ಆದ್ದರಿಂದ ಹರ್ಷನಾಟಕಗಳ ಮರ್ಮವೇನಿರಬಹುದೆಂಬುದನ್ನು ಈ ಘಟ್ಟದಲ್ಲಿಯೇ ಗಮನಿಸುವುದು ಉಚಿತ. ಕವಿ ತನ್ನ ಹರ್ಷನಾಟಕಗಳಲ್ಲಿ ಹೇಳಬಯಸಿದ್ದೇನು? ಇದೊಂದು ಬೀಜಪ್ರಶ್ನೆ. ಇದಕ್ಕೆ ಉತ್ತರರೂಪವಾಗಿ ಒಬ್ಬೊಬ್ಬ ವಿಮರ್ಶಕರೂ ಒಂದೊಂದು ವ್ಯಾಖ್ಯಾನ ಕೊಟ್ಟಿದ್ದಾರೆ. ಅವುಗಳ ಸಾರಾಂಶ ಹೀಗಿದೆ: ಈ ಹರ್ಷನಾಟಕಗಳಲ್ಲಿ ಪುರುಪುರುವಿನವು ಲ್ಯಾಟಿನ್, ಇಟಾಲಿಯನ್ ನಾಟಕಗಳ 'ಕ್ಲಾಸಿಕಲ್' ಸಂಪ್ರದಾಯದ ಮಾದರಿಯಲ್ಲಿದ್ದರೆ, ಇನ್ನೊಂದೆರಡು ಸ್ಪಷ್ಟವಾಗಿ ವಿಡಂಬನೆಗಳಾದರೆ, ಹೆಚ್ಚಿನವು, ಕೊನೆಕೊನೆಯ ಮಹಾಹರ್ಷಕಗಳು ಯಾವ ಅಚ್ಚಿಗೂ ಕಟ್ಟಿಗೂ ಒಳಪಡವು.

ಚಾರಿತ್ರಕಗಳಲ್ಲಿಯಂತೆ, ಮೊದಲಿನ ರುದ್ರನಾಟಕಗಳಲ್ಲಿಯಂತೆ ಅಥವಾ ವಿಡಂಬನೆಗಳಲ್ಲಿಯಂತೆ ಅವುಗಳಲ್ಲಿ ಕವಿಯ ಉದ್ದೇಶ ವ್ಯಕ್ತವಿಲ್ಲ, ಸ್ಪಷ್ಟವಿಲ್ಲ. ಹೆಕ್ಕಿ ತೆಗೆಯಬಹುದಾದ ಒಂದು ಕೇಂದ್ರವಿಚಾರವಾಗಲಿ, ಸಿದ್ಧಾಂತವಾಗಲಿ, ಕೊನೆಗೆ ನೀತಿಯಾಗಲಿ ಅವುಗಳಲ್ಲಿ ಸಿಗದು. ಅವು ತೋರಿಸುವುದು ವಿವಿಧ ಸನ್ನಿವೇಶಗಳಲ್ಲಿ ಸಿಕ್ಕು, ವಿವಿಧ ತರನಾದ ಪ್ರತಿಕ್ರಿಯೆ ನೀಡುವ ವಿಧವಿಧವಾದ ಪಾತ್ರಗಳನ್ನು. ಹೀಗೆ ಕವಿಯ ಉದ್ದೇಶ, ಹರ್ಷದೃಷ್ಟಿ (Comic Vision) ವ್ಯಕ್ತವಲ್ಲದಿದ್ದರೂ ಅದು ಪೂರ್ಣ ಅವ್ಯಕ್ತವೂ ಅಲ್ಲ. ಅದನ್ನು ಕಂಡು ತಿಳಿಯುವುದಕ್ಕಿಂತ ಭಾವಿಸಿ ತಿಳಿಯಬೇಕಾಗುತ್ತದೆ, ಅರಿತು ತಿಳಿಯಬೇಕಾಗುತ್ತದೆ. ಅವುಗಳೆಲ್ಲದರಲ್ಲಿನ ಪ್ರಧಾನ ಭಾವ (ಈಗಾಗಲೇ ಚರ್ಚಿಸಿದ) ಹರ್ಷೋಲ್ಲಾಸ. ಜೊತೆಗೆ ಆ ಹರ್ಷಕಗಳು ಸ್ವಭಾವಸಿದ್ಧ, ಜೀವನಬಿಂಬಕ, ವಿವೇಕಶೀಲ, ಮಾನವೀಯ, ಇತ್ಯಾದಿ.

## ಪ್ರೇಮದ ವಿರಾಟ್‌ಲೀಲೆ

ಇವೆಲ್ಲ ಸರಿಯೆ. ಆದರೆ ಇವುಗಳಾಚೆ ಬೇರೇನೂ ಇಲ್ಲವೆ? ಷೇಕ್ಸ್ಪಿಯರನ ಮೊತ್ತಮೊದಲಿನ ವಿಮರ್ಶಕ, 'ಪಲ್ಲಾಡಿಸ್ ಟೇಮಿಯ'ದ ಕರ್ತೃ ಫ್ರಾನ್ಸಿಸ್ ಮಿಯರ್ಸ್ ಅವನ ಬಗ್ಗೆ ಬೇರೊಂದು ಸಂದರ್ಭದಲ್ಲಿ ಹೇಳುವ ಒಂದು ಮಾತು ಕೊಂಚ ತಿದ್ದುಪಡಿಯೊಡನೆ ಹರ್ಷಕಗಳ ಮರ್ಮಕ್ಕೆ ಬೀಗದ ಕೈಯಾಗಬಹುದೇನೊ. 'ಪ್ರೇಮದ ತೊಡಕನ್ನು ಕುರಿತು ನಮ್ಮಲ್ಲೆಲ್ಲ ಉತ್ಕಟವಾಗಿ ಮರುಗಿದವನು ಅವನು' — ಎಂಬುದು ಆ ಮಾತು. 'ಮರುಗಿದವನು' ಎಂಬುದರ ಬದಲು 'ಮರುಳಾದವನು' ಎಂಬುದು ಸೂಚಿಸಬಹುದಾದ ತಿದ್ದುಪಡಿ. ಹರ್ಷಕಗಳ ವಿಷಯದಲ್ಲಿ ಅದು ಹೆಚ್ಚು ಒಪ್ಪಿತ.

ಮಿಯರ್ಸ್ ಹೇಳಿದ ಈ ಪ್ರೇಮ — ಗಂಡು ಹೆಣ್ಣು ಒಬ್ಬರನ್ನೊಬ್ಬರು ಕಂಡ ದೃಷ್ಟಿ, ಅವರ ನಡುವೆ ತಿಕ್ಕಾಡಿದ ಭಾವನೆಗಳ ಸೆಳೆತ — ಹರ್ಷಕಗಳಲ್ಲೆಲ್ಲ ಬಹುತರ ಪ್ರಧಾನವಾಗಿ, ಒಮ್ಮೊಮ್ಮೆ ಮಾತ್ರ ಗೌಣವಾಗಿ ತಲೆದೋರುವ ಸಾಮಾನ್ಯ ವಸ್ತು-ವಿಷಯ. ಷೇಕ್ಸ್ಪಿಯರ್ ತನ್ನ ಸ್ವಂತ ಜೀವನದಲ್ಲಿ ಪ್ರೇಮಿಯಾಗಿದ್ದನೊ ಇಲ್ಲವೊ, ಆದರೆ ಜೀವನಪೂರ್ತಿ ಪ್ರೇಮತತ್ವದ ಆರಾಧಕನಾಗಿದ್ದನೆಂಬುದರ ಬಗ್ಗೆ ಎರಡು ಮಾತಿಲ್ಲ. ಅವನು ತನ್ನ ಹರ್ಷಕಗಳಲ್ಲಿ ತೋರಿಸಿರುವುದು ಈ ಪ್ರೇಮದ ವಿರಾಟ್‌ಲೀಲೆಯನ್ನು. ಅಬ್ಬಾ! ಅದರದ್ದು ಅದೆಷ್ಟು ಬಗೆ! 'ಷ್ರೂ'ನ ಪಿಟ್ರೂಕಿಯೊ-ಕೇಟ್‌ರಂತೆ ಗುದ್ದಾಡಿ ಗೆಲ್ಲಬಹುದು; 'ಡ್ರೀಮ್'ನ ನಲ್ಲನಲ್ಲೆಯರುಗಳಂತೆ ಒಬ್ಬರ ಹಿಂದೊಬ್ಬರು ಅಂಡಲೆದು ರಾಟವಾಳೆಯಾಡಿ ಪಡೆಯಬಹುದು; 'ಮಚ್ ಆ್ಯಡೂ'ದ ಕ್ಲಾಡಿಯೊನಂತೆ ಒಲಿದು ಒಲ್ಲೆನೆಂದು ನಂತರ ಮರುಗಬಹುದು; ಬೆನಿಡಿಕ್-ಬೀಯಟ್ರಿಸ್‌ರಂತೆ ಮೇಲೆ ಹಗೆಗಳಂತೆ ಕಚ್ಚಾಡಿಯೂ ಒಳಗೆ ಪರಸ್ಪರ ಮಿಡಿದು ಒಂದಾಗಬಹುದು; 'ಆ್ಯಸ್ ಯು ಲೈಕ್ ಇಟ್'ನ ರೊಸಲಿಂಡ್‌ಳಂತೆ ಒಲಿದವನನ್ನು ಗಂಡುವೇಷ ತೊಟ್ಟು ಪ್ರೀತಿಸಿ ಗೆಲ್ಲಬಹುದು. ಹೀಗೆಯೇ ಇನ್ನೂ ಎಷ್ಟೋ: ಆದರೆ ಆಳದಲ್ಲಿ ಎಲ್ಲದರ ತತ್ವವೂ ಒಂದೇ: ಪ್ರೇಮ . . . ಪ್ರೇಮ . . . ಪ್ರೇಮ!

## 1599-1608ರ ರುದ್ರಘಟ್ಟ : ಶಿಖರದ ತುತ್ತತುದಿ

1599ರಲ್ಲಿ ಗ್ಲೋಬ್ ಸಂಸ್ಥಾಪನೆಯಾದಂದಿನಿಂದ ಹಿಡಿದು ಷೇಕ್ಸ್ಪಿಯರನ ಮಂಡಳಿ

ಆದರ ಜೊತೆಗೆ 1608ರಲ್ಲಿ ಬ್ಲ್ಯಾಕ್ ಫ್ರೈಯರ್ಸ್‌ನ ಒಡೆತನವನ್ನೂ ಪಡೆಯುವವರೆಗಿನದು ಮುಂದಿನ ಘಟ್ಟ. ಇದು ಬಿಸಿಲೇರಿ ಉರಿದ ದಿನದ ನಡುಹಗಲು; ಯೌವನದ ಹರ್ಷ ಕಳೆದು, ಕಾವುನೋವು ಆಡರಿದ ಜೀವನದ ಮಧ್ಯವಯಸ್ಸು. ಈ ಅವಧಿಯ ಕೃತಿಗಳೆಂದರೆ:

| ರುದ್ರ | ಹರ್ಷಕ |
|---|---|
| ಜೂಲಿಯಸ್ ಸೀಸರ್ | ಆ್ಯಸ್ ಯು ಲೈಕ್ ಇಟ್ |
| ಹ್ಯಾಮ್ಲೆಟ್ | ಟ್ವೆಲ್ಫ್ತ್ ನೈಟ್ |
| ಅಥೆಲ್ಲೊ | ಕಟುಹರ್ಷಕ |
| ಟೈಮನ್ ಆಫ್ ಅಥೆನ್ಸ್ | ಟ್ರಾಯ್‌ಲಸ್ ಅಂಡ್ ಕ್ರೆಸಿಡ |
| ಕಿಂಗ್ ಲಿಯರ್ | ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್ |
| ಮೆಕ್‌ಬೆತ್ | ಮೆಷರ್ ಫರ್ ಮೆಷರ್ |
| ಆ್ಯಂಟನಿ ಅಂಡ್ ಕ್ಲಿಯೊಪಾಟ್ರ | ಚಾರಿತ್ರಕ |
| ಕೊರಿಯೊಲೇನಸ್ | ಇಲ್ಲ |

1599ರವರೆಗೆ ಗೆಲವಾಗಿದ್ದ ಷೇಕ್‌ಸ್ಪಿಯರನ ಜೀವನದೃಷ್ಟಿ, ಕಲಾದೃಷ್ಟಿಗಳು ಇದ್ದಕ್ಕಿದ್ದಂತೆ ಆ ವರ್ಷ 'ಜೂಲಿಯಸ್ ಸೀಸರ್'ನ ರಚನೆಯೊಂದಿಗೆ ಗಂಭೀರವಾಗುತ್ತವೆ. ಎದೆಯಲ್ಲಿ ಹರೆಯದ ಹುಮ್ಮಸ್ಸು ಬತ್ತಿ, ಅದಾವದೋ ಉಮ್ಮಳದ ಕುದಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಕಾರಣವೇನು? ಆ ಹೊತ್ತಿಗೆ ಕವಿ ಮೂವತ್ತೈದರ ನಡು ದಾಟಿದ್ದು ಜೀವನ ವಿಚಾರಗಳ ಮೇಲೆ ವಯಸ್ಸು ಸ್ವಾಭಾವಿಕವಾದ ಪರಿಣಾಮ ಬೀರಿತೆ? ಸಾನೆಟ್ಟುಗಳು ನುಡಿಯುವಂತೆ ಸ್ನೇಹಪ್ರೇಮಗಳಲ್ಲಿ ಭ್ರಮನಿರಸನವಾಗಿ 'ಚೆನ್ನಿಗ' ಮತ್ತು 'ಕಪ್ಪು ಹೆಣ್ಣು' ಬಿತ್ತಿದ್ದ ಕಹಿ ಮೊಳೆಯಿತೆ ? ಜೊತೆಗೆ ಅಂದಿನ ರಾಜಕೀಯ ವಾತಾವರಣದಲ್ಲಿ ಎದ್ದಿದ್ದ ಎಸೆಕ್ಸನ ಹಗರಣದ ಸುಂಟರಗಾಳಿಯಲ್ಲಿ ಕವಿಯೂ ಸಿಕ್ಕುಬಿದ್ದನೆ? ಸ್ಪಷ್ಟವಾಗಿ ತಿಳಿಯದು.

## ಎಸೆಕ್ಸನ ಹಗರಣ

ಎಸೆಕ್ಸನ ಅರ್ಲ್, ರಾಬರ್ಟ್ ಡಿವೆರೂ, ಎಲಿಜಬೆತಳ ಆಸ್ಥಾನದ ಪ್ರಮುಖರಲ್ಲೊಬ್ಬ. ಆತ ತರುಣ, ಗರ್ವಿ, ಮಹತ್ವಾಕಾಂಕ್ಷಿ. ಅವನದು ಕೆಚ್ಚಿನ ಬಂಡಾಯದ ರಕ್ತ. ಎಲಿಜಬೆತ್ ಮುದಿ ಅವಿವಾಹಿತೆ; ಅವಳಿಗೂ ಎಸೆಕ್ಸನಿಗೂ ಮೂವತ್ತು ವರ್ಷಗಳ ಅಂತರ! ಮೊದ ಮೊದಲು ಅವಳಿಗೆ ಅವನಲ್ಲಿ ವಿಶೇಷವಾದ ಒಲವಿತ್ತು. ಅವನು ಅವಳನ್ನು ಕಾಣುತ್ತಿದ್ದುದೂ ರಾಣಿಯಂತಲ್ಲ! ಆದರೆ ಬರುಬರುತ್ತ ಸಂಬಂಧ ಹದಗೆಟ್ಟಿತು. ಎಸೆಕ್ಸ್ ಬೇರೆ ಮದುವೆಯಾದದ್ದೇ ಇದಕ್ಕೆ ಮೂಲಕಾರಣ. ರಾಣಿ ಅವನನ್ನು ಕಡೆಗಣಿಸಲಾರಂಭಿಸಿದಳು. ಅವನು ಅವಳ ವಿರುದ್ಧ ಪಕ್ಷ ಕಟ್ಟಿದ. ಎಸೆಕ್ಸನ ಚೇಲರಲ್ಲಿ ಷೇಕ್‌ಸ್ಪಿಯರನ ಆಶ್ರಯದಾತ ಸೌತ್ಯಾಂಪ್ಟನನೂ ಒಬ್ಬ ಮುಖ್ಯಸ್ಥ. ಅವನು ಎಸೆಕ್ಸನ ತಂಗಿಯನ್ನೇ ಕೂಡಿಕೊಂಡು ಮುಂದೆ ಅವಳು ಗರ್ಭಿಣಿಯೆಂದು ಗೊತ್ತಾದಾಗ ಮದುವೆಯಾದ. ರಾಣಿಗೆ ಇದು ಸೇರಿಕೆಯಾಗದೆ ಸೌತ್ಯಾಂಪ್ಟನ್‌ನನ್ನು ಕೆಲಕಾಲ ಸೆರೆಗೆ ತಳ್ಳಿಸಿದ್ದಳು. 1599ರಲ್ಲಿ ಐರ್ಲಂಡ್‌ನಲ್ಲಿ ಟೈರಾನ್ ಎಂಬುವನು ದಂಗೆಯೆದ್ದಾಗ ಅವನ ಹುಟ್ಟಡಗಿಸಲೆಂದು ಹೋದ ಎಸೆಕ್ಸ್ ಸಂಧಿ ಮಾಡಿಕೊಂಡು ಹಿಂದಿರುಗಿದ. ಇದು ಅವನ ಪತನಕ್ಕೆ ದಾರಿ ಮಾಡಿಕೊಟ್ಟಿತು.

ಷೇಕ್ಸ್ಪಿಯರಿಗೆ ಸೌತ್ಯಾಂಪ್ಟನನ ಮುಖಾಂತರ ಎಸೆಕ್ಸನ ಪರಿಚಯವಾಗಿ ಅವರ ಬಂಡಾಯದ ಚಟುವಟಿಕೆಯಲ್ಲಿ ಸಹಾನುಭೂತಿ ಆಸಕ್ತಿಗಳೂ ಬೆಳೆದಿದ್ದವೆಂದು ತೋರುತ್ತದೆ. ಹಿಂದಿನ ಸಂಧಿಕಾಲದ 'ಹೆನ್ರಿ ದಿ ಫಿಫ್ತ್'ನ ಕೊನೆಯ ಅಂಕದ ಮೇಳದಲ್ಲಿ ಎಸೆಕ್ಸ್ ಐರ್ಲಂಡಿನಿಂದ ವಿಜಯಿಯಾಗಿ ಹಿಂದಿರುಗುವ ವೈಭವಯುತ ದೃಶ್ಯವನ್ನು ಕಲ್ಪಿಸಿಕೊಂಡು ಹಾಡಿದ್ದ. ಆದರೆ ಅವನು ಸೋತು ಸಂಧಿಮಾಡಿಕೊಂಡು ಬಂದದ್ದು ಎಲ್ಲರಂತೆ ಕವಿಯನ್ನೂ ಕ್ಷೋಭೆಯಲ್ಲಿ ಮುಳುಗಿಸಿರಬೇಕು. ಅವನ ಕವಿಸಹಜವಾದ ಒಳಗಣ್ಣು ಎಸೆಕ್ಸನ ಪತನವನ್ನು ಮುಂಗಂಡಂತೆ ಅದೇ ಸುಮಾರಿಗೆ 'ಜೂಲಿಯಸ್ ಸೀಸರ್'ನ ಸೃಷ್ಟಿಯಾಯಿತು. ಅದರ ವಸ್ತು ಬಂಡಾಯ, ರಾಜಕೀಯ ಆದರ್ಶವಾದಿಯೊಬ್ಬನ ದುರಂತತೆ; ಅದರ ನಾಯಕ ದೊರೆ ಸೀಸರನಲ್ಲ, ದಂಗೆಯ ಮುಂದಾಳಾದ ಬ್ರೂಟಸ್!

ಕವಿ ರೋಮಿನ ಇತಿಹಾಸವನ್ನು ಆಶ್ರಯಿಸಿ ಬರೆದ ಮೂರು ನಾಟಕಗಳಲ್ಲಿ 'ಜೂಲಿಯಸ್ ಸೀಸರ್' ಮೊದಲನೆಯದು; ಉಳಿದವು ಇದೇ ಕಾಲಾವಧಿಯ ಕೊನೆಗೆ ಬಂದ 'ಆ್ಯಂಟನಿ ಅಂಡ್ ಕ್ಲಿಯೊಪಾಟ್ರ' ಮತ್ತು 'ಕೊರಿಯೊಲೇನಸ್'ಗಳು.

'ಜೂಲಿಯಸ್ ಸೀಸರ್'ನಲ್ಲಿ ಷೇಕ್ಸ್ಪಿಯರನ ದುರಂತದೃಷ್ಟಿ ಇನ್ನೂ ಬೌದ್ಧಿಕ ಸ್ತರದಲ್ಲಿಯೇ ಇದೆಯೆನ್ನಬೇಕು. ಅದು ಎದೆಯ ಆಳಕ್ಕಿಳಿದು ಇಡೀ ಬದುಕಿಗೇ ಕತ್ತಲು ಕವಿಸಿದುದು ಎರಡು ವರ್ಷಗಳ ನಂತರ; 1601ರ ಆಚೆಗೆ. (ಈ ನಡುವೆ ಹರ್ಷನಾಟಕಗಳಿಗೆ ಕಳಶವಿಡುವ ಆ ಪ್ರಭೇದದ ಸಿದ್ಧಕೃತಿಗಳಾದ 'ಆ್ಯಸ್ ಯು ಲೈಕ್ ಇಟ್' ಮತ್ತು 'ಟ್ವೆಲ್ಫ್ತ್ ನೈಟ್'ಗಳ ರಚನೆಯಾಯಿತು.) ಐರ್ಲಂಡಿನಿಂದ ಹಿಂದಿರುಗಿದ ಮೇಲೆ ಅರ್ಧ ಅಜ್ಞಾತದಲ್ಲಿದ್ದ ಎಸೆಕ್ಸ್ ಆ ವರ್ಷ ಎಲಿಜಬೆತಳ ವಿರುದ್ಧ ಬಹಿರಂಗವಾಗಿ ದಂಗೆಯೆದ್ದು ಗಲ್ಲಿಗೆ ತಲೆಕೊಟ್ಟ. ಸೌತ್ಯಾಂಪ್ಟನ್‌ನಿಗೂ ಅದೇ ಗತಿಯಾಗುವುದರಲ್ಲಿದ್ದುದು ಹೇಗೋ ತಪ್ಪಿ ಆಜೀವ ಶಿಕ್ಷೆಯಲ್ಲಿಯೇ ಮುಗಿಯಿತು. ಈ ಸಂಗತಿಗಳು ಹಾಗೂ ಆ ವರ್ಷ ಉಂಟಾದ ತಂದೆಯ ಮರಣ ಕವಿಯ ದುರಂತದೃಷ್ಟಿಯನ್ನು ಘನಿಸಿ, ಮಹೋನ್ನತ ರುದ್ರನಾಟಕಗಳಿಗೆ ಎಡೆಮಾಡಿಕೊಟ್ಟವೇನೊ.

## ರುದ್ರನಾಟಕಗಳ ದೃಷ್ಟಿ

ಷೇಕ್ಸ್ಪಿಯರ್ ಇದುವರೆಗೆ ಮನುಷ್ಯನನ್ನು ಹೊರಗಿನಿಂದ ಕೇವಲ ಸಾಮಾಜಿಕ ಜೀವಿಯನ್ನಾಗಿ, ರಾಜಕೀಯ ಜೀವಿಯನ್ನಾಗಿ ಕಂಡಿದ್ದ. ಈಗ ಅವನ ಆಳದ ಒಳಕ್ಕಿಳಿದು ಅವನ ಸ್ವಭಾವದ ದೃಷ್ಟಿಕೋನದಿಂದಲೇ ಅವನನ್ನು ಆಧ್ಯಾತ್ಮಿಕವಾಗಿ ನೋಡಿದ; ವಿಶ್ವದ ಮುಂದೆ ಅವನನ್ನು ನಿಲ್ಲಿಸಿ ಅಳೆದ. ಅವನ ದುಸ್ವಭಾವವೇ ಹೇಗೆ ಅವನ ಪ್ರಾರಬ್ಧವಾಗುವುದೆಂಬುದನ್ನು ತೋರಿಸಿದ. ಅನಿಶ್ಚಯತೆ, ಅಸೂಯೆ, ಮಹತ್ವಾಕಾಂಕ್ಷೆ, ವಿವೇಕಹೀನತೆ, ಸ್ತ್ರೀವ್ಯಾಮೋಹ, ಅಹಂಕಾರಗಳಂತಹ ಮಾನವ ಸ್ವಭಾವದಲ್ಲಿನ ಹುಳುಕುಗಳು ಎಲ್ಲೆ ಮೀರಿದಾಗ, ಅವುಗಳ ಅಮಲಿನಲ್ಲಿ ಮನುಷ್ಯ ಆತ್ಮ ಕಳೆದುಕೊಂಡು, ಆತ್ಮೀಯರ ಮೇಲೆಯೇ ಕೈಯೆತ್ತಿದಾಗ ಕೊಲೆ ರಕ್ತಪಾತಗಳಾಗುತ್ತವೆ; ಮಾನವ ವ್ಯವಸ್ಥೆ ಕ್ಷೋಭೆಗೆ ಸಿಕ್ಕು ತಲೆಕೆಳಗಾಗಿ ಕ್ಷತಿಯುಂಟಾಗುತ್ತದೆ; ಕೊನೆಗೆ ದುರಂತ ಕಟ್ಟಿಟ್ಟ ಬುತ್ತಿ ಎಂಬುದನ್ನು ಕಂಡುಕೊಂಡು, ಆ ಸತ್ಯಕ್ಕೆ ಕಲೆಯ ಅಭಿವ್ಯಕ್ತಿ ಕೊಟ್ಟ. ಇದು ರುದ್ರನಾಟಕಗಳ ನೆಲೆ

ಗಟ್ಟಾಯಿತು. ಷೇಕ್ಸ್‌ಪಿಯರ್ ಹೀಗೆ ಮನುಷ್ಯಸ್ವಭಾವವನ್ನು ದುರಂತದ ಹೇತುವನ್ನಾಗಿ ಮಾಡಿದರೂ ಮಾನವ ವ್ಯಾಪಾರಗಳಿಂದ ದೈವವನ್ನು ಪೂರಾ ದೂರ ತಳ್ಳಲಿಲ್ಲ. ಅದು 'ಮೆಕ್‌ಬೆತ್'ನ ಮರುಳುಗಳಾಗಿಯೊ, 'ಹ್ಯಾಮ್ಲೆಟ್'ನ ಪ್ರೇತವಾಗಿಯೊ, ಇಯಾಗೊನಂತೆ ಖಳನಾಗಿಯೊ, ಕ್ಲಿಯೊಪಾಟ್ರಳಂತೆ ಪ್ರಲೋಭನೆಯಾಗಿಯೊ ರುದ್ರನಾಟಕಗಳಲ್ಲಿ ಪಾತ್ರತಾಳಿ ಮನುಷ್ಯನ ಪರೀಕ್ಷಕ ಶಕ್ತಿಯಾಗುತ್ತದೆ. 'ನಮ್ಮ ದುರ್ಗುಣ ಘನಿಸಿದಾಗ ವಿವೇಕಿಯಾದ ದೈವ ನಮ್ಮ ಕಣ್ಣನ್ನು ಕುರುಡಾಗಿಸಿ ನಮ್ಮ ತಪ್ಪಿಗೆ ನಾವೇ ಒಲಿಯುವಂತೆ ಮಾಡಿ, ನಾವು ವಿನಾಶದತ್ತ ನಡೆಯುವುದನ್ನು ನೋಡಿ ನಗುತ್ತದೆ' ಎಂಬ ಆ್ಯಂಟನಿಯ ಚಿಂತನೆ, 'ದೈವ ನ್ಯಾಯಪರ; ನಮ್ಮ ಪ್ರಿಯ ದುರ್ಗುಣಗಳನ್ನೇ ತನ್ನ ದಂಡಿಗೆಯನ್ನಾಗಿ ಮಾಡಿಕೊಂಡು ನಮ್ಮನ್ನು ಕಾಡುತ್ತದೆ' ಎಂಬ 'ಕಿಂಗ್ ಲಿಯರ್'ನಲ್ಲಿನ ಮಾತು ಅವನ ರುದ್ರನಾಟಕಗಳೆಲ್ಲಕ್ಕೂ ವ್ಯಾಖ್ಯೆಯಂತಿವೆ. 'ಮೆಕ್‌ಬೆತ್', 'ಲಿಯರ್'ಗಳಲ್ಲಿಯಂತೂ ಷೇಕ್ಸ್‌ಪಿಯರ್ ಇದ್ದಿದ್ದೂ ಮೇಲೇರಿದ; ಭೂಮಿಯಿಂದ ಆಕಾಶಕ್ಕೂ ಕಣ್ಣು ಹೊರಳಿಸಿ, ಮನುಷ್ಯನಂತೆ ದೈವದ ಮೇಲೆಯೂ ತೀರ್ಪಿತ್ತ. ಅವು ವಿಶ್ವಾತ್ಮಕ ರುದ್ರನಾಟಕ (Cosmic tragedies) ಗಳೆನಿಸಿಕೊಂಡವು.

ಷೇಕ್ಸ್‌ಪಿಯರ್ ಇವುಗಳಲ್ಲಿ ಮುಟ್ಟಿದ ಎತ್ತರ ಇದುವರೆಗೆ ಮಾನವನಿಗೆ ಸಾಧಿಸಿರುವ ಸಾಹಿತ್ಯನಿರ್ಮಾಣಶಕ್ತಿಯ ಉತ್ತುಂಗ ಶೃಂಗ, ಉನ್ನತೋನ್ನತ ಶಿಖರದ ತುತ್ತತುದಿ.

### ನಡುವಿನ ಕವಲು : ಕಟುಹರ್ಷಕಗಳು

ಈ ಅವಧಿಯಲ್ಲಿಯೇ ಕೆಲ ಕಾಲ ಷೇಕ್ಸ್‌ಪಿಯರನ ಕಲೆ ಕವಲೊಡೆದು ವ್ಯಂಗ್ಯದ ಬೆನ್ನು ಹತ್ತಿತ್ತು. ಕಟುಹರ್ಷಕಗಳು (Bitter comedies), ಸಮಸ್ಯಾತ್ಮಕ ನಾಟಕಗಳು ಎನಿಸಿದ 'ಟ್ರಾಯ್‌ಲಸ್ ಅಂಡ್ ಕ್ರೆಸಿಡ', 'ಆಲ್ಸ್ ವೆಲ್', 'ಮೆಷರ್ ಫರ್ ಮೆಷರ್'ಗಳು ಹುಟ್ಟಿದವು. ಅವುಗಳಲ್ಲಿನ ಕವಿದೃಷ್ಟಿ, ಉದ್ದೇಶ ಸ್ಪಷ್ಟವಿಲ್ಲ; ಹಾಸ್ಯದಲ್ಲಿರುವುದು ಕಹಿ, ನಿರಾಶೆ, ವ್ಯಂಗ್ಯ. ಇವು ನಾಟಕಾಂತ್ಯದಲ್ಲಷ್ಟೇ ಹರ್ಷಕಗಳು ; ಒಟ್ಟಿನ ಗುಣಧರ್ಮದಿಂದಲ್ಲ.

### 1608ರ ಅನಂತರದ ಶಾಂತಿಯ ಮುಚ್ಚಂಜೆ

'ಕಿಂಗ್ಸ್ ಮೆನ್' ಮಂಡಳಿ 1608ರಲ್ಲಿ ಗ್ಲೋಬ್‌ನೊಂದಿಗೆ ಬ್ಲ್ಯಾಕ್ ಫ್ರೈಯರ್ಸ್‌ನ ಒಡೆತನವನ್ನೂ ಪಡೆದಾಗಿನಿಂದ ಹಿಡಿದು 1613ರಲ್ಲಿ ಷೇಕ್ಸ್‌ಪಿಯರ್ ತನ್ನ ಕೊಟ್ಟಕೊನೆಯ ಸ್ವತಂತ್ರಕೃತಿಯಾದ 'ದಿ ಟೆಂಪೆಸ್ಟ್' ಅನ್ನು ರಚಿಸುವವರೆಗಿನದು ಅವನ ಸಾಹಿತ್ಯ ಸೃಷ್ಟಿಯ ಅಂತಿಮ ಘಟ್ಟ. ಇದು ಶಾಂತಿಯ ಮುಚ್ಚಂಜೆ; ಅರಿವು ಮಾಗಿದ ಮುಪ್ಪು. ಈ ಕಾಲದ ಕೃತಿಗಳು ಇವು:

| ರೊಮಾನ್ಸ್‌ಗಳು | ಚಾರಿತ್ರಿಕ |
|---|---|
| ಪೆರಿಕ್ಲಿಸ್ | ಹೆನ್ರಿ ದಿ ಏಟ್ತ್ |
| ಸಿಂಬೆಲೈನ್ | ರುದ್ರ |
| ದಿ ವಿಂಟರ್ಸ್ ಟೇಲ್ | ಟು ನೋಬಲ್ ಕಿನ್ಸ್‌ಮೆನ್ |
| ದಿ ಟೆಂಪೆಸ್ಟ್ | |

ಹಿಂದಿನ ಏಳೆಂಟು ವರ್ಷಗಳ ಕಾಲ ಮಾನವ ದೌರ್ಬಲ್ಯಗಳನ್ನು ಕಂಡು ಮರುಗಿ, ರೇಗಿ, ರೊಚ್ಚಿಗೆದ್ದು, ಬಟ್ಟಬಯಲಿನಲ್ಲಿ ಮಳೆ ಬಿರುಗಾಳಿಗಳಿಗೆ ಮೈಗೊಟ್ಟು ನಿಂತು ವಿಧಿಯ ವಿರುದ್ಧವೂ ದನಿಯೆತ್ತಿ ಹುಚ್ಚನಂತೆ ಗುಡುಗಾಡಿದ್ದುದು ಕವಿಗೆ ವ್ಯರ್ಥ ಹಾಗೂ ಅರ್ಥಶೂನ್ಯ ವೆನಿಸಿತೇನೊ, ಅವನ ಮನಸ್ಸು ಅಂತರ್ಮುಖಿಯಾಗಿ ಬದುಕು-ಸಾವು, ಸುಖ-ದುಃಖಗಳ ಪುನರಾವಲೋಕನ ಮಾಡಿತೇನೊ, ಜೊತೆಗೆ ಅವನ ಶಿಷ್ಯರೇ ಆದ ಜೋಮಾಂಟ್ ಮತ್ತು ಫ್ಲೆಚರರು ತಮ್ಮ 'ಫಿಲಾಸ್ಟರ್'ನ ಮೂಲಕ ನಾಟಕಸಾಹಿತ್ಯದಲ್ಲಿ ಹೊಸ ಬಗೆ ಯನ್ನು ಸೃಷ್ಟಿಸಿ ಜನಾಭಿರುಚಿಯಲ್ಲಿ ಬದಲಾವಣೆ ತಂದುದೂ ಅವನ ಮೇಲೆ ಸಾಕಷ್ಟು ಪರಿಣಾಮ ಮಾಡಿತೇನೊ, ಷೇಕ್‌ಸ್ಪಿಯರನ ಬಗೆಯೂ ಬದಲಾಯಿತು. ಅವನೊಳಗೆ ರಸ ವಿರಸಗಳು ಬೆರೆತು ಸಮರಸವಾದವು; ಜೀವನದೃಷ್ಟಿ ಕಳಿತು ಹಣ್ಣಾಯಿತು; ವಿಧಿಯ ನ್ಯಾಯತತ್ಪರತೆಯಲ್ಲಿ ಈಗ ಅವನಿಗೆ ನಂಬಿಕೆ ಮೂಡಿತು; ಯೌವನದಲ್ಲಿ ಗೆಲವಿನಿಂದ ನಕ್ಕಿದ್ದ ಮುಖ, ನಡುಗಾಲದಲ್ಲಿ ವ್ಯಂಗ್ಯದಿಂದ ಸಿಂಡರಿಸಿ, ದುಃಖಕೋಪಗಳಿಂದ ಕನಲಿ ಕಿಡಿಕಾರಿದ್ದ ಮುಖ ಈಗ ಋಷಿಪ್ರಸನ್ನತೆಯ ಹೊಸದೊಂದು ಹೊಳಪಿನಿಂದ ಬೆಳಗಿತು. 'ರೊಮಾನ್ಸ್', 'ಟ್ರ್ಯಾಜಿ-ಕಾಮಿಡಿ' ಎಂಬ ಪ್ರಭೇದಾಭಿಧಾನಗಳಿಂದ ಕರಸಿಕೊಂಡ 'ಪೆರಿಕ್ಲಿಸ್', 'ಸಿಂಬೆಲೈನ್', 'ದಿ ವಿಂಟರ್ಸ್ ಟೇಲ್', 'ದಿ ಟೆಂಪೆಸ್ಟ್' ನಾಟಕಗಳು — ಅಲ್ಲ, ಅಸಂಭವನೀಯ ಸುಖಸ್ವಪ್ನಗಳು! — ಅವತರಿಸಿದವು. (ಅನಂತರದ 'ಹೆನ್ರಿ ದಿ ಏಟ್ತ್', 'ಟು ನೋಬಲ್ ಕಿನ್ಸ್‌ಮೆನ್' ಫ್ಲೆಚರನ ಸಹಕರ್ತೃತ್ವದಲ್ಲಿ ರಚಿತವಾದವು. ಅವನ್ನು ಈ ಎಣಿಕೆಯಿಂದ ಬಿಡಬಹುದು.) ಕೊನೆಯ ಎರಡಕ್ಕಂತೂ ಸ್ಟ್ರ್ಯಾಟ್‌ಫರ್ಡಿನ ಹಸಿರೂ ಏವನ್ ನದಿಯ ನೀರೂ ಪುಣ್ಯಾವರ್ಜನೆ ಮಾಡಿದವು. ಇವುಗಳಲ್ಲೆಲ್ಲ ವಿಷ ಅಮೃತ; ಸಿಡಿಲು ಹೂ. ಮೊದಮೊದಲು ರಾಜ್ಯಹಾನಿ, ಬಂಧುನಷ್ಟ, ಅಗಲಿಕೆ, ಕಣ್ಣೀರು, ರುದ್ರ; ಕೊನೆಗೆ ಪುನರ್ಮಿಲನ, ಪುನರ್ಲಾಭ, ಸುಖ, ಶಾಂತಿ, ದಿವ್ಯ. ಇವುಗಳ ಹದ ನಮ್ಮ 'ಶಾಕುಂತಲ'ದ ಹದ. ಆ ಕಲಾಕೃತಿಗೆ ಗಯಟೆ ಅರ್ಪಿಸಿದ 'ಮರ್ತ್ಯ ಸ್ವರ್ಗಗಳು ಇಲ್ಲಿ ಒಂದು ಹೆಸರಾಗಿ ಕೂಡಿದವೊ' ಎಂಬ ಪ್ರಶಸ್ತಿಯ ಹಾರವನ್ನೇ ಇವಕ್ಕೂ ಒಪ್ಪಿಸಬಹುದೇನೊ. ಈ ಹೊಸ ಹದಕ್ಕೆ ಒಗ್ಗಿದಂತೆ ಕಾವ್ಯಶೈಲಿಯಲ್ಲಿಯೂ ಮಾರ್ಪಾ ಡಾಯಿತು. ಅದಕ್ಕೆ ಅಣುವಿನಲ್ಲಿ ಮಹತ್ತನ್ನು ಬಣ್ಣಿಸುವ ಒಂದು ಹೊಸ ಬಿಗಿ, ಮೇಲೆ ಒಂದು ಹೊಸ ಗೇಯತೆ, ಲಯ ಒದಗಿದವು.

ಷೇಕ್‌ಸ್ಪಿಯರನ ಅರ್ಧ ಶತಮಾನದ ಐಹಿಕ ಜೀವನ, ಅದರರ್ಧದಷ್ಟರ ಕಾವ್ಯ ಜೀವನ ಈ ಪ್ರಪೂರ್ಣತೆಯ ಸಂಜೆಗೆಂಪಿನ ಹೊಳಪಿನಲ್ಲಿ ಕೊನೆಗೊಂಡವು. 'ದಿ ಟೆಂಪೆಸ್ಟ್' ನಾಟಕದ ಪ್ರಾಸ್ಪೆರೊನೊಂದಿಗೆ ಅವನು ತನ್ನ ಆಟ ಮುಗಿಸಿ, ಕಾವ್ಯದ ಮಂತ್ರದಂಡ ಕವಚಗಳನ್ನು ಸಮುದ್ರದ ಆಳಕ್ಕೆಸೆದು ತೆರೆಯ ಮರೆ ಸೇರಿದ.

## ಸಾಧನೆ

ಷೇಕ್‌ಸ್ಪಿಯರ್ ಸತ್ತು ಇಂದಿಗೆ ಮೂರೂವರೆ ಶತಮಾನಗಳು ಕಳೆದಿವೆ. ಇದು ಮಾನವ ಇತಿಹಾಸದಲ್ಲಿ ಅಲ್ಪ ಕಾಲವೇನಲ್ಲ. ಒಬ್ಬ ಕವಿಯ ಅಥವಾ ಒಂದು ಸಾಹಿತ್ಯ ಸಂಪ್ರದಾ ಯದ ಮಾತಿರಲಿ, ಕೆಲವೊಮ್ಮೆ ರಾಷ್ಟ್ರಗಳು ನಾಗರಿಕತೆಗಳು ಸಹ ಇಷ್ಟು ದೀರ್ಘಕಾಲ

ಬಾಳಿದುದಿಲ್ಲ. ಈ ಮೂರೂವರೆ ಶತಮಾನಗಳಲ್ಲಿ ಕವಿಗಳು ಬಂದಿದ್ದಾರೆ, ಹೋಗಿದ್ದಾರೆ. ಸಾಹಿತ್ಯದಲ್ಲಿ ಮಾರ್ಗಗಳು ಹುಟ್ಟಿವೆ, ಸತ್ತಿವೆ. ಹಗಲ ಬೆಳಸು ಸಂಜೆಗೆ ಮುಗ್ಗಿದೆ. ಆದರೆ ಈ ಕವಿ ಒಬ್ಬ ಮಾತ್ರ ಹೊಸತು-ಹಳತು, ಬದುಕು-ಸಾವುಗಳನ್ನು ಮೆಟ್ಟಿ, ಮೀರಿ, ಚಿರಾಯುವಾಗಿ ಬೆಳಗಿದ್ದಾನೆ. ಅದೂ ತಾನು ಹುಟ್ಟಿದ ನಾಡು, ಆಡಿದ ನುಡಿಗಳಲ್ಲಿಯಷ್ಟೇ ಅಲ್ಲ; ಇಡೀ ಜಗತ್ತಿನಲ್ಲಿ, ಜಗತ್ತಿನ ಬಹುತರ ಎಲ್ಲ ಭಾಷೆಗಳಲ್ಲಿ, ಲೋಕದೀಪ್ತಿಯಾಗಿ. ಅವನ ಕೃತಿಗಳ ಪಠನ, ವಾಚನ, ಅಭ್ಯಾಸ, ಚರ್ಚೆ, ವಿಮರ್ಶೆ, ಪ್ರಶಂಸೆಗಳು ಒಂದು ಉದ್ಯೋಗವೆನಿಸಿಕೊಳ್ಳುವಷ್ಟರಮಟ್ಟಿಗೆ ಬೆಳೆದಿವೆ. ಕಾಲ ಬದಲಾದಂತೆ ಅವನ್ನು ಹೊಸ ಹೊಸ ಬೆಳಕಿನಲ್ಲಿ ನೋಡಿ, ಅವುಗಳಿಂದ ಹೊಸ ಹೊಸ ಅರ್ಥ ತೆಗೆಯಲಾಗುತ್ತಿದೆ. ಸುಖ ದಂತೆ ಕಷ್ಟದಲ್ಲೂ ಲೋಕ ಅವನಿಂದ ಬಲ ಪಡೆದದ್ದುಂಟು. ಎರಡನೆ ಮಹಾಯುದ್ಧದಲ್ಲಿ ಬರ್ಲಿನ್ ನಗರ ಉರುಳುವ ಹಿಂದಿನ ದಿನ ಅಲ್ಲಿ ಅವನ ನಾಟಕ ನಡೆದಿತ್ತಂತೆ! ಈ ಎಲ್ಲ ಮಹತ್ತ್ವ, ಚಿರಂತನತೆಗಳ ಗುಟ್ಟೇನು? ಷೇಕ್‌ಸ್ಪಿಯರ್ ಪರಿಪೂರ್ಣನೆಂದೆ? ಅಲ್ಲ, ಖಂಡಿತವಾಗಿಯೂ ಅವನು ಪರಿಪೂರ್ಣನಲ್ಲ. ಅವನ ಕಾಲದಿಂದಲೂ ರಸಿಕರೂ ವಿಮರ್ಶ ಕರೂ ಅವನ ಕುಂದುಕೊರತೆಗಳನ್ನು ಗಮನಿಸದೆ ಬಿಟ್ಟಿಲ್ಲ: ಅವನ ಕೃತಿಗಳಲ್ಲಿ ಒಂದು ಸಂವಿಧಾನದೊಂದಿಗೆ ಹಲವು ಉಪ-ಸಂವಿಧಾನಗಳು ಬೆರೆತು ತೊಡಕುಂಟಾಗುತ್ತದೆ; ಗಂಭೀರದಲ್ಲಿ ಹಾಸ್ಯ, ರುದ್ರದಲ್ಲಿ ಹರ್ಷಗಳು ಬೆರೆತು ರಸಾಭಾಸವಾಯಿತೆಂಬ ಭಾಸವಾಗು ತ್ತದೆ; ಕ್ರಿಯೆಯಲ್ಲಿ, ಒಮ್ಮೊಮ್ಮೆ ಪಾತ್ರದ ಬೆಳವಣಿಗೆಯಲ್ಲಿ ಸಹ ಐಕ್ಯ ತಪ್ಪುತ್ತದೆ; ನಾಟಕದ ಕಟ್ಟುಕಟ್ಟಳೆ, ಸೂತ್ರ, ನೇಮಗಳೆಂದರೆ ನಿಕೃಷ್ಟ; ಮುಕ್ತಾಯ ಭಾವಾತಿರೇಕ, ನಾಟಕೀಯತೆಗಳ ಭಾರದಿಂದ ಬೀಗುತ್ತದೆ; ಆಯಿತೆನ್ನುವ ಮುನ್ನ ಕವಿ ತನ್ನ ಕೃತಿಗಳಿಗೆ ಕೊನೆಯ ಒಪ್ಪ ಕೊಡಲು ಮರೆತನೆನಿಸುತ್ತದೆ, ಇತ್ಯಾದಿ. ನಿಜ, ಇವೆಲ್ಲವೂ ಕೊರತೆಗಳೇ. ಮಿಂಚು ಡೊಂಕೆಯೇ! ಆದರೆ ಅದರಲ್ಲಿ ನೇರ ಬಯಸಿದವರಾರು? ಎಲ್ಲೋ ಅಲ್ಲೊಬ್ಬ ವಾಲ್ತೇರ್, ಇಲ್ಲೊಬ್ಬ ಷಾ, ಟಾಲ್‌ಸ್ಟಾಯರು ಕೊಂಕು ನುಡಿದಿದ್ದರೂ (ಅವರು ಸಹ ಅವನ ಪ್ರತಿಭೆಯನ್ನು ಪೂರ್ಣವಾಗಿ ಅಲ್ಲಗಳೆದವರಲ್ಲ) ಒಟ್ಟಿನ ಜಗತ್ತು ಅವನಿದ್ದಂತೆಯೇ ಒಪ್ಪಿ, ಅವನಿಗೆ ಅಪ್ರತಿಮತೆ, ಅದ್ವಿತೀಯತೆಗಳ ಪಟ್ಟ ಕಟ್ಟಿ ಪೂಜಿಸಿದೆ. ಈ ಮಹತ್ತಿಗೆ ಕಾರಣವಾದ ಅವನ ಪ್ರತಿಭೆ, ಸಾಧನೆಗಳಲ್ಲಿನ ಕೆಲವು ಮುಖ್ಯರೇಖೆಗಳಷ್ಟನ್ನು ಮಾತ್ರ ಗುರುತಿಸಿ ಈ ಅವಲೋಕನವನ್ನು ಮುಗಿಸಬಹುದು.

## ಷೇಕ್‌ಸ್ಪಿಯರನ ಮಾನವಪ್ರೇಮ

ಷೇಕ್‌ಸ್ಪಿಯರ್ ನಮಗೆ ಹಲವಾರು ಕಾರಣಗಳಿಂದ ಪ್ರಿಯ. ಅವುಗಳಲ್ಲಿ ಅವನ ಮಾನವ ಪ್ರೇಮ ಮೊದಲನೆಯದೆನ್ನಬಹುದು. ಪ್ರಾಯಶಃ ಇದು ನಮಗೆ ತಿಳಿಯದೆಯೇ ನಾವು ಅವನಲ್ಲಿ ಕಂಡು ಮೆಚ್ಚಿಕೊಂಡ ಗುಣವೇನೊ! ತಂದೆ, ನಲ್ಲರ ಹೊರತು ಮೂರನೆಯ ದೆಂಬ ಮನುಷ್ಯಪ್ರಾಣಿಯನ್ನೇ ನೋಡದೆ ಬೆಳೆದ 'ದಿ ಟೆಂಪೆಸ್ಟ್'ನ ಮಿರ್ಯಾಂಡ ಮೊದಲ ಸಲ ಒಟ್ಟಾಗಿ ಜನರ ಗುಂಪನ್ನು ನೋಡಿದಾಗ ಅವರು ತಂದೆಯ ಶತ್ರುಗಳಾಗಿದ್ದವರಾದರೂ 'ಓ! ಇಲ್ಲಿ ಎಷ್ಟೊಂದು ಒಳ್ಳೆಯ ಜನರಿದ್ದಾರೆ! ಈ ಮಾನವ ಜಗತ್ತು ಎಷ್ಟು ಸುಂದರ!' ಎಂದು ಮುಗ್ಧತೆಯ ಉದ್ಗಾರ ತೆಗೆಯುತ್ತಾಳೆ. ಷೇಕ್‌ಸ್ಪಿಯರ್ ಕಂಡದ್ದು, ತೋರಿಸಿದ್ದು

ಮಿರ್ಯಾಂಡ ಕಂಡ ಸುಂದರವಾದ 'ದಿಟ್ಟ ಹೊಸ ಜಗತ್ತನ್ನು'! ಷೇಕ್‌ಸ್ಪಿಯರ್ ಮನುಷ್ಯನಲ್ಲಿ ಇಟ್ಟಿದ್ದ ವಿಶ್ವಾಸ ಅಚಲ, ಅಗಾಧ. ಅವನನ್ನು ಮೇಲೆತ್ತಿ ಹಿಡಿದ. ಅವನ ದೊಡ್ಡ ಗುಣ ಗಳಿಗಾಗಿ ಕೊಂಡಾಡಿದ, ಸಣ್ಣ ಗುಣಗಳನ್ನು ಸಹಾನುಭೂತಿಯಿಂದ ಕಂಡು ಮರುಗಿದ. ಅವನೊಡನೆ ನಕ್ಕ, ಅತ್ತ. ಆದರೆ ಅವನನ್ನು ಹೀನಾಯವಾಗಿ ಕಾಣಲಿಲ್ಲ, ಅಣಕಿಸಲಿಲ್ಲ. ಎಂತಲೇ ಕೇವಲ ಪ್ರತೀಕಗಳಾಗಿ ಸೃಷ್ಟಿಗೊಂಡ ಮೂರನೆ ರಿಚರ್ಡ್, ಇಯಾಗೊರಂತಹ ಒಬ್ಬೊಬ್ಬರ ಹೊರತು ಅವನ ಹೆಚ್ಚಿನ ಪಾತ್ರಗಳು ನಮಗೆ ಪ್ರಿಯ. ಫಾಲ್‌ಸ್ಟಾಫ್‌ನಂತಹ ಕುಡುಕ ಕಚ್ಚೆಹರಕನನ್ನೂ ನಾವು ಮೆಚ್ಚುತ್ತೇವೆ; ಅಥೆಲ್ಲೊನಂತಹ ಕೊಲೆಗಾರನಿಗೂ ನಮ್ಮ ಎದೆ ಮಿಡಿಯುತ್ತದೆ.

## ಜೀವನಬುಭುಕ್ಷೆ — ಮಾನವ ಸ್ವಭಾವದ ಅರಿವು

ಷೇಕ್‌ಸ್ಪಿಯರನ ಮಾನವಪ್ರೇಮ ಮೇಲುಸೋಕಿನದಲ್ಲ, ಜೀವಕಣದೊಳಗಿನ ಆಳದ್ದು. ಫ್ರೆಂಚ್ ಸಾಹಿತಿ ಜಿರೋದು ಅಂದಂತೆ ಅವನಿಗೆ ಪ್ರಚಂಡವಾದ ಜೀವನಬುಭುಕ್ಷೆ (appetite for life ) ಇತ್ತು. ಬದುಕನ್ನು, ಅದರ ವೈವಿಧ್ಯ ಜಟಿಲತೆಗಳನ್ನು ಹಳ್ಳಿ, ನಗರ, ಅಂಗಡಿ, ಆಸ್ಥಾನಗಳಂತಹ ಹಲವು ಹಂತಗಳಲ್ಲಿ ಅವನು ಕಂಡು ಉಂಡಿದ್ದ. ಅದು ಒದಗಿಸುವ ಬಗೆ ಬಗೆಯ ಸನ್ನಿವೇಶಗಳಲ್ಲಿ ಮಾನವ ಸ್ವಭಾವ ಹೇಗೆ ವರ್ತಿಸುವುದೆಂಬುದನ್ನು ಅವನ ಸತ್ವ ಗ್ರಾಹಿ ಶಕ್ತಿ ಅರಿತು ಅರಗಿಸಿಕೊಂಡಿತ್ತು. ಮಾನವನ ಜೀವನ ಮತ್ತು ಸ್ವಭಾವಗಳ ಈ ಸೂಕ್ಷ್ಮ ಹಾಗೂ ವಿಸ್ತೃತವಾದ ಜ್ಞಾನ ಅವನ ಕೃತಿಗಳಲ್ಲಿ ಯಥಾವತ್ತಾಗಿ ಪ್ರತಿಬಿಂಬಿತ ವಾಯಿತು. ಅವನ ಕೃತಿಗಳಲ್ಲಿ ನಾವು ಕಾಣುವುದು ಬದುಕಿನ ಜಾತ್ರೆಯನ್ನು, ಮೆರವಣಿಗೆ ಯನ್ನು. ಹ್ಯಾಮ್ಲೆಟ್ ಗರ್ಭಾಂಕದ ನಟರಿಗೆ ಬೋಧಿಸಿದ ನಟನಕಲೆಯ ಉದ್ದೇಶವೇ ಅವನ ಉದ್ದೇಶ: 'ಸ್ವಭಾವಕ್ಕೆ ಕನ್ನಡಿ ಹಿಡಿಯುವುದು . . . ಕಾಲಪುರುಷನಿಗೆ ಅವನ ವಯಸ್ಸು ರೂಪಗಳ ಅಚ್ಚುಮಾಟಗಳೆಂತೆಂಬುದನ್ನು ತೋರಿಸುವುದು.' ಷೇಕ್‌ಸ್ಪಿಯರಿಗೆ ಇದರ ಹೊರತು ಬೇರೆ ಸಾಹಿತ್ಯೋದ್ದೇಶವೇ ಇರಲಿಲ್ಲ. ತತ್ವಬೋಧೆಯಂತೂ ಅವನಿಂದ ದೂರ.

## ಕವಿಸೃಷ್ಟಿಯ ಪಾತ್ರಪ್ರಪಂಚ

ಷೇಕ್‌ಸ್ಪಿಯರ್ ಸೃಷ್ಟಿಸಿದ್ದು ಒಂದು ಸಣ್ಣ ಪ್ರಪಂಚವನ್ನೇ ತುಂಬಬಲ್ಲಂತಹ ಸುಮಾರು ಸಾವಿರ ಪಾತ್ರಗಳ ದೊಡ್ಡ ಬೀಸು. ಅವುಗಳಲ್ಲಿ ಒಂದು ಇನ್ನೊಂದರಂತಿಲ್ಲ. ಆದರೂ ಎಲ್ಲವೂ ಸಹಜ, ಸರ್ವಕಾಲಿಕ, ಸಾರ್ವತ್ರಿಕ. ಅವು ಇಂದಿಗೂ ತಮ್ಮ ವಾಸ್ತವತೆ ಕಳೆದು ಕೊಂಡಿಲ್ಲ. ಇಂಗ್ಲಂಡ್‌ನಷ್ಟು ದೂರ ಬೇಡ, ನಮ್ಮ ನಡುವೆಯೇ ಅವನ ಅದೆಷ್ಟು ಪಾತ್ರ ಗಳು ಸಪ್ರಾಣರಾಗಿ ಓಡಾಡುತ್ತಿಲ್ಲ? ನಮ್ಮ ರಾಜಕಾರಣಿಗಳಲ್ಲಿ ಜಾಕ್ ಕೇಡ್‌ನಂತಹ ದೊಂಬಿಗರಿಲ್ಲವೆ? ನಮ್ಮ ಮನೆಗಳಲ್ಲಿ ಕ್ಯಾಥರೀನ್‌ಳಂತಹ ಗಂಡುಬೀರಿಗಳಿಲ್ಲವೆ? ನಮಗೆ ಪಾಠ ಹೇಳಿದವರಲ್ಲಿ ಹಾಲಫರ್ನೀಸ್‌ನಂತಹ ಪಂಡಿತಮಕ್ಕಿಗಳಿಲ್ಲವೆ? ನಮ್ಮ ವಿಲಾಸೀ ನಟರಲ್ಲಿ ಬಾಟಮ್‌ನಂತಹ ಅತ್ಯುತ್ಸಾಹಿಗಳಿಲ್ಲವೆ? ಇನ್ನು, ಪಾಪ! ಕೊಲೆ ಮಾಡಲಾರ ರಾದರೂ ಅಥೆಲ್ಲೊನಂತಹ ಅಸೂಯಾಗ್ರಸ್ತ ಗಂಡಂದಿರು? ಲಿಯರ್‌ನಂತಹ ಅವಿವೇಕಿ ತಂದೆಯರು? ಉಳಿದ ಕವಿಗಳಲ್ಲಿ ಚಾರಿತ್ರಕ ವ್ಯಕ್ತಿಗಳೂ ಮಸಿ-ಕಾಗದಗಳ ಕಲ್ಪನೆಗಳಾಗಿ

ಉಳಿದರೆ ಅವನಲ್ಲಿ ಕಲ್ಪನಾತ್ಮಕ ಪಾತ್ರಗಳೂ ಜೀವಧಾರಣೆ ಮಾಡಿ ತಮ್ಮದೇ ರೂಪ ವ್ಯಕ್ತಿತ್ವಗಳನ್ನು ಪಡೆದು ಚಿರಂಜೀವಿಗಳಾಗಿದ್ದಾರೆ.

### ಶಬ್ದಶಕ್ತಿ . . . ಕಾವ್ಯಶಕ್ತಿ

ಇನ್ನು ಅವನ ನಾಟಕಶಿಲ್ಪಕ್ಕೆ ಧಾತುವಾದ ಶಬ್ದ, ಕಾವ್ಯಗಳ ಮಾತು. ಇವುಗಳಲ್ಲಂತೂ ಷೇಕ್‌ಸ್ಪಿಯರನದೇ ಪರಮಾಧಿಕಾರ. ಅದನ್ನು ಪ್ರಶ್ನಿಸಿ ಗೆದ್ದವರುಂಟೆ! ಆ ಶಬ್ದ-ಬ್ರಹ್ಮ ಮುಟ್ಟಿ ಮಂತ್ರಿಸಿಬಿಟ್ಟ ಪದ ಬೆಳಕಿನ ಕಿಡಿ, ಬೆಳ್ಳಿ ಚಿಕ್ಕೆ. ಅದೇ ಮಾತು, ನಾವು ದಿನವಹಿ ಆಡಿ, ಆಡಿ, ಅರ್ಥ ಚೀಪಿ ಎಸೆದ ಸಪ್ಪೆ ಮಾತು, ಸಿಪ್ಪೆ ಮಾತು ಅವನ ಗುಂಫನದ ಪ್ರಕ್ರಿಯೆಗೆ ಸಿಕ್ಕಾಗ ಜಡಕ್ಕೆ ಜೀವಸ್ಪರ್ಶವಾದಂತೆ ಸ್ಪಂದಿಸುತ್ತದೆ; ಹೊಸ ಕಸುವು ಕಾಂತಿಗಳಿಂದ ಲಕಲಕ ಹೊಳೆಯುತ್ತದೆ, ಥಕಥಕ ಕುಣಿಯುತ್ತದೆ; ಭಾವ, ಅರ್ಥ, ಲಯ, ನಾದಗಳನ್ನು ಸ್ಫುರಿಸುತ್ತ ದೈವತ್ವಕ್ಕೇರುತ್ತದೆ, ಶಬ್ದ ಶಿವವಾಗುತ್ತದೆ. ಈ ಬಗೆಯ ಶಬ್ದ ಶಕ್ತಿಯಿದ್ದುದರಿಂದಲೇ ಷೇಕ್‌ಸ್ಪಿಯರ್ ಆಡಿದುದು ಗಾದೆಯಾಯಿತು, ನುಡಿದುದು ವೇದವಾಯಿತು. ಇಂದಿಗೂ ಅವನ ಪದಗುಚ್ಛಗಳು ನಮಗೆ ಮನೆಮಾತು, ನುಡಿಗಟ್ಟು.

'ಕಾವ್ಯ ಸ್ವರ್ಗಜನ್ಯ, ಅದರ ಶಕ್ತಿ ಅಪಾರ'— ಇದು ಷೇಕ್‌ಸ್ಪಿಯರನ ಮೊದಲಿನ ಪಾತ್ರಗಳಲ್ಲೊಂದು ಹೇಳುವ ಮಾತು. ಈ ಗುಟ್ಟನ್ನು ಚೆನ್ನಾಗಿ ಅರಿತಿದ್ದ ಷೇಕ್‌ಸ್ಪಿಯರ್ ಆ ಸ್ವರ್ಗಶಕ್ತಿಯ ಉಪಾಸನೆ ಮಾಡಿ ಅದನ್ನು ತನ್ನ ಕೈಯಾಳನ್ನಾಗಿ ಮಾಡಿಕೊಂಡಿದ್ದ. ಸಂದರ್ಭಕ್ಕೆ ತಕ್ಕಂತೆ ಅದರಿಂದ ವೀಣೆಯ ರವವೆ, ಹಕ್ಕಿಯ ಉಲಿವೆ, ಗುಡುಗಿನ ಮೊಳಗೆ, ಸಮುದ್ರದ ಅಬ್ಬರವೆ, ಏನಂದರೆ ಅದನ್ನು ಹೊರಡಿಸುವ ಶಕ್ತಿ ಅವನದು. ಪುಷ್ಪ ಕೋಮಲ ಭಾವನೆಗಳಿಂದ ಹಿಡಿದು ಪ್ರಚಂಡ ರಾಗದ್ವೇಷಗಳವರೆಗೆ ಯಾವ ಭಾವವನ್ನಾದರೂ ಅವನ ಕಾವ್ಯ ಸೆರೆ ಹಿಡಿಯಬಲ್ಲದು. ಆ ಗಾರುಡಿಗೆ ನಾವು ಮಂತ್ರಮುಗ್ಧರು. ಅದರಿಂದ ಅವನು ನಂಬಲಾರದುದನ್ನೂ ನಂಬಿಸಿದ ಸಂದರ್ಭಗಳು ಅವೆಷ್ಟೋ!

ಅವನ ಕಾವ್ಯನಿರ್ಮಾಣ ಸಂಗೀತನಿರ್ಮಾಣಕಲೆಯಿದ್ದಂತೆ. ಶ್ರೇಷ್ಠ ವಾಗ್ಗೇಯಕಾರನಿಗೆ ಸ್ವರವೆಂತೊ, ಅವನಿಗೆ ಪದ ಅಂತೆ. ಅವನ ಕಾವ್ಯಪಂಕ್ತಿಯಲ್ಲಿ ಕೈತಪ್ಪಿ ಒಂದು ಪದ ಏರುಪೇರಾದರೂ ತೀರಿತು, ಮೇಳ ಮುರಿಯುತ್ತದೆ, ರಾಗ ಒಡೆಯುತ್ತದೆ. ಆ ಆ ಸಂದರ್ಭಕ್ಕೆ ಅದೆ ಅದೆ ಪದಗಳು, ಬೇರೆ ಸಾಧ್ಯವೇ ಇಲ್ಲ. ಒಮ್ಮೊಮ್ಮೆ ಒಂದು ಪದದ ಪುನರುಕ್ತಿಯಿಂದಲೇ ಅವನು ಕಾವ್ಯ ಉಕ್ಕಿಸಿದುದೂ ಉಂಟು: ಲಿಯರ್‌ನ 'Never, never, never, never, never', ಮೆಕ್‌ಬೆತ್‌ನ 'Tomorrow, and to-morrow, and to-morrow . . .' ನಿಘಂಟಿನ ಬೇರೆ ಯಾವ ಪದಗಳು ತಾನೆ ಆ ಆ ಸನ್ನಿವೇಶಗಳ ಒತ್ತರವನ್ನು ಅಷ್ಟು ಸಮರ್ಥವಾಗಿ ವ್ಯಂಜಿಸಬಲ್ಲವು.

### ನಾಟಕಪ್ರಜ್ಞೆ

ಷೇಕ್‌ಸ್ಪಿಯರನಲ್ಲಿ ಅವನ ಕಾವ್ಯಶಕ್ತಿಯೊಂದಿಗೆ ಅದರಿಂದ ಪ್ರತ್ಯೇಕವಲ್ಲವೆನ್ನುವಷ್ಟು ಏಕಪ್ರಾಣವಾಗಿ ಕೂಡಿದ್ದ ಇನ್ನೊಂದು ಶಕ್ತಿಯೆಂದರೆ ಅವನ ನಾಟಕಪ್ರಜ್ಞೆ. ಅವನು ಸಾಹಿತ್ಯದ ಮೈದಾಸ್, ಅವನು ಮುಟ್ಟಿದ ಮಣ್ಣು ಬಂಗಾರ. ಗೌಣ, ಸಾಧಾರಣ

ವಾದುದೂ ಅವನಲ್ಲಿ ನಾಟಕದ ಎತ್ತರಕ್ಕೆ ಏರುತ್ತದೆ. ಮೂಲವಸ್ತು ಎಲ್ಲಿಯದೋ: ಪ್ಲಾಟಸ್, ಬೋಕಾಚಿಯೊ, ಪ್ಲೂಟಾರ್ಕ್, ಹಾಲಿನ್‌ಷೆಡ್ — ಹೀಗೆ ಯಾವ ಯಾವದೊ ಗಿಡಮರಗಳನ್ನು ಮುತ್ತಿ ಹೀರಿದ ನೂರು ಹೂಗಳ ಬಂಡು. ಆದರೂ ಅದು ಅವನ ಪ್ರತಿಭೆಯ ಲಾಲಾರಸದೊಡನೆ ಬೆರೆತು ನಾಲಗೆಯ ಮೇಲೆ ಉರುಳಿದಾಗ ಆದದ್ದು ಜೇನು! ಇನ್ನು ವೈವಿಧ್ಯವೋ, ಅದು ಸಾಕ್ಷಾತ್ ಪ್ರಕೃತಿಮಾತೆಯ ವೈವಿಧ್ಯವೇ. ಏನನ್ನೂ ಬಿಟ್ಟಿಲ್ಲವೆಂಬಂತೆ ಅದೆಷ್ಟೋ ಮಾನವ ಅನುಭವಗಳೂ ಸನ್ನಿವೇಶಗಳೂ ಅವನ ನಾಟಕ ಪ್ರಜ್ಞೆಗೆ ಸಿಕ್ಕು ಅಗ್ಗದ ಹುಚ್ಚಾಟಗಳಿಂದ ಗಂಭೀರತಮ ರುದ್ರನಾಟಕಗಳವರೆಗೆ ಹಲವು ಪ್ರಭೇದಗಳಲ್ಲಿ ಪುನರ್ಜನ್ಮ ಪಡೆದಿವೆ. ಎಂತಲೇ ಅವನು ನಮ್ಮ ಎದೆಯ ಒಂದೊಂದು ತುಡಿತಕ್ಕೂ ಸ್ವರಗೊಟ್ಟು ಮಾತಾಗಿ ಮಿಡಿಯುತ್ತಾನೆ, ನಮ್ಮ ಶಕ್ತಿದೌರ್ಬಲ್ಯಗಳಿಗೆ ಕೈಗನ್ನಡಿಯಾಗುತ್ತಾನೆ, ನಮ್ಮಲ್ಲಿ ಒಬ್ಬೊಬ್ಬನ ಆಶೋತ್ತರಕ್ಕೂ ಅಭಿವ್ಯಕ್ತಿಯಾಗುತ್ತಾನೆ. ಮೇಲಾಗಿ ಅವನಲ್ಲಿ ಎಲ್ಲೂ ಚೂರು, ಅರ್ಧ ಎಂಬ ಕೃಪಣತೆಯಿಲ್ಲ; ಎಲ್ಲವೂ ಪೂರ್ಣವೇ, ತೀಕ್ಷ್ಣವೇ, ತೀವ್ರವೇ.

ಷೇಕ್ಸ್ಪಿಯರ್ ಮಹಾಕವಿಯಾಗಿರುವುದು ಈ ಕಾರಣಗಳಿಂದಾಗಿ. ಸಾಹಿತ್ಯ ಚರಿತ್ರಕಾರ ಲ್ಯಗೂಈ ಮತ್ತು ಕಸಾಮಿಯ್ಯಾರೊಡನೆ ದನಿಗೂಡಿಸಿ ಹೇಳುವುದಾದರೆ 'ಅವನ ನಾಟಕಸಾಹಿತ್ಯ ಎಲ್ಲ ಸಿದ್ಧಾಂತಗಳಿಂದ ಸ್ವತಂತ್ರವಾಗಿ, ಜೀವನವನ್ನು ಅದಿದ್ದಂತೆ ಒಪ್ಪಿ, ಕಲ್ಪನೆ ವಾಸ್ತವತೆಗಳನ್ನು ಒಂದುಗೂಡಿಸಿ, ವಿವಿಧ ಅಭಿರುಚಿಗಳವರನ್ನು ಮೆಚ್ಚಿಸುವ ಜೀವನಸೌಂದರ್ಯಗಳ ಮಹಾನದಿ'. ಅದರಲ್ಲಿ ಮಿಂದು ಜಡತೆ ತೊಳೆದುಕೊಂಡವರು ಪುನೀತರು, ಪುಣ್ಯವಂತರು. ಷೇಕ್ಸ್ಪಿಯರ್ ಆ್ಯಂಟನಿಯನ್ನು ಕುರಿತು ಆಡಿದ ಒಂದು ಮಾತನ್ನೇ ನಾವು ಅವನ ಬಗ್ಗೆಯೂ ಆಡಿ ಕೈಮುಗಿಯಬಹುದು: 'A rarer spirit never did steer humanity.' — ಅವನಿಗಿಂತಲೂ ವಿರಳವಾದ ಇನ್ನೊಂದು ಚೈತನ್ಯ ಮಾನವತೆಯನ್ನು ಮುನ್ನಡೆಸಿದುದಿಲ್ಲ.

**— ಶಾ. ಬಾಲುರಾವ್**





# ಷೇಕ್‌ಸ್ಪಿಯರಿಗೆ ನಮಸ್ಕಾರ

**ಡಿ. ವಿ. ಜಿ.**

## ಭಾಗ 1

ಈಗ ನಾವು ಒಂದು ಸಣ್ಣ ನಾಟಕವನ್ನು ನೋಡೋಣ.

**ದೃಶ್ಯ 1**

[ಸ್ಥಳ: ಬೆಂಗಳೂರು ವಿಕ್ಟೋರಿಯ ಆಸ್ಪತ್ರೆಯ ಈಶಾನ್ಯ ದಿಕ್ಕಿನ ಕಡೆಯ ಕೋಣೆ, ಸ್ಪೆಷಲ್ ವಾರ್ಡ್. ಅದರಲ್ಲಿ ಒಬ್ಬ ರೋಗಿ ಮಂಚದ ಮೇಲೆ ಮಲಗಿದ್ದಾನೆ. ಅಲ್ಲಿ ಒಂದೆರಡು ಮೇಜುಗಳೂ ಅದರ ಮೇಲೆ ಹೂ ಸಿಕ್ಕಿಸಿದ ಹೂವಾಸಿಗಳೂ ಕೆಲವು ಬೊಂಬೆಯ ಪತ್ರಿಕೆಗಳೂ ಇರುತ್ತವೆ.
ಕಾಲ: 1940ನೆಯ ಇಸವಿ ಸೆಪ್ಟೆಂಬರ್ 15, ಬುಧವಾರ. ಆಹೊತ್ತು ಅಮಾವಾಸ್ಯೆ. ಸಂಜೆ ಏಳೂವರೆ ಘಂಟೆ ಇರಬಹುದು.
ಡಾ|| ನಾ. ಅವರು ಕೋಣೆಯೊಳಕ್ಕೆ ಬರುತ್ತಾರೆ. ಅವರು ಸಾಮಾನ್ಯವಾಗಿ ದೊಡ್ಡದೊಡ್ಡ ಡಾಕ್ಟರುಗಳು ಇರುವಂತೆ ಗರಿಮುರಿಯಾದ ಬಟ್ಟೆ ಧರಿಸಿದ್ದಾರೆ—ಷರಾಯಿ, ಕೋಟು, ಕಂಠಾಲಂಕಾರ, ತಲೆಯ ಮೇಲೆ ಜರಿಗೆಯ ರುಮಾಲು, ಕಾಲಿನ ಮೇಲೆ ಕರಿಮುರುಗಿನ ಬೂಟ್ಸು. ಮುಖ ಗಂಭೀರವಾಗಿದೆ.]

**ಡಾ|| ನಾ.** : ಹೇಗಿದ್ದೀರಿ ?
**ರೋಗಿ** : (ನಗುಮುಖದಿಂದ) ಅನುಕೂಲವಾಗಿದೆಯೆಂದು ತೋರುತ್ತದೆ.
**ಡಾ|| ನಾ.** : ಟೆಂಪರೇಚರ್ ಇಲ್ಲ ತಾನೆ ?
**ರೋಗಿ** : ಎಂಟು ಹತ್ತು ದಿನದಿಂದ ನಾರ್ಮಲ್ ಆಗಿದೆ.
**ಡಾ|| ನಾ.** : ನಿದ್ದೆ ಬರುತ್ತಿದೆಯೋ ?
**ರೋಗಿ** : ಕೊಂಚಕೊಂಚ ಬರುತ್ತದೆ. ಆದರೆ ತುಂಬ ನಿಶ್ಶಕ್ತಿಯಾಗಿದೆ.
**ಡಾ|| ನಾ.** : ಅದು ಕ್ರಮೇಣ ಸರಿಹೋಗುತ್ತದೆ—ಹೇಳಿದ ಮಾತು ಕೇಳಿಕೊಂಡಿದ್ದರೆ.
**ರೋಗಿ** : ಕೇಳದೆ ನಾನೇನು ಮಾಡುತ್ತೇನೆ ? ನನ್ನನ್ನು ನೋಡುತ್ತಿರುವ ಡಾ|| ಶಂ. ಅವರು ಮಹಾ ಖಂಡಿತವಾದಿ.

ಡಾ|| ನಾ. : ಅಂಥವರಿದ್ದರೆಯೇ ನೀವು ಸಾಧ್ಯವಾಗೋದು.

ರೋಗಿ : ನಿಮ್ಮ ದರ್ಶನವಾಗಿ ಎಂಟು ದಿನದ ಮೇಲಾಯಿತು.

ಡಾ|| ನಾ. : ಸರ್ಕೀಟ್ ಹೋಗಿದ್ದೆ. ಈಗ ತಾನೆ ಬರುತ್ತಿದ್ದೇನೆ. ಇನ್ನೂ ಮನೆಗೆ ಹೋಗಿಲ್ಲ. ನಿಮ್ಮನ್ನು ನೋಡಿಕೊಂಡು ಹೋಗೋಣ ಅಂತ ಬಂದೆ.

ರೋಗಿ : ಬಹಳ ಒಳ್ಳೆಯದಾಯಿತು. ಈಗ ನಿಮ್ಮಿಂದ ಒಂದು ಉಪಕಾರ ಆಗಬೇಕು.

ಡಾ|| ನಾ. : ಏನು ?

ರೋಗಿ : ಈಹೊತ್ತು ಅಮಾವಾಸ್ಯೆ. ನಿಮ್ಮ ಮನೆಯಲ್ಲಿ ಫಲಾಹಾರಕ್ಕೆ ಮೆಂತ್ಯದ ದೋಸೆ ಮಾಡಿರುತ್ತಾರೆ. ಬಿಸಿಬಿಸಿಯಾಗಿ ಎರಡು ದೋಸೆ, ಚಟ್ನಿಯನ್ನ ಒಂದು ಥರ್ಮಾಸ್ ಪೆಟ್ಟಿಗೆಯಲ್ಲಿ ಹಾಕಿ ಕಾರಿನಲ್ಲಿ ಕಳುಹಿಸಿದರೆ, ಅದನ್ನ ನಾನು ಸೇವಿಸಿದರೆ, ನನ್ನ ನಾಲಿಗೆಯ ಅರೋಚಕ ಹೋಗಿ ಬಾಯಿ ಶುದ್ಧವಾಗುತ್ತದೆ. ಮೈಗೆ ಬಲ ಬರುತ್ತದೆ. ಆಸ್ಪತ್ರೆಯ ಹಾಲು ರೊಟ್ಟಿ ಈಗ ಅಸಹ್ಯವಾಗಬಿಟ್ಟಿದೆ. ನಿಮ್ಮ ಮನೆಯ ಅಡುಗೆ ನನ್ನ ಬಾಯಿಗೆ ಬೀಳಬೇಕು.

ಡಾ|| ನಾ. : (ಕೊಂಚ ಮುಗುಳ್ನಗೆ ನಕ್ಕು) ಆಗಲಿ. ಅದಕ್ಕೇನು ಕಷ್ಟ. ಈಹೊತ್ತಲ್ಲದಿದ್ದರೆ ಇನ್ನೊಂದು ದಿನ.

ರೋಗಿ : ಅದೇಕೆ ಇನ್ನೊಂದು ದಿನ? ಈಗಲೇ ಆಗಲಿ.

ಡಾ|| ನಾ. : ನಿಮ್ಮ ಡಾಕ್ಟರನ್ನು ಕೇಳದೆ ಹಾಗೆ ಮಾಡತಕ್ಕದ್ದಲ್ಲ.

ರೋಗಿ : ನೀವೇ ದೊಡ್ಡ ಡಾಕ್ಟರು. ನೀವು ಮಾಡಿದ್ದನ್ನ ಅವರು ಬೇಡವೆನ್ನುತ್ತಾರೆಯೆ ?

ಡಾ|| ನಾ. : ಅದು ಸರಿಯಲ್ಲ. ನಿಮ್ಮನ್ನು ದಿನಾಗಲೂ ನೋಡಿ ಪರೀಕ್ಷಿಸಿ ರೋಗವನ್ನು ತಿಳಿದುಕೊಂಡಿರುವವರು ಯಾರು ? ಅವರನ್ನು ಕೇಳದೆ ಯಾರೂ ಏನೂ ಮಾಡಬಾರದು.

ರೋಗಿ : ಹಾಗಾದರೆ ಅವರನ್ನು ಈಗಲೇ ಕೇಳಿಬಿಡಿ.

ಡಾ|| ನಾ. : ಅವರು ಇಷ್ಟು ಹೊತ್ತಿನಲ್ಲಿ ಇಲ್ಲಿರುವುದಿಲ್ಲ. ಈ ಆಸ್ಪತ್ರೆಯಲ್ಲಿ ಒಂದು ಡಿಸಿಪ್ಲಿನ್ ಉಂಟೋ ಇಲ್ಲವೋ ? ಆ ಡಿಸಿಪ್ಲಿನಿನಂತೆ ನಡೆಯಬೇಕು.

ರೋಗಿ : (ಮುಖದ ಮೇಲಿದ್ದ ಸಂತೋಷ ಹಾರಿಹೋಗಿ ಮುಖ ಖಿನ್ನವಾಯಿತು.)

ಡಾ|| ನಾ. : ನರ್ಸ್.

[ಪ್ರವೇಶ : ನರ್ಸ್—ಬಂದು ನಮಸ್ಕರಿಸುತ್ತಾಳೆ.]

ಡಾ|| ನಾ. : ಡಾಕ್ಟರು ಈಗ ಇಲ್ಲಿ ಯಾರಿದ್ದಾರೆ ?

ನರ್ಸ್ : ಡಾ|| ಕೃ. ಅವರಿದ್ದಾರೆ.

ಡಾ|| ನಾ. : ಒಳ್ಳೆಯದು. ಅವರಿಗೆ ನನ್ನ ನಮಸ್ಕಾರ ಹೇಳಿ.

[ಒಂದೆರಡು ನಿಮಿಷಗಳಲ್ಲಿ ಡಾ|| ಕೃ. ಅವರು ಪ್ರವೇಶಿಸುವರು. ಡಾ|| ನಾ. ಅವರು ಎದ್ದುಹೋಗಿ ಕೋಣೆಯ ಬಾಗಿಲ ಬಳಿ ಒಂದು ಕ್ಷಣ ಪಿಸುಮಾತನಾಡಿ, ಬಳಿಕ ಇಬ್ಬರೂ ರೋಗಿಯ ಸಮೀಪಕ್ಕೆ ಬರುವರು.]

ಡಾ|| ನಾ. : ಡಾ|| ಕೃ., ಇವರು ದೋಸೆ ತಿನ್ನಬೇಕು ಅಂತಾರಲ್ಲ? ನೀವು ದಯವಿಟ್ಟು ಡಾ|| ಶಂ. ಅವರನ್ನು ಕೇಳಿ ಅವರೊಪ್ಪಿದರೆ ದೋಸೆ ತರಿಸಿಕೊಟ್ಟೀರಾ ?

**ಡಾ॥ ಕೃ.** : ಅದಕ್ಕೇನು ಕಷ್ಟ? ಅವಶ್ಯವಾಗಿ ತರಿಸಿಯೇನು. ಬಿಸಿಬಿಸಿಯಾಗಿ ಕೊಡಬಹುದು. ಈಗ ತಮ್ಮ ಮನೆಯಿಂದ ಕಳುಹಿಸಿದರೆ ತಣ್ಣಗಾಗಿಹೋಗಿರುತ್ತದೆ. ಅಷ್ಟು ಚೆನ್ನಾಗಿರುವುದಿಲ್ಲ.

**ರೋಗಿ** : ಥರ್ಮಾಸ್ ಬಾಕ್ಸ್....

**ಡಾ॥ ಕೃ.** : ಥರ್ಮಾಸ್‌ನಿಂದಲೂ ಪ್ರಯೋಜನವಿಲ್ಲ. ಈಗ ಅಷ್ಟು ದೊಡ್ಡ ಥರ್ಮಾಸ್ ಪೆಟ್ಟಿಗೆ ಎಲ್ಲಿ ಸಿಕ್ಕುತ್ತದೆ? ಸಿಕ್ಕಿದರೂ ಕಾರಿನ ವೇಗದಿಂದ ಅದರ ಬಿಸಿಯೆಲ್ಲ ಹಾರಿಹೋಗುತ್ತದೆ. ಇಲ್ಲಿಗೆ ಬರುವ ವೇಳೆಗೆ ತಣ್ಣಗಾಗಿ ಹಳಸಲಾಗಿರುತ್ತದೆ. ಈಗೇನು, ಒಂದು ಹನ್ನೆರಡು ಘಂಟೆಗಳಲ್ಲಿ ನಾನು ಬಿಸಿಬಿಸಿ ತರಿಸಿಕೊಡುತ್ತೇನಲ್ಲ? ರಾತ್ರಿ ಚೆನ್ನಾಗಿ ನಿದ್ದೆಹೋಗಿ. ನೀವು ಎದ್ದು ಮುಖ ತೊಳೆದು ಔಷಧ ಕುಡಿಯುವ ವೇಳೆಗೆ ಬಿಸಿಬಿಸಿ ದೋಸೆ—ಬೇಕಾದರೆ ಮಸಾಲೆ ದೋಸೆ—ಸಿದ್ಧವಾಗಿರುತ್ತದೆ.

**ರೋಗಿ** : ಹಾಗಾದರೆ ಸರಿ. ಬೆಳಗಾಗುವುದನ್ನು ಎದುರುನೋಡಿಕೊಂಡಿರುತ್ತೇನೆ.

[ಡಾಕ್ಟರುಗಳಿಬ್ಬರೂ ಗಂಭೀರ ಹಸನ್ಮುಖದಿಂದ ಹೊರಟುಹೋಗುವರು.]

**ದೃಶ್ಯ 2**

[ಅದೇ ಜಾಗ. ಕಾಲ : 1940ನೆಯ ಇಸವಿ ಸೆಪ್ಟೆಂಬರ್ 16, ಗುರುವಾರ. ಬೆಳಗ್ಗೆ ಸುಮಾರು ಏಳೂ ಮುಕ್ಕಾಲು ಘಂಟೆ. ರೋಗಿ ಗೆಲುಮುಖದಿಂದ ಮಲಗಿದ್ದಾನೆ. ಪ್ರವೇಶ : ಡಾ॥ ಕೃ. ಅವರು.]

**ಡಾ॥ ಕೃ.** : ಏನು ಸಾರ್? ರಾತ್ರಿ ಚೆನ್ನಾಗಿ ನಿದ್ದೆ ಬಂತೋ?

**ರೋಗಿ** : ಆಹಾ! ಚೆನ್ನಾಗಿ ನಿದ್ದೆ ಆಯಿತು. ಬೆಳಗ್ಗೆ ಮುಖ ತೊಳೆದು ಔಷಧ ಕುಡಿದು ಆಯಿತು. ನಿಮ್ಮ ಕರುಣಾಕಟಾಕ್ಷಕ್ಕಾಗಿ ಕಾದಿದ್ದೇನೆ.

**ಡಾ॥ ಕೃ.** : ಸೇವೆ ಸಲ್ಲಿಸಲು ನಾವು ಸಿದ್ಧವಾಗಿದ್ದೇವೆ.

**ರೋಗಿ** : ಡಾ॥ ಶಂ. ಅವರನ್ನು ಕೇಳಿದಿರೋ? ಅವರು ಒಪ್ಪಿಕೊಂಡರು ತಾನೇ?

**ಡಾ॥ ಕೃ.** : ಅವರನ್ನು ಕೇಳಿದ್ದಾಯಿತು. ಅವರು ಹೇಳಿದ್ದನ್ನೇ ಈಗ ಮಾಡುವುದು.

**ರೋಗಿ** : ಭೇಷ್! ಹಾಗಾದರೆ ಬರಲಿ ತರತೀಪುಗಳು.

**ಡಾ॥ ಕೃ.** : ತರಿಸಿಬಿಡಲೋ?

**ರೋಗಿ** : ಇನ್ನ್ಯಾಕೆ ತಡ?

[ಡಾ॥ ಕೃ. ಅವರು ಆಳನ್ನು ಕರೆದು "ಅದನ್ನು ತೆಗೆದುಕೊಂಡುಬನ್ನಿ" ಎಂದರು. ಆಳುಗಳು ಕೋಣೆಯೊಳಕ್ಕೆ ಹೊತ್ತು ತಂದರು. ಏನನ್ನು? ಒಂದು ಕಪ್ಪುಹಲಗೆಯನ್ನು (Black-board). ಅದರ ಮೇಲೆ ಇಂಗ್ಲಿಷಿನಲ್ಲಿ 'ಮೆಡಿಕಲ್ ಕಾಲೇಜ್ ಲೆಬಾರಟರಿ' ಎಂದು ಬರೆದಿತ್ತು.]

**ರೋಗಿ** : ಇದೇನು?

**ಡಾ॥ ಕೃ.** : ದೋಸೆ ತಯಾರಾಗುತ್ತಿದೆ. ಅದು ಬರುವವರೆಗೂ ನಿಮ್ಮ ಕೂಡ ಒಂದು ವಿಷಯ ಮಾತನಾಡೋಣ ಅಂತ ಇದನ್ನ ತರಿಸಿದೆ. ನೋಡಿದಿರಾ ಇದನ್ನ?

**ರೋಗಿ** : ಏನದು?

**ಡಾ॥ ಕೃ.** : ನಮ್ಮ ವಿದ್ಯಾರ್ಥಿಗಳಿಗೆ ಅಂಗಾಂಗರಚನೆ ತೋರಿಸುವುದಕ್ಕಾಗಿ ಮಾಡಿಕೊಂಡ

ಸ್ಯಾಂಪಲ್ (ಮಾದರಿ) ಚೂರುಗಳು. (ಪಡಿನೈದನೆಯ ಸಂಖ್ಯೆಯ ಮಾದರಿಯ ಕಡೆ ಚಿಟ್ಟಟ್ಟು) ಇದು ಕರುಳಿನ ಒಂದು ಚೂರು. ನಿಮ್ಮ ಹೊಟ್ಟೆಯಲ್ಲಿ ಕರುಳಿನ ನಾಳ ಸುಮಾರು ನೂರ ಎಂಭತ್ತು ಅಡಿಯಷ್ಟು ಉದ್ದವಾಗಿರುತ್ತದೆ. ಹೊರಗಡೆಗೆ ಅದು ಗೊತ್ತಾಗುವುದಿಲ್ಲ. ಅಷ್ಟು ತೆಳುವಾಗಿ ಸೂಕ್ಷ್ಮವಾಗಿದೆ ಕರುಳು. ಅದನ್ನು ಒಂದಂಗುಲದಷ್ಟು ಮಾತ್ರ ಇಲ್ಲಿ ಅಂಟಿಸಿದೆ. ಇದು ಕರುಳಿನ ಒಳಮೈ. ಕರುಳನ್ನು ಕತ್ತರಿಸಿ ಅದರ ಒಳಪಕ್ಕ ಕಾಣುವ ಹಾಗೆ ಇಲ್ಲಿ ತೋರಿಸಿದೆ. ಚೆನ್ನಾಗಿ ನೋಡಬೇಕು, ಸಾರ್.

**ರೋಗಿ :** ನೋಡಿದೆ.

**ಡಾ॥ ಕೃ. :** ಹಾಗಲ್ಲ. (ಬೋರ್ಡನ್ನು ರೋಗಿಯ ಹತ್ತಿರ ಸರಿಸಿ) ಕರುಳಿನ ಒಳಗಡೆ (ಪೆನ್ಸಿಲ್ ಮೊನೆಯಿಂದ ತೋರಿಸುತ್ತಾ) ಇದು ಜೇಬು, ಪಾಕೆಟ್. ಇಂಥ ಪಾಕೆಟ್ಟುಗಳು ಕರುಳಿನಲ್ಲಿ ಲೆಕ್ಕವಿಲ್ಲದಷ್ಟು ಇರುತ್ತವೆ. ತಿಂಡಿ ತಿಂದಾಗ ಅದರಲ್ಲಿಯ ಸುಣುಪಾದ ಜಿಡ್ಡು ಪದಾರ್ಥವು ಈ ಪಾಕೆಟ್ಟುಗಳಲ್ಲಿ ಸಿಂತುಬಿಡುತ್ತದೆ. ಬೆಣ್ಣೆ, ಹಿಟ್ಟು, ಜಿಡ್ಡು— ಇಂಥಾದ್ದು ಮಿಕ್ಕ ಆಹಾರದ ಜೊತೆಗೆ ಕೆಳಕ್ಕಿಳಿದು ಹೋಗದೆ ಈ ಪಾಕೆಟ್ಟುಗಳಲ್ಲಿ ಉಳಿದುಕೊಳ್ಳುತ್ತದೆ. ಅದೇ ಟೈಫಾಯ್ಡ್ ಕ್ರಿಮಿಗಳಿಗೆ ಆಹಾರ. ಈಗ ನಿಮ್ಮ ದೇಹದೊಳಗಿದ್ದ ಟೈಫಾಯ್ಡ್ ಕ್ರಿಮಿಗಳು ಔಷಧಬಲದಿಂದ ಬಹುಮಟ್ಟಿಗೆ ಹೊರಟು ಹೋಗಿವೆ. ಆದರೂ ಒಂದೆರಡು ಅಣುಗಳು ಅಲ್ಲಲ್ಲಿ ಅವಿತುಕೊಂಡಿರುತ್ತವೆ. ಈಗ ನೀವು ದೋಸೆ ತಿಂದರೆ ಅದಕ್ಕೆ ಆಹಾರ ಸಿಕ್ಕುತ್ತದೆ. (ತಟ್ಟನೆ ಬಾಗಿಲ ಕಡೆ ತಿರುಗಿ) ಅಯ್ಯಾ, ದೋಸೆ ಸಿದ್ಧವಾಗಿದೆಯೇನಯ್ಯ?

**ರೋಗಿ :** ಸಾಕು ಮಹಾರಾಯ! ನಿಮ್ಮ ದೋಸೆ ಸಾಕು. ನಿಮ್ಮ ವಿವರಣೆಯೂ ಸಾಕು.

**ಡಾ॥ ಕೃ. :** (ಗಟ್ಟಿಯಾಗಿ ನಗುತ್ತ) ಯಾಕೆ ಸಾರ್? ಬಿಸಿಬಿಸಿಯಾಗಿ ಬರುತ್ತೆ.

**ರೋಗಿ :** ನಿಮಗೆ ನಮಸ್ಕಾರ. ನಾನು ಬುದ್ಧಿಗೆಟ್ಟು ಡಾ॥ ನಾ. ಅವರನ್ನು ಕೇಳಿದೆ. ಈಗ ಅವರೂ ನೀವೂ ಸೇರಿಕೊಂಡು ಮಸಲತ್ತು ನಡಸಿ ನನಗೆ ಬುದ್ಧಿ ಕಲಿಸಿದಿರಿ. ಇದನ್ನು ಮರೆಯುವುದಿಲ್ಲ.

[ಆಗ ಅಲ್ಲಿದ್ದ ನರ್ಸುಗಳೂ ವಾರ್ಡ್‌ಬಾಯಿಗಳೂ ಎಲ್ಲರೂ ನಗುತ್ತಿದ್ದರು.]

## ಭಾಗ 2

ಮಹಾಕವಿಯಿಂದ ನಮಗೆ ಆಗುವ ಉಪಕಾರ ಈ ಬಗೆಯದು. ಸಮರ್ಥನಾದ ವೈದ್ಯಶಾಸ್ತ್ರಜ್ಞನು ನಮಗೆ ದೇಹದ ಒಳಗಡೆ ಕಣ್ಣಿಗೆ ಕಾಣದಂತೆ ಅನ್ನಕೋಶದಲ್ಲಿ ಅವಿತುಕೊಂಡಿರುವ ನಾಳಗಳನ್ನೂ ಅವುಗಳ ಒಳಗಿನ ಜೇಬುಗಳನ್ನೂ ಅವುಗಳ ಒಳಗಡೆ ರೋಗಾಣುಗಳು ಅವಿತುಕೊಂಡು ನಿದ್ರಿಸುತ್ತಿರುವುದನ್ನೂ ತೋರಿಸಿಕೊಟ್ಟು ನಮಗೆ ಎಚ್ಚರಿಕೆ ಕೊಡುತ್ತಾನೆ. ಮಹಾಕವಿಯು ನಮ್ಮ ಅಂತರಂಗದ ಒಳಗಡೆ ಅವಿತುಕೊಂಡಿರುವ ಮನೋನಾಳಗಳನ್ನೂ ಅವುಗಳ ಒಳಗಿನ ಜೇಬುಗಳನ್ನೂ ಅವುಗಳೊಳಗಿನ



"ಹೋ, ನಿನ್ನ ಕೈಯಿಂದಲೀ ಕೊಳಕು ಸಾಕ್ಷಿಯ ತೊಳೆದು ತೆಗೆ."—ಸತೀ ಮ್ಯಾಕ್‌ಬೆತ್.
**'ಮ್ಯಾಕ್‌ಬೆತ್' ಅಲ್ಲಿ ಮ್ಯಾಕ್‌ಬೆತ್ ಮತ್ತು ಸತೀ ಮ್ಯಾಕ್‌ಬೆತ್.**

ರೋಗಮೂಲಸ್ಥಾನಗಳನ್ನೂ ತೋರಿಸಿ ಎಚ್ಚರಿಕೆ ಕೊಡುತ್ತಾನೆ. ದೇಹದ ಆರೋಗ್ಯಕ್ಕೆ ವೈದ್ಯ; ಮನಸ್ಸಿನ ಆರೋಗ್ಯಕ್ಕೆ ಕವಿ.

ನಮ್ಮ ಮನಸ್ಸಿನ ಒಳಗಡೆಯ ನಾಳಗಳು ಬಹು ತೆಳುವಾದ ಪೊರೆಯಿಂದ ಆದವು. ಆ ಪೊರೆಯ ಪಕ್ಕದಲ್ಲಿ ಯಾವ ಧಾತುರಸ ಹರಿದರೂ, ಅದು ನಾಳದ ಪೊರೆಯನ್ನೊತ್ತಿ ನಾಳದ ಒಳಗಣ ಚೀಲಗಳಲ್ಲಿ ನಿದ್ರಿಸುತ್ತಿರುವ ಭಾವಾಣುಗಳನ್ನು ಕೆಣಕಿ ಕೆರಳಿಸುತ್ತವೆ. ಮಂಥರೆಯ ಉಪ್ಪು, ಶಕುನಿಯ ಸಕ್ಕರೆ, ಯಕ್ಷಿಣಿಯ ತುಪ್ಪ, ಪ್ರೇತದ ಖಾರ —ಇವು ಮನೋನಾಳವನ್ನು ಸೋಕಿದಾಗ ನಾವು ಕೈಕೇಯಿಯಂತೆ ಹೊರಳುತ್ತೇವೆ; ದುರ್ಯೋಧನನಂತೆ ಲೋಭೋನ್ಮತ್ತರಾಗುತ್ತೇವೆ; ಮ್ಯಾಕ್‌ಬೆತ್ತಿನಂತೆ ಆಶಾವೇಷದಿಂದ ಹುಚ್ಚುಹುಚ್ಚಾಗಿ ಆಡುತ್ತೇವೆ; ಹ್ಯಾಮ್ಲೆಟ್ಟನಂತೆ ಸಂಕಟೋದ್ವೇಗಕ್ಕೆ ತುತ್ತಾಗುತ್ತೇವೆ. ಅಂತರಂಗದ ಈ ಸ್ವರೂಪವಿರೂಪಗಳನ್ನು ನಾವು ಕಾವ್ಯದಲ್ಲಿ ಕಂಡಾಗ ನಮ್ಮ ಅಂತರಂಗದ ಮೈಕೈಗಳನ್ನು ಮುಟ್ಟಿಮುಟ್ಟಿ ನೋಡಿಕೊಳ್ಳುತ್ತೇವೆ.

ನಮಗೂ ಆ ವ್ಯಾಧಿ ಬಂದೀತೇನೋ, ನಮ್ಮನ್ನೂ ಅದು ಕಾಡಿಸೀತೇನೋ—ಎಂದುಕೊಳ್ಳುತ್ತೇವೆ. ಈ ಆತ್ಮಪರೀಕ್ಷೆಯೇ ಮಹಾಕಾವ್ಯದಿಂದ ನಮಗೆ ಆಗುವ ಪರಮ ಪ್ರಯೋಜನ.

ಷೇಕ್ಸ್ಪಿಯರಿನ 'ಹ್ಯಾಮ್ಲೆಟ್' ನಾಟಕದಲ್ಲಿ ಆ ರಾಜಕುಮಾರನು ಪಡುವ ಸಂಕಟವನ್ನು ಮನಸ್ಸಿಗೆ ತಂದುಕೊಳ್ಳೋಣ. ಅವನಿಗೆ ಅವನ ತಂದೆಯ ಪ್ರೇತವು ಕಾಣಿಸಿಕೊಂಡು "ನಿನ್ನ ತಾಯಿ ನಿನ್ನ ಚಿಕ್ಕಪ್ಪನಲ್ಲಿ ಅನುರಕ್ತಳಾಗಿ ನನ್ನನ್ನು ಕೊಲ್ಲಿಸಿ ಅವನನ್ನು ಸಿಂಹಾಸನಕ್ಕೆ ತಂದಿದ್ದಾಳೆ. ಈ ಘೋರವಾದ ಅನ್ಯಾಯಕ್ಕೆ ನೀನು ಪ್ರತೀಕಾರ ಮಾಡಬೇಡವೆ?" ಎಂದು ಕೇಳುತ್ತದೆ. ಆಗ ಹ್ಯಾಮ್ಲೆಟ್ಟನ ಮನಸ್ಸು ಹೇಗೆ ಆಗಿರಬೇಕು? ನಮ್ಮಲ್ಲಿ ಯಾರಿಗಾದರೂ ಅಂಥ ಸನ್ನಿವೇಶ ಒದಗಿದರೆ ಅವರು ಏನು ಮಾಡಿಯಾರು? ಉತ್ತರವನ್ನು ಊಹಿಸುವುದು ಕಡುಕಷ್ಟ.

ಜಮದಗ್ನಿ ಋಷಿಯು ತನ್ನ ಮಕ್ಕಳನ್ನು ಒಬ್ಬೊಬ್ಬರನ್ನಾಗಿ ಕರೆದು ಅವರ ತಾಯಿಯು ಮನಸ್ಸಿನಿಂದ ವ್ಯಭಿಚಾರ ಮಾಡಿದವಳೆಂದೂ ಶಿರಶ್ಛೇದನೆ ಆಕೆಗೆ ತಕ್ಕ ಪ್ರಾಯಶ್ಚಿತ್ತವೆಂದೂ ವಿಧಿಸಿದಾಗ ಮೂವರು ಮಕ್ಕಳು ಭಯಭ್ರಾಂತರಾಗಿ ತಂದೆಯ ಆಜ್ಞೆಯನ್ನು ನಿರಾಕರಿಸಿ ಓಡಿಹೋದರು. ಕಿರಿಯವನಾದ ಪರಶುರಾಮನು ತಂದೆಯ ಆಜ್ಞೆಯನ್ನು ಕರ್ತವ್ಯಬುದ್ಧಿಯಿಂದ ನಡಸಿದ. ನಡಸಿದರೂ ಆ ಕಾರ್ಯದ ನಿರ್ದೋಷತ್ವದ ವಿಷಯದಲ್ಲಿ ಅವನಿಗೆ ಶಂಕೆ ತಪ್ಪಲಿಲ್ಲ. ಆ ಶಂಕೆಯ ಪರಿಹಾರಕ್ಕಾಗಿ ತೀರ್ಥಯಾತ್ರೆ ಮಾಡಿ ತಪಶ್ಚರ್ಯೆ ನಡಸಿದ.

ಪರಶುರಾಮನ ಕಥೆಯಿಂದಲೂ ಹ್ಯಾಮ್ಲೆಟ್ಟನ ಕಥೆಯಿಂದಲೂ ನಮಗೆ ಜೀವಸಂಕಟದ ದರ್ಶನವಾಗುತ್ತದೆ. ಅದು ಅರಿಸ್ಟಾಟಲ್ ಹೇಳುವಂತೆ 'ಕೆಥಾರ್ಸಿಸ್' (Catharsis) ಜೀವಮಲವಿರೇಚಕ-ಜೀವಶೋಧಕವಾಗುತ್ತದೆ.

ನಮ್ಮ ಪೂರ್ವಿಕರು ಕಾವ್ಯದ ಲಕ್ಷಣವನ್ನು ಹೇಳಹೊರಟು 'ಕಾವ್ಯಂ ಯಶಸೇಽರ್ಥ-ಕೃತೇ ವ್ಯವಹಾರವಿದೇ' ಎಂದು ಮೊದಲಾಗಿ ಹೇಳಿದರು. ಈ ಲಕ್ಷಣಗಳು ಉಂಟಾದ ಕಾವ್ಯಗಳು ಇರಬಹುದು. ಅವು ಸಾಮಾನ್ಯ ಕಾವ್ಯಗಳು. ಮಹಾಕಾವ್ಯವಾದರೋ ಮನುಷ್ಯಜೀವನದ ಆಳನೀಳಗಳನ್ನು ಮೇಲಕ್ಕೆತ್ತಿ ತೋರಿಸುತ್ತದೆ. ಇಂಗ್ಲಿಷಿನಲ್ಲಿಯೂ ಕಾವ್ಯದ ಸ್ವರೂಪವನ್ನು ನಿರ್ದೇಶಿಸಹೊರಟು ಚರ್ಚೆ ನಡೆದಿದೆ. ಅಲ್ಲಿಯೂ ಸೂಚೀ ನಿಷ್ಕರ್ಷೆಯುಳ್ಳ ಲಕ್ಷಣಸೂತ್ರವು ಸಿದ್ಧವಾಗಿಲ್ಲ. ಮ್ಯಾತ್ಯು ಆರ್ನಾಲ್ಡ್ ಕವಿಯು ಹೇಳಿದ 'Poetry is the criticism of life' (ಕಾವ್ಯವು ಜೀವನಪರಾಮರ್ಶೆ) ಎಂಬ ಮಾತು ಸತ್ಯವೆಂದು, ಅಥವಾ ಸತ್ಯಪ್ರಾಯವೆಂದು ನಾವು ಅಂಗೀಕರಿಸಬಹುದು.

ಪ್ರಪಂಚದ ಮಹಾಸಾಹಿತ್ಯವು ಈ ಜಾತಿಗೆ ಸೇರಿದ್ದು. ನಮ್ಮ 'ರಾಮಾಯಣ' ಏನನ್ನು ಮಾಡುತ್ತದೆ? ಶ್ಲೋಕಗಳು ಇಂಪಾಗಿವೆ; ವರ್ಣನೆಗಳು ಸೊಗಸಾಗಿವೆ; ಸಂಭಾಷಣೆಗಳು ಮನಮುಟ್ಟುವ ಹಾಗಿವೆ; ಕಥೆಯು ಕುತೂಹಲವುಂಟುಮಾಡಿ ಸಮಾಧಾನ ಕೊಡುತ್ತದೆ. ಇದಿಷ್ಟೇಯೋ ಆ ಮಹಾಕಾವ್ಯದ ಪ್ರಯೋಜನ, ಅಥವಾ ಇನ್ನೂ ಮೇಲಿನದುಂಟೋ? ಉಂಟು. ಮನುಷ್ಯಜೀವನವು ಯಾವುದಕ್ಕಾಗಿ?—ಎಂಬ ಪ್ರಶ್ನೆಯನ್ನು ನಾವು ನಮನಮಗೇ ಹಾಕಿಕೊಂಡು ಉತ್ತರ ಕಂಡುಕೊಳ್ಳುವಂತೆ ಅದು

ಮಾಡುತ್ತದೆ. ಭರತನು ಪಡೆದ ಲಾಭವೇನು? ಲಕ್ಷ್ಮಣನು ಪಟ್ಟ ಸುಖವೇನು? ಆಂಜನೇಯನು ಹಾರಾಡಿ ಹಾರಾಡಿ ಸಾಧಿಸಿಕೊಂಡದ್ದೇನು? ಶ್ರೀರಾಮನೇ ಪಟ್ಟ ಭೋಗಭಾಗ್ಯಗಳೇನು? ಈ ಪ್ರಶ್ನೆಗಳು ನಮ್ಮ ಮನಸ್ಸಿನಲ್ಲಿ ಉದಿಸಿದಾಗ ನಮ್ಮ ಜೀವನದ ದೃಷ್ಟಿ ಬೇರೊಂದು ಕಡೆಗೆ ತಿರುಗುತ್ತದೆ. ಅದೇ ಆತ್ಮಶೋಧನೆ. ಅದರಿಂದ ಜೀವದ ಉದ್ಧಾರ.

ಪೂರ್ವಿಕರು ಕಾವ್ಯವು ನೀತಿಯನ್ನು ತಿಳಿಸುತ್ತದೆ, ಧರ್ಮವನ್ನು ಕಲಿಸುತ್ತದೆ—ಎಂದು ಹೇಳುತ್ತಿದ್ದರು. ಅದು ಅತಿವ್ಯಾಪ್ತಿಯ ಮಾತು. ಕಾವ್ಯವು ನೀತಿಯನ್ನು ಕಲಿಸುವುದಿಲ್ಲ; ನಾವುನಾವಾಗಿ ಹುಡುಕಿ ನೀತಿಯನ್ನು ಕಂಡುಕೊಳ್ಳುವಂತೆ ಪ್ರೇರಣೆ ಮಾಡುತ್ತದೆ. 'ಮಹಾಭಾರತ'ವು ಧರ್ಮವನ್ನು ಸಾಕ್ಷಾತ್ತಾಗಿ ವಿಧಿಸುವುದಿಲ್ಲ. ಧರ್ಮವನ್ನು ಸಾಕ್ಷಾತ್ತಾಗಿ ಹೇಳುವ ಗ್ರಂಥ 'ಮನುಸ್ಮೃತಿ'. ಭಾರತವಾದರೋ ನೂರಾರು ದೃಶ್ಯಗಳನ್ನು ಕಣ್ಣ ಮುಂದೆ ತಂದು ನಾವು ಆ ದೃಶ್ಯಗಳಿಂದ ಕೆರಳುವಂತೆ ಮಾಡುತ್ತದೆ. ನಾವು ಆ ಅನುಭವದಿಂದ ಮನಸ್ಸು ಕೆರಳಿ ಚಿಂತಾಕ್ರಾಂತರಾಗಿ, ಇವನು ಮಾಡಿದ್ದು ಸರಿಯೆ? ಅವನು ಮಾಡಿದ್ದು ಯುಕ್ತವೆ?—ಎಂದು ಮೊದಲಾಗಿ ಪ್ರಶ್ನೆ ಹಾಕಿಕೊಳ್ಳುತ್ತೇವೆ. ಅದರಿಂದ ನಮ್ಮ ಜೀವದ ದೃಷ್ಟಿಯು ಉತ್ತಮವಾದದ್ದನ್ನು ಹುಡುಕಹೊರಡುತ್ತದೆ. ಅದೇ ಧರ್ಮಪ್ರಚೋದನೆ.

ಹೀಗೆ ಮಹಾಕಾವ್ಯವು ನಮ್ಮ ಜೀವನವು ಸಾರ್ಥಕವಾಗುವ ದಾರಿಯನ್ನು ನಾವಾಗಿ ಹುಡುಕಿ ಕಂಡುಕೊಳ್ಳುವಂತೆ ಪ್ರೇರಿಸುತ್ತದೆ. ಆದದ್ದರಿಂದಲೇ ಮಹಾಕಾವ್ಯಕ್ಕೆ 'ಕಾಂತಾಸಂಮಿತಿ' ಎಂದು ಹೆಸರು ಬಂದಿದೆ. ಶಾಸ್ತ್ರಗಳು ನಮಗೆ ನೀನು ಹೀಗೆ ಮಾಡಬೇಕು, ಹಾಗೆ ಮಾಡಕೂಡದು—ಎಂದು ಆಜ್ಞೆ ಕೊಟ್ಟು ಕಾನೂನು (Law) ಮಾಡುವಂತೆ ದಂಡನೆಯ ಭಯವನ್ನು ತೋರುತ್ತವೆ. ಆದದ್ದರಿಂದ ಅವು 'ಪ್ರಭುಸಂಮಿತಿ'. ಪುರಾಣ ಇತಿಹಾಸಗಳು ಹಿಂದಿನ ಲೋಕಾನುಭವವನ್ನು ಉದಾಹರಿಸಿ ನೀತಿಯನ್ನು ಸೂಚಿಸುತ್ತವೆ. ಇದು ಸ್ನೇಹಿತನ ದಾರಿ, 'ಸುಹೃತ್ಸಂಮಿತಿ'. ಕಾವ್ಯವಾದರೋ ಪ್ರಿಯ ಸುಂದರಿಯಂತೆ. ಪ್ರಿಯಳು ತನ್ನ ಒಡೆಯನಿಗೆ ಹೀಗೆ ಮಾಡು, ಹಾಗೆ ಮಾಡು ಎಂದು ವಿಧಿಸುವುದಿಲ್ಲ; ಇದು ಸರಿ, ಅದು ತಪ್ಪು ಎಂದು ಸೂಚಿಸುವುದೂ ಇಲ್ಲ. ಆಕೆ ತನ್ನ ಒನಪು ವೈಯ್ಯಾರಗಳಿಂದ ಪ್ರಿಯನ ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುತ್ತಾಳೆ. ಆಕೆಯ ಮಧುರ ಕಟು ಮುಖಭಂಗಿಗಳಿಂದ, ಆಕೆಯ ಕಣ್ಣುಸನ್ನೆಗಳಿಂದ, ಆಕೆಯ ಮೂಗುಹಾರಿಕೆ ತುಟಿತಿರಿಚುಗಳಿಂದ, ಅವನು ತಾನಾಗಿ ಆಕೆಯ ಇಂಗಿತವನ್ನು ಅರಿತುಕೊಂಡವನಾಗುತ್ತಾನೆ; ತಾನಾಗಿ ಆಕೆಯ ಮನೋಗತವನ್ನು ಕಂಡುಕೊಂಡು ಆಕೆಗೆ ಸಂತೋಷವಾಗುವಂತೆ ತನ್ನ ಸ್ವೈಜವಾದ ಉತ್ಸಾಹದಿಂದ ನಡೆದುಕೊಳ್ಳುತ್ತಾನೆ. ಕಾವ್ಯವು ಸ್ಪಷ್ಟವಾಗಿ ನೀತಿಯನ್ನು ಹೇಳುವುದಿಲ್ಲ. ಯಾರ್ಯಾರ ಬಾಯಿಂದಲೋ ಏನೇನು ಮಾತುಗಳನ್ನೋ ಆಡಿಸುತ್ತದೆ. ಆ ಉತ್ತರ ಪ್ರತ್ಯುತ್ತರಗಳ ನಡುವೆ ನಾವು ಕಿವಿಯುಂಟಾದವರಾದರೆ ಒಂದು ತತ್ತ್ವವನ್ನು ಕಾಣುವಂತಾಗುತ್ತದೆ. ಅದೇ ಧರ್ಮಬೀಜ. ಅದೇ ನೀತಿಸಾರ.

ಷೇಕ್ಸ್ಪಿಯರ್ ಕವಿಯಿಂದ ನಮಗೆ ಆಗುವ ಉಪಕಾರ ಇಂಥಾದ್ದು. ಗ್ರೀಸಿನ

ಹೋಮರ್ ಕವಿಯೂ ಅಲ್ಲಿಯ ದುರಂತನಾಟಕಕರ್ತರೂ ಮೇಲೆ ಹೇಳಿದ ಜೀವಿತ ಸಮೀಕ್ಷಾಪ್ರಚೋದಕರಾದ ಕವಿಗಳು. ಇಟಲಿಯ ಡಾಂಟೆಯನ್ನೂ ಆ ವರ್ಗಕ್ಕೆ ಸೇರಿಸ ಬಹುದು. ಆದರೆ ಯೂರೋಪ್ ಭೂಖಂಡದ ಕಾವ್ಯಸಾಮ್ರಾಜ್ಯದಲ್ಲಿ ಚಕ್ರವರ್ತಿ ಯಾದವನು ಷೇಕ್‌ಸ್ಪಿಯರ್. ಆತನ ಪ್ರಸಿದ್ಧವಾದ ದುರಂತನಾಟಕಗಳಲ್ಲಿ ಮಾತ್ರವೇ ಅಲ್ಲ, ಆತನ 'ರೋಮಿಯೊ ಅಂಡ್ ಜೂಲಿಯೆಟ್' ಮೊದಲಾದ ವಿಲಾಸನಾಟಕ ಗಳಲ್ಲಿಯೂ 'ನಾಲ್ಕನೆಯ ಹೆನ್ರಿ' ಮೊದಲಾದ ಚಾರಿತ್ರಕ ನಾಟಕಗಳಲ್ಲಿಯೂ ನಮಗೆ ಎದ್ದುಕಾಣುವುದು ಮನುಷ್ಯಸ್ವಭಾವದ ಚೇಷ್ಟಿತಗಳು. ಮನುಷ್ಯಸ್ವಭಾವವು ಒಂದು ಮಹಾಸಮುದ್ರ. ಅದರ ಯಾವಯಾವ ಭಾಗಗಳಲ್ಲಿ ಯಾವಯಾವ ಆಳದಲ್ಲಿ ಎಂಥೆಂಥ ಸುಳಿಗಳೂ ಎಂಥೆಂಥ ಪ್ರವಾಹಗಳೂ ಎಂಥೆಂಥ ಜಲಜಂತುಗಳೂ ಎಂಥೆಂಥ ಮುತ್ತುರತ್ನಗಳೂ ಇರುತ್ತವೆಂಬುದನ್ನು ಷೇಕ್‌ಸ್ಪಿಯರನು ತೋರಿಸುವಂತೆ ಅಷ್ಟು ವಿಸ್ತಾರವಾಗಿ, ಅಷ್ಟು ಮನೋರಂಜಕವಾಗಿ, ಅಷ್ಟು ವಿವಿಧವಾಗಿ ತೋರಿಸಿರುವವರು ಮತ್ತೊಬ್ಬರಿಲ್ಲ. ಕಥಾಸಂದರ್ಭದ ರಚನೆ, ಅದಕ್ಕುಚಿತವಾದ ವಾಗ್ಗುಂಫನ, ಸಂಭಾಷಣೆಯ ಲವಲವಿಕೆ—ಇವೆಲ್ಲ ಸೇರಿ ಆತನ ನಾಟಕಗಳು ಕೃತಕೃತ್ಯಗಳಾಗಿವೆ. ಆ ಕೃತ್ಯವು ಜೀವಿತಸಮೀಕ್ಷಾಪ್ರಚೋದನೆ. ಆ ಮಹೋಪಕಾರವನ್ನು ಮಾಡಿರುವವರಲ್ಲಿ ಆತನನ್ನು ನಾವು ವಾಲ್ಮೀಕಿ ವ್ಯಾಸರ ಪಂಕ್ತಿಯೊಳಗೆ ಅವರ ಸಮೀಪಕ್ಕೆ ಸೇರಿಸಬಹುದು. ಅವರಿಬ್ಬರೂ ಮಹರ್ಷಿಗಳಾದ ವರಕವಿಗಳು. ಆತನೂ ವರಕವಿ ಹೌದು. ಆದರೆ ಅವರಿಬ್ಬರೂ ನಮ್ಮನ್ನು ಈ ಲೋಕದ ಅಂಚಿಗೆ ಕರೆದುಕೊಂಡುಹೋಗಿ ಅಲ್ಲಿಂದ ಲೋಕಾ ತೀತದ ದರ್ಶನವನ್ನು ಕೊಂಚವಾದರೂ ಮಾಡಿಸುತ್ತಾರೆ. ಷೇಕ್‌ಸ್ಪಿಯರಿನಲ್ಲಿ ಲೋಕಾ ತೀತದ ದರ್ಶನ ಕಾಣದಿದ್ದರೂ ಅವನೂ ನಮ್ಮನ್ನು ಇಹಲೋಕದ ಅಂಚಿಗೆ ಕರೆದು ಕೊಂಡುಹೋಗಿ, 'ಲೋಕಾತೀತವನ್ನು ನೀವೇ ಹುಡುಕಿ ನೋಡಿರಿ' ಎಂದೆನ್ನುವಂತಿದೆ. ಹೀಗೆ ನಮಗೆ ಉಪಕಾರಿಯಾದ ಷೇಕ್‌ಸ್ಪಿಯರ್ ಮಹಾಕವಿಗೆ ಸಹಸ್ರ ಪ್ರಣಾಮಗಳು.





# ಷೇಕ್‌ಸ್ಪಿಯರ್—ಒಂದು ನೋಟ

ವಿ. ಸೀತಾರಾಮಯ್ಯ

ಇಂಗ್ಲಿಷ್ ಶಿಕ್ಷಣ ಪಡೆದವರ ಮೇಲೆಲ್ಲ ಬಿದ್ದಿರುವ ಪ್ರಭಾವಗಳಲ್ಲಿ ಇಂಗ್ಲಂಡಿನ ಕವಿಗಳು, ನಾಟಕಕಾರರು, ಪ್ರಬಂಧಕಾರರು, ವಿಮರ್ಶಕರು ಮುಂತಾದವರವು ಗಾಢವಾಗಿದ್ದಷ್ಟು ಇತರರವಾಗಿಲ್ಲ. ರಾಜಕೀಯವಾಗಿ, ಆರ್ಥಿಕವಾಗಿ ಅವರ ಸಂಬಂಧ ವಿಶೇಷವಾದ ದ್ದೇನೊ ಹೌದು. ಕೇವಲ ಸಾಂಸ್ಕೃತಿಕವಾಗಿ ದೊಡ್ಡ ಪರಿಣಾಮ ಉಂಟಾದುದು ಈ ಮೂಲಕ. ಆಧುನಿಕ ಭಾರತದ ಸೃಷ್ಟಿಸಾಹಿತ್ಯದಲ್ಲೆಲ್ಲ ಅದರ ಪ್ರಭಾವದ ಮತ್ತು ಆಘಾತದ ಗುರುತನ್ನು ಕಾಣಬಹುದು. ಆದರೆ ಎಲ್ಲರಿಗಿಂತ ಹೆಚ್ಚು ಸಂತೋಷವನ್ನು ಕೊಟ್ಟವನು ಅತಿ ವಿಶಿಷ್ಟವಾದ ಪ್ರತಿಕ್ರಿಯೆಗಳನ್ನು ಕಲ್ಪನೆಯಲ್ಲಿಯೂ ಕೃತಿರಚನೆಯಲ್ಲಿಯೂ ಉಂಟುಮಾಡಿದವನು ಎಂದರೆ ಷೇಕ್‌ಸ್ಪಿಯರ್. ಕಾರ್ಲೈಲ್ ಒಮ್ಮೆ ಹೇಳಿದ: ನಿಮಗೆ ಷೇಕ್‌ಸ್ಪಿಯರ್ ಬೇಕೊ ಭಾರತದ ಮೇಲಿನ ಆಂಗ್ಲಸಾಮ್ರಾಜ್ಯ ಉಳಿಯುವುದು ಬೇಕೊ ಎಂದು ಯಾರಾದರೂ ಕೇಳಿದರೆ, ತನ್ನ ಆಯ್ಕೆ ಷೇಕ್‌ಸ್ಪಿಯರ್ ಪರ ಎಂದು. ಅದು ಅತ್ಯುಕ್ತಿ ಎಂದು ಯಾರೂ ಎಣಿಸತಕ್ಕದ್ದಲ್ಲ; ಮಾನವ ಮೌಲ್ಯಗಳಿಗೂ ಜೀವದ ಆಶೋತ್ತರಗಳಿಗೂ ಬೆಲೆ ಅವರ ಮನಸ್ಸಿನಲ್ಲಿ ಇರುವುದಾದರೆ, ಲೌಕಿಕವಾದ ಮತ್ತು ಭೌತಿಕವಾದ ಸಾಮ್ರಾಜ್ಯವನ್ನು ಗೆಲ್ಲಲೂ ಉಳಿಸಿಕೊಳ್ಳಲೂ ಬಲಪ್ರಯೋಗ ಬೇಕು; ಕಪಟಗಳು ಬೇಕು. ಭಯ, ಅನುಗ್ರಹ ಅದರ ಬೆಂಬಲಕ್ಕೂ ಪೋಷಣೆಗೂ ಸಿಲ್ಲುತ್ತವೆ. ಆದರೆ ಮಾನವ ಹೃದಯದ ಮೇಲಿನ ಆಧಿಪತ್ಯ ಪ್ರೀತಿರಚಿತ. ಅದು ಒಂದು ಬಗೆಯ ಆಧ್ಯಾತ್ಮಿಕ ಋಣಾನುಬಂಧವೇ. ಷೇಕ್‌ಸ್ಪಿಯರ್ ಬರೆದ ಚೌದಶಪದಿಗಳಲ್ಲಿ (XXXII) ಒಂದು ಮನವಿ ಇದೆ. ತಾನು ಯಾರ ವಿಶ್ವಾಸವನ್ನು ತನ್ನ ಕಡೆ ಒಲಿಸಿಕೊಳ್ಳಬೇಕೆಂದು ಬಯಸಿದನೊ ಆತನಿಗೆ ಮಾಡಿದ ಮನವಿ ಅದು: 'ಇತರರನ್ನು ಅವರ ಶೈಲಿಗಾಗಿ ಓದುತ್ತೇನೆ; ಅವನದನ್ನು ಅವನ ಒಲವಿಗಾಗಿ ಎಂಬ ಅಕ್ಕರೆ ತೋರಿದರೆ ಸಾಕು'—ಎಂದು ಬರೆಯುತ್ತಾನೆ. ಷೇಕ್‌ಸ್ಪಿಯರ್ ಪರವಾಗಿ ಅನೇಕರ ನಿಲವು, ಪಕ್ಷಪಾತ ಈ ಬಗೆಯವು.

ನನಗಿಂತ ಉತ್ತಮರಾದವರು ಅವನ ಕೃತಿಗಳನ್ನೂ ಯೋಗ್ಯತೆಯನ್ನೂ ಕುರಿತು ಹೆಚ್ಚು ಚೆನ್ನಾಗಿ ವರ್ಣಿಸಿದ್ದಾರೆ. ಬಹುಶಃ ಅಂತಹ ವರ್ಣನೆ ಮಿತಿಮೀರುವಷ್ಟು ಇದೆ. ಇಂಗ್ಲಿಷಿನಲ್ಲಿಯಂತೂ ಹಾಗೆ. ಈಗ್ಗೆ ನಲವತ್ತು ವರ್ಷಗಳ ಹಿಂದೆ ಲೆಸ್ಲಿ ಸ್ಟೀವನ್ ಹೇಳಿದರು: ಇನ್ನು ಮೇಲೆ ಯಾರಾದರೂ ಷೇಕ್ಸ್ಪಿಯರನ್ನು ಕುರಿತು ಬರೆಯುವುದಾದರೆ ಅವರು ಲೈಸೆನ್ಸ್ ಪಡೆಯಬೇಕೆಂದು ನಿರ್ಬಂಧಪಡಿಸುವುದಗತ್ಯ ಎಂದು. ಇತ್ತ, ನನ್ನ ಗುರುವರ್ಗದವರಲ್ಲೊಬ್ಬರು ಒಮ್ಮೆ ಹೇಳಿದ್ದರು: 'ಕಾಳಿದಾಸನಿಗೆ ಜನ್ಮವಿತ್ತ ಭರತ ಖಂಡವೇ ಅವನ ವ್ಯಾಖ್ಯಾನಕಾರರಿಗೂ ಜನ್ಮವಿತ್ತಿದೆಯಲ್ಲವೆ?' ಎಂದು. ಷೇಕ್ಸ್ಪಿಯರ್ ಮೇಲೆ ಬೆಳೆದ ಸಾಹಿತ್ಯಿಕ ಮೆಳೆಯೊಡನೆ— ಕಾಡಿನೊಡನೆ — ಹೋಲಿಸಿದರೆ ಕಾಳಿದಾಸನ ಮೇಲಿನದು ಸುಮಾರು ಏನೂ ಇಲ್ಲವೆನ್ನಬೇಕು. ಆದರೂ ಅವನ ಮೇಲೆ ಬೆಳೆದ ವಿಮರ್ಶೆ ವ್ಯಾಖ್ಯಾನ ಪರಿಶೋಧನೆಗಳ ಪರಿಮಾಣವನ್ನು ಈ ಅರ್ಧ ಶತಮಾನದಲ್ಲಿ ಎಣಿಸಿದರೆ ಆವರೆಗೂ ನಡೆದಿದ್ದಂತಹ ಮಿಕ್ಕೆಲ್ಲದರ ಒಟ್ಟು ಪರಿಮಾಣಕ್ಕಿಂತ ದೊಡ್ಡದಾಗುತ್ತದೆ. ಇಷ್ಟಾದರೂ ಮೂಲ ಸಮಸ್ಯೆಗಳೆಲ್ಲ ಸುಮಾರು ಇಂದೂ ಹಿಂದಿನಂತೆಯೇ ಇವೆ. ನಾಟಕಗಳ ಕರ್ತೃ ಯಾರು? ಷೇಕ್ಸ್ಪಿಯರೆ, ರಟ್ಲೆಂಡೆ, ಬೇಕನ್ನೆ, ಆಕ್ಸ್‌ಫರ್ಡೆ? ಇತ್ಯಾದಿ. ಅವನ ಹೆಸರಿಗೆ ಉಳಿದಿರುವ ಎಲ್ಲ ನಾಟಕಗಳನ್ನೂ ಅವುಗಳಲ್ಲಿರುವ ಎಲ್ಲವನ್ನೂ ಅವನೇ ಬರೆದನೆ ಎನ್ನುವ ವಿವಾದ ಇನ್ನೂ ಇದೆ. ಅವನ 154 ಚೌದಶಪದಿಗಳು ಮುಂಚಿನ ಕಾಲಮಾನವಾದ 1592–5 ರಲ್ಲಿ ಬರೆದವೆ? ಆ ತರುವಾಯದ 1597–1605ರವೆ? ಬೇರಾವುದೊ ಕಾಲದವೆ? ಅಲ್ಲಿ ನಿರ್ದಿಷ್ಟನಾದ ವ್ಯಕ್ತಿ ಸೌತ್ಯಾಂಪ್ಟನ್ ಶ್ರೀಮಂತನೆ? ಪೆಂಬ್ರೋಕ್ ಶ್ರೀಮಂತನೆ? ಅಲ್ಲಿರುವ W. H. ನಿಜವಾಗಿ ಯಾರು? W. H. ಏ ಅಥವಾ H. W. ಎಂದೆ? ಅಥವಾ ಹ್ಯಾಟ್ ವ್ಯಾಪಾರಸ್ಥನಾದ ಅವನ ಭಾವನೊಬ್ಬನೆ? ಅಥವಾ W. S. ಎಂಬುದು ಅಚ್ಚಿನ ಪ್ರಮಾದದಿಂದ ಹೇಗೊ W. H. ಎಂದು ನಮ್ಮವರೆಗೂ ತಪ್ಪಾಗಿ ಉಳಿದುಕೊಂಡು ಬಂದಿದೆಯೊ? ಥಾರ್ಪ್ ಅಚ್ಚುಮಾಡಿಸಿದ ವಿಷಯದಲ್ಲಿಯೇ ಸಂಶಯಾತ್ಮಕವಾದ ಇನ್ನೇನಾದರೂ ಸಂಗತಿಗಳಿವೆಯೊ? ಅಲ್ಲಿ ನಿರೂಪಿತವಾಗುವ ಕೃಷ್ಣೆ (The Dark Lady) ನಿಜವಾಗಿ ಮೇರಿ ಫಿಟ್ಟನ್ ಎಂಬಾಕೆಯೆ? ತನ್ನ ಪ್ರತಿಸ್ಪರ್ಧಿಯಾದ ಕವಿ ಮಾರ್ಲೊವೆ, ಚಾಪ್‌ಮನ್ ಕವಿಯೆ? ಇನ್ನಾವನಾದರೂನೆ? ಇತರರಿಂದ ಅವನು ತೆಗೆದುಕೊಂಡದ್ದು, ಕದ್ದದ್ದು ಎಷ್ಟು? ಇತರರಿಗೆ ಅವನಿಂದಾದ ತಿದ್ದುಪಾಡು, ದಾನ ಎಷ್ಟು? ಅವನಿಗೆ ಓದುಬರಹ ಬರುತ್ತಿದ್ದವೆ, ಇಲ್ಲವೆ? ಹೀಗೇ ಇನ್ನೂ ಎಷ್ಟೊ ಕೊನೆಯಿಲ್ಲದಷ್ಟು ಭಿನ್ನಾಭಿಪ್ರಾಯಗಳಿವೆ. ಅವನ ನಾಟಕಗಳ ಪಾಠಗಳನ್ನು, ಮೂಲ ಆಕರಗಳನ್ನು, ವಸ್ತುವನ್ನು, ರಚನೆಯನ್ನು ಕುರಿತು, ಶೈಲಿ, ನಿರೂಪಣೆ —ಉದ್ದೇಶ—ಇವನ್ನು ಕುರಿತು, ಯಾವ ಸಂದರ್ಭಗಳಲ್ಲಿ ಅವುಗಳನ್ನು ಅವನು ಬರೆದ, ಅವುಗಳ ಆನುಪೂರ್ವಿ ಯಾವುದು ಎಂಬೆಲ್ಲ ವಿಷಯಗಳಲ್ಲಿಯೂ ನಿರಂತರ ಚರ್ಚೆ ನಡೆದಿದೆ. ಈ ಬಗೆಗೆ ನಡೆದಿರುವ ಅಭ್ಯಾಸ, ಪರಿಶೀಲನೆಗಳು ಬಹು ವಿಸ್ತಾರವಾದ ಕ್ಷೇತ್ರವ್ಯಾಪ್ತಿ ಉಳ್ಳವು. ಅವನ ಶಬ್ದಾರ್ಥಸಂಪತ್ತಿ, ಪ್ರಯೋಗವಿಲಾಸ, ಶೈಲಿ, ತಂತ್ರಾಂಶಗಳನ್ನು ಕುರಿತು ಎಷ್ಟು ಬಗೆಯ ವಿವೇಚನೆಗಳು ನಡೆದಿವೆಯೊ ಅವುಗಳ ಜೀವಗುಣವನ್ನೂ ಸಾಹಿತ್ಯಗುಣವನ್ನೂ ಕುರಿತು ಅಷ್ಟೇ ಹೊರಕ್ಕೆ ಬಂದಿವೆ. ಇಂದೂ ಆಸಕ್ತಿ

ಯಲ್ಲಿಯಾಗಲಿ ವಿಶ್ವಾಸ ಸಾಹಸಗಳಲ್ಲಾಗಲಿ ಯಾವ ಬಗೆಯ ಉತ್ಸಾಹವೂ ಇಳಿಮುಖ ವಾಯ್ತೆಂಬುದಕ್ಕೆ ಸಾಕ್ಷಿ ಇಲ್ಲ. ಶತಮಾನಕ್ಕೆರಡು ಬಾರಿ '16ರಲ್ಲಿ, '64ರಲ್ಲಿ ಪ್ರಶಸ್ತಿ ಮಂಗಳ ಬೆಳೆದೇ ಇದೆ. ಸೇವಿಸಿದಷ್ಟೂ ಆ ಪಾನಕಕ್ಕೆ ದಾಹ ಹೆಚ್ಚಾಗುತ್ತಲೇ ಇರುತ್ತದೆ. ಕ್ಲಿಯೊಪಾಟ್ರಳನ್ನು ಕುರಿತು:

> ವಯಸ್ಸು ಆಕೆಯನ್ನು ಕಳೆಗುಂದಿಸಿ ಸುರುಟಿಸದು; ಆಕೆಯ ಮೋಹಕತೆಯ ಅನಂತ ವಿವಿಧತೆಯನ್ನು ರೂಢಿ ಹಳಸಲು ಮಾಡದು: ಇತರ ಹೆಣ್ಣುಗಳು ತಾವು ಊಡುವ ಊಟದಿಂದ ಹಸಿವನ್ನಾರಿಸುವುದರ ಜೊತೆಗೆ ವೆಗಟು ಮಾಡುತ್ತಾರೆ; ಅವಳೋ: ಅತೀವ ತೃಪ್ತಿ ಕೊಡುತ್ತ ಹಸಿವನ್ನು ಹೆಚ್ಚಿಸುತ್ತಾಳೆ.

—ಎಂದು ಇನೊಬಾರ್ಬಸ್ ಎಂಬ ಒಂದು ಪಾತ್ರ ವರ್ಣಿಸಿದ. ಹ್ಯಾಮ್ಲೆಟನ ಮೊದಲ ಸ್ವಗತ ಭಾಷಣದಲ್ಲಿಯೂ ಇಂಥದೇ ಆದರೆ ಅಡಕವಾದ ಮಾತೊಂದಿದೆ: 'ಮಾಡಿದ ಊಟವೇ ಅದಕ್ಕೆ ಹಸಿವನ್ನು ಹೆಚ್ಚಿಸಿದರೆ ಹೇಗೋ ಹಾಗೆ' (As if increase of appetite grows by what it feeds on) ಎಂಬುದು ಅದು. ಈ ವರ್ಣನೆ ಷೇಕ್ಸ್ಪಿಯರಿಗೂ ಹೊಂದುತ್ತದೆ.

ನಮ್ಮ ನಾಟಕಪ್ರಪಂಚದಲ್ಲಿ ಅವನ ಶಕ್ತಿಯ ವಿಪುಲತೆ (plenitude) ಇಲ್ಲ. ಅವನ ಚಾರಿತ್ರಿಕ ನಾಟಕಗಳಲ್ಲಿ, ರಮ್ಯನಾಟಕಗಳಲ್ಲಿ, ಸಾಂಕೇತಿಕಗಳಲ್ಲಿ ಹೊಮ್ಮಿ ಕಾಣುವ ಸುಖಾಂತ ದುಃಖಾಂತ ಸನ್ನಿವೇಶಗಳ ಪ್ರಪಂಚ ತುಂಬಾ ಸಂಪನ್ನವಾದುದು. ಇವುಗಳಲ್ಲಿ ನಾಟಕದ ಪಾಠಗಳನ್ನೂ ಮತ್ತು ಇತರ ಬಗೆಯ ಇತರ ಅಭ್ಯಾಸಗಳ ಪರಿಚಯವನ್ನೂ ಮಾಡಿಕೊಡಲು ಅವಕಾಶವಿಲ್ಲ. ಅವು ಪ್ರತಿಯೊಂದೂ ರಂಗದ ಮೇಲೆ ಪ್ರಯೋಗಗೊಂಡ ಚರಿತ್ರೆಯೂ ಇವಕ್ಕೆ ಸೇರಿದಾಗ — ಸಹಜವಾಗಿಯೊ ಬೇರೆ ಬೇರೆ ಖಯಾಲಿ ಬಂದಂತೆ ಅವನ್ನು ರಂಗದ ಮೇಲೆ ಪ್ರಯೋಗಿಸಿದಾಗಲೊ — ನಾಟಕಗಳನ್ನು ಕುರಿತಾದ ವಿಮರ್ಶೆಯೂ ಪ್ರಯೋಗವಿಮರ್ಶೆಯೂ ಅಭಿರುಚಿಯ ಚರಿತ್ರೆಯೂ ಜೊತೆಗೇ ಹೊಮ್ಮಿವೆ. ಎಲಿಜಬೆತ್ ರಾಣಿಯ ಕಾಲದಲ್ಲಿ ಮೂರು ಕಡೆ ತೆರೆದ, ಮುಂದಿನ ಪರದೆ ಇಲ್ಲದಿದ್ದ ಗ್ಲೋಬ್ ನಾಟಕಶಾಲೆಯಲ್ಲಿ ಕುಳಿತೊ ನಿಂತೊ ನಾಟಕ ನೋಡುತ್ತಿದ್ದವರ ಮನಸ್ಸು ಏತಕ್ಕೆ ಒಲಿಯುತ್ತಿತ್ತು ಎಂಬುದರ ಕಲ್ಪನೆ ಉಂಟಾಗುತ್ತದೆ. ರಂಗವೇದಿಕೆಯ ಮೇಲೆ ಕುಳಿತುಕೊಳ್ಳುತ್ತಿದ್ದ ಶ್ರೀಮಂತ ನರನಾರಿಯರ ಚಿತ್ರ — ಆ ಮಖಮಲ್, ಜರತಾರಿ, ರತ್ನಪ್ರಕಾಶ — ಹಾದುಹೋಗುತ್ತದೆ. ಅಪರಾಹ್ನ ಸಮಯದಲ್ಲಿ ನಡೆಯುತ್ತಿದ್ದ ಈ ಪ್ರದರ್ಶನಗಳಲ್ಲಿ ರಾತ್ರಿಗೇ ವಿಶಿಷ್ಟವಾದ ರಂಜಕ, ಅದ್ಭುತ, ರಮ್ಯ, ಭೀಷಣ ದೃಶ್ಯಸನ್ನಿವೇಶಗಳನ್ನು ಹೆಚ್ಚು ರಂಗಪರಿಕರವಿಲ್ಲದೆ ಹೇಗೆ ನಿರ್ವಹಿಸುತ್ತಿದ್ದರೊ? ಸ್ತ್ರೀಪಾತ್ರಗಳನ್ನು ನಿರ್ವಹಿಸುತ್ತಿದ್ದ ಪುರುಷನಟರು ದುರ್ದಮ್ಯ ಪ್ರೇಕ್ಷಕಗಣಕ್ಕೆ ಹೇಗೆ ಸತ್ಯಭ್ರಾಂತಿಯನ್ನುಂಟುಮಾಡುತ್ತಿದ್ದರೊ? ಈ ಕಾಲದ ಈ ದೂರದ ನಾವು ಅನುಭವಿಸಬೇಕೆನ್ನಿಸುತ್ತದೆ. ನಮ್ಮಲ್ಲಿಯೂ ಹೆಚ್ಚು ಪರದೆ ಪರಿಕರಗಳಾಗಲಿ ಬೆಳಕುಗಳ ಬೆಡಗುಗಳಾಗಲಿ ಇಲ್ಲದಿದ್ದ ಕಾಲವಿತ್ತು — ಮೊನ್ನೆಮೊನ್ನೆಯವರೆಗೂ; ಗಂಡಸರೇ ಇಲ್ಲಿಯೂ ಸ್ತ್ರೀಪಾತ್ರ ವಹಿಸುತ್ತಿದ್ದರು. ಒಂದು ಸಲ ಜೀವಂತಕಲೆಯ ಪ್ರಭಾವಕ್ಕೆ ಮನಸ್ಸು ತೆರೆಯಿತೆಂದರೆ ಉಳಿದುದೆಲ್ಲ ಗೌಣ ಎಂಬುದು ಇಲ್ಲಿಯೂ ಸ್ಥಾಪಿತವಾಗು

ತ್ತಿತ್ತು. ಆದರೆ ಅಲ್ಲಿನ ಕವಿತೆಯ ವೈಭವ ಎಲ್ಲ ಲೋಪದಾರಿದ್ರ್ಯಗಳನ್ನು ತುಂಬಿಕೊಡಬಲ್ಲದ್ದು, ಕಲಾಸಮಾಧಿಯನ್ನುಂಟುಮಾಡಬಲ್ಲದ್ದು ಎಂಬುದಕ್ಕೆ ಈ ಸಂಗತಿ ನಿತ್ಯ ಪ್ರಮಾಣ. ಆ ನಟರ ಅಭಿನಯಶಕ್ತಿಯೂ ರಸಸಾಧನೆಯೂ ಚಾತುರ್ಯವೂ ತುಂಬಾ ಉತ್ತಮವಾಗಿದ್ದಿರಬೇಕು. ಹಲವೇಳೆ ಕೆಲವು ನಟರಿಗಾಗಿಯೇ ಕೆಲವು ಬಗೆಯ ಪಾತ್ರಗಳನ್ನೂ ಸನ್ನಿವೇಶಗಳನ್ನೂ ನಾಟಕಕಾರನು ಕಲ್ಪಿಸಿರುವ ಹಾಗಿದೆ. ಅವನ ಕಂಪನಿಯಲ್ಲಿ ಅವಳಿಗಳಂತಹ ಎರಡು ಜೊತೆ ಚೆಲುವ ನಟರಿದ್ದರಂತೆ! ಅವರಿಗಾಗಿ ಸದೃಶ ಸನ್ನಿವೇಶಗಳನ್ನೂ ಭ್ರಾಂತಿವಿಲಾಸಗಳನ್ನೂ ಕಲ್ಪಿಸಿದನೆನ್ನುತ್ತಾರೆ. ಇದೂ ನಿಜ. 'ಹ್ಯಾಮ್ಲೆಟ್'ಅಲ್ಲಿ ನಡೆಯುವ ಗರ್ಭಾಂಕದ ಸಂದರ್ಭನಟರಿಗೆ ಹ್ಯಾಮ್ಲೆಟ್ ಕೊಡುವ ಶಿಕ್ಷಣ, ನಿರ್ದೇಶನ ಆ ಕಾಲಕ್ಕೆ ಆವಶ್ಯಕವಾಗಿದ್ದಿರಬೇಕು. ಅದು ಷೇಕ್ಸ್ಪಿಯರ್ ಮಾಡಿದ ಅಭಿನಯಕಲೆಯ ಟೀಕೆ. ಆ ಟೀಕೆಯ ಅಗತ್ಯ ನಮ್ಮ ನಾಡಿನಲ್ಲಿ ಇಂದಿಗೂ ಇದೆ.

ಆತನು ಕರ್ತೃ ಎಂದು ಗಣಿಸಲಾದ 36 ನಾಟಕಗಳಲ್ಲಿಯೂ ಹಲವು ತಲೆಮಾರು



ರಾಜಕುಮಾರ ಹಾಲ್ (ಮುಂದೆ ಐದನೆಯ ಹೆನ್ರಿ)

ಗಳ ಇಂಗ್ಲಿಷ್ ರಾಷ್ಟ್ರಚರಿತ್ರೆ ಇದೆ. ಅವುಗಳಲ್ಲಿ 'ನಾಲ್ಕನೆ ಹೆನ್ರಿ' — ಎರಡು ಭಾಗ ಗಳಲ್ಲಿ — ನಿರ್ಮಾಣವಾದ ಫಾಲ್‌ಸ್ಟಾಫನ ಮತ್ತವನ ಸಂಗಡಿಗರ ಪಾತ್ರಗಳು ನಾಟಕೀಯವಾಗಿ ಲೋಕೋತ್ತರವಾದವು. ಅಂತಹವುಗಳನ್ನು ಇನ್ನಾರೂ ಲೋಕದಲ್ಲಿ ನಿರ್ಮಿಸಿಲ್ಲ. ಅಲ್ಲಿನ ಮಂಕುದಿಣ್ಣೆಗಳ, ಪುಂಡರ, ಕಳ್ಳರ, ವಿಟ, ಲಂಪಟರ ತಂಡವೂ ಮುಂದೆ ಐದನೆ ಹೆನ್ರಿ ರಾಜನಾದ ಕೂಡಲೆ ದೇಶದ ಕಣ್ಮಣಿಯಾದ ಹೆನ್ರಿ ಪೋಲಿಯಾಗಿ ಪೋಕರಿಯಾಗಿ ಈ ನಾಟಕಗಳಲ್ಲಿ ವರ್ಣಿತವಾಗಿರುವ ರೀತಿ ಕೂಡ ವಿಸ್ಮಯಜನಕವೇ. ಈ ಪುಂಡ ಪೋಕರಿಗಳ ತಂಡವನ್ನು ಅವನು ನಿರಾಕರಿಸುವ ಸಂದರ್ಭ ಅವನಿಗೆಷ್ಟೇ ಅಗತ್ಯವಾಗಿ ಹೊಸಹುಟ್ಟಿದ ಅವನ ಹೊಣೆಗಾರಿಕೆಗಳ ಸಾಧನೆಗೆ ಆವಶ್ಯಕವಾಗಿ ಇದ್ದರೂ ಅದಕ್ಕೆ ತುತ್ತಾದ ಫಾಲ್‌ಸ್ಟಾಫನ ದುಃಸ್ಥಿತಿಯನ್ನು ನೋಡಿ ಮರುಕವುಂಟಾಗುತ್ತದೆ. ಅವನು ಎದೆಯೊಡೆದು ಸಾಯುತ್ತಾನೆ. 'ಕಾವ್ಯದಲ್ಲಿ ಮದನನನ್ನು ಬಿಟ್ಟುಕೊಟ್ಟರೆ ನಷ್ಟವೇನಿಲ್ಲ; ಫಾಲ್‌ಸ್ಟಾಫನ್ನು ಬಿಟ್ಟುಕೊಡಲಾರೆ' ಎಂದ ರವೀಂದ್ರರ ಮಾತು ಅತ್ಯುಕ್ತಿಯಾದರೂ ಮಾನ್ಯವೇ ಏನೊ! ಇಂಗ್ಲಿಷ್ ರಾಷ್ಟ್ರಚರಿತ್ರೆಯಲ್ಲದೆ ಈಜಿಪ್ಟ್, ರೋಂ, ಗ್ರೀಸ್ ಮುಂತಾದ ಪ್ರಾಚೀನ ರಾಜ್ಯಗಳ ಹೆಸರಾದ ಕತೆಗಳನ್ನು 'ಜೂಲಿಯಸ್ ಸೀಸರ್', 'ಕೊರಿಯೊಲೇನಸ್', 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ' ಮುಂತಾದವುಗಳಲ್ಲಿ ಕಾಣಿಸಿದ್ದಾನೆ. ಅಲ್ಲಿನ ಮಹಾವ್ಯಕ್ತಿಗಳ ಜೀವನದ ಮೇಲೆಯೂ ಆಯಾ ರಾಷ್ಟ್ರಗಳ ಅದೃಷ್ಟಗಳ ಮೇಲೆಯೂ ಪ್ರಭಾವ ಬೀರಿದ ಎಷ್ಟೊ ಸಂಗತಿಗಳ ಕಥನ-ರೂಪಣ ಅಲ್ಲಿ ದೊರೆಯುತ್ತದೆ. 'ರೋಮಿಯೊ ಅಂಡ್ ಜೂಲಿಯೆಟ್' ಕತೆಯಲ್ಲಿ ವಿಧಿಹತವಾದ ಕಿರಿಯ ಪ್ರಣಯಿಗಳ ಪ್ರೇಮೋನ್ಮಾದ-ಉತ್ಸಾಹಗಳಿಂದ ತೊಡಗಿದ ದುರಂತ ನಾಟಕ-ಪ್ರಪಂಚ ಬರಿಯ ಚೆಲುವಿನ ಸಂತೋಷಗಳ ಹಂತವನ್ನು ದಾಟಿ ಮುಂದೆ ಹುಟ್ಟಿದ ನಾಲ್ಕು ದೊಡ್ಡ ದುರಂತ ನಾಟಕಗಳಲ್ಲಿ ಅದ್ಭುತವಾಗಿ ಬೆಳೆಯುತ್ತದೆ. ಪಾತ್ರಚಿತ್ರಣದಲ್ಲಿಯೂ ಕೃತಿಶಕ್ತಿಯಲ್ಲಿಯೂ ಧಾವಿಸಿ 'ಕಿಂಗ್ ಲಿಯರ್' ಅಲ್ಲಿ ಒಂದು ಮಹೋನ್ನತಿಯನ್ನು ಮುಟ್ಟುತ್ತದೆ. 'ಆ್ಯಸ್ ಯು ಲೈಕ್ ಇಟ್' ಹರ್ಷನಾಟಕದ ನೋವು ಅಳಲುಗಳ ನೆಳಲು ಕವಿಯದ ಪ್ರೇಮಪ್ರಪಂಚದಿಂದ ತೊಡಗಿ 'ಟೈಮನ್ ಆಫ್ ಅಥೆನ್ಸ್'ದಲ್ಲಿರುವ ಒಂದು ನಿರ್ಘೃಣ ಮಾನವದ್ವೇಷಕ್ಕೊಯ್ಯುವ ನಿರ್ಮಾಣ-ನಿಪುಣತೆ ಅಸಾಧಾರಣವಾದ್ದು. ಆತನ ಕೃತಿನಿರ್ಮಾಣ-ಜೀವನದ ಕಡೆಯ ಮಜಲಲ್ಲಿ ಬರೆದ ನಾಟಕಗಳಲ್ಲಿ ಒಂದು ಪ್ರಶಾಂತತೆ, ಒಂದು ಸಮರಸ, ಜೀವನವಿವೇಕ, ಅಭಿಜ್ಞಾನ ತಳೆದವರು ಮರಳಿ ಸಿಕ್ಕುವ ಸಂತೋಷ, ದುರ್ದಿನದ ತರುವಾಯ ತೇಲುವ ವಸಂತದ ಹಗಲ-ಬೆಳಕು ಹೊಳೆದಂತೆ ಹೊಮ್ಮುವ ಕ್ರಿಯಾವಿಧಾನ 'ದಿ ವಿಂಟರ್ಸ್ ಟೇಲ್', 'ಸಿಂಬೆಲೈನ್', 'ದಿ ಟೆಂಪೆಸ್ಟ್' ಮುಂತಾದವುಗಳಲ್ಲಿ ಕಾಣಬರುತ್ತದೆ.

ಕವಿಯ ಸ್ವಂತಜೀವನದಲ್ಲಿ, ಕೃತಿರಚನೆಯ ಚರಿತ್ರೆಯಲ್ಲಿ ಇದಕ್ಕೆ ಸದೃಶವಾದ ನೆಲಸಿದೆಯೆನ್ನಿಸಿದೆ. ತನ್ನ ಹುಟ್ಟೂರನ್ನು ಬಿಟ್ಟು ಅವನು ಲಂಡನಿಗೆ ಬಂದು ಸೇರುವಾಗ ಆತನ ವಯಸ್ಸು 23-24. ಒಂದು ನಟರ ತಂಡಕ್ಕೆ ಹೋಗಿ ಸೇರಿಕೊಂಡ. ಅವರ ನಾಟಕಗಳಲ್ಲಿ ಸಣ್ಣ, ದೊಡ್ಡ ಪಾತ್ರಗಳನ್ನು ಕ್ರಮವಾಗಿ ವಹಿಸಿದ. ಆಟಕ್ಕಾಗಿ ಅವರು ಆರಿಸಿಕೊಂಡ ಇತರರ ನಾಟಕಗಳನ್ನು ತಿದ್ದಿಯೊ ಮೊಟಕು ಮಾಡಿಯೊ ಅಲಂಕರಿಸಿಯೊ

ಕಳೆಗೊಟ್ಟು ಮೊದಲು ಮಾರ್ಪಡಿಸುತ್ತಿದ್ದ. ಕ್ರಮವಾಗಿ ತಾನೇ ಸೃಷ್ಟಿಸಿದ ಮಹಾಕೃತಿಗಳನ್ನು ಅವರಿಗೆ ಕೊಟ್ಟು ಒಂದು ಹೊಸ ಬಗೆಯ ದೃಶ್ಯಕಾವ್ಯಗಳನ್ನು ನೀಡಿದ. ಅವುಗಳಲ್ಲಿ ಮೊದಮೊದಲು ಯೌವನೋತ್ಸಾಹಗಳ ದ್ಯೋತಕವಾಗಿ ಪ್ರೇಮದ, ವೀರದ, ತುಂಬುರಕ್ತದ, ರಮ್ಯತೆಯ ನಾಟಕಗಳಿದ್ದವು. ನಗೆ, ಹಾಡು, ಕುಣಿತ, ಸಮೂಹನೃತ್ಯ ಮುಂತಾದ ಎಲ್ಲ ಬಗೆಯ ರುಚಿಗಳಿಗೂ ಸೊಗಸುವ ನಾಟಕಗಳಿದ್ದವು. ಗದ್ದಲ, ಅದ್ಭುತ ಮತ್ತು ತಕ್ಷಣದ ಹಸಿ-ಬಿಸಿ ರುಚಿಯ ಜಾಣ್ಣುಡಿಗಳೂ, ಗ್ರಾಮ್ಯ, ಭಕ್ತಿಗಳೂ ಬೇಕಾದಷ್ಟಿರುತ್ತಿದ್ದವು. ಇವು ಮೊದಲ ಮಜಲಿನವಾದರೆ, ಎರಡನೆಯದರಲ್ಲಿ ವ್ಯಸನ-ನಿರಾಶೆಗಳ ಚೌದಶಪದಿಗಳಲ್ಲಿನಂತೆಯೇ ಈ ಭಾವಗಳು ಪ್ರತಿಫಲಿಸುತ್ತವೆ. ಕೊನೆಯ ಮಜಲಿನ ನಾಟಕಗಳಲ್ಲಿ ಹೃದಯ-ಮನಃಪ್ರವೃತ್ತಿಗಳಲ್ಲಿ ಒಂದು ಪ್ರಸನ್ನತೆಯೂ ತಿಳಿಯೂ ಅದೃಷ್ಟ ಹಿಂದಿರುಗಿದ ಚಿತ್ರಗಳೂ ಕಾಣುತ್ತವೆ. ಕವಿದಿದ್ದ ಯಾವುದೊ ಎದೆಬೇನೆ ಕಳಲಿ ಆತನ ಮನಸ್ಸು ಆಗ್ಗೆ ಹಗುರವಾಗಿರಬೇಕು. 'ದಿ ಟೆಂಪೆಸ್ಟ್' ನಾಟಕದಲ್ಲಿ ವೃದ್ಧ ಮಂತ್ರವಾದಿ ಪ್ರಾಸ್ಪೆರೊ ತನ್ನ ಮಂತ್ರದಂಡವನ್ನು ಎಸೆದು ಇನ್ನು ಮುಂದೆ ಯಾವ ಇಂದ್ರಜಾಲ ಅಥವಾ ಕಾವ್ಯಮಯತೆಯೂ ತನ್ನಿಂದ ಇಲ್ಲವೆಂದು ತಿಳಿಸಿ ತನ್ನ ಹುಟ್ಟೂರಿಗೆ ಹಿಂದಿರುಗುತ್ತಾನೆ. ಇದು ಷೇಕ್ಸ್ಪಿಯರನ ಪ್ರತೀಕವೇ ಇರಬೇಕು. ಆವರೆಗೆ ಒಂದು ಸಣ್ಣ ಸಂಪತ್ತನ್ನೂ ಗಳಿಸಿಕೊಂಡಿರುತ್ತಾನೆ. ತನ್ನ ಮನೆತನದ ಲಾಂಛನವಾಗಿ ಹೆಗ್ಗಳಿಕೆಯ ಒಂದು ಕವಚವನ್ನು (Coat of Arms) ಮಾಡಿಸಿಕೊಂಡು ತನ್ನ ಕೊನೆಯ ಐದು ವರ್ಷಗಳನ್ನು ಕಳೆದು ತೀರಿಕೊಳ್ಳುತ್ತಾನೆ. ಅವನಲ್ಲಿಯೂ ರಾಗದ್ವೇಷಗಳ ತುಮುಲ ಉಡುಗಿ, ಕದಡು ತಿಳಿದು, ಇಂಗಿ ಮನಃಶಾಂತಿ ಬಂದಿತೆನ್ನಿಸುತ್ತದೆ.

ಇಷ್ಟೆಲ್ಲವನ್ನೂ ನಾವು ಅನುಮಾನಿಸಿ ಪರೋಕ್ಷವಾಗಿಯೇ ಅರಿಯಬೇಕು. ಪ್ರಮಾಣ ನಮ್ಮ ಊಹೆಯಲ್ಲಿ, ಇತರರಾಡಿದ ಮಾತಿನಲ್ಲಿ, ಚೆದರಿ ಹರಡಿ ಸಿಕ್ಕುವ ಇತರ ಬಗೆಯ ಆಧಾರಗಳಿಂದ ಕೂಡಿಸಿಕೊಳ್ಳಬೇಕಾದ್ದು. ಸ್ವಂತ ಜೀವನದ ಸಂಗತಿಗಳನ್ನು ಕುರಿತು ಖಚಿತವಾದ ಯಾವ ಸುದ್ದಿಯೂ—ಅವನದಂತೂ ಸುತರಾಂ—ಇಲ್ಲದಿರುವುದು, ನಮ್ಮಲ್ಲಿನ ವಾಲ್ಮೀಕಿ ಕಾಳಿದಾಸರಂತಹವರ ಲಕ್ಷಣದಂಥದೇ. ಇದು ಶೋಚನೀಯವೆನ್ನಿಸೀತೇನೊ. ಆದರೆ ಕೃತಿಗಳಿವೆ: ಅವಕ್ಕೆ ಅವೇ ಪ್ರಮಾಣ—ಬೇರೆ ಇನ್ನಾವ ಮೆಚ್ಚು, ಬೆಲೆ ಅರಿಯಬೇಕಾದ್ದು? ಆತನ 55ನೆಯ ಚೌದಶಪದಿಯಂತಹವನ್ನು 'ಅಮೃತಶಿಲೆಯ ಸ್ಮಾರಕಗಳು, ಹೊನ್ನ ಲೇಪನದ ಗುಮ್ಮಟವೆತ್ತಿದ ಸಮಾಧಿಮಂದಿರಗಳು ರಾಜರವಾಗಿರಬಹುದು. ಅವಾವುವೂ ಈ ಪ್ರಬಲ ಛಂದವನ್ನು ದಾಟಿ ಉಳಿಯಲಾರವು'—ಎಂಬ ಮಾತು ಷೇಕ್ಸ್ಪಿಯರಿಗೆ ಸ್ವಂತ ಯೋಗ್ಯತೆಯಲ್ಲಿಯೂ ತನ್ನ ಕೀರ್ತಿಯಲ್ಲಿಯೂ ಗಂಭೀರವಾದ ವಿಶ್ವಾಸವಿತ್ತೆಂಬುದನ್ನು ವ್ಯಕ್ತಪಡಿಸುತ್ತದೆ. ಈ ವಿಶ್ವಾಸದ ಮಾರ್ದನಿಯನ್ನು

ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ |
ಕಾಲೋಹ್ಯಯಂ ನಿರವಧಿಃ ವಿಪುಲಾಚ ಪೃಥ್ವೀ ||

ಎಂಬ ಭವಭೂತಿಯ ಉಕ್ತಿಯಲ್ಲಿ ಗುರುತಿಸಬಹುದು. 'ವಾಲ್ಮೀಕಿ ರಾಮಾಯಣ'ವನ್ನು ಕುರಿತು,

ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ |
ತಾವತ್ ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ ||

ಎಂಬ ಭವಿಷ್ಯ ವಾಕ್ಯ ಅಂಥದೇ ಹೊಗಳಿಕೆ. ಆದರೆ ನಮ್ಮ ನಾಟಕಕಾರರಿಗೂ ಅವನಿಗೂ ಇರುವ ವೈದೃಶ್ಯ ಇರುವುದು ಇಲ್ಲಿ: ಸುಮಾರು ಒಂದು ಸಾವಿರ ವರ್ಷದ ಸಂಸ್ಕೃತ ನಾಟಕ—ಎಂದರೆ ಭಾರತೀಯ ನಾಟಕ—ಚರಿತ್ರೆಯಲ್ಲಿ ಉತ್ತಮ ಎಂದು ಎಣಿಸಬಹುದಾದ ನಾಟಕಗಳ ಸಂಖ್ಯೆ ಅವನೊಬ್ಬನ ರಚನೆಯ ಅರ್ಧವಾಗುವುದಿಲ್ಲ. ಹೋಲಿಸಿನೋಡಿ ಬೆಲೆ ಕಟ್ಟಿದರೆ ನಮ್ಮ ನಾಟಕ ಬಹು ತೆಳುವಾಗಿ ಏಕನಾದದಂತೆ ಕಾಣುತ್ತದೆ. ಯಾವುದೊ ಒಂದು ಲಕ್ಷಣದ ವಿಕೃತರೂಪದಂತೆ, ಹಿಂಜಿದಂತೆ, ಚರ್ವಿತ ಚರ್ವಣದಂತೆ ಕಾಣುತ್ತದೆ. ಷೇಕ್ಸ್ಪಿಯರ್ ರಚನೆಯ ಸಮೃದ್ಧಿಯನ್ನೂ ವೈಭವವನ್ನೂ ಜೊತೆಯಲ್ಲಿ ತೂಗಿ ನೋಡಿದರೆ ನಾಟಕಗಳ ದನಿಕಟ್ಟಿನಲ್ಲಿಯೂ ಆವರಣದಲ್ಲಿಯೂ ಅಲ್ಪಸ್ವಲ್ಪ ವ್ಯತ್ಯಾಸ ಕಾಣುವುದು 'ಚಾರುದತ್ತ', 'ಮೃಚ್ಛಕಟಿಕ' ಮತ್ತು 'ಮುದ್ರಾರಾಕ್ಷಸ'ಗಳಲ್ಲಿ ಮಾತ್ರ. ಮುದ್ದು, ಕುಡಿತ, ಕಾಳಗ, ಸಾವು ಇತ್ಯಾದಿಗಳನ್ನು ರಂಗದಲ್ಲಿ ಪ್ರದರ್ಶನ ಮಾಡತಕ್ಕದ್ದಲ್ಲವೆಂಬುದು ನಮ್ಮಲ್ಲಿ ಕವಿಸಮಯವಾಗಿತ್ತಾದ್ದರಿಂದ ಷೇಕ್ಸ್ಪಿಯರ್ ನಾಟಕಗಳಲ್ಲಿನ ರಂಗೂ ಸಂಪನ್ನತೆಯೂ ನಮ್ಮಲ್ಲಿ—ಇದು ದೋಷವೆಂದಲ್ಲ—ಇಲ್ಲ. ನಾಯಕನ ಮರಣವನ್ನು ನಾಟಕದಲ್ಲಿ ಕಾಣಿಸಬಾರದಾದ್ದರಿಂದ ಕಣ್ಣೆದುರಿಗೆ ದುರಂತ ರೂಪಣವಿಲ್ಲ.[1]

ಯುಗಯುಗಗಳಲ್ಲಿ ಯೂರೋಪಿನ ನಾಟಕ ಹೇಗೆ ಬೆಳೆಯಿತೆಂಬುವರ ಇಣಿಕು ನೋಟವಾದರೂ ಭಾರತಕ್ಕೆ ಇಂದು ದೊರೆತಿದೆ. ಆದರೆ ಈಚಿನವರೆಗೂ ದುರಂತನಾಟಕವೆಂದರೆ ಷೇಕ್ಸ್ಪಿಯರ್ ದುರಂತನಾಟಕ. ದುರಂತನಾಟಕತತ್ವವೆಂದರೆ ಅವನ ಕೃತಿಗಳಿಂದ ನಿಷ್ಪನ್ನವಾದ ಸೂತ್ರಗಳು ಮಾತ್ರ ಎಂಬ ಅಭಿಪ್ರಾಯವೂ ಇತ್ತು—ನಿನ್ನೆ ಮೊನ್ನೆಯ ತನಕ. ಗಟ್ಟಿದನಿ, ಕೋಪದ ಉಗ್ರತೆ, ರಭಸ, ಅಬ್ಬರ ಮುಂತಾದವನ್ನು ಅವನ ಈ ದುರಂತನಾಟಕಗಳಲ್ಲಿ ಕಂಡ ಈಚಿನ ಪ್ರದೇಶ ಭಾಷೆಗಳ ನಾಟಕಕಾರರು ತಮ್ಮ ನಾಟಕಗಳ ತುಂಬಾ ಇವೇ ಬಗೆಯ ಕೂಗಾಟ-ರಭಸಗಳನ್ನು ತೋರಿಸುತ್ತ ನಾಟಕಗಳ ಕೊನೆಯಲ್ಲಿ ಎಂಟು-ಹತ್ತು ಹೆಣಗಳನ್ನು ಬೀಳಿಸದ ಹೊರತು ತೃಪ್ತರಾಗುವುದಿಲ್ಲ. ಈ ಸಾವು ಸ್ವಯಂಕೃತವೊ ಕೊಲೆಯೊ ಯಾವುದೂ ಆಗಬಹುದು. ಅವೇ ಪ್ರಕಾರ ವಿಧಾನಗಳನ್ನು ಇವರೂ ತಯಾರಿಸುತ್ತಾರೆ. ಆದರೆ ಎಲ್ಲ ಸಾವೂ ದುರಂತವಲ್ಲ. ಹಲವು ಗ್ರೀಕ್ ಮತ್ತು ಆಧುನಿಕ ದುರಂತ ನಾಟಕಗಳಲ್ಲಿ ನಾಯಕನು ಸಾಯಬೇಕೆಂಬುದೂ ಇಲ್ಲ (ಉದಾ.: 'ಈಡಿಪಸ್', 'ವಿಾಡಿಯ'). ಭಂಗವುಂಟಾಗುತ್ತದೆ ನಿಜ: ಲೌಕಿಕ ಪತನ ಅಲ್ಲಿ ಪ್ರಧಾನ. ಆದರೆ ಷೇಕ್ಸ್ಪಿಯರ್ ರಚನೆಯನ್ನು ಮೇಲೆತ್ತುವ ಗುಣ ಅಲ್ಲಿನ ಶೀಲ-ಗೌರವ, ಅರ್ಥಗಭೀರತೆ, ಆಳ, ಕೆಳದನಿ-ಒಳದನಿ ಎಂಬುದನ್ನು ಸಾಮಾನ್ಯವಾಗಿ ಗಮನಿಸುವುದಿಲ್ಲ. ಉನ್ನತ ಪದವಿಯಲ್ಲಿದ್ದ ಒಬ್ಬನು ಯಾವುದೊ ದೌರ್ಬಲ್ಯ ಕೆರಳಿ ಅದು ಅವನಿಗೆ ಮಾರಕ

[1] 'ಊರುಭಂಗ' ಒಂದು ಮಾತ್ರ ಸೂತ್ರವನ್ನು ಸ್ಥಾಪಿಸುವ ಅಪವಾದ. ಹಾಗೇ ಬಹುಶಃ 'ಪ್ರತಿಮಾ' ನಾಟಕದಲ್ಲಿ ಬರುವ ದಶರಥನ ನಿಧನದೃಶ್ಯ. ಆದರೆ ಅಲ್ಲಿ ದಶರಥನಲ್ಲ ನಾಯಕ.

ವಾಗುವಂತೆ ತೊಳಲಿಗೆ ಸಿಕ್ಕಿ ಒಳಗುದಿಯಲ್ಲಿ ಅವನ ಉದಾತ್ತತೆಯ ಪ್ರಕಾಶನವಾಗುವ ಸನ್ನಿವೇಶಗಳು ಅಲ್ಲಿನ ಕಿರಿಮೆಗಳನ್ನೆಲ್ಲ ಶುದ್ಧಿಗೊಳಿಸುತ್ತವೆ. ಮನುಷ್ಯನ ವಿಧಿಯನ್ನು ಕುರಿತು—ಇದೇನು ಮಾನವನ ಗತಿ? ಅಯ್ಯೊ ಹೀಗಾಯಿತೆ! ಪಾಪ, ಎಂಥ ಜೀವ ಹೇಗೆ ಮುರಿಯಿತು?—ಎನ್ನುವ ಅನುಕಂಪೆಯ ಭಾವವನ್ನು ಮೂಡಿಸಿ ಕೇಳುವವರ, ಓದು ವವರ, ನೋಡುವವರ ಅಂತಃಕರಣಗಳನ್ನು ಸಂಸ್ಕಾರಗೊಳಿಸುತ್ತವೆ. ವಿಧಿವ್ಯಾಪಾರ ಮೆರಗುವುದನ್ನು ಕಂಡು ಮನಸ್ಸು ಗಂಭೀರವಾಗುತ್ತದೆ. ಅಲ್ಲಿನ ಧರ್ಮದರ್ಶನದ ಉತ್ಥಾನಶಕ್ತಿಯಾಗುತ್ತದೆ.

ನಮ್ಮ ದೃಶ್ಯಕಾವ್ಯಗಳು ರಸೋತ್ಕರ್ಷವನ್ನು ಎತ್ತಿ ತೋರಿಸಿದರೆ, ಷೇಕ್ಸ್ಪಿಯರವು ಶೀಲವನ್ನು, ಮನಸ್ಸಿನ ಒಳತೋಟಗಳನ್ನು ಎತ್ತಿ ತೋರಿಸುತ್ತವೆ. ಷೇಕ್ಸ್ಪಿಯರ್ ಕೃತಿಗಳನ್ನು ಸಾಹಿತ್ಯವೆಂದು ಸ್ವೀಕರಿಸುವುದಾದರೆ, ನಮ್ಮ ಸಾಹಿತ್ಯವಿಮಾಮಾಂಸೆಯಲ್ಲಿ ದುರಂತನಾಟಕಕ್ಕೆ ಸ್ಥಾನ ಕೊಡಬೇಕಾಗುವುದು; ಹಾಗೆಯೇ ಮಿಶ್ರ (composite) ಪ್ರಕಾರಗಳಾದ ಗಯಟೆಯ 'ಫೌಸ್ಟ್', ಥಾಮಸ್ ಹಾರ್ಡಿಯ 'ದಿ ಡೈನಾಸ್ಟ್ಸ್', ಇಬ್ಸೆನ್ನನ 'ಪೇಹ್ರ್-ಫೈಂಟ್' ಮುಂತಾದ ನಾಟಕಗಳನ್ನೂ ಪರಿಗಣಿಸಬೇಕಾಗುತ್ತದೆ.

ಭಾರತದಲ್ಲಿ ಕೆಲಮಂದಿ ಪ್ರಾಮಾಣಿಕ ಹಿರಿಯರೇ ಇದ್ದಾರೆ: ದುರಂತನಾಟಕವನ್ನು ಎತ್ತಿ ವರ್ಣಿಸುವ ಪ್ರೀತಿ ಅಸ್ಥಾನದಲ್ಲಿ ತೋರಿದ್ದು; ನಿಜವಾದ ಪ್ರೀತಿಯ ಮತ್ತು ಮತ ಧರ್ಮದ ಮೌಲ್ಯಗಳ ನಿರಾಕರಣೆ; ಪಾಪ, ಮದ, ದೌಷ್ಟ್ಯಗಳಿಗೆ ಮೃದು ಕನಿಕರ; ಸೋಲು-ದೌರ್ಬಲ್ಯಗಳನ್ನು ದೊಡ್ಡವನ್ನಾಗಿಸುತ್ತವೆ; ಯಾವುದು ತಿರಸ್ಕಾರಯೋಗ್ಯವೊ ಅಂತಹವರ ಗುಣಗಾನ ಮಾಡುತ್ತದೆ, ಎನ್ನುವವರು. ಆದರೆ ನೀತಿ ಯಾವುದು? ಮತಧರ್ಮತತ್ತ್ವ ವಾವುದು?—ಎಂಬುದೇ ಅಲ್ಲವೆ ಖಚಿತವಾಗಿ ನಿರ್ಣಯವಾಗಬೇಕಾಗಿರುವ, ತೇಲಬೇಕಾ ಗಿರುವ ಸಂಗತಿ? ಹಾಗೆಯೇ ಯಾವುದಾದರೂ ಸೂತ್ರೋಕ್ತಿಗಾಗಲಿ, ನಡತೆ ನಂಬಿಕೆಗಳ ಕೃತಕ ಸಮಯಗಳಿಗಾಗಲಿ ಸಾಹಿತ್ಯ ಸಿಕ್ಕಿಬೀಳಬೇಕೆ? ಎಂಬುದೂ ಆಲೋಚಿಸಬೇಕಾದ ಸಂಗತಿ. ದುರಂತ ವ್ಯಕ್ತಿಯ ಒಂದು ಜೀವಮಾನಕ್ಕೆ ಪ್ರಾಶಸ್ತ್ಯ ಕೊಟ್ಟು ಅವರ ಒಂದು ಅಲ್ಪಾ ವಧಿಯಲ್ಲಿ ಬೆಳೆದ ವಿಧಿವಿಲಾಸವನ್ನೂ ವ್ಯಾಪಾರವನ್ನೂ ಧ್ಯಾನವಿಷಯವಾಗಿ ಮಾಡುವ ವೃತ್ತಿಯನ್ನು ಅಂಥ ಕೆಲವರು ಒಪ್ಪರು. ಭಾರತೀಯರಿಗೆ ಒಂದು ಜೀವಿತಕಾಲವೆಂಬುದು ಸರಪಣಿಯ ಒಂದು ಕೊಂಡಿ ಮಾತ್ರ; ಜೀವದ ಶುದ್ಧಿ, ಉತ್ಥಾನತೆಯ ಮುನ್ನಡೆ ವಿಧಾನ ದಲ್ಲಿ ಒಂದು ಹೆಜ್ಜೆ ಮಾತ್ರ; ಶಿಖರಸ್ಥಾನದೆಡೆಗೆ ಕಟ್ಟಿದ ಒಂದು ಸೋಪಾನ. ಧರ್ಮವನ್ನು ಅನುಸರಿಸಿದರೆ ಸಾವು ಭೀಕರವಾಗಬೇಕಾದ್ದಿಲ್ಲ. ಬರಿಯ ಸಾವಿಗೆ ಚುಚ್ಚುವ ಮೊನೆಯೇಕೆ? ಧರ್ಮ ಕಾಪಾಡುತ್ತದೆ, ದೇವತೆಗಳು ಧರ್ಮಿಷ್ಟರನ್ನು ಬಹುಮಾನಿಸುತ್ತಾರೆ, ಬದುಕಿಸು ತ್ತಾರೆ ಎಂಬ ನಂಬಿಕೆಯನ್ನು ಒಪ್ಪಿಕೊಂಡರೆ ('ಜೂಲಿಯಸ್ ಸೀಸರ್', 'ಹ್ಯಾಮ್ಲೆಟ್' 'ಮೆಕ್‌ಬೆತ್', 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ' ನಾಟಕಗಳಲ್ಲಿ ಸತ್ತವರೆಲ್ಲ ನಾಟಕದ ಕೊನೆಯಲ್ಲಿ ಎದ್ದುಬಿಟ್ಟರೆ ಎಷ್ಟು ರಸಾಭಾಸವಾಗುವುದೆಂಬುದನ್ನು ಕಲ್ಪಿಸಿಕೊಳ್ಳಬಹುದು.) ಕರ್ಮಕ್ಕೆ ತಕ್ಕಂತೆ ಪುನರ್ಜನ್ಮವಾಗುತ್ತದೆ; ಕಡೆಯಲ್ಲಿ ಮುಕ್ತಿ ಖಚಿತ ಎಂಬುದನ್ನು ಒಪ್ಪಿಕೊಂಡರೆ ದುರಂತನಾಟಕಕ್ಕೆ ಸಾಮಂಜಸ್ಯವಾಗಲಿ ಬೆಲೆಯಾಗಲಿ ಬಾರದು. ಇದೆಲ್ಲ ಹೇಗೂ ಇರಲಿ; ಇಡಿಯದಾಗಿ ಒಂದು ಹೊಸ ಸಾಹಿತ್ಯಜಾತಿ ನಮ್ಮ ದೃಷ್ಟಿಗೆ



'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ'ದಲ್ಲಿ ಕ್ಲಿಯೊಪಾಟ್ರ

ಒಂದು ಕಲ್ಪನೆಯನ್ನು ಕೆರಳಿಸಿ ಹೊಸ ಬಗೆಯ ಆಕೃತಿಯನ್ನು ರಚಿಸುತ್ತದೆ. ನಮ್ಮ ತತ್ತ್ವಸಂಪ್ರದಾಯದ ಆಧಾರದ ಮೇಲೆ ಇದು ಅಶಕ್ಯ. ಷೇಕ್ಸ್ಪಿಯರ್ ನಾಟಕಪ್ರಪಂಚ ವಿಲ್ಲದಿರುತ್ತಿದ್ದರೆ, ಆ ವ್ಯಾಖ್ಯಾನ, ವಿಮರ್ಶೆ, ಅಭ್ಯಾಸರೀತಿ, ವಿಚಕ್ಷಣೆ, ಪರಿಶೋಧನೆಯ ತಂತ್ರಗಳು, ಆ ಬಗೆಯ ಸಮಸ್ಯೆಗಳು ನಮ್ಮಲ್ಲಿಗೆ ಬರುತ್ತಿರಲಿಲ್ಲ. ಹಾಗೆಯೇ—ಹಿಂದೆ ಹೇಳಿದಂತೆ—ರಂಗಪ್ರಯೋಗದಲ್ಲಿ ಇವು ನಾಟ್ಯಶಾಲೆಯಲ್ಲಿಯೂ ಅಭಿನಯದಲ್ಲಿಯೂ ಹುಟ್ಟಿದ ಅನೇಕ ಸಮಸ್ಯೆಗಳ ಪರಿಶೀಲನೆಯ ಅಗತ್ಯವಿರುತ್ತಿರಲಿಲ್ಲ. ಆ ಸಾಹಿತ್ಯವಿಮರ್ಶೆಯ ಜೊತೆಗೆ ಪ್ರತಿಯೊಂದು ನಾಟಕದ ರಂಗಚರಿತ್ರೆಯೂ ಪ್ರಯೋಗ ಚರಿತ್ರೆಯೂ ಬಂದಿರುವುದರಿಂದ, ನಾಟಕ ಸ್ವೀಕಾರದ ಕತೆ ಬೆಳೆದು ಬರುತ್ತದೆ. ಆದರಿಂದ ಅದರ ರಸಾನುಭವಕ್ಕೆ ಹೇಗೊ ವಿಮರ್ಶೆಗೂ ಹಾಗೆಯೇ ಪ್ರಮಾಣಸಂಪತ್ತಿ ತುಂಬಿದಂತಿದೆ. ನಮ್ಮಲ್ಲಿ ಇಂಥದು ಈವರೆಗೂ ಸೊನ್ನೆ.

ನಾಟಕಗಳನ್ನು ಬಿಟ್ಟರೆ ನಮ್ಮ ಬಳಿಯ ಜೀಸಿಗೆ ಸಿಕ್ಕುವ ದೊಡ್ಡ ಸಂಪತ್ತು ಷೇಕ್ಸ್ಪಿಯರ್ ಸುತ್ತಲೂ ಬೆಳೆದು ಊರ್ಜಿತವಾಗಿರುವ ಸಾಹಿತ್ಯವಿಮರ್ಶೆ ಎಂದೆ. ನಮ್ಮ ನಾಟಕಕರ್ತೃಗಳಲ್ಲಿ ಹಲವರ ಕೃತಿಗಳ ಪರಿಶೀಲನೆಯನ್ನು ಹನ್ನೆರಡು-ಇಪ್ಪತ್ತು ನಿಬಂಧಗಳಲ್ಲಿ (ಕೆಲವರಿಗೆ ಅಷ್ಟು ತಡೆಯದು ; ಹೆಚ್ಚು.) ಮುಗಿಸಿದರೆ ಸಾಕಾದೀತೇನೊ. ಆದರೆ ಷೇಕ್ಸ್ಪಿಯರ್ ವಿಮರ್ಶೆಯಲ್ಲಿನ ಅನಂತ ಜೀವಂತತೆಯೂ ವಿವಿಧತೆಯೂ ಎಷ್ಟೊ

ಹೊಸ ಹೊಸ ಮುಖಲಕ್ಷಣಗಳನ್ನೂ ದರ್ಶನಗಳನ್ನೂ ಮಾಡಿಕೊಡುತ್ತವೆ. ಈ ಎರಡು ಬಗೆಯ ಪ್ರತಿಭಾಸಂಪನ್ನತೆಯ ನಡುವೆ ಇರುವ ಭಿನ್ನತೆಯನ್ನೂ ಮಟ್ಟಗಳನ್ನೂ ಎತ್ತಿ ಕಾಣಿಸುತ್ತವೆ. ಈಚಿನ ನಮ್ಮ ಸಾಹಿತ್ಯಗಳಿಗೆಲ್ಲ ಷೇಕ್‌ಸ್ಪಿಯರ್ ನಾಟಕಗಳು ಭಾಷಾಂತರಗೊಂಡು ಅವಕ್ಕೆ ಸಂಪುಷ್ಟಿ ತಂದಿವೆ. ಅಥವಾ ಆ ಕೃತಿಗಳನ್ನು ನಮ್ಮ ಆವರಣಕ್ಕೆ ಹೊಂದಿಸಿ ಸೊಸೆತನ ಮಾಡಿಸಿದ್ದಾರೆ. ನಮ್ಮ ಸಾಹಿತ್ಯವಿಮರ್ಶೆಯೂ ಶಕ್ತಿಗೊಂಡಿದೆ. ಶಕ್ತಿಗೆ, ದೌರ್ಬಲ್ಯಕ್ಕೆ, ಗುಣಕ್ಕೆ, ದೋಷಕ್ಕೆ ಆತನ ಕೃತಿಗಳಿಂದ ನಿದರ್ಶನ ದೊರೆತಿದೆ. ಸಂತತವಾಗಿ ಇಂಗ್ಲಿಷ್ ಓದಿದ ನಮ್ಮವರ ಮನಸ್ಸೂಕ್ಷ್ಮ ಹರಿತಗೊಂಡು ಸಮಯ ಸಂದರ್ಭಗಳಲ್ಲೆಲ್ಲ ಆತನ ಒಂದು ಮಾತು, ಸಾಮತಿ, ಸಾಲು, ಸನ್ನಿವೇಶ ಎಲ್ಲರ ನೆನಪಿಗೆ ಬರುತ್ತದೆ; ಅವರ ರಕ್ಷಣೆಗೆ, ವಾದಕ್ಕೆ ಒದಗಿ ಸಂಸ್ಕೃತರ, ಗಣ್ಯರ, ವಿದ್ವಾಂಸರ ಸಭೆಗಳಲ್ಲಿ ಅವರ ಮಾತಿಗೆ ಮೆರುಗನ್ನೀಯುತ್ತದೆ. ಷೇಕ್‌ಸ್ಪಿಯರ್ ನಾಟಕವನ್ನು ಪಾಠ ಹೇಳೆಂದು ಅವಕಾಶ ಕೊಟ್ಟರೆ ಯಾವ ಉಪಾಧ್ಯಾಯನಿಗೂ ಹೆಮ್ಮೆ. ಹೀಗೆ, ಯಾವ ನಟನಿಗೇ ಆಗಲಿ, ಷೇಕ್‌ಸ್ಪಿಯರ್ ನಾಟಕಗಳಲ್ಲಿ ಪಾತ್ರ ವಹಿಸಿ ಹ್ಯಾಮ್ಲೆಟ್, ಮೆಕ್‌ಬೆತ್, ಅಥೆಲ್ಲೊ ಅಥವಾ ಷೈಲಾಕ್ ಪಾತ್ರಗಳನ್ನು ನಿರ್ವಹಿಸುವುದು ತಮ್ಮ ಭಾಗ್ಯದ ಪರಮಾವಧಿ ಎಂದುಕೊಳ್ಳುತ್ತಾರೆ. ಆದರೆ, ಫಾಲ್‌ಸ್ಟಾಫ್ ಪಾತ್ರವನ್ನು ನಿರ್ವಹಿಸುವ ಸಾಹಸ ಮಾಡಬಲ್ಲ ಮಂದಿ ಕಡಮೆ. "ತೊಲಗು! ಆಲಿಂಪಸ್ ಪರ್ವತವನ್ನು ಎತ್ತುವಿಯೇನೊ?" ಎಂದು ಕೇಳಬೇಕಾಗುತ್ತದೆ. ಕ್ಲಿಯೊಪಾಟ್ರ? ಅದು ಬೆಂಕಿ-ಗಾಳಿಗಳಿಂದ ಸೃಷ್ಟವಾದ ಮುದ್ದಾದ ಭೂತ. ಆದರೆ? ಅಭಿನಯಕ್ಕೆ ಇಲ್ಲಿ ಎಷ್ಟು ಅವಕಾಶವಿಲ್ಲ? ಅಲ್ಲಿನ ಅಪರ್ಯಂತ ಅರ್ಥ, ವೃತ್ತಿ, ರೀತಿ, ಗುಣ, ವಿಲಾಸಗಳ ಮುಚ್ಚಟಿಗೆ ಸಾಟಿ ಯಾವುದು?

ಷೇಕ್‌ಸ್ಪಿಯರಲ್ಲಿ ಭವ್ಯವಾದ, ಸುಬದ್ಧವಾದ, ತಾರಕವಾದ ಜೀವನಮೌಲ್ಯಗಳಿಲ್ಲ; ದರ್ಶನವಿಲ್ಲ—ಆದುದರಿಂದ ಅವನು ಕೀಳನೆಂಬ ಒಂದು ವಿಚಿತ್ರ ತೀರ್ಮಾನ ಬಹುಕಾಲದಿಂದ ಬಂದಿದೆ. ವಾಲ್ಟೇರ್, ಜಾನ್‌ಸನ್, ಟಾಲ್‌ಸ್ಟಾಯ್ ಇಂತಹವರ ಹೆಸರುಗಳೂ ಈ ಆಕ್ಷೇಪಣೆಗೆ ಒತ್ತಾಸೆ ಕೊಟ್ಟಿರುವುದುಂಟು. ಪ್ರಕೃತಿ, ದೇವರು, ಚರಿತ್ರೆ ಈ ಮೂರೂ ಅದೇ ಬಗೆಯ ತಪ್ಪು ಮಾಡುತ್ತವೆಯಲ್ಲವೆ? ಈ ಆಕ್ಷೇಪಣೆ ಅಷ್ಟೇ ಸಮವಾಗಿ ಅವುಗಳ ಮೇಲೆಯೂ ಸಲ್ಲುತ್ತದೆ. ಮೌಲ್ಯಗಳು ಸಾಪೇಕ್ಷ. ಇಂತಹವನ್ನು ಬಯಸುವುದು ಅತಿ ಕಡಮೆಯೆಂದರೆ ಸಾಹಿತ್ಯವಲ್ಲ. ಆಯಾ ಸನ್ನಿವೇಶ ಬೆಳೆವ ವಿಧಾನ ಅಲ್ಲಿನ ಹದಗಳು ಆ ನೆಲೆಗಳನ್ನು ಕಾಣಿಸಿಯಾವು, ಕಣ್ಣಿದ್ದರೆ. ಕಲೆಯ ಮಹಾಸ್ವಾತಂತ್ರ್ಯ ಜೀವನೋತ್ಸವದ ವಿಲಾಸವಿಕಾರಗಳನ್ನು ಪ್ರದರ್ಶಿಸುವ ಶಕ್ತಿಯಲ್ಲಿ, ದೌರ್ಬಲ್ಯದಲ್ಲಿ, ಚೆಲುವಿನಲ್ಲಿ-ವಿಕಾರದಲ್ಲಿ, ಭವ್ಯತೆಯಲ್ಲಿ, ವ್ಯರ್ಥತೆಯಲ್ಲಿ, ನಗೆಯಲ್ಲಿ, ಕಣ್ಣೀರಲ್ಲಿ ಅವನ್ನು ಕಾಣಿಸುವುದು. ಯಾವ ಅರ್ಥಗಳನ್ನು ಯಾರೂ ಬಯಸಬಹುದು; ಕೊಡಬಹುದು, ತೆಗೆದುಕೊಳ್ಳಬಹುದು. ಶೀಲ, ನಡವಳಿಕೆ, ಕ್ರಿಯಾವಿಧಾನ—ಇವು ಕಣ್ಣಿಗೆ ಕಟ್ಟಿ ನಿಲ್ಲುತ್ತವೆ, ನಮ್ಮ ನೆತ್ತರಲ್ಲಿ; ನೆನಪನ್ನು ಉರಿಸಿ ಉಳಿಯುತ್ತವೆ.

ಎಲ್ಲಕ್ಕಿಂತ ಹೆಚ್ಚಾಗಿ ಇರುವುದು ಈ ನಾಟಕಗಳಲ್ಲಿನ ಕವಿತೆ; ಎಷ್ಟೋ ಅಬ್ಬರವಿದೆ; ಶಬ್ದಾಡಂಬರವಿದೆ; ಹುಚ್ಚು ಹೊಳೆಯ ಏರಿದೆ. ಆದರೆ ಅದು ಕಡಲ ಬರುತ; ಸಾನಂದ

ನೆಲಸು, ಗಾಂಭೀರ್ಯ. ಒಂದು ಮಹಾಂತ ವೈಭವ ಯಾವ ಲೋಪವನ್ನು ತುಂಬಿಕೊಡದು? ಯಾವುದನ್ನು ರೂಪಾಂತರಿಸಿ ಲೋಕೋತ್ತರವಾಗಿಸದು? ಅವರ ನಿಲುಕಿಗೆ ಇತಿಮಿತಿಗಳಿಲ್ಲ; ಹಸರಕ್ಕೆ ಎಲ್ಲೆಯಿಲ್ಲ. ಕಣ್ಣಿಗೆ ಕಾಣಿಸುವ ಜೀವನ ಒಂದು ಬಗೆಯದಾಗಲಿ, ಮಟ್ಟದ್ದಾಗಲಿ, ಹದದ್ದಾಗಲಿ ಅಲ್ಲವಲ್ಲ! ಒಟ್ಟು ಸಾವಿರ ಸುಮಾರು ವ್ಯಕ್ತಿಪಾತ್ರಗಳನ್ನು ಕಾಣಿಸುವ ನಾಟ್ಯಪ್ರಪಂಚ ಅವನದು. ಪ್ರತಿಯೊಂದನ್ನೂ ವ್ಯಕ್ತಿಶವಾಗಿ ನಾಟಕಕಾರ ರೂಪಿಸಿದ್ದಾನೆ. ಧ್ವನಿಲಕ್ಷಣಗಳನ್ನು ವಿಶೇಷವಾಗಿಟ್ಟುಕೊಂಡು ಕಾಣಿಸುತ್ತ ನಮ್ಮ ಮನಸ್ಸನ್ನು ರಮಿಸಿ ಅವು ತಮ್ಮ ಗುರುತು ಕಾಣಿಸಿ ಉಳಿಸಿಕೊಳ್ಳುತ್ತವೆ. ಮಾನವ ಜೀವನವನ್ನು ಒಂದು ಹಿನ್ನೆಲೆಗೆ ಕಟ್ಟಿ ಆಡಿಸಿ ಅದೃಷ್ಟದಲ್ಲಿ, ಸುಖಸಂತೋಷಗಳಲ್ಲಿ ಕಾಣಿಸುವಂತೆಯೇ ದುರದೃಷ್ಟದ ಆಘಾತಕ್ಕೆ ಸಿಕ್ಕಿ ತೊಳಲುವಂತೆ ಕವಣೆ ಬೀರಿ, ಬಾಣದ ಪೆಟ್ಟು ತಿನ್ನಿಸಿ ಕಾಡಿಸುತ್ತವೆ. ಬರ್ನಾರ್ಡ್ ಷಾ ನುಡಿದ ಒಂದು ಲೋಪವನ್ನು ಒಪ್ಪಿಕೊಂಡು ಮಾತ್ರ ಪರ್ಯಾಲೋಚಿಸಬಹುದೇನೋ: "ಷೇಕ್ಸ್ಪಿಯರಿಗೆ ಮನುಷ್ಯನ ದೌರ್ಬಲ್ಯದ ಅರಿವು ತುಂಬಾ ಚೆನ್ನಾಗಿ ಗೊತ್ತು. ಸೀಸರ್ ತರಹದ ಮಹಾಮಾನವಶಕ್ತಿಯ ಅರಿವಿಲ್ಲ. ಎಲ್ಲರೂ ಒಪ್ಪಿಕೊಂಡಹಾಗೆ ಅವನ ಸೀಸರ್ ವ್ಯರ್ಥ; ಅವನ ಲಿಯರ್ ಒಂದು ಉತ್ಪಾತ್ರ"—ಎಂಬುದು ಆ ಮಾತು. ಇದನ್ನು ಆಲೋಚಿಸುವುದು ಸೂಕ್ತ, ತೀರ್ಮಾನ ಹೇಗೇ ಆಗಲಿ.

ವ್ಯಕ್ತಿಶವಾಗಿ ನನ್ನಲ್ಲಿ ಒಂದು ಚೇಷ್ಟೆಯ ಕಲ್ಪನೆ ಉಂಟಾಗಿದೆ. ಇದು ಅಸಭ್ಯವೊ ಏನೊ. ಕೊರಿಯೊಲೇನಸ್, ಬ್ರೂಟಸ್ ಇಬ್ಬರೂ ದೇಶಬಾಂಧವತೆಯ ಸಂಬಂಧದಲ್ಲಿ ನಿಬ್ಬರ ಸಮಸ್ಯೆಗಳು. ಒಬ್ಬನು ಮುಯ್ಯಿಗಾಗಿ ತನ್ನ ತಾಯ್ನಾಡಿನ ಮೇಲೆ ಹಗೆಯ ಸೈನ್ಯವನ್ನು ಎತ್ತಿ ದಾಳಿಗೆ ಹೋದರೆ, ಇನ್ನೊಬ್ಬನು ತನ್ನ ಊರಿನ-ದೇಶದ, ಜನತೆಯ ಸ್ವಾತಂತ್ರ್ಯಕ್ಕಾಗಿ (It must be by his death) ಆಪ್ತಮಿತ್ರನನ್ನು ತಿವಿದು ಕೊಲ್ಲುತ್ತಾನೆ. ಭೀಷ್ಮ, ವಿಭೀಷಣ ಪಾತ್ರಗಳನ್ನು ಷೇಕ್ಸ್ಪಿಯರ್ ಪ್ರತಿಪಾದಿಸಿದ್ದಿದ್ದರೆ ಅವು ಹೇಗೆ ರೂಪುಗೊಳ್ಳುತ್ತಿದ್ದವೊ? ಫಾಲ್ಸ್ಟ್ಯಾಫನ ನಿರಾಕರಣೆಯನ್ನು ಪ್ರದರ್ಶಿಸಿದ ಕವಿ ಸೀತೆ-ಶಕುಂತಲೆಯರ (ಶಾಂತಂ ಪಾಪಂ!) ನಿರಾಕರಣೆಯನ್ನು ಹೇಗೆ ನಿರ್ವಹಿಸುತ್ತಿದ್ದನೊ? ಉರ್ವಶಿ-ಪುರೂರವರ ಕಾಮೋನ್ಮಾದ-ಧರ್ಮಕರ್ಮ ಉಳಿದೆಲ್ಲವನ್ನೂ ಮರೆತಿತ್ತಲ್ಲವೆ. ಸಹಜವಾಗಿ ಅದು ವಿನಾಶಕರವಾದ್ದು. ಸಾಮಾಜಿಕ ಹೊಣೆಗಾರಿಕೆಯಿಲ್ಲದ ಕಾಮ; ಭೋಗಾಂಧತೆ; ಎಲ್ಲ ವಿವೇಕದ ಎಲ್ಲೆಯನ್ನೂ ಮೀರುತ್ತದೆ. ಆದರೆ ಇದು ದೇವತೆಗಳು ಹರಸಿದ ಜೊತೆ! ಉಪಕಾರ ಸ್ಮರಣೆ, ನಿರೀಕ್ಷಣೆಗಳಿಂದಾಗಿ ದೇವರಾಜನು ತೆತ್ತ ಕಾಣಿಕೆ. ಆದರೆ ಯಾವ ನಿರ್ಬಂಧಗಳನ್ನೂ ನಿರ್ಲಕ್ಷಿಸಿದ್ದು, ನಿರ್ಲಜ್ಜವಾದ್ದು. ಆ ಕಾಮೋನ್ಮಾದ ಆ್ಯಂಟೊನಿ-ಕ್ಲಿಯೊಪಾಟ್ರರ ಕಾಮುದಪ್ಪೇ ಅಸೀಮ ಕೇವಲಧಾಮ. ಹೆಜ್ಜೆಹೆಜ್ಜೆಗೂ ಇಂಪ್ರಸು ಉದ್ಧಾರ ಮಾಡದಿದ್ದರೆ ಅವರದು ದುರಂತ ಗರ್ಭವೇಸ್ಸೆ. ಆದರೆ ನಮ್ಮ ನಾಟಕಕಾರರಿಗೂ ಷೇಕ್ಸ್ಪಿಯರಿಗೂ ಸಂಸ್ಕೃತಿಯಲ್ಲಿರುವ ತಾರತಮ್ಯ, ನಮ್ಮವರ ಮತ್ತು ಷೇಕ್ಸ್ಪಿಯರನ ಪಕ್ಷಪಾತಗಳನ್ನು ಉಲ್ಲೇಖಿಸಿ ಎತ್ತಿ ತೋರಿಸುತ್ತದೆ. ಧಾತುಸಿರ್ಣಾಯಕವಾಗುತ್ತದೆ. ಎರಡೂ ಬಗೆಯ ಅಂತರ್ದರ್ಶನಗಳು ಕಲಾನುಭವಕ್ಕೆ ದೊರೆತಿರುವುದು ನಮ್ಮ ಸೌಭಾಗ್ಯ.

## ಷೇಕ್ಸ್‌ಪಿಯರಿಗೆ ನಮಸ್ಕಾರ

ಈಚೆಗೆ ದೆಹಲಿಯಲ್ಲಿ ನಡೆದ ಒಂದು ವಿಚಾರ ಸಂಕಲನದಲ್ಲಿ ಷೇಕ್ಸ್‌ಪಿಯರ್ ಪ್ರಭಾವ ಭಾರತೀಯ ನಾಟಕಗಳ ಮೇಲೆ ಆಗಿಯೆ ಇಲ್ಲವೇನೊ ಎಂಬಷ್ಟು ಕಾರ್ಪಣ್ಯ ಬೆಳೆಯಿತು. ಕನ್ನಡವೊಂದನ್ನು ನೋಡಿದರೆ ನಮ್ಮ ಸರಳರಗಳೆ ಅವನಿಂದ ಕುದುರಿದ್ದು; ನಮ್ಮ ದುರಂತ ವಸ್ತುವಿನ್ಯಾಸ, ಅಲ್ಲಿನ ಒಳತೋಟಿ ಷೇಕ್ಸ್‌ಪಿಯರನವು. ನಮ್ಮ ನಾಟಕಗಳಲ್ಲಿನ ಸಿಡಿದಾದ ಸ್ವಗತಭಾಷಣಗಳ ಹೃದಯವಿಶ್ಲೇಷಣ ಅಲ್ಲಿನದು. ತೆಲುಗಿನವಾದರೂ ಕನ್ನಡಿಗರಿಗೆ ಪರಿಚಿತವಾದ ಒಂದು ‘ರಾಮದಾಸ್’, ಒಂದು ‘ಪಠಾಣ ರುಸ್ತುಂ’, ‘ನಿರುಪಮ’ ನಾಟಕಗಳನ್ನು ನೋಡಬಹುದು; ಒಂದು ‘ಮಂಡೋದರಿ’ ಪ್ರಕರಣವನ್ನು ನೋಡಬಹುದು; ಒಂದು ‘ರಕ್ತಾಕ್ಷಿ’ ಅದರ ಅವತಾರ. ‘ಗದಾಯುದ್ಧ ನಾಟಕ’ ಆ ಕಾವ್ಯದ ರೂಪಾಂತರ; ಆ ಪ್ರಭಾವದಿಂದ ಆದುದು. ಭಾಷಾಂತರ, ರೂಪಾಂತರ, ಅನುಕರಣಗಳ ವಿಷಯವನ್ನೆತ್ತಬೇಕಿಲ್ಲ. ನಮ್ಮ ವಿಮರ್ಶೆಗೆ ತೀವ್ರವಾದ ಒಂದು ವರ್ಣಶಕ್ತಿ ತಂದಿರುವುದು ಷೇಕ್ಸ್‌ಪಿಯರ್ ನಾಟಕ. ದುರಂತರಾವಣ, ದುರ್ಯೋಧನ, ಏಕಲವ್ಯ, ಕರ್ಣ, ಅಶ್ವತ್ಥಾಮ, ಶಂಬೂಕೋತ್ಥಾಪನ ಮುಂತಾದವೆಲ್ಲ ಈ ಪ್ರಭಾವದಿಂದ ಬಯಲುದೇರಿದವು. ಹೀಗಿರುವಾಗ ಯಾವ ಪ್ರಭಾವವೂ ಹೆಚ್ಚಾಗಿ ಹರಿಯಲಿಲ್ಲವೆನ್ನುವುದು ಸತ್ಯದೂರವಾದೀತು. ಆದರೆ ಗುಣಾಂಶ–ಲಾಭಾಂಶ–ನಷ್ಟಾಂಶ ಎಣಿಸಿ ಲೆಕ್ಕಗಳನ್ನು ಜಡಿತಿ ಮಾಡಿ ಲಾಭಋಣಗಳನ್ನು ತೇಲಿಸಿದಾಗ ಷೇಕ್ಸ್‌ಪಿಯರ್ ಸಂಬಂಧದಲ್ಲಿ ಆರ್ನಲ್ಡ್ ಕವಿ

> ‘ಇತರರು ನಿಂತು ನಮ್ಮ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಮುಂದೆ ಹೋಗಬೇಕು;
> ನಿನಗೆ ಬಿಡುತೆ ಉಂಟು.’

ಎಂದು ಆಡಿದ ಮಾತು ಬಹುಶಃ ಕೊನೆಯ ಮಾತು.

ಪ್ರಪಂಚದ ಸಾಹಿತ್ಯದಲ್ಲೆಲ್ಲ ಷೇಕ್ಸ್‌ಪಿಯರ್ ಒಬ್ಬನಿಗೆ ಮಾತ್ರ ಸಲ್ಲಬಲ್ಲ ಹೊಗಳಿಕೆ ಅದು. ನಿರ್ಮಾಣಕರ್ತೃವಾದ ಆ ಪ್ರತಿಭೆಗೆ ನಮ್ಮ ಗೌರವ ಕೃತಜ್ಞತೆಗಳ ಕಾಣಿಕೆ ಸಲ್ಲಬೇಕು. ಆ ಕವಿ ಹುಟ್ಟಿದ ನಾಲ್ಕುನೂರು ವರ್ಷದ ವರ್ಧಂತಿಯಂದು ನನ್ನ ಈ ಸಣ್ಣ ಕಾಣಿಕೆಯನ್ನರ್ಪಿಸುತ್ತಿದ್ದೇನೆ. ವೀರಪೂಜೆಯ ಅತಿರೇಕಗಳಿಗೆ ಹೋಗುತ್ತಿಲ್ಲವೆಂಬುದು (this side idolatry) ನನ್ನ ಭಾವನೆ.





# ಸಾಮಾನ್ಯರ ಷೇಕ್‌ಸ್ಪಿಯರ್

## ಶ್ರೀರಂಗ

ವಿದ್ಯಾರ್ಥಿಯಾಗಿದ್ದಾಗ ಪದವೀಪರೀಕ್ಷೆಗಾಗಿ ನಾನು ಸಂಸ್ಕೃತ ವಿಷಯವನ್ನು ಆಯ್ದು ಕೊಂಡಿದ್ದೆ. ಗುರುಗಳು ಸಂಸ್ಕೃತ ನಾಟಕಗಳನ್ನು ಕಲಿಸಿದರು. ಅಲ್ಲಿ ಮುಖ್ಯವಾದುದೆಂದರೆ ನಾಟಕಕಾರನು ಜೀವಿಸಿರಬಹುದಾದ ಕಾಲನಿರ್ಣಯ (ಆ ಕಾಲದ ಸಮಾಜಜೀವನವಲ್ಲ), ಆ ನಿರ್ಣಯಕ್ಕೆ ಒಳಗಿನ ಮತ್ತು ಹೊರಗಿನ ಪುರಾವೆಗಳು, ಶ್ಲೋಕಗಳ ಇಂಗ್ಲಿಷ್ ಭಾಷಾಂತರ ಮತ್ತು ಕೊನೆಗೆ ಪೂರ್ವಾಪರ ಸಂದರ್ಭದೊಡನೆ ಯಾವುದೆ ವಾಕ್ಯದ ಸ್ಪಷ್ಟೀಕರಣ. ಅದೇ ಕಾಲಕ್ಕೆ ಕಡ್ಡಾಯವಾಯಿತು, ಇಂಗ್ಲಿಷ್ ಭಾಷೆಯ ಅಭ್ಯಾಸದಲ್ಲಿ ಷೇಕ್‌ಸ್ಪಿಯರನ ನಾಟಕ. ಅವನ್ನು ಕಲಿಸಿದವರಿಂದ ಆ ನಾಟಕದ ಕತೆಯ ಮೂಲ, ಷೇಕ್‌ಸ್ಪಿಯರ್-ಬೇಕನ್ ಕರ್ತೃತ್ವವಿವಾದ ಮತ್ತು all-awl, sole-soul ಮುಂತಾದ ಶ್ಲೇಷಾರ್ಥಗಳ 'ರಸಾಸ್ವಾದ'ವಾಯಿತು. ಜೊತೆಗೆ ಸಂಸ್ಕೃತ ಪ್ರೊಫೆಸರರು "ಕಾಳಿದಾಸನು ಹಿಂದುಸ್ತಾನದ ಷೇಕ್‌ಸ್ಪಿಯರ್" ಎಂದು ಹೇಳುತ್ತಿದ್ದರು. ಆ ಮಾತು ನಿಜ ಎಂದಿತು ನಮ್ಮ ಅನುಭವ; ಯಾಕೆಂದರೆ ನಮಗೆ ಕಾಳಿದಾಸನ ಘನತೆಯೂ ತಿಳಿದಿರಲಿಲ್ಲ, ಷೇಕ್‌ಸ್ಪಿಯರನ ಘನತೆಯೂ ತಿಳಿದಿರಲಿಲ್ಲ. ಆದುದರಿಂದ ನಮ್ಮ ಮಟ್ಟಿಗೆ 'ಕಾಳಿದಾಸ = ಷೇಕ್‌ಸ್ಪಿಯರ್' ಎಂಬುದು ಸ್ವತಃಸಿದ್ಧವಿದ್ದಿತು.

ಆದರೆ ಶಿಕ್ಷಣ ಮುಗಿಸಿದ ತರುವಾಯ ಈ ಕಾಳಿದಾಸ-ಷೇಕ್‌ಸ್ಪಿಯರ್ ಘನತೆಯ ಕತೆ ದೀಪದ ಹತ್ತಿರ ಹತ್ತಿರ ಹೋಗುವ ವಸ್ತುವಿನ ನೆರಳಿನಂತೆ ದೊಡ್ಡದಾಗುತ್ತಲಿ ನಡೆಯಿತು; ಅದು ಒಂದು ತರದ ಬೌದ್ಧಿಕ ಒತ್ತಾಯವಾಯಿತೆನ್ನಬಹುದು. ಈಗ, ಅವರಿಬ್ಬರನ್ನೂ ಪೂರ್ತಿಯಾಗಿ ಅರಿಯುವ ಪಾಂಡಿತ್ಯವಿಲ್ಲದ ನನ್ನಂತಹ ಸಾಮಾನ್ಯ ಓದುಗನು ಆ ಬಗ್ಗೆ ವಿಚಾರ ಮಾಡುವಾಗ "ಇದೆಂತಹ ಮೋಸ! ಒಬ್ಬರೊಬ್ಬರಿಗೆ ಸಂಬಂಧವೇ ಇಲ್ಲವಲ್ಲ!" ಎಂದುಕೊಂಡರೆ ಕನಿಷ್ಠ ಪಕ್ಷ ಅವನು ವಿದ್ವಾಂಸರ ಕ್ಷಮೆಗೆ ಅರ್ಹನಾಗುತ್ತಾನೆ. ಒಂದೇನೋ ನಿಜ: ಈ ಇಬ್ಬರೂ ನಾಟಕಕಾರರು ತಂತಮ್ಮ ದೇಶಗಳಲ್ಲಿಯ ಮಿಕ್ಕ ನಾಟಕಕಾರರನ್ನು ಮರೆಯಿಸಿ, ತಮ್ಮ ಕಾಲದಿಂದ ಇಂದಿನವರೆಗೆ

ಕ್ರಮೇಣ ಮಿಕ್ಕ ದೇಶಗಳಲ್ಲೂ ಹೆಸರನ್ನು ಗಳಿಸಿಕೊಂಡಿದ್ದಾರೆ. ಎರಡು ವರ್ಷಗಳ ಮುಂಚೆ ಕಾಳಿದಾಸನ ಬಗ್ಗೆ ಜಗತ್ತಿನ ತುಂಬ ಉತ್ಸವವಾಯಿತು, ಈ ವರ್ಷ ಜಗತ್ತು ಷೇಕ್ಸ್‌ಪಿಯರನ ಬಗ್ಗೆ ಉತ್ಸವವನ್ನು ನಡೆಯಿಸುತ್ತಿದೆ. ಕಾಳಿದಾಸನು ಬರೆದದ್ದು ಮೂರೇ ನಾಟಕಗಳನ್ನು; ಷೇಕ್ಸ್‌ಪಿಯರ್ ಬರೆದದ್ದು ಮೂವತ್ತಾರು ನಾಟಕಗಳನ್ನು. ಮಿಕ್ಕದ್ದೇನೇ ಇರಲಿ, ನಾಟಕಗಳ ಸಂಖ್ಯೆಗೂ ಅವನ್ನು ಬರೆದ ನಾಟಕಕಾರನ ದೊಡ್ಡಿಸ್ತನಕ್ಕೂ ಸಂಬಂಧವಿಲ್ಲ ಎಂಬುದು ಸ್ಪಷ್ಟವಿದೆಯಲ್ಲವೆ? ಇಂದು ನಮ್ಮ ದೇಶದಲ್ಲಿಯೆ ಕಾಳಿದಾಸನ ನಾಟಕಗಳನ್ನು ಅರಿತುಕೊಳ್ಳುವಷ್ಟು ಬುದ್ಧಿ ಸಂಸ್ಕೃತ ಭಾಷೆಯ ಜ್ಞಾನವಿದ್ದವರೆಲ್ಲರಿಗಿಲ್ಲ. ಕ್ರಮೇಣ ಈ ಪ್ರಜಾಪ್ರಭುತ್ವದ ಭಾರತ ಯಾನೆ ಇಂಡಿಯದಲ್ಲಿ ಸಂಸ್ಕೃತ ಭಾಷೆಯ ಅಭ್ಯಾಸವೆ ಲುಪ್ತವಾಗುವ ಭರವಸೆಯೂ ಇದೆ. ಅದರಂತೆಯೆ ಎಲಿಜಬೆತ್ ಕಾಲದ ಇಂಗ್ಲಿಷನ್ನು ಚೆನ್ನಾಗಿ ಅರಿತು ಷೇಕ್ಸ್‌ಪಿಯರನ ನಾಟಕಗಳ ರಸಾಸ್ವಾದವನ್ನು ಮಾಡುವ ಶಕ್ತಿ ಮತ್ತು ಇಚ್ಛೆ ಇಂಗ್ಲೆಂಡಿನಲ್ಲಿಯೆ ಬಹುಸಂಖ್ಯಾತರಿಗಿಲ್ಲ, ಇನ್ನು ಮಿಕ್ಕ ಜನಾಂಗಗಳ ಕತೆ ಯಾಕೆ? ಈ ಪರಿಸ್ಥಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ನಾಟಕಕಾರನ ದೊಡ್ಡಿಸ್ತನಕ್ಕೂ ಓದುಗರ ಸಂಖ್ಯೆಗೂ ಸಂಬಂಧವಿಲ್ಲ ಎಂದೂ ಹೇಳಬೇಕಾಗುವುದು. ಸಾಮಾನ್ಯ ಓದುಗನಿಗೆ, ಸಾಮಾನ್ಯ ನಾಗರಕನಿಗೆ ಈ ನಾಟಕಕಾರರ ಕೃತಿಗಳ ಅಭ್ಯಾಸವಿರಲಿ, ಪರಿಚಯ ಕೂಡ ಇರುವುದಿಲ್ಲ. "ಇವರಿಬ್ಬರೂ ಶ್ರೇಷ್ಠ ನಾಟಕಕಾರರೆ?" ಎಂದು ಪ್ರಶ್ನೆ ಬಂದಾಗ ಮಾತ್ರ ತನಗೆ ಪರಿಚಿತವಾದ ಅನುಭವದಿಂದ ಈ ನಾಗರಕನು ತಟ್ಟನೆ ಕೈಯೆತ್ತುವನು.

ನಾಟಕದ ವಿಶಿಷ್ಟ ಗುಣ ನೋಟಕ್ಕೆ ರಂಜಕವಾಗಿರುವುದು. ಆದುದರಿಂದ ಪ್ರಯೋಗದ ಯಶಸ್ಸು ಅರ್ಥವತ್ತಾಗಿರುವುದು. ಕುಳಿತ ಪ್ರೇಕ್ಷಕನನ್ನು ಕೊನೆಯವರೆಗೂ ಹಿಡಿದು ಕೂಡಿಸುವಂತಹ, ಪ್ರೇಕ್ಷಕನನ್ನು ನೋಡಲು ಎಳೆದು ತರುವಂತಹ ನಾಟಕವೆ ನಿಜವಾದ ನಾಟಕ ಎಂದು ಸಾಮಾನ್ಯರ ದೃಢಾಭಿಪ್ರಾಯ. ಕಾಳಿದಾಸನ ನಾಟಕಗಳ ಪ್ರಯೋಗ ಎಷ್ಟಾಗಿವೆ? ಎಷ್ಟಾಗುತ್ತಲಿವೆ? ಎಷ್ಟಾಗಬಹುದು? ಕಷ್ಟಪಟ್ಟು ಯಾರಾದರೂ ಪ್ರಯೋಗಿಸುವುದಾದಲ್ಲಿ ಅದರ ಹತ್ತರಷ್ಟು ಕಷ್ಟಪಟ್ಟು ಪ್ರೇಕ್ಷಕರನ್ನು ಒಲಿಸಿ, ಆಣೆ ಹಾಕಿ, ಅಭಿಮಾನ ಕೆರಳಿಸಿ ಕೂಡಿಸಬೇಕು. ಒಂದು ಪ್ರಯೋಗವಾದ ಮೇಲೆ ನಟರಿಗೂ ಪ್ರೇಕ್ಷಕರಿಗೂ ಅಂತಃಸ್ಫೂರ್ತಿಯಿಂದಲೆ "ಸಾಕಪ್ಪ! ಸಾಕು!" ಎಂದು ಉಸಿರು ಹೊರಹೊಮ್ಮಬೇಕು. ಷೇಕ್ಸ್‌ಪಿಯರನ ನಾಟಕಗಳ ಪ್ರಯೋಗದ ಕತೆಯೂ ಹೀಗೆಯೆ! ಬುದ್ಧಿಪೂರ್ವಕವಾಗಿ, ವಿಶಿಷ್ಟ ಉತ್ಸವಕ್ಕಾಗಿ, ಶಾಲೆ-ಕಾಲೇಜುಗಳಿಗಾಗಿ ಇಲ್ಲವೆ ಷೇಕ್ಸ್‌ಪಿಯರನ ನಾಟಕಗಳ ಪ್ರಚಾರಕ್ಕೆಂದೇ ಆಗಲಿ ಅವನ್ನು ಪ್ರಯೋಗಿಸು ವುದು. 'ಶನಿಪ್ರಭಾವ' ಇಲ್ಲವೆ 'Song of the Pacific' ಎಂಬ ಪ್ರಯೋಗಗಳಿಗೂ ಷೇಕ್ಸ್‌ಪಿಯರ್-ಕಾಳಿದಾಸರ ಕೃತಿಗಳ ಪ್ರಯೋಗಕ್ಕೂ ಭೂಮ್ಯಾಕಾಶದಷ್ಟು ಅಂತರವಿದೆ. ಸಾಮಾನ್ಯನ ದೃಷ್ಟಿಯಿಂದ ಹೇಳುವುದಾದಲ್ಲಿ ಒಂದಕ್ಕೆ ಪ್ರೇರಕ ಅಭಿರುಚಿಯ ಬಲ; ಇನ್ನೊಂದಕ್ಕೆ ಪ್ರೇರಕ ಬಲವಂತದ ಅಭಿರುಚಿ. ಆದರೂ, ತಾನು ನೋಡಿ ರಂಜಿಸದಿದ್ದರೂ, ನೋಡಲೇಬೇಕೆಂಬ ಅಪೇಕ್ಷೆಯ ಒತ್ತಾಯ ಎನ್ನಿಸದಿದ್ದರೂ ಕಾಳಿದಾಸ-ಷೇಕ್ಸ್‌ಪಿಯರರು ಶ್ರೇಷ್ಠ ನಾಟಕಕಾರರು ಎಂಬುದನ್ನು ಸಾಮಾನ್ಯನು ತಾನು ಒಪ್ಪುತ್ತಾನಲ್ಲದೆ, 'ಅಲ್ಲ'

ಎಂದವರನ್ನು 'ಮೂರ್ಧಾಂತೇ ಪತಿಷ್ಯತಿ' ಎಂದು ಶಪಿಸಲು ಸಿದ್ಧನಾಗುತ್ತಾನೆ. ಇದನ್ನೆಲ್ಲ ಅರಿತುಕೊಂಡಲ್ಲಿ "ನಾಟಕಕಾರನ ಶ್ರೇಷ್ಠತೆಗೂ ಅವನ ನಾಟಕಗಳ ಪ್ರಯೋಗಗಳ ಇಲ್ಲವೆ ಪ್ರೇಕ್ಷಕರ ಸಂಖ್ಯೆಗೂ ಯಾವ ಸಾರ್ಥಕ ಸಂಬಂಧವೂ ಇಲ್ಲವಲ್ಲ!" ಎಂದು ಹೇಳಲೇಬೇಕಾಗುವುದು.

ಕೊನೆಯದಾಗಿ, ನಾಟಕಕ್ಕೆ ಒಂದು ಕತೆ ಇಲ್ಲವೆ ಒಂದು ವಸ್ತು ಇರುವುದು. ಜನರನ್ನು ರಂಜಿಸುವಂತಹ ಇಲ್ಲವೆ ಅವರ ಮನಸ್ಸಿನಲ್ಲಿ ಸ್ಥಿರವಾಗಿ ಮೂಡುವಂತಹ ಕತೆಯನ್ನು ನಾಟಕಕಾರನು ಕಲ್ಪಿಸಬೇಕು. ಕತೆಯೆ ಇಲ್ಲದಿದ್ದಲ್ಲಿ ಸಾಮಾನ್ಯನು ಮೆಚ್ಚುವುದಿಲ್ಲ ಎಂಬುದನ್ನು ಇಂದಿನ ಭಾರತೀಯ ಚಲಚ್ಚಿತ್ರಗಳ ಪ್ರೇಕ್ಷಕರ ಜನಸಂದಣಿಯಿಂದ ಹೇಳಲು ಅಡ್ಡಿ ಇಲ್ಲ. ಆದರೆ ಈ ದೃಷ್ಟಿಯಿಂದಲೂ ಕಾಳಿದಾಸ-ಷೇಕ್‌ಸ್ಪಿಯರರು ಹಿಂದುಳಿದವರು ಎಂದು ಹೇಳಬೇಕಾಗುವುದು. ಯಾಕೆಂದರೆ ಇವರಿಗೆ ಸ್ವಂತದ ಕತೆಗಾರಿಕೆಯೆ ಇಲ್ಲ. ಹೆರವರಿಂದ ಎರವಲು ತಂದ ಕತೆಗಳೆ ಇವರ ಶ್ರೇಷ್ಠ ನಾಟಕಗಳ ಕತೆ, ವಸ್ತು. ಇಲ್ಲಿಯೂ ಹೊಸತೆಂಬುದಿಲ್ಲ, ಓದಿ ತಿಳಿಯಲೇಬೇಕೆಂಬುದಿಲ್ಲ, ಕಣ್ಮುಟ್ಟ ನೋಡಿಯೆ ರಂಜನೆಯನ್ನು ಪಡೆಯಬೇಕೆಂಬುದಿಲ್ಲ. ಅಂತೂ—ಅಥವಾ ಆದರೂ ಎನ್ನೋಣ—ಇವರಿಬ್ಬರೂ ಜಗತ್ತಿನ ಶ್ರೇಷ್ಠ ನಾಟಕಕಾರರು!

ಇದುವರೆಗಿನ ಚರ್ಚೆಯನ್ನು ಓದಿದವರಿಗೆ ನನ್ನ ತರ್ಕಸರಣಿಯಲ್ಲಿಯೆ ಏನೊ ಕೊಂಕು ಇದೆ ಎಂದಾಗಲಿ, ಇಲ್ಲವೆ ಸಾಮಾನ್ಯನಿಗೆ ಸಮಂಜಸ ಬುದ್ಧಿಯೆ ಇಲ್ಲವೆಂದಾಗಲಿ ಎನ್ನಿಸಬಹುದು. ಆದರೆ, ಎರಡೂ ಸರಿಯಲ್ಲ ಎಂಬುದು ವಿಚಾರ ಮಾಡಿದಲ್ಲಿ ಹೊಳೆಯಬಹುದು. ಒಂದು, ನಾನು ಕೊಟ್ಟ ವಿವರಗಳೆಲ್ಲ ಅನುಭವ-ಸತ್ಯವಾಗಿವೆ; ಇನ್ನೊಂದು, ತರ್ಕದ ಶಕ್ತಿಯನ್ನು ಮೀರಿ ಸಾಮಾನ್ಯನು ಸಮಂಜಸ ಬುದ್ಧಿಯನ್ನು ತೋರಿಸುತ್ತಾನೆ. 'ತರ್ಕದ ಶಕ್ತಿಯನ್ನು ಮೀರಿ' ಎಂಬುದು ನಮ್ಮ ತರ್ಕದ ಶಕ್ತಿಯನ್ನು ಕುರಿತು. ಯಾಕೆಂದರೆ, ಸಾಮಾನ್ಯನ ಜೀವನದ ತರ್ಕ ಬೇರೆಯೆ ಆಗಿದೆ, ಆ ತರ್ಕವನ್ನನುಸರಿಸಿ ಅವನ ನಿರ್ಣಯ ಸಮಂಜಸವೆ ಆಗಿದೆ. ಓದುವುದು, ನೋಡುವುದು, ತಿಳಿದುಕೊಳ್ಳುವುದು ಮುಂತಾಗಿ ನಾವು ನಮ್ಮ ಅಳತೆಗೋಲನ್ನು ತಯಾರಿಸಿಕೊಂಡಿದ್ದೇವೆ. ಆದರೆ ಅಂತಹ ಅಳತೆಗೋಲು ಸಾಪೇಕ್ಷ ಎನ್ನುವುದನ್ನು ನಾವು ಮರೆಯುತ್ತೇವೆ. 'ಓದುವುದು' ಎನ್ನುವಾಗ ಭಾಷೆಯ ಪ್ರಶ್ನೆ ಬರುವುದು, ಭಾಷೆ ಕಾಲಕಾಲಕ್ಕೆ ಬದಲಾಗುವಂತಹದು. ಅದರಂತೆಯೆ 'ನೋಡುವುದು' ಎನ್ನುವಾಗ ಅನೇಕ ಬಾಹ್ಯಸಂದರ್ಭಗಳನ್ನು ಇದು ಅವಲಂಬಿಸಿದೆ ಎಂಬುದನ್ನು ಮರೆಯುವಂತಿಲ್ಲ, ಕೊನೆಯದಾಗಿ, 'ತಿಳಿದುಕೊಳ್ಳುವುದು' ಎನ್ನುವಾಗ ನಮಗೇ ತಿಳಿದಿಲ್ಲ ಎಂಬುದು ಮಾತ್ರ ಹೊರಬೀಳುವುದು. 'ಮಾವಿನ ಹಣ್ಣು' ಎಂಬ ಶಬ್ದದ ಅರ್ಥ ತಿಳಿಯದೆಯೂ ಅದರ ರಸಾಸ್ವಾದದಿಂದ ಸಂಪ್ರೀತನಾಗುವುದು ಶಕ್ಯವಿದೆಯಲ್ಲವೆ? ಆದರೆ ಸಾಮಾನ್ಯನ ನಿರ್ಣಯಬುದ್ಧಿಯು ಇಂತಹ ಬಾಹ್ಯ ಇಲ್ಲವೆ ಸಾಪೇಕ್ಷ ಅನುಭವಗಳ ಮೇಲೆ ನಿಂತ ತರ್ಕವನ್ನವಲಂಬಿಸಿಲ್ಲ, ಇಲ್ಲವಾದರೆ ಅವನು ಅಷ್ಟೊಂದು ಪ್ರಾಮಾಣಿಕವಾಗಿ ನಮ್ಮ ದೃಷ್ಟಿಯಿಂದ ವಿಸಂಗತ ಎನ್ನಿಸುವ ಸಿದ್ಧಾಂತಕ್ಕೆ ಬಂದು ಮುಟ್ಟುತ್ತಿರಲಿಲ್ಲ. ಕಾಳಿದಾಸ-ಷೇಕ್‌ಸ್ಪಿಯರರು ಶ್ರೇಷ್ಠ ನಾಟಕಕಾರರು ಎನ್ನುವುದಕ್ಕೆ

ಅವರ ನಾಟಕಗಳನ್ನು ತಾನೇ ಓದಿ, ತಿಳಿದುಕೊಂಡು, ಪ್ರಯೋಗಗಳಿಗೆ 'ಒನ್ಸ್ ಮೋರ್' ಎಂದು ಚಪ್ಪಾಳೆ ತಟ್ಟುವುದೆ ನಿಯತಕಾರಣ ಎಂದು ಅವನು ತಿಳಿಯುವುದಿಲ್ಲ.

ಹಾಗಿದ್ದರೆ ಈ ಶ್ರೇಷ್ಠ ನಾಟಕಕಾರರನ್ನು ಸಾಮಾನ್ಯರು ಪರಿಚಯ ಮಾಡಿಕೊಳ್ಳುವುದಾದರೂ ಹೇಗೆ? ಓದದೆ, ನೋಡದೆ, ತಿಳಿದುಕೊಳ್ಳದೆ ಇವರ ಶ್ರೇಷ್ಠತೆಯ ಬಗ್ಗೆ ನಿರ್ಣಯ ಕೊಡುವ ಅಧಿಕಾರ ಸಾಮಾನ್ಯರಿಗೆ ಬರುವುದಾದರೂ ಹೇಗೆ? ಎಲ್ಲಿಂದ? ಇಲ್ಲವೆ ಇವರೆಲ್ಲರೂ ಪಂಡಿತರ ಅಸಂಖ್ಯಾಸಂಖ್ಯ ವಿಮರ್ಶಾಗ್ರಂಥಗಳನ್ನು ಓದಿಕೊಂಡಿರುವರೆನ್ನಬಹುದೆ? ಅದಂತೂ ಶಕ್ಯವೇ ಇಲ್ಲ. ರಂಜಕವಾಗಬಹುದಾದ ಮೂಲವನ್ನೇ ಓದಲಾರದವರು ವಿಚಾರನಿದ್ರಾಭಾರವಾದ ವಿಮರ್ಶಾಗ್ರಂಥಗಳನ್ನು ಓದಬಹುದೆ? "ನನಗೆ ಯಾವ ದುರ್ವಾಸನ ಶಾಪ ತಟ್ಟಿದೆ ಅಂಥಾ ಕಷ್ಟಪಡಲಿಕ್ಕೆ?" ಎನ್ನುವವನಿಗೆ ನಿಜವಾಗಿ ದುರ್ವಾಸ(ಸ್) ಯಾರು, ಎಂಥವ, ಯಾವ ಕಾಲದವ ಇದಾವುದೂ ಗೊತ್ತಿರುವುದಿಲ್ಲ; ಅದಕ್ಕೂ ಮುಖ್ಯವಾಗಿ 'ಶಾಪ' ಎಂದರೇನು, ನಿಜವಾಗಿಯೆ ಒಬ್ಬನ ಬಾಯ್ಮಾತು ಅಷ್ಟೊಂದು ಪ್ರಭಾವಶಾಲಿಯಾಗಬಹುದೆ ಎಂಬುದೂ ಗೊತ್ತಿಲ್ಲ; ಆದರೂ ಸಾಮಾನ್ಯನ ಬಾಯಿಯಿಂದ ಅಂತಹ ಮಾತು ಬರುವುದು, ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕದಲ್ಲಿ ಬರುವ ಸಂದರ್ಭದಂತೆ. ಆ ನಾಟಕದಲ್ಲಿ ದುರ್ವಾಸನು ಶಕುಂತಲೆಯನ್ನು ಶಪಿಸುವನು; ಆ ಶಾಪದ ಪ್ರಭಾವಕ್ಕೆ ಒಳಗಾದ ದುಷ್ಯಂತನು ಸ್ವಯಂಪ್ರೀತಿಯಿಂದಲೆ ತಾನು ಶಕುಂತಲೆಯನ್ನು ಮದುವೆಯಾದುದನ್ನು ಮರೆಯುವನು. ಎಂತಹ ಅಸಂಬದ್ಧ, ಎಂತಹ ವಿಸಂಗತ ಘಟನೆ! ಇದರಲ್ಲಿ ಯಾರದಾದರೂ ವಿಶ್ವಾಸ ಮೂಡಬಹುದೆ? ಯಾವ ಬುದ್ಧಿವಂತನು ಇದನ್ನು ಒಪ್ಪಬಹುದು? ನಿಜ. ದುಷ್ಯಂತ ಮರೆತದ್ದು ನಿಜ ಎಂದರೆ ಅದಕ್ಕೆ ಕಾರಣ ಬೇಕಲ್ಲವೆ? ಕಾರಣ ಯಾವುದು ಎಂಬುದು ತನಗೆ ತಿಳಿಯದಿದ್ದಲ್ಲಿ 'ಬುದ್ಧಿವಂತ'ನು ಕಾರಣವೆ ಇಲ್ಲ ಎಂದು ಸಾಧಿಸುವನು. ಸಾಮಾನ್ಯನ ಮಾತು ಹಾಗಲ್ಲ. ಕಾರಣವಿರಲೇಬೇಕು, ಇಲ್ಲದೆ ಕಾರ್ಯವಿಲ್ಲ ಎಂದು ಅವನದೂ ಹಟ. ಆದರೆ ಆ ಕಾರಣ ತಿಳಿಯದಿದ್ದಲ್ಲಿ 'ತಿಳಿಯದ ಕಾರಣ' ಒಂದಿದೆ ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವನು; ಮತ್ತು ವ್ಯವಹಾರದ ಅನುಕೂಲತೆಗಾಗಿ ಆ 'ತಿಳಿಯದ ಕಾರಣ'ಕ್ಕೆ 'ದೈವ', 'ವರ', 'ಶಾಪ', 'ಪೂರ್ವಜನ್ಮದ ಫಲ' ಮುಂತಾಗಿ ಯಾವುದೊಂದು ಹೆಸರನ್ನು ಕೊಡುವನು. ಮೂಲ ಕತೆಯಲ್ಲಿ ದುರ್ವಾಸನ ಶಾಪದ ಪ್ರಸಂಗವಿಲ್ಲದಿದ್ದರೂ ಅದನ್ನು ಕಾಳಿದಾಸನು ಕಲ್ಪಿಸಿಕೊಂಡನು; ಆಮೇಲೆ ಸಾಮಾನ್ಯರ ನಂಬುಗೆಗೆ ಹೊಂದುವಂತೆ ಅದನ್ನು ಶಾಪದ ಎರಕದಲ್ಲಿ ಹಾಯಿಸಿಬಿಟ್ಟನು. ಎಂದರೆ ತಾನು ತಿಳಿದುಕೊಂಡದ್ದನ್ನೆ ಕಾಳಿದಾಸನು ಹೇಳಿದನೆಂಬ ಹೆಮ್ಮೆಯು ಸಾಮಾನ್ಯನಿಗೆ ಇನ್ನೊಬ್ಬರಿಗೂ ತಿಳಿಸಿ ಹೇಳುವ ಗೌರವ ದೊರಕಿದೆ ಕಾಳಿದಾಸನಿಂದಲೆ. ಇನ್ನೊಬ್ಬರಿಗೆ ಹೇಳುವುದೂ ಹೇಳಬೇಕೆನ್ನುವುದೂ ಸಹಜ, ಅನಿವಾರ್ಯ. ಒಳ್ಳೆಯದೆ ಇರಲಿ, ಕೆಟ್ಟದೆ ಇರಲಿ ನಾಲ್ಕು ಜನರ ಮುಂದೆ ಆಡಿಕೊಂಡರೆ ಮನಸ್ಸು ಹಗುರೆನ್ನಿಸುವುದು ಎಂದು ಸಾಮಾನ್ಯನ ಅಭಿಪ್ರಾಯ, ಅನುಭವ; ಆದರೆ ಆ ಮಾತನ್ನು ಹೇಳುವಾಗ "ಸ್ನಿಗ್ಧಜನಸಂವಿಭಕ್ತಂ ಹಿ ದುಃಖಂ ಸಹ್ಯವೇದನಂ ಭವತಿ" ಎಂಬ ಕಾಳಿದಾಸನ ಮಾತಿನ ಪ್ರಭಾವ ಇದೆ ಎಂಬುದು ಮಾತ್ರ



**ಕಾಳಿದಾಸ ಮತ್ತು ಷೇಕ್ಸ್ಪಿಯರ್**
ಶ್ರೀ ಆರ್. ಎಸ್. ಎನ್. ಅವರ ಕಲ್ಪನೆಯಲ್ಲಿ.

ಹೊಳೆಯುವುದು. "ಮದುವೆಯ ಹುಡುಗೆ ಅಂದರೆ ಇನ್ನೊಬ್ಬರ ವಸ್ತು" ಎನ್ನುವವನು, ಮೂಲದಲ್ಲಿ ಅದನ್ನು ಓದಿರದಿದ್ದರೂ 'ಅರ್ಥೋ ಹಿ ಕನ್ಯಾ ಪರಕೀಯ ಏವ' ಎಂಬ ಕಾಳಿದಾಸನ ಮಾತನ್ನೇ ಹೇಳುತ್ತಿದ್ದಾನೆ.

ಷೇಕ್ಸ್ಪಿಯರನಿಗೆ ಸಂಬಂಧಿಸಿದ ಲೇಖದಲ್ಲಿ ಕಾಳಿದಾಸನ ಕೃತಿಗಳಿಂದ

ಉದಾಹರಿಸುವುದಕ್ಕೆ ನಾನು ಕ್ಷಮೆಯನ್ನು ಬೇಡುವುದಿಲ್ಲ. ಮೊದಲನೆಯದಾಗಿ, ಷೇಕ್ಸ್‌ಪಿಯರನ ಕೃತಿಗಳನ್ನೆಲ್ಲ ಕೂಲಂಕಷವಾಗಿ ಅಭ್ಯಸಿಸಿದವನಲ್ಲ ನಾನು; ಇದಲ್ಲದೆ, ಓದುಗರಲ್ಲಿ ಬಹುಸಂಖ್ಯಾತ ಕನ್ನಡಿಗರಿಗೆ ಷೇಕ್ಸ್‌ಪಿಯರನ ಕೃತಿಗಳ ಪರಿಚಯ ನನಗಿದ್ದುದಕ್ಕಿಂತಲೂ ಕಡಮೆ ಇರಬಹುದಾಗಿದೆ (ಶೂನ್ಯಕ್ಕಿಂತ ಕಡಮೆ ಎಂಬುದು ಇರುವುದಾದಲ್ಲಿ). ಎರಡನೆಯದಾಗಿ, ಈ ಲೇಖಕ್ಕೆ ಮುಖ್ಯವಾಗಿ ಇಟ್ಟುಕೊಂಡ ದೃಷ್ಟಿಯೆ ಬೇರೆಯಾಗಿದೆ. ಷೇಕ್ಸ್‌ಪಿಯರನು ಶ್ರೇಷ್ಠ ನಾಟಕಕಾರ, ನಿಜ. ಆದರೆ ಒಬ್ಬ ಸಾಹಿತಿಯ ಶ್ರೇಷ್ಠತೆಯನ್ನು ಸಾಮಾನ್ಯನ ದೃಷ್ಟಿಯಿಂದ ಅರಿತುಕೊಳ್ಳುವುದು. ವಿಮರ್ಶಕರ ದೃಷ್ಟಿಯಿಂದ ಕೂಡ ಷೇಕ್ಸ್‌ಪಿಯರನ ಪ್ರತಿಯೊಂದು ನಾಟಕ ಶ್ರೇಷ್ಠ ಎಂದು ಹೇಳಲಾಗುವುದಿಲ್ಲ. ಇದಲ್ಲದೆ ತನ್ನ ಕಾಲಮಾನಕ್ಕನುಸರಿಸಿ, ತನ್ನ ಕಾಲದ ಪ್ರೇಕ್ಷಕರ ಯೋಗ್ಯತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಷೇಕ್ಸ್‌ಪಿಯರನು ಅನೇಕ ಸಂಗತಿಗಳನ್ನು ತನ್ನ ನಾಟಕದಲ್ಲಿ ಸೇರಿಸಿದ್ದಾನೆ. ಇಂದು ಅದರಲ್ಲಿ ಕೆಲವು ಜೊಳ್ಳು ಎನ್ನಿಸಬಹುದು, ಕೆಲವು ನೀರಸ ಎನ್ನಿಸಬಹುದು, ಕೆಲವು ಬೇಸರವನ್ನುಂಟುಮಾಡಬಹುದು, ಇನ್ನು ಕೆಲವು ಬಾಲಿಶ ಎನ್ನಿಸಬಹುದು. ಒಮ್ಮೊಮ್ಮೆ ಆಗಿನ ಕಾಲದಲ್ಲಿ ಮೀಸೆ ಬಾರದ ಹುಡುಗರು ಸ್ತ್ರೀಪಾತ್ರವನ್ನು ವಹಿಸುತ್ತಿದ್ದುದಕ್ಕಾಗಿ ಪ್ರೇಕ್ಷಕರನ್ನು ನಗಿಸುವ ಕೆಲವು ಸಂದರ್ಭದ ಮಾತುಗಳು (ಉದಾ.: 'ಟ್ವೆಲ್ಫ್ತ್ ನೈಟ್'ನಲ್ಲಿ) ಸ್ತ್ರೀಯರೆ ಸ್ತ್ರೀಪಾತ್ರವನ್ನು ವಹಿಸುವ ಇಂದಿನ ಕಾಲದಲ್ಲಿ ನಿಷ್ಪ್ರಯೋಜಕ ಎನ್ನಿಸುವವು. ಇದೆಲ್ಲವನ್ನು ಅರಿತೂ ಷೇಕ್ಸ್‌ಪಿಯರ್ ಶ್ರೇಷ್ಠ ನಾಟಕಕಾರ ಎನ್ನುವುದು ಯಾಕೆ? ಆ ಶ್ರೇಷ್ಠತೆಯ ಮೂಲವೆಲ್ಲಿದೆ? ಈ ಪ್ರಶ್ನೆಗಳಿಗೆ ಸಾಮಾನ್ಯನ ದೃಷ್ಟಿಯಿಂದ ಉತ್ತರ ಕೊಡುವುದೆ ಇಲ್ಲಿ ಮುಖ್ಯೋದ್ದೇಶ.

ಷೇಕ್ಸ್‌ಪಿಯರನ ನಾಟಕಗಳ ಬಗ್ಗೆಯೆ ಹೇಳುವುದಾದರೆ ಅವನ ನಾಟಕಗಳಲ್ಲಿ ರಾಜರು, ರಾಣಿಯರು, ಮಂತ್ರಿಗಳು, ದುರ್ಮಂತ್ರಿಗಳು, ಸೈನಿಕರು, ಸೇನಾಪತಿಗಳು, ಪ್ರಣಯಿಗಳು, ಪ್ರತಿಸ್ಪರ್ಧಿಗಳು, ಭಾವಿಕರು, ಕುಟಿಲರು, ಧನಿಕರು, ದರಿದ್ರರು, ಪ್ರಾಮಾಣಿಕರು, ಪಟಿಂಗರು, ಕಳ್ಳರು, ಕಪಟಿಗಳು—ಮುಂತಾಗಿ ನೂರಾರು ವಿಧದ ಪಾತ್ರಗಳಿವೆ. ಪ್ರಣಯ, ದ್ವೇಷ, ಅಸೂಯೆ, ಈರ್ಷ್ಯೆ, ಸಿಟ್ಟು, ಸೇಡು, ದುಃಖ, ದುರಂತ, ಹಾಸ್ಯ, ಅಪಹಾಸ್ಯ ಮೊದಲಾದ ವಿವಿಧ ಭಾವನೆಗಳಿವೆ. ಗ್ರಾಮ್ಯಶೈಲಿಯ ಹರಟೆಯಿಂದ ಭಾವಗೀತೆಯ ಕಾವ್ಯಶೈಲಿಯವರೆಗೆ ಬರೆವಣಿಗೆ ಇದೆ. ಆದರೆ ಇವಿಷ್ಟೆ ಅಥವಾ ಇದಕ್ಕಾಗಿಯೆ ಷೇಕ್ಸ್‌ಪಿಯರನು ದೇಶ-ಕಾಲಗಳ ಮರ್ಯಾದೆಯನ್ನು ಮೀರಿ ಜನಮೆಚ್ಚುಗೆಗೆ ಪಾತ್ರನಾಗಿದ್ದಾನೆ ಎಂದು ತಿಳಿಯಲಾಗದು. ಪ್ರಾರಂಭದ ವಿವರವಾದ ಚರ್ಚೆ ಆ ಮಾತನ್ನು ಸ್ಪಷ್ಟಪಡಿಸುತ್ತಿದೆ. ಒಂದು ದೃಷ್ಟಿಯಿಂದ ಹೇಳುವುದಾದರೆ ತನ್ನ ಸಮಕಾಲಿಕರಿಗೆ ಷೇಕ್ಸ್‌ಪಿಯರನು ಒಬ್ಬ ವಿಶಿಷ್ಟ ವ್ಯಕ್ತಿಯಾಗಿದ್ದನು. ಅವನ ಕೃತಿಗಳನ್ನು ಹೊರಗಿನಿಂದ ನೋಡಿ ಪ್ರೇಕ್ಷಕರು ಮೆಚ್ಚುತ್ತಿದ್ದರು. ಆದರೆ ಇಂಗ್ಲಿಷ್ ಭಾಷೆಯನ್ನು ಬಲ್ಲ ಇಂದಿನ ಜನರಿಗೆ—ನಾನೂರು ವರ್ಷಗಳ ತರುವಾಯದಲ್ಲಿ—ಇನ್ನಿಷ್ಟು ದೂರವಾಗುವುದರ ಬದಲು ಇನ್ನಿಷ್ಟು ಹತ್ತಿರವಾಗಿದ್ದಾನೆ; ಇವನು ನಮ್ಮಿಂದ ಬೇರೆ ಎನ್ನಿಸದಷ್ಟು ಹತ್ತಿರವಾಗಿದ್ದಾನೆ. ಇದಕ್ಕಾಗಿಯೆ ಷೇಕ್ಸ್‌ಪಿಯರನ

ಅನೇಕ ಮಾತುಗಳು ಅವನ ಮಾತುಗಳೆನ್ನಿಸದೆ ನಮ್ಮ ಮಾತುಗಳಾಗಿವೆ. ತನಗೆ ಸಲ್ಲತಕ್ಕದ್ದನ್ನು ಹಟದಿಂದ ಬೇಡುವ ಮನುಷ್ಯನ ಬಗ್ಗೆ "He wants his pound of flesh" ಎಂದು ನಾವೆನ್ನುವಾಗ ಷೇಕ್ಸ್ಪಿಯರನ 'ದಿ ಮರ್ಚೆಂಟ್ ಅಫ್ ವೆನಿಸ್' ಅನ್ನು ಓದಿರಲೇಬೇಕೆಂಬ ಅಗತ್ಯವಿಲ್ಲ. "All the world's a stage" ಎನ್ನುತ್ತೇವೆ ಸಹಜವಾಗಿ. ತನ್ನ 'ಆ್ಯಸ್ ಯು ಲೈಕ್ ಇಟ್' ಎಂಬ ನಾಟಕದಲ್ಲಿ ಷೇಕ್ಸ್ಪಿಯರನು ಯಾವ ಪಾತ್ರದ ಬಾಯಿಯಿಂದ ಯಾವ ಸಂದರ್ಭದಲ್ಲಿ ಹೇಳಿಸಿದ್ದಾನೆ ಎಂಬುದರ ಗೊಡವೆ ನಮಗಿಲ್ಲ. ಮುಖ್ಯವಾದ ಮಾತೆಂದರೆ ನಾನೂರು ವರ್ಷಗಳ ಮುಂಚೆ ಷೇಕ್ಸ್ಪಿಯರನ ಪಾತ್ರಗಳು ಹೇಳುವ ಅನೇಕ ಮಾತುಗಳು ಇಂದು ಇಂಗ್ಲಿಷ್ ಭಾಷೆ ಬಳಕೆಯಲ್ಲಿದ್ದ ಪ್ರದೇಶಗಳಲ್ಲಿ ನಮ್ಮ ಇಂದಿನ ವ್ಯವಹಾರಕ್ಕೆ ಸಮರ್ಪಕವಾದ ಅಭಿವ್ಯಕ್ತಿಯನ್ನು ಒದಗಿಸುತ್ತಿವೆ. ಮನುಷ್ಯನ ಬಾಹ್ಯಸಮಾಜಕ್ಕೆ ಸಂಬಂಧಿಸಿದ ರೀತಿ-ನೀತಿಗಳು ಬದಲಾಗುತ್ತಿವೆ, ಬದಲಾಗಿವೆ, ಬದಲಾಗಲೇಬೇಕು; ಆದರೆ ಮನುಷ್ಯನ ಅಂತರ್ಯದಲ್ಲಿ ಹುದುಗಿದ ಭಾವನೆಗಳು —ಪ್ರಣಯ, ಕೋಪ, ಮತ್ಸರ, ಲೋಭ ಮುಂತಾದುವು— ಅಂದಿಗಿದ್ದಂತೆ ಇಂದೂ ಇವೆ. ಅವನ್ನು ಷೇಕ್ಸ್ಪಿಯರನು ಚಿತ್ರಿಸಿದ ರೀತಿ, ವಿವರಿಸಿದ ಶಬ್ದಗಳು ಇವು ನಮ್ಮ ಇಂದಿನ ಅನುಭವಕ್ಕೆ ಸಹಾಯಕವಾಗಿವೆ. ಸಾಮಾನ್ಯನಿಗೆ ಸಂತೋಷವಾಗುವುದು ಇದಕ್ಕಾಗಿ. ತನ್ನ ಅನುಭವಗಳಿಗೆ ಇಲ್ಲಿ ಕನ್ನಡಿ ಇದೆಯಲ್ಲದೆ ತನ್ನೊಳಗೆ ಅಸ್ಪಷ್ಟವಾದ ವಿಚಾರಗಳಿಗೆ ಒಂದು ಅಭಿವ್ಯಕ್ತಿ ಇದೆ. ನಮ್ಮದನ್ನು ತಿಳಿದುಕೊಂಡನಲ್ಲ! ಇಂದು ನಮಗೆ ಹೀಗನ್ನಿಸುವುದೆಂದು ಅಂದೇ ಹೇಳಿದ್ದನಲ್ಲ! ಪ್ರಪಂಚದಲ್ಲಿ ನಮಗೆ ಅರಿಯದಂತಹ ನಮ್ಮ ಕೆಲ ನೆರೆಹೊರೆಯವರನ್ನು ನಮಗೆ ತಿಳುಹಿಸಿಕೊಟ್ಟಿರುವನಲ್ಲ! ಬುದ್ಧಿವಂತರು ಏನೆ ಹೇಳಲಿ, ಅವರಿಗೆ ಎಲ್ಲ ತಿಳಿದಿಲ್ಲ. "There are more things in heaven...." ನಿಜ. ನಾವು ತಿಳಿದುಕೊಂಡದ್ದೆ ನಿಜ. ಕಾಯಿದೆ ಕುಣಿದಾಡಲಿ, ಶಾಸ್ತ್ರ ಶಂಖ ಊದಲಿ, ಷೇಕ್ಸ್ಪಿಯರನ ಅಥೆಲ್ಲೊ ಮಾಡಿದ್ದೇ ಸರಿ. ಇಲ್ಲದಿದ್ದರೆ ಯಾವ ಗಂಡನಿಗೂ ಹೆಂಡತಿ ದಕ್ಕಲಿಕ್ಕಿಲ್ಲ. ಏನಾದರೂ ಹೆಣ್ಣು ಜಾತ್ಯಾ—ಅದೇ ಬಾಯಿಗೆ ಬಂದಿದೆ ಅನ್ನುವಷ್ಟರಲ್ಲಿ ಷೇಕ್ಸ್ಪಿಯರನೆ ಹೇಳಿಬಿಟ್ಟ, "Frailty, thy name is woman!" ಅಂತ.

ಷೇಕ್ಸ್ಪಿಯರನದಾಗಲಿ ಕಾಳಿದಾಸನದಾಗಲಿ ಶ್ರೇಷ್ಠತೆಯ ರಹಸ್ಯ ಇಲ್ಲಿದೆ. ಅವರ ಕೃತಿಗಳೆಂದರೆ ಜೀವನ, ಜೀವನದ ಪ್ರತಿಬಿಂಬವಲ್ಲ. ಅದಕ್ಕೆಂದೇ ವಿಚಾರಕ್ಕಿಂತ ಅನುಭವದಲ್ಲಿಯೆ ತೊಡಗಿದ ಸಾಮಾನ್ಯರಿಗೆ ಅವು ಮೆಚ್ಚಿಗೆಯದಾಗುವುವು. ಮನುಷ್ಯ ಎಂಬ ಪ್ರಾಣಿವರ್ಗದ ನೈಸರ್ಗಿಕ ಎಂದರೆ ಭಾವನಾತ್ಮಕ ಜೀವನಕ್ಕೆ ದೇಶ-ಕಾಲಗಳ ವ್ಯತ್ಯಾಸವಿಲ್ಲ. (ಅನೇಕ ಕೋಟಿವರ್ಷಗಳ ಮೇಲೆ ವೈಜ್ಞಾನಿಕರು ಹೇಳುವಂತೆ ವ್ಯತ್ಯಾಸ ಕಾಣಬಹುದು.) ಅಲ್ಲಿನವರೆಗೂ ಇಂತಹ ಕೃತಿಗಳಿಗೆ ಸ್ಥಾನವಿದೆ.



# ಷೇಕ್ಸ್ಪಿಯರನ ನಾಟಕಗಳ ಕರ್ತೃತ್ವ-ಸಮಸ್ಯೆ

## ಗೌರೀಶ ಕಾಯ್ಕಿಣಿ

'ಷೇಕ್ಸ್ಪಿಯರನ ನಾಟಕಗಳನ್ನು ಬರೆದವರು ಯಾರು?' —ಎಂಥ ಹುಚ್ಚು ಪ್ರಶ್ನೆ? 'ಪಂಚಪಾಂಡವರು ಮಂಚದ ಕಾಲಿನಷ್ಟೆ?' ಎಂದು ಕೇಳಿದ ಹಾಗಾಯಿತಲ್ಲ! ಅವನು ಬರೆದದ್ದನ್ನು ಅವನಲ್ಲದೆ ಇನ್ನಾರು ಬರೆದದ್ದು? ಕಾಳಿದಾಸನ ಕಾವ್ಯ-ನಾಟಕಗಳನ್ನು ಕೌಟಿಲ್ಯ ಬರೆದನೆಂದರೆ ಯಾರು ನಂಬುವರು? ಯಾರು ನಗಲಾರರು? ಆದರೆ ಹುಚ್ಚೆಂದು ಕಾಣುವ ಈ ಪ್ರಶ್ನೆಯು ಎಷ್ಟೋ ವಿದ್ವಾಂಸರಿಗೆ ಈಗ ಎಷ್ಟೋ ಕಾಲದಿಂದ ಹುಚ್ಚು ಹಿಡಿಸಿದೆ.

ಏವನ್ ಹೊಳೆಯ ಮೇಲಿನ ಸ್ಟ್ರ್ಯಾಟ್‌ಫರ್ಡ್ ಹಳ್ಳಿಯ ಒಬ್ಬ ಕಟುಕರ ಮನೆಯ ಹುಡುಗ, ಮುಂದೆ ಲಂಡನ್ ನಗರದ ಥಿಯೇಟರಿನ ಹೊರಗೆ ಸರದಾರ ಸಿರಿವಂತರ ಕುದುರೆಗಳನ್ನು ನೋಡಿಕೊಳ್ಳುತ್ತ ಹಾದಿ ಕಾಯುವ ಹುಡುಗ, ಪ್ರಸಂಗ ಪೆದ್ದಾಗ (ಅಥವಾ ಬಿದ್ದಾಗ!) ರಂಗಭೂಮಿಯ ಮೇಲೂ ಕಿರುಕುಳ ವೇಷ ಕಟ್ಟಿ ಕುಣಿದಾಡುವ ಹುಡುಗ 'ಹ್ಯಾಮ್ಲೆಟ್', 'ಮೆಕ್‌ಬೆತ್', 'ಆ್ಯಸ್ ಯು ಲೈಕ್ ಇಟ್', 'ಕಿಂಗ್ ಲಿಯರ್', 'ಅಥೆಲ್ಲೊ', 'ರೋಮಿಯೊ ಅಂಡ್ ಜೂಲಿಯೆಟ್', 'ಜೂಲಿಯಸ್ ಸೀಸರ್' ಮುಂತಾದ ಜಗದ್ವಿಖ್ಯಾತ ಅಮರ ಮಹಾಕೃತಿಗಳನ್ನು ಬರೆದಿರಬಹುದೇ?

ಯಾಕೆ ಬರೆದಿರಬಾರದು? ಕಾಳಿದಾಸನು ಲೋಕೋತ್ತರ ಲಾಲಿತ್ಯದ ಕಾವ್ಯ ಕೃತಿಗಳನ್ನು ಕಟ್ಟಲಿಲ್ಲವೆ? ಆ ಆಖ್ಯಾಯಿಕೆಯಂತೆ ಕಾಳಿದಾಸನೂ ಒಬ್ಬ ದಿಕ್ಕಿಲ್ಲದ ದಡ್ಡ ಕುರುಬನಾಗಿದ್ದನಷ್ಟೆ! ಆದರೆ, ಇಲ್ಲಿ ಎರಡು ಆಕ್ಷೇಪಗಳು: ಕಾಳಿದಾಸ ಕುರುಬನಿದ್ದನೆಂಬುವದು ಕೇವಲ ಆಖ್ಯಾಯಿಕೆ, ಐತಿಹ್ಯವಲ್ಲ; ಆದರೆ ಷೇಕ್ಸ್ಪಿಯರನು ಕಟುಕರ ಹುಡುಗ, ತನ್ನ ಊರ ಒಡೆಯರ ತೋಟದಿಂದ ಹಣ್ಣು, ಹೇಂಟೆ ಕದಿಯುತ್ತಿದ್ದ ಹುಡುಗ—ಎಂಬುವದಕ್ಕೆ ಆಧಾರವಿದೆ. ಇನ್ನು ಕುರುಬರ ಕಗ್ಗ 'ಕೂಸ' ಕಾಳಿದಾಸ ಹೇಗಾದನೆಂಬುದಕ್ಕೆ ಕಾಳೀಮಾತೆಯ ಸಾಕ್ಷಾತ್ಕಾರದ ಪವಾಡ ಕಥೆಯಾದರೂ ಸೃಷ್ಟಿಯಾಗಿದೆ. ಅಂಥ ದೈವಾನುಗ್ರಹದ ಚಮತ್ಕಾರ ಜಡ ವಿಲಿಯಂ ಷೇಕ್ಸ್ಪಿಯರನ ಮೇಲೆ

ಆದ ವೃತ್ತಾಂತವಿಲ್ಲ! ಅಂದಾಗ ಇದ್ದಕ್ಕಿದ್ದಂತೆ ಷೇಕ್‌ಸ್ಪಿಯರ್ ತನ್ನದೆನ್ನುವ ಮಹಾ ನಾಟಕಕೃತಿಗಳನ್ನು ಬರೆದು ಆ್ಯಂಗ್ಲೋ-ಸ್ಯಾಕ್ಸನ್ ವಂಶದ ಸಾರ್ವಭೌಮ ಪ್ರತಿಭೆಯ ಅದ್ವಿತೀಯ ಪ್ರಭೆಯ ಕವಿಯೆಂದು ಮೆರೆದದ್ದು ಹೇಗೆ? "ಅಸ್ತಿ ಕಶ್ಚಿತ್ ವಾಗ್ವಿಶೇಷಃ!" ಎಂದು ಆ ಆಂಗ್ಲ ಕವಿಚಕ್ರವರ್ತಿಯ ನಾಲಿಗೆಯ ಮೇಲೆ ಬರೆದ ದೈವತವು ಯಾವದು?

"Others abide our question. Thou art free."—ಇನ್ನೊಬ್ಬ ಹಿರಿಯ ಕವಿ ಹಾಡಿದ ಈ ಪ್ರಶಸ್ತಿಗೆ ಪೂರ್ತಿ ಪಾತ್ರತೆಯನ್ನು ಪಡೆದ ಈ 'ಕವಿಗಳಲ್ಲಿಯ ಕಡುಗಲಿ' (Poet as a Hero) ಹೇಗೆ ಉಂಟಾದನು? ಅಥವಾ ಇವನ ನಾಟಕಗಳಲ್ಲಿಯ ಅಲೌಕಿಕ ನಾಯಕೋತ್ತಮರಂತೆ ಈ ಕವಿಯೂ ಕಾಲ್ಪನಿಕನೊ? ಈ ವಾದವು ಅನೇಕ ವರ್ಷಗಳಿಂದಲೂ ನಡೆದು ಬಂದಿದೆ. ಕೆಲವು ವಿದ್ವಾಂಸರು ಷೇಕ್‌ಸ್ಪಿಯರನ ಬದಲು ಅವನ ನಾಟಕಗಳನ್ನು ಬರೆದವರು ಫ್ರಾನ್ಸಿಸ್ ಬೇಕನ್, ಎಡ್ವರ್ಡ್ ಡಿ ವೀರ್ (ಆಕ್ಸ್‌ಫರ್ಡಿನ ಒಬ್ಬ ಸರದಾರ) ಅಥವಾ ಪೆಂಬ್ರೋಕಿನ ಕೌಂಟೆಸ್ (ಸರದಾರಿಣಿ) ಇವರಲ್ಲಿ ಒಬ್ಬರಲ್ಲ ಒಬ್ಬರೆಂದು ಪ್ರತಿಪಾದಿಸಿದ್ದುದುಂಟು. ಆದರೆ ಈ ವಾದಕ್ಕೆ ಹೊಸ ದನಿಯನ್ನು ಕೂಡಿಸಿ ಹೊಸ ಆವೇಶ ಆಗ್ರಹಗಳಿಂದ ಇದರ ಪರಿಶೋಧನೆ-ಪ್ರತಿಪಾದನೆ ಮಾಡಿದ ಆಧುನಿಕ ವಿದ್ವಾಂಸನು ಅಮೆರಿಕೆಯ ಒಬ್ಬ ಪ್ರಾಧ್ಯಾಪಕ, ಪ್ರೊ|| ಹಾಫ್‌ಮನ್.

ಪ್ರೊ|| ಹಾಫ್‌ಮನ್ ಕಳೆದ 20 ವರ್ಷಗಳಿಂದ ಈ ಸಂಶೋಧನಕ್ಕೆ ತನ್ನ ತನು-ಮನ-ಧನಗಳನ್ನೆ ಮುಡಿಪಾಗಿಟ್ಟು ದುಡಿಯುತ್ತಿದ್ದಾನೆ. ಆತನ ಸಾಧನೆಯು ಯಶಸ್ವಿಯಾದರೆ ಆಂಗ್ಲ ಸಾಹಿತ್ಯಪ್ರಪಂಚದಲ್ಲಿಯೇ ಒಂದು ಕಿರಿಯ (?) ವಿಪ್ಲವ ವುಂಟಾಗುವದು. ಅಮರ ಕವಿಯೊಬ್ಬನು ನೆಲಕ್ಕೆ ಉರುಳುವುದಲ್ಲದೆ, ಆಂಗ್ಲನಲ್ಲದ ಪ್ರಾಧ್ಯಾಪಕನೊಬ್ಬನು ಆ ಮೂರ್ತಿಭಂಜನಕ್ಕಾಗಿ ಪ್ರಭಾವಾನ್ವಿತನಾಗುವನು! ಅಲ್ಲದೆ ಹೊಸದೊಂದು ಅಲಕ್ಷಿತ ಉಪೇಕ್ಷಿತ ವ್ಯಕ್ತಿ ಆಂಗ್ಲ ಕವಿಚಕ್ರವರ್ತಿಯ ಗದ್ದುಗೆಯನ್ನೇರುವಂತೆ ಆಗುವದು!

ಷೇಕ್‌ಸ್ಪಿಯರನ ಚತುಃಶತಸಾಂವತ್ಸರಿಕೋತ್ಸವದ ಸಂದರ್ಭದಲ್ಲಿ ಷೇಕ್‌ಸ್ಪಿಯರ್ ಎಂಬ ಕವಿ, ವ್ಯಕ್ತಿ ಇದ್ದನೋ ಇಲ್ಲವೋ ಎಂಬ ಯಕ್ಷಪ್ರಶ್ನೆಯನ್ನೆತ್ತಿ ಚರ್ಚಿಸುವದೂ ಒಂದು ವಿಡಂಬನೆಯ ಚೇಷ್ಟೆ ಅನಿಸಬಹುದು! ಆದರೆ ವಾಲ್ಮೀಕಿ, ವ್ಯಾಸ, ಭಾಸ, ಕಾಳಿದಾಸರಂತೆ ಷೇಕ್‌ಸ್ಪಿಯರನೂ ಒಂದು ಅಲೌಕಿಕ ಅಪೌರುಷೇಯ ಮಹಿಮೆಯ ವ್ಯಕ್ತಿತ್ವವನ್ನು ಪಡೆದು ಪ್ರಪಂಚದ ಸಹೃದಯರ ಹೃದಯಾಕಾಶದ ನಿತ್ಯನಕ್ಷತ್ರವಾಗಿ ಮೆರೆಯುತ್ತಿದ್ದಾನೆ. ಆ ವ್ಯಕ್ತಿತ್ವ—ಅವನದೆಂಬ ನಾಟಕಸೃಷ್ಟಿಯ ಶಬ್ದಬ್ರಹ್ಮನೆಂಬ ಮಹಿಮೆಯ ಸಿದ್ಧಸತ್ವ—ಐತಿಹಾಸಿಕವಾದ ಈ ವಿಲಿಯಂ ಷೇಕ್‌ಸ್ಪಿಯರನೆಂಬ ವ್ಯಕ್ತಿಗಿಂತ ಹಿರಿದು. ಇವನ ಐತಿಹಾಸಿಕತೆಯ ಬಗೆಗೆ ನಡೆದು ಬಂದ ಚರ್ಚೆ ಅವನ ಸಾಹಿತ್ಯ-ಸಾರ್ವಭೌಮತ್ವದ ಐಶ್ವರ್ಯಕ್ಕೆ ಯಾವ ಕುಂದನ್ನೂ ತರಲಾರದೆಂದು ನಮ್ಮ ಭಾವನೆ.

ಪ್ರೊ|| ಹಾಫ್‌ಮನ್ ಪ್ರತಿಪಾದಿಸುವ ಅಲಕ್ಷಿತ ಉಪೇಕ್ಷಿತ ವ್ಯಕ್ತಿ ಮಾರ್ಲೊ. ಆ ಮಾರ್ಲೊ ಯಾರು? ಏನು? —ಎಂಬುದನ್ನೆಲ್ಲ ಅರಿತುಕೊಳ್ಳುವ ಮೊದಲು ಈ ವಾದದ ಸ್ವರೂಪವನ್ನು ತಿಳಿಯಬೇಡವೆ?

ಷೇಕ್ಸ್ಪಿಯರ್ ಕವಿಯ ಪೂರ್ವಚರಿತ್ರದ ವಿಷಯ ಸಾಕಷ್ಟು ಗೊತ್ತಿಲ್ಲವೆಂಬು ದೊಂದೇ ಈ ವಾದದ ಕಾರಣವಲ್ಲ. ಹಾಗೆ ಎಷ್ಟೋ ಪುರಾತನ ಕವಿಗಳ ಚರಿತ್ರ ನಮಗೆ ಗೂಢವಾಗಿಯೇ ಇದೆ. ಆಂಗ್ಲರ ಇನ್ನೊಬ್ಬ ಪ್ರಾಚೀನ ರಾಷ್ಟ್ರೀಯ ಕವಿ ಚಾಸರನ ವಿಷಯ ಅದೆಷ್ಟು ಗೊತ್ತಾಗಿದೆ? ಆದರೂ ಅವನಿಂದೆಂದು ಹೆಸರಾದ "ಕ್ಯಾಂಟರ್‌ಬರಿಯ ಕಥೆ"ಗಳ ಕರ್ತೃತ್ವವನ್ನು ಅವನಿಂದ ಅಪಹರಿಸಲು ಯಾರೂ ಯತ್ನಿಸಿಲ್ಲ. ಆದರೆ ಷೇಕ್ಸ್ಪಿಯರನ ಕುರಿತು ಬಂದ ಕಷ್ಟ ಅವನ ಚರಿತ್ರಾಂಶಗಳು ಗೊತ್ತಿಲ್ಲವೆಂಬುದು ಮಾತ್ರವಲ್ಲ, ಗೊತ್ತಾದ ಅಂಶಗಳಿಂದ ಅವನ ಕರ್ತೃತ್ವ-ವ್ಯಕ್ತಿತ್ವದ ಒಂದು ರೂಪ; ಅವನ ನಾಟಕಗಳಿಂದ ರೂಪಿತವಾಗುವ ಅವನ ವ್ಯಕ್ತಿತ್ವದ ಬೇರೆಯೇ ಸ್ವರೂಪ!

ಉದಾಹರಣೆಗೆ, ಸ್ಟ್ರ್ಯಾಟ್‌ಫರ್ಡಿನ ಆ ಯುವಕ ಶಾಲೆಯ ಒಳಭಾಗವನ್ನೇ ಕಂಡವನಲ್ಲ, ವಿಶ್ವವಿದ್ಯಾಲಯದ ಮಾತೇಕೆ? ಆದರೆ ನಾಟಕಕಾರ-ಕವಿಯು ಸಮ ಕಾಲೀನ ಪುಸ್ತಕಪ್ರಪಂಚದ ಪರಿಜ್ಞಾನವನ್ನೆಲ್ಲ ವಿಲಕ್ಷಣವಾಗಿ (ಸಲ್ಲಕ್ಷಣವಾಗಿಯೂ!) ಪಳಗಿಸಿಕೊಂಡಂತಿದೆ! ಆಗಿನ ಕಾಲದಲ್ಲಿ ಈಗಿನಂತೆ ಪುಸ್ತಕಗಳು ಓದಲು ನೋಡಲು ದೊರೆಯುತ್ತಿದ್ದಿಲ್ಲವೆಂಬುದನ್ನು ನಾವು ಮರೆಯಬಾರದು. ವಿಶ್ವವಿದ್ಯಾಲಯಗಳ ಹೊರಗೆ ಗ್ರಂಥಸಂಗ್ರಹಗಳೇ ವಿರಳವಿದ್ದವು. ಇಂಗ್ಲಂಡಿನಲ್ಲಿ ಖಾಸಗಿ ಹಾಗೂ ಸಾರ್ವಜನಿಕ ಸಂಗ್ರಹಾಲಯಗಳು ಬೆಳೆದು ಬಂದದ್ದೆ 18ನೆಯ ಶತಮಾನದಲ್ಲಿ. ಅಂದಮೇಲೆ ಆ ಹುಡುಗ ನಾಟಕಗಳಲ್ಲಿ ಪ್ರಕಟವಾದ ಆ ಪಾಂಡಿತ್ಯವನ್ನೆಲ್ಲ—ಇತಿಹಾಸ, ತತ್ವಜ್ಞಾನ, ಲ್ಯಾಟಿನ್-ಗ್ರೀಕ್ ಭಾಷೆಗಳ ಪ್ರಭುತ್ವ—ಪಡೆದನಾದರೂ ಹೇಗೆ? (ಆಗ ಗ್ರೀಕ್, ಲ್ಯಾಟಿನ್ ಭಾಷೆಗಳಿಂದ ಗ್ರಂಥಗಳು ಆಂಗ್ಲ ಭಾಷೆಯಲ್ಲಿ ಅನುವಾದವಾದದ್ದೂ ಕಡಿಮೆಯೇ, ಕೆಲವೇ!)

ಇದಕ್ಕೂ ಹೆಚ್ಚಿನದೆಂದರೆ, ಈ ನಾಟಕಕಾರನು ಬಳಸುವ ಅಪಾರ ಶಬ್ದಸಂಪತ್ತು! ಜ್ಞಾನದ ಪ್ರತಿಯೊಂದು ಶಾಖೆಯನ್ನೂ ವ್ಯಾಪಿಸುವ ಶಬ್ದಸಂಭಾರ—ಇಂದಿಗೂ ಅವನ್ನು ನಿರ್ಧರಿಸಲಿಕ್ಕೆ ಸಿಗದಂಥ ಶಬ್ದಸಂಗ್ರಹ—ವನ್ನು ಷೇಕ್ಸ್ಪಿಯರನು ಯಾವ ಆತಂಕ-ಆಯಾಸವೂ ಇಲ್ಲದೆ ಲೀಲೆಯಿಂದ ಬಳಸಿದ್ದಾನೆ. ಅಂದಿನ ಶ್ರೇಷ್ಠ ಪಂಡಿತನಾದ ಮಿಲ್ಟನ್ (1608–1674) ಚಿಕ್ಕಂದಿನಿಂದ ಜಾಗ್ರತನಾಗಿ ವ್ಯಾಸಂಗ ನಡೆಯಿಸಿದಾತ. ಆತನು ತನ್ನ ಕಾವ್ಯಗಳಲ್ಲಿ ಪ್ರಯೋಗಿಸಿದ್ದು 8,000 ಶಬ್ದಗಳನ್ನು ಮಾತ್ರ! ಆದರೆ ಷೇಕ್ಸ್ಪಿಯರನು, ಕಂಪನೀ ನಟನಾದ ಈ ಹಳ್ಳಿಯ ಹುಡುಗ, ಉಪಯೋಗಿಸಿದ ಶಬ್ದಸಂಖ್ಯೆ 25,000!

ಪುಸ್ತಕಪ್ರಪಂಚದಿಂದ ಪ್ರಪಂಚದ ಪುಸ್ತಕಕ್ಕೆ ಬಂದರೂ ಇದೇ ಕತೆ. ನಾಟಕಕಾರ ಷೇಕ್ಸ್ಪಿಯರನ ಲೋಕಾನುಭವ, ಮಾನವ ಜೀವನದ 'ಪಾರದರ್ಶಿಯಾದ ಅಪಾರದರ್ಶಿ ಯಾದ' ಅವಲೋಕನೆ, ನೂರಾರು ವ್ಯಕ್ತಿ ಮನೋಧರ್ಮಗಳ ಸೂಕ್ಷ್ಮವೂ ತೀಕ್ಷ್ಣವೂ ಆದ ಪರಿಜ್ಞಾನ, ಆ ಹೊಳೆಯಂಚಿನ ಹಳ್ಳಿಯ ತರಳನಿಗೆ ಹೊಳೆಯುವದಾದರೂ ಹೇಗೆ? ಬರೀ ಥಿಯೇಟರಿನ ಹೊರಗೆ ಮನ್ನೆಯರ ಕುದುರೆಗಳ ಬಾಯಿಗೆ ತೋಬರಿ ಹಿಡಿದ ಮಾತ್ರಕ್ಕೆ ಅರಸುಮನೆತನದ ಉಚ್ಚಕುಲದ ವಿಚಾರ ಪದ್ಧತಿಗಳೂ, ಸಡಗರದ ರೀತಿ

ಗಳೂ ನಯ-ನಾಜೂಕುಗಳೂ ಈ ಯುವಕನಿಗೆ—ಆತ ಎಷ್ಟೇ 'ಅಶಿಕ್ಷಿತ ಪಟುತ್ವ' ವುಳ್ಳವನೆಂದು ಒಪ್ಪಿಕೊಂಡಾಗ್ಯೂ—ತೋಚುವದೆಂತು? ಷೇಕ್ಸ್‌ಪಿಯರರ ನಾಟಕಗಳಲ್ಲಿ ರಾಜಕುಲದ ಪುಣ್ಯವಂತರ ಅಭಿಜಾತ ಅಭಿರುಚಿಯ ರೀತಿನೀತಿಗಳ ನಿಕಟವೂ



**ಹ್ಯಾಮ್ಲೆಟ್**

"ಅಯ್ಯೋ! ಬಡಪಾಯಿ ಯಾರಿಕ್... ಎಲ್ಲಿ ನಿನ್ನ ಅಪಹಾಸ್ಯ ಈಗ?"

ಉತ್ಕಟವೂ ಆದ ಪರಿಚಯವು ಧಾರಾಳವಾಗಿ ಪ್ರಕಟವಾಗಿದೆ. ಕವಿಗೆ ಜೀವನದಲ್ಲಿ ಅಂಥ ಅನುಭವ ಆರಂಭದಿಂದ ಇದ್ದರೇನೇ ಅದು ಸಾಧ್ಯ.

ಇನ್ನು ಇದೆಲ್ಲ ಕೇವಲ ಪ್ರತಿಭಾವಿಲಾಸವೆಂದರೂ ನಡೆಯದು. ಪ್ರತಿಭೆಯ ವಿಲಾಸಕ್ಕೂ ಮೊತ್ತದಲ್ಲಿ ಅನುಭವ-ಅವಲೋಕನ-ಅನುಶೀಲನಗಳ ಅಂಶಗಳು ಅವಶ್ಯ. ಬೆರಳು ಚೀಪಿ ಬ್ರಹ್ಮಾಂಡ ಸೃಷ್ಟಿಮಾಡಲು ಬರುವದು ಆ ವಟಪತ್ರಶಾಯಿ ಶ್ರೀ ವಿಷ್ಣುವಿಗೇ ಶಕ್ಯವಾಗಿತ್ತು! ಹಾಗಾದರೆ ಒಪ್ಪಲೇಬೇಕಾದ ಅನುಮಾನವು ಯಾವದು? ಷೇಕ್ಸ್‌ಪಿಯರನು ಈ ನಾಟಕಗಳ ಕರ್ತಾರನಲ್ಲ, ಬೇರೊಬ್ಬ ಕವಿಯು ಈ ಅನಾಮಿಕ ಆಸಾಮಿ ವಿಲಿಯಂ ಷೇಕ್ಸ್‌ಪಿಯರರ ಹಿಂದೆ ಅವಿತುಕೊಂಡು ತನ್ನ ಕೃತಿಗಳನ್ನು ಪ್ರಕಟಿಸಿರಬೇಕು.

ಆದರೆ ಹೀಗೆ ಅವಿತುಕೊಳ್ಳುವದಾದರೂ ಏಕೆ? ಅದಕ್ಕೆ ಎರಡು ಕಾರಣ: ಆ ಕಾಲದಲ್ಲಿ ಕುಲೀನರು, ಸತ್ಕುಲದವರು ನಟ-ನಾಟಕ-ರಂಗಭೂಮಿಯ ವೃತ್ತಿಯನ್ನು

ಹೇಯವೆಂದು, ಹೀನಾಯವೆಂದು ತಿಳಿದಿದ್ದರು. (ನಮ್ಮಲ್ಲಿಯೂ ಪೂರ್ವಿಕರು ಕುಶೀಲವರನ್ನು ಕೆಟ್ಟ ಶೀಲದವರೆಂದು, ಕೀಳೆಂದು ಕಾಣುತ್ತಿದ್ದರಷ್ಟೆ!) ಪ್ರತಿಷ್ಠಿತರಿಗೆ ನಾಟ್ಯಾಭಿರುಚಿಯು ಒಂದು ಮುಸುಕಿನ ಮರೆಯ ಭೋಗವಾಗಿತ್ತು. ಅಂಥ ವರ್ಗದ ಅಂಥ ಲೇಖಕರು ಶಿಖಂಡಿಯನ್ನು ಮುಂದಿಟ್ಟುಕೊಂಡೇ ಶರಸಂಧಾನ ನಡೆಯಿಸಬೇಕಿತ್ತು!

ಇಲ್ಲಿ ಒಂದು ಸಂಗತಿಯನ್ನು ಮರೆಯಬಾರದು. ಷೇಕ್ಸ್ಪಿಯರನ ನಾಟಕಗಳ ಮಹಿಮೆ ಹಾಗೂ ದಿವ್ಯತೆ ಅವನ ನಂತರ ನೂರು ವರ್ಷಗಳವರೆಗೂ ಮನ್ನಣೆ ಪಡೆದಿದ್ದಿಲ್ಲ, ಮೇಧಾವಿಗಳೂ ಮನಗಂಡದ್ದು ಕಡಿಮೆಯೇ. ಆದ್ದರಿಂದ ಆ ನಾಟಕಗಳನ್ನು ಬರೆಯುವಾಗ, ಬರೆದಾಗ ಲೇಖಕನಿಗೆ ಸುಳ್ಳು ಹೆಸರೇ ಕ್ಷೇಮವೆನಿಸುವ ವಾತಾವರಣವೇ ಇತ್ತು. ಇನ್ನು ಬೇಕನ್, ಬೆನ್ ಜಾನ್ಸನ್ ಪ್ರಭೃತಿಗಳು ಆ ನಾಟಕಗಳನ್ನು ಬರೆದಿರಲಾರರು ಎಂಬುದಕ್ಕೆ ನಾಟಕಗಳಲ್ಲಿ ವ್ಯಕ್ತವಾದ ಪ್ರತಿಭೆಯ ಮಾದರಿಯೇ ಸಾಕ್ಷಿ. ಬರೆಹಗಾರ ಹೆಸರನ್ನು ಮರೆಯಿಸಬಹುದು; ಆದರೆ ತನ್ನ ಶೈಲಿಯನ್ನು, ಅದರಲ್ಲಿ ಮೂಡುವ ಶೀಲವನ್ನು ಮರೆಯಿಸಲಾರ, ಬೇರ್ಪಡಿಸಲಾರ. ಬೇಕನನ ಪ್ರತಿಭೆ ನಾಟಕೀಯವೇ ಅಲ್ಲ; ಬೆನ್ ಜಾನ್ಸನನಿಗೆ ಷೇಕ್ಸ್ಪಿಯರನ ಅರ್ಥಗೌರವವಾಗಲಿ ಪದಲಾಲಿತ್ಯಗಳ ಆಳ-ಅಗಲಗಳಾಗಲಿ ಇಲ್ಲ. ಆದ್ದರಿಂದಲೇ ಪ್ರೊ|| ಹಾಫ್‌ಮನನ ಸಂಶೋಧನಕ್ಕೆ ಅವಕಾಶ ದೊರೆಯಿತು, ಪ್ರಕಾಶವೂ ದೊರಕಿತು.

## ಮಾರ್ಲೊ

1936ರಲ್ಲಿ ನಾಟಕಕಾರನಾಗಬೇಕೆಂದು ಹುಮ್ಮಸಪಟ್ಟು ನ್ಯೂಯಾರ್ಕಿಗೆ ಬಂದ ಪ್ರೊ|| ಹಾಫ್‌ಮನ್ ಮಾರ್ಲೊನ ನಾಟಕಗಳನ್ನು ಎತ್ತಿಕೊಂಡು ಓದಿದನು. ಆಗ ಷೇಕ್ಸ್ಪಿಯರನ ಕೃತಿಗಳಿಗೂ ಮಾರ್ಲೊನ ಕೃತಿಗಳಿಗೂ ಆಶ್ಚರ್ಯಕರ ಹೋಲಿಕೆ ಇದ್ದದ್ದು ಕಂಡುಬಂದಿತು. ಇಬ್ಬರೂ ನಾಟಕಕಾರರ ತುಲನೆಯನ್ನು ಹಾಫ್‌ಮನ್ ಅಭ್ಯಾಸಪೂರ್ವಕವಾಗಿ ಮುಂದುವರಿಸಿದನು. ಒಬ್ಬರನ್ನೊಬ್ಬರು ಕದ್ದಂತಿದ್ದಿಲ್ಲ. ಷೇಕ್ಸ್ಪಿಯರನು ಯಾವ ಬೇರೆ ಕವಿಯ ಅವತರಣಿಕೆಗಳನ್ನೂ ಬಳಸಿಕೊಂಡದ್ದಿಲ್ಲ. ಎರಡು ಮಹಾ ಮನಸ್ಸುಗಳು ಹೀಗೆ ಒಂದೇ ರೀತಿ ಒಂದೇ ರೂಪವಾಗಿ ವ್ಯವಹರಿಸುವವು—ಅದೂ ಅಷ್ಟೆಲ್ಲ ಕೃತಿಗಳಲ್ಲಿ—ಶಕ್ಯವಿದ್ದಿಲ್ಲ. ಅಂದರೇನು? ಆವೆರಡೂ ಎರಡು ಮನಸ್ಸುಗಳಾಗಿದ್ದಿಲ್ಲ; ಒಂದೇ ಮನಸ್ಸಿನ ಎರಡು ವಿನ್ಯಾಸಗಳಾಗಿರಬೇಕು.

ಆ ಅನುಮಾನ ಮಿಂಚಿದ್ದೇ ತಡ, ಹಾಫ್‌ಮನನು ಈ ಸಂಶೋಧನೆಗೆ ಪೂರ್ತಿ ಧುಮ್ಮಿಕ್ಕಿದನು. ನೂರಾರು ಮೂಲಪ್ರತಿಗಳ ಅಭ್ಯಾಸ, ಎಲಿಜಬೆತ್ (1533-1603) ಯುಗದ ಆಸ್ಥಾನ, ರಂಗಮಂದಿರ, ಅಪರಾಧ, ಕಾನೂನು, ಸಾಹಿತ್ಯ, ಪ್ರಣಯ, ವ್ಯವಹಾರ—ಇವೆಲ್ಲವುಗಳ ವ್ಯಾಸಂಗವೇ ಅವನ ಬಾಳಿನ ವ್ರತವಾಯಿತು. ಈ ಸಂಶೋಧನೆಯು ಬೆಳೆದಂತೆ, ಆಳವಾದಂತೆ ಮಾರ್ಲೊನೇ ಷೇಕ್ಸ್ಪಿಯರನೆಂಬ ಅವನ ಧಾರಣೆಯು ದೃಢವಾಯಿತು.

ಆ ಸಿದ್ಧಾಂತದಿಂದ ಷೇಕ್ಸ್ಪಿಯರನ ಬಹುಶ್ರುತ ವಿದ್ವತ್ತೆಯ ಒಗಟು ಒಡೆಯುತ್ತದೆ. ಮಾರ್ಲೊ ಉಜ್ಜ್ವಲ ಶಿಕ್ಷಣ ಪಡೆದವನಿದ್ದನು. ಕೇಂಬ್ರಿಜ್‌ನಲ್ಲಿಯೂ

ಹೊರಗೂ ಅವನಿಗೆ ಉಚ್ಚಕುಲದ ವೃತ್ತಿಯು ಮಿತ್ರಮಂಡಳಿಯಿತ್ತು. ಆತನ ಲೋಕಾನುಭವ ವಿಶಾಲವಿತ್ತು. ಸೆರೆಗುಡುಕ, ಜೂಜುಗಾರ, ತಿರುಕ ಹಾಗೂ ಅರಸರ ಒಡನಾಡಿಯಾಗಿದ್ದನು ಮಾರ್ಲೊ! ಷೇಕ್ಸ್‌ಪಿಯರನ ನಾಟ್ಯಸೃಷ್ಟಿಗೆ ಆತನೆ ಸುಯೋಗ್ಯ ಶಬ್ದಬ್ರಹ್ಮ! ಇದಕ್ಕೆ ಇನ್ನೂ ಸಮರ್ಪಕ ಆಧಾರವೆಂದರೆ ಮಾರ್ಲೊ ಒಬ್ಬ ಪ್ರತಿಭಾಶಾಲಿಯಾದ ನಾಟಕಕಾರನೂ ಆಗಿದ್ದನು. ತನ್ನ ಇಪ್ಪತ್ತೆರಡನೆಯ ವಯಸ್ಸಿನಲ್ಲಿಯೇ ಆತ ನಾಟಕ ಬರೆದಿದ್ದನು.

ಷೇಕ್ಸ್‌ಪಿಯರ್-ಮಾರ್ಲೊ ಇಬ್ಬರೂ ಸಮಕಾಲೀನರು. ಆಗಿನ ನಾಟಕಕಾರರು ಆಗಾಗ್ಗೆ ಒಬ್ಬರನ್ನೊಬ್ಬರು ಉಲ್ಲೇಖಿಸುವದುಂಟು. ಆದರೆ ಷೇಕ್ಸ್‌ಪಿಯರನನ್ನು ನಾಟಕಕಾರನೆಂದು ಯಾರೂ ಉಲ್ಲೇಖಿಸುವದಿಲ್ಲ! ಆತ ನಟನೆಂಬ ಉಲ್ಲೇಖವಿದೆ. 'ಮಾರ್ಲೊ ಸತ್ತಮೇಲೆ' ತನ್ನ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಷೇಕ್ಸ್‌ಪಿಯರನು ಕವಿಯೆಂದು ಉಲ್ಲೇಖಿಸಲ್ಪಡುತ್ತಾನೆ. 1598ರಲ್ಲಿ ಆತ 'ಲವ್ಸ್ ಲೇಬರ್ಸ್ ಲಾಸ್ಟ್' ನಾಟಕಕ್ಕೆ ತನ್ನ ಹೆಸರು ಹೇಳುತ್ತಾನೆ. ಆ ಮೊದಲಿನ ಅವನ ನಾಟಕಗಳೆಲ್ಲ ಆ ಹೆಸರು ಇಲ್ಲದವೇ! ಷೇಕ್ಸ್‌ಪಿಯರನ 36 ನಾಟಕಗಳ ಮೊದಲನೆಯ ಸಂಪುಟ ಆತ ಸತ್ತ ಏಳು ವರ್ಷಗಳ ನಂತರ ಪ್ರಕಟವಾಯಿತು. ಆತನ ಜೀವಮಾನದಲ್ಲಿ 18 ಪ್ರಕಟವಾದವು. ಅವುಗಳಲ್ಲಿ ಕೆಲವಕ್ಕೆ ಅವನ ಹೆಸರೇ ಇದ್ದಿಲ್ಲ!

ಇದೆಲ್ಲದಕ್ಕೆ ಒಂದು ಸಂದೇಹಸ್ಥಾನವಿದೆ. ಷೇಕ್ಸ್‌ಪಿಯರನ ಮೊದಲನೆಯ ನಾಟಕವು ಪ್ರಕಟವಾಗುವಾಗ ಮಾರ್ಲೊ ಸತ್ತಿದ್ದ. ಆದರೆ ಇದು ಸತ್ಯವೆ? ಹಾಫ್‌ಮನ್ ಶಂಕಿಸುತ್ತಾನೆ. ಆತ ಸತ್ತಿದ್ದಿಲ್ಲವಾದರೆ ಸತ್ತಂತೆ ಸಾರಿ, ತಲೆ ಮರೆಯಿಸಿ, ತನ್ನ ನಾಟಕಸಂತತಿಗೆ ಹೆರವನ ತಂದೆತನ ಏಕೆ ತೊಡಿಸಬೇಕಿತ್ತು? ಅದಕ್ಕೆ ಹಾಫ್‌ಮನನ ಉತ್ತರ ಹೀಗೆ:

1593ರ ಮೇ 12ಕ್ಕೆ ಮಾರ್ಲೊನ ಒಬ್ಬ ನಿಕಟ ಮಿತ್ರ ಹಾಗೂ ನಾಟಕಕಾರ ಥಾಮಸ್ ಕಿಡ್ ನಾಸ್ತಿಕತೆಯ ಆರೋಪದ ಮೇಲೆ ಸೆರೆಹಿಡಿಯಲ್ಪಟ್ಟ. ಆಗಿನ ಕಾಲದಲ್ಲಿ ನಾಸ್ತಿಕತೆಗೆ ಎರಡು ಉಗ್ರ ದಂಡನೆಗಳಿದ್ದವು: ಒಂದು ಮರಣ; ಇನ್ನೊಂದು ಅದಕ್ಕೂ ನಿಷ್ಕರುಣವಾದ ಚಿತ್ರಹಿಂಸೆ. ಕಿಡ್ ಚಿತ್ರಹಿಂಸೆಗೆ ಗುರಿಯಾದನು. ಆತನನ್ನು ಹಂದರದ ಮೇಲೆ ಚಾಚಿ ಸುತ್ತಿ ಬಿಗಿದೆಳೆಯುವಾಗ, ಎಲುವುಗಳೆಲ್ಲ ಚಟಚಟ ಮುರಿಯುವಾಗ ಕಿಡ್ ಒಪ್ಪಿಕೊಂಡ—ತನ್ನ ಹೆಸರಿನ ನಾಸ್ತಿಕವಾದದ ಪ್ರಬಂಧವನ್ನು ಮಾರ್ಲೊ ಬರೆದಿದ್ದನೆಂದು! ಆಗ, ಮೇ 18ಕ್ಕೆ ಮಾರ್ಲೊ ಸೆರೆಹಿಡಿಯಲ್ಪಟ್ಟನು. ಮಾರ್ಲೊ ಎಲಿಜಬೆತ್ ಮಹಾರಾಣಿಯ ಗುಪ್ತಚಾರರ ಪಡೆಗೂ ಸೇರಿದವನಾಗಿದ್ದನು. ಆತನನ್ನು ಸೆರೆಹಿಡಿದದ್ದೆ ಆ ಚಾರರ ಪಡೆಯ ಮುಖ್ಯನ ಮನೆಯಲ್ಲಿ! ಆಗ ಮೇಲ್ಮಟ್ಟದಲ್ಲಿ ವರ್ಚಸ್ಸು ಕೆಲಸ ಮಾಡಿತು. ಮಾರ್ಲೊ ಜಾಮೀನಿನ ಮೇಲೆ ಬಿಡುಗಡೆ ಹೊಂದಿದನು. ಆದರೂ ಮರಣದಂಡನೆಯ ಭೀಮುಗದೆಯು ಅವನ ನೆತ್ತಿಯ ಮೇಲೆ ತೂಗುತ್ತಿತ್ತು. ಅದರಿಂದ ಪಾರಾಗಲು ಒಂದು ಒಳಸಂಚು ಮಾಡಲಾಯಿತು. ಮೇ 30ಕ್ಕೆ ಲಂಡನಿನ ಒಂದು ಪಡಕಾನೆಯಲ್ಲಿ ಒಂದು ಕೆಟ್ಟ ಜಗಳವೆದ್ದು ಕತ್ತಿಗೆ ಕತ್ತಿ ಹತ್ತಿತು. ಇಂಗ್ರ್ಯಾಮ್ ಫ್ರಿಜರ್ ಎಂಬಾತನು ಮಾರ್ಲೊನನ್ನು ಕಣ್ಣಲ್ಲಿ ತಿವಿದು ಕೊಂದನೆಂದಾಯಿತು! ಪಂಚ

ವಿಚಾರಣೆಯೆಲ್ಲ ಮುಗಿದು ಮಾರ್ಲೋನನ್ನು ಮಣ್ಣುಮರೆಮಾಡಿಯೂ ಆಯಿತು! ಆತನ ಸಮಾಧಿಸ್ಥಳ ಎಲ್ಲಿ ಎಂಬುದು ಯಾರಿಗೂ ತಿಳಿದಿಲ್ಲ. ಫ್ರಿಜರನಿಗೆ ಸೆರೆಯಾಯಿತು. ಆದರೆ ದಯಾಳು ಮಹಾರಾಣಿಯ ಅನುಗ್ರಹದಿಂದ ಬಿಡುಗಡೆಯೂ ಆಯಿತು.

ಇತ್ತ ನಿಜವಾಗಿಯೂ ಮಾರ್ಲೋ ಫ್ರಾನ್ಸಿಗೆ ಪಲಾಯನ ಮಾಡಿದ್ದನು. ಆದರೆ ಸಾರ್ವಜನಿಕವಾಗಿ, ಪ್ರಕಟವಾಗಿ ಸತ್ತುಹೋಗಿದ್ದ! ತನ್ನ ಅಜ್ಞಾತವಾಸವನ್ನೆಲ್ಲ ಆತ ಸಂಚಾರದಲ್ಲಿಯೇ ಕಳೆದನು. ಷೇಕ್ಸ್ಪಿಯರನ ಭೌಗೋಳಿಕ ಪರಿಜ್ಞಾನ—ಅದೂ ಫ್ರಾನ್ಸ್ ಮತ್ತು ಇಟಲಿಯದು—ಆಶ್ಚರ್ಯಕರವಾಗಿದೆ. ಮಾರ್ಲೋ ಆಗಾಗ ಗುಪ್ತವಾಗಿ ಇಂಗ್ಲಂಡಿಗೆ ಬರುತ್ತಿರಬೇಕು. ಆ ನಿರ್ವಾಸಿತ ಅವಸ್ಥೆಯಲ್ಲಿ ಮಾನವನ ದೈವದ ಬಗೆಗೆ ಗಹನವಾಗಿ ಚಿಂತಿಸಿ 'ಷೇಕ್ಸ್ಪಿಯರ'ನ ಹಿರಿಯ ರುದ್ರನಾಟಕಗಳನ್ನು ಬರೆದಿರಬೇಕು. ಆ ನಾಟಕಗಳನ್ನು ರಂಗಕ್ಕೆ ತರುವಾಗ—ತರಬೇಕೆಂಬ ಹೆಬ್ಬಯಕೆಯಾದಾಗ—ಒಬ್ಬ ಬಡ ನಟ ಷೇಕ್ಸ್ಪಿಯರನ ಹೆಸರಿನಲ್ಲಿ ಅವನು ಅವನ್ನು ಪ್ರಕಟಿಸಿದನು, ಶೂದ್ರಕನ ಹೆಸರಿನಲ್ಲಿ 'ಮೃಚ್ಛಕಟಿಕ'ವು ಪ್ರಕಟವಾದಂತೆ! ತನ್ನ ನಾಟಕಗಳನ್ನೆ ಕತ್ತಲೆಯಲ್ಲಿ ಕದ್ದು ಕೂತು ನೋಡುತ್ತಿರುವಾಗ ಮಾರ್ಲೋನಿಗೆ ಎಷ್ಟು ಕೌತುಕ, ಏನು ಕಳವಳ ಎನಿಸಿರಬಹುದು!

'ಷೇಕ್ಸ್ಪಿಯರ' (ಮಾರ್ಲೋ) ನಿಗೆ 'ವಿಲಿಯಂ' ಎಂಬ ಹೆಸರಿನ ಬಗೆಗೆ ತೀರ ತಾತ್ಸಾರ! ಅವನ ನಾಟ್ಯಸೃಷ್ಟಿಯಲ್ಲಿ ಒಟ್ಟು ಬರುವ ಸುಮಾರು ಸಾವಿರ ಪಾತ್ರಗಳಲ್ಲಿ 'ವಿಲಿಯಂ' ಎಂಬ ಹೆಸರು ಒಮ್ಮೆ—ಅದೂ ಒಬ್ಬ ಹುಂಬ ಮೂಢನಿಗೆ ಆತ ಇಟ್ಟಿದ್ದಾನೆ! 'ಆ್ಯಸ್ ಯು ಲೈಕ್ ಇಟ್' ನಾಟಕದಲ್ಲಿ ಆ ಹುಂಬನನ್ನು ಮೂದಲಿಸುತ್ತ ಟಚ್-ಸ್ಟನ್ "...you are not ipse for I am he[1]" ಅನ್ನುತ್ತಾನೆ. (ipse ಅಂದರೆ ನಾನು ಎಂಬ ಅರ್ಥ.) ಇನ್ನೊಂದೆಡೆ ತುಂಬ ಅರ್ಥಪೂರ್ಣವಾದ ಮಾತು ಬರುತ್ತದೆ. ಅದೇ ಪಾತ್ರ ಹೇಳುತ್ತದೆ:

> When a man's verses cannot be understood, nor a man's good wit seconded with the forward child, understanding, it *strikes a man more dead* than *a great reckoning in a little room.*[2]

ಇಲ್ಲಿ ಬರುವ ಆ 'great reckoning in a little room' (ಕಿರುಮನೆಯಲ್ಲಿನ ಹಿರಿಯ ನಿರ್ಧಾರ) ಯಾವುದು? ಅದರ ಇಂಗಿತವೇನು? ಮತ್ತು 'strikes a man more dead' (ಮನುಷ್ಯನನ್ನು ಹೆಚ್ಚು ಕೊಲ್ಲುತ್ತದೆ) ಎಂಬುದರ ಮರ್ಮವೇನು? ಲಂಡನಿನ ಆ ಪಡಕಾನೆಯಲ್ಲಿಯ ಆ ದುರಂತದತ್ತ ಇದರ ನಿರ್ದೇಶವೆ?

ಇನ್ನು ಕೊನೆಯ ಪ್ರಮಾಣವೆಂದರೆ ಷೇಕ್ಸ್ಪಿಯರನದೆಂದು ಪ್ರಸಿದ್ಧವಾದ ಸಾನೆಟ್ಟುಗಳು. ಆ ಅಷ್ಟಷಟ್ಪದಿಗಳ ಬಗೆಗೆ 'ಜೀವನ' ಮಾಸಿಕದ 1958ರ ಸೆಪ್ಟೆಂಬರ್ ಸಂಚಿಕೆಯಲ್ಲಿ ಶ್ರೀ ಎ. ಎನ್. ಮೂರ್ತಿರಾಯರು ಒಂದು ಅಪ್ರತಿಮ ಪರಿಚಯ-ಲೇಖನವನ್ನು ಬರೆದಿದ್ದು ರಸಿಕರು ಓದಿರಲು ಸಾಕು. ಅದನ್ನು ಓದಿದಾಗಲೂ ಅವು

[1] V. i. 46. [2] III. iii. 10-3.

ಷೇಕ್ಸ್ಪಿಯರನ ಚರಿತ್ರದೊಂದಿಗೆ ವಿಸಂಗತವೆಂದು ಅನಿಸದೆ ಇರದು. ಮಾರ್ಲೊನ ಅಜ್ಞಾತ ಏಕಾಂತದ ವಿಪ್ರಲಂಭದ ಜೀವನವನ್ನು ಅರಿತಾಗಲೆ ಆ ಅಷ್ಟಪಟ್ಟಿದಿಗಳ ಹುರುಳು ಇನ್ನಷ್ಟು ಸ್ಪಷ್ಟವಾಗುತ್ತದೆ. ಇದಕ್ಕೆ, ಷೇಕ್ಸ್ಪಿಯರನ ಮುಖ್ಯನಾಟಕಗಳಲ್ಲಿ ಮತ್ತೆ ಮತ್ತೆ ಒಡಮೂಡುವ ನಿರ್ವಾಸನ, ಅಜ್ಞಾತವಾಸ, ಏಕಾಂತತೆ, ಗೂಢ ಲಜ್ಜೆ, ಗುಪ್ತ ಅಪರಾಧ, ಶಾಪಭ್ರಷ್ಟ ಜೀವನದಂತಹ ವಸ್ತುಗಳ ವಿನ್ಯಾಸವು ಪುಷ್ಟಿಯನ್ನೇ ಕೊಡುತ್ತದೆ. XXV, XXVI, XXIX ಮತ್ತು XXXIXನೆಯ ಸಾನೆಟ್ಟುಗಳು ವಿಶೇಷ ಮಹತ್ವದವಿವೆ. ಉದಾಹರಣೆಗೆ, XXIXನೆಯದರ ಆರಂಭದ ನುಡಿಯನ್ನೆ ನೋಡಿರಿ :

When in disgrace with Fortune and men's eyes,
I all alone beweep my outcast state,
And trouble deaf heaven with my bootless cries,
And look upon myself, and curse my fate, . . .

ಅವನದೆಂಬ ಇನ್ನೊಂದು ಸಾನೆಟ್ಟನಲ್ಲಿ (LXXVI) ಬರುವ ಈ ಪಂಕ್ತಿಗಳ ಒಳಮರ್ಮ ಆತ್ಮಪರಿಚಯದ ಇಂಗಿತವಿರಬಹುದೆ ?

Why write I still all one, ever the same,
And keep invention in a noted weed,
That every word doth almost tell my name,
Showing their birth, and where they did proceed ?

ಮೇಲೆ ಉದಾಹರಿಸಿದಂಥ, ಉಲ್ಲೇಖಿಸಿದಂಥ ಸಾನೆಟ್ಟುಗಳ 'ಆರ್ಗ್ಯುಮೆಂಟು' ಮಾರ್ಲೊ ಬರೆದಿಲ್ಲವಾದರೆ ಆ ಕವನಗಳ ಭಾವಾವೇಶ, ರಸೋನ್ಮೇಷಗಳು ವಿಲಿಯಂ ಷೇಕ್ಸ್ಪಿಯರನ ಬದುಕಿನ ಹಿನ್ನೆಲೆಗೆ ನಿರರ್ಥಕವೆನಿಸುವವು.

ಮೇಲಿನ ವಿವೇಚನೆಯಲ್ಲಿ ಈ ಲೇಖಕನ ನಿಲುವು ಪರ್ಯಾಯವಾಗಿ ಸ್ಪಷ್ಟವಾಗಿರಬೇಕು. ವಿಲಿಯಂ ಷೇಕ್ಸ್ಪಿಯರನ ಅಮರ ಕೃತಿಗಳನ್ನು ಆತನೆ ಬರೆದುದಿಲ್ಲವೆಂದು ಸಿದ್ಧವಾದರೆ, ಅವುಗಳ ಕರ್ತೃತ್ವಕ್ಕೆ ಪಾತ್ರರೆಂದು ಮುಂದೆ ತಂದು ನಿಲ್ಲಿಸಿದ ವ್ಯಕ್ತಿಗಳಲ್ಲಿ ಕ್ರಿಸ್ಟಫರ್ ಮಾರ್ಲೊನೆ ಉಳಿದವರಿಗಿಂತ ಹೆಚ್ಚು ಅರ್ಹನೆಂದು ಒಪ್ಪಬೇಕಾಗುತ್ತದೆ. ಆದ್ದರಿಂದಲೆ ಅವನ ಕುರಿತ ಪ್ರತಿಪಾದನೆಗೆ ಆರಂಭದಲ್ಲಿಯೇ ಇಷ್ಟೊಂದು ಪ್ರಾಶಸ್ತ್ಯ.

ಹಾಗೆಂದಮಾತ್ರಕ್ಕೆ ಮಿಕ್ಕವರ ವಿಚಾರವನ್ನು ಹತ್ತಿಕ್ಕುವದು ಅನ್ಯಾಯವಾದೀತು. ಆದ್ದರಿಂದ ಅವರಲ್ಲಿ ಪ್ರಮುಖರ, ಪ್ರಸಿದ್ಧರ ಬಗೆಗೆ ಸಂಕ್ಷೇಪದಲ್ಲಿ ವಿವರಿಸುವದು ಲೇಖಕನ ಕರ್ತವ್ಯವೆ ಸರಿ. 'ಅವರಲ್ಲಿ ಪ್ರಮುಖರು' ಎಂಬುದಕ್ಕೆ ಕಾರಣವಿಷ್ಟೆ. ಇದುವರೆಗೆ ಷೇಕ್ಸ್ಪಿಯರ್ ಸಾಹಿತ್ಯದ ಕರ್ತೃತ್ವದ ಶ್ರೇಯಸ್ಸಿಗೆ ಸ್ಪರ್ಧಿಸುವುದಕ್ಕೆ 57 'ಸತ್ಯ ಷೇಕ್ಸ್ಪಿಯರ'ರನ್ನು ಮುಂದೆ ತರಲಾಗಿದೆ! ಈ ಹವ್ಯಾಸಕ್ಕೆ ಈ ಲೇಖಕನಂಥ ಅನಧಿಕೃತ ವಿಚಾರವಿಲಾಸಿಗಳು ಮಾತ್ರವಲ್ಲ, ಅಧಿಕಾರಿಗಳಾದ ಪ್ರಾಧ್ಯಾಪಕರೂ ಪ್ರಕಾಂಡ ಪಂಡಿತರೂ ಬಿದ್ದಿದ್ದಾಗಿದೆ. ವಾಷಿಂಗ್ಟನ್ನಿನ ಫೋಲ್ಜರ್ ಗ್ರಂಥಾಲಯದಲ್ಲಿ ಈ ಸಂಶೋಧನಕ್ಕೆ ಮೀಸಲಾದ ಇದುವರೆಗಿನ ಪುಸ್ತಕಗಳು 25,000ದಷ್ಟು ಸಂಗ್ರಹವಾಗಿವೆ.

ಷೇಕ್ಸ್ಪಿಯರನ ಕೃತಿ-ಕರ್ತೃತ್ವವನ್ನು ಕುರಿತು ಪ್ರಕಟವಾದ ಸಂದೇಹವನ್ನು

ಮೂದಲಿಸುವ ವಿನೋದ-ಸಂವಾದ 1759ರಲ್ಲಿಯೇ ಲಂಡನಿನ ರಂಗಭೂಮಿಯ ಮೇಲೆ ಕೇಳಿಬಂದಿತ್ತು! ಒಂದು ನಾಟಕದ ಪ್ರವೇಶದಲ್ಲಿ ಒಬ್ಬ ಹೆಣ್ಣು ಕೇಳುತ್ತಾಳೆ, "ಷೇಕ್‌ಸ್ಪಿಯರನನ್ನು ಯಾರು ಬರೆದರು?" ಅದಕ್ಕೆ ಒಬ್ಬ ಸದ್ಗೃಹಸ್ಥ ಉತ್ತರಿಸುತ್ತಾನೆ, "ಬೆನ್ ಜಾನ್‌ಸನ್." ಅದಕ್ಕೆ ಆ ಹೆಣ್ಣು ಪ್ರತ್ಯುತ್ತರ ಕೊಡುತ್ತಾಳೆ, "ಛೀ! ಅಲ್ಲವೇ ಅಲ್ಲ. ಷೇಕ್‌ಸ್ಪಿಯರನ ಕೃತಿಗಳನ್ನೆಲ್ಲ ಬರೆದದ್ದು ಒಬ್ಬ ಮಿಸ್ಟರ್ ಫೈನಿಸ್ (Mr. Finis). ಏಕೆಂದರೆ ಅವನ ಆ ಹೆಸರನ್ನು ಆಯಾ ಕೃತಿಯ ಕೊನೆಗೆ ನಾನು ನೋಡಿದ್ದೇನೆ!" ('Finis' ಎಂದರೆ ಪರಿಸಮಾಪ್ತಿ ಎಂದು ಅರ್ಥ. ಪುಸ್ತಕದ ಕೊನೆಯಲ್ಲಿ ಅದು ಮುಗಿಯಿತೆಂದು ಸೂಚಿಸಲು ಈ ಪದವನ್ನು ಅಚ್ಚುಮಾಡುವುದು ರೂಢಿ.)

ಆದರೆ ಈ ಮೂದಲಿಕೆ ಮರೆಯಾದ ಒಂದು ಶತಮಾನದೊಳಗೆ ಈ ಸಾಹಿತ್ಯ ಸಮ್ರಾಟನ ಪಟ್ಟಕ್ಕೆ ಇತರ ಅಧಿಕಾರಿಗಳ ಪರವಾಗಿ ವ್ಯಾಜ್ಯದ ಗದ್ದಲ ಕೇಳಿಬರ ತೊಡಗಿತು! ಈ ಬಾಧ್ಯಸ್ಥಿಕೆಯ ವಾದಿಗಳಲ್ಲಿ ಮುಖ್ಯರಾದವರನ್ನು ಇಲ್ಲಿ ಕೊಡಲಾಗಿದೆ.

## ಫ್ರಾನ್ಸಿಸ್ ಬೇಕನ್

ಸತ್ಕುಲದಲ್ಲಿ ಹುಟ್ಟಿದ ಪ್ರತಿಭಾಶಾಲಿ ಸಾಹಿತಿ ಈತ. ಮೊದಲನೆಯ ಜೇಮ್ಸನ ಕಾಲದಲ್ಲಿ ಹಣಕಾಸಿನ ಮಂತ್ರಿಯಾಗಿ ಪ್ರಸಿದ್ಧಿಗೊಂಡವನು. ಆಂಗ್ಲ ಕವಿ ಪೋಪ್ ಆತನನ್ನು 'The wisest and brightest and meanest of mankind' ಎಂದು ಬಣ್ಣಿಸಿದ್ದುದುಂಟು. ಲಂಚ, ಭ್ರಷ್ಟಾಚಾರಗಳಿಗಾಗಿ ವಿಚಾರಣೆ ಮತ್ತು ದಂಡಕ್ಕೆ ಒಳಗಾದ್ದರಿಂದಲೆ ಆ ತತ್ವಜ್ಞಾನಿಯಾದ ಲೇಖಕನು ಹೀಗೆ ಕರೆಯಿಸಿಕೊಂಡದ್ದು! ಇವನಿಗೆ ಲಾರ್ಡ್ ವೆರೂಲಂ, ವೈಕೌಂಟ್ ಸೇಂಟ್ ಅಲ್ಬಾನ್ಸ್ ಎಂಬ ಸರದಾರಿಕೆಯ ಬಿರುದುಗಳೂ ಇದ್ದವು.

ಸರ್ ಫ್ರಾನ್ಸಿಸ್ ಬೇಕನನು ಕೇಂಬ್ರಿಜ್‌ನಲ್ಲಿ ಕಲಿತು, ಉನ್ನತ ರಾಜಾಸ್ಥಾನ ಗಳಲ್ಲಿ ಉಳಿದು, ಕೆಲಕಾಲ ಫ್ರಾನ್ಸಿನಲ್ಲಿಯೂ ಇದ್ದು ಬಂದ ಕಾನೂನ ಪಂಡಿತನು. ಇವನ ಕಾಲಮಾನ (1561-1626) ಷೇಕ್‌ಸ್ಪಿಯರನ ಕೃತಿ-ಕಾಲಾವಧಿಯೊಂದಿಗೆ ಹೊಂದಿಕೆ ಆಗುತ್ತದೆ. ರಾಜಕೀಯ ವಿಷಯಗಳ ಬಗೆಗೆ ಆತ ನಾಟಕಗಳನ್ನು ಪ್ರಕಟಿಸುವುದು ಶಕ್ಯವಿದ್ದಿಲ್ಲ. ಆದರೆ ಆತ ವಿಜ್ಞಾನ, ದರ್ಶನ ಮತ್ತು ನ್ಯಾಯಗಳ ಬಗೆಗೆ ಬಹಳ ಗ್ರಂಥಗಳನ್ನು ಬರೆದನು. ಆತನ ಪ್ರತಿಭೆಯೇ ಬಹುಪ್ರಸವ. ಆತ ಗೂಢ ಲೇಖನತಂತ್ರ (cryptography) ದ ಮೇಲೆಯೂ ಗ್ರಂಥ ಬರೆದಿದ್ದುದುಂಟು ಮತ್ತು ಷೇಕ್‌ಸ್ಪಿಯರನ ನಾಟಕಗಳಲ್ಲಿ ಅಲ್ಲಲ್ಲಿ ಬೇಕನನ ಕರ್ತೃತ್ವವನ್ನು ಸೂಚಿಸುವ ಗೂಢ ಲೇಖನ (cryptograms) 'ವ್ಯಾಸಗುಟ್ಟ'ನಂತೆ ಅವಿತಿರುವುದುಂಟು ಎಂದು ಬೇಕನ್-ಪಕ್ಷದವರ ಆಗ್ರಹದ ಅಭಿಪ್ರಾಯ. ಈ ಪಕ್ಷಪಾತಗಳ ಕಲ್ಪನೆ ಎಷ್ಟು ತರಲವಾಗಿದೆ ಯೆಂದರೆ ಷೇಕ್‌ಸ್ಪಿಯರನ ಪ್ರಥಮ ಸಂಪುಟದ ಮೇಲಿನ ಭಾವಚಿತ್ರದಲ್ಲಿನ ಆತನಿಗೆ ತೊಡಿಸಿದ ಕವಚದ ಅಡ್ಡತಿಡ್ಡ ಅಂಚಿನ ಗೆರೆಯಲ್ಲಿ ಫ್ರಾನ್ಸಿಸ್ ಬೇಕನನ ಹೆಸರಿನ ಮೊದಲ ಅಕ್ಷರಗಳಾದ F ಮತ್ತು B ಗಳನ್ನು ಹುದುಗಿಡಲಾಗಿದೆ ಎನ್ನುತ್ತಾರೆ! 1885ರಿಂದಲೇ 'ಫ್ರಾನ್ಸಿಸ್ ಬೇಕನ್ ಸೊಸೈಟಿ' ಎಂಬ ಸಂಸ್ಥೆಯೊಂದು ಈ ಸಂಶೋಧನ

ಕ್ಕಾಗಿಯೇ ಸ್ಥಾಪಿತವಾಗಿದೆ. ಕಡಿಮೆ ಅಲ್ಲ, 16 ರಾಷ್ಟ್ರಗಳ ಅನೇಕ ಪಂಡಿತರು ಬೇಕನನ ಪಕ್ಷವನ್ನೆತ್ತಿ ಪುಸ್ತಕಗಳನ್ನು ಬರೆದಿರುತ್ತಾರೆ.

## ಎಡ್ವರ್ಡ್ ಡಿ ವೀರ್

ಈತನು ಆಕ್ಸ್‌ಫರ್ಡಿನ ಹದಿನೇಳನೆಯ ಅರ್ಲ್ (ಸರದಾರ). ಕವಿ, ನಾಟಕಕಾರ, ಲೇಖಕ, ನಟರಿಗೆ ಆಶ್ರಯದಾತನಾದ ಇವನ ಮನೆತನದ ಆಯುಧ-ಲಾಂಛನಗಳಲ್ಲಿ ಒಂದು ಸಿಂಹವು ಬರ್ಚಿ (ಭಲ್ಲೆ) ಯನ್ನು ಎತ್ತಿ ಅಲ್ಲಾಡಿಸುವದು (shaking a spear). ಅಲ್ಲದೆ, ಆ ಸರದಾರನು ಸ್ವತಃ ಭಲ್ಲೆ ಒಗೆಯುವದರಲ್ಲಿ ನಿಷ್ಣಾತನಿದ್ದನು. ಆದ್ದರಿಂದ Spear-shaker ಎಂಬ ಅಡ್ಡಹೆಸರನ್ನು ಪಡೆದಿದ್ದನು. ಇದರಿಂದ Shake-speare ಎಂಬ ಹೆಸರಿಗೆ ಎಷ್ಟು ದೂರ? ಈ ಎಡ್ವರ್ಡ್ ಡಿ ವೀರ್ ಸುಶಿಕ್ಷಿತ. ವಿಶ್ವ ವಿದ್ಯಾಲಯದ ಪದವೀಧರ. ಕಾನೂನಿನ ಪಂಡಿತ. ಯೂರೋಪಿನಲ್ಲಿ ಬಹಳ ಸಂಚಾರ ಮಾಡಿಬಂದವ. ಫ್ರೆಂಚ್, ಲ್ಯಾಟಿನ್, ಗ್ರೀಕ್ ಭಾಷೆಗಳನ್ನು ಬಲ್ಲವ. ಲ್ಯಾಟಿನ್ ಕವಿ ಆವಿಡನ ಕೃತಿಗಳನ್ನು ಇಂಗ್ಲಿಷಿನಲ್ಲಿ ಅನುವಾದ ಮಾಡಿದ ಬಹುಶ್ರುತ ಮೇಧಾವಿ. ಇವನದೇ ಒಂದು ನಾಟ್ಯವಿಲಾಸಿಗಳ ಗುಂಪು ಇತ್ತು. ಈ ಆಕ್ಸ್‌ಫರ್ಡಿನ ಅರ್ಲ್ ಒಮ್ಮೆ ಎಲಿಜಬೆತ್ ರಾಣಿಯ ವಲ್ಲಭರಲ್ಲಿ ಒಬ್ಬನಾಗಿದ್ದನು! ಇವನ ಒಡನಾಡಿ ತರುಣ ಹೆನ್ರಿ ರಿಯೋಥಿಸ್ಲಿ ಸೌತ್ಯಾಂಪ್ಟನನ ಅರ್ಲ್. ಇವರಿಬ್ಬರಿಂದಲೂ ಷೇಕ್ಸ್ಪಿಯರನು ಕೃಪಾಪೋಷಿತನೆಂದು ಒಂದು ಪ್ರತೀತಿ. ಇನ್ನೊಂದು ಆಖ್ಯಾಯಿಕೆಯಂತೆ ಈ ತರುಣ ಹೆನ್ರಿ, ಎಲಿಜಬೆತ್ ರಾಣಿಯಲ್ಲಿ (ಆಕೆ ಆಮರಣ ಅವಿವಾಹಿತೆ) ಆಕ್ಸ್‌ಫರ್ಡಿನ ಅರ್ಲ ನಿಂದಲೆ ಹುಟ್ಟಿದ ಅನೌರಸ ಪುತ್ರ! ಆ ತರುಣನೆ ಷೇಕ್ಸ್ಪಿಯರನ ಸಾನೆಟ್ಟುಗಳಲ್ಲಿ ಕಾಣಿಸಿಕೊಳ್ಳುವ 'ಚೆಲುವ ಜವ್ವನಿಗ' (The Fair Youth). ಆ ಕವನಗಳಲ್ಲಿ ಬರುವ 'ತನ್ವೀ ಶ್ಯಾಮಾ' (The Dark Lady) ಎಲಿಜಬೆತಳ ಪರಿವಾರದ ಒಬ್ಬ ಹುಡುಗೆ. ಅವಳೊಂದಿಗೂ ಅರ್ಲ್ ಆಫ್ ಆಕ್ಸ್‌ಫರ್ಡನ ಪ್ರಣಯಸಂಬಂಧವಿತ್ತು.

ಹೀಗೆ ರಾಣಿಯ ಆಸ್ಥಾನದೊಂದಿಗೆ ನಿಕಟ ಸಂಪರ್ಕವಿದ್ದುದರಿಂದ ಆತ ತನ್ನ ನಾಟ್ಯ ಕೃತಿಗಳನ್ನು ಷೇಕ್ಸ್ಪಿಯರನ ಹೆಸರಿನಲ್ಲಿ ಪ್ರಕಟಿಸಿದನೆಂದು ಇವನ ಪಕ್ಷವೆತ್ತುವವರು ನಂಬುತ್ತಾರೆ. ಈತನು 1550ರಲ್ಲಿ ಹುಟ್ಟಿದವನು. ಷೇಕ್ಸ್ಪಿಯರನ ಆರಂಭದ ಕೃತಿಗಳನ್ನು ರಚಿಸುವಷ್ಟು ಪ್ರಾಯದವನಾಗಿದ್ದನು. ಆದರೆ ಈತ ಸತ್ತದ್ದು 1604 ರಲ್ಲಿ. ಇದು ಈ ಪಕ್ಷದ ತುತ್ತಿನಲ್ಲಿನ ದೊಡ್ಡ ಸೊಣ. ಏಕೆಂದರೆ ಷೇಕ್ಸ್ಪಿಯರ್ ನಾಟಕಗಳು 1611–2ರವರೆಗೂ ಪ್ರಕಟವಾಗುತ್ತಿದ್ದವು. ಸತ್ತಮೇಲೆಯೂ ಈ ಭೂಪ ಹೇಗೆ ಬರೆಯಬಲ್ಲ?

ಆದರೆ ಈ ಸೊಣವನ್ನು ಇವನ ಪಕ್ಷಪಾತಿಗಳು ನುಂಗಬಲ್ಲರು. ಅವರ ಅಂಬೋಣ ದಂತೆ ಕೆಲವು ನಾಟಕಗಳನ್ನು ಇವನೇ ಬರೆದಿದ್ದೂ ಇವನ ನಿಧನದ ನಂತರವೇ ಪ್ರಕಟಿಸ ಬೇಕಾಗಿ ಬಂತಂತೆ! ಇವನ ಬಗೆಗೆ ಇನ್ನೊಂದು ಪ್ರಮಾಣ ಇನ್ನೂ ಸ್ವಾರಸ್ಯವಾಗಿದೆ. ಷೇಕ್ಸ್ಪಿಯರನವೆಂದು ಪ್ರಸಿದ್ಧವಾದ ಮೂರು ತೈಲವರ್ಣ ಚಿತ್ರಗಳನ್ನು 'ಇನ್‌ಫ್ರಾ ರೆಡ್' ಕಿರಣಗಳನ್ನು ಹಾಯಿಸಿ ಪರೀಕ್ಷಿಸಿದಾಗ ಅವು ಈ ಅರ್ಲ್ ಆಫ್ ಆಕ್ಸ್‌ಫರ್ಡನ



**'ಅಥೆಲ್ಲೊ'ದಲ್ಲಿ ಅಥೆಲ್ಲೊ ಮತ್ತು ಡೆಸ್ಡೆಮೋನ**
"ನಾಳೆ ಕೊಲ್ಲುವಿರಂತೆ; ಈ ರಾತ್ರಿ ಬದುಕಗೊಡಿ!"—ಡೆಸ್ಡೆಮೋನ.

ಹಳೆಯ ಚಿತ್ರಗಳ ಮೇಲೆಯೇ ಹೆಚ್ಚು ಬಣ್ಣ ಬಳಿದು ತಯಾರಿಸಿದವೆಂದು ಸಿದ್ಧವಾಯಿತು! (i) ಅರ್ಲನ ಹಣೆಯನ್ನು ಷೇಕ್ಸ್ಪಿಯರನದಾಗಿ ಕಾಣಿಸಲು ಇನ್ನೂ ಅಗಲವಾಗಿ ಮಾಡಲಾಗಿದೆ, (ii) ಅರ್ಲನ ಸರದಾರೀ ಠೀವಿಗೆ ಒಪ್ಪುವ ಕೊರಳ ಪಟ್ಟಿ (ruff) ಯನ್ನು ಗಿಡ್ಡವಾಗಿ ಕತ್ತರಿಸಲಾಗಿದೆ, (iii) ಚಿತ್ರದ ಮೂಲೆಯ ಆಕ್ಸ್‌ಫರ್ಡ್ ಅಂಕಿತದ ಲೇಖವನ್ನು ಅಳಿಸಲಾಗಿದೆ, ಮತ್ತು (iv) ಚಿತ್ರದಲ್ಲಿ ಅರ್ಲನ ಬೆರಳಿನ ಉಂಗುರದ ಸರದಾರಿಕೆಯ ಮುದ್ರೆಯನ್ನು ಬಣ್ಣ ಬಳಿದು ಮರೆಯಿಸಲಾಗಿದೆ.

ಆಕ್ಸ್‌ಫರ್ಡಿನ ಅರ್ಲ್ ಎಡ್ವರ್ಡ್ ಡಿ ವೀರನೇ ಷೇಕ್ಸ್ಪಿಯರನೆಂದು ಮೊದಲಿಗೆ ಪ್ರತಿಪಾದಿಸಿದ್ದು 1920ರಲ್ಲಿ. ಆ ಪ್ರತಿಪಾದಕ ಜೆ. ಟಿ. ಲೂನಿ. [ಪಾಪ, 'ಲೂನಿ' (loony) ಎಂದರೆ ಇಂಗ್ಲಿಷಿನಲ್ಲಿ ಹುಚ್ಚನೆಂಬ ಅರ್ಥವೂ ಹೊರಡುತ್ತದೆ!] 1952 ಮತ್ತು 1962ರಲ್ಲಿ ಡೊರಥಿ ಆಗ್ಬರ್ನ್ ಎಂಬ ಅಮೆರಿಕನ್ ವಿದುಷಿಯು ಆ ಪಕ್ಷವನ್ನೆತ್ತಿ ಸೋಪಪತ್ತಿಕವಾದ ಗ್ರಂಥಗಳನ್ನು ಬರೆದಳು. ಅದಕ್ಕೆ ಅವಳ ಗಂಡ ಮತ್ತು ಮಗ ಇಬ್ಬರೂ ನೆರವಾಗಿದ್ದಾರೆ.

ಮೂರ್ಲೊ ಪಕ್ಷದವರಂತೆಯೇ ಇವರ ಪ್ರತಿಪಾದನೆ. ಷೇಕ್ಸ್ಪಿಯರನೆಂಬ ಕಿರುಕುಳ ನಟನೊಬ್ಬನ ನಾಮಧೇಯದ ಬೆನ್ನಿಗೆ ಈ ಬಹುಶ್ರುತ, ಬಹುಪರ್ಯಟಿತ, ಬಹುಭಾಷಾಭಿಜ್ಞ, ಬಹುಮಾನಸಸ್ಥ ವ್ಯಕ್ತಿಗಳು ನಾಟಕಗಳನ್ನು ರಚಿಸಿದರು. ಈ ಒಳ ಸಂಚಿನಲ್ಲಿ ಬೆನ್ ಜಾನ್‌ಸನ್ ಕವಿಯೂ ಸೇರಿದ್ದನು! ನಟ-ನಾಟ್ಯರಂಗಗಳ ಪ್ರಕಟ ಸಂಪರ್ಕ, ಸಂಬಂಧ ಮನ್ನೆಯರ ಮಂಡಳಿಗೆ ಅಂದು ನಿಷಿದ್ಧವಾಗಿದ್ದುದೇ ಇದಕ್ಕೆ ಕಾರಣ.

## ಆ್ಯನ್ ವ್ಯಾಟ್ಲಿ

ಇವಳೊಬ್ಬ ರಹಸ್ಯಮಯಿ. ಇವಳು ಷೇಕ್ಸ್ಪಿಯರನೊಂದಿಗೆ ಸಹಕರಿಸಿದ ಒಬ್ಬ ಆಂಗ್ಲ ಸನ್ಯಾಸಿನಿ (nun), ಷೇಕ್ಸ್ಪಿಯರನಿಂದ ತಿರಸ್ಕೃತಳಾದ ಪ್ರಣಯಿನಿ; ಆ ಕವಿಯ ಪ್ರಿಯತಮೆಯೆನಿಸಿಕೊಂಡ ಆ್ಯನ್ ಹ್ಯಾಥ್‌ವೆ ಎಂಬಾಕೆಯ ಹೆಸರೆ ಅಂದಿನ ಕೈಬರಹಗಾರರ ಪ್ರಮಾದದಿಂದ 'ವ್ಯಾಟ್ಲಿ' ಎಂಬ ರೂಪ ತಾಳಿತು—ಹೀಗೆಲ್ಲ ವಾದಗಳಿವೆ.

ವುಸ್ಟರನ ಚರ್ಚಿನ ಕಚೇರಿಯಲ್ಲಿ ಷೇಕ್ಸ್ಪಿಯರನೊಂದಿಗೆ ಈಕೆಯ ವಿವಾಹಕ್ಕೆ ಪರವಾನಗಿ ಸಿಕ್ಕ ನೋಂದಣೆ ಇದೆ. ಮರುದಿನವೇ ಆ್ಯನ್ ಹ್ಯಾಥ್‌ವೆಯೊಂದಿಗೆ ಷೇಕ್ಸ್ಪಿಯರನ ಮದುವೆಗೆ ಆತಂಕ ಬರದಂತೆ ಮಾಡುವ ಏರ್ಪಾಡನ್ನೂ ಅದೇ ಕಚೇರಿಯಲ್ಲಿ ನಮೂದಿಸಲಾಗಿದೆ! ಆದರೆ 1939 ಮತ್ತು 1950ರಲ್ಲಿ ಪ್ರಕಟವಾದ ಎರಡು ಪುಸ್ತಕಗಳು ಇವರಿಬ್ಬರು ಮಹಿಳೆಯರನ್ನೂ ಬೇರಾಗಿ ಷೇಕ್ಸ್ಪಿಯರನ ವಲ್ಲಭೆಯರಾಗಿ ಗುರುತಿಸಿ, ವ್ಯಾಟ್ಲಿ ಸನ್ಯಾಸಿನಿ (nun) ಆಗಿದ್ದಳೆಂದು ಉಲ್ಲೇಖಿಸುತ್ತವೆ.

ಆದರೆ ಈ ಸ್ತ್ರೀಕರ್ತೃತ್ವವು ಹೆಚ್ಚು ಸಮರ್ಥ ಅಥವಾ ಸಮರ್ಥನೀಯವಾಗಿ ಕಾಣುವದಿಲ್ಲ. ಅಲ್ಲದೆ ಇದನ್ನು ಒಪ್ಪಿಕೊಂಡರೆ ಈಕೆಯೊಡನೆ ನಿಜವಾದ ಷೇಕ್ಸ್ಪಿಯರನೊಬ್ಬನು ಸಹಕಾರಿಯಾಗಿದ್ದನೆಂದು ಒಪ್ಪಬೇಕಾಗುತ್ತದೆ.

ಇವಲ್ಲದೆ ಡಾರ್ಬಿಯ ಅರ್ಲನಾದ ವಿಲಿಯಂ ಸ್ಟ್ಯಾನ್ಲಿ (1561–1642), ರಟ್ಲೆಂಡಿನ ಅರ್ಲನಾದ ರೋಜರ್ ಮ್ಯಾನರ್ಸ್ (1576–1612), ಎಸೆಕ್ಸಿನ ಅರ್ಲನಾದ ರಾಬರ್ಟ್ ಡಿವೆರೂ (1566–1601) ಮತ್ತು ಸರ್ ವಾಲ್ಟರ್ ರ್‍ಯಾಲಿ (1552–1618) ಇವರೂ, ಜತೆಗೆ ಎಲಿಜಬೆತ್ ರಾಣಿಯೂ ಕಾರ್ಡಿನಲ್ ವುಲ್ಸಿಯೂ ಷೇಕ್ಸ್ಪಿಯರ್-ನಾಟಕಗಳ ಕರ್ತೃತ್ವಕ್ಕೆ ಅಂಶತಃ ಅಥವಾ ಪೂರ್ತಿ ಹೊಣೆಗಾರರೆಂದು ಪ್ರತಿಪಾದಿಸುವ ಲೇಖಕರೂ ಇದ್ದಾರೆ! ಡಾರ್ಬಿಯ ಪಕ್ಷಪಾತಿಗಳು ಹೆಚ್ಚಾಗಿ ಫ್ರೆಂಚ್ ಪಂಡಿತರು; ಷೇಕ್ಸ್ಪಿಯರನ ಅದ್ವಿತೀಯ ವಿನೋದಮೂರ್ತಿ ಫಾಲ್‌ಸ್ಟಾಫ್ ಫ್ರೆಂಚ್ ಸಾಹಿತ್ಯ

ದಿಂದ ಸ್ಫೂರ್ತಿ ಪಡೆದ ಆಕೃತಿ ಎಂದು ಅವರ ಮತ. ರಟ್ಲೆಂಡನ ಪಕ್ಷದವರು ಹೇಳುವದರ ಭಾರ ಆತ ಡೆನ್ಮಾರ್ಕಿನಲ್ಲಿ ಬ್ರಿಟಿಷ್ ರಾಯಭಾರಿ ಆಗಿದ್ದರಿಂದ ಹ್ಯಾಮ್ಲೆಟನ ಕೋಟೆಯನ್ನು ಆತನೇ ಕಂಡು ಬಂದವನೆಂದು. ಈ ವಾದದ ಎತ್ತುವಳಿಗರು ಬೆಲ್ಜಿಯಂ ಮತ್ತು ಜರ್ಮನಿಯ ಪಂಡಿತರು. ಎಸೆಕ್ಸನನ್ನು ಮುಂದೊತ್ತುವದರ ಆಧಾರ ಆತ ಯೋಧನಾಗಿದ್ದನು, ನಾಲ್ಕನೆ ಮತ್ತು ಐದನೆ ಹೆನ್ರಿಗಳ ಕುರಿತ ಐತಿಹಾಸಿಕ ನಾಟಕ ಗಳಲ್ಲಿಯ ಕಾಳಗದ ದೃಶ್ಯಗಳನ್ನೂ ಅವನೇ ಬರೆದಿರಬೇಕೆಂಬುದು. ರ್‍ಯಾಲಿಯನ್ನು ಎತ್ತಿಹಿಡಿಯುವವರು ಅನ್ನುವದೇನು ? ಆತ ವಿಖ್ಯಾತ ನಾವಿಕ. 'ದಿ ಟೆಂಪೆಸ್ಟ್'ದಲ್ಲಿಯ ಕಡಲು, ಗಾಳಿ, ಭರತ-ಇಳಿತಗಳ ಪರಿಜ್ಞಾನ ಅವನಿಂದಲ್ಲದೆ ಇನ್ನೆಲ್ಲಿಂದ ಬರಬೇಕು ?

## ಗುಂಪಿನ ವಾದ

ಇನ್ನೊಂದು ವಾದವೆಂದರೆ, ಆ ನಾಟಕಗಳನ್ನು ಒಬ್ಬನೇ ಬರೆದದ್ದು ಸುಳ್ಳು, ಅದು ಅಶಕ್ಯ. ಅಷ್ಟೊಂದು ಪ್ರಚಂಡ ವಿಶಾಲ ಲೋಕಾನುಭವ, ಬಹುಶ್ರುತತ್ವ, ಕಾವ್ಯ ಪ್ರೌಢಿಮೆ, ಮಾನವ್ಯದ ವಿವಿಧ ಮುಖಗಳ ಪರಿಜ್ಞಾನ ಇತ್ಯಾದಿ ಒಬ್ಬನ ಪ್ರತಿಭೆಗೆ ಅಸಾಧ್ಯ. ಆದ್ದರಿಂದ ಕೆಲವು ಪ್ರತಿಭಾಶಾಲಿಗಳು ಒಟ್ಟಾಗಿ ಕೂಡಿ, ಕೂತು, ಷೇಕ್‌ಸ್ಪಿಯರನನ್ನು ನಿರ್ಮಿಸಿರಬೇಕು—ಕ್ರೈಸ್ತರ ಬೈಬಲನ್ನು ಸಿದ್ಧಮಾಡಿದಂತೆ! ಈ ಸಿದ್ಧಾಂತವನ್ನು ಪುರಸ್ಕರಿಸುವ ಒಂದು ಗ್ರಂಥ 'ಷೇಕ್‌ಸ್ಪಿಯರ್ಸ್ ಮ್ಯಾಜಿಕ್ ಸರ್ಕಲ್' ಎಂಬುದು 1956ರಲ್ಲಿ ಪ್ರಸಿದ್ಧವಾಯಿತು.

ಈ ಸಿದ್ಧಾಂತವನ್ನು 1857ರಲ್ಲಿಯೇ ಅಮೆರಿಕೆಯ ಒಬ್ಬ ಡೀಲಿಯಾ ಬೇಕನ್ ಎಂಬಾಕೆ ಪುರಸ್ಕರಿಸಿದ್ದಳು. ಮುಂದೆ 1931ರಲ್ಲಿ ಗಿಲ್ಬರ್ಟ್ ಸ್ಲೇಟರ್ ಎಂಬ ಲೇಖಕನು 'ಸೆವೆನ್ ಷೇಕ್‌ಸ್ಪಿಯರ್ಸ್' (ಏಳು ಷೇಕ್‌ಸ್ಪಿಯರರು) ಎಂಬ ಪುಸ್ತಕ ಬರೆದು ಇದನ್ನೆ ಸಮರ್ಥಿಸಿದನು. ಆದರೆ ಈ ಗುಂಪಿನ ಪ್ರತಿಪಾದಕರು ಬೇರೆ ಬೇರೆ ವ್ಯಕ್ತಿಗಳನ್ನು ಆಯಾ ಗುಂಪಿನ ನಾಯಕನನ್ನಾಗಿ ಮುಂದಿಡುತ್ತಾರೆ ಮತ್ತು ಆ ನಾಯಕರು ಮೇಲೆ ಹೇಳಿದ ಬೇಕನ್, ಮಾರ್ಲೊ, ರ್‍ಯಾಲಿ ಪ್ರಭೃತಿಗಳಲ್ಲಿ ಒಬ್ಬರಲ್ಲ ಒಬ್ಬರು ಆಗಿರುತ್ತಾರೆ! ಅಂದರೆ ಇದೊಂದು ಮೂಲತಃ ಹೊಸ ಸಿದ್ಧಾಂತವಲ್ಲ. ಒಬ್ಬನ ಬದಲು ಹಲವು ಕರ್ತೃಗಳನ್ನು ಇವರು ಕಲ್ಪಿಸುತ್ತಾರೆ, ಅಷ್ಟೆ !

ಈ ಭಿನ್ನಭಿನ್ನ ಪಕ್ಷಪಾತೀ ಸಂಶೋಧಕರು ತಮ್ಮ ಮತಸ್ಥಾಪನೆಗಾಗಿ ಏನೆಲ್ಲ ಭೀಮಸಾಹಸ ಮಾಡಿದ್ದುಂಟು.

ಮಾರ್ಲೊ-ವಾದಿಯಾದ ಪ್ರೊ|| ಹಾಫ್‌ಮನ್, ಮಾರ್ಲೊನ ಕೈಬರಹದಲ್ಲಿ ಷೇಕ್‌ಸ್ಪಿಯರನ ನಾಟಕಗಳ ಮೂಲಪ್ರತಿಗಳು ಇರಬೇಕು ಎಂದು ಇಂಗ್ಲಂಡಿನ ಚಿಸ್ಲ್‌ಹರ್ಸ್ಟ್ ಎಂಬಲ್ಲಿಯ ಸರ್ ಥಾಮಸ್ ವಾಲ್ಸಿಂಗ್‌ಹ್ಯಾಮನ ಸಮಾಧಿಯನ್ನು ತೆರೆದು ನೋಡಲು ಅನುಮತಿಗಾಗಿ ಬ್ರಿಟಿಷ್ ಸರಕಾರವನ್ನು ಪರಿಪರಿಯಾಗಿ ಕಾಡಿದನು. ಕೊನೆಗೂ ಆ ಸಮಾಧಿಯನ್ನು ತೆರೆದು ನೋಡಿದನು ! ಅಲ್ಲಿ ಏನೂ ಕಾಣಸಿಗಲಿಲ್ಲ ! ಆದರೆ ಅದರ ಕೆಳಗಿನ ನೆಲಮಾಳಿಗೆಯನ್ನು ಅಗೆದು ನೋಡಬೇಕೆಂಬ ಅವನ ಇಚ್ಛೆಗೆ ಸರಕಾರ ಒಪ್ಪಲಿಲ್ಲ. ಆದ್ದರಿಂದ ಭೂಗರ್ಭಸಂಶೋಧನೆ ಅಷ್ಟಕ್ಕೇ ನಿಂತಿತು !

ಇವನಿಗೂ ಮೊದಲು ಇನ್ನೊಬ್ಬ—ಅಮೆರಿಕೆಯ ಆರ್ವಿಲ್ ಓವನ್—ವೈ ಹೊಳೆಯ ಪಾತ್ರ ಅಗೆದು ನೋಡುವ ಇಂತಹದೇ ವ್ಯರ್ಥಶೋಧವನ್ನು ಮಾಡಿದನು. ಅಲ್ಲಿ ಷೇಕ್ಸ್ಪಿಯರನ ಮೂಲ ಹಸ್ತಲಿಖಿತಗಳನ್ನು ಹೂಳಿಟ್ಟಿರಬೇಕೆಂದು ಅವನ ತರ್ಕ!

ಬಾಸ್ಟನ್ನಿನ ಬೇಕನ್ ಪಕ್ಷದ ಕರ್ಮಠಭಕ್ತ ಆಗಸ್ಟಸ್ ಹೆಮಿನ್ವೆ ಈ ಶತಮಾನದ ನಡುಭಾಗದಲ್ಲಿ ಸಂಖ್ಯಾಶಾಸ್ತ್ರದ ತಂತ್ರದಿಂದ ತನ್ನ ಶೋಧಕ್ಕೆ ಸಮರ್ಥನೆ ಹುಡುಕಲು ಬಹಳ ಹಣ ಹಾಳುಮಾಡಿದನು. ಮೆಂಡೆನ್‌ಹಾಲ್ ಎಂಬ ತಜ್ಞ ಈ ತಂತ್ರದ ಕಲ್ಪಕ. ಕವಿಯು ತೀರ ಅಭಾವಿತನಾಗಿ ತನಗೆ ತಾನೇ ತಿಳಿಯದಂತೆ ಬಳಸುವ ಶೈಲಿಯ ಕೇವಲ ಯಾಂತ್ರಿಕ ಪುನರಾವೃತ್ತಿಯ ಲಕ್ಷಣಗಳನ್ನು ಒಂದು ಆಲೇಖ (graph) ದಲ್ಲಿ ಚಿತ್ರಿಸುವುದೇ ಈ ಸಂಖ್ಯಾಶಾಸ್ತ್ರೀಯ ತಂತ್ರ. ಕವಿಯು ಆದಷ್ಟು ಹೆಚ್ಚು ಸಲ ಬಳಸಿದ ಶಬ್ದಗಳ ಅಕ್ಷರಸಂಖ್ಯೆಯನ್ನು ಎಣಿಸಿ ಕಟ್ಟುವ ತೀರ್ಮಾನವಿದು. ಆದರೆ ಈ ಪ್ರಚಂಡ ಪರ್ವತಪ್ರಸವದ ಪ್ರಯಾಸದಿಂದ ಕಂಡುಬಂದದ್ದೇನು? ಷೇಕ್ಸ್ಪಿಯರನು ನಾಲ್ಕು ಅಕ್ಷರಗಳ ಶಬ್ದಗಳನ್ನು ಬಳಸುವದೇ ಹೆಚ್ಚು!

ಇಂತಹದೇ ಇನ್ನೊಂದು ಚೋದ್ಯವನ್ನು ಬೇಕನ್-ಪಕ್ಷದ ಪುರಸ್ಕರ್ತ ಸರ್ ಎಡ್ವಿನ್ ಡರ್ನಿಂಗ್-ಲಾರೆನ್ಸ್ ಮಾಡಿ ಕಾಣಿಸಿದನು. ಷೇಕ್ಸ್ಪಿಯರನ ನಾಟಕಗಳಲ್ಲಿಯ ಅತಿ ದೊಡ್ಡ ಶಬ್ದವು 'honorificabilitudinitatibus'. ಈ ಉಗಿಬಂಡಿಯಂಥ ಶಬ್ದ ಅವನ 'ಲವ್ಸ್ ಲೇಬರ್ಸ್ ಲಾಸ್ಟ್' ದಲ್ಲಿ ಬರುತ್ತದೆ. ಆ ಶಬ್ದದ ಅಕ್ಷರಗಳಿಂದ ಅರ್ಥ-ಪೂರ್ಣವಾದ ಶಬ್ದಗಳನ್ನು ತಿರುಗಿ ಜೋಡಿಸಿ ಅದರೊಳಗೆ ಅಡಗಿದ್ದ (?) ಗೂಢಶಬ್ದಗಳನ್ನು ಕಂಡುಹಿಡಿಯುವ 'ಕ್ರಿಪ್ಟೊಗ್ರಫಿ'ಯ ತಂತ್ರದಿಂದ ಈ ಸರ್ ಸಾಹೇಬರು ಆ ಮಹಾಶಬ್ದದಲ್ಲಿ ಈ ವಾಕ್ಯ ಹುದುಗಿದ್ದನ್ನು ಕಂಡರು—ಅದೂ ಲ್ಯಾಟಿನ್ ಭಾಷೆಯಲ್ಲಿ: 'Hi Ludi F. Baconis Nati Tuiti Orbi' (These plays, F. Bacon's off-spring, are preserved for the world, ಎಫ್. ಬೇಕನನ ಸಂತತಿಯಾದ ಈ ನಾಟಕಗಳು ಜಗತ್ತಿಗಾಗಿ ಕಾದಿಡಲಾಗಿವೆ.) ಇನ್ನೇನು ಬೇಕು! ಈ ಭಯಂಕರ ತಂತ್ರದಿಂದ ಜಾನ್ ಬನ್ಯನನ ಜಗತ್ಪ್ರಸಿದ್ಧ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ಎಂಬ ರೂಪಕಕಥೆಯನ್ನೂ ಬೇಕನನೇ ಬರೆದದ್ದೆಂದು ಸಿದ್ಧಮಾಡಲಾಗಿದೆಯಂತೆ!

ತಾತ್ಪರ್ಯವೇನು? ಈ 'ಕ್ರಿಪ್ಟೊಗ್ರಫಿ'ಯ ಗೂಢಲೇಖನವನ್ನು ಹೊರಗೆಡಹುವ ಪದವಿಶ್ಲೇಷಣೆಯ ತಂತ್ರದಿಂದ ಅಸಂದಿಗ್ಧವಾದ ಒಂದೇ ಅರ್ಥವನ್ನು ಕೊಡುವ ಶಬ್ದಗಳು ಹೊರಟರೇನೇ ಈ ಸಂಶೋಧನ ಪದ್ಧತಿಯ ಸಾಫಲ್ಯ. ಇಂಥ ಪದ್ಧತಿಯಿಂದ ಅಮೇರಿಕೆಯ ಸರಕಾರ ತನ್ನ ಬೇಹಿನ ಚಾರರಿಂದ ಇತರ ರಾಷ್ಟ್ರಗಳ ಬೇಹುಗಾರಿಕೆಯ ಗುಪ್ತಸಂದೇಶಗಳನ್ನು ಹಿಡಿದು ತರಿಸಿ ಅರ್ಥವಿಸಿಕೊಳ್ಳುತ್ತದೆ. ಆದರೆ ಈ ತಂತ್ರವನ್ನು ಷೇಕ್ಸ್ಪಿಯರನ ಅಥವಾ ಇತರ ಮಹಾಸಾಹಿತಿಗಳ ಕೃತಿಗೆ ಅನ್ವಯಿಸಿದಾಗ ಅನೇಕ ಅರ್ಥವನ್ನು ಸೂಚಿಸುವ ಅನೇಕ ಪದಸಂಯೋಗಗಳನ್ನು ಒಂದೇ ಕೃತಿಯ ಪದ-ಪಂಕ್ತಿಗಳಿಂದ ಹೊರಡಿಸಬಹುದು! ಅನ್ವಯಾರ್ಥ ಮಾಡುವವರೆಷ್ಟು ಜನರೋ ಅಷ್ಟು ಅನ್ವಯಾರ್ಥಗಳೂ ಹೆಚ್ಚು!

ನಾನೂರು ವರ್ಷ ಹಿಂದಿನ ಮಹಾಕವಿಯ ಕರ್ತೃತ್ವದ ಕುರಿತಾದ ಇನ್ನೂರು

ವರ್ಷಗಳ ಇಂಥ ಸಂಶೋಧನೆಯ ಸಾಹಸ-ಸಾಧನೆ ಸಾಧಿಸಿದ್ದು ಏನು? ಪ್ರತಿ ತಲೆಮಾರಿಗೂ ಷೇಕ್ಸ್‌ಪಿಯರನ ಅಷ್ಟೈಶ್ವರ್ಯಪೂರ್ಣವಾದ ಕಾವ್ಯ-ಪಂಕ್ತಿಗಳ ಕೂಲಂಕಷ ಪುನರಭ್ಯಾಸ! ಮತ್ತೆ ಮತ್ತೆ ಷೇಕ್ಸ್‌ಪಿಯರನನ್ನು ನಿರಾಕರಿಸಲು ಷೇಕ್ಸ್‌ಪಿಯರನಿಗೇ ಶರಣುಹೋಗುವದು! ಉತ್ತಮ ಶಬ್ದಗಳ ಉತ್ತಮ ಕ್ರಮಾನು ರಚನೆಯೇ ಕಾವ್ಯ. ಆಂಗ್ಲಭಾಷೆಯ ಶಬ್ದಸಂಪತ್ತನ್ನು ಷೇಕ್ಸ್‌ಪಿಯರನಿಗಿಂತ ಉತ್ತಮವಾಗಿ ಉಪಯೋಗಿಸಿದ ಮಹಾಶಿಲ್ಪಿ ಇನ್ನಾರು? ಆತ ಒಬ್ಬನೋ ಇಬ್ಬರೋ ಸಾವಿರ ಮನಸ್ಸಿನ ಮಹಾಚೇತನವದು! ಅದಕ್ಕೇ ಆರಂಭದಲ್ಲಿ ಆ ಕವಿವಚನವನ್ನು ಉದಾಹರಿಸಿದ್ದು : 'Others abide our question. Thou art free.', ನಮ್ಮ ಪ್ರಶ್ನೆಗೆ ಇತರರು ತಡೆಯಬೇಕು. ನೀನು ಸ್ವಚ್ಛಂದ-ಸ್ವತಂತ್ರ!

ಇದೆಲ್ಲ ಚರ್ಚೆಯನ್ನು ಆ ಮಹಾಕವಿಯ ಒಂದು ನಾಟಕದ ಹೆಸರಿನಿಂದಲೇ ಕರೆಯಬಹುದು 'ಮಚ್ ಆ್ಯಡೂ ಅಬೌಟ್ ನಥಿಂಗ್' (ಏನಿಲ್ಲದೆ ಬರಿಯ ಗುಲ್ಲು). ಈ ವಾದ-ಪ್ರತಿಪಾದನೆಗಳಿಂದ 'ಷೇಕ್ಸ್‌ಪಿಯರ್' ಎಂಬ ಅದ್ಭುತ ವ್ಯಕ್ತಿತ್ವಕ್ಕೆ ಯಾವ ಬಾಧೆಯೂ ಬರಲಾರದು. ಅದೊಂದು ವಿರಾಟ್-ರೂಪದರ್ಶನ. 'ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ| ಆಶ್ಚರ್ಯವತ್ ವದತಿ ಚ ತಥಾನ್ಯಃ||' ಎಂಬಂತೆ ಅದರ ಚಿರನೂತನ ಪ್ರಭಾವ, ಆಕರ್ಷಣೆ ಮತ್ತು ಮಹಿಮಾಮೂಲ್ಯ. ಕವಿಗಿಂತ ಕೃತಿ ಹಿರಿದಾದಲ್ಲಿ ಕೃತಿಯಲ್ಲಿಯೇ ಕವಿಯ ವ್ಯಕ್ತಿತ್ವ ಪೂರ್ತಿ ವ್ಯಕ್ತವಾಗುತ್ತದೆ. ಆ ಕವಿಗೆ ಯಾವ ಹೆಸರಿದ್ದರೇನು? ಆ ಕವಿಸಾರ್ವಭೌಮನೇ ಅಂದಿಲ್ಲವೆ? —"ಹೆಸರಲ್ಲಿ ಏನುಂಟು? ಗುಲಾಬಿಯನ್ನು ಬೇರೆ ಯಾವ ಹೆಸರಿನಿಂದ ಕರೆದರೂ ಅದು ಎಂದಿನಷ್ಟೇ ಮಗಮಗಿಸುವುದು!"





# ಷೇಕ್ಸ್ಪಿಯರನ ಸಾನೆಟ್ಟುಗಳು

**ಎಸ್. ಅನಂತನಾರಾಯಣ**

**1**

ವಿಲಿಯಂ ಷೇಕ್ಸ್ಪಿಯರನ ನಾಟಕಗಳ ಬಗ್ಗೆ ಎಷ್ಟು ಆಸಕ್ತಿಯಿದೆಯೋ, ಅಷ್ಟು ಆಸಕ್ತಿ ಸಾಹಿತ್ಯದ ಅಭ್ಯಾಸಿಗಳಿಗೆ ಆತನ ಕವಿತೆಗಳ ಬಗ್ಗೆ ಇಲ್ಲವೆಂದು ತೋರುತ್ತದೆ. ಆದರೆ ಷೇಕ್ಸ್ಪಿಯರ್ ಅತಿ ದೊಡ್ಡ ನಾಟಕಕಾರನೆಂದು ಹೆಸರಾಗಿರುವಂತೆಯೇ ಅತಿ ಶ್ರೇಷ್ಠ ಕವಿಯೆಂದೂ ಪ್ರಸಿದ್ಧನಾಗಿದ್ದಾನೆ. ಹೀಗೆ ಷೇಕ್ಸ್ಪಿಯರನನ್ನು ಅತಿ ಶ್ರೇಷ್ಠ ಕವಿಯೆನ್ನುವಾಗ ವಿಮರ್ಶಕರು ಹೆಚ್ಚು ಪಾಲು ಅವನ ನಾಟಕಗಳಲ್ಲಿರುವ ಕಾವ್ಯಗುಣವನ್ನೇ ನೆನೆಸುತ್ತಾರೆ, ಕಾವ್ಯಭಾಗಗಳನ್ನು ಉದ್ಧರಿಸುತ್ತಾರೆ. ಆದರೂ ಷೇಕ್ಸ್ಪಿಯರನ ಕವಿತೆಗಳು ತಮ್ಮದೇ ಕುತೂಹಲ ಕೆರಳಿಸಿವೆ, ಕೋಲಾಹಲವನ್ನುಂಟುಮಾಡಿವೆ.

ಷೇಕ್ಸ್ಪಿಯರನ ಕವಿತೆಗಳಲ್ಲಿ 'ವೀನಸ್ ಅಂಡ್ ಆ್ಯಡೋನಿಸ್' (ವೀನಸ್ ಮತ್ತು ಆ್ಯಡೋನಿಸ್) ಮತ್ತು 'ದಿ ರೇಪ್ ಅಫ್ ಲೂಕ್ರೀಸ್' (ಲೂಕ್ರೀಸಳ ಮಾನಭಂಗ) ಎರಡೂ ನೀಳ್ಗವಿತೆಗಳು. ಇವೆರಡೂ ಅಲ್ಲದೆ 154 ಪುಟ್ಟ ಪದ್ಯಗಳಿವೆ. ಈ ಪದ್ಯಗಳನ್ನು 'ಸಾನೆಟ್' ಎಂಬ ಪದದಿಂದ ನಿರ್ದೇಶಿಸಿದ್ದರೂ, ಅವುಗಳಲ್ಲಿ ಕೆಲವು ನಿರ್ದಿಷ್ಟವಾಗಿ ಸಾನೆಟ್ ರೂಪದಲ್ಲಿಲ್ಲ. ಹೇಗೂ ಈ ಪದ್ಯಗಳಲ್ಲಿ, ಸಾನೆಟ್ಟುಗಳಲ್ಲಿ ಸಾಹಿತ್ಯಾಭ್ಯಾಸಿಗಳಿಗೆ ವಿಶೇಷ ಆಸಕ್ತಿ ಕೆರಳಿತು. ಈ ಕುತೂಹಲದ ಫಲವಾಗಿ ಕೋಲಾಹಲಕಾರಕ ವ್ಯಾಖ್ಯಾನಗಳೂ ಬಂದಿವೆ. ಷೇಕ್ಸ್ಪಿಯರನ ನಾಟಕಗಳ ಬಗ್ಗೆ ಬೇರೆ ಬೇರೆ ರೀತಿಯ ಅರ್ಥ, ವ್ಯಾಖ್ಯೆಗಳು ಬಂದಿರುವ ಹಾಗೆ, ಸಾನೆಟ್ಟುಗಳ ಬಗ್ಗೆಯೂ ಹೇರಳವಾಗಿ ಬಂದಿವೆ. ಈ ಸಾನೆಟ್ಟುಗಳಿಗೆ ಒಂದು ವಿಶಿಷ್ಟ ಸ್ಥಾನವೂ ದೊರೆತಿದೆ. ನಾಟಕಗಳಾದರೋ ಷೇಕ್ಸ್ಪಿಯರನ ಸ್ವಂತ ಬದುಕಿನ ಅಭಿವ್ಯಕ್ತಿಯಾಗಲಾರದು. ಯಾವುದೋ ಕತೆಯನ್ನು ತೆಗೆದುಕೊಂಡು ಬೇರೆ ಯಾರೋ ವ್ಯಕ್ತಿಗಳ ಬಾಯಿಂದ ಆ ನಾಟಕದ ಸನ್ನಿವೇಶಕ್ಕೆ ಅನುಗುಣವಾಗಿ ಆಡಿಸುವ ಮಾತು—ಷೇಕ್ಸ್ಪಿಯರ್ ಬರೆದ

ಮಾತೇ ಆದರೂ—ಅದೆಷ್ಟಿದ್ದರೂ ವಸ್ತುಕ (objective) ಸೃಷ್ಟಿಯೇ ಹೊರತು, ವೈಯಕ್ತಿಕ ಅಭಿವ್ಯಕ್ತಿಯಲ್ಲ. ಷೇಕ್ಸ್ಪಿಯರ್ ತನ್ನದೇ ಭಾವ, ಆವೇಗಗಳನ್ನು ತನ್ನದೇ ಅನುಭವವನ್ನು ಮಾತಿನಲ್ಲಿ ಅಳವಡಿಸಿ ತೋಡಿಕೊಂಡುದೆಂದರೆ ತನ್ನ ಸಾನೆಟ್ಟು ಗಳ ಮೂಲಕ. ಆದ್ದರಿಂದ ಇವು ತೀವ್ರವಾಗಿ ವೈಯಕ್ತಿಕವಾದವು. ಅವುಗಳಲ್ಲಿ ಅಳವಟ್ಟಿರುವ ಭಾವಗಳು ಕೂಡ 'ಅಸಾಮಾನ್ಯ', 'ಸಲ್ಲದಂತಹುದು' ಎಂಬ ಅಭಿ ಪ್ರಾಯವೂ ಇರುವುದರಿಂದ ಸಾನೆಟ್ಟುಗಳ ಬಗ್ಗೆ ಹೆಚ್ಚಿನ ಆಸಕ್ತಿ. ಈ ಸಾನೆಟ್ಟುಗಳು ಷೇಕ್ಸ್ಪಿಯರನ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುತ್ತವೆ. ನಮ್ಮಿಂದ ಕಾಲ ಬಚ್ಚಿಡು ತ್ತಿರುವ ಷೇಕ್ಸ್ಪಿಯರನ ಬದುಕು, ಬಯಕೆ, ಭಾವಗಳ ಬಗ್ಗೆ ಇವು ನಮಗೆ ಸೂಚನೆ ಕೊಟ್ಟು, ಅರಿವು ತರುತ್ತವೆಂಬ ಒಂದು ಆಸೆಯೂ ಸೇರಿ ಷೇಕ್ಸ್ಪಿಯರನ ಸಾನೆಟ್ಟುಗಳಿಗೆ ಪ್ರಾಮುಖ್ಯ ನೀಡಲಾಗಿದೆ. ಷೇಕ್ಸ್ಪಿಯರ್ ಎಂಬ ಹೆಸರಿನಲ್ಲಿ ಬರೆಯುತ್ತಿದ್ದ ವ್ಯಕ್ತಿ ಯಾರು ಎಂಬ ಬಗ್ಗೆ ಕೋಲಾಹಲವೆದ್ದು, ವಿವಿಧ ಬಗೆಯ ಜಿಜ್ಞಾಸೆ ನಡೆದಾಗ, ಅವನ 'ವೈಯಕ್ತಿಕ ಕವಿತೆಗಳು' ಎನಿಸಿದ ಸಾನೆಟ್ಟು ಗಳಿಗೆ ಇನ್ನೂ ಹೆಚ್ಚಿನ ಪ್ರಾಮುಖ್ಯ ಬಂತು. ಅತ್ಯಪೂರ್ವ ಕಲ್ಪನಾಶಕ್ತಿಯನ್ನು, ವಿಶಾಲ ಪರಿಮಿತಿಯ ಭಾವ, ಆವೇಶಗಳ ಹಸರವನ್ನು ಈ ಸಣ್ಣ ಪರಿಸರದಲ್ಲಿ ಭಟ್ಟಿ ಇಳಿಸಿ ಪದಗಳ ಹಳಕುಗಳಲ್ಲಿ ಕೂಡಿಸಿದ ಷೇಕ್ಸ್ಪಿಯರನ ಪ್ರತಿಭೆ ಸಹಜವಾಗಿಯೇ ಎಲ್ಲರ ಮನ ಸೆಳೆಯಿತು. ವಿಮರ್ಶಕರೂ ಸಂಶೋಧಕರೂ ಅವುಗಳ ಅಭ್ಯಾಸದಲ್ಲಿ ತೊಡಗಿ ತಮ್ಮ ತಮ್ಮ ವ್ಯಕ್ತಿತ್ವಕ್ಕೆ ತಕ್ಕಂತೆ, ತಮ್ಮ ಅಭಿಪ್ರಾಯಗಳಿಗೆ ಅನುವಾಗು ವಂತೆ ಈ ಸಾನೆಟ್ಟುಗಳಲ್ಲಿ ಅರ್ಥ ಕಂಡುಕೊಂಡಿದಾರೆ. ಷೇಕ್ಸ್ಪಿಯರ್ ಎಂಬ ಹೆಸರಿನಲ್ಲಿ ಬರೆದ ವ್ಯಕ್ತಿ ಯಾರು ಎಂಬ ಜಿಜ್ಞಾಸೆ, ಸಂಶೋಧನೆ ಈ ಸಾನೆಟ್ಟುಗಳನ್ನು ಬಹುಮಟ್ಟಿಗೆ ಅವಲಂಬಿಸಿದೆ. ಪ್ರತಿ ಸಂಶೋಧಕನೂ ಈ ಸಾನೆಟ್ಟುಗಳಲ್ಲಿ ತನ್ನದೇ ಆದ ಅಭಿಪ್ರಾಯಗಳಿಗೆ ಪುಷ್ಟೀಕರಣ, ಸಾಕ್ಷ್ಯಗಳನ್ನು ಕಂಡುಕೊಂಡಿದಾನೆ. ಈ ಸಾನೆಟ್ಟುಗಳ ವೈವಿಧ್ಯ, ಆಳ ಮತ್ತು ವಿಶಾಲ ಗುಣಕ್ಕೆ ಇದೊಂದು ಸಾಕ್ಷಿ, ಅಷ್ಟೆ. ಷೇಕ್ಸ್ಪಿಯರನ ಸಾನೆಟ್ಟುಗಳ ಸಣ್ಣ ಪರಿಚಯ ಮಾಡಿಕೊಡುವುದಷ್ಟೇ ಈ ಲೇಖನದ ಉದ್ದೇಶ.

## 2

ಸಾನೆಟ್ ಮೂಲತಃ ಇಟಲಿಯಲ್ಲಿ ಹುಟ್ಟಿ ಬೆಳೆದ ರೂಪ. ಭಾವಗೀತೆಯ ಬಹು ಮುಖ್ಯ ಪ್ರಕಾರವಾದ ಸಾನೆಟ್ ಹಲವು ಶತಮಾನಗಳ ಕಾಲ ಪ್ರಯೋಗಸ್ಥಿತಿಯಲ್ಲಿಯೇ ಇದ್ದು ಹದಿಮೂರನೆಯ ಶತಮಾನದ ವೇಳೆಗೆ ಒಂದು ನಿಯತರೂಪಕ್ಕೆ ಬಂದಿತು. ಸಾನೆಟ್ ಸರಳ ರಗಳೆಯ ಹದಿನಾಲ್ಕು ಸಾಲಿನ ಪದ್ಯವೆಂದು ನಿರ್ದೇಶಿಸಿ, ಅದನ್ನು ಸ್ಪಷ್ಟವಾಗಿ ಸಾಹಿತ್ಯದಲ್ಲಿ ನೆಲೆನಿಲ್ಲಿಸಿದ ಕವಿ ಗಿವಾನ್ ದಿ ಅರೆಸ್ಸೊ. 1235ರಲ್ಲಿ ಇಟಲಿಯ ಫ್ಲಾರೆನ್ಸ್ ವಿಭಾಗದಲ್ಲಿ ಜನಿಸಿದವನು. ಆಗ ಸಾಧಾರಣವಾಗಿ ಸಾನೆಟ್ಟಿನ ವಸ್ತು ಗಂಡು-ಹೆಣ್ಣಿನ ಪ್ರೇಮ. ಹದಿಮೂರನೆಯ ಶತಮಾನದಲ್ಲಿ ವಿಷಯವನ್ನು ವಿಸ್ತರಿಸಿಕೊಂಡು ರಾಜಕೀಯ ಮತ್ತು ಸಾಮಾಜಿಕ ಟೀಕೆಗಳಿಗೂ ಸಾನೆಟ್ಟಿನಲ್ಲಿ ಎಡೆ

ಕೊಟ್ಟರು. ಆಗ ಸಾನೆಟ್ ಮೊನೆಯಾದ ಸಾಮಾಜಿಕ ಟೀಕೆಯ ಸಾಧನವಾಗಿ ಸ್ಪಷ್ಟ ರೂಪರೇಖೆಗಳನ್ನು ಪಡೆಯಿತು ಎನ್ನಬಹುದು.

"ಈ ಸಣ್ಣ ವೀಣೆಯ ಮಧುರಸ್ವನವು ಪೀಟ್ರಾರ್ಕನ ಹೃದಯದ ಗಾಯವನ್ನು ಮಾಯಿಸಿತು," ಎಂದಿದಾನೆ ವರ್ಡ್ಸ್‌ವರ್ತ್ ('The melody of this lute gave ease to Petrarch's wound'). ಪೀಟ್ರಾರ್ಕನ ಸಾನೆಟ್ಟುಗಳು ಜಗತ್ಪ್ರಸಿದ್ಧವಾಗಿವೆ. ಪ್ರೇಮದ ಬಗ್ಗೆ ಚಿಂತನಾತ್ಮಕವಾಗಿವೆ ಈ ಸಾನೆಟ್ಟುಗಳು. ಹೆಣ್ಣಿನ ಹಂಬಲ, ತಾಳಲಾರದ ಆಸೆ, ಆ ಆಕಾಂಕ್ಷೆ ಮುರಿದು, ಬಯಸಿದುದು ದೊರಕಲಾರದೆ ಪಟ್ಟ ಪಾಡು, ತನ್ನ ದೌರ್ಬಲ್ಯಕ್ಕೆ ತಾನೇ ನಾಚಿ, ಹೇಸಿ, ಹೀಯಾಳಿಸಿಕೊಳ್ಳುವ ಮನಸ್ಸಿನ ರೊಚ್ಚು— ಹೀಗೆ ಪ್ರೇಮಸಂಬಂಧದ ವಿವಿಧ ಮನಃಸ್ಥಿತಿಗಳ ನಿಲುವು ಪೀಟ್ರಾರ್ಕನ ಸಾನೆಟ್ಟುಗಳು ಎನ್ನಬಹುದು. ಪೀಟ್ರಾರ್ಕನ ಹೆಸರು ಅವನು ಸಾಮಾನ್ಯವಾಗಿ ಬಳಸಿದ ರೂಪಕ್ಕೆ ಅಂಟಿಕೊಂಡಿರುವುದೇ ಭಗ್ನಪ್ರೇಮಿಗಳ ಗುರುವಾದ ಪೀಟ್ರಾರ್ಕನ ಪ್ರಭಾವಕ್ಕೆ ಸೂಚಿ !

ಪೀಟ್ರಾರ್ಕನ ಸಾನೆಟ್ಟಿನ ಲಕ್ಷಣಗಳನ್ನು ಹೀಗೆ ಗುರುತಿಸಬಹುದು: ಮೊದಲೆಂಟು ಸಾಲುಗಳು 'ಆಕ್ಟೇವ್' (octave, ಅಷ್ಟಪದಿ), ಒಂದು ಭಾವವನ್ನು ನಿರೂಪಿಸುತ್ತವೆ. ಅನಂತರ ಒಂದು ಸಣ್ಣ ಬಿಡುವು (pause). ಮುಂದಿನ ಆರು ಸಾಲುಗಳು 'ಸೆಸ್ಟೆಟ್' (sestet, ಷಟ್ಪದಿ), ಮೊದಲ ಭಾವಕ್ಕೆ ಪೂರಕವಾದ ಅಥವಾ ಸಂಬಂಧಿಸಿದ ಭಾವವನ್ನು ಪ್ರತಿಪಾದಿಸುತ್ತವೆ. ಇಲ್ಲಿ ಒಂದೇ ಭಾವ, ಒಂದೇ ಚಿಂತನವಿದ್ದು, ಏಕಮಾನತೆ (unitary character) ಇರಬೇಕೆಂಬುದು ಮುಖ್ಯನಿಯಮ. ಇಲ್ಲಿನ ಪ್ರಾಸವಿನ್ಯಾಸ ವನ್ನು ನೋಡಿದರೆ ಮೊದಲೆಂಟು ಸಾಲಿಗೆ ಎರಡು ಆವೃತಪ್ರಾಸ, ಕೊನೆಯ ಸಾಲಿಗೆ ಮೂರು ಪ್ರಾಸ :

**ಸರಿರಿಸ, ಸರಿರಿಸ**—(ಬಿಡುವು)—**ಗಮಪ ಗಮಪ** ಅಥವಾ **ಗಮಗ ಮಗಮ**
ಅಥವಾ **ಗಮಪ ಮಗಪ.**

ಇಲ್ಲಿ ಮೊದಲೆಂಟು ಸಾಲುಗಳಲ್ಲಿ 1, 4, 5 ಮತ್ತು 8 ಒಂದೇ ಪ್ರಾಸ. ಅವುಗಳಲ್ಲಿ ಆವೃತವಾಗಿ (enclosed) 2, 3 ಮತ್ತು 6, 7 ಸಾಲುಗಳಿಗೆ ಮತ್ತೊಂದು ಪ್ರಾಸ. ಈ ಪೀಟ್ರಾರ್ಕನ್ ರೂಪವನ್ನು ಇಂಗ್ಲಂಡಿನ ಪ್ರಮುಖ ಕವಿಗಳೆಲ್ಲರೂ—ವೈಯಟ್, ಸರ್ರೆ, ಸ್ಪೆನ್ಸರ್, ಡ್ರೇಟನ್, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಬ್ರಿಡ್ಜಸ್ ಪ್ರಮುಂತಾಗಿ ಹಿರಿಯ ಸಾನೆಟ್ಟುಗಾರರೆಲ್ಲ ಉಪಯೋಗಿಸಿಕೊಂಡಿದಾರೆ.

ಸಾನೆಟ್ಟಿನ ಇನ್ನೊಂದು ರೂಪಕ್ಕೆ ಷೇಕ್ಸ್ಪಿಯರರ ಹೆಸರೇ ಅಂಟಿಕೊಂಡಿದೆ. ಆದರೆ ಇಂಗ್ಲಿಷಿನಲ್ಲಿ ಈ ರೂಪ ನಿರ್ಮಿಸಿದವನು ಅರ್ಲ್ ಅಫ್ ಸರ್ರೆ. ಈ ಷೇಕ್-ಸ್ಪೀರಿಯನ್ ರೂಪವು ಕೂಡ ಇಟಲಿಯಲ್ಲಿ ದಾಂತೆ ಕವಿ ಹದಿಮೂರನೆಯ ಶತಮಾನ ದಲ್ಲಿ ಬಹಳ ಜನಪ್ರಿಯವಾದ 'ವೀಟ ನುವೋವ' (Vita Nuova, 'ಹೊಸ ಬಾಳು') ಎಂಬ ಸಾನೆಟ್-ಕೂಟದಲ್ಲಿ ಬಳಸಿದ್ದುದೇ. ನಿಜವಾಗಿ ನೋಡಿದರೆ ಷೇಕ್ಸ್ಪೀರಿಯನ್ ರೂಪದ ಸೃಷ್ಟಿಕರ್ತರು ವೆರ್ನಾಕ್ಸಿಯೊ, ಗ್ವಿದೋ ಗ್ವಿನಿಸೆಲ್ಲಿ ಮತ್ತು ಜಕೊಪೊ ಡ ಲೆಂಟೀನೊ; ಇವರು ಹನ್ನೆರಡನೆಯ ಶತಮಾನದಲ್ಲಿ ಸಾನೆಟ್ಟುಗಳನ್ನು ಬರೆದರು. ಅವರ

ಸಾನೆಟ್ಟುಗಳಲ್ಲಿಲ್ಲದ ಸೂಕ್ಷ್ಮತೆ, ಸವಿರು, ನಯ, ಕೌಶಲಗಳು ದಾಂತೆಯಲ್ಲಿ ಕಾಣುತ್ತವೆ. ಸಾಣೆಹಿಡಿದ ಹೊಳೆವಜ್ರಗಳು ದಾಂತೆಯ ಸಾನೆಟ್ಟುಗಳು. ಈ ಸಾನೆಟ್ಟುಗಾರರು ಬಳಸಿದ ರೂಪವನ್ನು ಇಂಗ್ಲಂಡಿಗೆ ತಂದ ಶ್ರೇಯಸ್ಸು ವೈಯಟ್ ಮತ್ತು ಸರ್ರೆ ಇವರಿಗೆ ಸೇರಿದ್ದು.

1557ರಲ್ಲಿ ಇಂಗ್ಲಂಡಿನಲ್ಲಿ ರಿಚರ್ಡ್ ಟಾಟಿಲ್ ಈಗ 'ಟಾಟಿಲ್ಸ್ ಮಿಸೆಲನಿ' ಎಂದು ಪ್ರಸಿದ್ಧವಾಗಿರುವ ಹಾಡುಗಳ ಸಂಗ್ರಹವನ್ನು ಪ್ರಕಟಿಸಿದ. ಈ ಸಂಗ್ರಹದಲ್ಲಿ ಹಲವಾರು ಕವಿಗಳ ಹಾಡುಗಳೂ ಸಾನೆಟ್ಟುಗಳೂ ಪ್ರಕಟವಾದುವು. ಇಂಗ್ಲಂಡಿಗೆ ಸಾನೆಟ್ಟನ್ನು ತಂದ ವೈಯಟ್ ಮತ್ತು ಸರ್ರೆ ಇವರ ಸಾನೆಟ್ಟುಗಳೂ ಇದರಲ್ಲಿಯೇ ಮೊದಲು ಪ್ರಕಟವಾದುವು. ಈ ವೇಳೆಗೆ ಅವರಿಬ್ಬರೂ ಸತ್ತು ಹದಿನೈದು ವರ್ಷಗಳಾಗಿದ್ದುವು. ಹತ್ತು ಉಚ್ಚಾರಾಂಶದ ಅಯಾಂಬಿಕ್ ಛಂದಸ್ಸನ್ನು ಉಪಯೋಗಿಸಿಕೊಂಡು ಹದಿನಾಲ್ಕು ಸಾಲಿನ ಸಾನೆಟ್ಟನ್ನು ಇಂಗ್ಲಿಷಿಗೆ ಇವರು ತಂದರು. ವೈಯಟ್ ಮಾತ್ರ ಪೀಟ್ರಾರ್ಕನ್ ರೀತಿಯಲ್ಲಿಯೇ ಬರೆದ. ಸರ್ರೆ ಹಲಕೆಲವು ಪ್ರಯೋಗಗಳನ್ನು ನಡೆಸಿ, ದಾಂತೆ ಮತ್ತಿತರರು ಬಳಸಿದ ಇನ್ನೊಂದು ರೂಪವನ್ನು ಹೆಚ್ಚಾಗಿ ಉಪಯೋಗಿಸಿದ. ಈ ರೂಪವನ್ನು ಬಹಳ ವಿಚಕ್ಷಣೆಯಿಂದ, ಪ್ರತಿಭಾಪೂರ್ಣವಾಗಿ ಉಪಯೋಗಿಸಿದ ಷೇಕ್ಸ್ಪಿಯರನ ಹೆಸರೇ ಅದಕ್ಕೆ ಸೇರಿಕೊಂಡು, ಷೇಕ್ಸ್ಪೀರಿಯನ್ ಸಾನೆಟ್ ರೂಪವೆಂದೇ ಹೆಸರಾಗಿದೆ. ಇದರ ರೂಪರೇಷೆಗಳನ್ನು ಗಮನಿಸಲು ಒಂದು ಸಾನೆಟ್ಟನ್ನು ತೆಗೆದುಕೊಂಡು (XVIII) ವಿವೇಚಿಸಿದರೆ ಸಾಕು:

Shall I compare thee to a summer's day? (ಸ)
Thou art more lovely and more temperate. (ರಿ)
Rough winds do shake the darling buds of May, (ಸ)
And summer's lease hath all too short a date: (ರಿ)

Sometime too hot the eye of heaven shines, (ಗ)
And often is his gold complexion dimm'd; (ಮ)
And every fair from fair some time declines, (ಗ)
By chance, or nature's changing course, untrimm'd; (ಮ)

But thy eternal summer shall not fade (ಪ)
Nor lose possession of that fair thou ow'st; (ದ)
Nor shall Death brag thou wand'rest in his shade, (ಪ)
When in eternal lines to time thou grow'st. (ದ)

So long as men can breathe or eyes can see, (ನಿ)
So long lives this, and this gives life to thee. (ನಿ)

ಇಲ್ಲಿಯ ಪ್ರಾಸವಿನ್ಯಾಸ, ಸಾನೆಟ್ಟಿನ ಓಟ ಇವು ಪೀಟ್ರಾರ್ಕನ್ ಸಾನೆಟ್ಟಿಗಿಂತ ಭಿನ್ನ. ಆಕ್ಟೇವ್ ಮತ್ತು ಸೆಸ್ಟೆಟ್‌ಗಳ ಬದಲಿಗೆ ಇಲ್ಲಿ ಮೂರು ಚೌಪದಿ ಮತ್ತು ಒಂದು ದ್ವಿಪದಿ ಬಂದಿದೆ. ಎಂದರೆ ನಾಲ್ಕು ಸಾಲುಗಳುಳ್ಳ ಮೂರು ನುಡಿಗಳು ಮತ್ತು ಎರಡು ಸಾಲುಗಳ ಒಂದು ನುಡಿ ಸೇರಿದಂತಾಯಿತು. ಕನ್ನಡ ಮತ್ತಿತರ ಭಾಷೆಗಳಂತೆ ಆದಿಪ್ರಾಸವಿಲ್ಲದೆ, ಬರಿಯ ಅಂತ್ಯಪ್ರಾಸವೇ ಉಳ್ಳ ಇಂಗ್ಲಿಷಿನ ಈ ಕಾವ್ಯಪ್ರಕಾರದ ಪ್ರಾಸವಿನ್ಯಾಸವನ್ನು ನೋಡೋಣ. ಮೊದಲ ನಾಲ್ಕು ಸಾಲಿನ ಚೌಪದಿಯಲ್ಲಿ 1 ಮತ್ತು



"ಓ, ದೀವಟಿಗೆಗಳಿಗಿವಳು ಕಲಿಸುವಳು,
ಥಳಥಳನೆ ಬೆಳಗುವುದ !"—ರೋಮಿಯೊ.

**'ರೋಮಿಯೊ ಅಂಡ್ ಜೂಲಿಯೆಟ್'ನಲ್ಲಿ ನೃತ್ಯಸಮಾರಂಭದ ದೃಶ್ಯ**

3ನೆಯ ಸಾಲುಗಳ ಅಂತಿಮ ಉಚ್ಚಾರಾಂಶಗಳು (day ಮತ್ತು May) ಪ್ರಾಸಬದ್ಧ ವಾಗಿವೆ. ಹಾಗೆಯೇ 2 ಮತ್ತು 4ನೆಯ ಸಾಲುಗಳ ಅಂತಿಮ ಉಚ್ಚಾರಾಂಶಗಳು (-rate ಮತ್ತು date) ಪ್ರಾಸವಾಗಿವೆ. ಅಲ್ಲದೆ 1-3, 2-4 ಹೀಗೆ ಪ್ರಾಸ ಕೂಡಿರು ವುದರಿಂದ ಆವೃತಪ್ರಾಸಕ್ಕೆ ಬದಲು ನಿರಾವೃತ ಅಥವಾ ಮುಕ್ತಪ್ರಾಸವಿದೆಯೆನ್ನ ಬಹುದು. ಈಗ ಒಟ್ಟು ಪ್ರಾಸವಿನ್ಯಾಸ ಹೀಗೆ ಕಾಣುತ್ತದೆ:

**ಸರಿಸರಿ ಗಮಗಮ ಪದಪದ ನಿನಿ.**

ಪೀಟ್ರಾರ್ಕನ್ ಸಾನೆಟ್ಟಿನ ಎಂಟು, ಆರು ಸಾಲಿನ ಒಡೆತವಿಲ್ಲ, ನಡುವಣ ಬಿಡುವೂ ಇಲ್ಲ. ಇಲ್ಲಿ ಒಂದು ಭಾವ, ಚಿಂತನ ಕೊನೆಯವರೆಗೂ ಹರಿದು ಕೊನೆಯೆರಡು ಸಾಲಿನಲ್ಲಿ ಬಿಗುಪಿನಿಂದ ಚೂಪಾಗಿ ತಟಕ್ಕನೆ ಮುಗಿವುಗೊಳ್ಳುತ್ತದೆ. ಇದರ ಅರ್ಥದ, ಭಾವದ ಬೆಳವಣಿಗೆಯನ್ನು ನೋಡಿದರೆ ಇದು ಇನ್ನೂ ಸ್ಪಷ್ಟವಾಗುತ್ತದೆ.

ಇಂಗ್ಲಂಡಿನಂತಹ ಚಳಿರಾಜ್ಯದಲ್ಲಿ ನಡುಬೇಸಗೆ ನಮ್ಮಲ್ಲಿನ ವಸಂತಋತುವಿನಂತೆ ಹಿತವಾಗಿರುತ್ತದೆಂಬುದನ್ನು ಗಮನದಲ್ಲಿಟ್ಟು ಇದರ ಅರ್ಥವನ್ನು ನೋಡಬೇಕು :

ನಿನ್ನನ್ನು ಬೇಸಿಗೆಯ ಹಗಲಿಗೆ ಹೋಲಿಸಲೆ? ನೀನು ಅದಕ್ಕಿಂತ ಬಲು ಸೊಗಸು, ತನಿ ಇನಿದು. ಒಮ್ಮೊಮ್ಮೆ ಬೇಸಿಗೆಯ ಬಿರುಗಾಳಿ ಬಡಿದು ಮುದ್ದು ಮೇ ಮೊಗ್ಗೆಗಳ ನಡುಗಿಸಿದೆ ತರಿತರಿದು. ಬೇಸಿಗೆಯ ಪರಿಸರವೊ ಬಲು ಕಿರಿದು. ಬಾನ ಕಣ್ಣಾದ ರವಿ ಒಮ್ಮೊಮ್ಮೆ ಕೆಂಡಗಾರುವ ಬೆಂಕಿ. ಮತ್ತೊಮ್ಮೆ ತಟ್ಟನೆಯೆ ಬಂಗಾರಮೊಗ ಮಾಸಿ ಮುಸಕಾಗುವನು. ಚೆಲುವೆಲ್ಲ ಪ್ರಕೃತಿನಿಯಮಕೆ ಸಿಕ್ಕಿ, ವಿಧಿಯ ಕೈವಾಡದಲಿ ತನ್ನ ಚೆಲುವಿನಿಂದಿಳಿಯುವುದು. ನಿನ್ನ ಕೊನೆಯರಿಯದೀ ಯೌವನದ ಬೇಸಿಗೆಯು ಮಾಸಲೊಲ್ಲದು, ನಿನ್ನ ಚೆಲುವೆಂದಿಗೂ ಕಳೆದುಕೊಳ್ಳದೆ ಇಹುದು. ಚಿರಕಾಲದೀ ಕಾವ್ಯದೀ ಅನಂತ ಸಾಲುಗಳಲ್ಲಿ ನೀ ಬೆಳೆಯುವಂತಿರಲು, ಸಾವು ಕೂಡ ನಿನ್ನ ತನ್ನ ನೆರಳಲಿ ಪಡೆದೆನೆಂದು ಹೇಳಲು ಸಲ್ಲ. ಮಾನವರು ಎನಿತುವರೆಗುಸಿರ ನಾಡುವರೋ, ಎನಿತುವರೆಗೂ ಕಣ್ಣು ನೋಡಲರಿವುದೋ ಅನಿತುವರೆಗೂ ಈ ಕಾವ್ಯ ಉಳಿಯುವುದು—ಇದು ನಿನಗೆ ಜೀವವನು ಎರೆಯುವುದು.

ಬೇಸಿಗೆಯ ಹಗಲಿಗೆ ಸಾಮ್ಯ ಕೊಡುವುದು ತಪ್ಪೆನಿಸುವುದು—ಬೇಸಿಗೆಯ ಹಗಲಿನ ಸೌಂದರ್ಯ, ತಣ್ಪು ಕ್ಷಣಿಕವಾದುದು, ಕಳೆದುಹೋಗುವಂತಹುದು ಎನ್ನುವ ದೃಷ್ಟಿಯಿಂದ. ಕವಿಯ ಕಾವ್ಯದ ಸಾಲುಗಳಲ್ಲಿ ಸೌಂದರ್ಯ ಮೈವೆತ್ತು ಬದುಕಿರುವಾಗ ಸಾವು ಕೂಡ ಆತನನ್ನು ಏನೂ ಮಾಡಲಾರದು ಎನ್ನುವ ಮಾತು ಕೊನೆಯಲ್ಲಿ ಮೊನಚಾಗಿ, ಬಿಗುಪಿನಲ್ಲಿ, ಮಾನವಕೋಟಿಯಿರುವತನಕ ಈ ಕಾವ್ಯವಿರುತ್ತದೆ, ಈ ಕಾವ್ಯವಿರುವತನಕ ನೀನೂ ಅನಂತವಾಗಿ ಚಿರಾಯು ಎಂಬ ಮಾತಿನ ಗೆಲುವಿನ ಪ್ರತಿಧ್ವನಿಯಲ್ಲಿ ಮುಗಿಯುತ್ತದೆ. ಕವಿಗೆ ಪ್ರೇರಣೆ ನೀಡಿದ ವ್ಯಕ್ತಿ ಈ ಸಾನೆಟ್ಟಿನಲ್ಲಿ ಚಿರಕಾಲವೂ ಉಳಿಯುತ್ತಾನೆ, ತನ್ನ ಈ ಕಾವ್ಯಕೃತಿ ಚಿರಕಾಲವಿರುತ್ತದೆಂಬ ಆತ್ಮ ಭರವಸೆ ಷೇಕ್‌ಸ್ಪಿಯರನಿಗಿತ್ತು. ಅದು ಕೊನೆಯೆರಡು ಸಾಲಿನ ಕ್ಲುಪ್ತಪ್ರಾಸದಲ್ಲಿ ಬಿಗಿಯಾಗಿ ಹೆಣೆದುಕೊಂಡು, ಮೊನೆಮಾತಾಗಿ ಕಾಣಿಸಿಕೊಂಡಿದೆ.

ಷೇಕ್‌ಸ್ಪಿಯರನ ಸಾನೆಟ್ ರೂಪ ಹೀಗಿದೆ. ಆ ಕಾಲದಲ್ಲಿ ಹೆಚ್ಚಿನ ಸಾನೆಟ್ಟು-ಗಾರರು ಈ ರೂಪವನ್ನೇ ಬಳಸುತ್ತಿದ್ದರು. ಆದರೆ ಷೇಕ್‌ಸ್ಪಿಯರನ ಸಮಕ್ಕೆ ಅದನ್ನು ಬಳಸುವ ಪ್ರತಿಭೆ ಮತ್ತಾರಿಗೂ ಇರಲಿಲ್ಲವಾದುದರಿಂದ ಹದಿನೆಂಟನೆಯ ಶತಮಾನದಲ್ಲಿ ಇದಕ್ಕೆ ಷೇಕ್‌ಸ್ಪೀರಿಯನ್ ರೂಪವೆಂದೇ ಹೆಸರು ಕೊಟ್ಟರು.

ಷೇಕ್‌ಸ್ಪಿಯರ್ ಈ ರೂಪವನ್ನು ಸೃಷ್ಟಿಸಲಿಲ್ಲವೆಂಬುದನ್ನು ಮತ್ತೊಮ್ಮೆ ನೆನೆಯುವುದು ಅಗತ್ಯ. ಹಿಂದೆ ಹಾಡುಗಬ್ಬವಾಗಿದ್ದುದು ತನ್ನ ಹಾಡುತನವನ್ನು ಕಳೆದುಕೊಂಡು ಹೆಚ್ಚು ಕಾವ್ಯತನವನ್ನು ಷೇಕ್‌ಸ್ಪಿಯರನ ಕೈಯಲ್ಲಿ ಪಡೆಯಿತು ಎಂಬುದು ಸ್ಪಷ್ಟವೇ ಆಗಿದೆ. ಆದರೆ 1575ರಲ್ಲಿ, ಷೇಕ್‌ಸ್ಪಿಯರ್ ಇನ್ನೂ ಹನ್ನೊಂದು ವರ್ಷದ ಹುಡುಗನಾಗಿದ್ದಾಗಲೇ, ಗ್ಯಾಸ್ಕಾಯಿನ್ ಎಂಬ ವಿಮರ್ಶಕ ತನ್ನ 'ಸರ್ಟನ್ ನೋಟ್ಸ್ ಅಫ್ ಇನ್‌ಸ್ಟ್ರಕ್ಷನ್' ಎಂಬುದರಲ್ಲಿ ಸಾನೆಟ್ಟಿನ ಬಗ್ಗೆ ಹೇಳಿರುವ ಮಾತನ್ನು ಉಲ್ಲೇಖಿಸುವುದು ಸೂಕ್ತ:

ಕೆಲವರು ಎಲ್ಲಾ ಕವಿತೆಗಳನ್ನೂ (ಸಣ್ಣದಾದುದರಿಂದ) ಸಾನೆಟ್ಟುಗಳೆಂದು ಕರೆಯಬಹುದೆಂದು ಕೊಂಡಿವಾರೆ. ಈ ಪದವು 'ಸೊನೇರ್' (sonare, ಸಣ್ಣ ಧ್ವನಿ) ಎಂಬುದರಿಂದ ಹುಟ್ಟಿದುದು ಎಂಬುವೇ ಇದಕ್ಕೆ ಕಾರಣ. ಆದರೆ, ಹದಿನಾಲ್ಕು ಸಾಲಿದ್ದು ಪ್ರತಿಯೊಂದು ಸಾಲಿನಲ್ಲಿಯೂ ಹತ್ತು ಉಚ್ಚಾರಾಂಶಗಳಿರುವುದನ್ನು ಮಾತ್ರ ನಾನು ಸಾನೆಟ್ಟೆಂದು ಕರೆಯಲು ಒಪ್ಪುತ್ತೇನೆ. **ಮೊದಲ ಹನ್ನೆರಡು ಸಾಲುಗಳಲ್ಲಿ ನಾಲ್ಕು ನಾಲ್ಕು ಸಾಲುಗಳ ನುಡಿಗಳು, ಸಾಲುಬಿಟ್ಟು**

**ಸಾಲಿನಲ್ಲಿ ಪ್ರಾಸ ಹೊಂದಿವೆ. ಕೊನೆಯೆರಡು ಸಾಲುಗಳಲ್ಲಿ ಪ್ರಾಸ ಬಂದು ಕವಿತೆ ಮುಕ್ತಾಯವಾಗುತ್ತದೆ.** (ಒತ್ತು ನನ್ನದು.)

ಇಲ್ಲಿನ ವರ್ಣನೆ ಷೇಕ್‌ಸ್ಪೀರಿಯನ್ ಸಾನೆಟ್ ರೂಪದ ಸ್ಪಷ್ಟ ಚಿತ್ರಣ. ಆದರೆ ಈ ವಿಮರ್ಶೆ ಬಂದಾಗ ಷೇಕ್‌ಸ್ಪಿಯರ್ ಇನ್ನೂ ಹನ್ನೊಂದು ವರ್ಷದ ಹುಡುಗ.

ಹೀಗಾಗಿ ತನಗಿಂತ ಹಿಂದೆಯೇ ಬೇರೆಯವರು ಹೇಳಿದ ಕತೆಗಳನ್ನು, ಬೇರೆಯವರು ರಚಿಸಿದ ನಾಟಕಗಳನ್ನು ಕೈಗೆತ್ತಿಕೊಂಡು ತನ್ನ ಪ್ರತಿಭೆಯ ರಸಸ್ನಾನದಿಂದ ಅವುಗಳಿಗೆ ಹೊಸ ಜೀವ ಕೊಟ್ಟು ಅತ್ಯದ್ಭುತ ನಾಟಕಗಳನ್ನಾಗಿ ಮಾರ್ಪಡಿಸಿದ ಷೇಕ್‌ಸ್ಪಿಯರ್, ತಾನು ಚಿಕ್ಕವನಾಗಿದ್ದಾಗಲೇ ಜನಪ್ರಿಯತೆ ಗಳಿಸಿದ್ದ ಒಂದು ಸಾನೆಟ್ ರೂಪದಲ್ಲಿ ತನ್ನ ಕಾವ್ಯರಸವನ್ನು ಪಾಕವಿಳಿಸಿ, ಎರಕವಿಟ್ಟು, ಪರಿಪೂರ್ಣತೆಗೆ ಒಯ್ದು, ಅದಕ್ಕೆ ತನ್ನ ಹೆಸರು ಶಾಶ್ವತವಾಗಿ ಸೇರುವಂತೆ ಮಾಡಿದ.

## 3

ಷೇಕ್‌ಸ್ಪಿಯರ್ ಈ ಸಾನೆಟ್ಟುಗಳನ್ನು ಬರೆದ ಕಾಲದ ಬಗ್ಗೆ ತುಂಬಾ ಭಿನ್ನಾಭಿಪ್ರಾಯಗಳಿವೆ. ಷೇಕ್‌ಸ್ಪಿಯರರ ಬಗ್ಗೆ ಖಚಿತವಾದ ವಿಷಯಗಳು — ಆ ಕಾಲದಲ್ಲಿ ಷೇಕ್‌ಸ್ಪಿಯರರ ಹೆಸರಿನ ಉಲ್ಲೇಖವಿರುವ ಖಚಿತವಾದ ಸಾಕ್ಷ್ಯಗಳು — ಅತ್ಯಲ್ಪ. ಷೇಕ್‌ಸ್ಪಿಯರರ ಅಸ್ತಿತ್ವದ ಬಗ್ಗೆಯೇ ಅನುಮಾನಪಡಲು ಇದೂ ಮುಖ್ಯ ಕಾರಣವೆನ್ನಬಹುದು. ಹೇಗಾದರೂ ಷೇಕ್‌ಸ್ಪಿಯರರ ಸಾನೆಟ್ಟುಗಳ ಬಗ್ಗೆ ನಮಗೆ ನಿಷ್ಕೃಷ್ಟವಾದ ಕೆಲವು ಉಲ್ಲೇಖಗಳಿವೆ. 1598ರಲ್ಲಿ ಕೇಂಬ್ರಿಜಿನ ಅಧ್ಯಾಪಕ ಫ್ರಾನ್ಸಿಸ್ ಮಿಯರ್ಸ್ 'ಪಲ್ಲಾಡಿಸ್ ಟೇಮಿಯ, ವಿಟ್ಸ್ ಟ್ರೆಷರಿ'(ಪಲ್ಲಾಡಿಸ್ ಟೇಮಿಯ, ಕವಿಗಳ ಸಂಪತ್ತು) ಎಂಬ ಪುಸ್ತಕವನ್ನು ಪ್ರಕಟಿಸಿದ. ಅದರಲ್ಲಿ ಷೇಕ್‌ಸ್ಪಿಯರರ ಬಗ್ಗೆ ಈ ಉಲ್ಲೇಖವಿದೆ: "ಯೂಫೋರ್ಬಸನ ಆತ್ಮವು ಪೈಥಾಗೊರಾಸಿನಲ್ಲಿ ಪುನರುಜ್ಜೀವಿಸಿದೆಯೆಂದು ನಂಬಿದ್ದಂತೆಯೇ, ಓವಿಡನ ಸವಿಯಾದ ಪ್ರತಿಭಾವಂತ ಆತ್ಮವು ಮಧುಸ್ವನದ ಜೇನು ಮಾತಿನ ಷೇಕ್‌ಸ್ಪಿಯರರನಲ್ಲಿ ಜೀವಿಸಿದೆ. ಆತನ 'ವೀನಸ್ ಅಂಡ್ ಆ್ಯಡೋನಿಸ್', 'ಲೂಕ್ರೀಸ್' ಮತ್ತು ಆಪ್ತಮಿತ್ರರ ಬಳಿಯಲ್ಲಿರುವ ಅವನ ಸವಿಯಾದ ಸಾನೆಟ್ಟುಗಳನ್ನು ನೋಡಿ" ಎಂದು ಹೇಳಿದಾನೆ. ಅದೇ ಪುಸ್ತಕದಲ್ಲಿಯೇ ಮತ್ತೊಂದು ಕಡೆ ಷೇಕ್‌ಸ್ಪಿಯರ್ "ನಮ್ಮ ಕವಿಗಳಲ್ಲೆಲ್ಲ ಪ್ರೇಮದ ಅರಿವಿಗೆ ನಿಲುಕದ ರೀತಿನೀತಿಗಳ ಬಗ್ಗೆ ಗೋಳಿಡುವ, ದೂರುವ, ದುಃಖಿಸುವುದರಲ್ಲಿ ಅತಿ ಭಾವುಕ, ತೀವ್ರ ಸಂವೇದನೆಯುಳ್ಳ ಕವಿ" ಎಂದು ಕರೆದಿದಾನೆ. ಈ ಎರಡು ಮಾತುಗಳೂ 1598ರಲ್ಲಿ ಆಡಿದುವು. ಎಲಿಜಬೆತ್ ರಾಣಿಯ ಆಡಳಿತದ ಕಾಲದಲ್ಲಿ ಸಾನೆಟ್ ಬಹಳ ಪ್ರಚಾರದಲ್ಲಿತ್ತು, ಎಲ್ಲ ಕವಿಗಳೂ ಸಾನೆಟ್ಟುಗಳನ್ನು ಬರೆಯುತ್ತಿದ್ದರು. ಆದರೆ ಬರೆದ ಸಾನೆಟ್ಟುಗಳನ್ನೂ ಪದ್ಯಗಳನ್ನೂ ಅಚ್ಚು ಮಾಡುವುದು ಅಷ್ಟು ಸಾಮಾನ್ಯವಾಗಿರಲಿಲ್ಲ. ಬದಲಿಗೆ ಕವಿಗಳು ತಮ್ಮ ಸಾನೆಟ್ಟುಗಳ ಪ್ರತಿಗಳನ್ನು ಗೆಳೆಯರಿಗೆ, ಆಪ್ತಮಿತ್ರರಿಗೆ ಕೊಡುತ್ತಿದ್ದರು. ಈ ಪ್ರತಿಗಳು ಕೈಯಿಂದ ಕೈಗೆ, ವ್ಯಕ್ತಿಯಿಂದ ವ್ಯಕ್ತಿಗೆ ಸಾಗಿಹೋಗುತ್ತಿದ್ದುವು. ಕೆಲವರಂತೂ ಆ ಪದ್ಯಗಳು

ಬಹಳ ಮೆಚ್ಚುಗೆಯಾದರೆ ತಾವೇ ಪ್ರತಿ ಮಾಡಿಟ್ಟುಕೊಳ್ಳುತ್ತಿದ್ದರು, ಪ್ರತಿ ಮಾಡಿಸಿ ಬೇರೆಯವರಿಗೂ ಕಳಿಸಿಕೊಡುತ್ತಿದ್ದರು. ಸರ್ ಫಿಲಿಪ್ ಸಿಡ್ನಿಯ 'ಅಸ್ಟ್ರೊಫೆಲ್ ಅಂಡ್ ಸ್ಟೆಲ್ಲ' ಸಾನೆಟ್-ಕೂಟ, ಸ್ಪೆನ್ಸರನ 'ಅಮೊರೆಟ್ಟಿ' ಸಾನೆಟ್ಟುಗಳು, ಸ್ಯಾಮ್ಯುಯಲ್ ಡೇನಿಯಲ್ ಬರೆದ 'ಡೀಲಿಯಾ' ಸಾನೆಟ್-ಕೂಟ—ಇವೆಲ್ಲವೂ ಹೀಗೆಯೇ ಪ್ರಚಾರವಾದುವು. ಹೀಗೆ ಕೈಯಿಂದ ಕೈಗೆ ಸಾಗುತ್ತಿದ್ದ ಕೃತಿಗಳು ಕೆಲವರ ಕೈಗೆ ಬಿದ್ದಾಗ ಅವರು ಅವುಗಳನ್ನು ಕಳ್ಳತನದಿಂದ ಪ್ರಕಟಿಸುತ್ತಿದ್ದುದು ಸಾಮಾನ್ಯವಾಗಿತ್ತು. 1591ರಲ್ಲಿ ಸಿಡ್ನಿಯ 'ಅಸ್ಟ್ರೊಫೆಲ್ ಅಂಡ್ ಸ್ಟೆಲ್ಲ' ಸಾನೆಟ್-ಕೂಟ ಹೀಗೆ ಕಳ್ಳತನದಲ್ಲಿ ಪ್ರಕಟವಾಯಿತು. ಸಾನೆಟ್ ಬರೆಯುವುದೊಂದು ಚಟ, ಫ್ಯಾಶನ್ ಆಗಿ 1600ರ ವೇಳೆಗೆ ಈ ಹೊಸ ಚಟವೂ ಸತ್ತುಹೋಯಿತು. ಅಂತೂ ಇಷ್ಟು ಮಾತ್ರ ನಿಶ್ಚಯ: ಮಿಯರ್ಸನ ಉಲ್ಲೇಖದ ಸಾಕ್ಷ್ಯದಂತೆ ಷೇಕ್ಸ್ಪಿಯರನ ಸಾನೆಟ್ಟುಗಳು ಆಗಲೇ ತುಂಬಾ ಜನರ ಕೈ ಹಾದಿರಬೇಕು. ಅದಕ್ಕೆ ಪೋಷಕವೆನ್ನುವಂತೆ 1599ರಲ್ಲಿ 'ದಿ ಪ್ಯಾಷನೇಟ್ ಪಿಲ್‌ಗ್ರಿಮ್' ಎಂಬ ಪುಸ್ತಕವನ್ನು ವಿಲಿಯಂ ಜ್ಯಾಗರ್ಡ್ ಪ್ರಕಟಿಸಿದ—ಇದೂ ಕದ್ದು ಪ್ರಕಟಿಸಿದ್ದೇ! ಇದರಲ್ಲಿ ಷೇಕ್ಸ್ಪಿಯರನ CXXXVIIIನೆಯ ಮತ್ತು CXVIVನೆಯ ಸಾನೆಟ್ಟುಗಳೂ, 'ಲವ್ಸ್ ಲೇಬರ್ಸ್ ಲಾಸ್ಟ್' ನಾಟಕದ ಕೆಲಭಾಗಗಳೂ ಇವೆ. ಅನಂತರ ಷೇಕ್ಸ್ಪಿಯರ್ ಇನ್ನೂ ಬದುಕಿದ್ದು ನಾಟಕಗಳನ್ನು ಬರೆಯುತ್ತಿದ್ದ ಕಾಲದಲ್ಲಿಯೇ, ಥಾಮಸ್ ಥಾರ್ಪ್ ಎಂಬ ಪ್ರಕಾಶಕ ಸರ್ಕಾರದ ಸ್ಟೇಷನರ್ಸ್ ಹಾಲ್ (ರಿಜಿಸ್ಟರ್ ಮಾಡುವ ಕಚೇರಿ) ನಲ್ಲಿ 1609ರ ಮೇ 20ನೆಯ ತಾರೀಕು ಷೇಕ್ಸ್ಪಿಯರನ ಸಾನೆಟ್ಟುಗಳನ್ನು ರಿಜಿಸ್ಟರ್ ಮಾಡಿಸಿ, ಪ್ರಕಟಣೆಗೆ ಲೈಸೆನ್ಸ್ (ಪರವಾನಗಿ) ಪಡೆದ. ಮತ್ತೆ 1640ರ ತನಕ ಸಾನೆಟ್ಟುಗಳ ಪುಸ್ತಕ ಮುದ್ರಣವಾದಂತೆ ಕಾಣುವುದಿಲ್ಲ.

ಈ ಅಂಶಗಳನ್ನು ಪರಿಗಣಿಸಿದರೆ 1598ಕ್ಕೆ ಮೊದಲೇ, ಪ್ರಾಯಶಃ ತುಂಬಾ ಮೊದಲೇ, ಷೇಕ್ಸ್ಪಿಯರ್ ತನ್ನ ಸಾನೆಟ್ಟುಗಳನ್ನು ಬರೆಯುತ್ತಿದ್ದಿರಬೇಕು. ಎಲ್ಲವನ್ನು ಅಲ್ಲದಿದ್ದರೂ, ಭಾಗಶಃ ಬಹುಭಾಗವನ್ನು ಬರೆದು ಮುಗಿಸಿದ್ದಿರಬೇಕು ಎಂದು ನಂಬುವುದು ಸಾಧ್ಯ. ಷೇಕ್ಸ್ಪಿಯರನ ಸಾನೆಟ್ಟುಗಳ ರಚನೆಯ ಕಾಲದ ಬಗ್ಗೆ ಅವನ ಬಗ್ಗೆ ಸಂಶೋಧನೆ ನಡೆಸಿ ಪಾಂಡಿತ್ಯ ಗಳಿಸಿದ ವಿದ್ವಾಂಸರ ಅಭಿಪ್ರಾಯ ವಿಧವಿಧವಾಗಿವೆ. ಆ ಸಾನೆಟ್ಟುಗಳಲ್ಲಿರುವ ಆಂತರಿಕ ಸಾಕ್ಷ್ಯದ ರೀತಿಯಾಗಿಯೇ ಪ್ರತಿಯೊಬ್ಬರೂ ತಮ್ಮ ಕಾಲವನ್ನು ನಿರ್ಣಯಿಸಿದ್ದಾರೆ. ನಾಟಕಗೃಹಗಳು ಪ್ಲೇಗಿನ ಕಾರಣವಾಗಿ ಮುಚ್ಚಿದ್ದ 1592-4ರ ನಡುವೆ ಈ ಸಾನೆಟ್ಟುಗಳ ರಚನೆಯಾಯಿತೆಂದು ಡೋವರ್ ವಿಲ್ಸನ್, ಚೇಂಬರ್ಸ್, ಮರ್ರಿ ಮುಂತಾದವರು ಅಭಿಪ್ರಾಯಪಟ್ಟರೆ ರಾಲಿನ್ಸ್ ಮುಂತಾದವರು 1593ರ ಜೂನ್‌ನಿಂದ ಆರಂಭಿಸಿ '99ರ ಜೂನ್ ವೇಳೆಗೆ ಅವುಗಳ ರಚನೆಯಾಯಿತೆಂದು ಸೂಚಿಸಿದ್ದಾರೆ. ಸ್ಯಾಮ್ಯುಯಲ್ ಬಟ್ಲರನ ಊಹೆಯಂತೆ 1585ರಿಂದ '88ರೊಳಗೆ, ಎಂದರೆ ಷೇಕ್ಸ್ಪಿಯರ್ 21ರಿಂದ 24 ವಯಸ್ಸಿನವನಿದ್ದಾಗಲೇ, ಈ ಸಾನೆಟ್ಟುಗಳನ್ನು ಬರೆದು ಮುಗಿಸಿರಬೇಕು. ಡಾ|| ಲೆಸ್ಲಿ ಹಾಟ್ಸನ್ ಒಂದೆರಡು ಸಾನೆಟ್ಟುಗಳ ಆಧಾರದ ಮೇಲೆ 1588ನೆಯ ವರ್ಷವೇ ಈ ಸಾನೆಟ್ಟುಗಳ ರಚನೆಯಾಯಿತೆಂದು ಸಾಧಿಸಿದಾನೆ. ಈ ರೀತಿಯ ಅಭಿಪ್ರಾಯಗಳ ಜೊತೆಗೆ ಷೇಕ್-

ಸ್ಪಿಯರ್ ಎಂಬ ಹೆಸರು ಗುಪ್ತನಾಮವಾಗಿತ್ತು, ಅದನ್ನು ಬರೆದವನು ಬೇಕನ್ ಎಂದು ಬಿ. ಜಿ. ಥಿಯೊಬಾಲ್ಡ್, ಕ್ರಿಸ್ಟಫರ್ ಮಾರ್ಲೊವಿನ ಕೃತಿಗಳಿಗೆ ಷೇಕ್ಸ್‌ಪಿಯರನ ಹೆಸರು ತಗುಲಿಸಿತ್ತು ಎಂದು ಕ್ಯಾಲ್ವಿನ್ ಹಾಫ್‌ಮನ್, ಆಕ್ಸ್‌ಫರ್ಡಿನ ಅರ್ಲ್ ಬರೆದುದಕ್ಕೆ ಷೇಕ್ಸ್‌ಪಿಯರನ ಅಂಕಿತ ಹಾಕಿದನೆಂದು ನಂಬುವ ಡಗ್ಲಸ್ ಮುಂತಾದ ಸಂಶೋಧಕರು ಪ್ರತಿಯೊಬ್ಬರೂ ತಮ್ಮ ತಮ್ಮ ಪೂರ್ವಾಭಿಪ್ರಾಯಕ್ಕೆ ತಕ್ಕ ಕಾಲಾವಧಿಯನ್ನು ಸಾನೆಟ್ಟುಗಳ ರಚನೆಯ ಬಗ್ಗೆ ಸೂಚಿಸಿದಾರೆ. ಆದರೆ ಖಚಿತವಾಗಿ ನಮಗೆ ಗೊತ್ತಿರುವುದು ಇವೆರಡು ತಾರೀಕುಗಳು : 1598ರಲ್ಲಿ ಮಿಯರ್ಸನ ಪುಸ್ತಕದ ಉಲ್ಲೇಖ ಮತ್ತು 1609ರಲ್ಲಿ ಪ್ರಕಟಣೆ. ಇವೆರಡೇ ಖಚಿತವಾಗಿ ತಿಳಿದಿರುವ ತಾರೀಕುಗಳು !

CVIIನೆಯ ಸಾನೆಟ್ಟಿನ ಬಗ್ಗೆ ಅರ್ಥಕಲ್ಪನೆ ವಿಚಿತ್ರ ಊಹೆಗಳಿಗೆ ಅವಕಾಶ ಕೊಟ್ಟಿದೆ. "The mortal moon hath her eclipse endured," ಎಂಬ ಸಾಲಿಗೆ ಒಬ್ಬೊಬ್ಬರು ಒಂದೊಂದು ಅರ್ಥ ಕಲ್ಪಿಸಿದಾರೆ. 'ಮರ್ತ್ಯಲೋಕದ ಚಂದ್ರ' ಎಂಬ ಹೆಸರಿದ್ದ ಎಲಿಜಬೆತ್ ರಾಣಿಯು 1588ರಲ್ಲಿ 'ಸ್ಪ್ಯಾನಿಷ್ ಆರ್ಮಾಡ' (ಸ್ಪೇನಿನ ಹಡಗುಕೂಟ) ದ ದಾಳಿಯಿಂದ ಪಾರಾದುದನ್ನು ಇದು ಸೂಚಿಸುತ್ತದೆಂದು ಲೆಸ್ಲಿ ಹಾಟ್ಸನ್ನನ ಮತ. ಆದರೆ mortal ಎಂಬ ಪದಕ್ಕೆ 'ಭಯಂಕರ' ಎಂಬ ಅರ್ಥವೂ ಇದ್ದು mortal moon ಎಂಬುದು ಭಯಂಕರ ಆಪತ್ತನ್ನು ಇಂಗ್ಲಂಡಿಗೆ ಒದಗಿಸಿದ ಸ್ಪೇನಿನ ಯುದ್ಧನೌಕೆಗಳ ಕೂಟ ಅರ್ಧಚಂದ್ರಾಕಾರದಲ್ಲಿ ದಾಳಿ ನಡೆಸಿದುದರಿಂದ ಅದಕ್ಕೆ ಅನ್ವಯಿಸಬಹುದು. 1596ರಲ್ಲಿ ರಾಣಿಯು ಆರೋಗ್ಯ ಕೆಟ್ಟು ಸತ್ತು ಬದುಕಿದಂತೆ ಆಕೆ ಚೇತರಿಸಿಕೊಂಡುದಕ್ಕೆ ಈ ಸಾಲು ಅನ್ವಯಿಸುತ್ತದೆಂದು ಡಾ|| ಜಿ. ಬಿ. ಹ್ಯಾರಿಸನನ ಅಭಿಮತವಾದರೆ, 1599ಕ್ಕೇ ಅದು ಅನ್ವಯಿಸುವುದೆಂದು ಚೇಂಬರ್ಸ್ ಅಭಿಪ್ರಾಯಪಟ್ಟಿದಾನೆ. ಈ ಒಂದು ಉದಾಹರಣೆಯೇ ಸಾಕು, ಸಾನೆಟ್ಟುಗಳ ಕಾಲ-ನಿರ್ಣಯದ ಬಗ್ಗೆ ಆಗಿರುವ ಕೋಲಾಹಲದ ಒಂದು ಇಣಿಕುನೋಟ ಕೊಡಲು. ಅಂತೂ ಷೇಕ್ಸ್‌ಪಿಯರನ ಜೀವನದ ಬಗ್ಗೆ ನಮಗೆ ಸರಿಯಾದ ಅರಿವು ಇಲ್ಲದುದರಿಂದ ಈ ಬಗೆಯ ಊಹಾಪೋಹಗಳು ಸಾಮಾನ್ಯ.

## 4

ಷೇಕ್ಸ್‌ಪಿಯರಿನ ಬದುಕಿನ ಬಗ್ಗೆ ಹೆಚ್ಚಿಗೆ ತಿಳಿಯಲು ಅವಕಾಶವೇ ಇಲ್ಲವಾಗಿರುವುದು ಅವನ ಸಾನೆಟ್ಟುಗಳ ಬಗ್ಗೆಯೂ ಬೇರೆ ಬೇರೆ ಊಹೆಗಳು, ವಿಚಿತ್ರ ವಾದಗಳು ಏಳಲು ಅವಕಾಶವಾಗಿದೆ. ಮೊದಲ ಇಪ್ಪತ್ತು ಸಾನೆಟ್ಟುಗಳಲ್ಲಿ ಷೇಕ್ಸ್‌ಪಿಯರ್ ತನ್ನ ಸ್ನೇಹಿತ ಯುವಕನಿಗೆ ಮದುವೆಯಾಗೆಂದು ಬೋಧಿಸುತ್ತಾನೆ. ಈ ಯುವಕ ಸ್ನೇಹಿತನೇ ಸೌತ್ಯಾಂಪ್ಟನ್ನಿನ ಅರ್ಲನಾದ ಹೆನ್ರಿ ರಿಯೋಥಿಸ್ಲಿ ಎಂದು ವಿಮರ್ಶಕರಲ್ಲಿ ಹೆಚ್ಚು ಮಂದಿಯ ಅಭಿಪ್ರಾಯ. 'ವೀನಸ್ ಅಂಡ್ ಅ್ಯಡೋನಿಸ್', 'ಲೂಕ್ರೀಸ್' ಗ್ರಂಥಗಳನ್ನು ಷೇಕ್ಸ್‌ಪಿಯರ್ ಈತನಿಗೆ ಅರ್ಪಿಸಿದ. ಸೌತ್ಯಾಂಪ್ಟನ್ನಿನ ಅರ್ಲ್ ಯುವಕ,

ಚೆಲುವ, ಅವನಿಗೆ ಮದುವೆಯಾಗಿರಲಿಲ್ಲ. ಮದುವೆಯಾಗಲು ಬಲವಂತಪಡಿಸಲು ಷೇಕ್ಸ್ಪಿಯರನನ್ನು ಆತನ ತಾಯಿ ಒತ್ತಾಯಪಡಿಸಿದಳು. ಅದರ ಫಲವಾಗಿ ಮೊದಲ ಸಾನೆಟ್ಟುಗಳು ಬಂದುವೆಂದು ಪಂಡಿತರ ಅಭಿಪ್ರಾಯ. ಆ ಯುವಕನಿಗೆ ತನ್ನ ಮೇಲೆಯೇ ಅತಿಯಾದ ಪ್ರೀತಿಯಿದ್ದುದರಿಂದ ಹೆಣ್ಣಿನ ಮೇಲೆ ಪ್ರೀತಿ ಸಾಧ್ಯವಿರಲಿಲ್ಲ ಎನ್ನುವ ಮಾತೂ ಈ ಸಾನೆಟ್ಟುಗಳಲ್ಲಿ ಬರುತ್ತದೆ:

that thou none lov'st is most evident.

ನೀನು ಬೇರಾರನ್ನೂ ಪ್ರೀತಿಸುವುದಿಲ್ಲೆಂಬುದು ಅತಿಸ್ಪಷ್ಟ. —(ಸಾನೆಟ್ X).

ಮೊದಲು ಕೇವಲ ಔಪಚಾರಿಕವಾಗಿ ಆರಂಭವಾಗುವ ಈ ಮಾತುಗಳು, ಬರ-ಬರುತ್ತಾ ಷೇಕ್ಸ್ಪಿಯರನ ಆತ್ಮೀಯ ನುಡಿಗಳಾಗುತ್ತವೆ. ಸಾನೆಟ್ಟುಗಳಲ್ಲಿನ ಔಪ-ಚಾರಿಕತೆ ಹೋಗಿ ಆತ್ಮೀಯತೆ ಬೆಳೆದು, ಆಪ್ತತೆ, ಆತ್ಮಸಮರ್ಪಣೆ, ಗೆಳೆತನದ ಕಾವು ನೋವು ಇವೆಲ್ಲ ಮುಂದಿನ ಸಾನೆಟ್ಟುಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಸಾನೆಟ್ಟುಗಳಲ್ಲಿ ಷೇಕ್ಸ್ಪಿಯರನಿಗೆ ಆ ಸ್ನೇಹಿತನಲ್ಲಿದ್ದ ಅಪಾರಪ್ರೇಮ ವ್ಯಕ್ತವಾಗುತ್ತದೆ. ಆ ಸಾನೆಟ್ಟುಗಳಲ್ಲಿಯೇ ಸ್ನೇಹಿತ ಷೇಕ್ಸ್ಪಿಯರನ ಪ್ರೇಯಸಿಯನ್ನು ವಶಪಡಿಸಿಕೊಂಡು ಆತನಿಗೆ ಮಾನಸಿಕವಾದ ಚಿತ್ರಹಿಂಸೆ ಕೊಟ್ಟುದು, ಷೇಕ್ಸ್ಪಿಯರನ ಮನಸ್ಸು ವಿಲ-ವಿಲನೆ ಒದ್ದಾಡಿದುದು, ತನಗೆ ಕೈಕೊಟ್ಟ 'ಕಪ್ಪು ಹೆಣ್ಣು' (The Dark Lady) ಹೇಗೇ ಇದ್ದರೂ, ತಾನು ಅವಳ ದಾಸನೆನ್ನುವ ಭಾವನೆ ಇವೆಲ್ಲ ಉತ್ಕಟ ಭಾವೋದ್ರೇಕ ದಲ್ಲಿಯೇ ಸಾನೆಟ್ಟುಗಳಲ್ಲಿ ಕಾಣಿಸಿಕೊಂಡಿವೆ. ಔಪಚಾರಿಕವಾಗಿ ಆರಂಭವಾದ ಸಾನೆಟ್ಟುಗಳ ಕೂಟ ಷೇಕ್ಸ್ಪಿಯರನ ಹೃದಯದ ಒಂದೊಂದು ನೆಲೆಯನ್ನೂ ತೋರಿಸುವ ಭೂಪಟವಾಗುತ್ತದೆ. ಅವುಗಳನ್ನು ಈ ಪುಟ್ಟ ಲೇಖನದಲ್ಲಿ ಸೂಚಿಸುವುದು ಸೂಕ್ತವೂ ಅಲ್ಲ, ಸಾಧ್ಯವೂ ಇಲ್ಲ. ಅವುಗಳನ್ನು ಓದಿದರೇ ಅವುಗಳ ಕಾವು ತಟ್ಟು ವುದು ಸಾಧ್ಯ ; ಷೇಕ್ಸ್ಪಿಯರನ ವ್ಯಕ್ತಿತ್ವದ ಒಂದು ಪದರ ಕಾಣುವುದು ಸಾಧ್ಯ. ಇಲ್ಲಿಯೂ ನಾವು ನೂರಾರು ಬಗೆಯ ಸಾನೆಟ್ ಕಥೆಗಳನ್ನು ಕೇಳಲು ಸಿದ್ಧರಾಗಿರಬೇಕು. ಆದರೂ ಇಷ್ಟಂತೂ ನಿಶ್ಚಯ. "With this same key Shakespeare unlocked his heart" (ಈ ಬೀಗದಕೈಯಿಂದ ಷೇಕ್ಸ್ಪಿಯರ್ ತನ್ನ ಹೃದಯದ ಬೀಗ ತೆರೆದಿಟ್ಟ) ಎಂದು ವರ್ಡ್ಸ್ವರ್ತ್ ಹೇಳಿದುದು ಬಹುಮಟ್ಟಿಗೆ ನಿಜ. ಆದರೆ ಅರಿಯುವ ಮನಸ್ಸು, ಸಂವೇದನೆಯುಳ್ಳ ಆತ್ಮ ಇವು ಬೇಕಲ್ಲ ಈ ಷೇಕ್ಸ್ಪಿಯರನ ಹೃದಯವನ್ನು ಅರಿಯಲು !

ಷೆಲ್ಲಿ ಕವಿಯು ತನ್ನ 'ಎಪಿಸೈಕಿಡಿಯಾನ್‌ಗೆ ಅಭ್ಯಾಸ'ವೆಂದು ಬರೆದಿಟ್ಟು ಕೊಂಡ ಟಿಪ್ಪಣಿಯಲ್ಲಿ ಹೇಳಿದ ಈ ಮಾತು ಷೇಕ್ಸ್ಪಿಯರನಿಗೆ, ಷೇಕ್ಸ್ಪಿಯರನ ಸಾನೆಟ್ಟುಗಳ ಹಿರಿಮೆಗೆ ಮತ್ತೊಬ್ಬ ಹಿರಿಯ ಸಂವೇದನೆಯ ಕವಿ ಸಲ್ಲಿಸಿದ ನಮಸ್ಕಾರ ವೆನ್ನಬಹುದು :

If any should be curious to discover
Whether to you I am a friend or lover,
Let them read Shakespeare's sonnets, taking thence
A whetstone for their dull intelligence.

ನಾನು ನಿನಗೆ ಸ್ನೇಹಿತನೋ ಪ್ರೇಮಿಯೋ ಎನ್ನುವ ಅನುಮಾನವುಳ್ಳವರು ಷೇಕ್ಸ್ಪಿಯರನ ಸಾನೆಟ್ಟುಗಳನ್ನು ಓದಲಿ. ಅವರ ಮೊಂಡುಹಿಡಿದ ಅರಿವಿಗೆ ಅದೊಂದು ಚೂಪುಗೊಳಿಸುವ ಸಾಣೆಗಲ್ಲಾಗುತ್ತದೆ.

5

ಷೇಕ್ಸ್ಪಿಯರನ ಸಾನೆಟ್ಟುಗಳಲ್ಲಿಯೇ ಇರುವ ಸ್ನೇಹಿತ, ಅವನ ಆಶ್ರಯವನ್ನು ಸಂಪಾದಿಸಿಕೊಂಡು ಷೇಕ್ಸ್ಪಿಯರನನ್ನೇ ಹೊರದೂಡಿದ ಮತ್ತೊಬ್ಬ ಕವಿ, ಷೇಕ್-ಸ್ಪಿಯರನ 'ಕೃಷ್ಣಪ್ರೇಯಸಿ' (The Dark Lady), ಅವಳೂ ಸ್ನೇಹಿತನೂ ಸೇರಿ ಷೇಕ್ಸ್ಪಿಯರನಿಗೆ ದ್ರೋಹ ಬಗೆದುದು, ಷೇಕ್ಸ್ಪಿಯರನ ಹೃದಯದಲ್ಲಾದ ಗಾಯ—ಇವೆಲ್ಲವೂ ರಹಸ್ಯದಲ್ಲೇ ಅಡಗಿವೆ. ಈ ವ್ಯಕ್ತಿಗಳು ಇಂಥವರೇ ಎಂದು ಬೊಟ್ಟಿಟ್ಟು ಹೇಳುವುದು ಸಾಧ್ಯವೇ ಆಗಿಲ್ಲ. ಈ ಅಯೋಮಯ ರಹಸ್ಯ ಸಾಲದೆನ್ನುವಂತೆ, ಪ್ರಕಾಶಕ ಥಾಮಸ್ ಥಾರ್ಪ್ ಇನ್ನಷ್ಟು ರಹಸ್ಯ ತುಂಬುವಂತೆ ಸಾನೆಟ್ ಪುಸ್ತಕವನ್ನು ಅರ್ಪಣೆ ಮಾಡಿದ. ಆ ಅರ್ಪಣೆಯ ಒಕ್ಕಣೆಯು ಬೇರೆ ಬೇರೆ ಅರ್ಥಕ್ಕೆ ಎಡೆಕೊಡುವಂತಿದ್ದು ಎಲ್ಲರೂ ತಮತಮಗೆ ಬೇಕಾದ ರೀತಿಯಲ್ಲಿ ವ್ಯಾಖ್ಯಾನ ಮಾಡಿಕೊಳ್ಳಲು ಸಾಧ್ಯವಾಗಿದೆ. ಜೊತೆಗೆ ಅರ್ಪಣೆ ಮಾಡಿರುವುದು 'Mr. W. H.'ಗೆ. ಈ W. H. ಯಾರೆಂಬುದೇ ದೊಡ್ಡ ವಿವಾದಕ್ಕೆ ಕಾರಣವಾಗಿಹೋಗಿದೆ. ಅದು ಹೆನ್ರಿ ರಿಯೋಥಿಸ್ಲಿಯ ಹೆಸರಿನ ಎರಡು ಮೊದಲಕ್ಷರಗಳನ್ನು ಅದಲುಬದಲು ಮಾಡಿದ್ದಾನೆ, ಗುರುತು ತಿಳಿದೂ ತಿಳಿಯದಂತೆ ಎಂದು ಅವರ ವಾದ. ಮತ್ತೊಂದು ತಂಡದವರು ಪೆಂಬ್ರೋಕಿನ ಅರ್ಲನಾದ ವಿಲಿಯಂ ಹರ್ಬರ್ಟ್‌ಗೆ ಇದು ಅರ್ಪಿತವೆನ್ನುತ್ತಾರೆ. ಇನ್ನೊಂದು ತಂಡದವರು 'W. H. ALL' ಎನ್ನುವುದು ವಿಲಿಯಂ ಹಾಲ್, ಷೇಕ್ಸ್ಪಿಯರನ ಅಳಿಯನಿಗೇ ಅರ್ಪಿತವಾಗಿದೆಯೆಂದು ವಾದಿಸುತ್ತಾರೆ. ಕ್ಯಾಲ್ವಿನ್ ಹಾಫ್‌ಮನ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಷೇಕ್ಸ್ಪಿಯರ್ ಎನ್ನುವುದು ಕ್ರಿಸ್ಟಫರ್ ಮಾರ್ಲೋ ಬರೆಯಲು ಉಪಯೋಗಿಸಿದ ಒಂದು ಮುಖವಾಡ, ತನ್ನ ಮಿತ್ರ ಮತ್ತು ಆಶ್ರಯ-ದಾತ ವಾಲ್ಸಿಂಗ್‌ಹ್ಯಾಮಿಗೆ ಇದನ್ನು ಅರ್ಪಿಸಿದಾನೆ, Walsing-Ham ಎಂಬುದರ ಸೂಚನೆಯೇ W. H. ಎಂದು ವಾದ ಹೂಡಿದಾನೆ. ಆದರೆ ಈ W. H. ಎಂಬುದು ನಿಜವಾಗಿ ಷೇಕ್ಸ್ಪಿಯರನ ಉದ್ದೇಶದ್ದೇ ಎಂದೇ ಅನುಮಾನ ಬರುತ್ತದೆ. ಪ್ರಕಾಶಕ ತನಗೆ ಹಸ್ತಪ್ರತಿ ತಂದೊದಗಿಸಿದ ಯಾರಿಗೋ ಕೃತಜ್ಞತೆ ಸೂಚಿಸಲು ಹೀಗೆ ಅರ್ಪಣೆಯನ್ನೇಕೆ ಮಾಡಿರಬಾರದು? ಅದೂ ಒಂದು ವಾದ. ಅಂತೂ ಅಯೋಮಯವಾಗಿ ರಹಸ್ಯಮಯವಾಗಿಯೇ ಉಳಿದಿವೆ ಈ ಎಲ್ಲ ಸಮಸ್ಯೆಗಳು.

ಆದರೂ ಒಂದು ಮಾತು ಹೇಳಿ ಈ ನನ್ನ ಪುಟ್ಟ ಲೇಖನವನ್ನು ಮುಗಿಸುತ್ತೇನೆ. ಷೇಕ್ಸ್ಪಿಯರನ ನಾಟಕಗಳಲ್ಲಿ ಯಾವ ಪ್ರತಿಭೆ ಕಾಣುವುದೋ, ಆ ಪ್ರತಿಭೆಯ ವೈಯಕ್ತಿಕ ಮುಖ ಈ ಸಾನೆಟ್ಟುಗಳಲ್ಲಿ ಕಾಣುವುದಂತೂ ನಿಶ್ಚಯ. ಷೇಕ್ಸ್ಪಿಯರನನ್ನು ಅರ್ಥಮಾಡಿಕೊಳ್ಳಲು, ಅದಕ್ಕಿಂತ ಹೆಚ್ಚಾಗಿ ಅನುಭವ ಮಾಡಿಕೊಳ್ಳಲು,

ಅವನ ಸಾನೆಟ್ಟುಗಳು ಬಹು ಆತ್ಮೀಯವಾದುವು ಎಂದು ಅವುಗಳ ಸಂಪರ್ಕ ಪಡೆದ ಯಾರಿಗಾದರೂ ಅನ್ನಿಸುತ್ತದೆ. ಮಹಾಕವಿಯೊಬ್ಬನನ್ನು ಅರಿತುಕೊಳ್ಳಲು ಆಗದಿದ್ದರೂ, ಸಂವೇದನೆಯ ಮೂಲಕ ಅನುಭವಕ್ಕೆ ತಾಕಿಸಿಕೊಳ್ಳುವಷ್ಟನ್ನಾದರೂ ಮಾಡಬಹುದು, ಷೇಕ್ಸ್ಪಿಯರನ ಸಾನೆಟ್ಟುಗಳನ್ನು ಓದಿ.

### ಮುಖ್ಯ ಆಕರಗಳು

1. *Shakespeare*, J. M. Murry.
2. *Shakespeare's Sonnets*, Edited by Brooke.
3. ,, ,, , Edited by Poole.
4. ,, ,, , Edited by Seymoure-Smith.
5. ,, ,, , Edited by Edward Dowden.
6. *Shakespeare's Sonnets Dated*, Leslie Hotson.
7. *The Man Who was Shakespeare*, Calvin Hoffman.
8. *The Shakespeare Claimants*, H. N. Gibson.
9. *Notes on Shakespeare's Sonnets*, Edith Sitwell.
10. *Early Italian Literature*, Vol. I, Ernesto Guillo.
11. *Life of William Shakespeare*, Sidney Lee.





# ಷೇಕ್ಸ್ಪಿಯರನ ನಾಟಕಸಾಹಿತ್ಯದಲ್ಲಿ ಪೂರ್ಣಸತ್ಯ-ನಿರೂಪಣೆ

**ಕೆ. ನರಸಿಂಹಮೂರ್ತಿ**



ಷೇಕ್ಸ್ಪಿಯರನ ನಾಟಕಸಾಹಿತ್ಯದ ವೈವಿಧ್ಯ ಅದ್ಭುತ. ಸಾಫೊಕ್ಲೀಸನ ರುದ್ರನಾಟಕಗಳಿಗೆ ಸಮನಾದ ರುದ್ರನಾಟಕಗಳನ್ನೂ ಅರಿಸ್ಟಾಫನೀಸನ ನಗೆನಾಟಕಗಳಿಗೆ ಸಮನಾದ ನಗೆನಾಟಕಗಳನ್ನೂ ಜೊತೆಗೆ ಐತಿಹಾಸಿಕ ಮತ್ತು ರೋಮಾಂಚಕ ಸನ್ನಿವೇಶಗಳುಳ್ಳ ನಾಟಕಗಳನ್ನೂ ಒಬ್ಬನೇ ರಚಿಸಿರುವ ಷೇಕ್ಸ್ಪಿಯರನ ಪ್ರತಿಭೆಯ ಬಹುಮುಖತೆ ವಿಸ್ಮಯಕಾರಿ. 'ನಾಲ್ಕನೆ ಹೆನ್ರಿ', 'ಆ್ಯಸ್ ಯು ಲೈಕ್ ಇಟ್', 'ಕಿಂಗ್ ಲಿಯರ್' ಮತ್ತು 'ದಿ ಟೆಂಪೆಸ್ಟ್'—ಒಂದೊಂದೂ ಒಂದೊಂದು ಬಗೆಯ ಸಿದ್ಧಿ. ಆದರೆ ನಿರೀಕ್ಷಿಸ ಬಹುದಾದಂತೆ, ಈ ವೈವಿಧ್ಯದ ಹಿಂದೆ ಏಕಸೂತ್ರತೆ ಮಿಡಿಯುತ್ತದೆ. ಷೇಕ್ಸ್ಪಿಯರನ ನಾಟಕಗಳು ಸ್ವಯಂಪೂರ್ಣವಾಗಿ ವಿವಿಧ ಕಲಾಕೃತಿಗಳಾಗಿರುವಂತೆ ಒಟ್ಟಾರೆ ಕೂಡಿ ಸಮಗ್ರವಾದ ಮಹಾಕಾವ್ಯವಾಗುತ್ತದೆ. ಅವುಗಳ ಉದ್ದಕ್ಕೂ ಅವನ ಕಲೆ ಬೆಳೆಯುತ್ತದೆ, ಅವನ ಜೀವನದ ತಿಳಿವಳಿಕೆ ಬಿತ್ತರಿಸುತ್ತದೆ. ವಸಂತ, ಶರತ್ಕಾಲಗಳನ್ನು ಕಾಳಿದಾಸ 'ಶಾಕುಂತಲ'ದಲ್ಲಿ ಒಮ್ಮೆಗೇ ಚಿತ್ರಿಸಿರುವನೆಂದು ಗಯಟೆ ನುಡಿದಿದ್ದಾನೆ. 'ಶಾಕುಂತಲ'ದ ಮೊದಲ ದೃಶ್ಯಗಳ ಶೃಂಗಾರ, ಹಾಸ್ಯ; ನಡುವಣ ರೌದ್ರ; ಅಂತ್ಯದ ಆಸ್ತಿರ್ವಚನೀಯ ಆನಂದ—ಇವು ರೂಪಿಸುವ ಸಮಗ್ರತೆ ಷೇಕ್ಸ್ಪಿಯರನ ನಾಟಕಚಕ್ರದಲ್ಲಿಯೂ ಕಾಣುತ್ತದೆ. ದಾಂತೆಯ 'ದಿ ಡಿವೈನ್ ಕಾಮೆಡಿ' ಎಂಬ ಮಹಾಕಾವ್ಯದೊಂದಿಗೆ ಷೇಕ್ಸ್ಪಿಯರನ ನಾಟಕಚಕ್ರವನ್ನು ಒಬ್ಬ ವಿಮರ್ಶಕ ಹೋಲಿಸಿ ಷೇಕ್-ಸ್ಪಿಯರನ ಒಂದೊಂದು ನಾಟಕವೂ ಮುಂದುವರಿಯುವ ಒಂದು ಕಾವ್ಯದ ಬೇರೆ ಬೇರೆ ಭಾಗವೆಂದು ಪರಿಗಣಿಸಬಹುದೆಂದು ಹೇಳುತ್ತಾನೆ. ಷೇಕ್ಸ್ಪಿಯರನ ನಾಟಕ-ಮಹಾಕಾವ್ಯದಲ್ಲಿ ಜೀವನದ ಬಗ್ಗೆ ಅವನು ಕಂಡ ಸತ್ಯದ ಪೂರ್ಣತೆ ಪ್ರತಿಬಿಂಬಿತವಾಗಿದೆ.

ಈ ಮಹಾನಾಟಕಕಾವ್ಯದ ಮುಖ್ಯವಸ್ತುಗಳಲ್ಲಿ ಒಂದೆಂದರೆ ಸಿಂಹಾಸನದ ದುರಾಕ್ರಮಣ. 'ಆ್ಯಸ್ ಯು ಲೈಕ್ ಇಟ್' ಎಂಬ ವಿನೋದನಾಟಕದಲ್ಲಿ ಹಿರಿಯ ಡ್ಯೂಕನನ್ನು ಕಾಡಿಗಟ್ಟಿ ಅವನ ತಮ್ಮ ಕಿರಿಯ ಡ್ಯೂಕ್ ದೊರೆಯಾಗುತ್ತಾನೆ.

ಅಣ್ಣನ ಮಗಳೂ ಸ್ವಲ್ಪ ಕಾಲವಾದ ಮೇಲೆ ಕಾಡಿಗೆ ಹೋಗುವಂತೆ ಆಜ್ಞೆಯಾಗುತ್ತದೆ. ಹಾಗೆಯೇ ನಾಡಿನ ಶ್ರೀಮಂತವಂಶವೊಂದರ ಒಬ್ಬ ಅಣ್ಣ ತನ್ನ ತಮ್ಮನನ್ನು ಕೀಳಾಗಿ ನಡೆಸಿಕೊಳ್ಳುತ್ತಾನೆ. ಈ ತಮ್ಮನೂ ಅದೇ ಕಾಡಿಗೆ ಬರುತ್ತಾನೆ. ಹಿರಿಯ ಡ್ಯೂಕನ ಮಗಳಿಗೂ ಇವನಿಗೂ ಪ್ರೇಮ ಬೆಳೆದು ನಾಟಕ ಸುಖಾಂತವಾಗುತ್ತದೆ. ಇದಕ್ಕೆ ಸಹಕಾರಿಯಾಗಿ ತಮ್ಮನ ಔದಾರ್ಯಕ್ಕೆ ಮನಸೋತ ಶ್ರೀಮಂತ ಅಣ್ಣ ಗುಣವಂತನಾಗುತ್ತಾನೆ ಮತ್ತು ಕಿರಿಯ ಡ್ಯೂಕ್ ಪಶ್ಚಾತ್ತಾಪಪಟ್ಟು ತಾನು ಕಾಡಿಗೆ ಹೊರಟು ಹಿರಿಯ ಡ್ಯೂಕಿಗೆ ರಾಜ್ಯವನ್ನು ಬಿಟ್ಟುಕೊಡುತ್ತಾನೆ. ಈರ್ಷ್ಯೆ ಮತ್ತು ದುರಾಕ್ರಮಣದ ವಸ್ತು ಈ ನಾಟಕದಲ್ಲಿ ವಾಸ್ತವಿಕವಾಗಿ ಚಿತ್ರಿತವಾಗದೆ ಕಾಲ್ಪನಿಕವಾಗಿದೆ ಎಂದು ಯಾರಿಗೂ ತೋರೀತು. ಕಾಡಿಗೆ ಹೋದ ಹಿರಿಯ ಡ್ಯೂಕ್ ತನ್ನ ಅನುಭವವನ್ನು ಹೀಗೆ ವರ್ಣಿಸುತ್ತಾನೆ :

> ಸನಾತನ ಸಂಪ್ರದಾಯದ ಈ ಜೀವನ
> ರಂಗುರಂಗಿನ ರಾಜವೈಭವಕ್ಕಿಂತದೆಷ್ಟೋ ಹಿತ !
> ಅಸೂಯಾಗ್ರಸ್ತ ರಾಜಸಭೆಗಿಂತ
> ಈ ಕಾಡುಗಳಲ್ಲಿ ಅಪಾಯದಿಂದ ನಾವು ಎಷ್ಟೋ ದೂರ !
> ಇಲ್ಲಿ ನಾವು ಅನುಭವಿಸುವುದು ಆದಮನಿಗಿತ್ತ ಶಿಕ್ಷೆ ಮಾತ್ರ—
> ಋತುಋತುಗಳ ಭೇದ : ಚಳಿಗಾಳಿಯ
> ಮಂಜುದಾಡೆಗಳು ಒರಟು ಬೈಗಳು
> ಶೈತ್ಯಕ್ಕೆ ಮೈ ಮುದುಡಿ ಮುರುಟುವೊಲು
> ಮೈಮೇಲೆ ಬೀಸಿ ಕಡಿಕಡಿದಾಗ
> ಮುಗುಳ್ನಗುವೆ, ನುಡಿವೆ :
> 'ಹೊಗಳಿಕೆಯಲ್ಲವಿದು : ಇಲ್ಲಿನೀ ಮಂತ್ರಿಗಳು
> ಮರ್ಮಕ್ಕೆ ತಾಗುವೊಲು ಮನಗಾಣಿಸುವರೆನಗೆ
> ನನ್ನ ನೈಜಸ್ವರೂಪವನು.'
> ಆಪತ್ತಿನ ಫಲವೂ ಮಧುರ.
> . . . . . .
> ಈ ಬದುಕ ಬದಲಿಸಲೊಲ್ಲೆ.

ಅವನ ಅನುಯಾಯಿಯೊಬ್ಬನು ಈ ಮಾತುಗಳ ಮೇಲೆ ಮಾಡುವ ವ್ಯಾಖ್ಯೆ ಇದು :

> ಮೊಂಡು ದೈವವನು
> ಇಂಥ ಸುಮಧುರ ಶಾಂತ ಶೈಲಿಯಲಿ
> ಭಾಷಾಂತರಿಸಬಲ್ಲ ಪ್ರಭು ಸುಖಿ !

ಈ ವ್ಯಾಖ್ಯೆಯಿಂದ ವನವಾಸವನ್ನು ಕುರಿತಾದ ಈ ದೃಷ್ಟಿಗೆ ಹಿರಿಯ ಡ್ಯೂಕನ ವ್ಯಕ್ತಿತ್ವದ ವಿಶಿಷ್ಟತೆಯಿಂದ ವಾಸ್ತವಿಕತೆ ಲಭಿಸುತ್ತದೆ. ಆದರೆ ದುರಾಕ್ರಮಣ, ದೇಶಭ್ರಷ್ಟತೆ, ವನವಾಸದಂತಹ ಈ ಅನುಭವಗಳ ಗಾಢತರ ಚಿತ್ರಣವನ್ನು ಕವಿ ಮುಂದಿನ ತನ್ನ ನಾಟಕಗಳಲ್ಲಿ—ವಿಶೇಷವಾಗಿ 'ಕಿಂಗ್ ಲಿಯರ್'ದಲ್ಲಿ—ಕೊಡುವುದನ್ನು ನೋಡುವಾಗ ಈ ಅಂಶ ಸ್ಪಷ್ಟವಾಗುವುದು. ತನ್ನ ಅಕೃತಜ್ಞ ಪುತ್ರಿಯರಿಂದ ರಾಜ್ಯ-ಭ್ರಷ್ಟನಾದ ಲಿಯರ್ ದೊರೆ ಬಯಲ ಬಿರುಗಾಳಿಗೆ ಸಿಕ್ಕಿ ಘೋರವಾಗಿ ಬವಣೆಪಡು-

ವಾಗಿನ ಅವನ ಈ ಮಾತುಗಳನ್ನು ಕೇಳಿ :

ಅಂತೆ ಓ ನೀನು
ಸರ್ವವನು ನಡುಗಿಸುವ ಗುಡುಗೆ, ಜಗದೀ ಸ್ಥೂಲ
ರುಂದ್ರವನು ಚಚ್ಚಿ ಚಪ್ಪಟೆಮಾಡು. ಪ್ರಕೃತಿಯವು
ಅಚ್ಚುಗಳ ಸೀಳು. ಅಕೃತಜ್ಞ ಮನುಜನ ಗೆಯ್ವ
ಎಲ್ಲ ಬೀಜವನು ಒಮ್ಮೆಗೆ ಚೆಲ್ಲು.
. . . . . . . .
ನಿಷ್ಕರುಣೆಗಳು
ಎಂದು, ಓ ಪಂಚಭೂತಗಳೆ, ನಿಮ್ಮಯ ಮೇಲೆ
ದೂರ ಹೇರೆನು ನಾನು. ರಾಜ್ಯವನು ಕೊಡಲಿಲ್ಲ
ನಾ ನಿಮಗೆ; ನಿಮ್ಮ, ಮಕ್ಕಳೆ, ಎಂದು ಕರೆದಿಲ್ಲ.
ನೀವೆನ್ನ ನೋಡಿಕೊಳಬೇಕೆಂಬ ಕತವಿಲ್ಲ.
. . . . . . . .
ಇಂತಿದ್ದು, ನಾ ನಿಮ್ಮ, ಅತಿ ನಿಂದ್ಯ ಪುತ್ರಿಯರು
ಇರುವರಿಗೆ ಜೊತೆಯಾಗಿ, ಇನಿತೊಂದು ಮುದಿಯಾದ
ನರೆತ ತಲೆಗೆ ವಿರುದ್ಧ, ನಿಮ್ಮ ಉನ್ನತಿಯಿಂದ
ಜನಿಸಿರುವ ಕದನಗಳ ಸೇರಿಸಿದ, ದಾಸ್ಯಪರ
ಸೇವಕರು ಎಂದು ಕರೆವೆನು. ಅಯ್ಯೊ ಅಯ್ಯೊ ಇದು
ಅತಿ ನಿಂದ್ಯ.
. . . . . . . .
ನನ್ನತುಮನದ
ಬಿರುಗಾಳಿ, ನನ್ನ ಕರಣಗಳಿಂದ, ಅವುಗಳಲಿ
ಬಡಿಯುತಿಹದಲ್ಲದಿನ್ನೆಲ್ಲ ಅನುಭೂತಿಯನು
ಕಳೆದಿಹುದು. ಮಕ್ಕಳ ಕೃತಘ್ನತೆ! ಇದು ಈ ಬಾಯ್
ತನಗೆ ಅನ್ನವ ಎತ್ತಿಕೊಟ್ಟತೆಂಬುದಕಾಗಿ
ಈ ಕೈಯ ಹರಿದಂತೆ ಅಲ್ಲ? ಆಗಲಿ ನಾನು
ತಳಮುಟ್ಟ ಶಿಕ್ಷೆ ಕೊಡುವೆನು. ಇಲ್ಲ. ನಾನಿನ್ನು
ಅಳೆನು. ಇಂತಹ ರಾತ್ರಿ ನನ್ನ ಹೊರಗಟ್ಟುವುದು!
ಸುರಿಯುತಿರು, ನಾನು ಸಹಿಸುವೆನು. ಇಂತಹ ರಾತ್ರಿ!
ಓ ರೀಗನ್, ಗಾನೆರಿಲ್, ಕರುಣೆ ನಿಮ್ಮಯ ತಂದೆ,
ಯಾರ ನಿರ್ವಂಚನೆಯ ಹೃದಯ ಎಲ್ಲವ ನಿಮಗೆ
ಕೊಟ್ಟತು, ಅವನ, — ಓ ಇದು ಹುಚ್ಚುತಪ ದಾರಿ,
ಅದನು ತೊರೆಯೋಣ.[1]

ಈ ಮಾತುಗಳಲ್ಲಿ ಹಿರಿಯ ಡ್ಯೂಕನ ಮಾತುಗಳಿಗಿಂತ ಅನುಭವದ ಗಾಢತರ ಅರ್ಥಗ್ರಹಣವೂ ಶೈಲಿಯ ಹೆಚ್ಚಿನ ನಾಟಕೀಯತೆಯೂ ಎದ್ದುಕಾಣುತ್ತವೆ. ಹೀಗೆಯೇ ಇಂಗ್ಲಿಷ್ ಮತ್ತು ರೋಮನ್ ಐತಿಹಾಸಿಕ ನಾಟಕಗಳಲ್ಲಿಯೂ 'ಹ್ಯಾಮ್ಲೆಟ್' ಮತ್ತು 'ಮೆಕ್‌ಬೆತ್' ರುದ್ರನಾಟಕಗಳಲ್ಲಿಯೂ ದುರಾಕ್ರಮಣದ ವಸ್ತುವಿನ ವಿಸ್ತಾರವಾದ,

[1] ಶ್ರೀ ಶ್ರೀನಿವಾಸರ ಭಾಷಾಂತರ, 'ಲಿಯರ್ ಮಹಾರಾಜ'ದಲ್ಲಿ.

ಆಳವಾದ ವಿಶ್ಲೇಷಣ-ಚಿತ್ರಣ ಕಾಣುತ್ತದೆ. ನಾಟಕಚಕ್ರದ ಕಡೆಯ 'ದಿ ಟೆಂಪೆಸ್ಟ್' ನಲ್ಲಿ, ಜ್ಞಾನಿ ದೊರೆ ಪ್ರಾಸ್ಪೆರೊ ತನ್ನನ್ನು ವಂಚಿಸಿ ಕಡಲಿಗೆ ಅಟ್ಟಿದ ತನ್ನ ಮಹತ್ವಾಕಾಂಕ್ಷಿ ತಮ್ಮನಿಂದ ರಾಜ್ಯವನ್ನು ಹಿಂದಕ್ಕೆ ಪಡೆದುಕೊಳ್ಳುತ್ತಾನೆ, ತನ್ನ ಮಾಯಾಶಕ್ತಿಯ ಪ್ರಭಾವದಿಂದ. ಆದರೆ ತಮ್ಮನ ಮನಸ್ಸಿನಲ್ಲಿ ಪಶ್ಚಾತ್ತಾಪ ಮೂಡಿ ಸಲು ಅವನಲ್ಲಿ ಶಕ್ತಿ ಸಾಲದಾಗುತ್ತದೆ. ಆದರೂ ಕ್ಷಮಿಸುತ್ತಾನೆ: 'ನೀನಮಾನುಷ, ಆದರೂ ಕ್ಷಮಿಸುವೆನು.' 'ಆ್ಯಸ್ ಯು ಲೈಕ್ ಇಟ್' ನಾಟಕದ ಹಿರಿಯ ಡ್ಯೂಕನೊಂದಿಗೆ ಲಿಯರ್ ದೊರೆಯನ್ನು ಹೋಲಿಸಿ ನೋಡಿದಂತೆ ಪ್ರಾಸ್ಪೆರೊವನ್ನು ಹೋಲಿಸಿ ನೋಡಿದರೆ ಈ ವಸ್ತುವಿನ ಪರಿಶೀಲನೆಯಲ್ಲಿ ಷೇಕ್ಸ್ಪಿಯರ್ ಸಾಧಿಸಿದ ಪ್ರಗತಿ ಅರಿವಾಗುವುದು.

ಷೇಕ್ಸ್ಪಿಯರನ ನಾಟಕಗಳಲ್ಲಿ ಜೀವನದ ಪ್ರತಿಯೊಂದು ಅನುಭವವನ್ನೂ ಅದರ ಎಲ್ಲಾ ಪರಿಗಳನ್ನೂ ಬಿಡಿಸಿ ಹೇಳುವ ಸಮಗ್ರತೆ ಕಾಣುತ್ತದೆ. ರಣಧೀರ ಐದನೆಯ ಹೆನ್ರಿ ತನ್ನ ಸೈನಿಕರನ್ನು ವೀರೋತ್ಸಾಹದಿಂದ ಹುರುಪೇರಿಸುವುದರ ಜೊತೆಗೆ ಯುದ್ಧ ದಲ್ಲಿ ಒದಗುವ ಸಾವುಗಳ ಪಾಪದ ಬಗ್ಗೆ ಚಿಂತಿಸುತ್ತಾನೆ. ಅತ್ತ ಅವನ ಕೌಮಾರ್ಯದ ವೃದ್ಧಮಿತ್ರ ಫಾಲ್ಸ್ಟಾಫ್ ಕೀರ್ತಿಗಾಗಿ ಪ್ರಾಣ ನೀಗಿಕೊಳ್ಳುವುದು ಅವಿವೇಕವೆಂದು ತಿಳಿಯುತ್ತಾನೆ. ಅಲ್ಲದೆ ಸೈನ್ಯಕ್ಕೆ ಜನರ ಜಮಾವಣೆ ಮಾಡುವುದರಲ್ಲಿ ಆದಷ್ಟು ಮೋಸಮಾಡಿ ಲಾಭಗಳಿಸಿಕೊಳ್ಳುತ್ತಾನೆ. 'ಜೂಲಿಯಸ್ ಸೀಸರ್' ನಾಟಕದಲ್ಲಿ ತನ್ನ ಸೈನ್ಯದ ಖರ್ಚಿಗಾಗಿ ಬ್ರೂಟಸ್ ಕ್ಯಾಷಿಯಸನನ್ನು ಬೇಡುವಾಗ ತನ್ನ ವಶಕ್ಕೆ ಬರುವ ಪ್ರದೇಶದ ಜನಸಾಮಾನ್ಯರಿಂದ ಬಲಾತ್ಕಾರವಾಗಿ ಹಣ ಒದಗಿಸಿಕೊಳ್ಳುವ ಕೆಲಸಕ್ಕೆ ತಾನು ಇಳಿಯಲಾರೆನೆಂದು ಕಾರಣ ಕೊಡುತ್ತಾನೆ. ಹೀಗೆ ಯುದ್ಧದ ಅನೇಕ ಮುಖಗಳ ಚಿತ್ರಣ ಈ ಮಹಾನಾಟಕಚಕ್ರದ ಉದ್ದಕ್ಕೂ ಬರುತ್ತದೆ.

ಶೈಲಿಯಲ್ಲಿ ಆಳವಾದ, ವೈವಿಧ್ಯಪೂರ್ಣವಾದ ಅನುಭವದ ಅಭಿವ್ಯಕ್ತಿಗೆ ಅವಶ್ಯಕ ವಾದ ಮಾರ್ಪಾಡುಗಳು ಪ್ರಗತಿಯನ್ನು ತರುತ್ತವೆ. ಷೇಕ್ಸ್ಪಿಯರನ ಸರಳ ರಗಳೆ, ಕವಿತೆಗೆ ಹೆಚ್ಚು ಸಹಜವಾದ ರೀತಿಯಿಂದ ಆರಂಭವಾಗಿ, ಗದ್ಯವನ್ನು ಜೊತೆಗೆ ಬಳಸಿ ಕೊಂಡು ಕ್ರಮೇಣ ನಾಟಕೀಯತೆಯ ಪರಮಾವಧಿಗೇರಿ, ಕಡೆಗೆ ಪ್ರತಿಮಾದೃಷ್ಟಿಯ ಗಾಂಭೀರ್ಯದ ಕಾವ್ಯಶೀಲತೆಯಲ್ಲಿ ಮೊದಲ ಲಹರಿಯನ್ನೂ ಅನಂತರದ ನಾಟಕೀಯತೆ ಯನ್ನೂ ತನ್ನೊಳಗೆ ಸಮರಸವಾಗಿ ಬೆರೆಸಿಕೊಳ್ಳುತ್ತದೆ. ಕೆಲವು ಉಪಮೆಗಳು ಹಲವು ನಾಟಕಗಳಲ್ಲಿ ಮಾರ್ಪಾಡುಗಳೊಂದಿಗೆ ಪುನರುಕ್ತವಾಗಿ ಗೂಢವಾದ ಪ್ರತಿಮೆಗಳಾಗಿ ಕಡೆಗೆ 'ದಿ ಟೆಂಪೆಸ್ಟ್' ನಾಟಕದಲ್ಲಿನ ಬಿರುಗಾಳಿಯಂತೆ ನಾಟಕದ ಪಾತ್ರವರ್ಗವೂ ಆಗು ತ್ತವೆ. ಷೇಕ್ಸ್ಪಿಯರನ ದೃಷ್ಟಿ ತನ್ನ ಕಲೆಯ ಒರೆಗಲ್ಲಿನಲ್ಲಿ ಒಂದೊಂದು ಅನುಭವ ವನ್ನೂ ಬರೆದು ತೋರಿಸುತ್ತಾ ಅಪರಂಜಿಯ ದರ್ಶನದೊಂದಿಗೆ ಅನುಭವದ ಉಳಿದ ಪದರಗಳನ್ನೂ ಮನಗಾಣಿಸುತ್ತದೆ. ಅವನ ಕುಂಚದಿಂದ ಜೀವನದ ಪೂರ್ಣಸ್ವರೂಪ ವರ್ಣಮಯವಾಗಿ ಹರಡಿಕೊಳ್ಳುತ್ತದೆ; ರಹಸ್ಯವಾದ ಸತ್ಯದ ಪೂರ್ಣ ಜೀವಂತ ಸ್ವರೂಪ ಕಣ್ಣಿಗೆ ಕಟ್ಟುತ್ತದೆ.



# ಶೇಕ್ಸ್ಪಿಯರನ ನಾಟಕಗಳಲ್ಲಿ ಅತಿಮಾನುಷತೆ

**ಹೇಮಂತ ಕುಲಕರ್ಣಿ**

## 1

ಶೇಕ್ಸ್ಪಿಯರನ ಸಂಪನ್ನವಾದ ನಾಟ್ಯಪ್ರಪಂಚದಲ್ಲಿ ಅವನು ರಚಿಸಿದ ಅತಿಮಾನುಷ ಸೃಷ್ಟಿಗೆ ಒಂದು ಮಹತ್ವದ ಸ್ಥಾನವಿದೆ. ಕಣ್ಣಿನ ಅಳವಿನಲ್ಲಿರುವ ವ್ಯಾವಹಾರಿಕ ಜಗತ್ತಿನ ಆಚೆಗೆ ಯಾವುದೋ ಒಂದು ಅಮೂರ್ತವಾದ ಶಕ್ತಿಯಿದೆ; ಅದನ್ನು ವಿಧಿಯೆಂತಲೊ, ದೈವವೆಂತಲೊ, ಅದೃಷ್ಟವೆಂತಲೊ ಅಥವಾ ಬೇರಾವ ಹೆಸರಿನಿಂದಲೊ ಕರೆಯಬಹುದು. ಈ ಶಕ್ತಿಗೂ, ಮಾನವೀ ಜೀವನದ ವಿವಿಧ ವ್ಯಾಪಾರಗಳಿಗೂ ಯಾವ ಸಂಬಂಧವಿದೆಯೆಂಬುದು ತತ್ವಜ್ಞನ ಒಂದು ಸನಾತನ ಪ್ರಶ್ನೆಯಾಗಿದೆ; ಪ್ರತಿಯೊಂದು ವ್ಯಕ್ತಿಯ ಜೀವನದಲ್ಲಿಯೂ ಇದೊಂದು ಮಹಾಸಮಸ್ಯೆಯಾಗಿ ತಲೆಯೆತ್ತಿ ನಿಲ್ಲುವದುಂಟು. ಇದರ ನಾಟಕೀಕರಣವೇ ಶೇಕ್ಸ್ಪಿಯರನ ಪ್ರತಿಭಾವಿಲಾಸದ ಒಂದು ಅತ್ಯುಚ್ಚವಾದ ಆವಿಷ್ಕಾರವಾಗಿದೆಯೆಂದು ಹೇಳಬಹುದು.

ಇಲ್ಲಿಯೇ ಬಹುಶಃ ನಾವು ಕಾವ್ಯ-ಧರ್ಮಗಳ ಸಮನ್ವಯವನ್ನು ಗುರುತಿಸಬಹುದು. ಶಿವಾಶಿವಗಳಲ್ಲಿ ನಡೆವ ಅನವರತವಾದ ಸಂಘರ್ಷವನ್ನೂ, ಅದನ್ನು ಪ್ರಚೋದಿಸುವ ಮಾನುಷ, ಅತಿಮಾನುಷ ಶಕ್ತಿವಿಶೇಷಗಳ ವಿವರಗಳನ್ನೂ ಸ್ಪಷ್ಟೀಕರಿಸಿ, ಅದರಿಂದ ವ್ಯಕ್ತವಾಗುವ ನೈತಿಕ ನೆಲೆಬೆಲೆಗಳನ್ನು ವಿಚಾರಿಸುವಂತೆ ಮನಸ್ಸನ್ನು ಉದ್ದೀಪಿಸಿ, ಉನ್ನತವಾದ ಪ್ರೇರಣೆಗಳು ಅಂತರಂಗದಲ್ಲಿ ನಾಟುವಂತೆ ಮಾಡುವ ಧರ್ಮದ ಕಾರ್ಯವನ್ನು ಕಾವ್ಯವು ಅನಿರೀಕ್ಷಿತವೆಂದೆಸಿಸಿದರೂ ಅನಿವಾರ್ಯವಾಗಿ ಮಾಡುತ್ತದೆ. ಶೇಕ್ಸ್ಪಿಯರನ ನಾಟಕಗಳಲ್ಲಿ ಮಾನವನನ್ನು ಎದುರಿಸುವ ಅತಿಮಾನುಷ ಶಕ್ತಿ ಅನೇಕ ರೂಪಗಳನ್ನೂ ಸಂಕೇತಗಳನ್ನೂ ತಾಳುತ್ತದೆ. ಅದು ಒಮ್ಮೆ ಸುದೈವವಾಗಿ, ಮತ್ತೊಮ್ಮೆ ದುರ್ದೈವವಾಗಿ ಮನಸ್ಸನ್ನು ವಿಚಲಿತಗೊಳಿಸುತ್ತದೆ; ಒಮ್ಮೆ ಭೂತವಾಗಿ, ಒಮ್ಮೆ ಅತಿಪ್ರಾಕೃತಿಕ ಭೀತಿಯಾಗಿ, ಒಮ್ಮೆ ಯಕ್ಷಿಣಿಯಾಗಿ, ಒಮ್ಮೆ ನಿಸರ್ಗದ

ಭೀಕರ ರೂಪವಾಗಿ, ಒಮ್ಮೆ ತರ್ಕಬಾಹಿರವಾದ ದುರ್ಘಟನೆಯಾಗಿ ವಿಧವಿಧವಾದ ರೂಪಗಳಿಂದ, ಮಾರ್ಗಗಳಿಂದ ಅತಿಮಾನುಷಶಕ್ತಿ ತನ್ನ ಸ್ವರೂಪದ ಪ್ರತೀತಿಯನ್ನು ಮಾಡಿಕೊಡುತ್ತದೆ. ಈ ಶಕ್ತಿಯಿಂದ ವಿಘಟಿತವಾದ ಸನ್ನಿವೇಶಗಳಲ್ಲಿ ಅಡಗಿರಬಹುದಾದ ನಾಟ್ಯಗುಣಗಳನ್ನು ಅರಳಿಸಿ ಅವುಗಳಿಗೆ ತಾತ್ವಿಕ ಗಭೀರತೆಯನ್ನೂ ಮಾನಸಿಕ ಉತ್ಕಟತೆಯನ್ನೂ ನೀಡುವುದೇ ಷೇಕ್ಸ್ಪಿಯರನ ಪ್ರತಿಭೆಯ ಒಂದು ವಿಶೇಷವಾಗಿದೆ.

ಅತಿಮಾನುಷಶಕ್ತಿಯಲ್ಲಿ ಷೇಕ್ಸ್ಪಿಯರನು ನಂಬಿಗೆಯನ್ನಿಟ್ಟಿದ್ದನೋ ಇಲ್ಲವೋ ಹೇಳುವುದು ಕಠಿಣ; ಅವನ ಪಾತ್ರಗಳಾದರೂ ಇಂಥ ನಂಬಿಗೆಯನ್ನು ತಾಳಿದ್ದರೆಂದು ಹೇಳುವುದೂ ಸಾಧ್ಯವಿಲ್ಲ. ಯಾಕೆಂದರೆ ಅವನ ಅನೇಕ ಪಾತ್ರಗಳು ವಿಧಿಯ ನಿಯತಿಯನ್ನು ಕುರಿತು ಅಶ್ರದ್ಧರಾಗಿದ್ದಾರೆ. ಕೆಲವರಂತೂ ಇಂಥ ನಂಬಿಗೆಯನ್ನು ಸ್ಪಷ್ಟವಾಗಿ ಪ್ರತಿಭಟಿಸುತ್ತಾರೆ. 'ಜೂಲಿಯಸ್ ಸೀಸರ್'ದಲ್ಲಿ ಕ್ಯಾಷಿಯಸ್ ಹೇಳುತ್ತಾನೆ :

> ನಮ್ಮ ಹೀನಾಯಕ್ಕೆ ನಾವೇ ಕಾರಣರು, ಬ್ರೂಟಿಸ್; ನಮ್ಮ ಗ್ರಹಗಳಲ್ಲ.

'ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್'ದಲ್ಲಿ ಹೆಲಿನಾ ಹೇಳುವ ಮಾತು ಇದಕ್ಕೂ ಸ್ಪಷ್ಟ :

> ನಮ್ಮ ಕಾರ್ಯಸಾಧನೆಯ ಉಪಾಯಗಳೆಲ್ಲ ನಮ್ಮಲ್ಲಿಯೇ ಅಡಗಿರುತ್ತವೆ. ಆದರೆ ನಾವು ಬೊಟ್ಟುಮಾಡುವುದು ಸ್ವರ್ಗದ ಕಡೆಗೆ. ನಿಜವಾಗಿಯೂ ವಿಧಿಯೆಂದೆನಿಸಿಕೊಂಡ ಆಕಾಶದ ಕೆಳಗೆ ನಡೆಯುವ ನಮ್ಮ ಜೀವನ ಸರ್ವಸ್ವತಂತ್ರವಾಗಿದೆ. ನಮ್ಮ ಕಾರ್ಯಸಿದ್ಧಿಗೆ ಅಡ್ಡಿಯಾದದ್ದು ನಮ್ಮೊಳಗಿನ ಜಾಡ್ಯವೇ ಹೊರತು ನಮ್ಮ ದೈವವಲ್ಲ.

'ಕಿಂಗ್ ಲಿಯರ್'ದಲ್ಲಿ ಎಡ್ಮಂಡನೂ ಇದೇ ವಿಚಾರವನ್ನು ಸಾರುತ್ತಾನೆ :

> ನಮ್ಮ ಸಂಕಟಗಳಿಗೆ ಸೂರ್ಯ, ಚಂದ್ರ, ತಾರೆಗಳೇ ದೋಷಿಗಳೆಂದು ನಾವು ತಿಳಿದಿದ್ದೇವೆ. ನಮ್ಮ ದುಷ್ಟತನ ನಮ್ಮ ಪ್ರಾರಬ್ಧವೆಂದೂ ನಮ್ಮ ಮೂಢತನ ಸಗ್ಗದ ನಿಯತಿಯೆಂದೂ ನಮ್ಮ ಮೋಸ, ಸುಳ್ಳು, ಹಾದರಗಳೆಲ್ಲ ನಮ್ಮ ಗ್ರಹಗಳ ನಿಯತಿಯೆಂದೂ ನಾವು ಸಾರಿ ಹೇಳುತ್ತೇವೆ. ದೈವವೇ ನಮ್ಮನ್ನು ಕಾಮುಕರನ್ನಾಗಿ ಮಾಡುತ್ತದೆಯೆಂದು ತಿಳಿದು ನಮ್ಮ ನೈತಿಕ ಜವಾಬ್ದಾರಿಯಿಂದ ಪಾರಾಗಲು ನಾವು ಪ್ರಯತ್ನಿಸುತ್ತೇವೆ.

'ಅಥೆಲ್ಲೊ'ದಲ್ಲಿ ಇಯಾಗೋನ ವಿಚಾರಸರಣಿಯೂ ಇದೇ ದಾರಿಯನ್ನು ಹಿಡಿಯುತ್ತದೆ :

> ನಮ್ಮ ಸ್ವಭಾವದ ಮೂಲ ನಮ್ಮಲ್ಲಿಯೇ ಇದೆ. ನಮ್ಮ ದೇಹವೇ ತೋಟ; ನಮ್ಮ ಕ್ರಿಯಾಶಕ್ತಿಯೇ ತೋಟಿಗ. ಅಲ್ಲಿ ನಾವು ಮುಳ್ಳನ್ನೋ ಮಲರನ್ನೋ ಬೆಳೆಸಬಹುದು. ನಮ್ಮ ಆಲಸ್ಯದಿಂದ ತೋಟ ಹಾಳಾಗುವದುಂಟು; ದುಡಿಮೆಯಿಂದ ಹುಲುಸಾದ ಬೆಳೆ ಬಾರವೆ ಇರದು.

ಈ ತರಹದ ಮನುಷ್ಯನ ಸ್ವತಂತ್ರವೃತ್ತಿಯನ್ನು ಆಹ್ವಾನಿಸುವ ವಿಚಾರಗಳು ಷೇಕ್ಸ್ಪಿಯರನ ನಾಟಕಗಳಲ್ಲಿ ಅಲ್ಲಲ್ಲಿ ಹರಡಿಕೊಂಡಿವೆ. ಆದರೆ ಇಂಥ ವಿಚಾರಗಳೆಲ್ಲ ಸಾಮಾನ್ಯವಾಗಿ ದುಷ್ಟಪಾತ್ರಗಳಿಂದಲೇ ವ್ಯಕ್ತವಾಗಿದೆಯೆಂದು ತಿಳಿದಾಗ ನಮಗೆ ಆಶ್ಚರ್ಯವಾಗುತ್ತದೆ. ವಿಧಿಗೆ ನಿರ್ಭೀತರಾಗಿ ಅಂತಃಸ್ವಾತಂತ್ರ್ಯವನ್ನು ಸಾರುವವರು ಇಯಾಗೋ, ಎಡ್ಮಂಡ್ ಮುಂತಾದವರು. ಇವರು ತಮ್ಮ ಸ್ವಾರ್ಥಸಾಧನೆಗಾಗಿ ಏನು ಮಾಡಲೂ ಹೇಸುವದಿಲ್ಲ. 'ಹೇತುರಹಿತವಾದ ದುಷ್ಟತನ'ವೇ ಅವರ ಸ್ವಭಾವದ ವಿಶೇಷವೇನೋ ಎಂದು ಸಂಶಯವುಂಟಾಗುತ್ತದೆ.

ಸಾಮಾನ್ಯವಾಗಿ ಷೇಕ್ಸ್ಪಿಯರನ ನಾಟಕಗಳಲ್ಲಿ ಸುಸ್ವಭಾವಿಗಳೇ ದೈವವಾದಿ

ಗಳಾಗಿದ್ದಾರೆಂದು ಹೇಳಬಹುದು. ಇದರಂತೆಯೇ ನಾಟಕದ ವಾತಾವರಣ ಸರ್ವ ಸಾಧಾರಣವಾಗಿ ಅದೃಷ್ಟಶ್ರದ್ಧೆಗೆ ಅನುಕೂಲವಾಗಿಯೇ ಇರುತ್ತದೆ. ಆದರೆ ಅಮೂರ್ತ ವಾದ ಈ ಅತಿಮಾನುಷತೆಯ ವಿಷಯ ಈ ನಾಟಕಗಳಲ್ಲಿ ಬರಿಯ ತಾತ್ವಿಕ ವಾದವಾಗಿ ಅಥವಾ ಸಂಭಾಷಣೆಯ ಧೋರಣೆಯಾಗಿ ಬರುವುದಿಲ್ಲ. ಷೇಕ್ಸ್ಪಿಯರನು ಅದಕ್ಕೊಂದು ನಾಟ್ಯಮಯವಾದ ರೂಪವನ್ನು ಕೊಟ್ಟು ದೃಷ್ಟಿಗೆ ರಂಜನವಾಗಿ, ಬುದ್ಧಿಭಾವಗಳಿಗೆ ಅಂಜನವಾಗುವಂತೆ ಮಾಡುತ್ತಾನೆ. ಒಮ್ಮೊಮ್ಮೆ ಗ್ರೀಕ್, ರೋಮನ್ ಪುರಾಣ ಗಳಿಂದ ಅತಿಮಾನುಷವ್ಯಕ್ತಿಗಳನ್ನು ಆಯ್ದುಕೊಂಡು, ಒಮ್ಮೊಮ್ಮೆ ಜನಪದ ಸಂಸ್ಕೃತಿ ಯಲ್ಲಿ ಬೇರುಗೊಂಡ ಭೂತ, ಪಿಶಾಚಿ, ಯಕ್ಷಿಣಿ, ಡಾಕಿಣಿಯರನ್ನೂ ಮತ್ತೆ ಇತರ ಮನೋವೇದಕ ನಾಟ್ಯಸಾಧನಗಳನ್ನೂ ಉಪಯೋಗಿಸಿಕೊಂಡು ಅಮೂರ್ತವಾದ ಈ ಶಕ್ತಿವಿಶೇಷಗಳನ್ನು ನಮ್ಮ ಇಂದ್ರಿಯಾನುಭವದ ಎಲ್ಲೆಯಲ್ಲಿ ತಂದು ತೋರಿಸುತ್ತಾನೆ.

## 2

ಷೇಕ್ಸ್ಪಿಯರನು ಬರೆದ ನಾಟಕಗಳು ಅನೇಕ. ಅವೆಲ್ಲವುಗಳಲ್ಲಿ ಒಂದೊಂದು ರೀತಿ ಯಲ್ಲಿ ಅತಿಮಾನುಷಶಕ್ತಿ ನಿರ್ದಿಷ್ಟವಾಗಿದೆ. ಇಲ್ಲಿ ಕೆಲವೇ ನಾಟಕಗಳನ್ನು ಆಯ್ದು ಷೇಕ್ಸ್ಪಿಯರನು ಚಿತ್ರಿಸಿದ ಅತಿಮಾನುಷಸೃಷ್ಟಿಯ ರೂಪರೇಖೆಯನ್ನು ಸ್ವಲ್ಪದರಲ್ಲಿ ಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ನಾವು ಮೊದಲಿಗೆ ಷೇಕ್ಸ್ಪಿಯರನ ಅತಿಮಾನುಷಸೃಷ್ಟಿಯನ್ನು ಬಹ್ವಂಶದಲ್ಲಿ ಕಾಣುವದು ಅವನ 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ನಾಟಕದಲ್ಲಿ. ಈ ನಾಟಕ ವನ್ನು ಬರೆದದ್ದು ಒಂದು ಮದುವೆಯ ಸಮಾರಂಭಕ್ಕಾಗಿ. ಈ ಸಮಾರಂಭಕ್ಕೆ ಅನುರೂಪ ವಾಗಿ ಇಲ್ಲಿ ಯೌವನಸಹಜವಾದ, ಸ್ವಪ್ನಸುಂದರವಾದ, ವಿನೋದಮಧುರವಾದ ವಾತಾವರಣ ತುಂಬಿಕೊಂಡಿದೆ. ಈ ಕೃತಿಯಲ್ಲಿ ನಾವು ಉತ್ಕಟವಾಗಿ ಅನುಭವಿಸುವುದು ಕಲ್ಪನಾರಮ್ಯವಾದ ಬಂಧಮುಕ್ತ ಸೃಜನ ಸೌಂದರ್ಯ. ಇದರ ಅನುಭವ ಮುಖ್ಯ ವಾಗಿ ನಮಗುಂಟಾಗುವದು ಇಲ್ಲಿಯ ಅತಿಮಾನುಷವ್ಯಕ್ತಿಗಳಿಂದ. ಈ ವ್ಯಕ್ತಿಗಳ ಮೂಲವನ್ನು ಗ್ರೀಕ್ ಪುರಾಣಗಳಲ್ಲಿಯಾಗಲಿ, ಜನಪದ ಪರಂಪರೆಯಲ್ಲಾಗಲಿ ಗುರುತಿಸ ಬಹುದಾಗಿದ್ದರೂ ಅವುಗಳ ನಿರ್ಮಿತಿ ಕವಿಯ ಸ್ವತಂತ್ರ ಪ್ರತಿಭೆಗೆ ಉದಾಹರಣೆ.

ನಗರದಿಂದ ಅನತಿದೂರದಲ್ಲಿರುವ ಒಂದು ಅರಣ್ಯದಲ್ಲಿ, ಜನಸಂಚಾರದ ಪರಿಚಿತ ವಾದ ಪರಿಸರದಲ್ಲಿ, ಬೆಳುದಿಂಗಳ ಅಸ್ಪಷ್ಟವಾದ ಬೆಳಕಿನಲ್ಲಿ, ಸುಮನ ಸುರಭಿತ ವಾದ ಸೌಮ್ಯ ವಾತಾವರಣದಲ್ಲಿ ಷೇಕ್ಸ್ಪಿಯರನು ಒಂದು ಯಕ್ಷಲೋಕವನ್ನೇ ನಿರ್ಮಿಸಿದ್ದಾನೆ. ಊರೊಳಗೆ ಅರಮನೆಯಲ್ಲಿ ರಾಜವಿವಾಹದ ಸಂಭ್ರಮ ನಡೆದಿದೆ. ಈ ಸಮಾರಂಭಕ್ಕಾಗಿ ಓಬೆರಾನ್ ಮತ್ತು ಟೈಟೇನಿಯ ಯಕ್ಷದಂಪತಿಗಳು ವಧೂ ವರರನ್ನು ಆಶೀರ್ವದಿಸುವದಕ್ಕಾಗಿ ಇಲ್ಲಿ ಅಡವಿಯಲ್ಲಿ ಬಂದು ಇಳಿದಿದ್ದಾರೆ. ಆದರೆ ಇವರ ಮಧ್ಯೆ ಏನೋ ಒಂದು ವೈಮನಸ್ಯ ನಿರ್ಮಾಣವಾಗಿದೆ. ಅವರು ತಬ್ಬಲಿ ಯಾದ ಒಂದು ಮಾನವಶಿಶುವನ್ನು ಕದ್ದುತಂದಿದ್ದಾರೆ. ಅದನ್ನು ತನ್ನ ಸೇವೆ



"ನಿನ್ನ ದನಿ ಕೇಳೆನ್ನ ಕಿವಿ ಮರುಳಾಯ್ತು,
ಅಂತೆ ನಿನ್ನಾಕೃತಿಗೆ ಕಣ್ಣು ಆಳಾಯ್ತು."—ಟೈಟೇನಿಯ.

**'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್'ನಲ್ಲಿ ಕತ್ತೆ-ತಲೆಯ ಬಾಟಮ್—ಯಕ್ಷರಾಣಿ ಟೈಟೇನಿಯ**

ಯಲ್ಲಿಟ್ಟುಕೊಳ್ಳಬೇಕೆಂದು ಓಬೆರಾನ್ ಹಣಿಕೆ ಹಾಕುತ್ತಾನೆ. ಟೈಟೇನಿಯ ಇದನ್ನು ವಿರೋಧಿಸುತ್ತಾಳೆ. ಆ ಶಿಶು ತನ್ನ ಅಕ್ಕರೆಯಲ್ಲಿಯೇ ಬೆಳೆಯಬೇಕೆಂದು ಅವಳ ಹಟ. ಯಕ್ಷ ರಾಜರಾಣಿಯರಲ್ಲಿ ಉಂಟಾದ ಈ ವೈಮನಸ್ಯದಿಂದ ಇಡೀ ಲೋಕವೇ ಸಂಕಟಕ್ಕೀಡಾಗಬಹುದೆಂಬ ಹೆದರಿಕೆಯಿದೆ. ಹೊಳೆಗಳು ಸೊಕ್ಕಿ ಹರಿಯುವವು; ರೋಗರುಜಿನಗಳು ಬೆಳೆಯುವವು. ಋತುಗಳಲ್ಲಿ ಅದಲುಬದಲಾಗಿ ಚೆಲುಗುಲಾಬಿಯ ಸೆರಗಿನಲ್ಲಿ ಚಳಿಗಾಲದ ಇಬ್ಬನಿಯು ಬಂದು ಬೀಳುವದು. ನಿಸರ್ಗದಲ್ಲಿ ಸಂಕಟದ ಹಾವಳಿಯಿಂದ ಹಾಹಾಕಾರವೇಳುವದು. ಯಕ್ಷಲೋಕದಲ್ಲಿ ಸಮರಸದ ಜೀವನ ಬೇಕು. ಅದೇ ಮನುಕುಲದ ಸುಖಕ್ಕೆ ತಳಹದಿ. ಅಂತೆಯೇ ಟೈಟೇನಿಯ-ಓಬೆರಾನರ ನಡುವಿನ ವಿವಾದಕ್ಕೆ ಗಂಭೀರ ಸ್ವರೂಪ ಬರುವ ಸಂಭವವಿದೆ.

ಆದರೂ ಇವರು ನಿರ್ಮಿಸಿದ ವಾತಾವರಣ ರಮ್ಯವೂ ರಂಜಕವೂ ಆಗಿದೆ. ಟೈಟೇನಿಯಳ ಜೊತೆಯಲ್ಲಿ ಬಂದ ಅವಳ ಅನುಚರರಂತೂ ನಮ್ಮ ಹೃದಯವನ್ನು ಸೆಳೆಯುತ್ತಾರೆ. ಇವರೆಲ್ಲರೂ ಅಮರಕುಲಕ್ಕೆ ಸೇರಿದವರಾಗಿದ್ದರೂ ಮರ್ತ್ಯರಂತೆ ರಾಗದ್ವೇಷಾದಿ ಭಾವನೆಗಳಿಗೆ ಈಡಾದವರು. ಇವರು ಕಾಮರೂಪಿಗಳು; ಮನೋವೇಗಿಗಳು. ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅವರು ಆಕಾರದಲ್ಲಿ ವಾಮನಮೂರ್ತಿಗಳು.

ಈ ಕಲ್ಪನೆಗೆ ಅನುರೂಪವಾಗಿ ಷೇಕ್ಸ್‌ಪಿಯರನು ಅವರಿಗೆ ಹೆಸರು ಕೊಟ್ಟಿದ್ದಾನೆ: ಕಡಲೆಯ ಹೂವು, ಜೇಡದ ಬಲೆ, ದೀಪದ ಹುಳ, ಸಾಸಿವೆ ಕಾಳು. ಇವರು ಸಣ್ಣ ಹೂವಿನ ಒಂದು ಬಟ್ಟಲಲ್ಲಿ ಹಾಯಾಗಿ ಮಲಗಬಹುದು. ಹೂವಿನ ಚೆಲುವನ್ನು ಹಾಳುಗೆಡಿಸುವ ಹುಳಗಳನ್ನು ಕೊಲ್ಲುವದಕ್ಕಾಗಿ ಇವರೊಂದು ಮಹಾಸಂಗ್ರಾಮವನ್ನೇ ಹೂಡುವದುಂಟು. ತೊಗಲುಬಾವಲಿಯ ಪಕ್ಕದಿಂದ ಅಂಗಿಯನ್ನು ಹೊಲಿಯುವದೂ ಅತ್ತಿತ್ತ ತಿರುಗಾಡಿ ಜೇನುತುಪ್ಪ, ಹಣ್ಣುಹಂಪಲಗಳನ್ನು ಕಳಿಹಾಕುವದೂ ಇವರ ಕರ್ತವ್ಯದ ಬಹುಭಾಗವಾಗಿದ್ದರೂ ಇವರು ಇರುಳನ್ನೆಲ್ಲ ನೃತ್ಯ-ಗಾಯನಗಳಲ್ಲಿಯೇ ಕಳೆಯುತ್ತಾರೆ. ಟೈಟೇನಿಯ ಮಲಗುವದಕ್ಕಾಗಿ ಒಳ್ಳೆಯ ಸ್ಥಳವನ್ನು ಶೋಧಿಸಿ, ಅವಳಿಗೆ ಸವಿದನಿಯಲ್ಲಿ ಜೋಗುಳ ಹಾಡಿ ಅವಳನ್ನು ದುಷ್ಟಶಕ್ತಿಗಳಿಂದ ರಕ್ಷಿಸಲೆಂದು ಸುತ್ತಲೂ ಕಾವಲು ನಿಲ್ಲುತ್ತಾರೆ. ಓಬೆರಾನನ ಸೇವಕನಾದ ಪಕ್ ಆಕಾರದಲ್ಲಿ ವಾಮನಮೂರ್ತಿಯಾಗಿದ್ದರೂ ಬುದ್ಧಿಯಲ್ಲಿ ಬಲು ಚುರುಕು; ಮಹಾವಿದೂಷಕ; ಶರವೇಗಿ. ಇವನ ಹುಚ್ಚಾಟಕ್ಕೆ ಲೋಕವೇ ಗಾಸಿಗೊಂಡಿದೆ. ಈ ತರಹದ ಅತಿ-ಮಾನುಷ ವ್ಯಕ್ತಿಗಳು ತಮ್ಮ ವಿನೋದಚಾಪಲ್ಯಕ್ಕಾಗಿ ಮನುಷ್ಯರನ್ನು ಕ್ಷಣಕಾಲ ಸಂಕಟಕ್ಕೆ ಈಡುಮಾಡಿದರೂ ಮಾನವಸುಖಕ್ಕಾಗಿ ಪ್ರಯತ್ನಪಡುತ್ತಾರೆ.

ಅಥೆನ್ಸ್ ನಗರದ ಹತ್ತಿರದ ಅಡವಿಯಲ್ಲಿ ಟೈಟೇನಿಯ-ಓಬೆರಾನರು ತಮ್ಮ ಅನುಚರರ ಸಮೇತರಾಗಿ ಬಂದಿಳಿದ ರಾತ್ರಿಯೇ ಪ್ರೇಮಕ್ಕಾಗಿ ಹಾತೊರೆಯುತ್ತಿರುವ ಮನುಕುಲದ ತರುಣತರುಣಿಯರನ್ನು ಸಂದರ್ಶಿಸುತ್ತಾರೆ. ಲೈಸ್ಯಾಂಡರ್ ಮತ್ತು ಹರ್ಮಿಯಾ ಪರಸ್ಪರರನ್ನು ಪ್ರೀತಿಸುತ್ತಾರೆ; ಆದರೆ ಅವರಿಗೆ ತಂದೆಯ ಅನುಮತಿ ಯಾಗಲಿ ರಾಜ್ಯದ ಸಮ್ಮತಿಯಾಗಲಿ ಸಿಕ್ಕಿಲ್ಲವಾದ್ದರಿಂದ ಅಡವಿಯ ಮಾರ್ಗವಾಗಿ ಪರಸ್ಥಳಕ್ಕೆ ಓಡಿಹೋಗುತ್ತಿದ್ದಾರೆ. ಇದನ್ನು ಕೇಳಿ ಹರ್ಮಿಯಾಳನ್ನು ಪ್ರೀತಿಸುವ ಡಿಮೀಟ್ರಿಯಸ್ ಅವಳ ಮನವೊಲಿಸಬೇಕೆಂದು ಅಡವಿಗೆ ಬಂದಿದ್ದಾನೆ. ಡಿಮೀಟ್ರಿ-ಯಸನಿಂದ ಧಿಕ್ಕರಿಸಲ್ಪಟ್ಟಿದ್ದರೂ ಅವನನ್ನು ಪ್ರೀತಿಸುವ ಹೆಲಿನಾ ಅವನ ಬೆನ್ನು ಹತ್ತಿ ಇಲ್ಲಿ ಬಂದಿದ್ದಾಳೆ. ಹೀಗೆ ಈ ಚತುಷ್ಕರಲ್ಲಿ ಪ್ರೀತಿಯ ತ್ರಿಕೋಣ-ಸಂಘರ್ಷ ನಡೆದಿದೆ. ಇದನ್ನು ಕಂಡ ಓಬೆರಾನನ ಹೃದಯ ಕರಗಿಹೋಗುತ್ತದೆ. ಇದನ್ನೆಲ್ಲ ಸರಿಪಡಿಸಬೇಕೆಂದು ಅವನು ತನ್ನ ಸೇವಕನಾದ ಪಕ್‌ನನ್ನು ಕರೆದು ಒಂದು ಮಾಯಾ ಪುಷ್ಪವನ್ನು ತರಹೇಳಿ ಅದರ ರಸವನ್ನು ಕಠಿಣ ಹೃದಯದ ಅಥೆನ್ಸಿನ ತರುಣನ ಕಣ್ಣಿಗೆ ಹಿಂಡಲು ಹೇಳುತ್ತಾನೆ. ಈ ರಸದ ಪರಿಣಾಮವಾಗಿ ಕಣ್ಣು ತೆರೆದ ಕೂಡಲೆ ಕಾಣುವ ವ್ಯಕ್ತಿಯನ್ನು ಅವನು ಪ್ರೀತಿಸುತ್ತಾನೆ. ಆದರೆ ವಾಸ್ತವದಲ್ಲಿ ಇದರ ಪರಿಣಾಮ ವಿಪರೀತ ವಾಗಿ ಈ ತರುಣತರುಣಿಯರಲ್ಲಿ ಮತ್ತಿಷ್ಟು ವೈಮನಸ್ಯ ಬೆಳೆಯುತ್ತದೆ. ಈ ಮಾಯಾ ರಸದ ಒಂದು ಭಾಗವನ್ನು ಓಬೆರಾನ್ ತನ್ನ ರಾಣಿಯ ಕಣ್ಣಿಗೆ ಹಿಂಡುತ್ತಾನೆ. ಅದೇ ಸಮಯಕ್ಕೆ ಅಲ್ಲಿಯೇ ಬಂದಿದ್ದ ಬಾಟಮ್ ಎಂಬ ಅಥೆನ್ಸ್ ನಗರದ ಕಾರ್ಮಿಕನನ್ನು ಕತ್ತೆಯನ್ನಾಗಿ ಮಾರ್ಪಡಿಸಿದ್ದಾನೆ. ಟೈಟೇನಿಯ ಕಣ್ಣು ತೆರೆದಾಗ ಈ ಕತ್ತೆಯೇ ಸಂಮುಖದಲ್ಲಿದ್ದ ಕಾರಣ ಅದನ್ನೇ ಚೆಲುವಿನ ಕಂದರ್ಪನೆಂದು ತಿಳಿದು ಮೋಹಿತಳಾಗಿ ಪ್ರೀತಿಸತೊಡಗುತ್ತಾಳೆ. ಈ ಗರ್ದಭ-ಅಪ್ಸರೆಯರ ಪ್ರೇಮ ವಿನೋದಪೂರ್ಣವಾಗಿದೆ.

ಆದರೂ ಈ ವಿಪರೀತ ಪರಿಸ್ಥಿತಿಯನ್ನುಂಟುಮಾಡಿದ ಮಾಯಾಪುಷ್ಪಕ್ಕೂ ಒಂದು ಪರಿಹಾರವಿದೆ. ಮತ್ತೊಂದು ಪುಷ್ಪದ ರಸವನ್ನು ಇವರ ಕಣ್ಣಿಗೆ ಹಿಂಡಬೇಕೆಂದು ಪಕ್‌ನಿಗೆ ಆಜ್ಞೆಯಾಗುತ್ತದೆ. ಪಕ್‌ನು ಎಲ್ಲರೂ ನಿದ್ದೆಹೋಗುವ ಹಾಗೆ ಮಾಡಿ ಅವರ ಕಣ್ಣಿಗೆ ಈ ರಸವನ್ನು ಹಿಂಡುತ್ತಾನೆ. ಅವರು ಕಣ್ತೆರೆದು, ನಡೆದುಹೋದ ವಿಚಿತ್ರ ಕಥೆಯೆಲ್ಲ ಒಂದು ದುಷ್ಟಸ್ವಪ್ನವೆಂದು ತಿಳಿದುಕೊಂಡು ಸಮಾಧಾನ ಹೊಂದುತ್ತಾರೆ. ನಗರದ ರಾಜರಾಣಿಯರು ಬೆಳಗು ಮುಂಜಾನೆ ಬೇಟೆಯಾಡಲು ಬಂದಾಗ ಇವರನ್ನು ಅಡವಿಯಲ್ಲಿ ಕಂಡು ಇವರ ಅದ್ಭುತಕಥೆಯನ್ನು ಕೇಳಿ ಆಶ್ಚರ್ಯಪಡುತ್ತಾರೆ. ಕೊನೆಯಲ್ಲಿ ಈ ತರುಣತರುಣಿಯರ ಪ್ರೇಮಸಮಸ್ಯೆ ತಾನಾಗಿಯೇ ಬಗೆಹರಿಯುತ್ತದೆ. ಟೈಟೇನಿಯ–ಓಬೆರಾನರ ನಡುವೆ ಬೆಳೆದ ವೈಮನಸ್ಯ ಮಾಯವಾಗುತ್ತದೆ. ನಾಟಕವೆಲ್ಲ ಸುಖಾಂತವಾಗಿ ಪ್ರೇಮಿಗಳ ವಿವಾಹವಾಗುತ್ತದೆ. ನೃತ್ಯ, ಸಂಗೀತ, ನಾಟಕಾದಿ ಕಾರ್ಯಕ್ರಮದಲ್ಲಿ ಇರುಳು ಬೆಳೆಯುತ್ತದೆ. ಮಧ್ಯರಾತ್ರಿಯಾದ ನಂತರ ಎಲ್ಲರೂ ನಿದ್ದೆಹೋದ ಮೇಲೆ ಅರಮನೆಯ ಸ್ತಬ್ಧವಾದ ವಾತಾವರಣದಲ್ಲಿ ಯಕ್ಷಸಮೂಹ ಬಂದು ಸ್ವಸ್ತಿವಾಚನ ಹೇಳಿ ಎಲ್ಲರನ್ನೂ ಹರಸಿ ತಮ್ಮ ಲೋಕಕ್ಕೆ ತೆರಳುತ್ತದೆ.

ಹೀಗೆ ಮನುಷ್ಯರಿಂದ ಭಿನ್ನರಾಗಿದ್ದರೂ ಮನುಷ್ಯರಂತೆಯೇ ರಾಗದ್ವೇಷಾದಿ ಭಾವಗಳನ್ನು ತಳೆದ ಈ ಅತಿಮಾನುಷರು ರಮ್ಯವೂ ರಮಣೀಯವೂ ಆದ ಒಂದು ಅದ್ಭುತ ಕಳೆಯನ್ನು ನಾಟಕಕ್ಕೆ ತರುತ್ತಾರೆ. ಸಾಮಾನ್ಯವಾಗಿ ಸುಖಾಂತನಾಟಕಗಳಲ್ಲಿ ಈ ಅತಿಮಾನುಷಶಕ್ತಿ ಶಿವವಾಗಿ, ಶುಭವಾಗಿ, ಕಲ್ಯಾಣಕಾರಿಯಾಗಿ ನಿಲ್ಲುವದುಂಟು.

## 3

ಆದರೆ ದುಃಖಾಂತ ನಾಟಕಗಳನ್ನು ಬರೆದ ಷೇಕ್ಸ್ಪಿಯರನ ಮನೋಭೂಮಿಕೆ ಬೇರೆಯಾಗಿದೆ. ಸುಖಾಂತ ನಾಟಕಗಳಲ್ಲಿ ತುಳುಕಾಡುತ್ತಿದ್ದ ಅವನ ಬಾಲಿಶ ವಿನೋದಬುದ್ಧಿ ಇಲ್ಲಿ ಮಾಯವಾಗಿದೆ. ಈಗ ಅವನು ದುಃಖವನ್ನುಂಡಿದ್ದಾನೆ; ದುಷ್ಟತನದ ಪರಿಸೀಮೆಯನ್ನು ಕಂಡಿದ್ದಾನೆ; ಸಪ್ತಮಹಾಪಾಪಗಳ ವಿಕೃತ ಸ್ವರೂಪವನ್ನು ನೋಡಿ ವಿದ್ಧನಾಗಿದ್ದಾನೆ; ಮನಸ್ಸಿನ ತಳವನ್ನೇ ಕಲಕಿಸುವ ಮನುಷ್ಯಜೀವನದ ಮೂಲಭೂತವಾದ ಪ್ರಶ್ನೆಗಳನ್ನು ಕೇಳತೊಡಗಿದ್ದಾನೆ. ಸಾವಿನಾಚೆಗೆ ಭಯಂಕರವಾದದ್ದೇನಿದೆಯೆಂಬುದನ್ನು ತಿಳಿದುಕೊಳ್ಳಬೇಕು. ಸಾವಿನ ಸೀಮೆಯನ್ನು ದಾಟಿದ ಯಾವ ಪ್ರವಾಸಿ ಹಿಂದಿರುಗಬಹುದು? ಆ ಅನಾಕುಲನೀಯವಾದ ಮನುಷ್ಯಜಿಜ್ಞಾಸೆಯನ್ನು ಮೀರಿ ನಿಂತ ಸಾವಿನ ಸಮಸ್ಯೆ ಈಗ ನಾಟಕಕಾರನನ್ನು ಕೆಣಕಿದೆ. ವಿವೇಕವನ್ನು ಜಾಗರಿಸುವ ಸತ್ಯನೀತಿಗಳ ನಿಲುವು, ಪಾಪದ ಮೋಹ, ಅದರೊಳಗೆ ಸಿಲುಕಿದ ಜೀವಕ್ಕೆ ಉಂಟಾಗುವ ನರಕಯಾತನೆಗಳು, ದೈವೀನ್ಯಾಯ ಮತ್ತು ಶಿಕ್ಷೆಗಳ ರೀತಿ—ಇವೇ ಮೊದಲಾದ ಪ್ರಶ್ನೆಗಳಿಂದ ಕಲಕಿಹೋದ ಮನಸ್ಸು ಗಂಭೀರವಾಗಿದೆ; ಚಿಂತನಶೀಲವಾಗಿದೆ. 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ಅನ್ನು ಬರೆದ ಆರೇಳು ವರ್ಷಗಳಲ್ಲಿಯೇ ಷೇಕ್ಸ್ಪಿಯರನು 'ಹ್ಯಾಮ್ಲೆಟ್' ನಾಟಕವನ್ನು ಬರೆದ. ಆದರೆ ಈ ಎರಡು ನಾಟಕಗಳಲ್ಲಿ ಕಂಡುಬರುವ

ಮನೋವೃತ್ತಿಯಲ್ಲಿ ಅಜಗಜಾಂತರವಿದೆ. ಈ ಬದಲಾದ ಮನೋವೃತ್ತಿಯ ಪ್ರತಿಬಿಂಬವೋ ಏನೋ ಎನ್ನುವಂತೆ ಅವನ ಅತಿಮಾನುಷತೆಯ ಚಿತ್ರವೂ ಬದಲಾಗಿದೆ.

'ಹ್ಯಾಮ್ಲೆಟ್' ನಾಟಕದಲ್ಲಿ ಅತಿಮಾನುಷತೆ ರೂಪಗೊಂಡಿದ್ದು ಮುಖ್ಯತಃ ಡೆನ್ಮಾರ್ಕ್ ದೇಶದ ದೊರೆಯಾದ ಹ್ಯಾಮ್ಲೆಟನ ತಂದೆಯ ಭೂತವಾಗಿ. ಹ್ಯಾಮ್ಲೆಟನ ತಂದೆಯನ್ನು ಅವನ ತಮ್ಮ ವಿಷ ಹಾಕಿ ಸಾಯಿಸುತ್ತಾನೆ; ಅವನ ಪತ್ನಿಯನ್ನು ಮದುವೆಯಾಗಿ ರಾಜ್ಯಸಿಂಹಾಸನವನ್ನೇರುತ್ತಾನೆ. ಹೀಗಾಗಿ ದುರ್ಮರಣವನ್ನು ಹೊಂದಿದ ಹ್ಯಾಮ್ಲೆಟನ ತಂದೆಯ ಆತ್ಮಕ್ಕೆ ಶಾಂತಿಯಿಲ್ಲ. ತನ್ನನ್ನು ಕೊಂದ ಕೊಲೆಗಡಿಕ-ತಮ್ಮನೇ ತನ್ನ ರಾಣಿಯನ್ನು ಕೆಡಿಸಿದನೆಂಬ ಅಸಹ್ಯ ಯಾತನೆಯೂ ಸೇರಿಕೊಂಡಿದೆ. ಅಶಾಂತವಾದ ಈ ಜೀವ ನಟ್ಟಿರುಳಿನಲ್ಲಿ ಕೋಟೆಯ ಕೊತ್ತಳದ ಮೇಲೆ ಸಂಚರಿಸುವದು. ಇದನ್ನು ಕಂಡು ಬೆರಗಾದ ಕಾವಲುಗಾರರು ಹ್ಯಾಮ್ಲೆಟನಿಗೆ ಈ ಸುದ್ದಿಯನ್ನು ತಿಳಿಸುತ್ತಾರೆ. ಭೂತಪ್ರೇತಗಳಲ್ಲಿ ಸಾಕಷ್ಟು ನಂಬಿಗೆಯಿಲ್ಲದ ರಾಜಪುತ್ರ ಇದನ್ನು ಪರೀಕ್ಷಿಸಲೆಂದು ಕುತೂಹಲಿಯಾಗಿ ಬರುತ್ತಾನೆ: ಕೊತ್ತಳದ ಏಕಾಂತವಾದ ನಿರ್ಜನ ಪ್ರದೇಶ. ಕಟ್ಟಿರುಳಿನ ನಿಸ್ತಬ್ಧತೆ ದಟ್ಟವಾಗಿ ಬೆಳೆದಿದೆ. ಒಂದು ಇಲಿಯೂ ಓಡಾಡಿದ ಸಪ್ಪಳವಿಲ್ಲ. ಗಾಳಿಯಲ್ಲಿ ಇರಿಯುವ ಚಳಿ. ಇಂಥ ಈ ವೇಳೆಗೆ ಗೋರಿಗಳೂ ತಮ್ಮ ಬಾಯಿ ತೆರೆದು ನಿಲ್ಲುತ್ತವೆ; ನರಕದ ವಿಷವಾಯು ಭೂಮಿಯನ್ನೂ ಸುತ್ತಿಕೊಳ್ಳುತ್ತದೆ. ಇಂಥ ಈ ಭಯಾನಕವಾದ ಸಮಯದಲ್ಲಿ ಹ್ಯಾಮ್ಲೆಟನ ತಂದೆಯ ಭೂತ ಕವಚಧಾರಿಯಾಗಿ ಸೈನಿಕವೇಷದಲ್ಲಿ ಗಂಭೀರಮುದ್ರೆಯಿಂದ ಸ್ವಲ್ಪ ದೂರದಲ್ಲಿ ಬಂದು ನಿಲ್ಲುತ್ತದೆ. ನೋಡುವವರ ನೆತ್ತರವೇ ಹೆಪ್ಪುಗಟ್ಟುತ್ತದೆ. ಮಾತನಾಡದೆ ಸುಮ್ಮನೆ ನಿಂತುಕೊಳ್ಳುತ್ತದೆ. ಆದರೂ ಕೈಸನ್ನೆ ಮಾಡಿ ಹ್ಯಾಮ್ಲೆಟನ್ನು ಕರೆಯುತ್ತದೆ. ಅವನ ಗೆಳೆಯರೂ ಸೇವಕರೂ ಹೋಗಬೇಡವೆಂದು ಎಷ್ಟು ಬೇಡಿಕೊಂಡರೂ ಹ್ಯಾಮ್ಲೆಟನು ಮುನ್ನುಗ್ಗಿ ತನ್ನ ತಂದೆಯ ಭೂತವನ್ನು ಬೆನ್ನಟ್ಟಿ ಹೋಗುತ್ತಾನೆ. ಅದು ಅವನಿಗೆ ತನ್ನ ಮರಣದ ಯಥಾರ್ಥ ಸನ್ನಿವೇಶವನ್ನು ತಿಳಿಸಿ ಹೇಳಿ, "ನನ್ನ ತಮ್ಮನೇ ನನ್ನನ್ನು ಕೊಂದುಹಾಕಿದ. ಆ ಕೊಲೆಗಡಿಕನೇ ನನ್ನ ರಾಜ್ಯವನ್ನೂ ರಾಣಿಯನ್ನೂ ಅಪಹರಿಸಿದ್ದಾನೆ. ನೀನು ನನ್ನ ಮಗನಾಗಿದ್ದರೆ ಇದರ ಸೇಡು ತೀರಿಸಬೇಕು. ಅದರ ಹೊರತಾಗಿ ನನ್ನ ಆತ್ಮಕ್ಕೆ ಶಾಂತಿಯಿಲ್ಲ" ಎಂದು ಮುಂತಾಗಿ ಹೇಳಿ ಮಾಯವಾಗುತ್ತದೆ.

ಈ ಹ್ಯಾಮ್ಲೆಟನ ತಂದೆಯ ಭೂತ ಅತಿಮಾನುಷವಾಗಿದ್ದರೂ ಅದರ ಸಾಮರ್ಥ್ಯ ಸೀಮಿತವಾಗಿದೆಯೆಂಬುದು ನಮಗೆ ಶೀಘ್ರದಲ್ಲಿಯೇ ತಿಳಿದುಬರುತ್ತದೆ. ಅದು ತನ್ನ ತಮ್ಮನನ್ನು ತನ್ನ ಕೈಯಿಂದ ಕೊಲ್ಲಲಾರದು. ಅದಕ್ಕೆ ಮಾನವೀಸಾಧನದ ಅವಶ್ಯಕತೆ ಇದೆ. ಅದು ಕಥಾನಾಯಕನಿಗೆ ಗತಕಾಲದ ಯಥಾರ್ಥಜ್ಞಾನವನ್ನು ಮಾಡಿಕೊಟ್ಟು, ಅವನ ಮನಸ್ಸನ್ನು ಉದ್ರೇಕಿಸಿ, ಅವನಲ್ಲಿ ಕರ್ತವ್ಯಜಾಗೃತಿಯನ್ನುಂಟುಮಾಡುತ್ತದೆ. ಆದರೂ ಅವನು ಭೂತದ ಮಾತಿನಲ್ಲಿ ನಂಬಿಕೆಯನ್ನಿಡುವುದಿಲ್ಲ. ಅವನು ಸ್ವತಂತ್ರ ರೀತಿಯಿಂದ ಅದರ ಸತ್ಯತೆಯನ್ನರಿಯಲು ಪ್ರಯತ್ನಿಸುತ್ತಾನೆ. ಭೂತ ಹೇಳಿದ ಮಾತು ಸತ್ಯವೆಂದು ಮನದಟ್ಟಾದರೂ ತನ್ನ ಕಕ್ಕನನ್ನು ಕೊಲ್ಲಲು ನುಗ್ಗಿಹೋಗುವದಿಲ್ಲ. ಅವನು ತನ್ನ ವಿಚಾರದಲ್ಲಿಯೇ ವ್ಯಗ್ರನಾಗಿ ಕರ್ತವ್ಯದ ಬಗ್ಗೆ ಆಲಸಿಯಾಗು

ತ್ತಾನೆ. ಹ್ಯಾಮ್ಲೆಟನಲ್ಲಿ ತುಂಬ ಧೈರ್ಯವಿದೆ, ಸಾಹಸವಿದೆ; ಕಾರ್ಯವನ್ನು ಈಡೇರಿಸಲು ಬೇಕಾದ ಪಾಟವವಿದೆ, ಚಾತುರ್ಯವಿದೆ. ಆದರೂ ಅವನ ಸಂಕಲ್ಪಗಳೆಲ್ಲ ವಿಚಾರದ ಇಬ್ಬನಿಯಲ್ಲಿ ಸಿಕ್ಕಿ ಅರಳುವ ಮೊದಲೇ ಅಳಿದುಹೋಗುತ್ತವೆ. ಪ್ರಪಂಚದ ದುಷ್ಟಪ್ರವೃತ್ತಿಗಳು ಅವನನ್ನು ಹತಾಶನನ್ನಾಗಿ ಮಾಡಿಬಿಟ್ಟವೆ. ಒಂದು ಹಿರಿಯ ರಾಷ್ಟ್ರದ ಆಶಾದೀಪವಾಗಿದ್ದ, ಸಮಾಜದ ಆದರ್ಶಚಿತ್ರವಾಗಿದ್ದ, ವಿನಯದ ಮೂರ್ತಿಯಾಗಿದ್ದ, ಆಸ್ಥಾನಿಯ ಕಣ್ಣಾಗಿ, ಯೋಧನ ಕತ್ತಿಯಾಗಿ, ಪಂಡಿತನ ನಾಲಗೆಯಾಗಿ ಸಕಲರ ಮನಸ್ಸನ್ನು ಸೂರೆಗೊಂಡ ಉದಾತ್ತ ನಾಯಕ ಹ್ಯಾಮ್ಲೆಟ್ ಕುಸಿದುಹೋಗಿದ್ದಾನೆ. ಅವನಿಗೆ ಜಗದ ವ್ಯಾಪಾರವೆಲ್ಲ ನೀರಸವಾಗಿದೆ, ನಿಷ್ಫಲವಾಗಿದೆ. ಬಾಳುವುದೇ ಅವನಿಗೆ ಬೇಸರವಾಗಿದೆ. ಇಂಥ ಮನಃಸ್ಥಿತಿಯಲ್ಲಿ ಅವನಿಗೆ ಅವನ ತಂದೆಯ ಭೂತ ಸೇಡಿನ ಆಹ್ವಾನವನ್ನು ಕೊಡುತ್ತದೆ. ಆದರೆ ಅವನನ್ನು ಕಾರ್ಯತತ್ಪರನನ್ನಾಗಿ ಮಾಡಲು ಸಾಧ್ಯವಾಗುವದಿಲ್ಲ. ಭೂತದ ಕಾರ್ಯ ಇವನಿಂದ ಸಫಲವಾಗುವದಿಲ್ಲ. ಅದು ಅತಿಮಾನುಷವ್ಯಕ್ತಿಯಾಗಿದ್ದರೂ ಅದರಲ್ಲಿ ತಾನು ಹೇಳಿದ ಮಾತು ಅನಿವಾರ್ಯವಾಗುವಂತೆ ಮಾಡುವ ಸಾಮರ್ಥ್ಯವಿದ್ದಂತೆ ತೋರುವದಿಲ್ಲ. ಹೀಗೆಂದ ಮಾತ್ರಕ್ಕೆ ಹ್ಯಾಮ್ಲೆಟನು ಸರ್ವಸ್ವತಂತ್ರನಾಗಿದ್ದಾನೆಂದು ಹೇಳಲಾಗುವದಿಲ್ಲ. ಒಂದು ದೃಷ್ಟಿಯಿಂದ ಅವನು ತನ್ನ ಸ್ವಭಾವದಿಂದಲೇ ಬದ್ಧನಾಗಿದ್ದಾನೆ. ಮತ್ತೊಂದು ದೃಷ್ಟಿಯಿಂದ ಅವನ ಜೀವನದಲ್ಲಿ ನಡೆದ ಘಟನೆಗಳೆಲ್ಲ ತರ್ಕಾತೀತವಾಗಿವೆ, ಮಾನವೀ-ಯೋಜನೆಯನ್ನೂ ಮೀರಿನಿಂತಿವೆ. ಮನುಷ್ಯನ ಜೀವನವೆಂಬುದು ಯಾವುದೋ ಅತಿ-ಮಾನುಷಶಕ್ತಿಯ ಕ್ರೂರಲೀಲೆಯೇನೋ ಎಂಬ ಸಂಶಯದ ಭಾವನೆ ನಿರ್ಮಾಣವಾಗುತ್ತದೆ. ದೈವದ ಚಕ್ರಪ್ರವಾಹದಲ್ಲಿ ಸಿಕ್ಕ ದರ್ಭೆಯಂತೆ ಅಸಹಾಯವಾಗಿದೆ ಅವನ ಜೀವನ. ಅವನೇ ಹೇಳಿದಂತೆ, "ನಾವು ನಮ್ಮ ಭವಿತವ್ಯವನ್ನು ಹೇಗೆ ಕಡೆದು ಕಂಡರಿಸಿದರೂ ಅದನ್ನು ತಿದ್ದಿ ಅದಕ್ಕೆ ಅಂತಿಮ ರೂಪವನ್ನು ಕೊಡುವ ಒಂದು ದಿವ್ಯಶಕ್ತಿಯಿದೆ."

## 4

'ಮೆಕ್‌ಬೆತ್' ನಾಟಕ ಅತಿಮಾನುಷತೆಯ ವಿಕೃತವಾದ ವಿರಾಟ್‌ದರ್ಶನದಿಂದಲೇ ಪ್ರಾರಂಭವಾಗುತ್ತದೆ. ಮಂಜುಗವಿದ ಆಕಾಶದಲ್ಲಿ ಗುಡುಗು, ಮಿಂಚು, ಮಳೆಗಳ ಆರ್ಭಟ ನಡೆದಿದೆ. ಆಗ ಯುದ್ಧಭೂಮಿಯ ಕೋಲಾಹಲದ ಹಿನ್ನೆಲೆಯಾಗಿ ವಿಚಿತ್ರ ರೂಪದ ಮೂರು ಮಾಟಗಾತಿಯರು ಬಂಜೆನೆಲದ ಹಾಳು ಪರಿಸರವೊಂದರಲ್ಲಿ ತಾಂಡವವಾಡುತ್ತಿದ್ದಾರೆ, ಹಾಡುತ್ತಿದ್ದಾರೆ :

ಮತ್ತೆ ಮೂವರು ನಾವು ಭೇಟಿಯಾಗುವದೆಂದು ?
ಗುಡುಗು ಮಿಂಚು ಮಳೆ ಆರ್ಭಟಿಸುತಿರುವಂದು
    ಕದನ ಕೋಲಾಹಲವು ಮುಗಿದ ಮೇಲೆ
    ಗೆಲವು ಸೋಲ್ ಕೊನೆಯಲ್ಲಿ ತಿಳಿದ ಮೇಲೆ
    ನೇಸರಳಿಯುವ ಮುನ್ನ, ಹಾಳಾದ ಆ ಬಂಜೆ ನೆಲದ ಮೇಲೆ
    ಕಾಣಬರುವೆವು ನಾವು ಮೆಕ್‌ಬೆತ್ತನನ್ನ !

ಹೀಗೆ ವಿಕಾರವಾಗಿ ಹಾಡುತ್ತ, ಕುಣಿಯುತ್ತ ರುದ್ರನಾಟಕದ ನಾಂದಿಯನ್ನೇ ಹೇಳುತ್ತಾರೇನೋ ಎಂದೆನಿಸುವದು. ಇವರ ಮಾತಿನಲ್ಲಿ ನಾಟಕದ ಮೂಲಭೂತವಾಗಿರುವ ಜೀವನಮೌಲ್ಯಗಳ ವಿಪರ್ಯಾಸ ಸೂತ್ರರೂಪವಾಗಿ ಕಂಗೊಳಿಸುತ್ತದೆ :

ಒಳಿತು ಕೆಡಕಾಗಿಹುದು, ಕೆಡಕು ಒಳಿತಾಗಿಹುದು.
ಮಂಜು ಇಬ್ಬನಿಗಳಲಿ ಸಾಗುತಿಹುದು,
ಕೊಳೆತ ಗಾಳಿಯ ಮೇಲೆ ತೇಲುತಿಹುದು.

ನೈತಿಕ ಮೌಲ್ಯಗಳ ವಿಪರ್ಯಾಸವೇ ಈ ನಾಟಕದ ಹಿನ್ನೆಲೆಯಾಗಿದೆ. ಮೆಕ್‌ಬೆತನ ಮಾತಿನಲ್ಲಿಯೂ ಇದರ ಸೂಚನೆ ಪ್ರತಿಧ್ವನಿತವಾಗಿದೆ. ಯಾರು ಈ ಮಾಟಗಾತಿಯರು? ಬಾಡಿಹೋದ ಮೈ, ಜೋಲುಬಿದ್ದ ಮೈದೊಗಲು, ಹೆಣ್ಣಿನ ಆಕಾರ, ಗಂಡಿನ ರೂಪ, ವಿಪರ್ಯಸ್ತವಾದ ಈ ಮನುಷ್ಯರೂಪದ ಹಿಂದೆ ಅಪಾರವಾದ, ವಿಕಾರವಾದ ಅತಿ-ಮಾನುಷಶಕ್ತಿ ಅವಿತುಕೊಂಡಿದೆ. ಸೈತಾನನ ಸಂಕೇತವೋ, ದುರ್ದೈವದ ಪ್ರತೀಕವೋ ಎಂಬಂತೆ ಅಮೂರ್ತವಾದ ರುದ್ರಶಕ್ತಿಗಳೆಲ್ಲ ಇಲ್ಲಿ ಮೂರ್ತಿತವಾಗಿವೆ. ಮೆಕ್‌ಬೆತ-ನೊಡನೆ ಆದ ಇವರ ನಾಟ್ಯಮಯ ಸಂದರ್ಶನವೇ ಇಲ್ಲಿ ನಡೆಯುವ ಒಂದು ಮಹಾ ದುರ್ಘಟನೆ. ಇವರು ಕಾಲದ ಪರದೆಯನ್ನು ಸರಿಸಿ ಭವಿಷ್ಯತ್ತನ್ನು ತೆರೆದು ತೋರಿಸುತ್ತಾರೆ. ಮೆಕ್‌ಬೆತನ ಮನಸ್ಸಿನೊಳಗೆ ಅವಿತುಕೊಂಡ ಆಶೆಯನ್ನು ಬಿಚ್ಚಿತೋರಿಸುತ್ತಾರೆ. ಅವನ ದುಷ್ಟ ಆಕಾಂಕ್ಷೆಯನ್ನು ಕೆರಳಿಸುತ್ತಾರೆ. "ನೀನು ರಾಜನಾಗುವಿ," ಎಂಬುದಾಗಿ ನುಡಿದ ಭವಿಷ್ಯವಾಣಿ ಅದು ನಿಜವಾಗಬೇಕಾದರೆ ಅವಶ್ಯಕವಾದ ಕ್ರೂರ ಕಾರಸ್ಥಾನವನ್ನು ಮಾಡಲು ಪ್ರೇರೇಪಿಸುತ್ತದೆ. ಮೆಕ್‌ಬೆತನ ಪತ್ನಿಯ ಅಂತರಂಗದಲ್ಲಿ ಮೊದಲೇ ಹೆಡೆಯಾಡುತ್ತಿದ್ದ ಈ ಆಸೆ ಫೂತ್ಕರಿಸತೊಡಗುತ್ತದೆ. ಅವಳು ತನ್ನ ಹೆಣ್ಣು-ತನವನ್ನು ನೀಗಿ ರಾಕ್ಷಸಿಯಾಗಬಯಸುತ್ತಾಳೆ. ಎದೆಯ ಹಾಲು ಹಾಲಾಹಲವಾಗಲೆಂದು, ಕರುಣೆಯೆಲ್ಲ ಕರಗಿ ಕ್ರೌರ್ಯವೇ ಮನೆಮಾಡಲೆಂದು ನರಕದ ಶಕ್ತಿಗಳನ್ನೆಲ್ಲ ಕೂಗಿ ಕರೆಯುತ್ತಾಳೆ. ರಾಜಮುಕುಟವನ್ನು ಪಡೆಯಲು ಬೇಕಾದ ದುಷ್ಟತನವನ್ನು ತನ್ನ ಗಂಡನ ದಯಾಭರಿತವಾದ ಹೃದಯದಲ್ಲಿ ತುಂಬಲೆಳಸುತ್ತಾಳೆ. ನಾಡಿನ ಅರಸು ತಮ್ಮ ಮನೆಗೆ ಅತಿಥಿಯಾಗಿ ಬರುತ್ತಾನೆ. ಇದೇ ಒಳ್ಳೆಯ ಸಂಧಿಯೆಂದು ತಿಳಿದು ರಾಜನನ್ನು ಕೊಲ್ಲುವ ಹೊಂಚುಹಾಕುತ್ತಾಳೆ. ಮೆಕ್‌ಬೆತನ ಮನಸ್ಸು ಹೊಯ್ದಾಡುತ್ತದೆ. ಆದರೆ ಅವನ ಹೆಂಡತಿಯ ಆವೇಶಕ್ಕೆ ಪಕ್ಕಾಗಿ ಮುನ್ನುಗ್ಗಿ ತನ್ನ ಉಪಕಾರ-ಕರ್ತೃವಾದ ಮುದಿರಾಜನನ್ನು ನಿರಾಗಸವಾದ ನಿದ್ದೆಯಲ್ಲಿರುವಾಗ ಕೊಂದುಹಾಕುತ್ತಾನೆ. ಅದೇ ಕ್ಷಣಕ್ಕೆ ಅವನ ಶಿಕ್ಷೆಗೆ ಪ್ರಾರಂಭವಾಗುತ್ತದೆ. ಅವನು ಕೊಂದದ್ದು ಬರಿಯ ತನ್ನ ದೊರೆಯನ್ನಲ್ಲ, ಒಂದು ವ್ಯಕ್ತಿಯನ್ನಲ್ಲ; ರಾಜದೇಹದ ದೇಗುಲದಲ್ಲಿ ಅಡಗಿದ ದಿವ್ಯತೆಯನ್ನು, ತನ್ನ ಬಾಳಿನಲ್ಲಿ ರಕ್ಷೆಯಾಗಿ ನಿಂತುಕೊಂಡ ದೇವಕರುಣೆಯನ್ನು, ನಿಸರ್ಗದತ್ತವಾದ ನಿದ್ದೆಯ ದೊಡ್ಡ ಕಾಣಿಕೆಯನ್ನು, ತನ್ನ ಶಾಂತಿಯನ್ನು, ತನ್ನ ಸದ್ಗತಿಯನ್ನು. ಕೊಲೆಯೆಂಬುದು ಉಳಿದ ಜೀವನದಿಂದ ವಿಭಕ್ತವಾದ ಒಂಟಿಯಾಗಿರುವ ಘಟನೆಯಲ್ಲ. ಅದು ಜೀವನದ ಸಹಜವಾದ ನಿಯಮಗಳಿಗೆ ವಿರುದ್ಧವಾದದ್ದು. ಅದರಿಂದ ವಿಶ್ವದಲ್ಲಿ ಕ್ಷೋಭೆಯುಂಟಾಗುತ್ತದೆ. ನಿಸರ್ಗವೇ ಕೆರಳಿಹೋಗುತ್ತದೆ.



**'ದಿ ಟೆಂಪೆಸ್ಟ್'ನಲ್ಲಿ ಕ್ಯಾಲಿಬಾನ್, ಪ್ರಾಸ್ಪೆರೊ ಮತ್ತು ಮಿರ್ಯಾಂಡರೊಡನೆ.**
"ಪಾಳ್ ರಕ್ಕಸಿಯ ಮಗನ್" . . . . "ಅಮಂಗಳನ್ !"

ಬಾನ್ನೆಲಗಳಲ್ಲಿ ಅಘಟಿತ ಘಟನೆಗಳುಂಟಾಗುತ್ತವೆ. ಮೆಕ್‌ಬೆತನು ಮಾಡಿದ ಕೊಲೆಯ ಪರಿಣಾಮ ಸರ್ವವ್ಯಾಪಿಯಾಗಿದೆ; ಅತಿ ಭಯಂಕರವಾಗಿದೆ. ಅವನಿಗೆ ರಾಜಮುಕುಟ ದೊರೆಯಿತು; ಮಾಟಗಾತಿಯರ ವಚನ ಸಫಲವಾಯಿತು. ಆದರೆ ಅವನಿಗೆ ಎಳ್ಳಷ್ಟೂ ಶಾಂತಿ ಲಭಿಸಲಿಲ್ಲ. ಈ ಕೊಲೆ ಮಾಡುವ ಮೊದಲೇ ಸತ್ತುಹೋಗಿದ್ದರೆ ಎಷ್ಟು ಒಳ್ಳೆಯದಾಗಬಹುದಾಗಿತ್ತೆಂದು ಅವನಿಗನಿಸುತ್ತದೆ. ಅವನು ಕೊಂದ ರಾಜನ ಆತ್ಮಕ್ಕೆ ಸದ್ಗತಿಯಾಯಿತು, ತನಗೆ ಮಾತ್ರ ಶಾಂತಿಯಿಲ್ಲ, ಸುಖವಿಲ್ಲ, ಗತಿಯಿಲ್ಲ.

ಇದರ ಮುಂದಿನ ಕಥೆಯೆಲ್ಲ ಒಂದು ಕೊಲೆಯಿಂದ ನಿರ್ಮಾಣವಾದ ಅನೇಕ ಕೊಲೆಗಳ ಕಥೆ, ಒಂದು ಪಾಪದಿಂದ ಜನಿಸಿದ ಅನೇಕ ಪಾಪಗಳ ಕಥೆ. ಮೆಕ್‌ಬೆತನು ಮತ್ತೊಮ್ಮೆ ಮಾಟಗಾತಿಯರನ್ನು ಕಂಡು ತನ್ನ ಮುಂದಿನ ಮಾರ್ಗವನ್ನು ನಿರ್ಧರಿಸುತ್ತಾನೆ; ಅವರಿಂದ ಸುಳ್ಳು ನೆಮ್ಮದಿಯನ್ನು ಪಡೆಯುತ್ತಾನೆ. ಆದರೆ ಅವನ ಅಂತರಂಗವೆಲ್ಲ ಜರ್ಜರಿತವಾಗಿದೆ; ಬಾಳಿನ ಸೊಗಸೆಲ್ಲ ಕಳೆದುಹೋಗಿದೆ. ಅವನ ದೃಷ್ಟಿಯಲ್ಲಿ ಈಗ ಜೀವನವೆಂಬುದು ಹುಚ್ಚ ಹೇಳಿದ ಕಥೆಯಂತೆ ಅಸಂಬದ್ಧವಾದ ನಿರರ್ಥಕ ಪ್ರಲಾಪವಾಗಿದೆ. ಆದರೆ ಮೆಕ್‌ಬೆತನ ಅಂತರಂಗವನ್ನಡರಿದ ರೋಗ ಅವನಲ್ಲಿಯೇ ಸೀಮಿತವಾಗಿಲ್ಲ. ಅವನ ಹೆಂಡತಿಯ ಮನಸ್ಸು ಮುರಿದುಹೋಗಿದೆ; ಆತ್ಮಹತ್ಯೆ ಮಾಡಿ ಬಾಳಿನ ದುಃಖದಿಂದ ಅವಳು ಮುಕ್ತಳಾಗುತ್ತಾಳೆ. ನಾಡಿಗೆ ನಾಡೇ ರೋಗಜರ್ಜರಿತವಾಗಿದೆ. ಅಂತರಂಗ-ಬಹಿರಂಗಗಳನ್ನು ವ್ಯಾಪಿಸಿ ನಿಂತ ಈ ರೋಗ ಸಾರ್ವತ್ರಿಕವಾಗಿದೆ. ಈ ರೋಗಕ್ಕೆ ದೇವಕರುಣೆಯೇ ಪರಿಹಾರವೇನೋ ಎನ್ನುವ ಹಾಗೆ ಪರಮಾತ್ಮನಂತಿರುವ, ಪರಮಾತ್ಮನ ಪ್ರತಿನಿಧಿಯೆಂದೆನಿಸಿಕೊಂಡ, ಸಮರ್ಥನೂ ಕರುಣಾರ್ಣವನೂ ಆದ

ಆಂಗ್ಲ ರಾಜನ ಸಹಾಯದಿಂದ ಮೆಕ್‌ಬೆತ್ ವ್ಯಾಪಿಸಿದ ನಾಡಿಗೆ ಮುಕ್ತಿ ಲಭಿಸುತ್ತದೆ.

ಮೆಕ್‌ಬೆತನ ಕಥೆಯ ಮಂಥನದಿಂದ ನೆಗೆದ ವಿಚಾರವು 'ಅಶಿವ'ದ ಒಂದು ತತ್ತ್ವ-ಜ್ಞಾನವಾಗಿ ನಮ್ಮ ಮನಸ್ಸನ್ನು ಉದ್ದೀಪಿಸುತ್ತದೆ. 'ಅಶಿವ' ಅತಿಮಾನುಷವಾಗಿದ್ದರೂ ಮನುಷ್ಯನ ಸಹಕಾರದ ವಿನಹ ಕಾರ್ಯಕಾರಿಯಾಗುವದಿಲ್ಲ; ಮನುಷ್ಯನ ದಾರಿಯಲ್ಲಿ ಮೋಹದ ಬಲೆಯನ್ನು ಚೆಲ್ಲಬಹುದೇ ಹೊರತು ಅವನ ಸ್ವಾತಂತ್ರ್ಯವನ್ನು ಹರಣ ಮಾಡಲಾರದು. ಅಶಿವದ ಕಾಲಿಗೆ ಸಿಕ್ಕೊ ಶಿವಾಶಿವಗಳೆರಡೂ ನುಚ್ಚುನೂರಾಗ ಬಹುದು. ಆದರೆ ಅಶಿವಕ್ಕೆ ಕೊನೆಯ ವಿಜಯ ದೊರೆಯಲಾರದು. ಏನಾದರೂ ಶಿವಶಕ್ತಿ ಅಮೃತವಾದದ್ದು. ವ್ಯಕ್ತಿ ನಷ್ಟವಾದರೂ ಅವನಲ್ಲಿರುವ ಜೀವನದ ಮೌಲ್ಯ ಗಳು ಅವಿನಾಶಿಯಾಗಿವೆ. ಅಂತೆಯೇ ರುದ್ರನಾಟಕ ಎಷ್ಟು ಭಯಂಕರವಾಗಿದ್ದರೂ ಅಜೇಯವಾದ ಜೀವನದ ಮೌಲ್ಯಗಳನ್ನು ಎತ್ತಿತೋರಿಸುತ್ತದೆಯಾದ ಕಾರಣ ಅದರ ವಾಚನದಿಂದ ಮನಸ್ಸು ಖಿನ್ನವಾಗುವುದಿಲ್ಲ.

## 5

ಷೇಕ್ಸ್ಪಿಯರನ ಬೆಳೆವಣಿಗೆ ರುದ್ರನಾಟಕದ ಪರಿಸೀಮೆಯಲ್ಲಿಯೇ ನಿಂತುಹೋಗಲಿಲ್ಲ. ಕ್ಷಮಾಶೀಲವಾದ, ದುಃಖದಿಂದ ಸಂಸ್ಕೃತವಾದ, ಉದಾರ ಹೃದಯದಿಂದ ಹೊಮ್ಮಿಬಂದ ಭದ್ರನಾಟಕಗಳೇ ಅವನ ಅಂತಿಮ ದರ್ಶನದ ನಲ್ನುಡಿಗಳಾಗಿವೆ. ಈಗ ಅವನ ಮನೋಭೂಮಿಕೆ ಬದಲಾಗಿದೆ. ಈ ಮಾರ್ಪಾಟಿಗೆ ಅನುಗುಣವಾಗಿ ಅತಿಮಾನುಷತೆಯ ಬಗೆಗಿರುವ ಅವನ ದೃಷ್ಟಿಯೂ ಬದಲಾಗಿದೆ. ಇದು ಮೊದಲಿನ ಸ್ವಚ್ಛಂದವಾದ, ನಿರಾಗಸವಾದ, ತರುಣಸಹಜವಾದ ಹಾಸ್ಯವಲ್ಲ; ದುಃಖತಪ್ತವಾದ, ಅಶಿವದಗ್ಧವಾದ ದಾರುಣವೃತ್ತಿಯೂ ಅಲ್ಲ. ಜೀವನದಲ್ಲಿರುವ ಕೆಡುಕನ್ನೆಲ್ಲ ತನ್ನ ಆತ್ಮಿಕ ಶಕ್ತಿಯಿಂದ ದಮನ ಮಾಡಿದ ಋಷಿತುಲ್ಯವಾದ ವಿಶಾಲದರ್ಶನವೇ ಇಲ್ಲಿ ಬೆಳಗಿ ನಿಂತಿದೆ. ಷೇಕ್ಸ್ಪಿಯರನ ಕೊನೆಯ ನಾಟಕವಾದ 'ದಿ ಟೆಂಪೆಸ್ಟ್' ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ.

'ದಿ ಟೆಂಪೆಸ್ಟ್'ದಲ್ಲಿ ಅತಿಮಾನುಷಶಕ್ತಿ ಒಬ್ಬ ಉದಾರಚರಿತನಾದ, ರಾಜ್ಯವನ್ನು ಕಳೆದುಕೊಂಡ ರಾಜನಲ್ಲಿ ಕೇಂದ್ರೀಕೃತವಾಗಿದೆ. ಅವನ ಹೆಸರು ಪ್ರಾಸ್ಪೆರೊ. ಜ್ಞಾನ ಸಾಧನೆಯಲ್ಲಿಯೇ ಅವನು ಯಾವಾಗಲೂ ತಲ್ಲೀನನಾಗಿ ಹೊರಗಣ ಜಗತ್ತಿನ ಅರಿವನ್ನೇ ಕಳೆದುಕೊಂಡಿದ್ದಾನೆ. ಈ ಸ್ಥಿತಿಯನ್ನು ತಿಳಿದುಕೊಂಡ ಅವನ ತಮ್ಮ ನೆರೆಯ ರಾಜನ ನೆರವಿನಿಂದ ಅಣ್ಣನ ರಾಜ್ಯವನ್ನು ಅಪಹರಿಸುತ್ತಾನೆ. ಅಣ್ಣನನ್ನೂ ಅವನ ಚಿಕ್ಕ ಮಗಳಾದ ಮಿರ್‍ಯಾಂಡಳನ್ನೂ ಒಂದು ಪೆಟ್ಟಿಗೆಯಲ್ಲಿ ಹಾಕಿ ಸಮುದ್ರದ ಮೇಲೆ ಬಿಟ್ಟು ಬಿಡುತ್ತಾನೆ. ಈ ಪೆಟ್ಟಿಗೆ ಅತ್ತಿತ್ತ ತೇಲುತ್ತ ಕೊನೆಗೆ ನಿರ್ಜನವಾದ ಒಂದು ದ್ವೀಪ ವನ್ನು ಸೇರುತ್ತದೆ. ಪೂರ್ವದಲ್ಲಿ ಸಿಕೋರಾ ಎಂಬ ಯಕ್ಷಿಣಿ ಈ ದ್ವೀಪವನ್ನು ಆಳು ತ್ತಿದ್ದಳು. ಈಗ ಅವಳ ವಿಕಾರವಾದ ಮಗ, ಮನುಷ್ಯನಂತಿರುವ ಪ್ರಾಣಿ ಕ್ಯಾಲಿಬಾನ ನೊಬ್ಬನೇ ಈ ದ್ವೀಪದ ಮೇಲೆ ವಾಸಿಸುತ್ತಾನೆ. ಪ್ರಾಸ್ಪೆರೊ ಇವನನ್ನು ತನ್ನ ಅತಿ-



**'ದಿ ಟೆಂಪೆಸ್ಟ್' ನಲ್ಲಿ ಏರಿಯಲ್**

"ದುಂಬಿಯು ಬಂಡನು ಹೀರುವ ಎಡೆಯೊಳು
ನಾ ಮಧುಪಾನವ ಮಾಡುವೆನು.
ತೇಲುವ ತಾವರೆ ಹೂವಿನ ಹೊಡೆಯೊಳು
ಪವಡಿಸೆ ಸಜ್ಜೆಯ ಹೂಡುವೆನು."

ಮಾನುಷಶಕ್ತಿಯಿಂದ ವಶಪಡಿಸಿಕೊಳ್ಳುತ್ತಾನೆ. ಅದೇ ರೀತಿಯಿಂದ ಸಿಕೋರಾ ಯಕ್ಷಿಣಿ ಬಂಧಿಸಿಟ್ಟ ಸುಷ್ಮು-ಚೇತನಗಳನ್ನೆಲ್ಲ ಮುಕ್ತಗೊಳಿಸಿ ತನ್ನ ಸೇವೆಗೆಂದು ಅವರನ್ನು ನಿಲ್ಲಿಸಿಕೊಳ್ಳುತ್ತಾನೆ. ಇವರಲ್ಲಿ ಪ್ರಮುಖವಾದ ಚೇತನ ಗಾಳಿಯಂತೆ ತೆಳುವಾದ, ಚಪಲಸುಂದರವಾದ ಏರಿಯಲ್.

ಕ್ಯಾಲಿಬಾನ್ ಮತ್ತು ಏರಿಯಲ್ — ಇವರಲ್ಲಿರುವ ವೈಷಮ್ಯ ಈ ನಾಟಕದಲ್ಲಿ ನಮ್ಮ ಮನಸ್ಸನ್ನು ಸೆಳೆಯುವ ಒಂದು ವಿಷಯ. ಕ್ಯಾಲಿಬಾನ್ ಪ್ರಕೃತಿಯಲ್ಲಿರುವ ಜಡತ್ವದ ಪ್ರತೀಕವೇನೋ ಎನ್ನುವಂತಿದ್ದಾನೆ. ಅವನ ಅಷ್ಟಾವಕ್ರವಾದ ಶರೀರಕ್ಕೆ ಅನುರೂಪವಾದ ವಿಕೃತ ಮನಸ್ಸು ಅವನಿಗಿದೆ. ಶಿಕ್ಷಣದ ಸಂಸ್ಕಾರಗಳು ಇವನ ಮೇಲೆ ಆಗುವುದೇ ಸಾಧ್ಯವಿಲ್ಲ. ಕಾಡುಸ್ಥಿತಿಯಲ್ಲೇ ಹುಟ್ಟಿದವನು ಕಾಡಾಗಿಯೇ ಬೆಳೆದಿದ್ದಾನೆ. ಒಡೆಯನನ್ನು ನೋಡುವ ಇವನ ದ್ವೇಷೈಕ ದೃಷ್ಟಿ, ಒಡತಿಯ ಬಗ್ಗೆ ಇವನು ತಳೆದ ಹೇಸಿ ಕಾಮುಕವೃತ್ತಿ, ಕುಟಿಲ ಕಾರಸ್ಥಾನವೇ ಪುರುಷಾರ್ಥವೆಂದು ತಿಳಿದ ಇವನ ಜೀವನದ ರೀತಿ, ಇಂದ್ರಿಯಸುಖವೇ ಸ್ವರ್ಗಸುಖವೆಂದು ವರ್ತಿಸುವ ಇವನ ನೀತಿ — ವಿಕೃತಿಯು ಇವನ ಸ್ವಭಾವದ ಪ್ರಕೃತಿಯಾಗಿದೆ. ಇದಕ್ಕೆ ವಿರುದ್ಧವಾಗಿ ಶುದ್ಧ ಚೈತನ್ಯದಲ್ಲಿಯೇ ಕಂಡರಿಸಿದಂತೆ ಸೂಕ್ಷ್ಮಸುಂದರವಾಗಿದೆ ಏರಿಯಲನ ಪ್ರಕೃತಿ. ಇವನಿಗೆ ಹೂವಿನ ಬಟ್ಟಲಲ್ಲಿ ಮಲಗುವ ಹವ್ಯಾಸ; ಜೇನ್ನೊಣದ ಜೊತೆಯಲ್ಲಿ ಜೇನಿನೂಟವನ್ನು ಮಾಡಬೇಕೆನ್ನುವ ಆಸೆ. ಈಗ ಬಂಧನದಲ್ಲಿದ್ದರೂ ಯಾವಾಗಲೂ ಬಿಡುಗಡೆಯ ಸ್ವಪ್ನವನ್ನೇ ಕಾಣುತ್ತಿದ್ದಾನೆ. ಆದರೂ ಒಡೆಯನ ಸೇವೆಯನ್ನು ಮನಃಪೂರ್ವಕವಾಗಿ ಅತಿ ಸಂತೋಷದಿಂದ ಮಾಡುತ್ತಾನೆ. ಇವನಿಗೆ

ಸಂಗೀತವಲ್ಲಿ ಬಹಳ ಪ್ರೀತಿ. ಇವನು ಹಾಡಿದರೆ ಕೇಳಿದವರೆಲ್ಲರೂ ಮರುಳಾಗುತ್ತಾರೆ. ಇವನ ಕಾರ್ಯಕೌಶಲಕ್ಕೆ ಇವನ ಒಡೆಯನೂ ಮನಸೋತು ಸ್ವಾತಂತ್ರ್ಯದ ವಚನವನ್ನು ಕೊಟ್ಟಿದ್ದಾನೆ. ಇದರಿಂದ ಏರಿಯಲನು ಕೃತಜ್ಞನಾಗಿದ್ದಾನೆ. ಹೀಗೆ ಈ ಎರಡು ಪಾತ್ರಗಳ ಮೂಲಕವಾಗಿ ಷೇಕ್ಸ್ಪಿಯರನು ಪ್ರಕೃತಿಯಲ್ಲಿರುವ ಜಾಡ್ಯ-ಚೈತನ್ಯಗಳ, ಸುಷ್ಟು-ದುಷ್ಟ ಶಕ್ತಿಗಳ ಸುಂದರ ಪ್ರತೀಕಗಳನ್ನು ನಿರ್ಮಿಸಿದ್ದಾನೆ.

ಇವೆರಡೂ ಶಕ್ತಿಗಳ ಮೇಲೆ ಪ್ರಾಸ್ಪೆರೊ ತನ್ನ ಸಾಧನೆಯಿಂದ ಪ್ರಭುತ್ವವನ್ನು ಸಂಪಾದಿಸಿದ್ದಾನೆ. ಪ್ರಕೃತಿಯ ಶಕ್ತಿವಿಶೇಷಗಳೆಲ್ಲ ಇವನ ಮಾತನ್ನು ಕೇಳುವ ದಾಸರಾಗಿದ್ದಾರೆ. ಇವನ ಸಾಮರ್ಥ್ಯ ಅತ್ಯಂತ ಪ್ರಬಲಳಾದ ಸಿಕೋರಾ ಯಕ್ಷಿಣಿಯನ್ನು ಮೀರಿದೆ. ಆದರೂ ಇವನು ತನ್ನ ಸಾಮರ್ಥ್ಯವನ್ನು ಕೇಡಿಗಾಗಿ ಉಪಯೋಗಿಸುವದಿಲ್ಲ. ತನಗೆ ಕೇಡು ಬಗೆದ ತನ್ನ ತಮ್ಮನಿಗೆ, ಅವನ ದುಷ್ಟ ಸಹಕಾರಿಗಳಿಗೆ ತನ್ನ ಅತಿಮಾನುಷ ಶಕ್ತಿಯಿಂದ ಒಳ್ಳೆಯ ಪಾಠ ಕಲಿಸಿ ಕೊನೆಗೆ ಅವರನ್ನೆಲ್ಲ ಕ್ಷಮಿಸಿಬಿಡುತ್ತಾನೆ. ಹಿಂದಿನ ಅನ್ಯಾಯದಿಂದ ಉಂಟಾದ ಕಹಿಯನ್ನೆಲ್ಲ ತೊಡೆದುಹಾಕಿ ಶುದ್ಧ ಶಾಂತ ಮನಸ್ಕನಾಗಿದ್ದಾನೆ. ಅವನ ಸೇವೆಯಲ್ಲಿದ್ದ ವಕ್ರವೃತ್ತಿಯ ಕ್ಯಾಲಿಬಾನನೂ, ಅವನ ಸೆರೆಗುಡುಕಗೆಳೆಯರೂ ತನ್ನ ವಿರುದ್ಧ ಹೂಡಿದ ಕುತಂತ್ರವನ್ನು ಸಕಾಲಕ್ಕೆ ಮುರಿದುಹಾಕುತ್ತಾನೆ. ಏರಿಯಲನಿಂದ ಇವನು ನಾನಾ ರೀತಿಯ ಸೇವೆಯನ್ನು ಸ್ವೀಕರಿಸಿ ಕೊನೆಗೆ ಅವನಿಗೆ ಸ್ವಾತಂತ್ರ್ಯವನ್ನು ಕೊಡುತ್ತಾನೆ. ಕಥೆಯಲ್ಲಿರುವ ಎಲ್ಲ ವ್ಯಕ್ತಿಗಳಿಗೂ ಸುಖ ಲಭಿಸು



**ಏರಿಯಲ್, ಇನ್ನೆರಡು ಭಂಗಿಗಳಲ್ಲಿ.**

"ಮಳೆಬಿಲ್ಲ ಗರಿಗಳ ರೆಕ್ಕೆಯ ತಳೆದಿಹ
ಮೇಘ ವಿಮಾನವನೇರಿ,
ಗಾಳಿಯ ಬಟ್ಟೆಯೊಳಲೆಯುವೆ, ನಲಿಯುವೆ,
ಮುಕ್ತಿಯ ಸೊದೆಯನು ಹೀರಿ."

ತ್ತದೆ. ಆಮೇಲೆ ಶಾಂತಚಿತ್ತನಾದ ಪ್ರಾಸ್ಪೆರೊ ತನ್ನ ಮಾಯಾಶಕ್ತಿಯನ್ನು ತೊರೆದು ಬಿಡುತ್ತಾನೆ. ಈ ಭದ್ರನಾಟಕದ ನಿಜವಾದ ಭರತವಾಕ್ಯವನ್ನು ನಾಟಕ ಮುಗಿಯುವ ಮೊದಲೇ ಹೇಳುತ್ತಾನೆ:

> ಆಟ ಮುಗಿಯಿತು ಇನ್ನು ; ಆಟವನು
> ಹೂಡಿರುವ ನಟರು ಗಾಳಿಯಲಿ ಕರಗಿ ಮರೆಯಾಗಿಹರು.
> ಅಂತೆ ಈ ಮೇಘಮುಕುಟವನಿಟ್ಟು ಮೆರೆಯುತಿಹ ಗೋಪುರವು
> ವೈಭವದ ಶಿಖರದಲಿ ಹೊಳೆಹೊಳೆವ ಅರಮನೆಯು
> ಉತ್ತುಂಗ ದೇವಾಲಯವು — ಮತ್ತೆ ಈ ಅಖಿಲ ಭೂಮಂಡಲವು
> ಕರಗಿ ಮಾಯವಾಗುವದುಂಟು . . . . ಕನಸಿನಂತಿದೆ
> ನಮ್ಮ ಬಾಳುವೆಯ ರೀತಿ ; ಅದನು ಸುತ್ತಿದೆ ನಿದ್ದೆ !

‘ದಿ ಟೆಂಪೆಸ್ಟ್’ ನಾಟಕದಲ್ಲಿ ಅನೇಕರು ಸಂಕೇತಾರ್ಥವನ್ನು ಕಂಡಿದ್ದಾರೆ. ಪ್ರಾಸ್ಪೆರೊ ಅಂದರೆ ಷೇಕ್ಸ್ಪಿಯರ್ ; ಅವನ ಮಾಯಾಶಕ್ತಿಯೆಂದರೆ ಜಗತ್ತನ್ನೇ ಮೋಹಿಸಿದ ಅವನ ನಾಟ್ಯಕಲೆ. ಅದರ ವಿಸರ್ಜನೆಯೆಂಬುದು ತನ್ನ ಬರವಣಿಗೆಯನ್ನು ಬಿಟ್ಟು ಊರಿಗೆ ಹೋಗಿ ವಿರಮಿಸಿದ ಸನ್ನಿವೇಶವೆಂತಲೂ ಕೆಲವರು ತಿಳಿದುಕೊಂಡಿದ್ದಾರೆ. ಮತ್ತೆ ಕೆಲವರು ಪ್ರಾಸ್ಪೆರೊನಲ್ಲಿ ಮಾನವತೆಯ ಪ್ರತೀಕವನ್ನು ಕಂಡಿದ್ದಾರೆ. ತನ್ನ ಜ್ಞಾನಸಾಧನೆಯಿಂದ ಪ್ರಕೃತಿಯ ಸುಷ್ಟು-ದುಷ್ಟ ಶಕ್ತಿಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿ ಅವುಗಳನ್ನು ಮನುಷ್ಯನ ಮಂಗಳಕ್ಕಾಗಿ ಉಪಯೋಗಿಸುವ ರೀತಿಯನ್ನು ತೋರಿಸಿರುವನೆಂತಲೂ ಕೆಲವರ ಮತ. ಏನಿದ್ದರೂ ಈ ನಾಟಕದಲ್ಲಿ ಅತಿ-ಮಾನುಷತೆಯ ಬಗ್ಗೆ ಷೇಕ್ಸ್ಪಿಯರನ ಅಂತಿಮ ವಿಚಾರಗಳು ಸೂಚಿತವಾಗಿವೆ. ಅತಿ-ಮಾನುಷಶಕ್ತಿಯನ್ನು ಮಂಗಳಕಾರಿಯನ್ನಾಗಿ ಮಾಡುವ ಸಾಮರ್ಥ್ಯ ಮನುಷ್ಯನ ವೃತ್ತಿಯಲ್ಲಿಯೇ ಇದೆಯೆಂಬುದು ಸ್ಪಷ್ಟವಾಗಿದೆ.





# ಷೇಕ್ಸ್ಪಿಯರನ ಸ್ತ್ರೀಪಾತ್ರಗಳು

ಎಂ. ರಾಮರಾವ್

ಷೇಕ್ಸ್ಪಿಯರ್ ಉತ್ತಮ ನಾಯಕರನ್ನು ಸೃಷ್ಟಿಸಿಲ್ಲ; ಅವನು ಸೃಷ್ಟಿಸಿರುವುದು ನಾಯಿಕೆಯರನ್ನು ಮಾತ್ರ ಎಂದು ರಸ್ಕಿನ್ ಒಂದೆಡೆ ಬರೆದಿದ್ದಾನೆ. ಈ ಮಾತು ಏಕಪಕ್ಷೀಯವೂ ಉತ್ಪ್ರೇಕ್ಷೆಯಿಂದ ಕೂಡಿದುದೂ ಆಗಿದೆಯೆಂದು ಹೇಳದೆ ವಿಧಿಯಿಲ್ಲ. ಆದರೆ ಅದರಲ್ಲಿ ಸತ್ಯಾಂಶವೂ ಸ್ವಲ್ಪ ಇದೆ. ಷೇಕ್ಸ್ಪಿಯರನ ಅತ್ಯುತ್ತಮ ಸಾಧನೆಗಳಲ್ಲಿ ಅವನು ಸೃಷ್ಟಿಸಿರುವ ಸ್ತ್ರೀಪಾತ್ರಗಳಿಗೆ ಹಿರಿಯ ಸ್ಥಾನವಿದೆ ಎಂಬುದಕ್ಕೆ ಅವು ನಮ್ಮ ಗಮನವನ್ನು ಸೆಳೆಯುವುದೇ ಸಾಕ್ಷಿ. ಷೇಕ್ಸ್ಪಿಯರನ ನಾಟಕಗಳನ್ನು ನಾನಾ ದೃಷ್ಟಿ-ಕೋನಗಳಿಂದ ಪರಿಶೀಲಿಸಬಹುದು. ಅವನು ಕಲ್ಪಿಸಿರುವ ಸ್ತ್ರೀಯರು ಎಂಥವರು ಎಂದು ನೋಡುವುದೂ ಅವುಗಳಲ್ಲಿ ಒಂದು.

ಷೇಕ್ಸ್ಪಿಯರನ ನಾಟಕಗಳ ಸ್ತ್ರೀಯರಲ್ಲಿ ಅನೇಕರು ಪರಮ ಸುಂದರಿಯರು. 'ದಿ ಟೆಂಪೆಸ್ಟ್' ನಾಟಕದ ಫರ್ಡಿನಂಡ್ ಮಿರ್‍ಯಾಂಡಳನ್ನು ನೋಡಿದಾಗ ಅವಳು ದೇವತಾ ಸದೃಶಳೆಂದು ಹೇಳುವ ಮಾತು ಇತರರನೇಕರಿಗೂ ಅನ್ವಯಿಸುತ್ತದೆ. ಆದರೆ ನಮ್ಮ ಗಮನ ಅವರ ಶಾರೀರಿಕ ಸೌಂದರ್ಯದ ಕಡೆಗೆ ಅಷ್ಟಾಗಿ ಹೋಗುವುದಿಲ್ಲ. ನಾವು ಅವರಲ್ಲಿ ಆಸಕ್ತಿ ವಹಿಸುವುದು ಅವರ ಗುಣದೋಷಗಳಿಗಾಗಿಯೇ ಹೊರತು ಅವರ ಅಂಗಾಂಗಗಳ ಆಕರ್ಷಣೆಗಾಗಿ ಅಲ್ಲ. ಕೇವಲ ಕಣ್ಣು ಸೆಳೆಯುವ ಬಣ್ಣದ ಚಿಟ್ಟೆಗಳಿಗೂ ಮುದ್ದು ಮುಖದ ಮೊದ್ದುಗೊಂಬೆಗಳಿಗೂ ಅವನ ನಾಟಕಗಳಲ್ಲಿ ಸ್ಥಾನವಿಲ್ಲ.

ಬುದ್ಧಿಶಕ್ತಿ, ಕ್ಲಿಷ್ಟ ಪರಿಸ್ಥಿತಿಗಳನ್ನು ಎದುರಿಸುವುದಕ್ಕೆ ಅಗತ್ಯವಾದ ನಿರುಪಾಧಿಕವಾದ ಆಲೋಚನಾಸಾಮರ್ಥ್ಯ, ಏನು ಮಾಡಬೇಕು-ಏನು ಮಾಡಬಾರದು ಎಂಬುದನ್ನು ನಿಷ್ಕರ್ಷಿಸಬಲ್ಲ ವಿವೇಚನೆ—ಇವು ಷೇಕ್ಸ್ಪಿಯರನ ಹಾಸ್ಯನಾಟಕಗಳ ಸ್ತ್ರೀಪಾತ್ರಗಳಲ್ಲಿ ಕಂಡುಬರುವ ವೈಶಿಷ್ಟ್ಯಗಳು. ಏಕಾಂಗಿಗಳಾಗಿ ಅಥವಾ ತಮಗೆ ಆತ್ಮೀಯರಾದ ಗೆಳತಿಯರ ಜೊತೆಯಲ್ಲಿ ಇರುವಾಗ ಅವರಲ್ಲಿ ಜನ್ಮತಃ ಬಂದಿರುವ ಸ್ತ್ರೀತ್ವದ ಮೃದುತ್ವ ತನ್ನ ಪ್ರಾಬಲ್ಯವನ್ನು ತೋರಿಸುತ್ತದೆ, ತಾವು ಎಷ್ಟೇ ಆಗಲಿ ಹೆಂಗಸರು,

ಹೆಂಗಸರಿಗೆ ಪ್ರಕೃತಿದತ್ತವಾದ ಪ್ರವೃತ್ತಿಗಳನ್ನು ಮೀರಿಹೋಗಲು ತಮಗೆ ಸಾಧ್ಯವಾಗದು ಎಂಬ ಅರಿವು ಅವರನ್ನು ಬಾಧಿಸುತ್ತದೆ. ತತ್ಫಲವಾಗಿ ಅವರಲ್ಲಿ ಒಂದು ಬಗೆಯ ಆಲಸ್ಯ ಮೂಡುತ್ತದೆ. ಉದಾಹರಣೆಗೆ, 'ಆ್ಯಸ್ ಯು ಲೈಕ್ ಇಟ್' ನಾಟಕದ ರೊಸಲಿಂಡ್ ಮತ್ತು ಸೀಲಿಯಾ ಆ ನಾಟಕದ ಮೊದಲನೆ ಅಂಕದ ಮೂರನೆ ದೃಶ್ಯದಲ್ಲಿ ನಡೆಸುವ ಸಂಭಾಷಣೆಯನ್ನು ಓದಿನೋಡಬಹುದು. ಕೆಲವು ವೇಳೆ ಅವರು ಸಂಪೂರ್ಣವಾಗಿ ಎದೆಗುಂದಿ ಸೋತುಹೋಗುವುದೂ ಉಂಟು. 'ಜೂಲಿಯಸ್ ಸೀಸರ್' ನಾಟಕದಲ್ಲಿ ಬರುವ ಬ್ರೂಟಸನ ಹೆಂಡತಿ ಪೋರ್ಷಿಯಾ ಮತ್ತು 'ಮೆಕ್‌ಬೆತ್' ನಾಟಕದ ಲೇಡಿ ಮೆಕ್‌ಬೆತ್ ಇದಕ್ಕೆ ನಿದರ್ಶನಗಳು. ಆದರೆ ಇತರರೆದುರಿಗೆ ಇರುವಾಗಲೂ ಕಠಿಣ ಸನ್ನಿವೇಶಗಳಲ್ಲೂ ಅವರ ಧೈರ್ಯ ಮತ್ತು ಆತ್ಮವಿಶ್ವಾಸಗಳು ತಪ್ಪದೆ ಬೆಳಕಿಗೆ ಬರುತ್ತವೆ. ಲೇಡಿ ಮೆಕ್‌ಬೆತಳೇ ಇದಕ್ಕೂ ಸಾಕ್ಷಿ. ತಾವು ಯಾರೊಡನೆ ವ್ಯವಹರಿಸಬೇಕೋ ಆ ಗಂಡಸರ ಭಾವೋದ್ರಿಕ್ತತೆಯ ತೀವ್ರತೆಗೆ ಅನುಗುಣವಾಗಿ ಅವರು ತಮ್ಮ ಶಕ್ತಿಪ್ರದರ್ಶನ ಮಾಡಲೆಳಸುತ್ತಾರೆ; ತನ್ಮೂಲಕ ಸಂತೋಷವನ್ನೂ ಅನುಭವಿಸುತ್ತಾರೆ. ಈ ಸಂದರ್ಭದಲ್ಲಿ ಆರ್ಡೆನ್ ವನದಲ್ಲಿ ಓಡಾಡುವ ರೊಸಲಿಂಡ್, ವೆನಿಸಿನ ನ್ಯಾಯಾಸ್ಥಾನದಲ್ಲಿ ವಾದಿಸುವ ಪೋರ್ಷಿಯಾ, ಮ್ಯಾಲ್ವೊಲಿಯೊನನ್ನು ಹಾಸ್ಯಕ್ರೀಡೆಮಾಡುವ ಮರಿಯೊ, ಬೆನಿಡಿಕ್ಟನೊಡನೆ ವಾಗ್ಯುದ್ಧದಲ್ಲಿ ತೊಡಗುವ ಬೀಯಟ್ರಿಸ್—ಇವರನ್ನು ನೆನಪಿಗೆ ತಂದುಕೊಳ್ಳಬಹುದು.

ಹೆಂಗಸರು ಇಷ್ಟು ದಿಟ್ಟರಾಗಿ ಸ್ವತಂತ್ರಮನೋಭಾವವುಳ್ಳವರಾಗಿ ವರ್ತಿಸುವುದು ಸ್ತ್ರೀಯರ ಸ್ವಭಾವಕ್ಕೆ ವಿರೋಧವಾದುದು, ಅವರು ಗಂಡಸರಿಗೆ ಅಧೀನರಾಗಿ ಅವರ ರಕ್ಷಣೆ ಪೋಷಣೆಗಳಲ್ಲಿ ಬೆಳೆಯಲು, ಬದುಕಲು ಬಯಸುತ್ತಾರೆ ಎಂಬ ಅಭಿಪ್ರಾಯ ಕೆಲವರು ಪುರುಷಪಕ್ಷಪಾತಿಗಳಾದ ವಿಮರ್ಶಕರಿಗೆ ಬರಬಹುದು. ಆದರೆ ಷೇಕ್ಸ್ಪಿಯರನ ಕಲ್ಪನೆಯ ಸ್ತ್ರೀಯರು ಯಾವ ರೀತಿಯಲ್ಲೂ ಅಮಾನುಷ ಮೃಗಗಳಾಗಲಿ ವಾಸ್ತವಿಕತೆಗೆ ವಿರುದ್ಧವಾದ ಗುಣಗಳನ್ನು ಹೊಂದಿರುವವರಾಗಲಿ ಅಲ್ಲವೆಂದು ಸ್ತ್ರೀಯರೇ ನಿಸ್ಸಂಕೋಚವಾಗಿ ಒಪ್ಪಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಅವನಿಂದ ಅವರಿಗೆ ದೊರೆತಿರುವುದು ಮಾನ್ಯತೆಯೇ ಹೊರತು ನಿಂದೆಯಾಗಲಿ ಅಪಮಾನವಾಗಲಿ ಅಲ್ಲ. ಅಸಾಧಾರಣ ಬುದ್ಧಿಚಾತುರ್ಯ, ವ್ಯವಹಾರಜ್ಞಾನ, ಧೈರ್ಯಸ್ಥೈರ್ಯಗಳನ್ನು ಹೊಂದಿದ್ದ ಮಾತ್ರಕ್ಕೆ ಹೆಂಗಸರು ತಮ್ಮ ಸ್ತ್ರೀತ್ವವನ್ನೂ ಸೌಂದರ್ಯವನ್ನೂ ಆಕರ್ಷಕ ಶಕ್ತಿಯನ್ನೂ ಕಳೆದುಕೊಳ್ಳಬೇಕಾದುದೇನೂ ಇಲ್ಲವೆಂದು ತೋರಿಸಿ ಷೇಕ್ಸ್ಪಿಯರ್ ಅವರಿಗೆ ದೊಡ್ಡ ಗೌರವವನ್ನು ಸಲ್ಲಿಸಿದ್ದಾನೆ. ಅವನ ಆದರ್ಶ ಸ್ತ್ರೀಯರಲ್ಲಿ ಹೃದಯಕ್ಕೆ ಎಷ್ಟು ಪ್ರಾಧಾನ್ಯವಿದೆಯೋ ಬುದ್ಧಿಗೂ ಅಷ್ಟೇ ಪ್ರಾಮುಖ್ಯವಿದೆ. ಅವರೊಡನೆ ಹೋಲಿಸಿ ನೋಡಿದರೆ ಗಂಡಸರು—ಅದರಲ್ಲೂ ಪ್ರಣಯಪಾಶಕ್ಕೆ ಸಿಕ್ಕಿದ ಗಂಡಸರು—ಒಮ್ಮೆ ಅತಿ ಬುದ್ಧಿಶಾಲಿಗಳಾಗಿ ಇನ್ನೊಮ್ಮೆ ಭಾವಾವೇಶಪೂರಿತರೂ ತಮ್ಮ ಮೇಲೆ ತಮಗೇ ಸ್ವಾಮ್ಯವಿಲ್ಲದ ವಿಪರೀತ ವರ್ತನೆಯ ಹುಚ್ಚರೂ ಆಗಿ ಕಂಡುಬರುತ್ತಾರೆ.

ನಮ್ಮನ್ನು ನಾವು ಎಷ್ಟೇ ಹೊಗಳಿಕೊಂಡರೂ ನಮ್ಮ ಹೃನ್ಮನಗಳು ಹೆಂಗಸರ ಹೃನ್ಮನಗಳಿಗಿಂತಲೂ ಹೆಚ್ಚು ಅಸ್ಥಿರವೂ ಅಶಾಶ್ವತವೂ ಆಗಿರುತ್ತವೆ. ಅವರಿಗಿಂತಲೂ ಹೆಚ್ಚಾಗಿ ನಾವು

ಒಲಿಯುವುದೂ ಬೇಗ, ಮರೆಯುವುದೂ ಬೇಗ; ಈಗ ಬೇಕಾದ ವಸ್ತು ಇನ್ನೊಂದು ಕ್ಷಣಕ್ಕೆ ಬೇಡವಾಗುತ್ತದೆ ನಮಗೆ.

ಎಂದು 'ಟ್ವೆಲ್ಫ್ತ್ ನೈಟ್' ನಾಟಕದ ಡ್ಯೂಕ್ ಆರ್ಸಿನೊ ನುಡಿಯುತ್ತಾನೆ. ಷೇಕ್‌ಸ್ಪಿಯರನ ಸ್ವಂತ ಅಭಿಪ್ರಾಯವೂ ಇದೇ ಆಗಿದ್ದಿರಬೇಕೆಂದು ನಾವು ಊಹಿಸಬಹುದು. ನೆಮ್ಮದಿಯ ಬಾಳಿಗೆ ತಳಹದಿಯಂತಿರುವ ವಿವಿಧಗುಣಗಳ ಸಾಮರಸ್ಯ ಒಟ್ಟಿನ ಮೇಲೆ ಹೆಂಗಸರಲ್ಲಿ ಮಾತ್ರ ಎಂದು ಅವನ ನಂಬಿಕೆಯಾಗಿದ್ದಿರಬೇಕು.

ಅವನ ಸ್ತ್ರೀಯರು ಆಲೋಚನಾಪರರಾದರೂ ಕಾರ್ಯಶೀಲರೂ ಹೌದು; ಅವರು ತಮ್ಮ ಆಲೋಚನೆಗಳನ್ನು ಕಾರ್ಯಸಾಧನೆಗಾಗಿಯೋ ಸುಖಾನುಭವಕ್ಕಾಗಿಯೋ ಉಪಯೋಗಿಸುತ್ತಾರೆ. ಸ್ತ್ರೀರೂಪದ ಹ್ಯಾಮ್ಲೆಟ್ ಅವನ ಕೃತಿಗಳಲ್ಲಿಲ್ಲ.

ಎಂಬ ಪ್ರೊ|| ಡೌಡನರ ಹೇಳಿಕೆ ಉಚಿತವಾಗಿದೆ.

ಷೇಕ್‌ಸ್ಪಿಯರನ ನಾಯಿಕೆಯರಲ್ಲಿ ಅನೇಕರಿಗೆ ತಂದೆತಾಯಿಗಳಿಲ್ಲ. ಅದರಲ್ಲೂ ತಾಯಂದಿರ ಅಭಾವವಂತೂ ಎದ್ದು ಕಾಣುತ್ತದೆ. ಸ್ವಲ್ಪಮಟ್ಟಿಗೆ ಇದು ಅವನ ಕಾಲದ ನಾಟಕರಂಗದಲ್ಲಿ ಬಳಕೆಯಲ್ಲಿದ್ದ ಒಂದು ಸಂಪ್ರದಾಯವಾಗಿದ್ದಿತೆನ್ನಬಹುದು. ಅವನ ನಾಟಕಗಳಲ್ಲೆಲ್ಲಾ ತಾಯಿಯಿರುವ ಪ್ರಸಿದ್ಧ ನಾಯಿಕೆಯೆಂದರೆ 'ರೋಮಿಯೊ ಅಂಡ್ ಜೂಲಿಯೆಟ್'ನ ಜೂಲಿಯೆಟ್ ಒಬ್ಬಳೇ. ಈ ಒಂದು ವಿಶೇಷ ಪರಿಸ್ಥಿತಿಯ ಫಲವಾಗಿ ಷೇಕ್‌ಸ್ಪಿಯರನ ಇತರ ದುರಂತನಾಟಕಗಳ ನಾಯಿಕೆಯರಿಗೂ ಜೂಲಿಯೆಟಳಿಗೂ ಎಷ್ಟು ದೊಡ್ಡ ವ್ಯತ್ಯಾಸ ಉತ್ಪನ್ನವಾಗುತ್ತದೆ ಎಂದು ಅವನ ವಾಚಕರೆಲ್ಲರೂ ಬಲ್ಲರು. ಇವಳ ಪರಿಸ್ಥಿತಿಯನ್ನು 'ದಿ ಮರ್ಚೆಂಟ್ ಅಫ್ ವೆನಿಸ್'ನ ಜೆಸಿಕಾಳ ಪರಿಸ್ಥಿತಿಯೊಡನೆಯೋ 'ದಿ ಟೆಂಪೆಸ್ಟ್'ನ ಮಿರ್ಯಾಂಡಳ ಪರಿಸ್ಥಿತಿಯೊಡನೆಯೋ ಹೋಲಿಸಿ ನೋಡಿದರೆ ತಾಯಿಯ ಇರುವಿಕೆ-ಇಲ್ಲದಿರುವಿಕೆಗಳು ಎಷ್ಟು ಪ್ರಬಲವಾದ ಪ್ರಮಾಣದಲ್ಲಿ ನಾಯಿಕೆಯೊಬ್ಬಳ ಗುಣದೋಷಗಳ ಮೇಲೆ, ಆಗುಹೋಗುಗಳ ಮೇಲೆ ಪ್ರಭಾವ ಬೀರಬಲ್ಲವು ಎಂಬುದು ವೇದ್ಯವಾಗುತ್ತದೆ. ಅತಿಯಾಗಿ ರಕ್ಷಣೆಗೆ ಒಳಗಾಗಿರುವುದರಿಂದ ಅವಳ ಪ್ರಪಂಚಜ್ಞಾನ ಮೊಟಕಾಗಿದೆ. ಇದ್ದಕ್ಕಿದ್ದಂತೆಯೇ ರೋಮಿಯೊನ ವಿಷಯದಲ್ಲಿ ತನ್ನ ಪ್ರೇಮ ಉಕ್ಕಿಬಂದಾಗ ಅದನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸುವ ಸಾಮರ್ಥ್ಯ ಇಲ್ಲದಾಗಿ ಅವಳು ಅದರ ಪ್ರವಾಹದಲ್ಲಿ ಕೊಚ್ಚಿಹೋಗುತ್ತಾಳೆ. 'ಅಥೆಲ್ಲೊ' ನಾಟಕದ ಡೆಸ್ಡಿಮೋನಳಿಗೆ ತಾಯಿ ಇದ್ದಿದ್ದರೆ ಆ ನಾಟಕದ ರೂಪಲಕ್ಷಣಗಳೇ ಬದಲಾಯಿಸುತ್ತಿದ್ದವೇನೋ ಎನ್ನಿಸುತ್ತದೆ. ಆಗ ಅಥೆಲ್ಲೊ ಪದೇಪದೇ ಡೆಸ್ಡಿಮೋನಳ ಮನೆಗೆ ಬಂದು ತನ್ನ ಸಾಹಸದ ಕಥೆಗಳನ್ನು ಹೇಳಿ ಹುಡುಗಿಯ ಹೃದಯವನ್ನು ಸೆಳೆಯುವುದಕ್ಕೆ ಅವಕಾಶವಿರುತ್ತಿರಲಿಲ್ಲ. ಲೋಕವ್ಯಾಪಾರದ ಅರಿವೇ ಇಲ್ಲದೆ ಅನುಭವಶೂನ್ಯಳಾದ ಡೆಸ್ಡಿಮೋನ ಅವನಲ್ಲಿ ಅನುರಕ್ತಳಾಗಿ ಕಷ್ಟಕ್ಕೆ ಧುಮುಕುವ ಸಾಧ್ಯತೆಯೂ ಈಗಿನಷ್ಟು ಸುಲಭವಾಗುತ್ತಿರಲಿಲ್ಲ. ಮಿರ್ಯಾಂಡಳ ವ್ಯಕ್ತಿತ್ವದ ಕಲ್ಪನೆಯೇ ಅವಳಿಗೆ ತಾಯಿಯಿಲ್ಲದಿರುವುದನ್ನೂ ತತ್ಫಲವಾಗಿ ಅವಳು ತನ್ನ ತಂದೆಯ ಪ್ರಭಾವಕ್ಕೆ ಒಳಗಾಗಿರುವುದನ್ನೂ ಅವಲಂಬಿಸಿದೆ.

ಆದರೆ ಮಾತೃರಕ್ಷಣೆಯ ಅಗತ್ಯವಿಲ್ಲದ, ತಮ್ಮ ಯೋಗಕ್ಷೇಮವನ್ನು ತಾವೇ

ನೋಡಿಕೊಳ್ಳಬಲ್ಲ ಸ್ವಸಾಮರ್ಥ್ಯ ಬೇಕಾದಷ್ಟಿರುವ ಸುಂದರಿಯರೂ ಷೇಕ್ಸ್ಪಿಯರನ ನಾಟಕಗಳಲ್ಲಿ ಇದ್ದಾರೆ. 'ಆ್ಯಸ್ ಯು ಲೈಕ್ ಇಟ್' ನಾಟಕದ ರೊಸಲಿಂಡ್, 'ದಿ ಮರ್ಚೆಂಟ್ ಅಫ್ ವೆನಿಸ್'ನ ಪೋರ್ಷಿಯಾ, 'ಮಚ್ ಅ್ಯಡೂ ಅಬೌಟ್ ನಥಿಂಗ್'ನ ಬೀಯಟ್ರಿಸ್ ಅಂಥವರು. ಇವರಾರಿಗೂ ತಾಯಿಯ ರಕ್ಷಣಾಹಸ್ತದ ಆಶ್ರಯ ಬೇಕಿಲ್ಲ. ಧೈರ್ಯಸ್ಥೈರ್ಯಗಳಲ್ಲಿ, ವ್ಯವಹಾರಕೌಶಲದಲ್ಲಿ ಇವರು ಎಷ್ಟೋ ಜನ ಗಂಡಸರಿಗಿಂತಲೂ ಮೇಲಾದವರು. ಮಿರ್ರ್ಯಾಂಡ, ಜೂಲಿಯೆಟರಿಗಿಂತಲೂ ಇವರು ವಯಸ್ಸಿನಲ್ಲಿ ಸ್ವಲ್ಪ ದೊಡ್ಡವರು ನಿಜ. ಆದರೂ ಒಟ್ಟಿನ ಮೇಲೆ ಅವರಿಗೆ ಹಿರಿಯರ ಹಿಡಿತ ಸರಿಬೀಳದು. ಅದರಲ್ಲೂ ತಾಯಂದಿರ ಹತೋಟಿಗೆ ಸಿಕ್ಕಿದ್ದರಂತೂ ಅವರ ನಡೆನುಡಿಗಳೇ ಬದಲಾಯಿಸಿ ಹೋಗುತ್ತಿದ್ದವು; ಅವರ ವೈಶಿಷ್ಟ್ಯಕ್ಕೇ ಧಕ್ಕೆ ಬರುತ್ತಿತ್ತು. ಕೆಲವರಿಗೆ ತಂದೆಯರಿದ್ದಾರೆ. ಹೆಣ್ಣುಮಕ್ಕಳ ಚಟುವಟಿಕೆಗಳಲ್ಲಿ ಅವರು ಹೆಚ್ಚು ಕೈಹಾಕುವುದಿಲ್ಲ, ಹಾಕಲಾರರು ಎಂಬುದಿರಬಹುದು, ಷೇಕ್ಸ್ಪಿಯರ್ ಅವರನ್ನು ಉಳಿಸಿಕೊಂಡಿರುವುದಕ್ಕೆ ಕಾರಣ. ಇದ್ದರೂ ಅವರು ಹಿನ್ನೆಲೆಯಲ್ಲಿರುತ್ತಾರೆಯೇ ಹೊರತು ತಮ್ಮ ಮಕ್ಕಳ ಕಾರ್ಯಭಾರಗಳಿಗೆ ಅಡ್ಡಿಆತಂಕಗಳನ್ನು ತರಬಲ್ಲ ಪರಿಣಾಮಕಾರಿ ಪ್ರಭಾವವನ್ನು ಬೀರುವುದಿಲ್ಲ. ಹಾಗೆ ತಂದೆಗೂ ಅಧೀನರಾಗಿರುವ ಹೆಣ್ಣುಮಕ್ಕಳು 'ಹ್ಯಾಮ್ಲೆಟ್' ನಾಟಕದ ಅಫೀಲಿಯಾಳಂತೆ ವ್ಯಕ್ತಿತ್ವಹೀನರಾಗಿರುತ್ತಾರೆ. ಹಾಸ್ಯ-ನಾಟಕಗಳಲ್ಲಂತೂ ಇವರು ಬರುವುದು ಸಾಧ್ಯವಿಲ್ಲ. ಷೇಕ್ಸ್ಪಿಯರನ ಉತ್ತಮ ಹಾಸ್ಯ-ನಾಟಕಗಳ ಪ್ರಸಿದ್ಧ ನಾಯಿಕೆಯರ ಮನಸ್ಸನ್ನು ಸೂರೆಗೊಂಡಿರುವುದು ಅವರ ತಂದೆತಾಯಿಗಳಲ್ಲ, ಹೃದಯೇಶ್ವರರು. "ಆರ್ಲ್ಯಾಂಡೋನಂತಹ ಮನುಷ್ಯನಿರುವಾಗ ತಂದೆಯರನ್ನು ಕುರಿತೇಕೆ ನಾವು ಮಾತಾಡಬೇಕು?" ಎಂಬ ರೊಸಲಿಂಡಳ ಉಲ್ಲಾಸ-ತನುವಾದ ಮಾತು ಅವರೆಲ್ಲರಿಗೂ ಅನ್ವಯಿಸುತ್ತದೆ.

ಆದರೆ ಷೇಕ್ಸ್ಪಿಯರ್ ಸೃಷ್ಟಿಸಿರುವುದು ಬರಿಯ ಇಂಥ ಹೆಣ್ಣುಗಳನ್ನು ಮಾತ್ರವೇ ಅಲ್ಲ. ಇಂಥವರು ಅವನ ಮೆಚ್ಚಿಗೆಯನ್ನು ಪಡೆದಿದ್ದರೂ ಬೇರೆಯ ತರದ ಹೆಂಗಸರೂ ಉಂಟೆಂದು ಅವನು ತೋರಿಸಿದ್ದಾನೆ. ಭಾವಾತಿರೇಕಕ್ಕೆ ಒಳಗಾಗುವವರೂ ಸಾಮಾನ್ಯವಾಗಿ ಜನರ ಕಲ್ಪನೆಯಲ್ಲಿ ಸ್ತುತ್ಯರ್ಹವೆಂದು ಪರಿಗಣಿತರಾಗಿರುವವರೂ ಆದ ಹೆಂಗಸರನ್ನೂ ಅವನು ಸೃಷ್ಟಿಸಿದ್ದಾನೆ. ಇವರಲ್ಲಿ ಸ್ವತಂತ್ರ ವಿಚಾರಶಕ್ತಿಯಾಗಲಿ ಉಲ್ಲಾಸವಾಗಲಿ ಅನಿರೀಕ್ಷಿತವಾಗಿ ಉದ್ಭವಿಸಬಹುದಾದ ನೂತನ ಪರಿಸ್ಥಿತಿಗಳನ್ನು ಎದುರಿಸಬಲ್ಲೆವೆಂಬ ದೃಢಸಂಕಲ್ಪಗಳಾಗಲಿ ಇಲ್ಲ. 'ದಿ ಟು ಜೆಂಟಲ್‌ಮೆನ್ ಆಫ್ ವೆರೋನ' ನಾಟಕದ ಜೂಲಿಯಾಳೂ 'ಮೆಷರ್ ಫರ್ ಮೆಷರ್' ನಾಟಕದ ಮರಿಯಾನಾಳೂ ಇಂಥವರು. ಆದರೆ ಇಂಥ ಹೆಂಗಸರ ಜೀವನ ಯಶಸ್ವಿಯಾಗ ಲಾರದು. ಸಂಪ್ರದಾಯದ ದೃಷ್ಟಿಯಿಂದ ಅವರ ನಡೆನುಡಿಗಳು ಎಷ್ಟೇ ನಿಂದಾತೀತ ವಾಗಿರಲಿ ಅವರು ಜೀವನದಲ್ಲಿ ಜಯಶಾಲಿಗಳಾಗಲಾರರು; ಪ್ರಣಯಿಗಳನ್ನು ಕೂಡ ಆಕರ್ಷಿಸಲಾರರು.

ಒಟ್ಟಿನ ಮೇಲೆ ಷೇಕ್ಸ್ಪಿಯರನ ಅಭಿಪ್ರಾಯದಲ್ಲಿ ಹೆಂಗಸು ಹೇಗಿರಬೇಕು ಎಂಬ ಪ್ರಶ್ನೆಗೆ ನಾವು ಸ್ಥೂಲವಾಗಿ ಉತ್ತರಕೊಡಬಹುದು. ಹೆಂಗಸು ಜೀವನ



**'ಆ್ಯಸ್ ಯು ಲೈಕ್ ಇಟ್' ನಲ್ಲಿ ಆರ್ಲ್ಯಾಂಡೋ ಮತ್ತು ರೊಸಲಿಂಡ್**

ದಲ್ಲಾಗಲಿ ಪ್ರಣಯರಂಗದಲ್ಲಾಗಲಿ ಜಯಗಳಿಸಬೇಕಾದರೆ ಅವಳು ಕೇವಲ ಭಾವಾವೇಶಭರಿತಳಾಗುವ ಹಾಗಿದ್ದರೆ ಸಾಲದು; ಅವಳಲ್ಲಿ ಬುದ್ಧಿಚಾತುರ್ಯ, ಉಲ್ಲಾಸ, ಧೈರ್ಯಸ್ಥೈರ್ಯಗಳೂ ಇರಬೇಕು. ಈ ಸಂಯೋಜನೆ ಇಲ್ಲದ ಹೆಂಗಸು ಕಷ್ಟಕ್ಕೀಡಾಗುತ್ತಾಳೆ, ದುಃಖಭಾಜನಳಾಗುತ್ತಾಳೆ. ಅವನ ದುರಂತನಾಟಕಗಳ ನಾಯಿಕೆಯರು ಶೋಕಾಕುಲರಾಗಿ ದಾರುಣ ಸಂಕಟಗಳಿಗೀಡಾಗುವುದು ಈ ಕಾರಣ ದಿಂದಲೇ. ಅಫೀಲಿಯಾ ಡೆಸ್ಡೆಮೋನರನ್ನೂ ರೊಸಲಿಂಡ್ ಪೋರ್ಶಿಯಾರನ್ನೂ ಹೋಲಿಸಿ ನೋಡಿದರೆ ಈ ಮಾತಿನ ಸತ್ಯ ಸ್ಪಷ್ಟವಾಗಿ ಅರಿವಾಗುತ್ತದೆ. ಆಸೆ ಆಕಾಂಕ್ಷೆ ಗಳಲ್ಲಿ, ಕಾಮ-ಪ್ರೇಮಗಳಲ್ಲಿ, ದಾಂಪತ್ಯಸೌಖ್ಯದ ಅಪೇಕ್ಷೆಯಲ್ಲಿ ಹಾಸ್ಯಚತುರರೂ ವ್ಯವಹಾರಕುಶಲಿಗಳೂ ಆದ ಹೆಂಗಸರಿಗಿಂತಲೂ ಇವರೇನೂ ಕಡಿಮೆಯಿಲ್ಲ. ಆದರೆ ಅವರ ಬಾಳು ಕೊನೆಗೆ ಸಂಕಟಕ್ಕೀಡಾಗುವುದರ ಕಾರಣ ಅವರಲ್ಲಿ ಸ್ವತಂತ್ರವಾಗಿ ಆಲೋಚಿಸುವ, ಸ್ಪಷ್ಟವಾಗಿ ನಿರರ್ಗಳವಾಗಿ ಮಾತಾಡುವ ಸಾಮರ್ಥ್ಯವಿಲ್ಲದಿರುವುದು. ನಾಟಕಗಳಲ್ಲಿ ಮಾತ್ರವಲ್ಲದೆ ದಿನದಿನದ ಜೀವನದಲ್ಲೂ ಇಂಥ ಹೆಂಗಸರು ನಿಷ್ಪ್ರಯೋಜಕ ರಾಗಿರುತ್ತಾರೆ. ಅವರ ಬಾಳಿನ ಸುಖದುಃಖಗಳು ಅವರನ್ನೇ ಅವಲಂಬಿಸಿರುವುದಿಲ್ಲ, ಸುತ್ತಣ ಸಮಾಜದ ಅಥವಾ ಜಗತ್ತಿನ ಸುಖದುಃಖಗಳನ್ನು ಅವಲಂಬಿಸಿರುತ್ತವೆ. ಅವರಲ್ಲಿ ದುರಂತನಾಟಕಗಳ ಪುರುಷವ್ಯಕ್ತಿಗಳಲ್ಲಿರುವ ಒಳತೋಟಿಯಾಗಲಿ ಜೀವನ ಸಮಸ್ಯೆಗಳೊಡನೆಯೂ ವಿಧಿಯೊಡನೆಯೂ ಹೋರಾಡಬೇಕಾದ ಹಿರಿಮೆಯಾಗಲಿ ಇರುವುದಿಲ್ಲ. ಷೇಕ್ಸ್ಪಿಯರನ ಅತ್ಯುತ್ತಮರೂ ಅತ್ಯುನ್ನತರೂ ಆದ ದುರಂತಪಾತ್ರಗಳು ಪುರುಷಪಾತ್ರಗಳು, ಸ್ತ್ರೀಯರಲ್ಲ. ಈ ಮಾತು ಅಫೀಲಿಯಾ, ಡೆಸ್ಡೆಮೋನರಿಗೆ ಎಷ್ಟರ ಮಟ್ಟಿಗೆ ಅನ್ವಯಿಸುತ್ತದೆಯೋ ಲೇಡಿ ಮೆಕ್‌ಬೆತ್, ಗಾನೆರಿಲ್, ರೀಗನ್, ಕ್ಲಿಯೊಪಾಟ್ರ ರವರಿಗೂ ಅಷ್ಟೇ ಅನ್ವಯಿಸುತ್ತದೆ. ಅವರನ್ನು ಕಂಡರೆ ನಮಗೆ ಅಯ್ಯೋ ಎನ್ನಿಸು

ವುದು ಸಹಜ. ಷೇಕ್ಸ್ಪಿಯರಿಗೂ ಅನ್ನಿಸುತ್ತದೆ, ನಿಜ. ಆದರೆ ಅವನ ಮೆಚ್ಚಿಗೆಯನ್ನು ಗಳಿಸಿರುವವರು ತಮ್ಮ ಆಗುಹೋಗುಗಳ ಸೂತ್ರಗಳನ್ನು ತಾವೇ ಹಿಡಿದು, ಇತರರು ಎಳೆದುಕೊಂಡುಹೋದ ಕಡೆ ಹೋಗದೆ, ತಮಗೆ ಸರಿಯೆಂದು ತೋರಿದ್ದನ್ನು ಮಾಡಿ ಬೇಕಾದುದನ್ನು ಪಡೆಯುವ ಶಕ್ತಿಯನ್ನು ಹೊಂದಿ ಗಂಡಸರಿಗೆ ಸರಿಸಮಾನರಾಗಿರುವುದಷ್ಟೇ ಅಲ್ಲದೆ ಕೆಲವು ವೇಳೆ ಇವರಿಗೆ ಮೇಲುಗೈಯಾಗಿಯೂ ಇರುವ ಸ್ತ್ರೀಯರು. ಇವರಿಗೆ ಬಾಳು ಸುಖಮಯವಾಗಿ, ಆಕರ್ಷಕವಾಗಿ, ಹಾಸ್ಯಪೂರ್ಣವಾಗಿ ಪರಿಣಮಿಸುತ್ತದೆ. ಹೀಗೆ ವಿವಿಧಗುಣಗಳ ಸಾಮರಸ್ಯದ ಸ್ವಾಮಿನಿಯರಾದ ಹೆಂಗಸರು ಕೆಲವರು ಪ್ರಣಯಪ್ರಸಂಗಗಳಲ್ಲಿ ತಾವೇ ಮೊದಲು ಹೆಜ್ಜೆಯಿಡುತ್ತಾರೆ. ಷೇಕ್ಸ್ಪಿಯರ್ ಅಂಥವರನ್ನು ಕೂಡ ಅಲ್ಲಗಳೆದಿಲ್ಲ; ಹಾಗೆ ಮಾಡುವುದು ತಪ್ಪೆಂದಾಗಲಿ ಅಸಹಜವೆಂದಾಗಲಿ ಸೂಚಿಸಿಲ್ಲ.

ತಮ್ಮ ಶ್ರೇಷ್ಠಗುಣಗಳಿಗೆ ತಕ್ಕವರಲ್ಲದ ಗಂಡಂದಿರನ್ನು ಪಡೆಯುವ ಹೆಂಗಸರೂ ಷೇಕ್ಸ್ಪಿಯರನ ನಾಟಕಗಳಲ್ಲಿ ಇಲ್ಲದಿಲ್ಲ. 'ದಿ ಟು ಜೆಂಟಲ್‌ಮೆನ್ ಅಫ್ ವೆರೋನ' ನಾಟಕದ ಜೂಲಿಯಾ, 'ಆ್ಯಸ್ ಯು ಲೈಕ್ ಇಟ್' ನಾಟಕದ ಸೀಲಿಯಾ, 'ಮಚ್ ಆ್ಯಡೂ ಅಬೌಟ್ ನಥಿಂಗ್' ನಾಟಕದ ಹೀರೋ, 'ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್' ನಾಟಕದ ಹೆಲಿನಾ, 'ಮೆಷರ್ ಫರ್ ಮೆಷರ್' ನಾಟಕದ ಮರಿಯಾನಾ— ಇವರೆಲ್ಲಾ ಅಂಥವರೇ. ಆದರೆ ಪ್ರೊ|| ಗಾರ್ಡನರವರು ನುಡಿದಿರುವಂತೆ, ಜೀವನ-ರಂಗದಲ್ಲಿ ತಂದೆಯಾದವನೊಬ್ಬನಿಗೆ ತನ್ನೆಲ್ಲ ಹೆಣ್ಣುಮಕ್ಕಳಿಗೂ ಒಂದೇ ತೆರನಾದ ಸ್ಥಾನಮಾನಗಳನ್ನೂ ಗುಣಗಳನ್ನೂ ಉಳ್ಳ ಗಂಡಂದಿರನ್ನು ಹುಡುಕಿ ಮದುವೆ ಮಾಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಸಾಹಿತ್ಯಲೋಕದಲ್ಲೂ ಬರಹಗಾರನೊಬ್ಬನು ತಾನು ಸೃಷ್ಟಿಸಿರುವ ಎಲ್ಲ ಸ್ತ್ರೀಪಾತ್ರಗಳಿಗೂ ಸಮಾನಗುಣಗಳ ಗಂಡಂದಿರನ್ನು ಕೊಟ್ಟು, ಜೋಡಿ ಸರಿಹೋಗುವಂತೆ ಮಾಡುವುದು ಕಷ್ಟವೆಂಬುದನ್ನು ನಾವು ಒಪ್ಪಲೇ ಬೇಕು. ಅಂತೂ ಇಂಥ ಹೆಣ್ಣುಗಳಿಗೆಲ್ಲಾ ಸಾಂಸಾರಿಕ ಜೀವನವನ್ನು ಒದಗಿಸಿಕೊಟ್ಟು ಅವರು ಮುಂದಾದರೂ ಸುಖವಾಗಿರಬಹುದೆಂದು ಷೇಕ್ಸ್ಪಿಯರ್ ಸೂಚಿಸುತ್ತಾನೆ. ಅವನ ದೃಷ್ಟಿಯಲ್ಲಿ ಅಸಮರ್ಪಕವಾದ ವ್ಯಕ್ತಿತ್ವವನ್ನು ಪಡೆದಿರುವ ಹೆಂಗಸರಿಗೆ ಇಷ್ಟರ ಮಟ್ಟಿನ ಸೌಖ್ಯವೂ ಇಲ್ಲ.

ಷೇಕ್ಸ್ಪಿಯರ್ ತೋರಿಸುವುದು ಕೇವಲ ವಿವಾಹಾಕಾಂಕ್ಷಿಗಳ ಕಾಮಾತುರತೆ ಮತ್ತು ಪ್ರಣಯೋತ್ಸುಕಿಗಳ ಸರಸ-ಸಲ್ಲಾಪಗಳನ್ನೇ ಹೊರತು ಸಾಂಸಾರಿಕ ಜೀವನವನ್ನಲ್ಲ ಎಂದು ಕೆಲವರು ಉದ್ಗಾರ ತೆಗೆಯಬಹುದು. ಆದರೆ ದಿನದಿನದ ದಾಂಪತ್ಯ-ಜೀವನದಲ್ಲಿ ಪ್ರಣಯಪ್ರಸಂಗಗಳಲ್ಲಿರುವ ನಾಟಕೀಯ ಅಂಶ ಇರಲಾರದೆಂಬುದು ಅನುಭವವೇದ್ಯ. ಎಷ್ಟೋ ಸಾರಿ ಮನೋಹರವಾಗಿ, ಸ್ವರ್ಗೀಯ ಸುಖದಾಯಕವಾಗಿ ಆರಂಭವಾಗುವ ಪ್ರಣಯ ವಿವಾಹದಲ್ಲಿ ಮುಕ್ತಾಯವಾದ ಮೇಲೆ ಆ ಪ್ರಣಯಿಗಳ ವೈವಾಹಿಕ ಜೀವನ ಕಾಲಕ್ರಮೇಣ ನೀರಸವೂ ಬೇಸರಕರವೂ—ಇನ್ನೂ ಕೇಡಾದರೆ— ದುಃಖಕಾರಕವೂ ಆಗಬಹುದು. ಇದನ್ನೆಲ್ಲಾ ಚಿತ್ರಿಸುವುದು ಹಾಸ್ಯನಾಟಕದ ಹರ್ಷಮಯವಾದ ವಾತಾವರಣಕ್ಕೆ ಅಪಾಯಕಾರಿಯೆಂದು ಬಲ್ಲ ಷೇಕ್ಸ್ಪಿಯರ್

ಅಂತಹ ಸನ್ನಿವೇಶಗಳನ್ನು ದುರಂತನಾಟಕಗಳಿಗೆ ಮೀಸಲಾಗಿಟ್ಟಿದ್ದಾನೆ. ಇಂತಹ ಸಾಂಸಾರಿಕ ಜೀವನದ, ಸುಖದುಃಖಗಳೆರಡನ್ನೂ ತೋರಿಸುವ ಕಿರುಚಿತ್ರಗಳನ್ನು ಆಗೊಮ್ಮೆ ಈಗೊಮ್ಮೆ ನಾವು ಅವನ ನಾಟಕಗಳಲ್ಲಿ ಕಾಣುತ್ತೇವೆ. 'ಜೂಲಿಯಸ್ ಸೀಸರ್' ನಾಟಕದ ಸೀಸರ್ ಮತ್ತು ಕ್ಯಾಲ್ಪರ್ನಿಯಾ ಹಾಗೂ ಬ್ರೂಟಸ್ ಮತ್ತು ಪೋರ್ಷಿಯಾ, 'ಮೆಕ್‌ಬೆತ್' ನಾಟಕದ ಮೆಕ್‌ಬೆತ್ ಮತ್ತು ಲೇಡಿ ಮೆಕ್‌ಬೆತ್ ಹಾಗೂ ಮೆಕ್‌ಡಫ್ ಮತ್ತು ಲೇಡಿ ಮೆಕ್‌ಡಫ್, 'ಹ್ಯಾಮ್ಲೆಟ್' ನಾಟಕದ ಕ್ಲಾಡಿಯಸ್ ಮತ್ತು ಗರ್ಟ್ರೂಡ್, 'ಕಿಂಗ್ ಲಿಯರ್' ನಾಟಕದ ಗಾನೆರಿಲ್ ಮತ್ತು ಆಲ್ಬನಿ—ಇವರೆಲ್ಲರ ಉದಾಹರಣೆಗಳನ್ನೂ ನೆನಪಿಗೆ ತಂದುಕೊಳ್ಳಬಹುದು. ಇಷ್ಟು ಮಾತ್ರ ನಿಸ್ಸಂಕೋಚವಾಗಿ ಹೇಳಬಹುದು—ಷೇಕ್ಸ್ಪಿಯರನ ಯಾವ ನಾಟಕದಲ್ಲೂ ಉದ್ದೇಶ-ಪೂರ್ವಕವಾಗಿ ನೀತಿಭ್ರಷ್ಟರಾಗುವ ಗಂಡಹೆಂಡಿರಾರೂ ಬರುವುದಿಲ್ಲ. ಒಂದು ವೇಳೆ ಯಾರಾದರೂ ಹಾಗಾದರೆ ಅದು ಆವೇಶದ ಪರಿಣಾಮವಾಗಿರುತ್ತದೆಯೇ ಹೊರತು ಆಳವಾದ ಆಲೋಚನೆಯ ಫಲವಾಗಿರುವುದಿಲ್ಲ; ಅಂಥವರನ್ನು ಚಿತ್ರಿಸುವುದರಲ್ಲಿ ಷೇಕ್ಸ್ಪಿಯರ್ ಆಸಕ್ತನಾಗಿರಲಿಲ್ಲ.





# ಷೇಕ್‌ಸ್ಪಿಯರನಲ್ಲಿ ಪ್ರಕೃತಿ-ಚಿತ್ರಣ

**ಸುಮತೀಂದ್ರ ನಾಡಿಗ**

ಷೇಕ್‌ಸ್ಪಿಯರನಲ್ಲಿ ವರ್ಣನೆಗಾಗಿಯೆ ಪ್ರಕೃತಿವರ್ಣನೆ ಇಲ್ಲವೆಂದೇ ಹೇಳಬಹುದು. ಪ್ರಕೃತಿ ಅವನ ಕೃತಿಗಳಲ್ಲಿ ನಿಸರ್ಗವೆನ್ನುವ ಅರ್ಥದಲ್ಲಿ ಸ್ಥಳ ಮತ್ತು ಹೆಸರು (local habitation and a name) ಕೊಡುವುದಕ್ಕೆ, ಮಾನಸಿಕ ಪ್ರಕೃತಿ ಹದಗೆಟ್ಟಾಗ ಅದನ್ನು ದೈಹಿಕ ಪ್ರಕೃತಿಯ ಮೂಲಕ ಮತ್ತು ಹದಗೆಟ್ಟ ನಿಸರ್ಗದ ಮೂಲಕ ಚಿತ್ರಿಸುವುದಕ್ಕೆ, ಸ್ತಿಮಿತಕ್ಕೆ ಬಂದ ಅಥವ ಪಕ್ವವಾದ ಅಥವ ಸಮತೂಕ ಸಾಧಿಸಿದ ಮನಃಸ್ಥಿತಿಯನ್ನು ಕ್ರಮಬದ್ಧವಾದ ಪ್ರಕೃತಿ-ಚಿತ್ರಣದ ಮೂಲಕ ಮಾಡಿಸುವುದಕ್ಕೆ ಉಪಯೋಗಿಸಲ್ಪಟ್ಟಿದೆ. ಪ್ರಕೃತಿ ಅನೇಕ ಅರ್ಥದ ಪದರಗಳನ್ನೊಳಗೊಂಡ ಒಂದು ಘಟಕ. ಆದ್ದರಿಂದಲೆ ಷೇಕ್‌ಸ್ಪಿಯರ್ ಪ್ರಕೃತಿಯ ಬಗ್ಗೆ ಬರೆದಾಗಲೆಲ್ಲ ಇಡೀ ಜೀವನದ ಮೇಲೆ, ಸೃಷ್ಟಿಯ ಮೇಲೆ ಬೆಳಕು ಚೆಲ್ಲುವ ಹಾಗೆ ಬರೆಯುತ್ತಾನೆ.

ಷೇಕ್‌ಸ್ಪಿಯರನಲ್ಲಿ ಪ್ರಕೃತಿ (Nature) ಅನ್ನುವ ಪದ ಅನೇಕ ಸಾರಿ ಬರುತ್ತದೆ. ಈ ಪದದ ಹಿಂದೆ ಆಗಿನ ಕಾಲದ ಆಧಿಭೌತಿಕ ಚಿಂತನೆಯೆಲ್ಲ ಅಡಗಿದೆ. ಎಲಿಜಬೆತ್ ಕಾಲದವರಿಗೆ ಪ್ರಕೃತಿ ಒಂದು ಕ್ರಮಬದ್ಧವಾದ, ಸುಂದರವಾದ ವ್ಯವಸ್ಥೆ. ಅದಕ್ಕೆ ಮನುಷ್ಯ ಹೊಂದಿಕೊಳ್ಳಬೇಕು—ಷೇಕ್‌ಸ್ಪಿಯರನ ಕಾಲದಲ್ಲಿದ್ದ ಸಾಂಪ್ರದಾಯಿಕ ಅರ್ಥ ಅದು. ಅವನ ಸಮಕಾಲೀನರಾದ ಬೇಕನ್ ಮತ್ತು ಹೂಕರ್ ನಾವು ಪ್ರಕೃತಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದರ ಬದಲು, ಪ್ರಕೃತಿಯೇ ನಮ್ಮನ್ನು 'ಹದ್ದುಬಸ್ತಿ'ನಲ್ಲಿಡುವುದನ್ನು ಯೋಚಿಸುತ್ತಾರೆ. ಅವರ ಬರವಣಿಗೆಗಳಲ್ಲಿ ಅವರು ಪ್ರಕೃತಿಯನ್ನು ತಮ್ಮ ಕರ್ತವ್ಯಗಳನ್ನು ಕಲಿಯುವುದಕ್ಕೆ, ಜೀವನದಲ್ಲಿ ತಮ್ಮ ಸ್ಥಾನಗಳನ್ನು ತಿಳಿಯುವುದಕ್ಕೆ ಅಭ್ಯಾಸಮಾಡಬೇಕೆನ್ನುತ್ತಾರೆ. ನಾವಾದರೊ ಪ್ರಕೃತಿಯನ್ನು ಇನ್ನಷ್ಟು ದುಡಿಸಿಕೊಳ್ಳುವುದಕ್ಕೆ ಅಭ್ಯಾಸಮಾಡುತ್ತೇವೆ. ಅವರ ವಿಶ್ವದೃಷ್ಟಿ (world-view) ಒಂದಕ್ಕೊಂದಕ್ಕೆ ಹೊಂದುವ ನಂಬಿಕೆಗಳ ವ್ಯವಸ್ಥೆಯಾಗಿತ್ತು. ಅನೇಕ, ಆದರೆ ಸಂಬಂಧವುಳ್ಳ, 'ತಾರತಮ್ಯ'ವುಳ್ಳ ಅಸ್ತಿತ್ವಗಳನ್ನು—ನಾಲ್ಕು ಮೂಲ-

ವಸ್ತುಗಳಿಂದ ಹಿಡಿದು ದೇವತೆಗಳ ಪರಿಶುದ್ಧ ಬುದ್ಧಿಯವರೆಗೆ—ಸೃಷ್ಟಿ ಒಳಗೊಂಡಿತ್ತು. ದೇವರ ಇಚ್ಛೆಯೇ ಇಡೀ ವಿಶ್ವವನ್ನು ಆಳುವುದು. ಪ್ರಕೃತಿ ದೇವರ ಸಾಧನ. ಸಾಮಾಜಿಕ ಏರುಪೇರುಗಳು (hierarchy) ಪ್ರಕೃತಿಯೇ ಮಾಡಿದ್ದು. ಪ್ರಕೃತಿಯಲ್ಲಿ ಕಾಣುವ ವ್ಯವಸ್ಥೆ ಮನುಷ್ಯನ ಲಾಭಕ್ಕಾಗಿ, ಮನುಷ್ಯ ಪ್ರಕೃತಿಯ ಅವಿಭಾಜ್ಯ ಅಂಗ. ಅವನ ದೈವೀಗುಣಗಳನ್ನು ಪತನದಿಂದಾಗಿ ಕಳೆದುಕೊಂಡಿದ್ದ. ಅದಕ್ಕೇ ದೇವರ ಕೋಪ ಯುದ್ಧ, ಪ್ಲೇಗು, ಗುಡುಗು, ಸಿಡಿಲು, ಬಿರುಗಾಳಿಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತಿತ್ತು. ಆದರೂ ಮನುಷ್ಯ ನಾಗರಿಕ ಸಂತೋಷವನ್ನು—ಈ ಪ್ರಪಂಚವನ್ನು ಮುಂದಿನದಕ್ಕೆ ಸಿದ್ಧತೆಯಾಗಿ ಉಪಯೋಗಿಸಿಕೊಂಡಾಗ, ಆತ್ಮಕ್ಕೆ ಅಧೀನವಾಗಿ ದೇಹವನ್ನಿಟ್ಟುಕೊಂಡಾಗ—ಅನುಭವಿಸಬಹುದಾಗಿತ್ತು.

ಆದ್ದರಿಂದ ಆ ಕಾಲದವರಿಗೆ ಪ್ರಕೃತಿ ಯಾವಾಗಲೂ ಮೌಲ್ಯಸೂಚಿ. ಪ್ರಕೃತಿಯ ಬಗ್ಗೆ ಮಾತನಾಡಿದಾಗ ಅದರ ವ್ಯವಸ್ಥೆ ಮತ್ತು ಆದರ್ಶಸ್ವರೂಪದ ಬಗ್ಗೆ ಪ್ರಸ್ತಾಪ ನಡೆಯುತ್ತಲೇ ಇತ್ತು: ಪ್ರಕೃತಿ ವಿಚಾರಶಕ್ತಿಯನ್ನು (Reason) ತೋರಿಸುತ್ತದೆ. ಕಾನೂನು ಪ್ರಕೃತಿಯ ಅಂತಃಸತ್ವದ ಅಭಿವ್ಯಕ್ತಿ; ಕಾನೂನಿನ ಅಡಿಗಲ್ಲಾದ ರೂಢಿಯೂ ಅದೇ ತರಹದ್ದು. ಸಂಯಮವೆಂದರೆ ಕಾನೂನಿಗೆ ಬದ್ಧರಾಗಿರುವುದು ಮತ್ತು ಸಾರ್ಥಕತೆಯನ್ನು ಹುಡುಕುವ ದಾರಿ. ಪ್ರಕೃತಿ ಸ್ಥಿತಿಗೆ ಕಾರಣವಾದಂತೆ ವಿನಾಶಕ್ಕೂ ಕಾರಣ ಎನ್ನುವ ದೃಷ್ಟಿಯೂ ಚಲಾವಣೆಯಲ್ಲಿದ್ದರೂ ಸ್ಥಿತಿ ಶಕ್ತಿ ಎನ್ನುವ ದೃಷ್ಟಿ ಹೆಚ್ಚು ಒಪ್ಪಿತವಾಗುತ್ತಿತ್ತು.

ಬೇಕನನ ದೃಷ್ಟಿಯಲ್ಲಿ ಪ್ರಕೃತಿ ವಿಚಾರಪೂರ್ಣವಾದ ವ್ಯವಸ್ಥೆ. ಮನುಷ್ಯನ ವಿಚಾರಪ್ರತಿಪಾದನೆ ವೈಯಕ್ತಿಕವಾದದ್ದರಿಂದ ಸಾಧಾರಣವಾದದ್ದರ ಅಮೂರ್ತತೆಯಲ್ಲಿ ಮುಂದುವರಿದಂತೆಯೇ ಪ್ರಕೃತಿಯೂ ಅದೇ ರೀತಿಯಲ್ಲಿ ಕೆಲಸಮಾಡುತ್ತದೆ. ಆದ್ದರಿಂದ ಮನುಷ್ಯನ ತಾರ್ಕಿಕ ಕ್ರಮಕ್ಕೂ ವಿಶ್ವದ ವ್ಯವಸ್ಥೆಗೂ ನೇರವಾದ ಸಂಬಂಧವಿದೆ.

ಇನ್ನೊಂದು ವಿಷಯವೆಂದರೆ ಪ್ರಕೃತಿ ಕೇವಲ ವಿಚಾರಪೂರ್ಣವಾದ ವ್ಯವಸ್ಥೆ ಅಷ್ಟೇ ಅಲ್ಲ, ಉದಾರಬುದ್ಧಿಯದೂ ಹೌದು. ದೇವರಿಂದ ಅದು ನಿಯೋಜಿಸಲ್ಪಟ್ಟದ್ದು. ಅದನ್ನು ಗಮನಿಸಿ ಪ್ರಕೃತಿಯ ಬಗ್ಗೆ ಆಲೋಚಿಸುತ್ತ ಹೋದ ಹಾಗೆ ನಮ್ಮ ಆಲೋಚನೆಯನ್ನು ದೇವರ ಹತ್ತಿರವೇ ಕರೆದೊಯ್ಯುತ್ತದೆ.

ಹೂಕರನ ದೃಷ್ಟಿಯಲ್ಲಿ ಪ್ರಕೃತಿ ಪರಿಪೂರ್ಣತೆಯ ರೂಪ ಅಥವಾ ಪರಿಪೂರ್ಣತೆಗೆ ಕನ್ನಡಿಯನ್ನು ಹಿಡಿದಿರುತ್ತದೆ ಎನ್ನಬಹುದು. ಆದ್ದರಿಂದ ವಾಸ್ತವವಾದದ್ದಕ್ಕೂ ಆದರ್ಶಕ್ಕೂ ದೊಡ್ಡ ಕಂದರವಿಲ್ಲ. ಪರಿಪೂರ್ಣರೂಪ ಕೆಲವು ಬಾರಿ ಕಾಣದೆ ಹೋಗುವುದಕ್ಕೆ ಕಾರಣ ನಮ್ಮ ಕಣ್ಣಿನ ದೋಷ. ಆದರೆ ಕನ್ನಡಿ ಮಾತ್ರ ಅವಶ್ಯಕ.

ಇಂತಹ ಪ್ರಕೃತಿಯನ್ನು ಅನುಸರಿಸುವುದು ಮತ್ತು ಅದಕ್ಕೆ ಹೊಂದಿಕೊಂಡಿರುವುದೆಂದರೆ ರೂಢಿಗಳನ್ನು ಬಿಡದಿರುವುದು, ಕಾನೂನುಗಳನ್ನು ಪಾಲಿಸುವುದು. ಕಾನೂನು ಹೊರಗಿನಿಂದ ಹೇರಿದ ಒಂದು ಹತೋಟಿ ಎಂದು ಗಣಿಸಲ್ಪಟ್ಟಿರಲಿಲ್ಲ. ಕಾನೂನುಬದ್ಧ ನಡತೆಯೇ ನಿಜವಾದ ವ್ಯಕ್ತಿತ್ವದ ಅಭಿವ್ಯಕ್ತಿ ಎನ್ನಿಸಿತ್ತು. ಆದ್ದರಿಂದ ಕಾನೂನಿನ ವಿರುದ್ಧ ಬಂಡಾಯ ಆತ್ಮದ ವಿರುದ್ಧ ಬಂಡಾಯವೆಂದೂ, ಪ್ರಕೃತಿಗೆ ಹೇಳಿಸಿದ್ದಲ್ಲವೆಂದೂ

ತಿಳಿದಿದ್ದರು. 'ಕಿಂಗ್ ಲಿಯರ್' ನಾಟಕದಲ್ಲಿ ಇಂತಹ ವಿಚಾರಗಳನ್ನು ಮೊದಲ ಮಗಳು ಗಾನೆರಿಲಳಿಂದ ತ್ಯಕ್ತನಾದಾಗ ಎರಡನೆಯ ಮಗಳು ರೀಗನಳಿಗೆ ಲಿಯರ್ ಹೇಳುವ ಮಾತುಗಳಲ್ಲಿ ವ್ಯಕ್ತವಾಗುತ್ತವೆ :

ಇಲ್ಲ, ರೀಗನ್. ಎಂದೆ ನಾ ನಿನ್ನ
ಶಪಿಸೆನು. ಅದೇ ನಿನ್ನ ಮೆದುಹಿಡಿಯ ಪ್ರಕೃತಿ
ಕ್ರೌರ್ಯಕೆ ಅಧೀನಮಾಡದು ನಿನ್ನ. ಅವಳವು
ಕಣ್ಣುಗಳು ತೀಕ್ಷ್ಣ. ನಿನ್ನವು ಸುಡವು, ಲಾಲಿಸವು.
ನಿನ್ನ ಪ್ರಕೃತಿಯೊಳಿಲ್ಲ, ನನ್ನ ಸಂತೋಷಗಳ
ಈರ್ಷೆಯಲಿ ತಡೆಯುವುದು, ನನ್ನ ಪರಿವಾರವನು
ಕಡಮೆ ಮಾಡುವುದು, ಆತುರದ ನುಡಿಯುರಟಣೆಯ
ಆಡುವುದು, ನನ್ನ ವರಮಾನವನು ಇಳಿಸುವುದು,
ಅಂತೆ ಕೊನೆಯಾಗಿ ನಾನೊಳಗೆ ಬಾರದ ರೀತಿ
ಅಗಳಿ ಹಾಕುವುದು. ಅವಳಿಗೆ ಮಿಗಿಲು ನೀ ಬಲ್ಲೆ,
ಬಾಂಧವ್ಯದುಪಚಾರಗಳನು, ಮಗುತನವೆಂಬ
ಸಂಬಂಧವನು, ವಿನಯವರ್ತನಗಳನು, ಕೃತದ
ನೆನವ ಋಣವನು.[1]

ಇಲ್ಲಿ ಲಿಯರನ ದೈವಶಾಸ್ತ್ರದ ಪ್ರಕಾರ ಪ್ರಕೃತಿ ಉದಾರಿ ಎನ್ನುವುದು ಬೇಕನ್ ಮತ್ತು ಹೂಕರರಲ್ಲಿ ಕಂಡ ಹಾಗೇ ಕಾಣುತ್ತದೆ. ಅವರ ಪ್ರಕೃತಿಯ ಹಾಗೇ ಲಿಯರನವೂ ಮೆಟ್ಟಿಲುಮೆಟ್ಟಿಲಾದ ವ್ಯವಸ್ಥೆ. ಅದೂ ಸಹ ತಾಯಿತಂದೆಗಳನ್ನು ಮಕ್ಕಳು ಗೌರವಿಸಬೇಕು, ಮಾನವನಿಗೆ ತಕ್ಕದಾದ್ದನ್ನು ಮಾಡಬೇಕು ಎಂದು ಹೇಳುತ್ತದೆ. ಕರುಣೆ, ಔದಾರ್ಯ, ದಾನ, ವ್ಯಕ್ತಿಗೌರವ, ಕೃತಜ್ಞತೆ ಇವುಗಳನ್ನು ಮಾನವನ ಪರಿ-ಪೂರ್ಣತೆಯ ಅಂಶಗಳನ್ನಾಗಿ ಎಣಿಸುತ್ತದೆ.

ಹೂಕರ್, ಬೇಕನ್ ಮುಂತಾದವರ ಆಲೋಚನಾಪದ್ಧತಿಯನ್ನು ಬುಡಮೇಲು ಮಾಡುವ ಬೇರೆ ಬೇರೆ ನಂಬಿಕೆಗಳೂ ಈ ಕಾಲದಲ್ಲಿ ಹುಟ್ಟುತ್ತಿದ್ದವು. ಇಂತಹ ವಿಚಾರಗಳನ್ನು 'ಕಿಂಗ್ ಲಿಯರ್' ನಾಟಕದಲ್ಲಿ ಎಡ್ಮಂಡ್ ಪ್ರತಿನಿಧಿಸುತ್ತಾನೆ :

ಪ್ರಕೃತಿ, ನೀ ನನ್ನ ದೇವತೆ. ನನ್ನ ಸೇವೆಗಳು
ನಿನ್ನ ನಿಯಮಕೆ ಬದ್ಧ. ನಾನೇಕೆ, ವಾಡಿಕೆಯ
ವ್ಯಾಧಿಯಲಿ ನಿಂತು, ಸೋದರನಿಂದ ಹನ್ನೆರಡೊ
ಹದಿನಾಲ್ಕೊ ಹುಣ್ಣಿಮೆಯ ಕಾಲ ಹಿಂದಾದುದರ
ಸಲುವಾಗಿ, ಜನತೆಗಳ ನಿಶಿತವೀಕ್ಷಣ ನನ್ನ
ಸುಲಿಯೆ ಸಮ್ಮತಿಸಬೇಕು ? ಅನೌರಸ ಏಕೆ ?
ಯಾವ ಕಾರಣ ನೀಚ ? ನನ್ನ ಅಂಗಪ್ರಮಾಣ,
ನಿಜಪತ್ನಿ ಸಂತಾನದೊಲೆ ಅಚ್ಚುಕಟ್ಟಾಗಿ,

[1] ಇದು ಮತ್ತು ಈ ಲೇಖನದಲ್ಲಿ ಕೊಟ್ಟಿರುವ 'ಕಿಂಗ್ ಲಿಯರ್' ನಾಟಕದ ಇತರ ಭಾಗಗಳ ಭಾಷಾಂತರಗಳು ಶ್ರೀ ಶ್ರೀನಿವಾಸರವು, 'ಲಿಯರ್ ಮಹಾರಾಜ'ದಿಂದ ಎತ್ತಿಕೊಂಡವು.

ನನ್ನ ಮನ ಅಂತೇ ಉದಾರ, ನನ್ನಾಕಾರ
ಅಂತೆ ಸುಂದರ, ಆಗಿರುತ ? ನೀಚನೈಚ್ಯಗಳ
ಬರೆಯ ಹಾಕುವರೆಮಗೆ ಏತಕೆ ? ಅನೌರಸ ?
ನೀಚ ? ನೀಚ ? ನಿದ್ದೆ ಎಚ್ಚರಗಳಿಗೆ ನಡುವೆ
ಹಳಸು ದಣಿವಿನ ಮೊದ್ದು ಹಾಸಿನಲಿ ಹಡೆಯಬಹ
ಪೊಳ್ಳರದು ಒಂದು ಇಡಿಕುಲದ ನಿರ್ಮಾಣದಲಿ
ಸಲುವುದಕೆ ಮಿಗಿಲಾದ ಸಾಮಗ್ರಿ, ತೀವ್ರತರ
ಸತ್ವವನು, ಪ್ರಕೃತಿತತ್ವದ ಕೊರ್ವ ಚೌರ್ಯದಲಿ
ಪಡೆವವರು ? ಇಂತಿರುತ ಎಡ್‌ಗರ್, ಓ ಔರಸ,
ನಿನ್ನ ನೆಲ ನನಗೆ ಬರಬೇಕು. ತಂದೆಯ ಒಲವು
ಔರಸನ ಮೇಲೆ ಎಂತಂತೇ ಅನೌರಸನ
ಮೇಲೆ ಇದೆ. ಅಹ ಎಂಥ ಚೆಲುವ ನುಡಿ "ಔರಸ" !
ಒಳಿತು ನನ್ನೌರಸ, ಈ ಪತ್ರ ಜಯಗಳಿಸಿ
ನನ್ನ ಸಂಧಾನ ಫಲಿಸಿತೆ, ನೀಚ ಈ ಎಡ್ಮಂಡ್
ಔರಸನ ತಲೆ ಮೇಲೆ. ನಾ ಬೆಳೆಯುವೆನು, ಏಳ್ಗೆ
ಪಡೆಯುವೆನು. ದೇವತೆಗಳೇ, ಅನೌರಸ ಜನಕೆ
ನೆರವಾಗಿ.

ಎಡ್ಮಂಡನಿಗೆ ರೂಢಿ—'plague of custom'. ತನ್ನ ಎಲ್ಲ ಶಕ್ತಿ ಮತ್ತು ಕೌಟಿಲ್ಯದಿಂದ ತನ್ನ ಏಳಿಗೆಯನ್ನು ಸಾಧಿಸಿಕೊಳ್ಳುವುದೇ ಅವನ ವ್ಯವಹಾರ. "ಪ್ರಕೃತಿ, ನೀ ನನ್ನ ದೇವತೆ"—ಹೀಗೆ ಪ್ರಕೃತಿಯನ್ನು ಸರಾಗವಾಗಿ ಆಹ್ವಾನಿಸುತ್ತಾನೆ. ಇನ್ನೊಂದು ಕಡೆ "ನಾನು ರೂಪಿಸೆ ಬಹುದು ಅದು ಎಲ್ಲ ಸಮ ನನಗೆ" ಎನ್ನುತ್ತಾನೆ. ಜಾರಜ (ಅನೌರಸ) ಎಡ್ಮಂಡನಿಗೆ ಪ್ರಕೃತಿಯಲ್ಲಿ ಕಾರ್ಯಕಾರಣ ಸಂಬಂಧವೊಂದನ್ನು ಬಿಟ್ಟರೆ ಬೇರೆ ಏನೂ ಕಾಣುವುದಿಲ್ಲ. ಪ್ರಕೃತಿ ಅವನಿಗೆ ಮೌಲ್ಯಸೂಚಿಯೂ ಅಲ್ಲ. ಎಡ್ಮಂಡನಿಗೆ ಮನುಷ್ಯ ನೈತಿಕವಾಗಿ ಉದಾಸೀನ ಪ್ರಕೃತಿಯ ಒಂದು ಭಾಗ ಮಾತ್ರ. ಈ ತರಹ ಪ್ರಕೃತಿಯನ್ನು ಹೂಕರ್ ಮತ್ತು ಬೇಕನ್ ಎಂದೂ ಒಪ್ಪುತ್ತಿರಲಿಲ್ಲ. ಅವರ ದೃಷ್ಟಿಯಲ್ಲಿ ಒಬ್ಬನ ಪ್ರಕೃತಿ ಅದರ ಆದರ್ಶರೂಪವಲ್ಲ, ಆದರ್ಶರೂಪವನ್ನು ಸಾಧಿಸಿಕೊಳ್ಳಬೇಕಾದದ್ದು.

ಆದರೆ ಈ ತರಹ ಪ್ರಕೃತಿಯನ್ನು ಬೇಕನ್ ಆಗಲಿ ಅವನ ಸಮಕಾಲೀನರಾಗಲಿ ನೋಡಲಿಲ್ಲವೆಂದಲ್ಲ, ಬೇಕನ್ ಕೊಡುವ ಪ್ಯಾನನ (Pan) ಚಿತ್ರ ಆ ರೀತಿಯದು : "ಎಲ್ಲ ಸ್ವಾಭಾವಿಕ ವಸ್ತುಗಳಿಗೂ ನಿಜವಾಗಿ ಎರಡು ಮುಖಗಳಿವೆ. ಅಥವಾ ಅವು ಮೇಲುಕೀಳುಗಳ ಅಂಶಗಳಿಂದ ಕೂಡಿರುತ್ತವೆ." ಸ್ಪೆನ್ಸರ್ ತನ್ನ ಮಹಾಕಾವ್ಯವಾದ 'ದಿ ಫೇರಿ ಕ್ವೀನ್'ನಲ್ಲಿ ಪ್ರಕೃತಿಯನ್ನು ಚಿತ್ರಿಸುವಾಗ, ಅವಳ ಮುಖ ಕಾಣಿಸುತ್ತಿರಲಿಲ್ಲ, ಕೆಲವರು ಅವಳಿಗೆ ಸಿಂಹದ ಮುಖವಿದೆ ಎನ್ನುತ್ತಾರೆ, ಇನ್ನು ಕೆಲವರು ಸುಂದರವಾದ ಮುಖವಿದೆ ಎನ್ನುತ್ತಾರೆ ಎಂದು ಹೇಳುತ್ತಾನೆ. ಮನುಷ್ಯನ ಆಯ್ಕೆಗೆ ಸುಂದರವದನೆ ಪ್ರಕೃತಿ ಹಾಗೂ ಸಿಂಹವದನೆ ಇಬ್ಬರೂ ಇದ್ದಾರೆ. ಎಡ್ಮಂಡ್ ಸಿಂಹವದನೆಯನ್ನು ಆರಿಸುತ್ತಾನೆ. ವಿಚಾರಶಕ್ತಿಯನ್ನು, ಮೌಲ್ಯವನ್ನು ಕಂಡುಕೊಳ್ಳುವುದಕ್ಕಾಗಿ ಅಲ್ಲ, ಸ್ವಾರ್ಥವನ್ನು ಸಾಧಿಸಿಕೊಳ್ಳುವುದಕ್ಕಾಗಿ ಉಪಯೋಗಿಸುತ್ತಾನೆ. ಷೇಕ್-

ಸ್ಪಿಯರ್ ಸತ್ತ ಹದಿನಾಲ್ಕನೆಯ ವರ್ಷದಲ್ಲಿ ಹುಟ್ಟಿದ ಹಾಬ್ಸ್‌ನಲ್ಲಿ ಎಡ್ಮಂಡ್ ಪ್ರತಿನಿಧಿಸುವ ವಿಚಾರಗಳು ತತ್ವಜ್ಞಾನದ ಬಣ್ಣಪಡೆಯುತ್ತವೆ : ಅವನ ಪ್ರಕಾರ ಮನುಷ್ಯ ಸಂಪೂರ್ಣವಾಗಿ ಸ್ವಾರ್ಥಿಯಾದ ಪ್ರಾಣಿ; ಇತರರ ಅವಶ್ಯಕತೆಗಳಿಗೆ ಗಮನ ಕೊಡದೆ ತನ್ನ ಸ್ವಾರ್ಥ ಸಾಧಿಸುವವನು. "ಮನುಷ್ಯನ ಪ್ರಕೃತಿಯಲ್ಲಿ ಕಲಹಕ್ಕೆ ಮೂರು ಕಾರಣಗಳನ್ನು ಕಾಣುತ್ತೇನೆ. ಸ್ಪರ್ಧೆ, ಹೆದರಿಕೆ ಮತ್ತು ಮಹತ್ವಾಕಾಂಕ್ಷೆ. ಮೊದಲನೆಯದು ಲಾಭಕ್ಕಾಗಿ ಮನುಷ್ಯರನ್ನು ದರೋಡೆಗೆ ಹಚ್ಚುತ್ತದೆ; ಎರಡನೆಯದು ರಕ್ಷಣೆಗಾಗಿ; ಮೂರನೆಯದು ಕೀರ್ತಿಗಾಗಿ. . . . ಇದರಿಂದ ಸ್ಪಷ್ಟವಾಗುವುದೇನೆಂದರೆ, ಎಲ್ಲರನ್ನೂ ಹೆದರಿಕೆಯಲ್ಲಿಡುವ ಸಾಮಾನ್ಯಶಕ್ತಿಯೊಂದು ಇಲ್ಲದಿದ್ದರೆ ಅವರು ಸದಾ ಕದನಕ್ಕೆ ನಿಲ್ಲುತ್ತಾರೆ: ಎಂತಹ ಕಲಹವೆಂದರೆ ಪ್ರತಿಯೊಬ್ಬನೂ ಇನ್ನೊಬ್ಬನ ಮೇಲೆ . . . . ಯಾವಾಗಲೂ ಹೆದರಿಕೆ ಮತ್ತು ಕ್ರೂರವಾದ ಸಾವು ; ಆಗ ಮನುಷ್ಯನ ಬದುಕು ಕ್ಷೀಣಿಸುತ್ತದೆ, ಒಂಟಿತನ, ಬಡತನ, ಕ್ಷುದ್ರತನ, ಕ್ರೌರ್ಯಗಳಿಂದ ತುಂಬಿಹೋಗುತ್ತದೆ" ಎಂದು ಹಾಬ್ಸ್ ಹೇಳುತ್ತಾನೆ.

ಇಂತಹ ಕ್ರೂರ ಪ್ರಕೃತಿಯ ಮತ್ತು ಬೇಕನ್ ಮತ್ತು ಹೂಕರರ ಉದಾರ ಪ್ರಕೃತಿಯ ಘರ್ಷಣೆಯ ಸಂಕೇತ 'ಕಿಂಗ್ ಲಿಯರ್' ನಾಟಕ ಎನ್ನಬಹುದು. ಈ ಘರ್ಷಣೆಯ ಬಿಡುಗಡೆಯ ರೀತಿಯನ್ನು ಅರ್ಥಮಾಡಿಕೊಳ್ಳಬೇಕಾದರೆ ಎಲಿಜಬೆತ್ ಕಾಲದವರ ಇನ್ನೊಂದು ಭಾವನೆಯನ್ನು ತಿಳಿದುಕೊಳ್ಳಬೇಕು. ಅವರು ದೇವರು ಮನುಷ್ಯನಿಗೆ ನಿಶ್ಚಿತವಾದ ಪ್ರಕೃತಿಯನ್ನು ಕೊಟ್ಟಿದ್ದಾನೆಂದು ನಂಬಿದ್ದರು. ಇದನ್ನು 'ದಯೂಮಯಿ' (kind) ಎಂದು ಕರೆಯುತ್ತಿದ್ದರು. ಮನುಷ್ಯ ಈ ಪ್ರಕೃತಿಯ ವಿರುದ್ಧ ಹೋದಾಗ, ಅತಿಕ್ರಮಿಸಿದಾಗ ಅವನ ನಾಶವಾಗುತ್ತದೆ; ಆದರೆ ಹಿರಣ್ಯಾಕ್ಷ, ನರಕಾಸುರರಿಗಾದಂತೆ ಅವತಾರಪುರುಷನಿಂದಲ್ಲ, ಮನುಷ್ಯನಲ್ಲಿರುವ ದೇವರ ಮೂಲಕ.

ತನಗೆ ನಿಶ್ಚಿತವಾದ ಪ್ರಕೃತಿಯಿಂದ ಲಿಯರ್ ಬಿಡಿಸಿಕೊಂಡಿದ್ದರಿಂದಲೇ ಅವನು ಹುಚ್ಚನಾಗುತ್ತಾನೆ. ತಪ್ಪುಮಾಡಿದವನು ಅದಕ್ಕೆ ತಕ್ಕ ಶಿಕ್ಷೆಯನ್ನು ತಾನೇ ತಂದುಕೊಳ್ಳುತ್ತಾನೆ. ತಾನು ಮಾಡಿದ್ದಕ್ಕೆ ತಾನು ಅನುಭವಿಸುತ್ತಾನೆ. ತಾನು ತನ್ನ ಪ್ರಕೃತಿಯಿಂದ ದೂರಹೋದದ್ದೇ ಅವನ ಮನಸ್ಸನ್ನು ಕಡಿಯುತ್ತದೆ.

ದುರ್ದಮ್ಯ ಸಂಕೋಚ ಬಂದವರ
ತನ್ನ ಮೊಳಕೈಯಿಂದ ಅವುಕಿ ಹಿಂಜರಿಸುತಿದೆ.
ತಮ್ಮ ಕಾಠಿನ್ಯ ತಮ್ಮೊಶಿಷದ ಆಕೆಗೆ
ಇಲ್ಲದಂತೆಸಗಿದುದು, ಪರದೇಶ ಸಹಜವಹ
ಸಂಭವಗಳಿಗೆ ಈಡುಮಾಡಿದುದು, ನಾಯ್ ಎದೆಯ
ಆ ಮಗಳುದಿರಿಗಿವರ ಪ್ರೀಯ ಅಧಿಕಾರಗಳ
ಕೊಟ್ಟುಬಿಟ್ಟುದು,—ಹದನು ಇವು ದೊರೆಯ ಚೇತನವ
ಇಂತು ನಂಜೂರಿ ಆಗಿವುವು, ಉರಿವ ನಾಣವರ
ಕಾರ್ಡೀಲಿಯಾ ಕುಮಾರಿಯನು ಸಾರದ ತೆರಕೆ
ತಡೆದಿಹುದು. (**ಕೆಂಟ್.**)

ಇಲ್ಲಿ ಲಿಯರ್ ಅನುಭವಿಸುವ ಶಿಕ್ಷೆ ಅವನ ಏಳಿಗೆಯ ಮಾರ್ಗವೂ ಆಗುತ್ತದೆ.

ಲಿಯರ್ ಬರುಬರುತ್ತ ಮನುಷ್ಯನಲ್ಲಿರುವ ಪ್ರಾಣಿತನವನ್ನೂ, ಮನುಷ್ಯತನವನ್ನೂ ಬೇರೆ ಬೇರೆಯಾಗಿ ನೋಡುವುದನ್ನು ಕಲಿಯುತ್ತಾನೆ. ಇದರಿಂದಲೇ ದುರಂತ ರೌದ್ರವಾಗಿ ಕಂಡರೂ ದುರಂತನಾಯಕ ಮುಕ್ತನಾಗುತ್ತಾನೆ.

'ಕಿಂಗ್ ಲಿಯರ್' ನಾಟಕದಲ್ಲಿ 'nature', 'natural', 'unnatural' ಎನ್ನುವ ಪದಗಳು ಸುಮಾರು ನಲವತ್ತು ಬಾರಿ ಬರುತ್ತವೆ. ಪ್ರಕೃತಿಯ ಕಲ್ಪನೆಯ ವಿವಿಧ ಮುಖಗಳ ನಾಟಕೀಕರಣ 'ಕಿಂಗ್ ಲಿಯರ್' ನಾಟಕ ಎಂದು ಹೇಳಬಹುದು. ಇಲ್ಲಿನ ಪಾತ್ರಗಳು ಪ್ರಕೃತಿಯ ಒಂದಲ್ಲ ಒಂದು ಅರ್ಥವನ್ನು ಆರಿಸಿಕೊಳ್ಳುತ್ತಾರೆ. ತಾವು ಆರಿಸಿಕೊಂಡ ಪ್ರಕೃತಿಯ ರೀತಿಯಲ್ಲಿ ವರ್ತಿಸುತ್ತಾರೆ. ಲಿಯರನಿಗೆ ಬೆಳಕು ಕಾಣುವುದು ಕೂಡ ಪ್ರಕೃತಿಯ ಸಾನ್ನಿಧ್ಯದಲ್ಲಿ, ಬಿರುಗಾಳಿಯ ದೃಶ್ಯದಲ್ಲಿ.

ಷೇಕ್ಸ್ಪಿಯರ್ ಪ್ರಕೃತಿಯಿಂದ ಆಯ್ದುಕೊಂಡಷ್ಟು ಪ್ರತಿಮಾವಳಿಯನ್ನು ಅವನ ಸಮಕಾಲೀನರಾರೂ ಆಯ್ದಿರಲಿಲ್ಲ. ಷೇಕ್ಸ್ಪಿಯರನಿಗೆ 'ಪ್ರಕೃತಿ'ಯ ವಿವಿಧಮುಖಗಳ ನಿಕಟ ಪರಿಚಯವಾಗಿತ್ತು. ಕೇವಲ ಗಿಡಮರಗಳ ವರ್ಣನೆ, ಸೂರ್ಯಾಸ್ತವನ್ನು ಕಂಡು ಕೆಲವರು ಅಹ! ಓಹೊ! ಎನ್ನುವಂತಹ ಉದ್ಗಾರವಷ್ಟಕ್ಕೆ ಅದು ಸೀಮಿತವಾಗಿರಲಿಲ್ಲ. ಪ್ರಕೃತಿಯು ಅವನು ಅನುಭವಿಸಿದ ಅನೇಕ ಅರ್ಥಗಳ ಮೂರ್ತಿ ಕೂಡ ಆಗಿತ್ತು.

### ಮುಖ್ಯ ಆಕರಗಳು

1. *Shakespeare's Doctrine of Nature,* John F. Danby.
2. *Some Shakespearean Themes,* L. C. Knights.
3. *The Seventeenth-Century Background,* Basil Willey.
4. *Shakespeare's Poetics,* Russel A. Fraser.
5. *Shakespearean Imagery,* Caroline F. E. Spurgeon.





# ಷೇಕ್ಸ್‌ಪಿಯರರ ಜಗತ್ತಿನಲ್ಲಿ ಬೆಪ್ಪರು ಮತ್ತು ಬೆಪ್ಪುತನ

**ಎಲ್. ಎಸ್. ಶೇಷಗಿರಿರಾವ್**

ಬೆಪ್ಪುತನವೂ ವಿವೇಕದಂತೆಯೇ ಮನುಷ್ಯನಿಗೆ ದೈವದತ್ತವಾದ ವರ. "ನೀನು ನನ್ನನ್ನ ಬೆಪ್ಪ ಎನ್ನುತ್ತೀಯ, ಮಗೂ?" ಎಂದು ಲಿಯರ್ ರಾಜ ವಿದೂಷಕನನ್ನು ಕೇಳಿದರೆ, "ಉಳಿದೆಲ್ಲ ನಿನ್ನ ಬಿರುದೂ ಕೊಟ್ಟು ಮುಗಿಸಿದೀ, ಇದು ನಿನಗೆ ಹುಟ್ಟಾ ಅಂಟಿದ್ದು[1]" ಎನ್ನುತ್ತಾನೆ ವಿದೂಷಕ. ಮನುಷ್ಯನ ಸ್ವಭಾವಕ್ಕೆ ವೈವಿಧ್ಯವನ್ನು ನೀಡುವ, ಅವನ ಬಾಳಿನ ಪ್ರವಾಹದ ದಿಕ್ಕನ್ನು ನಿರ್ಧರಿಸುವ ಗುಣಗಳಲ್ಲೊಂದು ಬೆಪ್ಪುತನ. ಒಮ್ಮೊಮ್ಮೆ ಜೀವನದಲ್ಲಿ ಮೂರ್ಖನು ಯಾರು, ವಿವೇಕಶಾಲಿ ಯಾರು ಎಂದೂ ಸಂದೇಹ ಬರುವುದುಂಟು. ಹಣವನ್ನು ಎಸೆದುಬಿಡುವ ರಾಮಕೃಷ್ಣ ಪರಮಹಂಸರು ಇತರರ ಕಣ್ಣಿಗೆ ಹುಚ್ಚರು! 'ಚೆಲುವಿರುವುದು ನೋಡುವ ಕಣ್ಣಿನಲ್ಲಿ' ಎಂಬಂತೆ ಒಮ್ಮೊಮ್ಮೆ 'ಬೆಪ್ಪುತನ ಇರುವುದು ನೋಡುವ ಕಣ್ಣಿನಲ್ಲಿ' ಎಂದೂ ಎನ್ನಬಹುದು. ಮಾನವ ಜೀವನ, ಮಾನವ ಸ್ವಭಾವಗಳಲ್ಲಿ ಅಂತ್ಯವಿಲ್ಲದ ಆಸಕ್ತಿಯನ್ನು ಹೊಂದಿದ್ದ ಷೇಕ್ಸ್‌ಪಿಯರರ ಜಗತ್ತಿನಲ್ಲಿ ಬೆಪ್ಪುತನಕ್ಕೂ ಸ್ಥಳ ಉಂಟು.

ಷೇಕ್ಸ್‌ಪಿಯರ್ ಬರೆಯಲು ಪ್ರಾರಂಭಿಸುವ ಹೊತ್ತಿಗೆ ಆಗಲೇ ಬೆಪ್ಪುತನ ರಂಗಭೂಮಿಯ ಮೇಲೆ ಒಂದು ಸ್ಥಾನವನ್ನು ಗಳಿಸಿದ್ದಿತು. ಗಾಂಭೀರ್ಯ ಎಂತಹ ಕೋಟಿಯನ್ನೇ ಕಟ್ಟಲಿ ಹಾಸ್ಯ ಹೇಗೋ ನುಸುಳಿಕೊಂಡು ಬಂದು ಸೇರಿಬಿಡುತ್ತದೆ. ಎಂತಲೇ ಮತದ ಸ್ಫೂರ್ತಿಯಿಂದ ರೂಪ ತಾಳಿ ಬೆಳೆದು ಬಂದ ನಾಟಕದಲ್ಲಿಯೂ ಹಾಸ್ಯ ಕಾಲಿಡುತ್ತದೆ. ಭೀಮಸೇನನಿಗೂ ಹೊಟ್ಟೆಬಾಕತನದ ಕೀರ್ತಿ ಅಂಟಿಕೊಂಡು ಬಿಡುತ್ತದೆ. ಅನೇಕ ನಾಟಕಗಳಲ್ಲಿ ನಾವು ಕಾಣುವ ವಿದೂಷಕನ ಪಾತ್ರ ಹಾಸ್ಯವನ್ನು ಆಮದು ಮಾಡುವ ಅವಶ್ಯಕತೆಗಾಗಿಯೇ ಜನ್ಮ ತಾಳಿದುದು. ಬಹು ನಾಟಕಗಳಲ್ಲಿ ಆ ಉದ್ದೇಶವನ್ನು ಹೇಗೋ ಎಂತೋ ಅಂತೂ ಪೂರೈಸಿ ವಿರಮಿಸುತ್ತದೆ. ಆ ಅವಶ್ಯಕತೆಯನ್ನು

[1] ಶ್ರೀ ಶ್ರೀನಿವಾಸರ ಭಾಷಾಂತರ: 'ಲಿಯರ್ ಮಹಾರಾಜ'.

ಯಾವುದಾದರೊಂದು ಮಿತಿಯಲ್ಲಿ ಪೂರೈಸಿ ವಿರಮಿಸಿದರೂ ಪುಣ್ಯವೇ. ವಿದೂಷಕನೇ ನಾಟಕವನ್ನು ಕಬಳಿಸಿಬಿಡುವುದೂ ಉಂಟು. ಷೇಕ್ಸ್ಪಿಯರ್ ಬರೆಯುವ ಮುನ್ನ ಇಂತಹುದೊಂದು ಪರಿಸ್ಥಿತಿ ಇಂಗ್ಲಂಡಿನ ನಾಟಕಕಾರರನ್ನು ಕಾಡುತ್ತಿತ್ತು. ರಿಚರ್ಡ್ ಟಾರ್ಲ್‌ಟನ್ ಎನ್ನುವ ಹಾಸ್ಯನಟ ನಾಟಕವನ್ನೆಲ್ಲ ಆಕ್ರಮಿಸಿ, ನಾಟಕಕಾರನ ಗಂಭೀರವಾದ ಉದ್ದೇಶವನ್ನೇ ಮರೆಸಿಬಿಡುವಷ್ಟು ಪ್ರಬಲನಾಗಿದ್ದ. ವಿದೂಷಕನಿಗಾಗಿ ಮಧ್ಯೆ ನಾಟಕದ ಕ್ರಿಯೆಯ ಗಮನವನ್ನು ತಡೆದು, ರಂಗಭೂಮಿಯನ್ನು ಅವನಿಗಾಗಿ ತೆರವು ಮಾಡಿಕೊಡುವ ಅಗತ್ಯ ಒದಗಿತು ನಾಟಕಕಾರನಿಗೆ. ನಾಟಕಕಾರ ಬರೆದುದನ್ನೇ ವಿದೂಷಕ ಹೇಳಬೇಕೆಂಬ ನಿಬಂಧನೆಯೂ ಇರಲಿಲ್ಲ. ಅವನಿಗೆ ತೋರಿದುದನ್ನು ಇಚ್ಛೆ ಬಂದಷ್ಟು ಕಾಲ ರಂಗಭೂಮಿಯನ್ನಾಕ್ರಮಿಸಿ ಹೇಳುವ ಸಂಪ್ರದಾಯವೂ ಬೇರೂರಿತು. ಷೇಕ್ಸ್ಪಿಯರರ ನಿಧನವಾದ ಮೇಲೆ ಇಪ್ಪತ್ತೆರಡು ವರ್ಷಗಳ ನಂತರ ರಿಚರ್ಡ್ ಬ್ರೋಮನ 'ಆ್ಯಂಟಿಪೋಡ್ಸ್' ನಾಟಕದಲ್ಲಿ ಟಾರ್ಲ್‌ಟನ್, ಅವನ ನಂತರ ಬಂದ ಕೆಂಪ್ ಇವರು, ಇವರ ಪಂಥದವರು ರಂಗಭೂಮಿಯನ್ನು ಬರಿಯ ಒರಟು ಹಾಸ್ಯದ ಬೀಡನ್ನಾಗಿ ಮಾಡಿದರೆಂಬ ಮತ್ತು ಇನ್ನೂ ಆ ಸಂಪ್ರದಾಯ ಮಾಯವಾಗಲಿಲ್ಲವೆಂಬ ಮಾತನ್ನು ನಾಟಕಕಾರ ಸಂತಾಪದಿಂದ ಆಡುತ್ತಾನೆ.

ಹಾಸ್ಯವನ್ನು ಒದಗಿಸುವುದಕ್ಕಾಗಿಯೇ ಜನ್ಮ ತಾಳಿದ 'ಬೆಪ್ಪ'ರೂ ಷೇಕ್ಸ್ಪಿಯರರ ಜಗತ್ತಿನಲ್ಲಿ ಉಂಟು. ಅವರ ವಜ್ರಾಯುಧ ಶ್ಲೇಷೆ. ಸಾಧ್ಯವಾದಾಗಲೆಲ್ಲ ಅಸಭ್ಯತೆ ಬೆರೆತ ಶ್ಲೇಷೆ, ಪದಗಳೊಡನೆ ಆಟವಾಡುವುದು, ಒರಟು ಹಾಸ್ಯ ಇವುಗಳಿಂದ ಜನರನ್ನು ನಗಿಸಲು ಕಷ್ಟಪಡುವ ಈ ಜಾತಿಯನ್ನು ಪ್ರಾರಂಭದ ಕೃತಿಗಳಲ್ಲಿ ಮಾತ್ರವಲ್ಲ, 'ಅಥೆಲ್ಲೊ' ಅಂತಹ ಮಹಾಕೃತಿಯಲ್ಲಿಯೂ ಕಾಣಬಹುದು. ದುರಂತ ಆಗಲೇ ಡೆಸ್ಡಿಮೋನಳ ಸುತ್ತ ತನ್ನ ಬಲೆಯನ್ನು ನೇಯುತ್ತಿದೆ. ಆಗ ಡೆಸ್ಡಿಮೋನ-ಅಥೆಲ್ಲೊನ ಸೇವಕ ವಿದೂಷಕ ಇವರ ಮಧ್ಯೆ ನಡೆಯುವ ಸಂಭಾಷಣೆ ಇದು :

*Desdemona.* Do you know, sirrah, where Lieutenant Cassio lies ?
*Clown.* I dare not say he lies any where.
*Desdemona.* Why, man ?
*Clown.* He's a soldier; and for one to say a soldier lies, is stabbing.
*Desdemona.* Go to : where lodges he ?
*Clown.* To tell you where he lodges, is to tell you where I lie. [1]

ಈ ಬಗೆಯ ಮಾತಿನಿಂದ ಬೇಸತ್ತು ಡೆಸ್ಡಿಮೋನ, "ಇದು ಯಾರಿಗೆ ಅರ್ಥವಾಗಬೇಕು ?" ಎನ್ನುತ್ತಾಳೆ.

ಈ ವಿದೂಷಕನ ಸಹೋದರ 'ದಿ ಮರ್ಚೆಂಟ್ ಆಫ್ ವೆನಿಸ್'ನ ಲಾನ್ಸ್‌ಲಾಟ್ ಗಾಬೊ.

ಈತ ನನ್ನ ನಿಜತನುಜ ತಂದೆ !

ಅವರೇನಾದರೂ ಒಟ್ಟಿಗೆ ಮಸಲತ್ತು ನಡೆಸಿದ್ದರೆ, ನೀವು ಸೊಗಸಾದ ಮೆರವಣಿಗೆ ನೋಡುವಿರಿ

[1] III. iv. 1-9.

ಅಂತ ನಾನು ಅನ್ನೋದಿಲ್ಲ; ನೀವು ನೋಡಿದಿರಿ ಅನ್ನಿ, ಹಾಗಾದರೆ ಹೋದ ಕಾಳ ಸೋಮವಾರ ಬೆಳಗ್ಗೆ ಆರು ಗಂಟೆಗೆ—ಆ ವರ್ಷ ಮಧ್ಯಾಹ್ನಕ್ಕೆ ಬೂದಿ ಬುಧವಾರಕ್ಕೆ ನಾಲ್ಕು ವರ್ಷವಾಯಿತು— ನನ್ನ ಮೂಗಿನಿಂದ ರಕ್ತ ಸುರಿದದ್ದು ಸುಮ್ಮನೆ ಅಲ್ಲ ಅಂತಾಯಿತು.

—ಇವು ಇವನ ಹಾಸ್ಯದ ಗಣಿಯ ಮುತ್ತುರತ್ನಗಳು.

ಆದರೆ ಈ ಬೆಪ್ಪರನ್ನು ನಾವು ಅಷ್ಟಾಗಿ ಗಣಿಸಬೇಕಾಗಿಲ್ಲ. ಬೆಪ್ಪುತನವನ್ನು ಹಾಸ್ಯದ ಸೃಷ್ಟಿಗಾಗಿ ಎಲ್ಲ ನಾಟಕಕಾರರೂ ಬಳಸಿಕೊಂಡಂತೆ ಷೇಕ್ಸ್‌ಪಿಯರನೂ ಬಳಸಿಕೊಂಡ. ಆದರೆ, ತನ್ನ ಕಾಲದ ನಾಟಕದ ಎಲ್ಲ ಸಂಪ್ರದಾಯಗಳಿಗೆ ಹೊಸ ಸ್ವರೂಪ, ಜೀವಕಳೆಗಳನ್ನಿತ್ತಂತೆ ಈ ಬೆಪ್ಪರ ಪ್ರದರ್ಶನಕ್ಕೂ ಇತ್ತ. ಟಾರ್ಲ್‌ಟನ್, ಕೆಂಪ್ ಮೊದಲಾದ ನಟರಲ್ಲಿ ಪ್ರತಿಯೊಬ್ಬನ ವಿಶಿಷ್ಟ ಶಕ್ತಿಯು ಬಳಕೆಗೆ ಹೊಂದಿಕೊಳ್ಳುವಂತಹ ಪಾತ್ರಗಳನ್ನು ಸೃಷ್ಟಿಸಿದ. ನಾಟಕದ ಚೌಕಟ್ಟಿನಿಂದ ಹೊರಗುಳಿಯುತ್ತಿದ್ದ 'ಬೆಪ್ಪ'ನನ್ನು ನಾಟಕದ ಅಂತರ್ಗತ ಭಾಗವನ್ನಾಗಿ ಮಾಡಿದ. ಬೆಪ್ಪುತನವನ್ನು ಕಂಡು ಉಕ್ಕುವ ನಗೆಯಲ್ಲಿ ತಿರಸ್ಕಾರದ ಜೊತೆಗೆ ಇತರ ಭಾವನೆಗಳು ಬೆರೆಯುವಂತೆ ಮಾಡಿದ. ಒಮ್ಮೊಮ್ಮೆ 'ಕಿಂಗ್ ಲಿಯರ್' ನಾಟಕದಲ್ಲಿ ಮಾಡಿದಂತೆ, ತಿರಸ್ಕಾರವೇ ಇಲ್ಲದೆ ಇತರ ಭಾವನೆಗಳೇ ತುಂಬುವಂತೆಯೂ ಮಾಡಿದ.

ಮೊಟ್ಟಮೊದಲ ಬಾರಿಗೆ ಬೆಪ್ಪನ ಪಾತ್ರಕ್ಕೆ ಜೀವಸಂಚಾರವಾಗುವುದು 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್'ನಲ್ಲಿ. ಅರಸ ಥೀಸ್ಯೂಸನ ವಿವಾಹದ ಸಂಭ್ರಮದಲ್ಲಿ ಕೆಲವರು ಕಾರ್ಮಿಕರು ವಿನೋದಪ್ರದರ್ಶನವನ್ನು ಏರ್ಪಡಿಸಿದ್ದಾರೆ. ಅವರ ಮುಂದಾಳು ಕ್ವಿನ್ಸ್. ಆದರೆ ಬಾಟಮುನನ್ನು ಯಾರೂ ತಡೆಹಿಡಿದು ಅಂಕೆಯಲ್ಲಿಡಲಾರರು. ಮುಂದಾಳನ್ನು ಬದಿಗೊತ್ತಬೇಕೆಂಬುದು ಅವನ ಉದ್ದೇಶವಲ್ಲ. ಆದರೆ ಅವನ ಉತ್ಸಾಹ, ಆತ್ಮವಿಶ್ವಾಸ ಅಂತಹವು. ಯಾವ ಕೆಲಸಕ್ಕೆ ಕೈಹಾಕಲಿ, ಯಾವ ಸನ್ನಿವೇಶದಲ್ಲಿ ಅವನಿರಲಿ, ಅಚಲವಾದ ಆತ್ಮವಿಶ್ವಾಸದಿಂದ ನಿಶ್ಚಯಗಳನ್ನು ಕೈಗೊಳ್ಳುವ ಸಾಹಸಿ ಅವನು. ಈ ಕಾರ್ಮಿಕರು ಪಿರಮಸ್-ಥಿಸ್ಬೆ ಎಂಬ ಪ್ರಣಯಿಗಳ ದುರಂತನಾಟಕವನ್ನು ಅಭಿನಯಿಸಬೇಕು. (ರಾಜನ ಮದುವೆಯ ಸಂದರ್ಭವಲ್ಲಿ ಇದನ್ನೇಕೆ ಆರಿಸಿದರೋ ಕಾರ್ಮಿಕರು!) ಎಲ್ಲ 'ಕಂಪನಿ'ಗಳವರಂತೆ ಇವರೂ ರಂಗಭೂಮಿಯ ಸಮಸ್ಯೆಗಳನ್ನು ಎದುರಿಸಬೇಕು. ಆದರೆ ಬಾಟಮುನಿಗೆ ಯಾವ ಸಮಸ್ಯೆಯೂ ಸಮಸ್ಯೆಯೇ ಅಲ್ಲ. ಪ್ರಣಯಿಗಳ ಮಧ್ಯೆ ಗೋಡೆ ಇರಬೇಕಲ್ಲ ಎಂದರೆ ಮೈಗೆ ಗಾರೆ ಬಳಿದುಕೊಂಡು ಬಂದು ಒಬ್ಬ ನಿಂತರಾಯಿತು ಎನ್ನುತ್ತಾನೆ. ಅವನು ಗೋಡೆಯೆಂದು ಮುಂದಮತಿಗಳಿಗೆ ತಿಳಿಯದಿದ್ದರೆ! ಸಿದ್ಧವಾಗಿದೆ ಬಾಟಮುನ ಪರಿಹಾರ: ಅವನೇ ತಾನು ಗೋಡೆ ಎಂದು ಹೇಳಿದರಾಯಿತು. ಪಿರಮಸ್ ತನ್ನನ್ನು ತಾನೇ ಕೊಂದುಕೊಳ್ಳಬೇಕಲ್ಲ, ಇದು ಕೋಮಲೆಯರಾದ ಸ್ತ್ರೀಯರ ಮನಸ್ಸಿಗೆ ಘಾಸಿ ಮಾಡಿದರೆ? ಅದಕ್ಕೇನು, ಬಾಟಮುನನ್ನು ಕೇಳಿದರೆ ಪರಿಹಾರ ತೋರಿಸುತ್ತಾನೆ; ಅವನೇ ಪಿರಮುಸನ ಪಾತ್ರ ಮಾಡುವವನು, ಅವನೊಂದು 'ಪ್ರಸ್ತಾವನೆ' (Prologue)ಯಲ್ಲಿ ಅವರ ಕತ್ತಿಗಳು ಸಾಧುವಾದ ಕತ್ತಿಗಳೆಂದೂ ಯಾವ ರೀತಿಯಲ್ಲಿಯೂ ಘಾಸಿ ಮಾಡುವುದಿಲ್ಲವೆಂದೂ ಹೇಳಿದರಾಯಿತು. ಇನ್ನೂ ಧೈರ್ಯ ಕೊಡಬೇಕೆಂದಾದರೆ, ಅವರು ನೋಡುವ

ಪಿರಮುಸ್ ನಿಜವಾಗಿ ಪಿರಮುಸ್ ಅಲ್ಲ, ನೇಯ್ಗೆಕಾರ ಬಾಟಮ್ ಎಂದು ಸಮಾಧಾನ ಹೇಳಿದರಾಯಿತು. ಸಿಂಹ ಗರ್ಜಿಸಿದರೆ ಕುಸುಮಕೋಮಲೆಯರ ಗತಿ ಏನು? ಈ ಸಮಸ್ಯೆಯನ್ನು ಮುಂದಿಡುವವನೂ ಬಾಟಮ್. ಸ್ನೌಟ್, ಹಿಂದೆ ಬಾಟಮ್ ಸೂಚಿಸಿದ್ದ ಪರಿಹಾರವನ್ನೇ ನೆನೆಸಿಕೊಂಡು, "ಅದು ಸಿಂಹವಲ್ಲ, ಮನುಷ್ಯ" ಎಂದು ಹೇಳುವ ಪ್ರಸ್ತಾವನಾಭಾಷಣ ಬರೆಯಬೇಕು ಎನ್ನುತ್ತಾನೆ. ಆದರೆ ಬಾಟಮನ ಸಂಪದ್ಯುಕ್ತವಾದ ಮೆದುಳು ಬೇರೊಂದು ಉಪಾಯವನ್ನು ಕಾಣುತ್ತದೆ:

ಅಷ್ಟೇ ಅಲ್ಲ. ಅವನ ಹೆಸರನೇ ಹೇಳಬೇಕು. ಅಂತೇ ಸಿಂಹನ ಕೊರಳ ತೂರಿ ಅವನ ಅರ್ಧ ಮೊಕಾನೇ ಕಾಣತಿರಬೇಕು. ಇದರ ಮೇಲೂ ಅವನೇ ಮಾತನೂ ಆಡಿ ಈ ಮಾತೋ ಈ ತತ್ವಾದ ಮಾತೋ ಹೇಳಬೇಕು,—'ಅವ್ವಾ ಅವರೆ,' 'ಚೆಲುವ ಅವ್ವಾ ಅವರೆ,' 'ನಾ ನಿಮ್ಮ ಬೇಡಬೇಕು, ನಾ ನಿಮ್ಮ ಕೇಳಬೇಕು, ನಾ ನಿಮ್ಮ ಪ್ರಾರ್ಥಿಸಬೇಕು, ನೀವಂಜಬ್ಯಾಡಂತ, ನಡುಗಬ್ಯಾಡ ಅಂತ. ನಿಮ್ಮ ಪ್ರಾಣಕ ನನ್ನ ಪ್ರಾಣ. ನಾನು ಇಲ್ಲಿ ಒಂದು ಸಿಂಹ ಆಗಿ ಬಂದಿದೀನಂತ ನೀವು ತಿಳಿದರೆ, ನನ್ನಾಣೆ **ಮರುಕ ಪಡೋ ಸಂಗತಿ**. ಹಂಗಲ್ಲ, ಅಲ್ಲ ಅಂತೀನಿ, ನಾ ಅಂಥದೇತರದೂ ಅಲ್ಲ. ಉಳಿದೋರೆಂತು ಅಂತು ನಾನೂ ಒಬ್ಬ ಮನುಷ್ಯ.' ಹೀಗಂದು ಅವನು ತನ್ನ ಹೆಸರ ಹೇಳಲಿ. ತಾನು ಕಿರಿಬಡಗಿ ಸ್ನಗ್ ಅಂತ ಬಿಡಿಸಿ ಹೇಳಲಿ. [1]

ಅವನೇ ಸಿಂಹದ ಪಾತ್ರಧಾರಿಯಾಗಿದ್ದಿದ್ದರಂತೂ, ಡ್ಯೂಕ್ "ಅವನು ಮತ್ತೆ ಗರ್ಜಿಸಲಿ" ಎನ್ನಬೇಕು, ಹಾಗೆ ಗರ್ಜಿಸುತ್ತಿದ್ದ. ಅದನ್ನು ಕೇಳಿ ಅಬಲೆಯರು ನಡುಗಿದರೆ?

ಗುಟುಕ ಕೊಳ್ಳೊ ಪಾರಿವಾಳದ ಮರಿ ಒಂದು ಅನ್ನೋ ಹಂಗೆ ಮೆದುವಾಗಿ ಗರ್ಜಿಸತೇನೆ. ಯಾಕೆ, ಆದೇನೊಂದು ಇರುಳಕೋಗಿಲು ಅನ್ನೋ ಹಂಗೆ ಗರ್ಜಿಸತೇನೆ. [1]

ಪಾರಿವಾಳದಂತೆ, ಬುಲ್‌ಬುಲ್ ಪಕ್ಷಿಯಂತೆ ನಯವಾಗಿ ಗರ್ಜಿಸುತ್ತಾನೆ! ಅವರಾಡುವ ನಾಟಕದ ದೌರ್ಭಾಗ್ಯ, ಅವನೇ ಎಲ್ಲ ಪಾತ್ರಗಳನ್ನೂ ವಹಿಸುವಂತಿಲ್ಲ. ಈಗಂತೂ ಪಿರಮುಸನ ಪಾತ್ರ ಮಾಡುತ್ತಾನೆ, ಅವನೇ ಸಿಂಹದ ಪಾತ್ರವನ್ನೂ ಥಿಸ್ಬೆಯ ಪಾತ್ರವನ್ನೂ ಮಾಡುವಂತಿದ್ದರೆ!

ನಾ ಅದೊಂದು ಭಯಂಕರ ಮೆದು ದನೀಲಿ ಮಾತಾಡತೇನೆ: 'ಅಹ ಪಿರಮುಸ್, ನನ್ನ ಇನಿ ನಲ್ಲ.'[1]

ಬಾಟಮ್ ಜೀವಂತ ವ್ಯಕ್ತಿ ಮಾತ್ರವಲ್ಲ, ನಾಟಕದ ಒಂದು ಭಾಗ. ಅವನನ್ನು ಹೊರಗಿಟ್ಟು ನಾಟಕವನ್ನು ಮುಂದುವರಿಸುವುದು ಸಾಧ್ಯವೇ ಇಲ್ಲ. ಕಿನ್ನರಿಯರ ರಾಣಿ ಟೈಟೇನಿಯ ಮೋಹಿಸುವುದು ಅವನನ್ನು. ಅವನಿಲ್ಲದಿದ್ದರೆ ಕಥೆಯ ಈ ಭಾಗಕ್ಕೆ (ಕಥೆ ಮೊದಲೇ ತೆಳು) ಏಟು ಬೀಳುತ್ತದೆ. ಇಷ್ಟು ಮಾತ್ರವಲ್ಲ, ಕಥೆಯ ರಚನೆಯ ದೃಷ್ಟಿಯಿಂದಲೂ ಬಾಟಮ್ ಮುಖ್ಯಪಾತ್ರ. ಭಿನ್ನವಾದ ಮೂರು ಜಗತ್ತುಗಳನ್ನು ಇಲ್ಲಿ ಷೇಕ್ಸ್ಪಿಯರ್ ಒಟ್ಟುಗೂಡಿಸಿ, ಒಂದು ಜಗತ್ತನ್ನು ಸೃಷ್ಟಿಸಲು ಹೊರಟಿದ್ದಾನೆ. ಥೀಸ್ಯೂಸ್, ಅವನ ಪರಿವಾರದ ಶ್ರೀಮಂತ, ನಾಗರಿಕ, ಗಂಭೀರ ಜಗತ್ತು, ಮೊದಲನೆಯದು. ಯಾವ ಮೆರುಗನ್ನೂ ಅರಿಯದ ಕಾರ್ಮಿಕರ ವಾಸ್ತವ ಪ್ರಪಂಚ ಇನ್ನೊಂದು. ಕನಸಿನ ವಿಚಿತ್ರ, ಆಕರ್ಷಕ ಜಗತ್ತು ಟೈಟೇನಿಯ, ಪಕ್

1 ಶ್ರೀ ಶ್ರೀನಿವಾಸರ ಭಾಷಾಂತರಗಳು: 'ಷೇಕ್ಸ್‌ಪಿಯರ್ ದೃಶ್ಯಗಳು,' ಭಾಗ ೧. ದಪ್ಪ ಅಕ್ಷರದಲ್ಲಿರುವ ಮಾತುಗಳು ಲೇಖಕರು ಸೇರಿಸಿರುವುದು.

ಇವರದು. ಈ ಕಿನ್ನರಿಯರ ಹೆಸರುಗಳೇ—ಕಡಲೆಯ ಹೂವು (Peaseblossom), ಜೇಡದ ಬಲೆ (Cobweb), ದೀಪದ ಹುಳು (Moth), ಸಾಸಿವೆಯ ಕಾಳು (Mustard-seed)—ಅವರ ಜಗತ್ತಿನ ನಾಜೂಕನ್ನು ತೋರಿಸಿಕೊಡುತ್ತವೆ. 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ನಮ್ಮ ಮುಂದಿಲ್ಲದಿದ್ದರೆ, ಪ್ರತಿಭೆಯ ಈ ಮಹಾಸಾಧನೆಯ ಸಾಕ್ಷ್ಯ ಇಲ್ಲದೆ ಹೋಗಿದ್ದರೆ, ಈ ಜಗತ್ತುಗಳನ್ನು ಒಟ್ಟಿಗೆ ತಂದೂ ಐಕ್ಯವನ್ನು ಸಾಧಿಸುವುದು ಸಾಧ್ಯವಾಗದ ಮಾತೆಂದು ನಾವು ನಿರ್ಧರಿಸುತ್ತಿದ್ದೆವೇನೊ! ಆದರೆ 'ಥಿಯರಿ'ಗಳನ್ನು ಮುರಿಯುವುದು ಪ್ರತಿಭೆಯ ಸಾಧನೆ. ಇಲ್ಲಿ ಷೇಕ್ಸ್ಪಿಯರ್ ಹೇಗೆ ಐಕ್ಯವನ್ನು ಸಾಧಿಸಿದ್ದಾನೆ ಎನ್ನುವುದರ ವಿವರವಾದ ಅಭ್ಯಾಸ ಬಹಳ ಸ್ವಾರಸ್ಯಕರವಾದುದು. ಇಲ್ಲಿ ನಾವು ಗಮನಿಸಬಹುದಾದುದು ಈ ಒರಟು ಉತ್ಸಾಹಿ ಬಾಟಮ್ ಈ ಐಕ್ಯದ ಸಾಧನೆಯ ಸಾಧನವಾಗುತ್ತಾನೆ ಎನ್ನುವುದು. ಇದನ್ನು ಅವನು ಸಾಧಿಸುವುದು ತನ್ನ ಮೇರೆಯಿಲ್ಲದ ಆತ್ಮವಿಶ್ವಾಸದಿಂದಲೇ. ಷೇಕ್ಸ್ಪಿಯರನ ಜೂಲಿಯಸ್ ಸೀಸರ್ "ಎಂದೆಂದೂ ನಾನು ಸೀಸರ್" ಎಂದು ಒಮ್ಮೆ ಹೇಳುತ್ತಾನೆ; ಹಾಗೆಯೇ ಎನ್ನಬಹುದು ಅವನ ಬಾಟಮ್, "ಎಂದೆಂದೂ ನಾನು ಬಾಟಮ್" ಎಂದು. ಇದ್ದಕ್ಕಿದ್ದಂತೆ ಕಿನ್ನರಿಯರ ಜಗತ್ತನ್ನು ಪ್ರವೇಶಿಸುತ್ತಾನೆ, ಕಿನ್ನರಿಯರ ರಾಣಿಯ ಪ್ರೇಮದ ನುಡಿಗಳ ಗಾನ ಕಿವಿಯನ್ನು ಓಲೈಸುತ್ತದೆ. ಆದರೆ ಏನಾದರೂ ಅವನು ಅಪ್ರತಿಭನಾಗಲೊಲ್ಲ. ಯಾವಾಗಲೂ, ಎಲ್ಲ ಸನ್ನಿವೇಶಗಳಲ್ಲಿಯೂ ಅವನು ಬಾಟಮ್ ಆಗಿ ಉಳಿದು, ಆ ಐಕ್ಯವನ್ನು ಸಾಧಿಸುತ್ತಾನೆ. ಶ್ರೀಮಂತರ ಜಗತ್ತು, ವಾಸ್ತವಿಕ ಜಗತ್ತು, ಕಿನ್ನರಿಯರ ಜಗತ್ತು—ಒಂದರಿಂದ ಇನ್ನೊಂದಕ್ಕೆ ಲೀಲಾಜಾಲವಾಗಿ ಸಾಗುತ್ತಾನೆ, ನಮ್ಮನ್ನು ಒಂದು ಜಗತ್ತಿನಿಂದ ಇನ್ನೊಂದು ಜಗತ್ತಿಗೆ, ಜಗತ್ತು ಬೇರಾಯಿತೆನ್ನುವ ಅರಿವೇ ಬಾರದಂತೆ, ಕರೆದೊಯ್ಯುತ್ತಾನೆ.

ಬಾಟಮನ ಪಾತ್ರ ಇನ್ನೊಂದು ರೀತಿಯಲ್ಲಿ ಮುಖ್ಯವಾಗುತ್ತದೆ. 'ಆ್ಯಸ್ ಯು ಲೈಕ್ ಇಟ್', 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್', 'ಟ್ವೆಲ್ಫ್ತ್ ನೈಟ್'—ಇವುಗಳನ್ನು ಬರೆಯುವ ಹೊತ್ತಿಗೆ ಷೇಕ್ಸ್ಪಿಯರ್ ಆಗಲೇ 'ರೋಮಿಯೊ ಅಂಡ್ ಜೂಲಿಯೆಟ್'ನಲ್ಲಿ 'ರೊಮ್ಯಾಂಟಿಕ್' ಪ್ರೇಮವನ್ನು ತನ್ನ ಎಲ್ಲ ವಾಗ್ವೈಭವದಿಂದ ಚಿತ್ರಿಸಿದ್ದನು. 'ಟ್ರಾಯ್‌ಲಸ್ ಅಂಡ್ ಕ್ರೆಸಿಡ'ದ ಕಹಿ ಇನ್ನೂ ಬಂದಿರಲಿಲ್ಲ. (ಸಾನೆಟ್ಟುಗಳನ್ನು ಬರೆದ ಕಾಲವೂ ಸುಮಾರು ಇದೇ ಎನ್ನುವುದು ಗಮನಾರ್ಹ.) ಈ ಅವಧಿಯಲ್ಲಿ ಷೇಕ್ಸ್ಪಿಯರನಿಗೆ ಪ್ರೇಮದ ಚಿತ್ರಣದಲ್ಲಿ ಮಾತ್ರವಲ್ಲದೆ, ಅದರ ಸ್ವರೂಪದ ವಿಮರ್ಶೆಯಲ್ಲಿಯೂ ವಿಶೇಷ ಆಸಕ್ತಿ ಇದ್ದಂತೆ ತೋರುತ್ತದೆ. ಈ ಕಾಲದ ನಂತರದ ಯಾವ ನಾಟಕಗಳಲ್ಲಿಯೂ, ಷೇಕ್ಸ್ಪಿಯರನ ಹೋಲಿಕೆಯ ಕ್ರಮ ಉಳಿದು ಬಂದರೂ, ಪ್ರೇಮವನ್ನು ಇಷ್ಟು ವಿವಿಧ ದೃಷ್ಟಿಗಳಿಂದ ಚಿತ್ರಿಸುವುದನ್ನು ನಾವು ಕಾಣುವುದಿಲ್ಲ. 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ನಾಟಕದಲ್ಲಿ ಥೀಸ್ಯೂಸ್-ಹಿಪಾಲಿಟರ ಪ್ರೇಮ, ಹರ್ಮಿಯಾ-ಲೈಸ್ಯಾಂಡರರ ಪ್ರೇಮ, ಹೆಲಿನಾ-ಡಿಮೀಟ್ರಿಯಸರ ಪ್ರೇಮ, ಟೈಟೇನಿಯ-ಬಾಟಮರ ಪ್ರೇಮ(!) ಇವುಗಳೊಂದಿಗೆ ಪಿರಮಸ್-ಥಿಸ್ಬೆಯರ ದುರಂತ ಪ್ರೇಮ—ಇಷ್ಟೊಂದು ಪ್ರೇಮದ ಕಥೆಗಳ ಎಳೆಗಳಿವೆ. ಈ ನಾಟಕದ "ಉನ್ಮತ್ತ, ಪ್ರೇಮಿ, ಕವಿ

—ಇವರಲಿ ವಿಜೃಂಭಿಸಿಹುದೇಕಘನವಾಗಿ ಕಲ್ಪನೆ[1]" ಎಂಬ ಪಂಕ್ತಿಗಳಿಂದ ಆರಂಭವಾಗುವ ಸುಪ್ರಸಿದ್ಧ ಭಾಷಣ ತೋರಿಸುವಂತೆ, ಈ ಕೃತಿ ಪ್ರೇಮ, ಪ್ರತಿಭೆಗಳನ್ನು ಕುರಿತು ದೀರ್ಘವಾಗಿ ಆಲೋಚನೆ ಮಾಡಿದ್ದ ಪ್ರತಿಭೆಯ ಸೃಷ್ಟಿ. 'ಆ್ಯಸ್ ಯು ಲೈಕ್ ಇಟ್' ನಾಟಕದಲ್ಲಿ ಆರ್ಲ್ಯಾಂಡೋ-ರೊಸಲಿಂಡರ ಪ್ರಣಯ, ಆಲಿವರ್-ಸೀಲಿಯಾರ ಪ್ರಣಯ, ಸಿಲ್ವಿಯಸ್-ಫೀಬಿಯರ ಪ್ರಣಯ, ವಿಲಿಯಂ-ಆಡ್ರೆಯರ ಪ್ರಣಯ, ಟಚ್‌ಸ್ಟನ್-ಆಡ್ರೆಯರ ಪ್ರಣಯ—ಇಷ್ಟು ಚಿತ್ರಿತವಾಗಿವೆ. ಆರ್ಲ್ಯಾಂಡೋ-ರೊಸಲಿಂಡರ ಪ್ರಣಯದ ನಿರೂಪಣೆಯಲ್ಲಿ ರೊಮ್ಯಾಂಟಿಕ್ ಪ್ರಣಯ ಅಸಮಾನ ಕಾಂತಿಯನ್ನು ಪಡೆಯುತ್ತದೆ. ಇದರ ನಾಯಕಿ ಒಮ್ಮೆ ಎನ್ನುತ್ತಾಳೆ :

> ಪ್ರೇಮ ಬರಿಯದೊಂದು ಹುಚ್ಚು: ಎಂದ ಮೇಲೆ, ಹೇಳುತ್ತೇನೆ ಕೇಳಿ, ಅದಕ್ಕೆ ಯೋಗ್ಯವಾದದ್ದು ಅಂದರೆ, ಹುಚ್ಚರಿಗೆ ಯೋಗ್ಯವಾದದ್ದರ ಹಾಗೆ, ಕತ್ತಲ ಕೋಣೆ, ಚಾಟಿ.

ಮತ್ತೊಮ್ಮೆ ಎನ್ನುತ್ತಾಳೆ :

> ಆಗಾಗ ಜನ ಸಾಯುತ್ತಲೇ ಇದ್ದಾರೆ, ಕ್ರಿಮಿಗಳು ಅವರನ್ನ ತಿನ್ನುತ್ತಲೇ ಇವೆ, ಆದರೆ ಯಾರೂ ಪ್ರೇಮಕ್ಕಾಗಿ ಸಾಯಲಿಲ್ಲ.

ಇವಳೇ ಜಂಬಗಾತಿಯಾದ ಲಾವಣ್ಯವತಿಗೆ ಹೇಳುತ್ತಾಳೆ :

> ಮೊಣಕಾಲೂರು, ಸತ್ಪುರುಷನ ಪ್ರೇಮ ದೊರೆತದ್ದಕ್ಕಾಗಿ ಉಪವಾಸಮಾಡಿ ದೇವರಿಗೆ ಕೃತಜ್ಞತೆ ಸಲ್ಲಿಸು. [2]

'ಟ್ವೆಲ್ಫ್ತ್ ನೈಟ್'ನಲ್ಲಿಯೂ ಹಲವು ಬಗೆಯ ಪ್ರಣಯಿಗಳ ನಿರೂಪಣೆಯಿದೆ. ಪ್ರೇಮದ ಉಗಮ, ಸ್ವರೂಪಗಳನ್ನು ಕವಿ ಮಥನ ಮಾಡುತ್ತಿದ್ದ ಕಾಲದಲ್ಲಿ ಚಿತ್ರಿಸಿದ ಬಾಟಮ್-ಟೈಟೇನಿಯರ ಪ್ರಸಂಗಕ್ಕೊಂದು ವಿಶೇಷ ಅರ್ಥವಿದ್ದರೆ ಆಶ್ಚರ್ಯವಲ್ಲ. ಅವಳು ಬಾಟಮುನನ್ನು ಮೋಹಿಸುವಾಗ, ಅವನ ವ್ಯಕ್ತಿತ್ವದ ಸಾರಸರ್ವಸ್ವವನ್ನು ಎತ್ತಿ ತೋರಿಸುವಂತೆ ಅವನ ತಲೆಯ ಮೇಲೆ ಕತ್ತೆಯ ತಲೆಯಿದೆ. ಆದರೂ ಅವನನ್ನು ಮೋಹಿಸುತ್ತಾಳೆ: "ಪುಷ್ಪಶಯ್ಯೆಯಿಂದ ನನ್ನನ್ನು ಎಚ್ಚರಿಸುವ ಈ ದಿವ್ಯಸತ್ವ ಯಾರು?[2]" ಎಂದು ಭಾವಪರವಶಳಾಗಿ ಉದ್ಗಾರ ತೆಗೆಯುತ್ತಾಳೆ. ಇದು ಪಕ್ ಅವಳ ಕಣ್ಣಿಗೆ ಹಿಂಡಿದ ರಸದ ಪ್ರಭಾವ. ಪಕ್ ಆಗಲಿ, ಕ್ಯೂಪಿಡ್ ಆಗಲಿ, ಮನ್ಮಥನಾಗಲಿ, ಆ ಅದೃಶ್ಯ ಶಕ್ತಿಗೆ ಏನೇ ಹೆಸರನ್ನು ನಾವು ಕೊಟ್ಟರೂ ಕಣ್ಣಿಗೆ ಪ್ರೇಮದ ರಸವನ್ನು ಹಿಂಡಿದಾಗ, ಕಿನ್ನರಿಯ ವಿವೇಕವೇ ಹಾರಿಹೋಯಿತೆಂದ ಮೇಲೆ, ಮನುಷ್ಯರ ಮಾತೇನು ? ಹೆಲಿನಾ ಹೇಳುತ್ತಾಳೆ :

> ಕೀಳು, ನೀಚ, ಎನ್ನಿಸಿಕೊಳ್ಳುವ ಮತ್ತು ಹೋಲಿಸಿನೋಡಿದರೆ ಪ್ರಮಾಣವೇ ಕಾಣದಿರುವ ವಸ್ತುಗಳಿಗೆ ರೂಪಗಾಂಭೀರ್ಯಗಳನ್ನು ಕೊಟ್ಟು ಪ್ರೇಮವು ಅವುಗಳನ್ನು ಮಾರ್ಪಡಿಸಬಲ್ಲದು. ಪ್ರೇಮವು ನೋಡುವುದು ಕಣ್ಣಿನಿಂದಲ್ಲ, ಮನಸ್ಸಿನಿಂದ. ಆದ್ದರಿಂದಲೇ ಪಕ್ಷಯುತನಾದ ಕ್ಯೂಪಿಡ್‌ನನ್ನು ಕುರುಡನನ್ನಾಗಿ ಚಿತ್ರಿಸುತ್ತಾರೆ. ಪ್ರೇಮದ ಮನಸ್ಸು ವಿಚಾರಶಕ್ತಿಯ ರುಚಿಯನ್ನೇ ಅರಿಯದು. [2]

"ಓ ಭಗವಂತ, ಎಂತಹ ಬೆಪ್ಪರು ಈ ಮರ್ತ್ಯರು!" ಎಂದು ಉದ್ಗಾರ ತೆಗೆಯುತ್ತಾನೆ ಪಕ್.

---

1 ಈ ಸಾಲು ಶ್ರೀ ತೀ. ನಂ. ಶ್ರೀ. ಅವರ ಭಾಷಾಂತರ.

2 ಶ್ರೀ ಎ. ಎನ್. ಮೂರ್ತಿರಾವ್ ಅವರ ಭಾಷಾಂತರ: 'ಷೇಕ್ಸ್‌ಪಿಯರ್' (ಪೂರ್ವ ಭಾಗ).

ಆದರೆ ಬೆಪ್ಪುತನಕ್ಕೆ ಮರ್ತ್ಯಲೋಕದ ಎಲ್ಲೆಯೇನು? ಕಿನ್ನರಲೋಕಕ್ಕೂ ಅದು ತನ್ನ ಪ್ರಭುತ್ವವನ್ನು ವಿಸ್ತರಿಸುತ್ತದೆ, ಪಕ್‌ನ ಉದ್ಗಾರವಾದ ಒಂದು ಗಳಿಗೆಯೊಳಗೆ. ಪ್ರೇಮ ಎನ್ನುವುದೊಂದು ಮಾಂತ್ರಿಕ ಶಕ್ತಿ. ('ದಿ ಟೆಂಪೆಸ್ಟ್' ನಲ್ಲಿ ಮಿರ್ಯಾಂಡ-ಫರ್ಡಿನಂಡರ ಪ್ರೇಮ ದ್ವೀಪದ ವಿಶಿಷ್ಟ ವಾತಾವರಣ, ಪ್ರಾಸ್ಪೆರೊನ ಮಂತ್ರಶಕ್ತಿಗಳನ್ನು ನಾವು ಒಪ್ಪುವಂತೆ ಮಾಡಲು ಸಹಕಾರಿಯಲ್ಲವೆ?) ಅದು ಮನುಷ್ಯನನ್ನು ಹೇಗೆ ಆಡಿಸುತ್ತದೆಯೊ? ಅದರ ಪ್ರಭಾವಕ್ಕೆ ಒಳಪಟ್ಟ ನಂತರ ವಿವೇಚನಾಶಕ್ತಿ ಏನಾದೀತೊ! (ಸಾನೆಟ್ಟುಗಳಲ್ಲಿ CXXX, CXXXVII ಮತ್ತು CXXXVIII ನೆಯವು ಇದೇ ಭಾವನೆಯನ್ನು ನಿರೂಪಿಸುತ್ತವೆ.)

'ಡ್ರೀಮ್' ಅನ್ನು ಬರೆಯುವ ಹೊತ್ತಿಗೆ ಅವನ ಕೈ ಎಷ್ಟು ಪಳಗಿದ್ದಿತೆಂಬುದಕ್ಕೆ ಒಂದು ಸಾಕ್ಷಿ ಬಾಟಮನ ಪಾತ್ರ. 'ಬೆಪ್ಪ' ಎಂದು ನಾವು ಹೆಸರಿಟ್ಟು ಕರೆಯಬಹುದಾದ ಪಾತ್ರವನ್ನು ಮತ್ತೆ ನಾವು ಕಾಣುವುದು 'ಮಚ್ ಆ್ಯಡೂ ಅಬೌಟ್ ನಥಿಂಗ್' ನಲ್ಲಿ. ಇದರಲ್ಲಿ ನಾವು ಕಾಣುವ ಡಾಗ್‌ಬೆರಿ, ವರ್ಜೀಸರೂ ಬಾಟಮನಂತೆಯೇ ಷೇಕ್ಸ್ಪಿಯರನಿಗೆ ಸಂತೋಷವನ್ನುಂಟುಮಾಡಿರಬೇಕು. ಈ ನಾಟಕದಲ್ಲಿ ನಿರಪರಾಧಿಯಾದ ನಾಯಕಿಯ ವಿರುದ್ಧ ಅವಳ ಶುಭ್ರಕೀರ್ತಿಗೆ ಮಸಿ ಬಳಿಯುವಂತಹ ಆಪಾದನೆ ಬಂದಿದೆ. ಕ್ರಿಯೆ ದುರಂತವಾಗದಂತೆ ಮಾಡುವವರು ಡಾಗ್‌ಬೆರಿ-ವರ್ಜೀಸರು. ಇಬ್ಬರಲ್ಲಿ ವರ್ಜೀಸ್ ಸ್ವಲ್ಪ ಹಿಂದುಳಿಯುವ ಸ್ವಭಾವದವನು. ಡಾಗ್‌ಬೆರಿ ಕಾವಲಿನ ಅಧಿಕಾರಿ. ತಾನು ಅಧಿಕಾರಿ ಎಂಬ ಅರಿವು ಅವನಿಗುಂಟು, ಅದರೊಂದಿಗೆ ತನ್ನ ಕೈಕೆಳಗಿರುವವರು ತನ್ನಷ್ಟು ಬುದ್ಧಿವಂತರಾಗಿರಲು ಸಾಧ್ಯವೇ ಇಲ್ಲ ಎಂಬ ವಿಶ್ವಾಸವೂ ಉಂಟು. ತನ್ನ ಘನತೆಗೆ ತಕ್ಕಂತಹ ಭಾಷೆಯನ್ನೇ ಬಳಸಬೇಕೆಂಬ ಪ್ರಜ್ಞೆಯೂ ಉಂಟು. ಆದುದರಿಂದ ತನ್ನ ಘನತೆಗೆ ತಕ್ಕ ಪದಗಳನ್ನೇ ಆರಿಸಿಕೊಳ್ಳುತ್ತಾನೆ, 'sensible', 'apprehend', 'secondarily', 'suspect' ಮುಂತಾದ ಶಬ್ದಗಳನ್ನೇ ಬಳಸಿ ತನ್ನ ಹಿರಿಮೆಯನ್ನು ಕಾಪಾಡಿಕೊಳ್ಳುತ್ತಾನೆ. ಆ ಪದಗಳ ಅರ್ಥ ಅವನಿಗೆ ಗೊತ್ತಿರದಿದ್ದರೆ ಅದಕ್ಕಾಗಿ ಸಂಕೋಚಪಡುವ ಸ್ವಭಾವವೇ ಅಲ್ಲ ಅವನದು. ನಿನ್ನ ಮಾತು tedious (ಬೇಸರ ತರುವಂತಹದು) ಎಂದು ಲಿಯೊನಾಟೊ ಎಂದಾಗ ಆ ಪದ ಅರ್ಥವಾಗಲಿಲ್ಲವೆಂದು ಈ ಹಿರಿಯ ಅಧಿಕಾರಿ ಅದರ ಅರ್ಥವನ್ನು ವಿಚಾರಿಸಲು ಅಥವಾ ಸುಮ್ಮನಿರಲು ಸಾಧ್ಯವೆ? ಅವನು ಕೂಡಲೇ ಉತ್ತರಿಸುತ್ತಾನೆ:

> . . . . if I were as tedious as a king, I could find in my heart to bestow it all of your worship.[1]
>
> ನನ್ನಿಂದ ಒಬ್ಬ ರಾಜರಷ್ಟು ಲಂಬಿಸೋಕೆ ಆಗೋ ಹಾಗಿದ್ದರೂ ಅದನ್ನೆಲ್ಲ ತಾವು ಪ್ರಭುಗಳಿಗೆ ಅರ್ಪಿಸಲು ಒಪ್ಪಿಬಿಡ್ತಾ ಇದ್ದೆ.

ಮತ್ತೊಬ್ಬ ಆತನನ್ನು "ನೀನೊಬ್ಬ ಕತ್ತೆ" ಎಂದರೆ, ಈ ಅಪಮಾನದ ಮಾತನ್ನು 'ರಿಕಾರ್ಡ್' ಮಾಡಿಡಲು ತನ್ನ ಜೊತೆಗಾರನಿಲ್ಲವೇ ಎಂದು ಹಂಬಲಿಸುತ್ತಾನೆ:

---

[1] III. v. 20-1.

ಅಯ್ಯೋ ಅವರು ಇಲ್ಲಿ ಇಲ್ಲದೆ ಹೋದರಲ್ಲ, ನನ್ನನ್ನ ಕತ್ತೆ ಅಂತ ಬರಕೊಳ್ಳೋಕೆ! ಅಂದರೂ ಅಣ್ಣದಿರೇ, ನಾನು ಕತ್ತೆ ಅನ್ನೋದನ ನೆನಪಿನಲ್ಲಿಡಿ. ಇದನ್ನ ಬರಕೊಂಡಿಲ್ಲ, ಆದರೂ ನಾ ಕತ್ತೆ ಅನ್ನೋದ ಮರೀಬೇಡಿ.[1]

ಇವನ ದಡ್ಡತನದಿಂದ, ಮಾತಿನ ರೀತಿಯಿಂದ ದುಷ್ಟರ ಕಾರಸ್ಥಾನ ಬಯಲಾಗುವುದು ತಡವಾಗುತ್ತದೆ, ನಾಯಕಿ ಕಷ್ಟಪಡಬೇಕಾಗುತ್ತದೆ. ಆದರೆ ಈ ಮೂರ್ಖರೂ ಕಥೆಯ ಭಾಗವಾಗುತ್ತಾರೆ, ಅದರ ಚೌಕಟ್ಟಿನಲ್ಲಿ ಬರುತ್ತಾರೆ ಎನ್ನುವುದು ಮುಖ್ಯ. ಕಥೆಯ ಬೆಳವಣಿಗೆಗೆ ಎಂತಹ ಪಾತ್ರ ಬೇಕೊ ಅಂತಹವನೇ ಡಾಗ್‌ಬೆರಿ. ನೀಚರ ಕಾರಸ್ಥಾನವನ್ನು ಅರ್ಥಮಾಡಿಕೊಳ್ಳುವಷ್ಟು ಬುದ್ಧಿವಂತಿಕೆಯುಂಟು ಇವನಲ್ಲಿ. ಆದರೆ ಶೀಘ್ರವಾಗಿ ಮುಂದಿನ ಹೆಜ್ಜೆಯಿಟ್ಟು, ಮುಂದಿನ ನೋವನ್ನು ತಡೆಗಟ್ಟುವಷ್ಟು ಜಾಣ್ಮೆ ಇಲ್ಲ. ನೀಚರ ಪಿತೂರಿಯನ್ನು ಬಯಲು ಮಾಡುವ ಸಾಧನ ಈತನಾಗುವುದಕ್ಕೂ ಅರ್ಥವುಂಟು. ('ಮೆಕ್‌ಬೆತ್'ನಲ್ಲಿ ತನ್ನ ಹೆಂಡತಿ ಮಕ್ಕಳನ್ನು ಅಪಾಯದ ದವಡೆಯಲ್ಲಿ ಬಿಟ್ಟುಹೋದ ಮೆಕ್‌ಡಫ್, ಇನ್ನೂ ಹರೆಯದ ಮ್ಯಾಲ್ಕಮ್ ಇವರು ವೀರಾಗ್ರಣಿ ಮೆಕ್‌ಬೆತನನ್ನು ಸೋಲಿಸುವುದರಲ್ಲಿ ಇರುವಂತೆ.) ಮನುಷ್ಯರನ್ನು ಮೀರಿದ ಶಕ್ತಿಯೊಂದುಂಟು, ಆ ಶಕ್ತಿ ಪಾಪಿಗಳಿಗೆ ಬಹುಕಾಲ ಸ್ವಾತಂತ್ರ್ಯವನ್ನು ಕೊಡುತ್ತದೆ. ಮದಿಸಿ ಅವರು ತಮಗೆ ಎದುರಿಲ್ಲ ಎಂದುಕೊಂಡಾಗ ಅವರನ್ನು ನಿಗ್ರಹಿಸಲು ಆ ಶಕ್ತಿಗೆ ಹುಲುಮನುಜರೇ ಸಾಕು.

ಮತ್ತೊಬ್ಬ ಬೆಪ್ಪನನ್ನು ನಾವು ಕಾಣುವುದು 'ಟ್ವೆಲ್ಫ್ತ್ ನೈಟ್' ನಲ್ಲಿ. ಆದರೆ ಇವನು ಬಾಟಮ್, ಡಾಗ್‌ಬೆರಿ ಇವರಂತೆ ಸಂತೋಷವನ್ನು ಮಾತ್ರ ಉಂಟುಮಾಡುವ ಬೆಪ್ಪನಲ್ಲ. ಇವನ ಸುತ್ತ ಹಬ್ಬಿರುವುದು ನಗೆಯ ಅಲೆಯಲ್ಲ, ಕಹಿಯ ವೃತ್ತ. ನಾವು ಮ್ಯಾಲ್ವೋಲಿಯೊನನ್ನು ನೋಡಿ ನಗುತ್ತೇವೆ. ಆದರೆ ಆ ನಗೆಯ ಹಿಂದೆ ಇವನು ನಗೆಗೆ ಮಾತ್ರ ಪಾತ್ರನಲ್ಲ ಎಂಬ ಭಾವನೆಯೂ ಉಂಟು. ಶ್ರೀಮಂತಳಾದ ಆಲಿವಿಯೊಳ ಮನೆ-ವಾರ್ತೆಯನ್ನು ನೋಡಿಕೊಳ್ಳುವ ಅಧಿಕಾರಿ ಇವನು. ಇವನದು ಅತಿ ಬಿಗಿಯಾದ ಹಿಡಿತ, ಇದು ಆಲಿವಿಯಾಳ ಮನೆಯಲ್ಲಿ ಹೆಗ್ಗಣದಂತೆ ಸೇರಿಕೊಂಡಿರುವ ಸರ್ ಟೋಬಿಗೆ, ಆವಳ ಸಂಗಾತಿ ಮರಿಯಾ, ವಿದೂಷಕ ಫೆಸ್ಟ್ ಇವರಿಗೆ ಸಹಿಸದು. ಇವರೆಲ್ಲ ಸೇರಿ, ಆಲಿವಿಯಾ ಮ್ಯಾಲ್ವೋಲಿಯೊಗೆ ಬರೆದಂತೆ ಒಂದು ಪ್ರಣಯಪತ್ರವನ್ನು ಬರೆದು, ಅವನಿಗೆ ಅದು ಸಿಕ್ಕುವಂತೆ ಮಾಡುತ್ತಾರೆ. ಇದರಿಂದ ಉಬ್ಬಿಹೋದ ಮ್ಯಾಲ್ವೋಲಿಯೊ ಇನ್ನೂ ಉದ್ಧಟನಾಗಿ ನಡೆದುಕೊಳ್ಳುತ್ತಾನೆ. ಅವನ ವರ್ತನೆ ಆಲಿವಿಯಾಳಿಗೆ ಆಚ್ಚರಿಯನ್ನು ಉಂಟುಮಾಡುತ್ತದೆ. ಉಳಿದವರೆಲ್ಲ ಅವನಿಗೆ ದೆವ್ವ ಹಿಡಿದಿದೆ ಎಂದು ಸಾರಿ ಅವನನ್ನು ಕಾಡುತ್ತಾರೆ.

ಮ್ಯಾಲ್ವೋಲಿಯೊ ಆಲಿವಿಯಾಳ ಸಮ್ಮುಖದಲ್ಲಿ ನಡೆದುಕೊಳ್ಳುವ ರೀತಿ, ಅವಳನ್ನು ತಾನು ಮದುವೆಯಾದ ನಂತರ ಹೇಗೆ ಅಧಿಕಾರವನ್ನು ಚಲಾಯಿಸುವೆನೆಂದು ಚಿತ್ರಿಸಿಕೊಳ್ಳುವ ವೈಖರಿ ಇದು :

ಕಸೂತಿ ಕೆಲಸ ಮಾಡಿದ ಗೌನನ್ನು ಧರಿಸಿ ಸೇವಕರನ್ನು ಕರೆಯುತ್ತೇನೆ. ಅವರತ್ತ ಗಂಭೀರ

[1] ಶ್ರೀ ಶ್ರೀನಿವಾಸರ ಭಾಷಾಂತರ: 'ಷೇಕ್ಸ್‌ಪಿಯರ್ ದೃಶ್ಯಗಳು', ಭಾಗ ೧.

> ವಾಗಿ ದೃಷ್ಟಿಯನ್ನು ಹರಿಸಿ, ನನಗೂ ಅವರಿಗೂ ಇರುವ ಅಂತರವನ್ನು ಮನವರಿಕೆ ಮಾಡಿಕೊಟ್ಟು, 'ನನ್ನ ನೆಂಟ ಟೋಬಿ ಎಲ್ಲಿ?' ಎಂದು ಕೇಳುತ್ತೇನೆ. ಕೂಡಲೆ ಏಳು ಮಂದಿ ನಮ್ರತೆಯಿಂದ ಎದ್ದು ಅವನನ್ನು ಕರೆತರಲು ಹೋಗುತ್ತಾರೆ. ನಾನು ಹುಬ್ಬುಗಂಟು ಹಾಕಿ, ಗಡಿಯಾರಕ್ಕೆ ಕೀಲಿ ಕೊಡುತ್ತ ಅಥವ ಯಾವುದಾದರೊಂದು ಒಡವೆಯನ್ನು ಆಡಿಸುತ್ತ ಕುಳಿತಿರುತ್ತೇನೆ. ಟೋಬಿ ಬಂದು ನಮಸ್ಕಾರ ಮಾಡುತ್ತಾನೆ. ನಾನು ಅಧಿಕಾರವಾಣಿಯಿಂದ, 'ಟೋಬಿ, ವಿಧಿ ನನಗೆ ಅಲಿವಿಯಾಳ ಸಂಬಂಧವನ್ನು ತಂದುಕೊಟ್ಟಿರುವುದರಿಂದ ಈ ಮಾತನ್ನು ನಿನಗೆ ಹೇಳುವ ಹಕ್ಕು ಬಂದಿದೆ, ನೀನು ಕುಡಿತವನ್ನು ಬಿಡಬೇಕು' ಎನ್ನುತ್ತೇನೆ.

ಹೀಗೆ ಕನಸು ಕಾಣುತ್ತಿರುತ್ತಾನೆ ಈತ. ಇವೆಲ್ಲ ನಮಗೆ ನಗುವನ್ನು ತರುತ್ತವೆ.

ಮ್ಯಾಲ್ವೋಲಿಯೊ ಹಾಸ್ಯಕ್ಕೀಡಾಗುವುದು ತನ್ನ ಮೇರೆಯಿಲ್ಲದ ಸ್ವಪ್ರೇಮದಿಂದ. ಆತ್ಮಸಮರ್ಪಣೆಯನ್ನು ತರಬೇಕಾದ ಪ್ರೇಮವೂ ಅವನ ಸ್ವಪ್ರೇಮವನ್ನು ತಗ್ಗಿಸಲಾರದು, ಪ್ರೇಮ ತರಬೇಕಾದ ವಿನಯವೂ ಅವನ ಬಳಿ ಸುಳಿಯದು. ರೋಮಿಯೊ, ಅಥೆಲ್ಲೊ, ಆ್ಯಂಟೊನಿಯಂತಹವರು ತಮ್ಮ ನಲ್ಲೆಯರ ಪ್ರೀತಿಗೆ ತಾವು ಅರ್ಹರೆ ಎಂದು ಸಂದೇಹಪಟ್ಟರು, ಮ್ಯಾಲ್ವೋಲಿಯೊ ಬಳಿ ಆ ಸಂದೇಹ ಸುಳಿಯದು. (ಮನೆಯೊಡತಿ ಮನೆವಾರ್ತೆಯವನನ್ನು ಮದುವೆಯಾಗುವುದು ಎಲಿಜಬೆತ್‌ಯುಗದಲ್ಲಿ ಅಸಂಭವವಾಗಿರಲಿಲ್ಲ. ಸಫೊಕನ ಡಚೆಸ್, ಅವಳ ಮಲಮಗಳು, ಲೇಡಿ ಮೇರಿ ಗ್ರೇ ಎಲ್ಲರೂ ತಮಗಿಂತ ಅಂತಸ್ತಿನಲ್ಲಿ ಕೀಳಾದವರ ಕೈಹಿಡಿದರು. ಆದುದರಿಂದ ಮ್ಯಾಲ್ವೋಲಿಯೊನ ನಿರೀಕ್ಷಣೆ ಅಷ್ಟೇನೂ ಹುಚ್ಚಾದುದಲ್ಲ ಎಂಬುದು ನಿಜ. ಆದರೆ ನಿಜವಾದ ಪ್ರೇಮ ಹೃದಯಕ್ಕೆ ಕಾಲಿಟ್ಟ ಗಳಿಗೆಯಲ್ಲಿ ಎಂತಹ ಸಾಮ್ರಾಟನಿಗೂ, ಸರ್ವಗುಣಸಂಪನ್ನನಿಗೂ ತಾನು ತನ್ನ ಹೃದಯೇಶ್ವರಿಯ ಪ್ರೇಮಕ್ಕೆ ಅರ್ಹನಲ್ಲ ಎನ್ನಿಸಬೇಕು, ಒಂದು ಕ್ಷಣವಾದರೂ. ಆದರೆ ಮ್ಯಾಲ್ವೋಲಿಯೊಗೆ ಒಮ್ಮೆಯಾದರೂ ಇಂತಹ ಸಂಶಯದ ನೆರಳಾದರೂ ತಾಕೀತೆ?) ಆದರೆ ಅವನಿಗೆ ದೆವ್ವ ಹಿಡಿಯಿತೆಂದು ನಟಿಸಿ ಇತರರು ಅವನನ್ನು ಪೀಡಿಸುವುದನ್ನು ಕಂಡಾಗ ನಗು ಬಂದರೂ, ಅನುಕಂಪವಾಗದಿಲ್ಲ. ವಿದೂಷಕ ಫೆಸ್ಟ್ ಪಾದ್ರಿ ಟೊಪಾಸನ ವೇಷ ಧರಿಸಿ ಬರುತ್ತಾನೆ. ಅವನು ಸರ್ ಟೊಪಾಸ್ ಎಂದು ನಂಬಿದ ಮ್ಯಾಲ್ವೋಲಿಯೊ

> ಸರ್ ಟೊಪಾಸ್, ಸರ್ ಟೊಪಾಸ್, ಪುಣ್ಯಾತ್ಮ ಸರ್ ಟೊಪಾಸ್, ನನ್ನ ಒಡತಿಯ ಬಳಿ ಹೋಗು.

ಎಂದರೆ, ಅದಕ್ಕೆ ವಿದೂಷಕ

> ತೊಲಗು, ಹದ್ದುಮೀರಿದ ಪಿಶಾಚಿಯೇ! ಹೇಗೆ ಗೋಳಾಡಿಸುತ್ತಿ ಈ ಮನುಷ್ಯನನ್ನ! ಹೆಂಗಸರ ವಿಷಯ ಬಿಟ್ಟು ಬೇರೆ ಮಾತೇ ಇಲ್ಲವೇ ನಿನಗೆ?

ಎಂದು—ಪಿಶಾಚಿಯನ್ನು ಬಯ್ಯುವ ಸೋಗಿನಲ್ಲಿ—ಛೀಮಾರಿ ಮಾಡುತ್ತಾನೆ. ಇವರೆಲ್ಲರೂ ಅವನನ್ನು ಕಾಡಿಸುವಾಗ, ಅವನ ಪ್ರತಿಷ್ಠೆ—ಅವನ ದಬ್ಬಾಳಿಕೆ ಎಂದೇ ಬೇಕಾದರೆ ಕರೆಯೋಣ—ಎಲ್ಲವನ್ನೂ ನೆನೆದಂತೆ, ಅಲಿವಿಯೂ ಅವನ ವಿಷಯವಾಗಿ

> ನನ್ನ ಊಳಿಗದವರಲ್ಲಿ ಕೆಲವರು ಇವನನ್ನು ವಿಶೇಷ ಎಚ್ಚರಿಕೆಯಿಂದ ನೋಡಿಕೊಳ್ಳಲಿ; ನನ್ನ ಬಳುವಳಿಯಲ್ಲಿ ಅರ್ಧ ಹೋದರೂ ಕಳೆದುಕೊಂಡೇನು, ಅವನಿಗೆ ಏನೂ ಅಪಾಯವಾಗದಿದ್ದರೆ ಸಾಕು.

ಎನ್ನುವ ಮಾತೂ ನೆನಪಾಗುತ್ತದೆ. ಷೇಕ್ಸ್ಪಿಯರನಿಗೆ ಅರಿವಿಲ್ಲದೆ ಅವನ ಸಹಾನುಭೂತಿ ಮ್ಯಾಲ್ವೋಲಿಯೊನತ್ತ ಸ್ವಲ್ಪವಾದರೂ ಹರಿದಿರಬಹುದೇನೊ!

ಈ 'ಮಹಾಬೆಪ್ಪ' ನನ್ನು ಕುರಿತು ವಿಚಾರ ಮಾಡುವ ಸಂಭ್ರಮದಲ್ಲಿ ಇಲ್ಲಿನ



'ಟ್ವೆಲ್ಫ್ತ್ ನೈಟ್' ನಲ್ಲಿ ಫೆಸ್ಟ್, ಸರ್ ಆ್ಯಂಡ್ರೂ, ಮ್ಯಾಲ್ವೋಲಿಯೊ ಮತ್ತು ಸರ್ ಟೋಬಿ

ಮತ್ತೊಬ್ಬ 'ಜೆಸ್ಟ'ನನ್ನು ಮರೆಯಲಾಗದು. ಇವನಂತೂ ಕ್ಷುದ್ರಜೀವಿಯಾದರೂ ಷೇಕ್‌ಸ್ಪಿಯರನ ಪ್ರತಿಭೆಯ ಒಂದು ಕಿಡಿ. ಸೊನ್ನೆಯೇ ಮನುಷ್ಯರೂಪವನ್ನು ತಾಳಿ ಬಂದರೆ, ತನ್ನತನದ ಕ್ಷಾಮವೇ ಮೂರ್ತಿ ತಾಳಿದರೆ, ಅದು ಸರ್ ಆ್ಯಂಡ್ರೂ ಏಗ್ಯುಚೀಕ್ ಆದೀತು. ಆಲಿವಿಯಾ ಅವನನ್ನು ಮದುವೆಯಾಗುವಳೆಂದು ಆಸೆ ತೋರಿಸಿ ಸರ್ ಟೋಬಿ ಅವನನ್ನು ಸುಲಿಗೆ ಮಾಡುತ್ತಾನೆ. ಮ್ಯಾಲ್ವೋಲಿಯೊ ಇವನಿಗಿಂತ ಎಷ್ಟೋ ದಕ್ಷ; ಆದರೆ ಮ್ಯಾಲ್ವೋಲಿಯೊ ಆಲಿವಿಯಾ ತನ್ನನ್ನು ಮದುವೆಯಾಗುವಳೆಂದು ಭ್ರಮಿಸಿದಾಗ ನಮಗಾಗುವ ತಿರಸ್ಕಾರ ಸರ್ ಆ್ಯಂಡ್ರೂವಿನ ಭ್ರಮೆಯನ್ನು ಕಂಡಾಗ ಆಗುವುದಿಲ್ಲ. ಅದರ ಬದಲು ಕನಿಕರವಾಗುತ್ತದೆ. ಇದಕ್ಕೆ ಕಾರಣ, ಅವನಲ್ಲಿ ಮ್ಯಾಲ್ವೋಲಿಯೊನ ಆತ್ಮಪ್ರತಿಷ್ಠೆ ಇಲ್ಲದಿರುವುದು. ತಾನೂ ಒಬ್ಬ ವ್ಯಕ್ತಿ ಎಂದು ಇತರರಿಗೆ ಅರಿವು ಮಾಡಿ ಕೊಡಬೇಕು, ಇತರರಿಂದ ಮನ್ನಣೆ ಪಡೆಯಬೇಕು ಎನ್ನುವ ಹಂಬಲವೇನೊ ಬಲವತ್ತರ ವಾಗಿದೆ ಇವನಲ್ಲಿ. ಇದಕ್ಕಾಗಿ ಟೋಬಿಯ ನೆರಳಾಗಿ, ಅವನ ಧ್ವನಿಯ ಪ್ರತಿಧ್ವನಿಯಾಗಿ ನಡೆದುಕೊಳ್ಳುತ್ತಾನೆ ಈ ಬಡಪಾಯಿ. ನೆರಳಿಗೆ, ಪ್ರತಿಧ್ವನಿಗೆ ಮನ್ನಣೆ ಇಲ್ಲ ಎನ್ನುವುದೂ ತಿಳಿಯದು ಈ ಪ್ರಾಣಿಗೆ. ತನ್ನ ಶೌರ್ಯವನ್ನು ಪ್ರದರ್ಶಿಸಬೇಕೆಂಬ ಚಪಲ ವೇನೊ ಉಂಟು, ಆದರಿಂದ ಜಗಳಗಂಟನಾಗಿದ್ದಾನೆ, ಆದರೆ ಹೇಡಿತನದ ಮೂರ್ತಿ. ಮರಿಯಾ ಅವನ ವಿಷಯವಾಗಿ ಹೀಗೆನ್ನುತ್ತಾಳೆ :

> ಅವನು ಜೆಸ್ಟ ಅನ್ನುವುದರ ಜೊತೆಗೆ ಮಹಾ ಜಗಳಗಂಟ; ಜಗಳವಾಡೋದರಲ್ಲಿ ಅವನಿಗಿರೋ ಖುಷೀನ ತಗ್ಗಿಸೋದಕ್ಕೆ ಹೇಡಿಯ ವರವೊಂದು ಅವನಿಗಿಲ್ಲದೆ ಹೋಗಿದ್ದರೆ ಬೇಗನೆ ಸ್ಮಶಾನ-ಯಾತ್ರೆ ವರ ಅವನಿಗೆ ದಕ್ಕಿರೋದು ಅಂತ ತಿಳಿವಳಿಕೆ ಇರೋ ಜನ ಅನ್ನುತ್ತಾರೆ.

ಸರ್ ಟೋಬಿ ಅವನಿಗೆ ಮರಿಯಾಳನ್ನು ತೋರಿಸಿ, "Accost, Sir Andrew,

accost" ಎಂದರೆ accost ಎನ್ನುವ ಪದಕ್ಕೆ ಅರ್ಥ ತಿಳಿಯದೆ ಅದು ಅವಳ ಹೆಸರೆಂದು ಭಾವಿಸಿಕೊಂಡು ಗೊಂದಲಕ್ಕೀಡಾಗುತ್ತಾನೆ. ತನ್ನ ಬೆಪ್ಪುತನಕ್ಕೆ ತಾನೇ ಕಾರಣವನ್ನು ಕೊಡುತ್ತಾನೆ:

> ಒಂದೊಂದು ಸಲ ಯಾವ ಒಬ್ಬ ಕ್ರಿಶ್ಚಿಯನನ ಅಥವ ಸಾಮಾನ್ಯ ಮನುಷ್ಯನ ಬುದ್ಧಿಗಿಂತ ಚುರುಕಲ್ಲ ನನ್ನ ಬುದ್ಧಿ ಅಂತ ನನಗನ್ನಿಸತ್ತೆ. **(ಎಂತಹ ವಿನಯ ಈ ಬೆಪ್ಪನದು!)** ಅಂದರೆ ನಾನು ದನದ ಮಾಂಸ ತಿನ್ನೋದು ಹೆಚ್ಚು, ಅದರಿಂದ ನನ್ನ ಬುದ್ಧಿಯ ಚುರುಕಿಗೆ ಕೇಡಾಗುತ್ತೆ ಅಂತ ನನ್ನ ನಂಬಿಕೆ.

ನೃತ್ಯದಲ್ಲಿ ಅದ್ವಿತೀಯನಂತೆ ಈತ. ಇವನ ಭ್ರಮೆಗೆ ಪೋಷಕ ಸರ್ ಟೋಬಿಯ ಹೊಗಳಿಕೆ. ಫೆಸ್ಟನ ಮಾತನ್ನು ಅರ್ಥಮಾಡಿಕೊಳ್ಳದೆ, ತನಗೂ ಅರ್ಥವಾಯಿತು, ತಾನೂ ವಿನೋದದಲ್ಲಿ ಪಾಲುಗೊಳ್ಳಬಲ್ಲೆ ಎಂದು ತೋರಿಸಲು "ಭೇಷ್! ಎಲ್ಲ ಹೇಳಿಕೇಳಿದ ಮೇಲೆ ಇದೇ ಅತಿ ಸೊಗಸಾದ ನಕಲಿ!" ಎನ್ನುತ್ತಾನೆ.

ಸರ್ ಟೋಬಿಯ ಹುಚ್ಚಾಟವನ್ನು ಫೆಸ್ಟ್ ಮೆಚ್ಚಿದರೆ, ಸರ್ ಆ್ಯಂಡ್ರೂ "ಹೌದು, ಮನಸ್ಸು ಮಾಡಿದರೆ ಅವನೂ ಚೆನ್ನಾಗಿ ಮಾಡ್ತಾನೆ, ಪರವಾಗಿಲ್ಲ. ನಾನೂ ಹಾಗೆಯೇ ಮಾಡ್ತೇನೆ. ಅವನು ಹೆಚ್ಚು ಠೀವಿಯಿಂದ ಮಾಡ್ತಾನೆ, ನಾನು ಹೆಚ್ಚು ಸಹಜವಾಗಿ ಮಾಡ್ತೇನೆ" ಎನ್ನುತ್ತಾನೆ! ಮರಿಯೂ ತನ್ನನ್ನು ಮೆಚ್ಚಿದ್ದಾಳೆ ಎಂದು ಸರ್ ಟೋಬಿ ಎಂದರೆ, ಈ ಪ್ರಾಣಿ "ನನ್ನನ್ನೂ (ಹೆಂಗಸೊಬ್ಬಳು) ಒಮ್ಮೆ ಪೂಜೆಮಾಡುತ್ತಿದ್ದಳು!" ಎನ್ನುತ್ತದೆ. ನಮಗೆ 'ಅಯ್ಯೋ ಪಾಪ' ಎನ್ನಿಸುತ್ತದೆ. (ತನ್ನ ಮಾತು ಸುಳ್ಳು ಎಂದು ಅವನಿಗೂ ಗೊತ್ತು, ಕೇಳುವವರಿಗೂ ಗೊತ್ತು. ಕೇಳುವವರು ನಂಬುತ್ತಾರೆಂದು ಅವನೂ ನಿರೀಕ್ಷಿಸುತ್ತಾನೆಯೊ ಇಲ್ಲವೊ! ಆದರೂ ಹೀಗೆ ಹೇಳಿಕೊಂಡರೆ ಅವನಿಗೊಂದು ತೃಪ್ತಿ.) ಕೊನೆಯಲ್ಲಿ ಸರ್ ಟೋಬಿ ಇವನನ್ನು ನಿರ್ದಯವಾಗಿ ಧಿಕ್ಕರಿಸಿದಾಗ ನಮಗೆ ಈ ಬಡಪ್ರಾಣಿಯನ್ನು ಕಂಡು ಕನಿಕರವಾಗದೆ ಇರದು.

ಬಾಟಮ್, ಡಾಗ್‌ಬೆರಿ, ಆ್ಯಂಡ್ರೂ—ಇವರೆಲ್ಲ ಹುಟ್ಟುಬೆಪ್ಪರು, ತಾವು ಬೆಪ್ಪರೆಂದು ಅರಿಯದ ಬೆಪ್ಪರು. ಇವರನ್ನು ಕಂಡು ನಗುತ್ತೇವೆ, ಆದರೆ ಆ ನಗುವಿನಲ್ಲಿ ತಿರಸ್ಕಾರವಿಲ್ಲ. ಮ್ಯಾಲ್ವೊಲಿಯೊ ಒಬ್ಬನ ಹೊರತು ಉಳಿದವರಿಗೆ ಪ್ರೊ|| ಮೂರ್ತಿರಾಯರು ಹೇಳುವ ಮಾತು ಅನ್ವಯಿಸುತ್ತದೆ: "ಇಂಥ ದಡ್ಡರಿಂದ ಜೀವನದ ಸಂಪತ್ತು ಹೇಗೋ ಹೆಚ್ಚಿದಂತೆ ತೋರುತ್ತದೆ."

ಷೇಕ್‌ಸ್ಪಿಯರ್ ಇನ್ನೊಂದು ಬಗೆಯ ಬೆಪ್ಪರನ್ನೂ ಚಿತ್ರಿಸಿದ್ದಾನೆ. ಇವರು ವೃತ್ತಿಯಿಂದ ಬೆಪ್ಪರಾದವರು. ಆಸ್ಥಾನಕ್ಕೊಬ್ಬ ವಿದೂಷಕನಿರುವುದು ಎಲ್ಲ ದೇಶಗಳಲ್ಲಿ ಅನಿವಾರ್ಯವೇನೊ! (ಬೆಪ್ಪನೆಂದು ಸಾರುವ ಉಡಿಗೆಯನ್ನು ತೊಟ್ಟವನೊಬ್ಬ ಪಕ್ಕದಲ್ಲಿದ್ದರೆ ಎಲ್ಲರಿಗೂ ತಾವು ವಿವೇಕಿಗಳೆಂಬ ಸಮಾಧಾನ!) ನಾಟಕದ ವಿದೂಷಕರಂತೂ ಸಾಮಾನ್ಯವಾಗಿ ಅಷ್ಟೇನೂ ನಮ್ಮ ಮೆಚ್ಚಿಕೆಯನ್ನು ಸಂಪಾದಿಸದ ಹಾಸ್ಯಗಾರರು. ಬಹುಬಾರಿ ಇವರ ಹಾಸ್ಯ 'ತಿಣಿಕಿದನು ಫಣಿರಾಯ' ಎನ್ನುವ ವರ್ಗಕ್ಕೆ ಸೇರಿದುದು. ಷೇಕ್‌ಸ್ಪಿಯರ್ ಈ ಬೆಪ್ಪರನ್ನು ಮಾರ್ಪಡಿಸಿದನು, ಇವರನ್ನೂ ಕ್ರಿಯೆಯ ಚೌಕಟ್ಟಿನೊಳಕ್ಕೆ ತಂದನು. ಈ ವಿದೂಷಕರು 'licensed fools' ಎನ್ನುವುದು ಸಂಪ್ರದಾಯ. ಸುತ್ತ-

ಮುತ್ತಲಿನವರನ್ನು—ಅರಸನನ್ನು ಸಹ—ಟೀಕೆ ಮಾಡುವುದರಲ್ಲಿ ಇವರಿಗೆ ಬೇರಾರಿಗೂ ಇಲ್ಲದ ಸ್ವಾತಂತ್ರ್ಯ. ಈ ಮಾತಿನ ಸ್ವಾತಂತ್ರ್ಯವನ್ನು ನಾಟಕೀಯವಾಗಿ ಬಳಸುವುದನ್ನು ಷೇಕ್ಸ್ಪಿಯರ್ ಸಾಧಿಸಿದ. ಅವನ ಕೈ ನುರಿತಂತೆ, 'ಕಿಂಗ್ ಲಿಯರ್' ನಾಟಕಕ್ಕೆ ಬರುವ ವೇಳೆಗೆ, ಈ 'ವಿದೂಷಕ' ನಲ್ಲಾದ ಮಾರ್ಪಾಡು ಅದ್ಭುತವಾದುದು.

ಹಿಂದೆಯೇ ಹೇಳಿದಂತೆ ಲಾನ್ಸ್‌ಲಾಟ್ ಗಾಬೊ, 'ಅಥೆಲ್ಲೊ'ದ ವಿದೂಷಕ ಇವರೆಲ್ಲ ಸಂಪ್ರದಾಯಕ್ಕನುಗುಣರಾದ ವಿದೂಷಕರು. ಆದರೆ 'ಆ್ಯಸ್ ಯು ಲೈಕ್ ಇಟ್' ನಾಟಕದ ಟಚ್‌ಸ್ಟನ್ ಬೇರೆ ಕಲ್ಲಿನಿಂದ ಕಡೆದ ಮೂರ್ತಿ. ಪ್ರೊ|| ಗಾರ್ಡನ್ ಅವರು ಷೇಕ್ಸ್ಪಿಯರನ ವಿನೋದನಾಟಕಗಳನ್ನು ಕುರಿತು ಬರೆದ ಒಂದು ಸೊಗಸಾದ ಪ್ರಬಂಧ ದಲ್ಲಿ ಷೇಕ್ಸ್ಪಿಯರನ ಹಾಸ್ಯನಾಟಕದ ಒಂದು ವೈಶಿಷ್ಟ್ಯವನ್ನು ಸ್ಪಷ್ಟಗೊಳಿಸಿದ್ದಾರೆ. ಸಾಮಾಜಿಕ ಹಾಸ್ಯನಾಟಕಗಳಲ್ಲಿ ನಾಟಕಕಾರ ಪಾತ್ರಗಳ ದೋಷಗಳನ್ನು ಎತ್ತಿತೋರಿ ಸುವ ವಿಮರ್ಶಕನಾಗುತ್ತಾನೆ ಎಂದು ನುಡಿದು ಪ್ರೊ|| ಗಾರ್ಡನ್ ಷೇಕ್ಸ್ಪಿಯರನ ವಿನೋದನಾಟಕಗಳಲ್ಲಿ ಹೀಗಾಗುವುದಿಲ್ಲ ಎಂದು ವಿವರಿಸುತ್ತಾರೆ :

> ಅವನ ಪಾತ್ರಗಳನ್ನು ತಿದ್ದಿದಾಗ, ಮಾರ್ಗದರ್ಶನ ಹೊರಗಿನ ಶಕ್ತಿಯೊಂದರಿಂದ ಲಭಿಸಿದಂತೆ ತೋರುವುದಿಲ್ಲ: ಅವರೇ ಒಬ್ಬರಿಗೊಬ್ಬರು ಅದನ್ನು ಮಾಡುವಂತೆ ತೋರುತ್ತಾರೆ. ವಿನೋದ ನಾಟಕಗಳೆಂದು ಮಾತ್ರವೇ ಅವನ್ನು ಗಣಿಸಿದರೆ, ಷೇಕ್ಸ್ಪಿಯರನ ವಿನೋದನಾಟಕಗಳು ಅಹಂಭಾವದ, ಭಾವಾತಿರೇಕ, ಶುಷ್ಕ ಪಾಂಡಿತ್ಯ, ಆತ್ಮಪ್ರತಿಷ್ಠೆಗಳ ಮೇಲೆ ದ್ವೇಷ, ರಕ್ತಪಾತ ಗಳಿಲ್ಲದೆ ಹೂಡಿದ ಪವಿತ್ರಯುದ್ಧವನ್ನು ನಮ್ಮ ಮುಂದೆ ನಿರೂಪಿಸುತ್ತವೆ. [1]

ನಾಟಕದ ಚೌಕಟ್ಟಿನೊಳಗೆ ಅತಿರೇಕವನ್ನು ತಿದ್ದುವ ಒಂದು ಶಕ್ತಿ ಟಚ್‌ಸ್ಟನ್. ಸಾಂಪ್ರ- ದಾಯಿಕ ವಿದೂಷಕನ ಶ್ಲೇಷೆ, ಶಬ್ದಗಳೊಡನೆ ಚೆಲ್ಲಾಟ ಇವೆಲ್ಲ ಅವನಲ್ಲಿಯೂ ಉಂಟು ಎಂದು ಒಪ್ಪೋಣ.

> For my part, I had rather bear with you than bear you ; yet I should bear no cross if I did bear you, for I think you have no money in your purse. [2]
>
> ನಿನ್ನ ಮಟ್ಟಿಗೆ ಹೇಳುವುದಾದರೆ ನಿನ್ನನ್ನು ಹೊರುವುದಕ್ಕಿಂತ ನಿನ್ನೊಡನೆ ತಾಳ್ಮೆಯಿಂದ ಇರು ವುದೇ ಲೇಸು ; ಆದರೂ, ನಿನ್ನನ್ನ ಹೊತ್ತರೂ ನಾನೇನೂ ಶಿಲುಬೆಯನ್ನು ಹೊತ್ತಂತಾಗುವುದಿಲ್ಲ. ಯಾಕೆಂದರೆ ನಿನ್ನ ಚೀಲದಲ್ಲಿ ಹಣವಿಲ್ಲ ಅಂತ ನನಗೆ ತೋರತದೆ.

ಇಂತಹ ಮಾತುಗಳು ಅವನಿಂದಲೂ ಬರುತ್ತವೆ. ಆದರೆ 'divine Rosalind'ಳೂ ಸಹ ಈ ಚಟದಿಂದ ಮುಕ್ತಳಾಗಿಲ್ಲ ಎನ್ನುವುದೂ ನೆನಪಿನಲ್ಲಿಡಬೇಕಾದ ಅಂಶ. ಅತಿರೇಕ ವನ್ನು ತಿದ್ದಿ ವಾಸ್ತವಿಕತೆಯ ಜಗತ್ತಿನ ನೆನಪನ್ನು ಸದಾ ನೀಡುವುದು ಟಚ್‌ಸ್ಟನನ ಕೆಲಸ. ನಲ್ಲೆಯ ನಕ್ಷತ್ರದಂತಹ ಕಣ್ಣುಗಳು, ಗುಲಾಬಿಯಂತಹ ಕಪೋಲಗಳು, ತಾವರೆಯನ್ನು ನಾಚಿಸುವ ಅಧರಗಳು ಎಲ್ಲವನ್ನೂ ಸ್ಮರಿಸಿ ಕೊರಗುವ ಪ್ರಣಯಿಯ ವ್ಯಥೆಗೆ ಮದ್ದು ಅವನ ವಿರಹವೇದನೆಯ ವೈಖರಿ :

> ನನಗೆ ನೆನಪಿದೆ, ನಾನು ಪ್ರೇಮಕ್ಕೆ ಸಿಲುಕಿದಾಗ ನಾನು ನನ್ನ ಕತ್ತಿಯನ್ನು ಕಲ್ಲೊಂದರ ಮೇಲೆ ಮುರಿದು, ರಾತ್ರಿ ಜೇನ್ ಸ್ಮೈಲಳನ್ನು ಹುಡುಕಿಕೊಂಡು ಬರುತ್ತಿದ್ದುದಕ್ಕೆ ಅನುಭವಿಸು ಎಂದು

---

[1] 'ಷೇಕ್ಸ್ಪೀರಿಯಸ್ ಕಾಮೆಡಿ ಅಂಡ್ ಅದರ್ ಎಸ್ಸೇಸ್'.

[2] II. iv. 11-3.

ಅವನಿಗೆಂದೆ; ಬಟ್ಟೆ ಬಡಿಯೋದಕ್ಕೆ ಅವಳು ಬಳಸ್ತಾ ಇದ್ದ ಕೊರಡನ್ನ ಅವಳ ಮುದ್ದು ತರಕಲು ಕೈಗಳು ಹಾಲುಕರೆದಿದ್ದ ಹಸುವಿನ ಕೆಚ್ಚಲ್ನ ಮುತ್ತಿಟ್ಟದ್ದು ನನಗೆ ನೆನಪಿದೆ. ಅವಳಿಂದ ಎರಡು ಹೊಟ್ಟುಗಳನ್ನ ತೆಗೆದುಕೊಂಡು, ಮತ್ತೆ ಅವಳಿಗೆ ಅವನ್ನ ಕೊಟ್ಟು 'ನನಗಾಗಿ ಇವನ್ನ ಧರಿಸು' ಅಂತ ಅಳುತ್ತಾ ಕಂಬನಿಗರೆದು, ಅವಳ ಬದಲು ಒಂದು ಬಟಾಣಿ ಸಿಪ್ಪೆಯನ್ನು ಒಲಿಸಿದ್ದು ನನಗೆ ನೆನಪಿದೆ.

ರೊಸಲಿಂಡ್ ಆರ್ಲ್ಯಾಂಡೋನ ಪ್ರಣಯಗೀತೆಯನ್ನು ಓದುತ್ತಾ ಬಂದರೆ, ಆ ಕ್ಷಣದಲ್ಲಿಯೇ ಅದನ್ನು ಹಾಸ್ಯಮಾಡಿ ಅದೇ ಬಗೆಯ ಪಂಕ್ತಿಗಳಿಂದ ಅಣಕಿಸುತ್ತಾನೆ. "ಸುಮ್ಮನಿರು, ಬೆಪ್ಪೆ, ನನಗೆ ಅವು ಒಂದು ಮರದಲ್ಲಿ ಸಿಕ್ಕಿದವು" ಎಂದು ಅವಳು ಹೇಳಿದರೆ "ದಿಟವಾಗಿ ಆ ಮರ ಕೆಟ್ಟ ಹಣ್ಣನ್ನು ಬಿಡುತ್ತೆ" ಎನ್ನುತ್ತಾನೆ. ಅವನು ಆಡ್ರೆಯನ್ನು ಒಲಿಸುವ ರೀತಿ 'ರೊಮ್ಯಾಂಟಿಕ್' ಸಂಪ್ರದಾಯದ ಅಣಕ. ಅವಳು ಅವಲಕ್ಷಣವಾಗಿರುವುದೇ ಅವನಿಗೆ ಸಮಾಧಾನದ ಅಂಶವಂತೆ. 'ರೊಮ್ಯಾಂಟಿಕ್' ತರುಣ ತನ್ನ ಪ್ರೇಯಸಿ ಚೆಂಗುಲಾಬಿಯನ್ನು ನಾಚಿಸುತ್ತಾಳೆಂದು ಬಣ್ಣಿಸಿದರೆ, ಟಚ್‌ಸ್ಟನ್ ತನ್ನ ಪ್ರೇಯಸಿಗೆ "ನಿನ್ನ ಕುರೂಪಕ್ಕೋಸ್ಕರ ದೇವತೆಗಳನ್ನ ವಂದಿಸೋಣ!" ಎನ್ನುತ್ತಾನೆ. ತನ್ನ ನಲ್ಲೆಯನ್ನು ಅವನು ಇತರರಿಗೆ ಪರಿಚಯ ಮಾಡಿಕೊಡುವ ವೈಖರಿ ಇದು :

ಬಡ ಕನ್ಯೆಯೊಬ್ಬಳು, ಸ್ವಾಮಿ, ಒಂದು ಅವಲಕ್ಷಣದ ಪದಾರ್ಥ, ಸ್ವಾಮಿ. ಆದರೆ ನನ್ನವಳೇ; ಬೇರೆ ಯಾವ ಮನುಷ್ಯನಿಗೂ ಬೇಡದ್ದನ್ನ ತೆಗೆದುಕೊಳ್ಳೊ ಬಡ ಖಯಾಲು ನನ್ನದು.

ಆಸ್ಥಾನಿಕರ ಒಣ ಹೆಮ್ಮೆ, ಬಂಡವಾಳವಿಲ್ಲದ ಬಡಾಯಿ, ಜಗಳಗಂಟಿತನ, ಹೇಡಿತನ ಎಲ್ಲವನ್ನು ನಿರ್ದಯವಾಗಿ ಹಾಸ್ಯಮಾಡುತ್ತಾನೆ. ತಾನೂ ಆಸ್ಥಾನದಲ್ಲಿದ್ದವನೆಂದು ಅವನು ಸ್ಥಾಪಿಸುವ ರೀತಿ ಇದು : ತಾನೂ ಆಸ್ಥಾನದಲ್ಲಿ ನೃತ್ಯ ಮಾಡಿದ್ದಾನಂತೆ, ಸ್ತ್ರೀಗೆ ಮುಖಸ್ತುತಿ ಮಾಡಿದ್ದಾನಂತೆ, ಸ್ನೇಹಿತನೊಡನೆ ಬುದ್ಧಿವಂತಿಕೆಯಿಂದ, ಶತ್ರುವಿನೊಡನೆ ನಯದಿಂದ ನಡೆದುಕೊಂಡಿದ್ದಾನಂತೆ, ಮೂವರು ದರ್ಜಿಯರನ್ನು ಬರಿಗೈಮಾಡಿದ್ದಾನಂತೆ, ನಾಲ್ಕು ಬಾರಿ ಜಗಳವಾಡಿದ್ದಾನಂತೆ, ಒಮ್ಮೆ ದ್ವಂದ್ವಯುದ್ಧ ಮಾಡುವುದರಲ್ಲಿದ್ದನಂತೆ. ಮಾತುಮಾತಿಗೆ ತಮ್ಮ ಪ್ರತಿಷ್ಠೆಗೆ ಕುಂದುಬಂದಿತೆಂದು ಜಗಳವಾಡಿ, ಕೊನೆಯಲ್ಲಿ ಕಾದಾಡುವ ಧೈರ್ಯವಿಲ್ಲದೆ ಹೇಗೋ ನುಣುಚಿಕೊಳ್ಳುವ ಆಸ್ಥಾನಿಕರನ್ನೂ ಹೀಗೆಯೇ ವ್ಯಂಗ್ಯವಾಗಿ ಚಿತ್ರಿಸುತ್ತಾನೆ. ಆದುದರಿಂದಲೇ ಹಿರಿಯ ಡ್ಯೂಕ್ ಅವನ ವಿಷಯವಾಗಿ

ಇವನು ತನ್ನ ನಕಲಿಯನ್ನ ಬೊಂಬೆಕುದುರೆಯಾಗಿ ಉಪಯೋಗಿಸುತ್ತಾನೆ. ಅದನ್ನ ಮುಂವಿಟ್ಟು ತನ್ನ ಚಾತುರ್ಯವನ್ನ ಎಸೆಯುತ್ತಾನೆ.

ಎನ್ನುವುದು. ವಿದೂಷಕನ ವೇಷ ಧರಿಸಿದ ಇವನು ವಿವೇಕಶಾಲಿಗಳೆನಿಸಿಕೊಂಡವರ ಮೂರ್ಖತನವನ್ನು ಬೆರಳಿಟ್ಟು ತೋರುವ ಬುದ್ಧಿವಂತ.

ಟಚ್‌ಸ್ಟನ್ ನಾಟಕದ ಕ್ರಿಯೆಯಿಂದ ಹೊರಗುಳಿದವನಲ್ಲ, ನಗೆಯನ್ನು ಚಿಮ್ಮಿಸಲು ಮಾತ್ರ ಕಾಲಿಟ್ಟ ವಿದೂಷಕನಲ್ಲ. ಅವನಿಂದಲೇ ರೊಸಲಿಂಡ್, ಸೀಲಿಯಾ ಅರಮನೆಯಿಂದ ತಪ್ಪಿಸಿಕೊಂಡು ಆರ್ಡೆನ್ ಕಾಡಿಗೆ ಬರಲು ಸಾಧ್ಯವಾದುದು. ಇವನ್ನು ಗಮನಕ್ಕೆ ತಂದುಕೊಂಡಾಗ, ಮತ್ತೊಂದು ಅಂಶ ಸ್ಫುರಿಸುತ್ತದೆ. ಟಚ್‌ಸ್ಟನನಿಗೆ ಸೀಲಿಯೊಳಲ್ಲಿ ವಿಶೇಷ ಆದರ. ತನಗಾಗಿ ಅವನು ಪ್ರಪಂಚವನ್ನೆಲ್ಲ ಸುತ್ತಲೂ ಸಿದ್ಧ ಎನ್ನುತ್ತಾಳೆ

ಅವಳು. ಷೇಕ್‌ಸ್ಪಿಯರನ ವಿದೂಷಕರು ಬರಿಯ ಬುದ್ಧಿಶಕ್ತಿಯ ವಿಗ್ರಹಗಳಲ್ಲ, ಅಂತಃಕರಣವನ್ನು ಅರಿತ ಮಾನವರು. ಷೇಕ್‌ಸ್ಪಿಯರ್ ವಿದೂಷಕರನ್ನು ಒಂದು ಕಡೆ ವಿವೇಕಿಗಳೆನ್ನಿಸಿಕೊಂಡವರ ಅವಿವೇಕಕ್ಕೆ 'ಸರ್ಚ್‌ಲೈಟ್' ಎನ್ನುವಂತೆ ಮಾಡಿದರೆ, ಮತ್ತೊಂದು ಕಡೆ ಆದರ, ನಿಷ್ಠೆ, ಸುಖ, ದುಃಖ ಎಲ್ಲವನ್ನೂ ಅನುಭವಿಸಬಲ್ಲ ಮಾನವರನ್ನಾಗಿಯೂ ಮಾಡಿದನು.

ಟಚ್‌ಸ್ಟನನಲ್ಲಿ ಹಾಸ್ಯಕ್ಕಿಂತ ಚತುರೋಕ್ತಿಯೇ ಹೆಚ್ಚು ಎನ್ನಬಹುದು. 'ಟ್ವೆಲ್ಫ್ತ್ ನೈಟ್'ನ ಫೆಸ್ಟ್ ನಮ್ಮನ್ನು ನಗಿಸುವುದು ಮಾತ್ರವಲ್ಲ, ಕನಿಕರವನ್ನೂ ಸಂಪಾದಿಸುತ್ತಾನೆ. ವಿದೂಷಕನ ವೃತ್ತಿಯನ್ನು ಕೈಗೊಂಡವನ ಸಂಕಟವನ್ನೂ ನಾವು ಪರಿಚಯ ಮಾಡಿಕೊಳ್ಳುವುದು ಈ ಚಿತ್ರದಲ್ಲಿ: ಅವನನ್ನು ಸರ್ ಟೋಬಿ ಹೊಗಳಿದಾಗ "I am for all waters" (ನಾನು ಯಾವ ಪಾತ್ರವನ್ನಾದರೂ ನಿರ್ವಹಿಸಬಲ್ಲೆ) ಎನ್ನುತ್ತಾನೆ. ತನ್ನ ಒಡತಿಯನ್ನು ಉಲ್ಲಾಸವಾಗಿಡುವುದು ಅವನ ಕರ್ತವ್ಯ. ಒಡತಿಗೆ ಅವನ ಮೇಲೆ ಕೋಪ ಬಂದರೆ, ಬಾರುಕೋಲೇ ಅವನ ಪಾಲಿಗೆ. ಅಂತೂ ಎಚ್ಚರಿಕೆಯಿಂದ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು. ಆಲಿವಿಯಾ "ಬುದ್ಧಿ ಇಲ್ಲದ ಪ್ರಾಣಿಯನ್ನ ಆತ್ತ ಒಯ್ಯಿರಿ" ಎಂದರೆ, ಪರಿಜನರಿಗೆನ್ನುತ್ತಾನೆ: "ನಿಮಗೆ ಕೇಳಿಸೋದಿಲ್ಲವೆ ಅಣ್ಣಂದಿರೆ? ಶ್ರೀಮಂತಳನ್ನು ಅತ್ತ ಒಯ್ಯಿರಿ." ಅವಳು ಬೆಪ್ಪಳೆಂದು ಸಿದ್ಧಮಾಡಿತೋರಿಸಲು ಅವಳ ಅನುಮತಿ ಬೇಡಿ, ಅನಂತರ ಹೀಗೆ ಸಿದ್ಧಮಾಡುತ್ತಾನೆ: "ನೀನು ಅಳುವುದೇಕೆ?"—ಅವನ ಪ್ರಶ್ನೆ. "ನನ್ನ ಸೋದರನ ಮರಣಕ್ಕಾಗಿ"—ಅವಳ ಉತ್ತರ. "ಅವನ ಆತ್ಮ ನರಕದಲ್ಲಿದೆ ಎಂದು ತೋರುತ್ತದೆ ನನಗೆ" ಎನ್ನುತ್ತಾನೆ. "ಅವನ ಆತ್ಮ ಸ್ವರ್ಗದಲ್ಲಿದೆ ಎಂದು ಗೊತ್ತು ನನಗೆ" ಎನ್ನುತ್ತಾಳೆ ಆಲಿವಿಯಾ. "ನಿನ್ನ ಸೋದರನ ಆತ್ಮ ಸ್ವರ್ಗದಲ್ಲಿದೆ ಎಂದು ಗೋಳಾಡುವ ನೀನು ಮಹಾಬೆಪ್ಪಳು" ಎನ್ನುತ್ತಾನೆ ಫೆಸ್ಟ್. ಸರ್ ಆ್ಯಂಡ್ರೂನ ಬುದ್ಧಿಯ ಮಟ್ಟಕ್ಕೆ ನಿಲುಕುವ ಹಾಸ್ಯದ ಚಟಾಕಿಯನ್ನು ಹಾರಿಸಿ ಅವನನ್ನು ಮೆಚ್ಚಿಸುತ್ತಾನೆ. ಆ ಚಟಾಕಿಯ ಮಾದರಿಯೂ ಸರ್ ಆ್ಯಂಡ್ರೂನ ಮಾತುಗಳಲ್ಲೆ ತಿಳಿಯುತ್ತದೆ:

> In sooth, thou wast in very gracious fooling last night, when thou spok'st of Pigrogromitus, of the Vapians passing the equinoctial Queubus. [1]

ಸರ್ ಆ್ಯಂಡ್ರೂಗೆ ಮೇರೆಯಿಲ್ಲದ ಮೆಚ್ಚಿಕೆ ಈ ಹಾಸ್ಯದ ನುಡಿಯನ್ನು ಕೇಳಿ! ಟೋಬಿ, ಮರಿಯಾ ಇವರೊಡಸಿದ್ದಾಗ ಫೆಸ್ಟ್ ಕುಣಿಯುತ್ತಾನೆ, ಕುಪ್ಪಳಿಸುತ್ತಾನೆ, ಸುಪರಿಚಿತ ಗೀತೆಗಳಿಂದ ಪಂಕ್ತಿಗಳನ್ನು ಉದ್ಧರಿಸಿ ಮ್ಯಾಲ್ವೋಲಿಯೊನನ್ನು ರೇಗಿಸುತ್ತಾನೆ. ಹಾಡುವಾಗಲೂ ತನ್ನ ಶ್ರೋತೃವೃಂದದ 'ಮರ್ಜಿ'ಯನ್ನು ಅರಿತೇ ಹಾಡುತ್ತಾನೆ. ಟೋಬಿ, ಮರಿಯಾ ಅವರೊಂದಿಗಿದ್ದಾಗ

> ಆಲಸ್ಯದಲಿ ಸಿರಿಯಿಲ್ಲ,
> ಇಸಿದು ಇಪ್ಪತ್ತೆ, ಬಂದೆನ್ನ ಚುಂಬಿಸು;
> ತಾರುಣ್ಯ ನಿಲುವುದಲ್ಲ.

[1] II. iii. 23-6.

ಎಂದು ಹಾಡಿದರೆ, ವಿಷಾದ ಮನೋಧರ್ಮವನ್ನೇ ಹೊದ್ದು ನಲಿಯುವ ಡ್ಯೂಕನ ಸಮ್ಮುಖದಲ್ಲಿ

ಬಾರಿತ್ತ ಬಾರಿತ್ತ ಸಾವೇ
ದುಃಖಿ ಸೈಪ್ರೆಸಿನಲಿ ನಾ ಮಲಗಲಿ!

ಎಂದು ಹಾಡುತ್ತಾನೆ. ಫೆಸ್ಟ್‌ನಂತಹವರ ಕಷ್ಟಗಳನ್ನು ವಯೋಲ ಸೊಗಸಾಗಿ ನಿರೂಪಿಸುತ್ತಾಳೆ :

> ಇವನು ವಿದೂಷಕನ ಪಾತ್ರವನ್ನು ನಿರ್ವಹಿಸಲು ತಕ್ಕ ವಿವೇಕ ಪಡೆದಿದ್ದಾನೆ ; ಇದನ್ನು ಚೆನ್ನಾಗಿ ಮಾಡಲೂ ಒಂದು ವಿಶೇಷ ಬಗೆಯ ಚಾತುರ್ಯ ಬೇಕು. ತಾನು ಯಾರನ್ನು ಹಾಸ್ಯ ಮಾಡುವನೊ ಅವರ ಮನಸ್ಸಿನ ಸ್ಥಿತಿಯನ್ನು, ಜನರ ಅಂತಸ್ತನ್ನು, ಕಾಲವನ್ನು ಗಮನಿಸಬೇಕು ; ಪಳಗಿಲ್ಲದ ಡೇಗೆಯಂತೆ ಕಣ್ಣಮುಂದೆ ಗರಿ ಕಂಪಾಗಲೆಲ್ಲ ತಡೆಯಬೇಕು. ವಿವೇಕಶಾಲಿಯ ಕೆಲಸದಷ್ಟೇ ಶ್ರಮದ ಕಾರ್ಯ ಇದು.

ಮ್ಯಾಲ್ವೋಲಿಯೊನನ್ನು ಕಾಡುವ ಪ್ರಸಂಗದಲ್ಲಿ ಅವನ ನಟನಾಚಾತುರ್ಯ, ಹರಿತವಾದ ಬುದ್ಧಿಶಕ್ತಿ ಎಲ್ಲ ಸ್ಪಷ್ಟವಾಗುತ್ತದೆ. ಕ್ಷಣದಿಂದ ಕ್ಷಣಕ್ಕೆ ತನ್ನ ಸ್ವರವನ್ನು ಬದಲಾಯಿಸುತ್ತಾನೆ. ಅವನನ್ನು ಚೆನ್ನಾಗಿ ಬಲ್ಲ ಮ್ಯಾಲ್ವೋಲಿಯೊ ಸಹ ಅವನು ಸರ್ ಟೊಪಾಸ್ ಎಂದು ನಂಬುವಂತೆ ಮಾಡುತ್ತಾನೆ. ತನ್ನ ನಿಜವಾದ ಪಾತ್ರದಲ್ಲಿ ಮಾತನಾಡುವಾಗಲೂ ಕಟಕಿಯನ್ನು ಸೊಗಸಾಗಿ ಬಳಸಿಕೊಳ್ಳುತ್ತಾನೆ. ಹಿಂದೊಮ್ಮೆ ಇದೇ ಮ್ಯಾಲ್ವೋಲಿಯೊ ಅವನನ್ನು ತನ್ನತನವಿಲ್ಲದ ದಡ್ಡನೆಂದು ಹೀಯಾಳಿಸಿದ್ದನಲ್ಲವೆ! ಈಗ ಮ್ಯಾಲ್ವೋಲಿಯೊ ತಾನು ಹುಚ್ಚನಲ್ಲ ಎಂದು ಸಾಧಿಸುವುದಕ್ಕಾಗಿ ಹೇಳುತ್ತಾನೆ—"ನಿನಗಿರುವಂತೆಯೇ ನನಗೂ ಬುದ್ಧಿಯಿದೆ, ಬೆಪ್ಪೆ." ತಕ್ಷಣ ಬರುತ್ತದೆ ಉತ್ತರ—"ಅಷ್ಟೇನೆ ? ಬೆಪ್ಪನಿಗಿರುವುದಕ್ಕಿಂತ ಹೆಚ್ಚು ನಿನಗಿಲ್ಲದಿದ್ದರೆ, ನೀನು ಹುಚ್ಚನೇ ಸರಿ." ಇಷ್ಟು ಜನದೊಂದಿಗೆ ಇಷ್ಟು ಹೊಂದಿಕೊಂಡು ಚಾತುರ್ಯದ ಪ್ರದರ್ಶನಮಾಡಿ, ಅವರ ಪಿತೂರಿಗಳಲ್ಲಿ ಭಾಗವಹಿಸಿ, ಹಾಡಿ, ಕುಣಿದು ಕುಪ್ಪಳಿಸಿದರೂ, ಅವನ ಕೈಯಲ್ಲಿ ಕಾಸಿಲ್ಲ. ಎಲ್ಲರಿಂದಲೂ ಭಿಕ್ಷೆ ಬೇಡುತ್ತಾನೆ, ನಾಚಿಕೆಬಿಟ್ಟು ಕಾಸಿಗೆ ಕೈಯೊಡ್ಡುತ್ತಾನೆ. ನಮಗೆ ನೆನಪಿನಲ್ಲಿ ಬಹುಮಟ್ಟಿಗೆ ಉಳಿಯುವುದೆಂದರೆ ಅವನ ಸಂಗೀತಪ್ರೇಮ. ಪ್ರತಿ ಸಂದರ್ಭಕ್ಕೆ, ಎಲ್ಲ ಸಂಗಾತಿಗಳಿಗೆ ಒಪ್ಪುವ ಸಂಗೀತ ಅವನದು. ನಾಟಕ ಮುಕ್ತಾಯವಾಗುವುದು ಅವನ ಹಾಡಿನೊಂದಿಗೆ. (ಈ ಹಾಡಿನಲ್ಲಿ ಕೆಲವರು, ತನ್ನ ಒಡತಿಯನ್ನು ಪ್ರೇಮಿಸಿ ಅದರ ನಿರರ್ಥಕತೆಯನ್ನು ಅರಿತ ವಿದೂಷಕನ ವಿಷಾದದ ನಿರೂಪಣೆ ಎಂದೂ ಭಾವಿಸುವುದುಂಟು.) ಒಟ್ಟಿನಲ್ಲಿ ಅವನ ಬಗೆಗೆ ನಮಗೆ ಮರುಕ. ಎಲ್ಲರೊಡನೆ ಅವನು ಹೊಂದಿಕೊಂಡರೂ ('I am for all waters') ಅವನಿಗೆ ಸಂಗಾತಿಗಳಿಲ್ಲ, ಆಪ್ತರಿಲ್ಲ ; ಒಂಟಿತನವೇ ಅವನ ಪಾಲಿಗೆ.

'ಅಥೆಲ್ಲೊ', 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ' ನಾಟಕಗಳ ವಿದೂಷಕರನ್ನು ಬಿಟ್ಟರೆ ಈ ಗುಂಪಿನ ಮುಖ್ಯವ್ಯಕ್ತಿ ಲಿಯರ್ ಅರಸನ ವಿದೂಷಕ. ಈ ವಿದೂಷಕನ ವಿಷಯದಲ್ಲಿ ಭಾವಾತಿರೇಕದಿಂದ ಬರೆದು ವಿಮರ್ಶಕರು ಇವನ 'ವಿದೂಷಕ'ತನವನ್ನೇ ಮರೆಸಿಬಿಟ್ಟಿದ್ದಾರೆ. ಅವನು ವಿದೂಷಕನೆ, ಎಲ್ಲ ವಿದೂಷಕರಂತೆ ಹಾಡುವ, ನೆಗೆಯುವ, ಲಾಗಹಾಕುವ ವಿದೂಷಕನೆ ಎನ್ನುವ ಎಚ್ಚರಿಕೆಯನ್ನು ಒಬ್ಬ ಸುಪ್ರಸಿದ್ಧ ವಿಮರ್ಶಕರು —ಎಚ್. ಗ್ರ್ಯಾನ್‌ವಿಲ್ ಬಾರ್ಕರ್—ಇತ್ತಿದ್ದಾರೆ. ಈ ಸಂಪ್ರದಾಯಕ್ಕನುಗುಣವಾದ



**'ಟ್ವೆಲ್ಫ್ತ್ ನೈಟ್' ನಲ್ಲಿ ಅಲಿವಿಯಾ ಮತ್ತು ಗಂಡುಡಿಗೆ ತೊಟ್ಟ ವಯೋಲ**

"ಬಯಸಿದ ಪ್ರೇಮ ಮಧುರ .... ಬಯಸದೆಯೆ ಕೊಟ್ಟದ್ದು ಅತಿ ಮಧುರ."—ಅಲಿವಿಯಾ.

ವಿದೂಷಕತನದೊಂದಿಗೆ ಷೇಕ್‌ಸ್ಪಿಯರ್ ಎಷ್ಟು ಅಂಶಗಳನ್ನು ಬೆರೆಸಿದ್ದಾನೆ ಎನ್ನುವುದನ್ನು ಗಮನಿಸಿದರೆ ಈ ಪಾತ್ರ ಸಾಂಪ್ರದಾಯಿಕ ವಿದೂಷಕತನದ ಮಾರ್ಪಾಡಿನ ಶಿಖರ ಎನ್ನಿಸುತ್ತದೆ. ಎಂಬತ್ತು ಶಿಶಿರಗಳನ್ನು ಕಂಡು ತನ್ನ ಜೀವನದ ಶಿಶಿರವನ್ನು ಮುಟ್ಟಿರುವ ಧರಣೀಪಾಲ ಲಿಯರ್, ಪರಿಪಕ್ವತೆಯ ಅಭಿವ್ಯಕ್ತಮೂರ್ತಿಯಾಗಿರಬೇಕಾದ ವೃದ್ಧ, ಹುಚ್ಚುಹುಚ್ಚಾಗಿ ನಡೆದುಕೊಂಡಿದ್ದಾನೆ; ಪೂರ್ವಾಪರ ವಿವೇಚನೆಯಿಲ್ಲದೆ ಸವಿಮಾತಿನ ಮೋಸಗಾರ್ತಿಯರಿಗೆ ರಾಜ್ಯವನ್ನು ಹಂಚಿ, ತನ್ನ ಪ್ರತಿಷ್ಠೆಯ ದೀಪಕ್ಕೆ ಎಣ್ಣೆ ಹಾಕಲೊಪ್ಪದ ಸತ್ಯವಂತೆ ಕಾರ್ಡೀಲಿಯಾಳನ್ನು ಭಿಕಾರಿಯನ್ನಾಗಿ ಮಾಡಿ ಅಟ್ಟಿದ್ದಾನೆ. ವಿದೂಷಕನನ್ನು ನಾವು ಕಾಣುವ ನಿಮಿಷದಿಂದ ಅವನು ಲಿಯರಿನ ಮೂರ್ಖತನವನ್ನು ಎತ್ತಿತೋರಿಸುವ ಸಾಧನವಾಗುತ್ತಾನೆ. ವೃದ್ಧರಾಜ ರಾಜ್ಯವನ್ನೆಲ್ಲ ಹಂಚಿ, ತಾನು

‘ರಾಜ’ನೆನ್ನುವ ಬಿರುದನ್ನು ಉಳಿಸಿಕೊಂಡಿದ್ದಾನೆ. ತನ್ನ ಈ ಟೊಳ್ಳು ಬಿರುದಿನಿಂದ ಯಾವ ಫಲವೂ ಇಲ್ಲ, ತನ್ನ ಆಜ್ಞೆಯನ್ನು ನಡೆಸುವ ಅಧಿಕಾರವಿಲ್ಲದವನ ಪದವಿ ಶೂನ್ಯ ಎಂಬುದನ್ನರಿಯ. ಇಷ್ಟು ವಯಸ್ಸಾದರೂ ತನ್ನ ಉದ್ರೇಕವನ್ನು, ರೋಷವನ್ನು ತಡೆಹಿಡಿಯುವ ಸಂಯಮವಿಲ್ಲ ಅವನಿಗೆ. ರಾಜನೆನ್ನಿಸಿಕೊಂಡವನು ಯಾವ ಗಾಂಭೀರ್ಯವನ್ನು ಮೆರೆಯಬೇಕೆನ್ನುವ ಅರಿವೂ ಇಲ್ಲ. ತನ್ನ ಮಗಳ ಸೇವಕ ಆಸ್ವಾಲ್ಡ್ ತನ್ನನ್ನು ಅವಮಾನಿಸಿದನೆಂದು ಅವನಿಗೆ ಹೊಡೆಯುತ್ತಾನೆ, ಆಸ್ವಾಲ್ಡನನ್ನು ಉರುಳಿಸಿದ ಕೆಂಟನನ್ನು ಪ್ರಶಂಸಿಸುತ್ತಾನೆ. ಆ ಗಳಿಗೆಗೆ ಅಲ್ಲಿಗೆ ಬರುವ ವಿದೂಷಕನ ನೋಟ ಅರಸ, ಕೆಂಟರ ನೋಟಕ್ಕಿಂತ ದೂರ ಹರಿಯುತ್ತದೆ, ಈ ಸಂಯಮರಹಿತ ವರ್ತನೆಯ ಪರಿಣಾಮ ಏನಾದೀತೆಂಬುದನ್ನು ಗುರುತಿಸುತ್ತದೆ. ಕಾಲಿಟ್ಟವನೇ “ಇವನ್ನ ನನ್ನ ಸೇವೆಗೂ ಇರಿಸಿಕೊಳ್ಳುತೇನೆ. ಕೋ, ನನ್ನ ಹುಚ್ಚನ ಕುಚ್ಚು[1]” ಎಂದು ತನ್ನ ಟೋಪಿಯನ್ನು ನೀಡುತ್ತಾನೆ. ಅರಸನನ್ನು ಕೇಳುತ್ತಾನೆ—“ಏನೂ ಇಲ್ಲದೆ ಏನೂ ಮಾಡಲಾರೆಯ ಕಕ್ಕ?[1]” ಅರಸ ಉತ್ತರಿಸುತ್ತಾನೆ—“ದಿಟ ಏನೂ ಮಾಡಲಾರೆ ಮಗೂ; ಏನೂ ಇಲ್ಲದಿದ್ದರೆ ಏನೂ ಮಾಡುವ ಹಾಗಿಲ್ಲ.” ಇಂತಹುದೇ ಮಾತುಗಳಲ್ಲಿ ಎಚ್ಚರಿಕೆ ಇತ್ತಿದ್ದ ಅರಸ ಕಾರ್ಡೀಲಿಯಾಳಿಗೆ. ಆದರೆ ಮಗಳಿಗೆ “ಏನೂ ಇಲ್ಲದಿದ್ದರೆ ಏನೂ ಬರುವುದೂ ಇಲ್ಲ” ಎಂದು ಉಪದೇಶಿಸಿದ್ದ ಅರಸನಿಗೆ ಇದು ಪದವಿ ಅಧಿಕಾರಗಳಿಗೂ ಅನ್ವಯಿಸುತ್ತದೆ, ಪದವಿ ಇಲ್ಲದವನಿಗೆ ಅಧಿಕಾರವೂ ಇಲ್ಲ ಎನ್ನುವುದು ಹೊಳೆದಿಲ್ಲ. ವಿದೂಷಕ ಕೆಂಟನ ಕಡೆ ತಿರುಗಿ ಹೇಳುತ್ತಾನೆ—“ನಿನ್ನ ಬೇಡಿಕೋತೇನೆ, ಇವನ ಭೂಮಿಯ ವರಮಾನ ಅಷ್ಟೆ ಅಂತ ಇವನಿಗೆ ತಿಳಿಸಿ ಹೇಳು; ಬೆಪ್ಪನ ಮಾತನ್ನ ಇವನು ನಂಬೋದಿಲ್ಲ.” “ಕಕ್ಕ ನನಗೊಂದು ಗುಡ್ಡು ಕೊಡು, ನಿನಗೆ ಎರಡು ಮುಕುಟ (ಮುಕುಟ: crown, ಮೊಟ್ಟೆಯ ಎರಡು ಅರ್ಧ ಚಿಪ್ಪುಗಳು) ಕೊಡುತ್ತೇನೆ[1]” ಎನ್ನುತ್ತಾನೆ. “ಮುಕುಟ ಏತರವೊ ಅವು ?” ಎಂದು ಅರಸ ಕೇಳಿದರೆ

> ಏತರವೇನು ? ಗುಡ್ಡನ್ನ ಮಧ್ಯಕ್ಕೆ ಒಡೆದು ತಿರುಳ ತಿಂದು ಮುಗಿಸಿದೆ ಎಂದರೆ ಗುಡ್ಡಿನದು ಎರಡು ಮುಕುಟ . . . ನಿನ್ನ ಚೆನ್ನಾದ ಮುಕುಟಾನ ಕೊಟ್ಟು ಮುಗಿಸಿದ ವೇಳೆ ನಿನ್ನ ಈ ಬೋಕ್ಕ ಮುಕುಟದಲ್ಲಿ ಬಹಳ ಬುದ್ಧಿ ಇರಲಿಲ್ಲ.[1]

ಎನ್ನುತ್ತಾನೆ. “ಎಚ್ಚರಿಕೆ, ಚಾಟಿಯನ್ನು ಮರೆಯಬೇಡ” ಎಂದು ರಾಜ ಗದರಿದರೆ

> ದಿಟ ಅನ್ನೋದು ಕುನ್ನಿ; ಅದರ ಆರೇಲಿ ಅದು ಅಡಗಿರಬೇಕು. ಸೊಣಗಪ್ಪ ಉರಿ ಕಾಯಿಸಿಕೋತಾ ಗಬ್ಬು ನಾರೋ ಹೊತ್ತಲ್ಲಿ ದಿಟ ಕುನ್ನೀನ ಹೊಡೆದಟ್ಟಬೇಕು.[1]

ಎನ್ನುತ್ತಾನೆ. ರಾಜ ಮಗಳಿಗೆ “ಇದೇನು, ಹೀಗೆ ಸಿಡುಕುತ್ತಿ ?” ಎಂದು ಪ್ರಶ್ನಿಸಿದರೆ,

> ಆಕೆಯ ಸಿಡಿಕನ್ನ ಲಕ್ಷಮಾಡಬೇಕು ಅನ್ನೋದು ಇಲ್ಲವಾಗ ನೀನು ಒಬ್ಬ ಸಿರಿವಂತ ಆಗಿದ್ದಿ ; ನೀ ಈಗ ಜೊತೆಗೆ ಅಂಕಿ ಇಲ್ಲದ ಪೂಜ್ಯ; ನೀ ಈಗಿರೋದಕ್ಕಿಂತ ನಾ ಮೇಲು. ನಾ ಪೆದ್ದ, ನೀನು ಏನೂ ಅಲ್ಲ.[1]

ಎಂದು ಅವನ ಮೂರ್ಖತನದ ನೆನಪನ್ನು ಕೊಡುತ್ತಾನೆ. ಅವನ ವಾಗ್ಬಾಣಗಳಿಗೆ ಬಿಡುವೇ ಇಲ್ಲ; ಮತ್ತೆ ಮತ್ತೆ ಲಿಯರನನ್ನು ಚುಚ್ಚುತ್ತವೆ ಅವು. ಗಾನೆರಿಲಳ ನಿಷ್ಠುರದ

---

[1] ಶ್ರೀ ಶ್ರೀನಿವಾಸರ ಭಾಷಾಂತರ: ‘ಲಿಯರ್ ಮಹಾರಾಜ’.

ನುಡಿಯನ್ನು ಕೇಳಿ ನಖಶಿಖಾಂತ ಉರಿಯುವ ರಾಜ, "ಇದೇನು ನಾನು ಎಚ್ಚರುವೆನೆ? ನನಗೇನು ಕನಸೆ? ನಾನು ಯಾರು?" ಎಂದು ಉದ್ಗಾರ ತೆಗೆದರೆ, ಸಿದ್ಧವಾಗಿದೆ ವಿದೂಷಕನ ಉತ್ತರ—"ಲಿಯರನ ನೆರಳು". ಸಂಯಮವೂ ಇಲ್ಲದ, ವಿವೇಕವೂ ಇಲ್ಲದ ಈ ವೃದ್ಧನ 'ವಿದ್ಯಾಭ್ಯಾಸ'ದಲ್ಲಿ ವಿದೂಷಕನದೂ ಒಂದು ಮುಖ್ಯ ಪಾತ್ರ. ಅವನ ಒಂದೊಂದು ಮಾತೂ ಲಿಯರನ ಕುರುಡು ಬುದ್ಧಿಯನ್ನು ಎತ್ತಿತೋರಿಸುತ್ತದೆ. ಮನುಷ್ಯನಿಗೆ ಮುಖದ ಮಧ್ಯೆ ಒಂದು ಮೂಗು, ಅದರ ಅತ್ತ ಇತ್ತ ಎರಡು ಕಣ್ಣುಗಳು ಇರುವುದಕ್ಕೆ ಕಾರಣ ಮನುಷ್ಯನ ಮೂಗು ಗುರುತಿಸದಿದ್ದುದನ್ನು ಕಣ್ಣುಗಳು ಗುರುತಿಸಲಿ ಎಂದಂತೆ. ಬಸವನಹುಳುವಿನ ಬೆನ್ನ ಮೇಲೆ ಮನೆಯಿರುವುದು ಅದರ ತಲೆಯಿಟ್ಟುಕೊಳ್ಳುವುದಕ್ಕಂತೆ, ತನ್ನ ಹೆಣ್ಣುಮಕ್ಕಳಿಗೆ ಅವನ್ನು ಕೊಟ್ಟುಬಿಟ್ಟು ಕೊಂಬನ್ನಿಡಲು ಸ್ಥಳವಿಲ್ಲವೆನ್ನುವಂತೆ ಮಾಡಿಕೊಳ್ಳುವುದಕ್ಕೆ ಅಲ್ಲವಂತೆ. "ನೀನು ನನ್ನ ವಿದೂಷಕನಾಗಿದ್ದರೆ, ಕಾಲಕ್ಕೆ ಮೊದಲೇ ವೃದ್ಧನಾದುದಕ್ಕೆ ನಿನ್ನನ್ನು ಹೊಡೆಸುತ್ತಿದ್ದೆ" ಎನ್ನುತ್ತಾನೆ ವಿದೂಷಕ. ಅದೇಕೆ ಎಂದರೆ, ಉತ್ತರ—"ವಿವೇಕ ಬರುವ ಮುನ್ನವೇ ನೀನು ಮುದುಕನಾಗಬಾರದಾಗಿತ್ತು!"

ಈ ಮೊನಚಾದ ವಾಗ್ಬಾಣಗಳನ್ನೆಸೆಯುವ ನಾಲಿಗೆಯನ್ನಾಡಿಸುವುದು ಮಮತೆ ತುಂಬಿದ ಹೃದಯ. ವಿದೂಷಕನಲ್ಲಿ ನಾವು ಕಾಣುವುದು ಲೋಕವ್ಯವಹಾರದ ಜಾಣ್ಮೆಯೊಡನೆ ತನ್ನ ಅಭಿವೃದ್ಧಿಯನ್ನು ಲೆಕ್ಕಿಸದ ನಿಷ್ಠೆ. ಕೈ ಸೋಲುತ್ತಿರುವವನಿಗೆ ಬೆನ್ನು ತಿರುಗಿಸುವುದು ಲೋಕದ ರೀತಿ ಎಂದು ಅವನು ಬಲ್ಲ. ರಾಜ್ಯವನ್ನು ಕಳೆದುಕೊಂಡ ರಾಜನ ಪಕ್ಷ ವಹಿಸುವುದು ಕಷ್ಟಕ್ಕೆ ಆಹ್ವಾನವಿತ್ತಂತೆ ಎಂದೂ ಬಲ್ಲನು. ರಾಜನ ಸೇವಕನಾಗಬಯಸುವ ಕೆಂಟನಿಗೆ ಇದೇ ಎಚ್ಚರಿಕೆಯನ್ನು ಹೇಳುತ್ತಾನೆ, ಕೆಂಟನೊಡನೆ ಅನಂತರದ ಸಂಭಾಷಣೆಯಲ್ಲಿ ರಾಜನ ಪರಿವಾರ ಸಣ್ಣಗಾದುದಕ್ಕೆ ಇದೇ ಕಾರಣವನ್ನು ಕೊಡುತ್ತಾನೆ. ತಾವು ಬದುಕುವ ಮಾರ್ಗವನ್ನರಸುವವರು ಆಗಲೇ ರಾಜನನ್ನು ತ್ಯಜಿಸಿ ಹೋದುದನ್ನು ಕಂಡಿದ್ದಾನೆ. ಆದರೆ ತಾನು ಕಷ್ಟದಲ್ಲಿ, ಸುಖದಲ್ಲಿ, ಅಕ್ಷರಶಃ ಮಳೆಯಲ್ಲಿ, ಬಿಸಿಲಿನಲ್ಲಿ ರಾಜನೊಡನೆ ಅಲೆಯುತ್ತಾನೆ. ರಾಜಪದವಿಯ ಸಂಕೇತಗಳಲ್ಲಿ ರಾಜನಿಗೆ ಉಳಿಯುವುದು ವಿದೂಷಕನ ಸಹವಾಸವೊಂದೆ! ವಿದೂಷಕನಿಗೆ ಕಾರ್ಡೀಲಿಯಾಳೆಂದರೆ ಪ್ರಾಣ. ಅವಳು ಫ್ರಾನ್ಸಿಗೆ ಹೋದ ನಂತರ ಅವನು ತನ್ನಲ್ಲಿಯೇ ಕೊರಗುತ್ತಿದ್ದಾನೆ. ಇದಾದ ಮೇಲೆ ಅವನು ಹಾಡುವುದು ಹೆಚ್ಚಾಗಿದೆ, ಹೃದಯದ ನೋವನ್ನು ಮರೆಮಾಚಲೆಂದೇನೊ! ಹುಚ್ಚು ಹಿಡಿದ ರಾಜನ ಅಲೆತದಲ್ಲಿ ಅವನ ಸಹಚರ ಈ ವಿದೂಷಕ. ಈ ಎಲ್ಲ ಗೊಂದಲ, ನೋವುಗಳ ಮಧ್ಯೆ "ಹಾಗೇ ನಾನು ಮಧ್ಯಾಹ್ನ ಹಾಸಿಗೆ ಸೇರ್ತೇನೆ" ಎನ್ನುವುದೇ ಅವನ ಕೊನೆಯ ಮಾತುಗಳು. ಅವನ ಗತಿ ಕೊನೆಗೆ ಏನಾಯಿತೆನ್ನುವುದು ನಾಟಕದಲ್ಲಿ ನಮಗೆ ತಿಳಿಯುವುದಿಲ್ಲ. ದುರಂತದ ಸುಳಿಯಲ್ಲಿ ಲಿಯರ್ ಕಾರ್ಡೀಲಿಯಾ ಮರೆಯಾಗುವ ಗಭೀರದೃಶ್ಯದಲ್ಲಿ ಬಡ ವಿದೂಷಕನಿಗೆ ಸ್ಥಾನವಿಲ್ಲ. ಸಾವಿನ ಮಬ್ಬಿನಲ್ಲಿ ಲಿಯರ್ "...and my poor fool is hang'd" ಎನ್ನುತ್ತಾನೆ. ಆದರೆ ಈ 'ಫೂಲ್' ಕಾರ್ಡೀಲಿಯಾಳೇ ಇರಬೇಕು. ಕೊನೆಯ ಗಳಿಗೆಯಲ್ಲಿ ಸಾವಿನ ಲೋಕದ ಗಡಿಯ ಮೇಲೆ ಒಂದು ಪಾದವಿಟ್ಟ ಲಿಯರನ ಮನಸ್ಸು ಗೊಂದಲಕ್ಕೆ ಸಿಕ್ಕಿ ತನ್ನ ನಿಷ್ಠೆಯ ಭಂಟನನ್ನೂ

ನೆನೆದುಕೊಂಡಿರಬಹುದು, ಕಾರ್ಡೀಲಿಯಾಳನ್ನು ಕುರಿತೂ ಯೋಚಿಸುತ್ತಿರಬಹುದು.

ಲಿಯರನ ವಿದೂಷಕ ಮಮತೆ, ನಿಷ್ಠೆಗಳು ಬೆರೆತ ಸೇವಕ ಮಾತ್ರವಲ್ಲ, ಲಿಯರನ ಮೂರ್ಖತನಕ್ಕೆ ನುಡಿಗನ್ನಡಿಯನ್ನು ಹಿಡಿಯುವ ವಿವೇಕಿ ಮಾತ್ರವಲ್ಲ, ಒಂದು ರೀತಿಯಲ್ಲಿ ಅವನೊಂದು ಪ್ರತೀಕವೂ ಹೌದು. ಅವನು ವಾಸ್ತವಿಕತೆಯ ಪ್ರತೀಕ. ಅರಸನಾಗಲಿ ಆಳಾಗಲಿ ವಾಸ್ತವಿಕತೆಯನ್ನು ಮರೆತನೆಂದರೆ, ಭ್ರಾಂತಿಗಳಿಗೆ ವಶನಾದನೆಂದರೆ, ನೋವು ಕಟ್ಟಿಟ್ಟ ಫಲ. "ಏನೂ ಇಲ್ಲದಿದ್ದರೆ ಏನೂ ಬರುವುದೂ ಇಲ್ಲ" ಎನ್ನುವುದೊಂದು ಕಠೋರ ಸತ್ಯ; "ಅಂತೆ ಬರಿ ಬುರುಡೆಯನು ಮೊಳಗಿಸದ ಮೆಲ್ದನಿಯ ಜನ ಬರಿಯೆದೆಗ-ರಲ್ಲ[1]" ಎನ್ನುವುದು ಮತ್ತೊಂದು ಸತ್ಯ. ಇವುಗಳನ್ನು ಕಡೆಗಾಣಿಸಿದ ಲಿಯರನ ಭ್ರಮೆಯ ಕಪ್ಪು ಛಾಯೆ ಸದಾ ಕಾಣುವಂತೆ ಅವನ ಪಕ್ಕದಲ್ಲಿ ನಡೆಯುತ್ತದೆ ವಿದೂಷಕನ ಸತ್ಯದ ಬೆಳಕು. ತನ್ನ ತೀರ್ಮಾನವೇ ವಿವೇಕಯುತವಾದದು, ಎಲ್ಲರ ಹೃದಯವನ್ನು ಅರಿತವನು ತಾನು, ಅಧಿಕಾರವಿಲ್ಲದ ಪದವಿಯೂ ಮನ್ನಣೆ ಪಡೆಯುತ್ತದೆ ಮುಂತಾದ ಭ್ರಾಂತಿಗಳೆಲ್ಲ ಲಿಯರನಿಂದ ಕಳಚಿ ಬೀಳುವವರೆಗೆ, ಲಿಯರ್ ತನ್ನ ಸಂಕಟವನ್ನು ಮರೆತು ಇತರರ ನೋವನ್ನು ಕುರಿತು ಯೋಚನೆ ಮಾಡುವ ಸ್ಥಿತಿಯನ್ನು ತಲಪುವವರೆಗೆ, ವಸ್ತು-ಸ್ಥಿತಿಯ ಮೂರ್ತಿಯಂತೆ ಅವನನ್ನು ಅನುಸರಿಸುತ್ತಾನೆ ವಿದೂಷಕ. ಅವನಿಗೆ ಸುತ್ತಲಿನ ಜಗತ್ತಿನ ನಿಜಸ್ಥಿತಿಯ ಅರಿವಾಗುತ್ತಲೇ ವಿದೂಷಕ ಮರೆಯಾಗುತ್ತಾನೆ—"I 'll go to bed at noon" (ಮಧ್ಯಾಹ್ನ ಹಾಸಿಗೆ ಸೇರ್ತೀನೆ).

ಲಿಯರನ ವಿದೂಷಕ, ಲಿಯರ್ ಇಬ್ಬರನ್ನೂ ಕುರಿತು ಯೋಚನೆ ಮಾಡಿದಾಗ, ನಾಟಕದ ಮೊದಲರ್ಧದಲ್ಲಿಯಾದರೂ ಅವರಿಬ್ಬರೂ ಉಡುಪನ್ನು ಬದಲಾಯಿಸಿಕೊಳ್ಳ ಬೇಕು, ನಿಜವಾದ ಪೆದ್ದ ರಾಜನೆ ಎಂದು ತೋರುತ್ತದೆ. ಆದರೆ ಒಟ್ಟು ನಾಟಕವನ್ನು ನೆನೆದಾಗ ಲಿಯರನನ್ನು ಪೆದ್ದ ಎಂದು ಕರೆಯಲು ಮನಸ್ಸು ಒಪ್ಪದು. ಹಾಗೆಯೇ ಅಥೆಲ್ಲೊ ತನ್ನನ್ನೇ ಮೂರ್ಖನೆಂದು ಕರೆದುಕೊಳ್ಳುತ್ತಾನೆ; ತನ್ನನ್ನು ಅವನು ವರ್ಣಿಸು ವುದು ಹೀಗೆ:

ತನ್ನ ಕುಲವೆಲ್ಲಕೂ ಮಿಗಿಲೆನಿಪ ಸಿರಿಮಣಿಯ
ಬಿಸುಟ ಮೂರ್ಖ ಇಂಡಿಯನನ ತೆರದ ಕೈಯವನು.

ಅವನ ಈ ಮಾತುಗಳನ್ನು ಕೇಳುವಾಗ "ಹೌದು, ನಿಜ" ಎನ್ನಿಸುತ್ತದೆ. ಆದರೆ ಅವನನ್ನು ಪೆದ್ದ ಎಂದು ಕರೆಯಲು ಮನಸ್ಸು ಒಪ್ಪದು. ಎರಡನೆ ರಿಚರ್ಡನನ್ನು ಎಷ್ಟು ಬಾರಿ 'ಮೂರ್ಖ' ಎಂದುಕೊಂಡರೂ ಒಟ್ಟಿನಲ್ಲಿ ಅವನಿಗೆ ಪೆದ್ದನ ಪಟ್ಟ ಕಟ್ಟಲು ಮನಸ್ಸು ಹಿಂದೆಗೆಯುತ್ತದೆ. ಪೆದ್ದುತನ ಬಾಟಮ್, ಆ್ಯಂಡ್ರೂ ಮುಂತಾದವರಲ್ಲಿ ನೆಲೆ ಮಾಡಿರುವಾಗ ತೋರುವಂತೆ ನಗುವಿನಲ್ಲೆ ಯಾವಾಗಲೂ ಪರಿಣಾಮವಾಗುವುದೂ ಇಲ್ಲ. ಟಚ್‌ಸ್ಟನ್, ಫೆಸ್ಟ್ ಮೊದಲಾದವರಲ್ಲಿ ಕಾಣುವಂತೆ ವಿವೇಕ ಧರಿಸಿದ ಮುಖವಾಡ ಮಾತ್ರವೂ ಅಲ್ಲ, ಗಂಭೀರ ಪರಿಣಾಮಗಳನ್ನುಂಟುಮಾಡಬಹುದಾದಂತಹ ಶಕ್ತಿ ದುರಂತದ ದಾರಿಯೂ ಆಗಬಹುದು ಎನ್ನುವುದು ಈ ನಿದರ್ಶನಗಳಿಂದ ಸ್ಪಷ್ಟವಾಗುತ್ತದೆ.

[1] ಶ್ರೀ ಶ್ರೀನಿವಾಸರ ಭಾಷಾಂತರ: 'ಲಿಯರ್ ಮಹಾರಾಜ'.

ಹಾಗಾದರೆ ಜೀವನದಲ್ಲಿ ಪೆಪ್ಪುತನ ಯಾವುದು, ವಿವೇಕ ಯಾವುದು ? ಲಿಯರ್, ರಿಚರ್ಡ್ ಮೊದಲಾದವರಲ್ಲಿ ಪೆಪ್ಪುತನ ಒಂದು ಭಾಗ ಮಾತ್ರವಾಗಿದ್ದರೆ, ಅವರಲ್ಲಿ ನಮಗೆ ಸಹಾನುಭೂತಿಯನ್ನು, ಒಂದು ಬಗೆಯ ಆತ್ಮೀಯತೆಯನ್ನು ಉಂಟುಮಾಡುವ ಭಾಗ ಯಾವುದು ? ಲಿಯರನ ಪೆಪ್ಪುತನದ ಮೂಲವನ್ನು ಆಗಲೇ ಕಂಡಿದ್ದೇವೆ. ಇದು ಸತ್ಯವನ್ನು ನಿರ್ಲಕ್ಷಿಸುವುದು, ಭ್ರಾಂತಿಯನ್ನಪ್ಪುವುದು. ನಿರ್ಲಕ್ಷಿಸಿದ ಮಾತ್ರಕ್ಕೆ ಶಕ್ತಿಗುಂದದು ವಾಸ್ತವಿಕತೆ, ಅದು ತನ್ನ ಮುಯ್ಯಿಯನ್ನು ತೀರಿಸಿಯೇ ತೀರಿಸುತ್ತದೆ. ಅದರ ಮುಯ್ಯಿಯ ಪ್ರವಾಹದಲ್ಲಿ ಅದನ್ನು ನಿರ್ಲಕ್ಷಿಸಿದವನು, ಅವನ ಸುತ್ತಮುತ್ತಲಿನವರು ಎಲ್ಲ ಕೊಚ್ಚಿ ಹೋಗಬಹುದು. ವಾಸ್ತವಿಕತೆಯ ಅರಿವು ವಿವೇಕದ ಒಂದು ಮುಖ, ಅದರ ಅಜ್ಞಾನ ಪೆಪ್ಪುತನದ ಒಂದು ಮುಖ. ಎರಡನೆ ರಿಚರ್ಡ್ ವಸ್ತುಸ್ಥಿತಿಯನ್ನು ಉದ್ದಕ್ಕೂ ನಿರ್ಲಕ್ಷಿಸುತ್ತ ಬಂದಿದ್ದಾನೆ; ಅಪಾಯದ ಅಂಚಿನಲ್ಲಿ ಕುಳಿತು, ದೈವ ತನ್ನ ಸಹಾಯಕ್ಕೆ ದೇವತೆಗಳ ಸೈನ್ಯವನ್ನು ಕಳುಹಿಸುವುದೆಂದು ನಂಬಿದ್ದಾನೆ. ರೋಮಿನ ಜನರಿಗೆ ಬೇಕಾದುದು ಪ್ರಜಾಪ್ರಭುತ್ವವಲ್ಲ, ಸರ್ವಾಧಿಕಾರ; ಸೀಸರನನ್ನು ಕೊಂದರೆ ಅವನ ಪ್ರಭಾವವನ್ನು ಕೊಂದಂತಲ್ಲ ಎನ್ನುವುದನ್ನು ಬ್ರೂಟಸ್ ಮರೆಯುತ್ತಾನೆ. ರಾಜಕೀಯದ, ಲೌಕಿಕ ವ್ಯವಹಾರದ ಸ್ವರೂಪ, ಬೇಡಿಕೆಗಳನ್ನು ಮರೆಯುತ್ತಾನೆ. ಈ ಎಲ್ಲರೂ—ಅಲ್ಲದೆ ಷೇಕ್ಸ್ಪಿಯರನ ಜಗತ್ತಿನಲ್ಲಿ ಇಂತಹವರು ಎಷ್ಟೋ ಮಂದಿ—ತಮ್ಮ ಈ 'ಪೆಪ್ಪುತನ'ಕ್ಕೆ ಶಿಕ್ಷೆಯನ್ನನುಭವಿಸುತ್ತಾರೆ. ಅವನ ಜಾಣ ವಿದೂಷಕರು ವಸ್ತುಸ್ಥಿತಿಯನ್ನು ಎಂದೂ ಮರೆಯಲಾರರು. ಲೆ ಬೊ ಎನ್ನುವವನು ಉತ್ಸಾಹದಿಂದ ರೊಸಲಿಂಡ್, ಸೀಲಿಯಾರಿಗೆ ಆಗ ತಾನೆ ನಡೆದ ಕಠೋರ ಕುಸ್ತಿ ಪಂದ್ಯಗಳನ್ನು ವರ್ಣಿಸಿ, ಅವರು ಅಲ್ಲಿಯೇ ಇದ್ದರೆ ಅಂತಹುದೇ ಸೊಗಸಾದ ಆಟವನ್ನು ನೋಡಬಹುದೆಂದರೆ, ಟಚ್‌ಸ್ಟನ್ ಎನ್ನುತ್ತಾನೆ:

> ಮನುಷ್ಯ ಹೀಗೇ ದಿನೇ ದಿನೇ ವಿವೇಕಶಾಲಿಯಾಗಬಹುದು: ಎಲುಬನ್ನು ಮುರಿಯುವುದು ಸ್ತ್ರೀಯರಿಗೆ ಆಟವೆಂಬುದನ್ನು ಇದೇ ಮೊದಲಬಾರಿ ನಾನು ಕೇಳಿದುದು.

ಷೇಕ್ಸ್ಪಿಯರನ ಆದರ್ಶ ಮನುಷ್ಯನನ್ನು ಹ್ಯಾಮ್ಲೆಟ್ ಚಿತ್ರಿಸಿದ್ದಾನೆ ಎನ್ನಬಹುದು:

> ಏತಕೆನೆ ನೀನು, ಎಲ್ಲಾ ಕಷ್ಟಗಳ ಪಡುತ
> ಒಂದನೂ ಪಡದವನ ರೀತಿ, ನಿನ್ನ ಅದೃಷ್ಟ
> ಕೊಡುವ ಪೆಟ್ಟುಗಳು ಮೆಚ್ಚಿಕೆಗಳನು ಒಂದೆ ಸಮ
> ಉಪಕಾರವೆಂದೆಣಿಸಿ ಗ್ರಹಿಸಿರುವೆ. ಈ ರೀತಿ,
> ಯಾರ ಶಕ್ತಿ ವಿವೇಕಗಳು, ಅದೃಷ್ಟದ ಬೆರಲು
> ತನ್ನ ಇಷ್ಟಕೆ ಬಂದ ಸ್ವರವ ನುಡಿಸಲು ಬರುವ
> ಕೊಳಲಾಗದೊಂದಂದ ಸಮರಸಕೆ ಬೆರೆತಿಹವು,
> ಅವರು ಧನ್ಯರು. [1]

ಇಲ್ಲಿ ಷೇಕ್ಸ್ಪಿಯರ್ ವರ್ಣಿಸುತ್ತಿರುವುದು ನಿಚ್ಚಳ ದೃಷ್ಟಿ, ಮಾನವ ಹೃದಯ ಎರಡೂ ಬೆರೆತ ಸಂಯಮಶಾಲಿಯನ್ನು. ಲಿಯರ್, ಅಥೆಲ್ಲೊ, ರಿಚರ್ಡ್, ಬ್ರೂಟಸ್ ಮತ್ತಿತರ ಹಲವಾರು ಪಾತ್ರಗಳಿಗೆ ಈ ಸಮತೂಕದ ದೃಷ್ಟಿ ಇಲ್ಲ. ಇದರಿಂದಲೇ ಅವರು ಭ್ರಾಂತಿಗಳಿ

[1] ಶ್ರೀ ಶ್ರೀನಿವಾಸರ ಭಾಷಾಂತರ: 'ಹ್ಯಾಮ್ಲೆಟ್'.

ಗೊಳಗಾಗಿ ತನಗೂ, ಇತರರಿಗೂ ದುರಂತವನ್ನು ತರುವುದು. ಆದರೆ ಅವರಲ್ಲಿ ಮಾನವ ಹೃದಯವಿದೆ. ಇತರರನ್ನು ಕಂಡು ಮರುಗುವ, ಪ್ರೇಮ, ಸ್ನೇಹ, ನಿಷ್ಠೆಗಳನ್ನು ಗುರುತಿಸಿ ಮೆಚ್ಚುವ ಹೃದಯವಿದೆ. ಇದು ಸ್ವಲ್ಪ ಕಾಲ ಮಾಸಬಹುದು, ಆದರೆ ಅದರ ಇರವಿನ ಬಗೆಗೆ ಅನುಮಾನವೇ ಇಲ್ಲ. ಆದುದರಿಂದಲೇ ಅವರ ಬುದ್ಧಿ ಕುರುಡಾದರೂ, ಅವರು ವಾಸ್ತವಿಕತೆಯನ್ನು ಮರೆತರೂ, ನಮಗೆ ಅವರಲ್ಲಿ ಅನುಕಂಪ. ಅವರ ಪೆದ್ದುತನ ಕೊನೆಗಾದರೂ ಅಳಿಯುತ್ತದೆ. ಆದರೆ ಎಂದೂ ಅಳಿಯದ ಪೆದ್ದುತನವನ್ನೂ ಷೇಕ್-ಸ್ಪಿಯರ್ ಚಿತ್ರಿಸುತ್ತಾನೆ, ಬಾಟಮ್, ಡಾಗ್‌ಬೆರಿಯರ ಪೆದ್ದುತನದಂತದಲ್ಲದೆ ಇದು ತನ್ನನ್ನೂ ಸುತ್ತಲಿನ ಜಗತ್ತನ್ನೂ ಮುಳುಗಿಸುವ ವಿನಾಶದ ಪ್ರವಾಹವನ್ನೇ ಸೃಷ್ಟಿಸುತ್ತದೆ. ಇದು ತನಗಿಂತ ಹಿರಿಯ ಶಕ್ತಿಯೊಂದುಂಟು ಎಂಬುದನ್ನು ಮರೆತು, ತಾನೇ ಪರಮ ದೈವ, ಎಲ್ಲರ ಭಾಗ್ಯವನ್ನು ತಿದ್ದುವ ಶಕ್ತಿ, ತನ್ನ ಸಂತೋಷವೇ ಜಗತ್ತಿನ ಜೀವನದ ಪರಮ ಗುರಿ ಎಂದು ನಂಬುವ ಕುರುಡು ಹೃದಯದ ಪೆದ್ದುತನ. ಆತ್ಮಪ್ರತಿಷ್ಠೆಯಲ್ಲಿ ಬೀಗುವ ಈ ಕುರುಡು ಚೇತನ ಜೀವನದ ಸೌಂದರ್ಯವನ್ನು ಗುರುತಿಸಲರಿಯದು; ಸ್ನೇಹ, ಪ್ರೇಮ, ನಿಷ್ಠೆ, ತ್ಯಾಗಗಳನ್ನು ಅರಿಯದು; ತನ್ನ ಅಂಧತನದಿಂದ ಇತರರಿಗೂ ಕೇಡನ್ನುಂಟುಮಾಡಿ ತಾನೂ ಕೇಡನ್ನು ತಂದುಕೊಳ್ಳುತ್ತದೆ ಇದು. ಈ ಪೆದ್ದುತನ ಭಯಂಕರವಾದುದು, ಯಾವ ಅನುಕಂಪವನ್ನೂ ಆಕರ್ಷಿಸಲಾರದು. ಮೂರನೆ ರಿಚರ್ಡ್, ಎಡ್ಮಂಡ್, ಇಯಾಗೋ ಇವರೆಲ್ಲ ಈ ರೀತಿಯ ಪೆದ್ದರು. ಅಥೆಲ್ಲೊ ಬಳಸಿದ ಉಪಮಾನ—ತನ್ನ ಕುಲವೆಲ್ಲಕ್ಕಿಂತ ಬೆಲೆಬಾಳುವ ಅನರ್ಘ್ಯ ರತ್ನವನ್ನು ಎಸೆದ ಅನಾಗರಿಕನ ಉಪಮಾನ—ಇವರಿಗೆ ಒಪ್ಪುತ್ತದೆ. ಜೀವನದ ಸೊಗಸು, ಭವ್ಯತೆಗಳನ್ನರಿಯದ, ಮಾನವ ಹೃದಯದ ಶ್ರೀಮಂತಿಕೆಯನ್ನು ತಿಳಿಯದ ಮಹಾಪೆದ್ದರು ಇವರು. ಇವರದು ಬದುಕಿನಲ್ಲಿ ಉತ್ಸಾಹವಲ್ಲ (ಅದೊಂದು ಇದ್ದರೆ, ಬಾಟಮನಿಗೆ ಇದ್ದಂತೆ, ಷೇಕ್ಸ್ಪಿಯರ್ ಎಲ್ಲವನ್ನೂ ಕ್ಷಮಿಸಿಯಾನು) ; ಸಾವಿನಲ್ಲಿ, ಕತ್ತಲೆಯನ್ನು ಹಬ್ಬಿಸುವುದರಲ್ಲಿ, ತಮ್ಮ ಕ್ರೂರ ಪ್ರಭುತ್ವವನ್ನು ಸ್ಥಾಪಿಸುವುದರಲ್ಲಿ ಇವರ ಉತ್ಸಾಹ. ಬಾಳಿನ ಗೌರೀ-ಶಂಕರದ ಎತ್ತರವನ್ನು ತಮ್ಮ ಕೈಯ ಗೇಣಿನಿಂದ ಅಳೆದಿದ್ದೇವೆಂದು ಸಂಭ್ರಮ ಪಡುವವರು ಇವರು. ('ಆ್ಯಸ್ ಯು ಲೈಕ್ ಇಟ್' ನಾಟಕದಲ್ಲಿನ ಜೇಕ್ವಿಸ್, ಮನುಷ್ಯನ ಬಾಳಿನಲ್ಲಿ ಬಾಲ್ಯದಿಂದ ಸಾವಿನವರೆಗೆ ಮೆಚ್ಚಲು ಏನನ್ನೂ ಕಾಣದ ಸಿನಿಕ್, ಈ ಹಾದಿ ಹಿಡಿದಿರುವವನೇ. ಆದುದರಿಂದಲೇ ಸಾಮಾನ್ಯವಾಗಿ ತಾಳ್ಮೆಯಿಂದ ಮಾತನಾಡುವ ಹಿರಿಯ ಡ್ಯೂಕ್ ಸಹ ಇವನಿಗೆ ಸ್ವಾತಂತ್ರ್ಯ ಕೊಟ್ಟರೆ ಏನಾಗುವುದೆಂಬುದನ್ನು ವಿವರಿಸುವಾಗ ಕಟಿಯಾಗುವುದು. ಆದರೆ ಅವನ ಪ್ರಭಾವ ಜೇಕ್ವಿಸನನ್ನು ತಡೆದಿದೆ.) ಷೇಕ್ಸ್ಪಿಯರನ ಜಗತ್ತಿನ ಮಹಾಪೆದ್ದರು ಡಾಗ್‌ಬೆರಿ, ಆ್ಯಂಡ್ರೂ, ಬಾಟಮ್ ಮೊದಲಾದವರೂ ಅಲ್ಲ. ಫೆಸ್ಟ್, ಲಿಯರನ ವಿದೂಷಕ, ಟಚ್‌ಸ್ಟನ್ ಮೊದಲಾದವರೂ ಅಲ್ಲ. ಸೋಲನ್ನಪ್ಪಿದ ಬ್ರೂಟಸ್, ರಿಚರ್ಡ್, ಲಿಯರ್ ಮೊದಲಾದವರೂ ಅಲ್ಲ. ಆದರೆ ತಮ್ಮ ಮಿತಿಯನ್ನರಿಯದ, ತಮಗಿಂತ ಹಿರಿಯ ಶಕ್ತಿಯನ್ನು ಗುರುತಿಸದ, ಬರಡು ಹೃದಯದ—ಷೇಕ್ಸ್ಪಿಯರ್ ತನ್ನ ವಿದೂಷಕರಿಗೆ ಅಂತಃಕರಣದ ವರವನ್ನು ಇತ್ತನೆಂಬುದನ್ನು ಮತ್ತೆ ಸ್ಮರಿಸಿಕೊಳ್ಳಬಹುದು—ಇಯಾಗೋ, ಎಡ್ಮಂಡ್, ನಾರ್ತಂಬರ್ಲೆಂಡ್,

'ಅನವಶ್ಯಕವಾದ ಗೊಂದಲ'ದ ಡಾನ್ ಜಾನ್ ಇಂತಹವರು. ಸಮಗ್ರ ವಿಶ್ವದಲ್ಲಿ ಇವರ ಬೆಪ್ಪುತನದ ನೃತ್ಯ ಹೇಗೆ ಕಾಣುತ್ತದೆ ಎನ್ನುವುದನ್ನು ಷೇಕ್‌ಸ್ಪಿಯರ್ ಒಂದು ಭವ್ಯವಾದ ಚಿತ್ರದಲ್ಲಿ ಎಂದೆಂದಿಗೂ ಮರೆಯಲು ಸಾಧ್ಯವಾಗದಂತೆ ಚಿತ್ರಿಸಿದ್ದಾನೆ :

ಮಾನವನು, ಮದದ ಮಾನವನು,
ಚಣಕಾಲದಲ್ಪ ಅಧಿಕಾರವನು ಹೊದ್ದರೇ,
ಶಂಕೆಯಿನಿತಿರದ ತನ್ನ ಮುಕುರದಾ ಸತ್ವವನೆ
ಅರಿಯದೆಯೆ ಸಿಟ್ಟೆದ್ದ ಮರ್ಕಟದೊಲಾಡುವನು,
ಮೇಲಿರುವ ನಾಕದಿದಿರಿನಲಿ, ಸುರರು ಕಣ್ಣಲಿ
ಹನಿಯ ಕೂಡಿಸುವಂತ ಹುಚ್ಚು ಆಟಗಳನು.





# ಷೇಕ್‌ಸ್ಪಿಯರ್ ಕಾಲದ ರಂಗಭೂಮಿ


## ಗಿರಡ್ಡಿ ಗೋವಿಂದರಾಜ


ಕಲೆಯ ವಿವಿಧ ರೂಪಗಳಲ್ಲೆಲ್ಲ ನಾಟಕವೇ ಭೌತಿಕ ಸಂಗತಿಗಳಿಂದ ಹೆಚ್ಚಾಗಿ ಪ್ರಭಾವಿತವಾದುದೆಂಬ ಮಾತು ಸತ್ಯ. ಕವಿಯಾಗಲಿ, ಕಥೆಗಾರನಾಗಲಿ ತನಗೆ ಸರಿ ಕಂಡಂತೆ ಬರೆದು ಯಾರಾದರೂ ತನ್ನ ಸ್ವಂತಿಕೆಯನ್ನು ಗುರುತಿಸಿಯಾರೇ ಎಂದು ದಶಕಗಟ್ಟಲೆ ಕಾಲ ಕಾಯಬಲ್ಲ. ಆದರೆ ನಾಟಕಕಾರನ, ಅದರಲ್ಲೂ ಕಂಪನಿಯೊಂದರ ಪಾಲುಗಾರನಾದ ನಾಟಕಕಾರನ ಲಕ್ಷ್ಯವಿರುವದು ಆ ದಿನ ಸಂಜೆಗೆ ನಾಟಕ ನೋಡಲು ಬರುವ ಪ್ರೇಕ್ಷಕರ ಮೇಲೆ. ನಾಟಕರಚನೆಯನ್ನು ಜೀವನದ ಧಂಧೆಯನ್ನಾಗಿ ಮಾಡಿಕೊಂಡ ಯಾವನೂ ಅಯಶಸ್ವಿ ನಾಟಕಗಳನ್ನು ಬರೆದು ತಡೆದುಕೊಳ್ಳಲಾರ. ಅಂತೆಯೇ ಅವನ ನಾಟಕಗಳು ಅಭಿನಯಿಸಲ್ಪಡುವ ರಂಗಭೂಮಿ, ಅವನ ನಾಟಕಗಳನ್ನು ಆಡುವ ಕಂಪನಿ, ಅವುಗಳಿಗೆ ಹಣ ಕೊಟ್ಟು ನೋಡುವ ಪ್ರೇಕ್ಷಕವರ್ಗ ಇವೆಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ಅವನ ನಾಟ್ಯಕಲೆಯ ಮೇಲೆ ಪ್ರಭಾವ ಬೀರುತ್ತವೆ. ಇದೇ ಕಾರಣಕ್ಕಾಗಿಯೋ ಏನೋ, ನಾಟಕದ ತಂತ್ರವಿಧಾನದಲ್ಲಿ ಹೆಚ್ಚಾಗಿ ಒಮ್ಮಿಂದ ಒಮ್ಮೆಲೆ ಕ್ರಾಂತಿಕಾರಕ ಬದಲಾವಣೆಗಳಾದುದು ವಿರಳ.

ನಮಗೆ ಗೊತ್ತಿರುವ ಹಾಗೆ ಷೇಕ್‌ಸ್ಪಿಯರ್ ಒಬ್ಬ ರಂಗಭೂಮಿಯ ಮನುಷ್ಯ, ಅದರಲ್ಲೂ ವ್ಯಾವಹಾರಿಕ ಬುದ್ಧಿಯವನು. ನಾಟಕದ ಕಂಪನಿಯೊಂದರ ಪಾಲುಗಾರನಾಗಿದ್ದುಕೊಂಡು ಆ ಕಾಲದ ಅತ್ಯಂತ ಜನಪ್ರಿಯ ನಾಟಕಕಾರನೆನಿಸಿಕೊಂಡವನು. ಅವನ ಸಮಕಾಲೀನ ನಾಟಕಕಾರ ಬೆನ್ ಜಾನ್ಸನ್ ಷೇಕ್‌ಸ್ಪಿಯರನನ್ನು 'ನಮ್ಮ ರಂಗಭೂಮಿಯ ಪ್ರಸಂಸೆ, ಆನಂದ, ಆಶ್ಚರ್ಯ' ಎಂದು ಕರೆದಿದ್ದಾನೆ. ಸ್ವಾಭಾವಿಕವಾಗಿ ಇಂಥವನಿಗೆ ತನ್ನ ನಾಟಕಗಳು ಗಲ್ಲಾಪೆಟ್ಟಿಗೆಯ ದೃಷ್ಟಿಯಿಂದ ಯಶಸ್ವಿಯಾಗಬೇಕೆಂದು ಆಶೆಯಿರುವದು ಸಹಜವೇ. ಆದರೂ ಆತನ ಮಹಾನ್ ಪ್ರತಿಭೆಯ ಮುಂದೆ ಈ ಯಾಪ ಕ್ಷುಲ್ಲಕ ಸಂಗತಿಗಳೂ ನಿಲ್ಲಲಿಲ್ಲ. ಇಡಿಯ ಜಗತ್ತೇ ತನ್ನವೆಂದು ಹೇಳಿಕೊಳ್ಳಲು ಹೆಮ್ಮೆಪಡುವ ಅವನ ನಾಟಕಗಳು ಎಂಥ ರಂಗಭೂಮಿಯ ಮೇಲೆ

ಅಭಿನಯಿಸಲ್ಪಟ್ಟವು, ಅದರ ರಚನೆ, ವಿನ್ಯಾಸ ಹೇಗಿತ್ತು ಎಂದು ನೋಡುವುದೂ ಒಂದು ಕುತೂಹಲಕರವಾದ ಅಭ್ಯಾಸವೇ.

## ರಂಗರಚನೆ

ಎಲಿಜಬೆತ್ ರಾಣಿಯ ಕಾಲದ ಅಥವಾ ಷೇಕ್‌ಸ್ಪಿಯರ್ ಕಾಲದ ರಂಗಭೂಮಿಯ ರಚನೆ ಹೇಗಿತ್ತೆಂಬುದರ ಬಗ್ಗೆ ಇನ್ನೂ ಸಂಶೋಧಕರಲ್ಲಿ ವಾದವಿವಾದಗಳು ನಡೆದೇ ಇವೆ. ಕೆಲವು ವಿವರಗಳ ಬಗೆಗೆ ಇನ್ನೂ ತೀವ್ರವಾದ ಭಿನ್ನಾಭಿಪ್ರಾಯಗಳಿವೆ. ಆದರೂ ಇತ್ತೀಚೆಗೆ ಪ್ರಕಟವಾದ ಫಿಲಿಫ್ ಹೆನ್ಸ್‌ಲೋನ ದಿನಚರಿ ಮೊದಲಾದ ಆಧಾರಗಳಿಂದ ಕೆಲವು ಖಚಿತವಾದ ಸಂಗತಿಗಳು ಹೊರಬಂದಿವೆ. ಒಟ್ಟಿನಲ್ಲಿ ಹೆನ್ಸ್‌ಲೋನ ದಿನಚರಿ, ಮೂಲ ನಾಟಕಗಳಲ್ಲಿಯ ರಂಗನಿರ್ದೇಶನಗಳು, ಸಮಕಾಲೀನ ರೇಖಾಚಿತ್ರಗಳು ಮುಂತಾದವುಗಳ ಸಹಾಯದಿಂದ ಒಂದು ಸ್ಥೂಲವಾದ ಚಿತ್ರವನ್ನು ಊಹಿಸಬಹುದು.

ಷೇಕ್‌ಸ್ಪಿಯರ್ ಲಂಡನಿಗೆ ಬಂದು ತನ್ನ ನಾಟ್ಯಜೀವನವನ್ನು ಆರಂಭಿಸಿದಾಗ ಆ ಕಾಲದ ನಾಟಕಗಳು ಸಾರ್ವಜನಿಕ ನಾಟಕಗೃಹ, ಖಾಸಗೀ ನಾಟಕಗೃಹ, ವಸತಿಗೃಹಗಳ ಮುಂಭಾಗ, ಸರದಾರರ ವಿಶಾಲ ಭವನಗಳು, ರಾಣಿಯ ಅರಮನೆ, ನಗರಭವನ ಮುಂತಾದ ವಿವಿಧ ಸ್ಥಳಗಳಲ್ಲಿ ಅಭಿನಯಿಸಲ್ಪಡುತ್ತಿದ್ದವು. 1579ರಲ್ಲಿ ಬರ್ಬೇಜ್ ಎಂಬವನು ಪ್ರಪ್ರಥಮವಾಗಿ ಸಾರ್ವಜನಿಕ ನಾಟಕಗೃಹವನ್ನು ಕಟ್ಟಿಸುವ ತನಕ ನಾಟಕ ಕಂಪನಿಗಳಿಗೆ ಖಾಯಂ ನಾಟಕಗೃಹ ಇರಲೇ ಇಲ್ಲ. ಆದರೆ ಷೇಕ್‌ಸ್ಪಿಯರ್ ತನ್ನ ನಾಟಕಗಳನ್ನು ಬೇರೆಡೆ ಪ್ರದರ್ಶಿಸಿರಬಹುದಾದರೂ ಹೆಚ್ಚಾಗಿ ಗ್ಲೋಬ್‌ದಂತಹ ಸಾರ್ವಜನಿಕ ನಾಟಕಗೃಹಗಳಿಗಾಗಿಯೇ ಬರೆದಿರುವಂತೆ ಕಾಣುತ್ತದೆ.

ಷೇಕ್‌ಸ್ಪಿಯರ್ ಕಾಲದ ರಂಗಭೂಮಿಯ ರಚನೆಯನ್ನು ಕುರಿತು ಅಭ್ಯಾಸ ಮಾಡುವಾಗ ಇಂದಿನ ಆಧುನಿಕ ರಂಗಭೂಮಿಯ ಬಗೆಗೂ ಒಂದಿಷ್ಟು ತಿಳಿದಿರಬೇಕು. ಎ. ಸಿ. ಬ್ರ್ಯಾಡ್ಲಿ ಎಂಬ ವಿಮರ್ಶಕ ಆಧುನಿಕ ರಂಗಭೂಮಿಯನ್ನು ಒಂದು ಬದಿ ತೆರೆದ ಚೌಕು ಪೆಟ್ಟಿಗೆಗೆ ಹೋಲಿಸುತ್ತಾನೆ. ಈ ತೆರೆದ ಬದಿಯಿಂದ ನಾವು ಒಳಗಡೆ ನೋಡಬಹುದು. ಅದರ ಒಳಗಿನ ಮೂರು ಮೈಗೂ ಬಣ್ಣಮಾಡಿದ, ಸರಿದಾಡಿಸಬಲ್ಲ ಸೀನರಿಗಳಿರುತ್ತವೆ. ನಾಟಕ ನಡೆದ ಹೊತ್ತಿನಲ್ಲಿ ದೃಶ್ಯ ಬದಲಾದಾಗ ಈ ಬಣ್ಣದ ಸೀನರಿಗಳನ್ನೂ ಬದಲಿಸಲಾಗುವುದು. ನಾಟಕದ ಮೊದಲು ಹಾಗೂ ಕೊನೆಗೆ ಈ ಪೆಟ್ಟಿಗೆಯ ತೆರೆದ ಬದಿಯನ್ನು ಮುಚ್ಚಲಾಗುತ್ತದೆ. ದೃಶ್ಯ ಬದಲಾದಾಗ ಒಳಗಡೆ ರಂಗಸಿದ್ಧತೆಗೆ ಅನುಕೂಲವಾಗಲೆಂದು ಈ ಪರದೆಯಿಂದ ರಂಗದ ಮುಂಭಾಗವನ್ನು ಮುಚ್ಚುತ್ತಾರೆ.

ಆಧುನಿಕ ರಂಗಭೂಮಿಯ ಈ ಕಲ್ಪನೆಯಿದ್ದವರಿಗೆ, 'ತಿರುಗುವ ರಂಗಮಂಚ' (Revolving Stage) ಮೊದಲಾದ ಸುಸಜ್ಜಿತ ವ್ಯವಸ್ಥೆಗಳಿಂದ ಕೂಡಿದ ನಾಟಕಗೃಹಗಳನ್ನು ಕಂಡವರಿಗೆ ಷೇಕ್‌ಸ್ಪಿಯರ್ ಕಾಲದ ರಂಗಭೂಮಿಯ ಕಲ್ಪನೆ ಬರುವದು ತುಸು ಕಠಿಣ. ಆ ರಂಗಭೂಮಿಯ ರಚನೆ ತುಂಬ ಬೇರೆ ವಿಧದ್ದಾಗಿತ್ತು. ಮುಖ್ಯವಾಗಿ ಅದರಲ್ಲಿ ನಾಲ್ಕು ವಿಭಾಗಗಳಿದ್ದವು:

ಮೊದಲನೆಯ ಭಾಗವನ್ನು ಬಾಹ್ಯರಂಗ ಎಂದು ಕರೆಯಬಹುದು. ಸುಮಾರು ಮೂರು ಅಡಿ ಎತ್ತರದ ಕಟ್ಟೆಯು ಈ ಭಾಗ ನೇರವಾಗಿ ಮುಂದಕ್ಕೆ ಚಾಚಿಕೊಂಡು ಇಡಿಯ ನಾಟಕಗೃಹದ ಮಧ್ಯದವರೆಗೂ ಬಂದಿತ್ತು. ಬರಿಯ ಮುಂಬದಿಯಿಂದ ಮಾತ್ರವಲ್ಲದೆ ಉಳಿದೆರಡು ಬದಿಗಳಿಂದಲೂ ಪ್ರೇಕ್ಷಕರು ನಾಟಕವನ್ನು ನೋಡುತ್ತಿದ್ದರು. (ಇತ್ತೀಚೆಗೆ ಎರಡು ಮೂರು ವರ್ಷಗಳ ಹಿಂದೆ ಪ್ರಕಟವಾದ ಒಂದು ಸಿದ್ಧಾಂತದ ಪ್ರಕಾರ ನಾಟಕಗೃಹವು ದುಂಡಗೆ ಇತ್ತೆಂದೂ ಎಲ್ಲ ಬದಿಗಳಿಂದಲೂ ನಾಟಕವನ್ನು ನೋಡಬಹುದಾಗಿತ್ತೆಂದೂ ತಿಳಿದು ಬಂದಿದೆ.) ಈ ಬಾಹ್ಯರಂಗದ ಬದಿಗುಂಟ ನಿಂತುಕೊಂಡೊ ಸ್ಟೂಲುಗಳ ಮೇಲೆ ಕುಳಿತುಕೊಂಡೊ ಅತಿ ಕಡಿಮೆ ಹಣ ಕೊಟ್ಟ ಜನರು ನೋಡುತ್ತಿದ್ದರು. ಬದಿಗಳು ತೆರೆದೇ ಇರುತ್ತಿದ್ದವು. ಈಗಿನಂತೆ ಸರಿದಾಡಿಸಬಲ್ಲ ಸೀನರಿಗಳ ಕಲ್ಪನೆಯೇ ಅವರಿಗಿರಲಿಲ್ಲವಾದ್ದರಿಂದ ಯಾವ ಬದಿಗೂ ಇಂಥ ಸೀನರಿಗಳು ಇದ್ದಿಲ್ಲ. ಪರದೆಯ ಉಪಯೋಗ ಅವರಿಗೆ ಗೊತ್ತೇ ಇರಲಿಲ್ಲವೆಂದು ಹೇಳಲಿಕ್ಕಾಗದಿದ್ದರೂ ನಾವು ಬಳಸುವಂಥ ಅಂಕದ ಪರದೆ ಅವರಿಗೆ ಗೊತ್ತಿರಲಿಲ್ಲ. ರಂಗಭೂಮಿಯ ಈ ಭಾಗ ಬಯಲಿಗೆ ತೆರೆದುಕೊಂಡಿದ್ದು ಮೇಲೆ ಯಾವ ಆಚ್ಛಾದನೆಯೂ ಇರಲಿಲ್ಲ. ನಾಟಕಗಳೆಲ್ಲ ಮಧ್ಯಾಹ್ನ ಹಾಡುಹಗಲೇ ಅಭಿನಯಿಸಲ್ಪಡುತ್ತಿದ್ದುದರಿಂದ ಸಾಕಷ್ಟು ಬೆಳಕನ್ನು ಪೂರೈಸಲು ಈ ಯೋಜನೆಯಿತ್ತು. ಆದರೂ ಮಳೆ ಬಂದರೆ ನಟರು ತೊಯ್ಯದಂತೆ ಸ್ವಲ್ಪ ಭಾಗದವರೆಗೆ ರಕ್ಷಣೆಯಿತ್ತು. ನಾಟಕದ ಮುಖ್ಯಭಾಗವನ್ನೆಲ್ಲ ಇಲ್ಲಿಯೇ ಅಭಿನಯಿಸಲಾಗುತ್ತಿತ್ತು.

ಎರಡನೆಯ ಭಾಗವನ್ನು ನೇಪಥ್ಯ ಎಂದು ಕರೆಯಬಹುದು. ಬಾಹ್ಯರಂಗದ ಹಿಂದೆ ಪ್ರೇಕ್ಷಕರಿಗೆದುರಾಗಿ ಒಂದು ಗೋಡೆ, ಅದರಲ್ಲಿ ತುಸು ಅಂತರದಲ್ಲಿ ಎರಡು ಬಾಗಿಲುಗಳಿದ್ದವು. ಈ ಬಾಗಿಲುಗಳ ಮುಖಾಂತರವೇ ಪಾತ್ರಗಳ ಪ್ರವೇಶ, ನಿಷ್ಕ್ರಮಣ ನಡೆಯುತ್ತಿತ್ತು. ಈ ಗೋಡೆಯ ಹಿಂದಿನ ಭಾಗವೇ ನಟರು ವೇಷಭೂಷಣಗಳಿಂದ ಸಿದ್ಧವಾಗುವುದಕ್ಕಾಗಿ ಮೀಸಲಾಗಿದ್ದ ನೇಪಥ್ಯ. ಈ ಭಾಗವನ್ನು ಅವಶ್ಯ ಬಿದ್ದಾಗ ರಂಗಭೂಮಿಯ ಒಂದು ಭಾಗವಾಗಿ ಬಳಸಲಾಗುತ್ತಿತ್ತು. ಕೋಣೆಯಾಗಿ, ಕೋಟೆಯಾಗಿ, ನಗರದ ಗೋಡೆಯಾಗಿ —ಹೀಗೆ ವಿವಿಧ ರೀತಿಯಲ್ಲಿ ಇವನ್ನು ಬಳಸಲಾಗುತ್ತಿತ್ತು. 'ಒಳಗಿನಿಂದ' ಎಂದು ನಾಟಕದಲ್ಲಿ ರಂಗನಿರ್ದೇಶನ ಬಂದಾಗ ಈ ನೇಪಥ್ಯದಿಂದಲೇ ನಟರು ಮಾತಾಡುತ್ತಿದ್ದರು.

ಮೂರನೆಯದು ರಂಗದ ಮೇಲ್ಭಾಗ, ಅಥವಾ ಬಾಲ್ಕನಿ. ಈ ಭಾಗ ಬಾಹ್ಯರಂಗದ ವೇದಿಕೆಯ ಕಡೆಗೆ ಮುಖ ಮಾಡಿತ್ತು. ಕೆಲವು ಸಲ ಈ ಭಾಗವನ್ನೂ ರಂಗಭೂಮಿಯ ಒಂದು ಭಾಗವಾಗಿ ಬಳಸಲಾಗುತ್ತಿತ್ತು. ರಂಗಸೂಚನೆಯಲ್ಲಿ 'ಮೇಲೆ ಬರುತ್ತಾನೆ' ಮುಂತಾದ ಸೂಚನೆಗಳಿದ್ದಾಗ ರಂಗದ ಈ ಭಾಗದಲ್ಲಿ ಪಾತ್ರಧಾರಿ ಬರುತ್ತಿದ್ದ. 'ರೋಮಿಯೊ ಅಂಡ್ ಜೂಲಿಯೆಟ್' ನಾಟಕದ ಜೂಲಿಯೆಟ್ ತನ್ನಿನಿಯ ರೋಮಿಯೊನೊಂದಿಗೆ ಮಾತಾಡಿದ್ದು ಈ ಭಾಗದಿಂದ. ಮುಮ್ಮಡಿ ರಿಚರ್ಡ್ ದೊರೆ ಇಬ್ಬರು ಧರ್ಮಾಧಿಕಾರಿಗಳ ಮಧ್ಯೆ ಪ್ರಜೆಗಳಿಗೆ ಕಾಣಿಸಿಕೊಂಡದ್ದು ಈ ಭಾಗದಿಂದ. ಈ ಭಾಗದಲ್ಲಿಯೇ 'ಮೆಕ್‌ಬೆತ್' ನಾಟಕದ ಡಂಕನ್ ದೊರೆ ನಿದ್ರೆಯಲ್ಲಿದ್ದಾಗ ಕೊಲ್ಲಲ್ಪಟ್ಟನೆಂದು




**ಸ್ವಾನ್ ಥಿಯೇಟರಿನ ರಂಗಸ್ಥಳ**

ಜೋಹನ್ನೆಸ್ ಡಿ ವಿಟ್‌ನ ನಕ್ಷೆ, ಕಾಲ : ಸುಮಾರು 1596

1. ಬಾಹ್ಯರಂಗ ಅಥವಾ ವೇದಿಕೆ. 2. ನೇಪಥ್ಯ. 3. ರಂಗದ ಮೇಲ್ಭಾಗ ಅಥವಾ ಬಾಲ್ಕನಿ. 4. ರಂಗದ ಹಿಂಭಾಗ. 5. ಜಾದೂ ಬಾಗಿಲು.

ಪ್ರೇಕ್ಷಕರು ಭಾವಿಸಿಕೊಂಡರು. ಈ ಭಾಗ ನಾಟಕಕ್ಕೆ ಅವಶ್ಯವಿಲ್ಲದಾಗ ಪ್ರೇಕ್ಷಕರು ಅಲ್ಲಿ ಕುಳಿತು ನಾಟಕವನ್ನು ನೋಡಬಹುದಾಗಿತ್ತು. ಈ ಭಾಗವನ್ನು ಮುಚ್ಚುವದಕ್ಕೆ ತೆರೆಯ ವ್ಯವಸ್ಥೆಯೂ ಇತ್ತು.

ಕೊನೆಯದಾಗಿ ಕೆಳಗಿನ ರಂಗದ ಮೇಲೆ ಬಾಹ್ಯರಂಗ ಹಾಗೂ ನೇಪಥ್ಯಗಳ ನಡುವೆ ಇನ್ನೊಂದು ಭಾಗವಿತ್ತು. ಇದನ್ನು ರಂಗದ ಹಿಂಭಾಗವೆಂದು ಕರೆಯಬಹುದು.

ಬಾಹ್ಯರಂಗದಿಂದ ಈ ಭಾಗವನ್ನು ಬೇರ್ಪಡಿಸಲು ಸಾಧ್ಯವಾಗುವಂತೆ ಒಂದು ಪರದೆಯಿರುತ್ತಿತ್ತು. ಇದು ಅನೇಕ ನಾಟಕಗಳಲ್ಲಿ ತುಂಬ ಅವಶ್ಯವಿತ್ತು. ಇದನ್ನು 'ಕಿಂಗ್ ರಿಚರ್ಡ್ ದಿ ಥರ್ಡ್' ನಾಟಕದಲ್ಲಿ ಆರನೆಯ ಹೆನ್ರಿಯ ಮರಣಶಯ್ಯೆಯಾಗಿ, ಯುದ್ಧ-ಭೂಮಿಯಲ್ಲಿ ರಿಚ್ಮಂಡನ ಗೂಡಾರವನ್ನಾಗಿ ಬಳಸಲಾಗುತ್ತಿತ್ತು. 'ದಿ ಟೆಂಪೆಸ್ಟ್' ನಾಟಕದಲ್ಲಿ ಪ್ರಾಸ್ಪೆರೊ ತೆರೆ ಸರಿಸಿ, ಒಳಗಡೆ ಚದುರಂಗದಾಟವಾಡುತ್ತಿದ್ದ ಮಿರ್ಯಾಂಡ-ಫರ್ಡಿನಂಡರನ್ನು ತೋರಿಸಿದ್ದು ಇಲ್ಲಿಯೇ.

ಕೆಲವು ಮೂಲಗಳಿಂದ ತಿಳಿದು ಬರುವ ಇನ್ನೊಂದು ಸ್ವಾರಸ್ಯಕರ ಅಂಶವೆಂದರೆ ರಂಗಭೂಮಿಯ ಕೆಳಗಡೆಗೆ ಒಂದು ಟೊಳ್ಳಾದ ನೆಲಮನೆಯಂಥ ಭಾಗವಿದ್ದು ಅದನ್ನು ಪ್ರವೇಶಿಸಲು ಜಾದೂಬಾಗಿಲು ಇತ್ತೆಂಬುದು. ಈ ಬಾಗಿಲಿನಿಂದ ದೆವ್ವಗಳು ಪ್ರವೇಶ ಮಾಡುತ್ತಿರಬೇಕು. 'ಮೆಕ್‌ಬೆತ್' ನಾಟಕದ ಮರುಳುಗಳು ಈ ಬಾಗಿಲಿನಿಂದಲೇ ಮೇಲೆದ್ದು ಕಾಣಿಸಿಕೊಂಡು ಮತ್ತೆ ಅದೃಶ್ಯವಾಗಿರಬೇಕು. 'ಹ್ಯಾಮ್ಲೆಟ್' ನಾಟಕದಲ್ಲಿ ವ್ಯಕ್ತಿಯೊಬ್ಬನು ಈ ಟೊಳ್ಳಿನಲ್ಲಿ ಅಡಗಿ ಕುಳಿತು ಭೂತದಂತೆ ಮಾತಾಡಿರಬೇಕು. 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ' ನಾಟಕದ ಸೈನಿಕರು ಸಮರದ ಹಿಂದಿನ ರಾತ್ರಿ ಕೇಳಿದ ವಿಚಿತ್ರ ಸಂಗೀತ ಇಲ್ಲಿಂದಲೇ ಬಂದಿರಬೇಕು.

ದೃಶ್ಯಾವಳಿಯ ಬಳಕೆ ಗೊತ್ತಿರದಿದ್ದರೂ ನಾಟಕದಲ್ಲಿ ಬೇಕಾಗುವ ರಂಗೋಪಕರಣಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸುತ್ತಿದ್ದರೆಂಬುದಕ್ಕೆ ರೋಸ್ ನಾಟಕಗೃಹದ ವ್ಯವಸ್ಥಾಪಕನಾಗಿದ್ದ ಹೆನ್ಸ್‌ಲೋನ ದಿನಚರಿಯಿಂದ ಸಾಕಷ್ಟು ಪ್ರಮಾಣಗಳು ಸಿಗುತ್ತವೆ. ಕುರ್ಚಿ, ಮೇಜು, ಬೆಂಚು, ಸಮಾಧಿ, ಪಲ್ಲಂಗ ಮೊದಲಾದವು ತೀರ ಸಾಮಾನ್ಯವಾಗಿದ್ದವು. ಪಲ್ಲಂಗದಂತಹ ಅಷ್ಟು ಸುಲಭವಾಗಿ ಎತ್ತಿಡಲಾಗದ ಉಪಕರಣಗಳನ್ನು ಅವಶ್ಯವಾದಾಗ ರಂಗದ ಮೇಲೆ ತರಲಾಗುತ್ತಿತ್ತು. ಮುಂದಿನ ದೃಶ್ಯದಲ್ಲಿ ಅದು ಬೇಕಾಗದಿದ್ದಾಗ ರಂಗದ ಮೇಲೆ ಉಳಿದರೂ ಯಾರೂ ಆಕ್ಷೇಪಿಸುವ ಗೋಜಿಗೆ ಹೋಗುತ್ತಿರಲಿಲ್ಲ.

ಇದು ಸ್ಥೂಲವಾಗಿ ಷೇಕ್ಸ್ಪಿಯರ್ ಕಾಲದ ರಂಗಭೂಮಿಯ ಒಂದು ಚಿತ್ರ. ಈ ಬಗೆಯ ರಂಗಭೂಮಿಯಿಂದಾಗಿ ಷೇಕ್ಸ್ಪಿಯರನ ನಾಟಕರಚನೆಯ ಮೇಲೆ ಉಂಟಾದ ಪರಿಣಾಮಗಳೇನೆಂದು ಇನ್ನು ನೋಡಬಹುದು. ತೀರ ಅನಾಗರಿಕ ಅವಸ್ಥೆಯಲ್ಲಿರುವಂತೆ ಕಾಣುವ ಈ ರಂಗಭೂಮಿಯ ರಚನೆಯ ಪರಿಣಾಮವಾಗಿ ನಾಟಕಗಳನ್ನು ರಂಗದ ಮೇಲೆ ತರುವಲ್ಲಿ ತುಂಬ ತೊಂದರೆಗಳಿದ್ದವೆಂದೂ, ನಾಟಕಕಾರ ಉದ್ದಿಷ್ಟ ಪರಿಣಾಮವನ್ನು ಸಾಧಿಸಲು ತುಂಬ ಪಾಡುಪಟ್ಟಿರಬೇಕೆಂದೂ ಅನೇಕರು ಭಾವಿಸಬಹುದು. ಆದರೆ ಇಂಥ ವ್ಯವಸ್ಥೆಯಿಂದಾಗಿ ಎಲಿಜಬೆತ್ ರಾಣಿಯ ಕಾಲದ ನಾಟಕಕಾರ ಈಗಿನ ನಾಟಕ-ಕಾರನಿಗಿಂತ ಹೆಚ್ಚಿನ, ಈಗ ಊಹಿಸಲೂ ಸಾಧ್ಯವಿಲ್ಲದಂಥ, ಅನೇಕ ಸೌಲಭ್ಯಗಳನ್ನು ಹೊಂದಿದ್ದನೆಂದು ಮುಂದಿನ ವಿವರಗಳಿಂದ ಕಂಡುಕೊಳ್ಳಬಹುದು.

## ಸ್ವಗತ

ಮೊದಲನೆಯದಾಗಿ, ನಟ ಬಾಹ್ಯರಂಗದ ಮೇಲೆ ನೇರವಾಗಿ ಪ್ರೇಕ್ಷಕರ ಮಧ್ಯದಲ್ಲೇ ಬಂದು ನಿಲ್ಲುತ್ತಿದ್ದ. ಹೀಗಾಗಿ ಅವನು ಪ್ರೇಕ್ಷಕರ ಜೊತೆಗೆ ತೀರ ಹತ್ತಿರದ ಸಂಬಂಧ

ದಲ್ಲಿದ್ದ. ಪ್ರೇಕ್ಷಕರನ್ನೂ ನಟರನ್ನೂ ದೂರದೂರವಿಡುವ ತೆರೆಯಂತಹ, ಬೆಳಕು-ಕತ್ತಲೆಯ ಸಂಯೋಜನೆಯಂತಹ ಯಾವ ತೊಡರೂ ಇರಲಿಲ್ಲ. ಅಂತೆಯೇ ಈಗ ಅಸಹಜವೆಂದು ತೋರುವ ಸ್ವಗತ ಭಾಷಣ ಆಗ ಸಹಜವಾಗಿ ಕಾಣಿಸುತ್ತಿತ್ತು, ನಟ ತನ್ನ ಪಾತ್ರದ ಮನಸ್ಸನ್ನು ಬಿಚ್ಚಿ ಹತ್ತಿರದವರಿಗೆ ಸ್ವಾಭಾವಿಕವಾಗಿ ತೋಡಿಕೊಂಡ ಹಾಗೆ. ಸ್ವಗತ ಭಾಷಣದ ರೀತಿಯನ್ನು ತೊಡೆದು ಹಾಕಿರುವ ಆಧುನಿಕ ರಂಗಭೂಮಿ ಆ ಮೂಲಕ ಮನುಷ್ಯನ ಆಂತರಿಕ ಭಾವನೆಗಳ ಸುಸೂಕ್ಷ್ಮ ಲಯಗಳನ್ನು ವ್ಯಕ್ತಗೊಳಿಸುವ ಒಂದು ಅಪೂರ್ವ ಅವಕಾಶದಿಂದ ವಂಚಿತವಾಗಿದೆಯೆಂದೇ ಹೇಳಬೇಕು. ಮನುಷ್ಯನ ನಿಜವಾದ ಜಗತ್ತು ಅಡಗಿರುವದೇ ಅವನ ಅಜ್ಞಾತ ಪ್ರಜ್ಞೆಯಲ್ಲಿ. ನಾಟಕದಲ್ಲಿ ಎಲ್ಲವೂ ಕ್ರಿಯೆ ಇಲ್ಲವೆ ಮಾತುಗಳ ಮೂಲಕ ವ್ಯಕ್ತವಾಗಬೇಕಾಗಿರುವದರಿಂದ ಈ ಒಳ ಜಗತ್ತಿನ ಪದರಗಳನ್ನು ಬಿಡಿಸಿ ತೋರಿಸಲು ಇರುವ ಅವಕಾಶಗಳು ತುಂಬ ಕಡಿಮೆ ಹಾಗೂ ಅಸಮರ್ಪಕ. ಆದರೆ ಷೇಕ್ಸ್ಪಿಯರ್ ಕಾಲದ ನಾಟಕಕಾರರಿಗೆ ಸ್ವಗತದ ಮೂಲಕ ಈ ಅವಕಾಶವನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಬಳಸಿಕೊಳ್ಳುವ ಸೌಲಭ್ಯವಿತ್ತು. ಹೀಗೆ ಪ್ರೇಕ್ಷಕರಿಗೆ ತೀರ ಹತ್ತಿರವಿದ್ದುದರಿಂದ ನಟನಾದವನು ಧ್ವನಿವರ್ಧಕದ ವ್ಯವಸ್ಥೆಯಿಲ್ಲ-ದಿದ್ದರೂ ಕೂಗಿ ಕೂಗಿ ಮಾತಾಡಬೇಕಾಗಿರಲಿಲ್ಲ. ಸಮರ್ಥನಾದ ನಟನ ಧ್ವನಿಯ ಸೂಕ್ಷ್ಮ ಏರಿಳಿತ, ಹಾವಭಾವ, ಅಭಿವ್ಯಕ್ತಿ ಎಲ್ಲಕ್ಕೂ ಸರಿಯಾದ ಅವಕಾಶವಿತ್ತು.

## ಸೀನರಿಗಳು

ಆ ಕಾಲದ ನಾಟಕಗಳ ಅಭಿನಯದ ಕಾಲಕ್ಕೆ ಸೀನರಿಗಳ ಬದಲಾವಣೆಯ ತೊಂದರೆಯೇ ಇರಲಿಲ್ಲವಾದ್ದರಿಂದ ರಂಗಸಿದ್ಧತೆಗೆ ವೇಳೆ ತಗಲುತ್ತಿರಲಿಲ್ಲ. ಪ್ರತಿಯೊಂದು ನಿಮಿಷವೂ ನಾಟಕದ ಅಭಿನಯಕ್ಕೆ ವಿನಿಯೋಗಿಸಲ್ಪಡುತ್ತಿತ್ತು. ಅಂತೆಯೇ ಒಂದು ನಾಟಕದ ಅಭಿನಯಕ್ಕೆ ಈಗ ಬೇಕಾಗುವ ಸಮಯಕ್ಕಿಂತ ಕಡಿಮೆ ಸಮಯ ಆಗ ಹಿಡಿಯುತ್ತಿತ್ತು. ಸಾಮಾನ್ಯವಾಗಿ ಎಲಿಜಬೆತ್ ರಾಣಿಯ ಕಾಲದ ಒಂದು ನಾಟಕದ ಅಭಿನಯಕ್ಕೆ ತಗಲುವ ಸಮಯ ಅದನ್ನು ಈಗ ಓದಲು ತಗಲುವ ಸಮಯಕ್ಕಿಂತ ಕೊಂಚ ಹೆಚ್ಚಾಗುತ್ತಿತ್ತು.

ಅರಣ್ಯ, ಅರಮನೆ, ಬೀದಿ ಮೊದಲಾದ ದೃಶ್ಯಗಳಿಗೆಲ್ಲ ಒಂದೇ ಬಗೆಯ ರಂಗ-ಭೂಮಿಯನ್ನು ಬಳಸುತ್ತಿದ್ದುದರಿಂದ ಆಯಾ ದೃಶ್ಯ ನಡೆದಿರುವ ಸ್ಥಳದ ಹೆಸರು ಪ್ರೇಕ್ಷಕರಿಗೆ ಗೊತ್ತಾಗಲೆಂದು ಫಲಕದ ಮೇಲೆ ಬರೆದು ತೂಗುಹಾಕುವ ಪರಿಪಾಠವಿತ್ತು. ಇಲ್ಲವಾದರೆ ಸಂಭಾಷಣೆಗಳ ಮೂಲಕವೇ ಪ್ರೇಕ್ಷಕರು ಆ ಸ್ಥಳವನ್ನು ಗುರುತಿಸಬೇಕಾಗಿತ್ತು. 'ಟ್ವೆಲ್ಫ್ತ್ ನೈಟ್' ನಾಟಕದಲ್ಲಿ ಬರುವ ಮಾತುಗಳಿವು :

> **ವಯೋಲ.** ಗೆಳೆಯರೆ, ಯಾವ ದೇಶ ಇದು ?
>
> **ಕಪ್ತಾನ.** ಇದು ಇಲ್ಲೀರಿಯಾ, ತಾಯಿ.

ಕೆಲವು ಸಲ ಪ್ರತಿಮಾಸಂವಿಧಾನದ ಮೂಲಕವೂ ಈ ಉದ್ದೇಶ ನೆರವೇರುತ್ತಿತ್ತು :

> . . . . ಬಚ್ಚಿಡಿರಿ ತಾರೆಗಳೆ, ನಿಮ್ಮ ಬೆಂಕಿಯನು,
> ನನ್ನ ಒಳಗಿನ ಕಪ್ಪು ಬಯಕೆಗಳನ್ನು ಬೆಳಕು ನೋಡದಿರಲಿ.

ಎಂದು ಮೆಕ್‌ಬೆತ್ ಹೇಳಿದಾಗ ಅವನು ಮಾತಾಡುತ್ತಿರುವದು ನಕ್ಷತ್ರಖಚಿತ ನಿಶೆಯ ಏಕಾಂತದಲ್ಲಿ ಎಂದು ಸ್ಪಷ್ಟವಾಗುವದಲ್ಲದೆ ದುಷ್ಟಯೋಚನೆಗಳಿಂದ ಅವನ ಮನಸ್ಸು ಕದಡಿದೆ ಎಂದೂ ಸೂಚಿತವಾಗುತ್ತದೆ. ಒಂದು ವೇಳೆ ಈ ಯಾವ ವಿಧದಿಂದಲೂ ಒಂದು ದೃಶ್ಯದ ನಿರ್ದಿಷ್ಟ ಸ್ಥಳ, ಕಾಲಗಳು ಗೊತ್ತಾಗದೆ ಹೋದರೆ ಪ್ರೇಕ್ಷಕರು ಅಷ್ಟಾಗಿ ಅದನ್ನು ಗನುನಿಸುತ್ತಿರಲಿಲ್ಲ.

ಷೇಕ್ಸ್ಪಿಯರ್ ಕಾಲದ ನಾಟಕಗಳಲ್ಲೂ ಆಧುನಿಕ ನಾಟಕಗಳಲ್ಲೂ ದೃಶ್ಯಗಳ ಸಂಖ್ಯೆಯಲ್ಲಿ ಕಂಡುಬರುವ ವ್ಯತ್ಯಾಸಕ್ಕೆ ಮುಖ್ಯವಾಗಿ ತೆರೆಯ ಉಪಯೋಗವೇ ಕಾರಣ. ನಮ್ಮ ಕಾಲದ ನಾಟಕಗಳೆಲ್ಲ ಹೆಚ್ಚಾಗಿ ಮೂರು ದೃಶ್ಯಗಳಲ್ಲಿ ಸಂಯೋಜಿಸಲ್ಪಟ್ಟಿವೆ. ದೃಶ್ಯಗಳ ಸಂಖ್ಯೆ ಕಡಿಮೆಯಾದಷ್ಟೂ ಸಹಜತೆಗೆ ಹೆಚ್ಚು ಸಮೀಪ ಬರುತ್ತೇವೆ, ನಾಟಕದ ಉದ್ದಿಷ್ಟ ಪರಿಣಾಮ ತೀಕ್ಷ್ಣವಾಗುತ್ತದೆ ಎಂದು ನಾವು ಭಾವಿಸುತ್ತೇವೆ. ಆದರೆ ಆ ಕಾಲದ ನಾಟಕಕಾರ ತನಗೆ ಅನುಕೂಲವಾದಷ್ಟು ದೃಶ್ಯಗಳಲ್ಲಿ ನಾಟಕವನ್ನು ಹವ್ಮಿಕೊಳ್ಳುತ್ತಿದ್ದ. ತೆರೆ, ಸೀನರಿಗಳಿಲ್ಲದ ಕಾರಣ ಇದು ಅವನಿಗೆ ಸುಲಭವೂ ಸಹಜವೂ ಆಗಿತ್ತು. ಇದೇ ಕಾರಣಕ್ಕಾಗಿ ಆ ಕಾಲದ ನಾಟಕಗಳ ಕಥೆ ಅನೇಕ ವರ್ಷಗಳ ಅವಧಿಯ ಮೇಲೆ ಹಬ್ಬಿಕೊಳ್ಳಬಹುದಾಗಿತ್ತು. ಆದರೆ ಈಗಿನ ನಾಟಕ ಕೇವಲ ಕೆಲವೇ ತಾಸುಗಳ ಅವಧಿಯಲ್ಲಿ ನಡೆಯಬಹುದಾದ ಘಟನೆಗಳಿಂದ ತನ್ನೆಲ್ಲ ಉತ್ಕಟತೆಯನ್ನೂ ಬಿಚ್ಚಿ ತೋರಿಸಬೇಕಾಗುತ್ತದೆ. ಷೇಕ್ಸ್ಪಿಯರನಲ್ಲಿ ದೃಶ್ಯಗಳ ಸಂಖ್ಯೆ ಒಂದು ನಾಟಕಕ್ಕೆ ಸರಾಸರಿ ಇಪ್ಪತ್ತು; 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ'ದಲ್ಲಿ ನಲವತ್ತೆರಡಕ್ಕೇರಿದರೆ 'ದಿ ಟೆಂಪೆಸ್ಟ್'ದಲ್ಲಿ ಒಂಬತ್ತಕ್ಕಿಳಿಯುತ್ತದೆ. ದೃಶ್ಯಗಳನ್ನೆಲ್ಲ ಸುಸಂಬದ್ಧವಾಗಿ ಸಂಯೋಜಿಸುವ ಶಕ್ತಿಯುಳ್ಳ ನಾಟಕಕಾರನಿಗೆ ಈ ಸ್ವಾತಂತ್ರ್ಯ ಒಂದು ದೊಡ್ಡ ಅನುಕೂಲವೆಂದೇ ಹೇಳಬೇಕು. ಇಲ್ಲವಾದರೆ ಸಡಿಲವಾಗಿ ಜೋಡಿಸಿದ ದೃಶ್ಯಗಳು ಬರಿಯ ಕಥನವಾಗಿ ಪರಿಣಮಿಸುವ ಸಾಧ್ಯತೆಯೂ ಇದೆ.

ಹಾಗೆಯೇ ಅಂದಿನ ನಾಟಕಕಾರ ತನ್ನ ಪ್ರೇಕ್ಷಕರನ್ನು ಒಂದು ಸ್ಥಳ, ನಗರ, ದೇಶದಿಂದ ಮತ್ತೊಂದಕ್ಕೆ ಸುಲಭವಾಗಿ ಕರೆದೊಯ್ಯಬಹುದಾಗಿತ್ತು. ಯಾಕೆಂದರೆ ಪ್ರೇಕ್ಷಕ ಆ ಸ್ಥಳಗಳನ್ನೆಲ್ಲ ಮನಸ್ಸಿನಲ್ಲೇ ಕಲ್ಪಿಸಿಕೊಳ್ಳುತ್ತಿದ್ದನಲ್ಲದೆ ಒಂದನ್ನೂ ರಂಗದ ಮೇಲೆ ನೋಡುತ್ತಿರಲಿಲ್ಲ. 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ'ದಲ್ಲಿ ದೃಶ್ಯದಿಂದ ದೃಶ್ಯ ಬದಲಾದ ಹಾಗೆ ದೇಶಕ್ಕೆ ದೇಶಗಳೇ ಬದಲಾಗುತ್ತವೆ. 'ದಿ ವಿಂಟರ್ಸ್ ಟೇಲ್'ದಲ್ಲಿ ನಾಲ್ಕನೆ ಹಾಗೂ ಐದನೆ ಅಂಕಗಳ ನಡುವೆ ಹದಿನಾರು ವರ್ಷಗಳು ಗತಿಸಿ ಹೋಗಿರುತ್ತವೆ. ಆಧುನಿಕ ನಾಟಕಕಾರನಿಗೆ ಈ ಅನುಕೂಲತೆ ಅಷ್ಟು ಸುಲಭಲಭ್ಯವಾಗಿಲ್ಲ.

ಆಧುನಿಕ ನಾಟಕವು ರಂಗದ ಮೇಲೆ ತರಬಹುದೆಂದು ಊಹಿಸಲಿಕ್ಕೂ ಸಾಧ್ಯವಿಲ್ಲದ ಕೆಲವು ದೃಶ್ಯಗಳನ್ನು ಆ ಕಾಲದ ನಾಟಕಕಾರ ಸಹಜವಾಗಿ ತರಬಹುದಾಗಿತ್ತು. ಯುದ್ಧದ ದೃಶ್ಯಗಳನ್ನೇ ತೆಗೆದುಕೊಳ್ಳುವದಾದರೆ, ಸಹಜತೆಗೆ ತುಂಬ ಮಹತ್ವವಿತ್ತಿರುವ ಆಧುನಿಕ ನಾಟಕ ಇಂಥ ದೃಶ್ಯವನ್ನು ರಂಗದ ಮೇಲೆ ತರುವದಕ್ಕೆ ಸಾಧ್ಯವೇ ಇಲ್ಲ. ಆದರೆ ಷೇಕ್ಸ್ಪಿಯರನ ಅನೇಕ ನಾಟಕಗಳಲ್ಲಿ ಹಲವಾರು ಸಲ ರಣಭೂಮಿಯ

ದೃಶ್ಯಗಳು ಬಂದಿವೆ. ಯಾಕೆಂದರೆ ಸೈನಿಕರು, ಕುದುರೆ, ತೋಪು ಮೊದಲಾದವನ್ನೆಲ್ಲ ತೋರಿಸುವ ಚಿಂತೆಯೇ ಅವರಿಗಿರಲಿಲ್ಲ.

ಆ ಕಾಲದ ನಾಟಕಗಳ ಇನ್ನೊಂದು ವೈಶಿಷ್ಟ್ಯವೆಂದರೆ ಒಂದಕ್ಕೊಂದು ಸಂಬಂಧಿಸಿದ ಎರಡು ವಸ್ತುಗಳನ್ನು ಸಂಯೋಜಿಸುವ ರೀತಿ. ಒಂದರ ನಂತರ ಒಂದು ಬರುವ ದೃಶ್ಯಗಳಲ್ಲಿ ಎರಡು ವಸ್ತುಗಳಿಗೆ ಸಂಬಂಧಿಸಿದ ಪಾತ್ರಗಳನ್ನು ಅವರು ಸುಲಭವಾಗಿ ರಂಗದ ಮೇಲೆ ತರುತ್ತಿದ್ದರು. ಇದೂ ಒಂದು ಈಗಿನವರಿಗಿಲ್ಲದ ಅನುಕೂಲ. 'ಕಿಂಗ್ ಲಿಯರ್' ನಾಟಕದಲ್ಲಿ ಈ ದ್ವಿವಸ್ತುಸಂಯೋಜನೆಯ ಲಾಭವನ್ನು ಷೇಕ್ಸ್ಪಿಯರ್ ಅನ್ಯಾದೃಶವಾಗಿ ಬಳಸಿಕೊಂಡಿದ್ದಾನೆ. ಇಡಿಯ ನಾಟಕ ಅಸಹ್ಯವಾದ ವೇದನೆಯ ತಳಮಳವನ್ನು ತುಂಬ ಉತ್ಕಟವಾಗಿ ಚಿತ್ರಿಸುವಂಥದು, ಅದರಲ್ಲೂ ವಿಶೇಷವಾಗಿ ಬಿರುಗಾಳಿಯ ದೃಶ್ಯ. ವೇದನಾಮಯವಾದ ಈ ಉದ್ದವಾದ ದೃಶ್ಯ ಏಕಪ್ರಕಾರವಾಗಿ ರಂಗದ ಮೇಲಿದ್ದರೆ ಪ್ರೇಕ್ಷಕನ ಕೊರಳ ಸೆರೆ ಬಿಗಿದು ಸಹನಾತೀತವಾಗಬಹುದಿತ್ತು. ಎಂತಲೇ ಕವಿ ಈ ದೃಶ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿ, ನಡುನಡುವೆ ಚಿಕ್ಕದಾದ ಶಾಂತ ದೃಶ್ಯಗಳನ್ನು ಸೇರಿಸಿ, ಭಾವನೆಯ ಸ್ವರದಲ್ಲಿ ಸೂಕ್ಷ್ಮವಾದ ವೈವಿಧ್ಯವನ್ನು ಸಾಧಿಸಿದ್ದಾನೆ. ನಡುವೆ ಕಾಲಾವಕಾಶವಿಲ್ಲದೆ ದೃಶ್ಯದ ಮೇಲೆ ದೃಶ್ಯ ಬರುವದರಿಂದ ಒಂದು ಮತ್ತೊಂದನ್ನು ತೀವ್ರವಾಗಿಸುವ, ಇಲ್ಲವೆ ಒಂದು ಮತ್ತೊಂದರ ಭೇದಗಾಣಿಸುವ ರೀತಿಯಲ್ಲಿ ಬಳಸಿ, ನಾವು ಓದಿದಾಗ ಆಗುವ ಪರಿಣಾಮವನ್ನೇ ರಂಗದ ಮೇಲೂ ತರಲು ಕವಿಗೆ ಸಾಧ್ಯವಾಗಿದೆ.

ಹೀಗೆ ಮಧ್ಯಂತರಗಳಿಲ್ಲದೆ ಒಂದರ ಹಿಂದೆ ಒಂದು ದೃಶ್ಯಗಳು ಸಾಲಾಗಿ ಬಂದು ನಾಟಕವು ನಿರ್ಮಾಣ ಮಾಡುವ 'ಮಾಯೆ'ಯಲ್ಲಿ ಬಿರುಕಾಗದೆ ಇಡಿಯ ನಾಟಕದ ಪರಿಣಾಮ ತೀವ್ರತರವಾಗುತ್ತಿತ್ತು, ಸಾಂದ್ರವಾಗುತ್ತಿತ್ತು.

ಆದರೆ ಈ ವ್ಯವಸ್ಥೆಯಿಂದ ಅಷ್ಟೇ ಗಂಭೀರ ಸ್ವರೂಪದ ಅನಾನುಕೂಲಗಳೂ ಇದ್ದವೆಂಬುದು ಮೇಲೆಯೇ ಕಾಣುತ್ತದೆ. ತೆರೆಯಿಲ್ಲದೆ, ಒಂದು ದೃಶ್ಯ ಮುಗಿದೊಡನೆ ಆ ದೃಶ್ಯದ ಸ್ಥಳ, ಕಾಲಗಳನ್ನು ಸೂಚಿಸುವ ಫಲಕಗಳನ್ನು ಬದಲಿಸಲು, ಕುರ್ಚಿ ಮೇಜು ಮೊದಲಾದವುಗಳನ್ನು ತರಲು ಅಥವಾ ಒಯ್ಯಲು ಯಾರು ಯಾರೋ ರಂಗದ ಮೇಲೆ ಬರುವದು, ಇಲ್ಲವಾದರೆ ಯಾವಾಗ ಯಾವ ದೃಶ್ಯ ಮುಗಿದು ಯಾವ ದೃಶ್ಯ ಆರಂಭವಾಯಿತೆಂದು ತಿಳಿಯದೆ ಗೊಂದಲವುಂಟಾಗುವುದು—ಇವು ತೀರ ಸುಲಭವಾಗಿ ಊಹಿಸಬಹುದಾದ ಸಂಗತಿಗಳು.

ಸೀನರಿಗಳ ಉಪಯೋಗವಿಲ್ಲದೆ ಆ ಕಾಲದ ನಾಟಕಕಾರರೂ ಪ್ರೇಕ್ಷಕರೂ ಕೂಡಿಯೇ ಚಿತ್ರಮಯತೆಯ ಪರಿಣಾಮದಿಂದ ವಂಚಿತರಾದರು. ಆಧುನಿಕ ರಂಗ-ಭೂಮಿಯ ಮೇಲೆ ಕತ್ತಲೆ-ಬೆಳಕುಗಳ ಸಂಯೋಜನೆ, ವಾಸ್ತವ ಅಥವಾ ಸಾಂಕೇತಿಕ ಸೀನರಿಗಳಿಂದ ನಾಟಕಕಾರ ಸಾಧಿಸಬಲ್ಲ ಪರಿಣಾಮಗಳನ್ನು ಕಂಡವರು ಸಹಜವಾಗಿ ಆ ಕಾಲದ ನಾಟಕ ಕಳೆದುಕೊಂಡುದನ್ನು ಊಹಿಸಬಹುದು. ಆದರೆ ಈ ಅನಾನುಕೂಲವೇ ಇನ್ನೊಂದು ರೀತಿಯಲ್ಲಿ ಷೇಕ್ಸ್ಪಿಯರನ ಕಾಲದ ನಾಟಕಕಾರರಿಗೆ ವರವಾಗಿ ಪರಿಣಮಿಸಿತು. ಯಾಕೆಂದರೆ ಚಿತ್ರಮಯತೆಯ ಪರಿಣಾಮವನ್ನು ಸಾಧಿಸುವ ಸೆಳೆತ

ಒಮ್ಮೆ ಆರಂಭವಾಯಿತೆಂದರೆ ಅದರಿಂದ ತಪ್ಪಿಸಿಕೊಳ್ಳುವದು ಕಠಿಣ. ಈ ಸೆಳೆತದಲ್ಲಿ ನಾಟಕೀಯ ಉದ್ದೇಶ ಹಾಳಾದ ಉದಾಹರಣೆಗಳೂ ಇವೆ. ಆ ಕಾಲದ ನಾಟಕಕಾರನಿಗೆ ಈ ಸೆಳೆತದಿಂದ ಪಾರಾಗುವ ಸಾಮರ್ಥ್ಯ ಯಾವಾಗಲೂ ಜಾಗೃತವಾಗಿರುತ್ತಿತ್ತೆಂದು ಹೇಳಲಿಕ್ಕಾಗುವದಿಲ್ಲ. ಹೀಗಾಗಿ ಆರ್ಡೆನ್ ಅರಣ್ಯವನ್ನು ರಂಗದ ಮೇಲೆ ಒಂದೆರಡು ಬಡಪಾಯಿ ಗಿಡಗಳ ಟೊಂಗೆಗಳಿಂದ, ಸೈನ್ಯವನ್ನು ತಗಡಿನ ಕತ್ತಿ ಹಿಡಿದ ನಾಲ್ಕು ನಟರಿಂದ ಸೂಚಿಸುವದರಲ್ಲೇ ನಾಟಕಕಾರ ತೃಪ್ತನಾಗಬೇಕಾಗಿತ್ತು. ಹೀಗೆ ಆ ಕಾಲದ ನಾಟಕ ಒಂದು ಬಗೆಯ ಸರಳ ಸಾಂಕೇತಿಕತೆಯನ್ನು ಸಾಧಿಸಿತ್ತು. 'ದಿ ಟೆಂಪೆಸ್ಟ್' ನಾಟಕದ ಪ್ರಾಸ್ಪೆರೊ ಒಂದು ವಿಶಿಷ್ಟ ನಿಲುವಂಗಿಯನ್ನು ತೊಟ್ಟು ಬಂದರೆ ಪ್ರೇಕ್ಷಕರೂ ಉಳಿದ ನಟರೂ ಅವನು ಅದೃಶ್ಯವಾಗಿದ್ದಾನೆಂದು ಭಾವಿಸಬೇಕಾಗಿತ್ತು. ಈ ವಿಧಾನ ಎಷ್ಟು ಹಾಸ್ಯಾಸ್ಪದವಿತ್ತೆಂಬುದನ್ನು ಷೇಕ್ಸ್ಪಿಯರ್ ಇನ್ನೊಂದು ಕಡೆ ತಾನೇ ಹುಡುಗಾಟಮಾಡಿ ತೋರಿಸಿದ್ದಾನೆ. 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ನಾಟಕದ ಬಾಟಮ್ ಅಂಥ ಅಂಗಿಯನ್ನು ಹಾಕಿಕೊಂಡು ಬಂದು 'ನಾನು ಅದೃಶ್ಯನಾಗಿದ್ದೇನೆ' ಎಂದು ಉಳಿದವರಿಗೆ ಹೇಳುತ್ತಾನೆ. ರಂಗದ ಮೇಲೆ ಕಡುಬಿಸಿಲು ಬಿದ್ದಿದ್ದರೂ ಮೇಣಬತ್ತಿಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಬಂದ ನಟನೊಬ್ಬನಿಂದ ಅದು ರಾತ್ರಿಯೆಂದು ಪ್ರೇಕ್ಷಕರು ಊಹಿಸಿಕೊಳ್ಳಬೇಕಾಗಿತ್ತು. ಈಗ ನಾವು ಕೇಳಿ ನಗ ಬಹುದಾದ ಇಂಥ ಸಂಗತಿಗಳನ್ನು ಆ ಕಾಲದ ಪ್ರೇಕ್ಷಕರು ಸ್ವಾಭಾವಿಕವೆಂದು ಒಪ್ಪಿ ಕೊಂಡಿದ್ದರು. ಈಗಿನ ರಂಗಭೂಮಿಯ ಮೇಲೆ ಗಾಳಿಗೆ ಹಾರಾಡುವ ಅರಮನೆಯ ಪರದೆ, ಎದುರಿಗೆ ನಿಲ್ಲಿಸಿದ ಧ್ವನಿವರ್ಧಕದ ಗ್ರಾಹಿ, ಅಡಿಯ ದೀಪಗಳು ಮೊದಲಾದವುಗಳ ಬಗ್ಗೆ ಈಗ ನಾವು ಹೇಗೆ ಆಕ್ಷೇಪಿಸುವದಿಲ್ಲವೋ ಅದೇ ರೀತಿ ಅವರೂ ಕೆಲವು ಸಂಗತಿ ಗಳನ್ನು ಪ್ರಶ್ನಿಸದೆ ಒಪ್ಪಿಕೊಂಡಿದ್ದರು. ಹಾಗೆ ಕೆಲ ವಿಷಯಗಳಲ್ಲಿ ವಿನಾಯತಿ ತೋರಿಸದೆ ಕಲೆಯ ಸತ್ವವನ್ನು ಸವಿಯುವ ಶಕ್ತಿ ನಮಗೆ ಬರುವದಿಲ್ಲ.

ಆದರೆ ಇಂಥ ರಂಗಸಜ್ಜಿಕೆಯ ಬದಲಾಗಿ ಆ ಕಾಲದ ನಾಟಕಗಳು ಪ್ರೇಕ್ಷಕನನ್ನು ಇನ್ನೊಂದು ರೀತಿಯಲ್ಲಿ ಮನದಣಿಯೆ ತೃಪ್ತಿಪಡಿಸಿದ್ದವು. ಬಹುಶಃ ರಂಗಸಜ್ಜಿಕೆಯ ಅನುಕೂಲವಿದ್ದಿದ್ದರೆ ಆ ಕಾಲದ ನಾಟಕಗಳು ಈಗಿರುವಷ್ಟು ಕಾವ್ಯಮಯವಾಗಿ ಇರುತ್ತಿದ್ದವೋ ಇಲ್ಲವೊ! ರಂಗಸಜ್ಜಿಕೆಯು ಉಂಟುಮಾಡಬೇಕಾಗಿದ್ದ ಪರಿಣಾಮ ಗಳ ಸಾಧನೆಗಾಗಿ ನಾಟಕಕಾರ ಅನಿವಾರ್ಯವಾಗಿ ತನ್ನ ಕಲಾವಂತಿಕೆಯನ್ನೇ ಅವಲಂಬಿಸಬೇಕಾಯಿತು. ಪ್ರೇಕ್ಷಕರ ಕಲ್ಪಕತೆ, ಭಾವ-ರಾಗಗಳ ಮೇಲೆ ಅವನು ನೇರವಾಗಿ ಪರಿಣಾಮ ಬೀರಿ ಈ ಉದ್ದೇಶ ಸಾಧಿಸಿಕೊಂಡ. ತನ್ನ ಕಾವ್ಯಸಾಮರ್ಥ್ಯ ದಿಂದಲೇ ತನಗೆ ಬೇಕಾದ ಪರಿಸರವನ್ನು ನಿರ್ಮಿಸಿಕೊಂಡ. ಇದು ಎಲಿಜಬೆತ್ ರಾಣಿಯ ಕಾಲದ ನಾಟಕಕಾರರು ನಾಟಕಕ್ಕೆ ನೀಡಿದ ವಿಶಿಷ್ಟ ಹಾಗೂ ಮಹತ್ವದ ಕಾಣಿಕೆ. ಅಥೆಲ್ಲೊ ಹೇಳುವ ಈ ಸಾಲುಗಳನ್ನು ನೋಡಿರಿ :

ಒರೆಗಾಣಿಸಿರಿ ನಿಮ್ಮ ಚಮಕಿಸುವ ಕತ್ತಿಗಳ,
ಹನಿಮಂಜು ತಾಗಿ ಜಂಗು ತಿಂದಾವು.

ಈ ಮಾತು ಬರಿಯ ಮಾತಲ್ಲ. ಈ ಘಟನೆ ನಡೆದದ್ದು ಬೆಳಗಿನ ಸಮಯದಲ್ಲಿ

ಎಂಬುದನ್ನು ಸೂಚಿಸುವ ಕಾವ್ಯವೂ ಹೌದು. ಆಧುನಿಕ ನಾಟಕದ ಪಾತ್ರವೊಂದರ ಬಾಯಲ್ಲಿ ಬಂದಿದ್ದರೆ ತುಂಬ ಅಸಹಜವಾಗಿ ಕಾಣಬಹುದಾಗಿದ್ದ ಈ ಕಾವ್ಯ ಅಥೆಲ್ಲೊನ ಬಾಯಲ್ಲಿ ತುಂಬ ಸಹಜವಾಗಿ ಕಾಣಿಸುತ್ತದೆ. ಆ ಕಾಲದ ನಾಟಕಗಳಲ್ಲಿ ಕಾವ್ಯ ನಾಟಕದ ಅವಶ್ಯವಾದ ಒಂದು ಅಂಗವಾಗಿ, ಉಸಿರಾಗಿ ಬರುತ್ತದೆಯೇ ಹೊರತು ಎಲ್ಲಿಂದಲೋ ಹೊರಗಿನಿಂದ ತಂದು ಸೇರಿಸಿದ್ದಾಗಿಯಲ್ಲ. "ಕಾವ್ಯ ಅವರಿಗೆ ನಾಟಕದ ಭಾಷೆಯ ಸಹಜ ಮಾಧ್ಯಮವಾಗಿತ್ತು, ಅದರಲ್ಲೂ ವಿಶೇಷವಾಗಿ ಉತ್ಕಟ ಕ್ಷಣಗಳಲ್ಲಿ. ಉತ್ತಮ ನಟ ತನ್ನ ವಾಗ್ಮಿತೆಯ ಭಾವನಾತ್ಮಕ ಪರಿಣಾಮದಿಂದ ಪ್ರೇಕ್ಷಕರನ್ನು ತನ್ನೊಂದಿಗೆ ಕರೆದೊಯ್ಯಬಹುದಾಗಿತ್ತು" ಎನ್ನುತ್ತಾನೆ ಜಿ. ಬಿ. ಹ್ಯಾರಿಸನ್. ಆ ಕಾಲದ ಪ್ರೇಕ್ಷಕರ ಅಭಿರುಚಿಯ ಮಟ್ಟದ ಬಗೆಗೆ ತುಂಬ ಉಪೇಕ್ಷೆಯ ಮಾತುಗಳು ಕೇಳಿ ಬಂದಿವೆ. ಈ ಆರೋಪ ಎಲ್ಲ ಕಾಲಗಳಲ್ಲೂ ಬಹುಶಃ ಸಾಮಾನ್ಯವಾಗಿ ಇದ್ದೇ ಇದೆ. ಎಲ್ಲ ಕಾಲದ ನಾಟಕಕಾರರೂ ಇಂಥ ಅಭಿರುಚಿಯ ವಿರುದ್ಧ ಹೋರಾಡಿ ಹೊಸ-ದೊಂದನ್ನು ನಿರ್ಮಿಸಲು, ಎತ್ತರಿಸಲು ಯತ್ನಿಸಿದ್ದಾರೆ. ಆ ಕಾಲದ ಜನತೆಯ ಅಭಿರುಚಿ ಎಂಥದೇ ಇರಲಿ, ಅದು ಅಂದಿನ ನಾಟಕಗಳಲ್ಲಿಯ ಕಾವ್ಯವನ್ನು ಆಸ್ವಾದಿಸಿತ್ತು, ಮೆಚ್ಚಿಕೊಂಡಿತ್ತು. ತನ್ನ ಆತ್ಮವನ್ನು ನಾಟಕದ ಸಾರಸತ್ವದಲ್ಲಿ ಅದ್ದಿ ಮುಳುಗಿಸುವ ಸಾಮರ್ಥ್ಯ, ಕಲ್ಪಕಶಕ್ತಿಗಳ ಜೊತೆಗೆ ಕಾವ್ಯಪ್ರೀತಿಯನ್ನೂ ಅದು ಬೆಳಸಿಕೊಂಡಿತ್ತು. ಇಲ್ಲವಾದರೆ ಜನ ಖಂಡಿತವಾಗಿ ಈ ಕಾವ್ಯಪ್ರವಾಹವನ್ನು ತಡೆಯಬಹುದಾಗಿತ್ತು. ಹಾಗಾಗಿದ್ದರೆ ಷೇಕ್‌ಸ್ಪಿಯರನ ನಾಟಕಗಳನ್ನು ಇಂದಿನ ಸ್ವರೂಪದಲ್ಲಿ ನೋಡುವದು ಸಾಧ್ಯವೇ ಇರಲಿಲ್ಲ.

## ತೆರೆ

ಇನ್ನು ತೆರೆಯ ಉಪಯೋಗವಿಲ್ಲದುದರಿಂದಾದ ಲಾಭಾಲಾಭಗಳನ್ನು ಪರಿಶೀಲಿಸಬಹುದು. ಈ ಹಿಂದೆ ಹೇಳಿದ ಹಾಗೆ ಪೂರ್ಣವಾಗಿ ಅವರಿಗೆ ತೆರೆಯ ಉಪಯೋಗ ಗೊತ್ತೇ ಇರಲಿಲ್ಲವೆಂದಲ್ಲ, ರಂಗದ ಹಿಂಭಾಗದಲ್ಲಿ ಕೆಲವು ಉದ್ದೇಶಗಳಿಗಾಗಿ ಇದನ್ನು ಬಳಸುತ್ತಿದ್ದರು. ಆದರೆ ಇಂದಿನ ರಂಗಭೂಮಿಯಲ್ಲಿಯಂತೆ ಇಡಿಯ ರಂಗದ ಮುಂಬದಿಯನ್ನೆಲ್ಲ ಮುಚ್ಚುವಂಥ ತೆರೆ ಅಲ್ಲಿರಲಿಲ್ಲ. ಒಟ್ಟಿನಲ್ಲಿ ಈ ಸ್ಥಿತಿ ಹೆಚ್ಚುಕಡಿಮೆ ತುಂಬಾ ಅಡಚಣೆಯನ್ನುಂಟುಮಾಡಿತ್ತು.

ತೆರೆಯಿಲ್ಲದ ಮೂಲಕ ಪ್ರತಿಯೊಂದು ಘಟನೆಯೂ ಪ್ರೇಕ್ಷಕರ ಎದುರಿಗೇ ಆರಂಭವಾಗಿ ಮುಕ್ತಾಯವಾಗಬೇಕಾದ ಅನಿವಾರ್ಯತೆ ಪ್ರಾಪ್ತವಾಯಿತು. ಪ್ರತಿಯೊಂದು ದೃಶ್ಯ ಮುಗಿದೊಡನೆಯೂ ಮುಂದಿನ ದೃಶ್ಯಕ್ಕಾಗಿ ರಂಗ ತೆರವಾಗಬೇಕಿತ್ತು. ಹೀಗಾಗಿ ಬದುಕಿದ್ದ ಇಲ್ಲವೆ ಸತ್ತ ಎಲ್ಲ ಪಾತ್ರಗಳನ್ನು ನಾಟಕಕಾರ ಒಂದಲ್ಲ ಒಂದು ನೆವದಿಂದ ಒಳಗೆ ಕಳಿಸುವ ಏರ್ಪಾಡು ಮಾಡಬೇಕಿತ್ತು. ಆಧುನಿಕ ನಾಟಕದಲ್ಲಿ ದೃಶ್ಯವೊಂದರ ಅರ್ಥಪೂರ್ಣ ಭಾಗದಲ್ಲಿ ತೆರೆಯನ್ನು ಒಮ್ಮೆಲೇ ಮೇಲಕ್ಕೆತ್ತಿ ನಟರನ್ನು ತೋರಿಸಿ, ನಾಟಕಕ್ಕೆ ಅವಶ್ಯಕವಿದ್ದ ಮಾತು, ಹಾವಭಾವಗಳು ಮುಗಿದೊಡನೆ ಬೇಕಾದರೆ ಅವರನ್ನು ಅಲ್ಲಿಯೇ ಬಿಟ್ಟು, ಮತ್ತೆ ತೆರೆ ಬೀಳುವಂತೆ ಮಾಡಬಹುದು.




**ಹದಿನೇಳನೆ ಶತಮಾನದ ರಂಗಸ್ಥಳ**
ಫ್ರಾನ್ಸಿಸ್ ಕರ್ಕ್‌ಮನನ 'ದಿ ವಿಟ್ಸ್' ಗ್ರಂಥದ ಮುಖಚಿತ್ರ. ಕಾಲ: ಸುಮಾರು 1672.

ಇದು ತುಂಬ ಪರಿಣಾಮಕಾರಿಯಾದ ವಿಧಾನ. ಆದರೆ ಆ ಕಾಲದ ನಾಟಕಕಾರ ನಿಗೆ ಈ ಅನುಕೂಲವಿರಲಿಲ್ಲ. ತೆರವಾದ ರಂಗದ ಮೇಲೆ ಹೊಸ ದೃಶ್ಯಕ್ಕೆ ಸಂಬಂಧಿಸಿದ ಪಾತ್ರಗಳು ಏನಾದರೂ ನೆವ ಹುಡುಕಿಕೊಂಡು ಬರಬೇಕು. ಅವಶ್ಯವಿದ್ದ ನಾಟಕದ ಭಾಗವನ್ನು ಆರಂಭಿಸಿ, ಮುಗಿಸಿ, ಮತ್ತೆ ಏನಾದರೂ ನೆವ ತೆಗೆದು ಒಳಗೆ ಹೋಗಬೇಕು. ಹೀಗೆ ನಾಟಕಕ್ಕೆ ನಿಜವಾಗಿ ಸಂಬಂಧವಿಲ್ಲದ ಚಲನವಲನಗಳನ್ನೂ ನಾಟಕ ಸಹಿಸಬೇಕಾಗಿತ್ತು. ಇದು ಸುತ್ತುಬಳಸಿನ ಹಾದಿ.

ನಾಟಕದ ದೃಶ್ಯ ಪ್ರಭಾವಶಾಲಿಯಾಗಿ ಬೆಳೆಯುತ್ತ ಶಿಖರವನ್ನು ಮುಟ್ಟಿದಾಗ ತಟ್ಟನೆ ತೆರೆ ಬಿಟ್ಟು ಆಧುನಿಕ ನಾಟಕಕಾರ ಆ ಪರಿಣಾಮದ ತೀವ್ರತೆಯನ್ನು ಒಂದಿಷ್ಟೂ ಮಾಸದಂತೆ ನಮಗೆ ತಾಕಿಸಬಲ್ಲ. ರುದ್ರನಾಟಕದಲ್ಲಿ ಇಂಥ ಪರಿಣಾಮದಿಂದ ಪ್ರೇಕ್ಷಕರ ಬುದ್ಧಿಹೃದಯಗಳನ್ನು ಕಲಕಬಹುದು; ಆಳವಾದ ವಿಚಾರ ಮಾಡಲು ಹಚ್ಚಬಹುದು. ಹೀಗೆ ತಕ್ಷಣ ತೆರೆ ಬೀಳದೆ ನಟರು ನಾಟಕದ ಶಿಖರದ ನಂತರವೂ ಅಲ್ಲೇ ಉಳಿದು, ಆಮೇಲೆ ಒಳಗೆ ಹೋಗುವುದಾದರೆ ಈ ಪರಿಣಾಮದ ತೀವ್ರತೆ ಹಾಗೂ ಸಾಂದ್ರತೆಗಳು ಸಹಜವಾಗಿ ಕಡಿಮೆಯಾಗುತ್ತವೆ, ಕೆಲವು ಸಲ ಹಾಳಾಗುತ್ತವೆ. ಈ ಅನುಕೂಲತೆಗಳಿಲ್ಲದ್ದರಿಂದ ಎಲಿಜಬೆತ್ ಕಾಲದ ಯಾವ ನಾಟಕವೂ ಶಿಖರಕ್ಕೇರಿ ಅಲ್ಲೇ ಮುಕ್ತಾಯಗೊಳ್ಳುವದಿಲ್ಲ. ಬದಲಾಗಿ ಕೆಲವು ಶಾಂತ ಶಬ್ದಗಳ ಮೂಲಕ ಇಲ್ಲವೆ ಪ್ರಶಾಂತ ಸಂಗೀತ ಧ್ವನಿಯ ಮೂಲಕ ಬಿಗಿದಿಟ್ಟ ಭಾವನೆಯ ಸ್ವರವನ್ನು ಮತ್ತೆ ಸಡಿಲಗೊಳಿಸಿ ಪ್ರೇಕ್ಷಕರನ್ನು ನಿತ್ಯಜೀವನಕ್ಕೆ ತಂದು ಮುಟ್ಟಿಸುವ ವಿಧಾನದ ಬಳಕೆ ವಿಶೇಷವಾಗಿ ಕಂಡುಬರುತ್ತದೆ. ಇದು "ಎಲ್ಲ ರಾಗ-ಭಾವಗಳನ್ನೂ ಶಮನ ಮಾಡಿ ಪ್ರಶಾಂತ ಮನಃಸ್ಥಿತಿ"ಯಲ್ಲಿ ಪ್ರೇಕ್ಷಕರನ್ನು ಮನೆಗೆ ಕಳಿಸುವ ಗ್ರೀಕ್ ರುದ್ರನಾಟಕಗಳ ರೀತಿ. ಷೇಕ್‌ಸ್ಪಿಯರ್ ಕಾಲದ ರುದ್ರನಾಟಕಗಳೆಲ್ಲ ಸಾಮಾನ್ಯವಾಗಿ ಸ್ಮಶಾನಯಾತ್ರೆಯ ದೃಶ್ಯದೊಂದಿಗೆ ಮುಕ್ತಾಯವಾಗುತ್ತವೆ. ಹೀಗಾಗಿ ತುಂಬ ಪ್ರಕ್ಷೋಭೆಯನ್ನುಂಟು ಮಾಡುವ ಷೇಕ್‌ಸ್ಪಿಯರನ 'ಹ್ಯಾಮ್ಲೆಟ್', 'ಅಥೆಲ್ಲೊ', 'ಕಿಂಗ್ ಲಿಯರ್' ಮುಂತಾದ ನಾಟಕಗಳ ಕೊನೆಯ ದೃಶ್ಯಗಳು ಸಹ ತುಸು ಸಮಪಾತಳಿಯಲ್ಲಿವೆ, ಶಾಂತವಾಗಿವೆ; ಕೆಲ ಸಲ 'ಮೆಕ್‌ಬೆತ್' ದಲ್ಲಿಯ ಹಾಗೆ ಒಂದಿಷ್ಟು ಶಕ್ತಿಹೀನವಾಗಿವೆ.

ರಂಗದ ಮೇಲಿಂದ ಸತ್ತ ಪಾತ್ರಗಳ ದೇಹಗಳನ್ನು ಒಳಗೆ ಒಯ್ದು ರಂಗವನ್ನು ತೆರವು ಮಾಡುವದು ಅನಿವಾರ್ಯವಾಗಿತ್ತಾದ್ದರಿಂದ ರುದ್ರನಾಟಕಗಳಲ್ಲಿ ಸಾಮಾನ್ಯವಾಗಿ ಗೌರವದೊಂದಿಗೆ ಅಂಥ ದೇಹಗಳನ್ನು ಒಳಗೊಯ್ಯುವ ಏರ್ಪಾಡು ಕಾಣಿಸುತ್ತದೆ. ಉಳಿದ ನಟರು ಆ ದೇಹವನ್ನು ಹಿಂಬಾಲಿಸುತ್ತಿದ್ದರು. 'ಕೊರಿಯೊಲೇನಸ್' ನಾಟಕದ ಅಂತ್ಯದೃಶ್ಯದಲ್ಲಿ ಕೊರಿಯೊಲೇನಸನ ಕೊಲೆಯಾದ ತರುವಾಯ ಅಫೀಡಿಯಸ್ ಅವನ ಹತದೇಹದ ಮೇಲೆ ತುಳಿದಾಡಿ, ತನ್ನ ಸೇಡಾರಿತೆಂದು ತಣ್ಣಗಾಗಿ, ತನ್ನ ಜೊತೆಯಲ್ಲಿದ್ದ ಸೈನಿಕರಲ್ಲಿ ಮೂರು ಜನ ಮಹಾವೀರರು ಮುಂದೆ ಬಂದು ಶವವನ್ನು ಗೌರವದಿಂದ ಹೊತ್ತೊಯ್ಯಲು ನೆರವಾಗಬೇಕೆಂದು ಕೇಳುತ್ತಾನೆ. ಹಾಗೇ 'ಹ್ಯಾಮ್ಲೆಟ್', 'ಕಿಂಗ್ ಲಿಯರ್' ಮೊದಲಾದ ನಾಟಕಗಳಲ್ಲೂ ಇಂಥ ಮಾತುಗಳನ್ನು ಕಾಣಬಹುದು.

ಒಂದೊಂದು ಸಲ ನೇಪಥ್ಯದಲ್ಲಾಗಲಿ, ರಂಗದ ಹಿಂಭಾಗದಲ್ಲಾಗಲಿ ದುರಂತ ಸಂಭವಿಸಿದ್ದರೆ ಮೃತದೇಹಗಳನ್ನು ಅಲ್ಲಿದ್ದ ತೆರೆಯಿಂದ ಮುಚ್ಚಲಾಗುತ್ತಿತ್ತು. 'ಅಥೆಲ್ಲೊ' ನಾಟಕದ ಕೊನೆಯ ಭಾಗ ನಡೆಯುವದು ಹಿಂಬದಿಯ ರಂಗದ ಮೇಲಿನ ಡೆಸ್ಡೆಮೋನಳ ಶಯ್ಯಾಗೃಹದಲ್ಲಿ. ಡೆಸ್ಡೆಮೋನ, ಅಥೆಲ್ಲೊ, ಇಮಿಲಿಯಾ ಈ ಮೂವರೂ ಸಾಯುವದು ಅಲ್ಲಿಯೇ. ಕೊನೆಗೆ ಲೊಡೊವಿಕೊ ಶವಗಳನ್ನು ಮುಚ್ಚಲು ಆಜ್ಞಾಪಿಸುತ್ತಾನೆ, ಹೊತ್ತುಕೊಂಡು ಹೋಗುವದಕ್ಕಲ್ಲ. ಇದರಿಂದ ತೆರೆ ಬಿಟ್ಟು ದೇಹಗಳನ್ನು ಮುಚ್ಚಲಾಯಿತೆಂದು ಸ್ಪಷ್ಟವಾಗುತ್ತದೆ. ನಂತರ ಆ ಪಾತ್ರಗಳ ನಟರು ಪ್ರೇಕ್ಷಕರಿಗೆ ಕಾಣದಂತೆ ಎದ್ದು ಒಳಗೆ ಹೋಗುತ್ತಿದ್ದರು. ಆದರೆ ರಂಗದ ಬದಿಗಳು ಬಯಲಿಗೆ ತೆರೆದಿದ್ದುದರಿಂದ ಅಲ್ಲಿದ್ದ ಪ್ರೇಕ್ಷಕರು ಹೀಗೆ ಸತ್ತ ಪಾತ್ರಗಳು ಎದ್ದು ಒಳಗೆ ಹೋಗುವದನ್ನು ನೋಡಬಹುದಾಗಿತ್ತು. ಆದರೆ ಎಲ್ಲ ಸಂದರ್ಭಗಳಲ್ಲೂ ಈ ತೆರೆಯನ್ನು ಏಕೆ ಬಳಸಿಕೊಳ್ಳಲಿಲ್ಲವೆಂಬುದಕ್ಕೆ ಕಾರಣಗಳನ್ನು ಊಹಿಸಲಿಕ್ಕಾಗುವದಿಲ್ಲ.

ನಾಟಕದ ವಾತಾವರಣವನ್ನು ನಿರ್ದೇಶಿಸುವಂಥ ಬೇರೆ ಬೇರೆ ಬಣ್ಣದ ತೆರೆಗಳನ್ನು ರಂಗದಲ್ಲಿ ಇಳಿಬಿಡುವ ಒಂದು ಪರಿಪಾಠವಿತ್ತೆಂದು ಕೆಲವು ಸಂಶೋಧಕರ ಮತ. ಉದಾಹರಣೆಗೆ, ದುರಂತನಾಟಕಕ್ಕೆ ಕಪ್ಪು ಬಣ್ಣದ ಪರದೆ. ಆದರೆ ಈ ವಿಷಯದಲ್ಲಿ ಖಚಿತವಾಗಿ ಏನೂ ತಿಳಿದಿಲ್ಲ.

## ಪಾತ್ರಸೃಷ್ಟಿ

ಷೇಕ್‌ಸ್ಪಿಯರ್ ಪಾಲುಗಾರನಾಗಿದ್ದ ನಾಟಕದ ಕಂಪನಿಯ ಹೆಸರು 'ಲಾರ್ಡ್ ಚೇಂಬರ್ಲೇನ್ಸ್-ಕಿಂಗ್ಸ್ ಮೆನ್' ಎಂದು. ಈ ಕಂಪನಿಗಾಗಿಯೇ ಷೇಕ್‌ಸ್ಪಿಯರ್ ತನ್ನ ನಾಟಕಗಳನ್ನು ಬರೆದ. ಆದ್ದರಿಂದ ಕಂಪನಿಯಲ್ಲಿದ್ದ ನಟರಿಗೆ ಸರಿಹೊಂದುವಂಥ ಪಾತ್ರಗಳನ್ನೇ ರಚಿಸಬೇಕಾದ್ದು ವ್ಯಾವಹಾರಿಕವಾಗಿ ಅವನ ಜವಾಬ್ದಾರಿಯಾಗಿತ್ತು. ಕೆಲವು ಸಲ ಕಂಪನಿಯಲ್ಲಿಯ ಯಾವ ನಟನಿಗೂ ಸರಿ ಹೊಂದದ ಪಾತ್ರವನ್ನು ರಚಿಸಬೇಕಾದ ಸಂದರ್ಭ ಬಂದಾಗ ಸಹಜವಾಗಿಯೇ ಹಿಂದೆ ಮುಂದೆ ನೋಡಬೇಕಾಗುತ್ತಿತ್ತು. ಬದಲಾಗಿ ತನ್ನ ಕಂಪನಿಯಲ್ಲಿದ್ದ ನಟರ ವೈಶಿಷ್ಟ್ಯಗಳ ಪೂರ್ಣ ಪ್ರಯೋಜನ ಪಡೆಯಲೂ ಅವನು ಹವಣಿಸಿದ. ಷೇಕ್‌ಸ್ಪಿಯರನ ನಾಟಕಗಳಲ್ಲಿ

ಕೆಲವು ಬಗೆಯ ಪಾತ್ರಗಳು ಪುನಃ ಪುನಃ ಬರುವದು ಈ ದೃಷ್ಟಿಯಿಂದ ಕುತೂಹಲಕರವಾದ ಅಂಶ. ಆ ಕಂಪನಿಯಲ್ಲಿ ಇನ್ನೊಬ್ಬ ಪಾಲುಗಾರನಾಗಿದ್ದ ರಿಚರ್ಡ್ ಬರ್ಬೇಜ್ ಎಂಬಾತ ದುರಂತ ಪಾತ್ರಗಳ ಸಮರ್ಥ ನಟ. ಷೇಕ್‌ಸ್ಪಿಯರ್ ಅವನಿಗೆಂದೇ ಕೆಲವು ಪಾತ್ರಗಳನ್ನೂ ನಾಟಕಗಳನ್ನೂ ಬರೆದ ಹಾಗೆ ಕಾಣುತ್ತದೆ. ಬರ್ಬೇಜ್ ವಯಸ್ಸಿನಲ್ಲಿ, ಅನುಭವದಲ್ಲಿ ಮಾಗಿದ ಹಾಗೆ ಆಥೆಲ್ಲೊ, ಲಿಯರ್, ಪ್ರಾಸ್ಪೆರೊ ಮೊದಲಾದ ಮಾಗಿದ ನಡುವಯಸ್ಸಿನ ಪಾತ್ರಗಳನ್ನು ಅವನಿಗಾಗಿ ಬರೆದನೆಂದು ಊಹಿಸಬಹುದಾಗಿದೆ.

ಸ್ತ್ರೀಪಾತ್ರಗಳ ವಿಷಯದಲ್ಲೂ ಕೆಲವು ಮಹತ್ವದ ಸಂಗತಿಗಳು ಬಯಲಿಗೆ ಬಂದಿವೆ. ಆ ಕಾಲದಲ್ಲಿ ನಾಟಕ ಕುಲವಂತರು ಮಾಡಬಹುದಾದ ಉದ್ಯೋಗವೆಂದು ಇನ್ನೂ ಮನ್ನಣೆ ಪಡೆದಿರಲಿಲ್ಲ. ಸ್ತ್ರೀಪಾತ್ರಗಳನ್ನು ಅಭಿನಯಿಸಲು ಹೆಣ್ಣುಮಕ್ಕಳು ಇನ್ನೂ ಮುಂದೆ ಬಂದಿರಲಿಲ್ಲ. ಹದಿನೆಂಟನೆಯ ಶತಮಾನದಲ್ಲಿ ಸಾರಾ ಸಿಡಾನ್ಸ್‌ರಂಥ ಪ್ರತಿಭಾವಂತರಾದ ಕಲಾವಿದೆಯರು ರಂಗಕ್ಕೆ ಬಂದು, ಅಭಿನಯಕ್ಕೊಂದು ಗೌರವ ತಂದುಕೊಡುವ ತನಕ ಇನ್ನೂ ಧ್ವನಿ ಗಡುಸಾಗದ ಎಳೆಯ ಹುಡುಗರಾಗಲಿ, ವಯಸ್ಸಾಗದ ತರುಣರಾಗಲಿ ಸ್ತ್ರೀಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಸ್ತ್ರೀಪಾತ್ರಗಳನ್ನು ಗಂಡಸರು ವಹಿಸುವದೇ ಕಷ್ಟದ ಕೆಲಸ. ಅದರಲ್ಲೂ ಅನುಭವ ಮಾಗದ, ನಾಟಕಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾರದ ಎಳೆಯ ಹುಡುಗರಿಗೆ ತರಬೇತಿ ಕೊಟ್ಟು ಆಡಿಸುವದು ಇನ್ನೂ ಕಠಿಣ ಕೆಲಸ. ಸೂಕ್ಷ್ಮ ಪಾತ್ರಗಳ ಅಭಿನಯವನ್ನು ಎಳೆಯರಿಂದ ಅಪೇಕ್ಷಿಸುವದು ಆ ಕಾಲದ ನಾಟಕಕಾರನಿಗೆ ತುಂಬ ತೊಂದರೆಯಾಗಿರಬೇಕು. ಧ್ವನಿ ಬಿರುಸಾಗುವವರೆಗೆ ಮಾತ್ರ ತರುಣರು ನಾಯಿಕೆಯರ ಪಾತ್ರ ವಹಿಸಬಹುದಾಗಿತ್ತಾದ್ದರಿಂದ ಷೇಕ್‌ಸ್ಪಿಯರ್ ಈ ಅವಕಾಶವನ್ನು ಬಳಸಿಕೊಂಡು ಅವರಿಗಾಗಿ ರೊಸಲಿಂಡ್, ವಯೋಲ, ಮಿರ್‍ಯಾಂಡ ಮೊದಲಾದ ಎಳೆವಯಸ್ಸಿನ ನಾಯಿಕೆಯರನ್ನು ಸೃಷ್ಟಿ ಮಾಡಿದ. ಮಧುರಸ್ವರದ ಈ ಎಳೆಯರಿಗಾಗಿ ಸವಿಯಾದ ಹಾಡುಗಳನ್ನು ಬರೆದ. ಹಾಗೇ ಸರಿಯಾಗಿ ತರಬೇತಿ ಪಡೆದ ಹೆಚ್ಚು ಜನ ಎಳೆಯರು ದುರ್ಲಭವೆನಿಸಿದ್ದರಿಂದಲೇ ಏನೋ, ಷೇಕ್‌ಸ್ಪಿಯರನ ನಾಟಕಗಳಲ್ಲಿ ಸ್ತ್ರೀಪಾತ್ರಗಳ ಸಂಖ್ಯೆ ಎರಡು ಮೂರಕ್ಕಿಂತ ಹೆಚ್ಚಿಗೆ ಹೋಗುವದಿಲ್ಲ.

ಷೇಕ್‌ಸ್ಪಿಯರನ ನಾಟಕಗಳಲ್ಲಿ ಕಾಣಬರುವ, ಅವನಿಗೆ ಅತ್ಯಂತ ಮಜಾ ಎನಿಸಿರಬಹುದಾದ ಇನ್ನೊಂದು ತಂತ್ರವೆಂದರೆ ತನ್ನ ಎಳೆವರೆಯದ ನಾಯಿಕೆಯರನ್ನು ಹುಡುಗರ ವೇಷದಲ್ಲಿ ರಂಗದ ಮೇಲೆ ತರುವದು. ಇದು ಆ ಪಾತ್ರ ನಿರ್ವಹಿಸುತ್ತಿದ್ದ ಹುಡುಗರ ಅನುಕೂಲಕ್ಕೆಂದೇ ಹೂಡಿದ ತಂತ್ರವಾಗಿರಬೇಕೆಂಬುದು ಸ್ಪಷ್ಟವಿದೆ. ಆದರೆ ಆ ಹುಡುಗರಿಗೆ ಗಂಡಿನ ವೇಷದಲ್ಲಿರುವ ಹೆಣ್ಣಿನ ಪಾತ್ರ ನಿರ್ವಹಿಸುವ ಇನ್ನೂ ಹೆಚ್ಚು ಕಠಿಣವಾದ ಕೆಲಸವನ್ನು ನಿಭಾಯಿಸಿಕೊಂಡು ಹೋಗುವ ಸಾಮರ್ಥ್ಯ ಇತ್ತೋ ಇಲ್ಲವೋ ತಿಳಿಯದು. ಆದರೆ ಅವರು 'ದಿ ಮರ್ಚೆಂಟ್ ಅಫ್ ವೆನಿಸ್'ನ ಪೋರ್ಶಿಯಾ, ನೆರಿಸ್ಸಾರ ವೇಷದಲ್ಲಿ ಇರುವುದಕ್ಕಿಂತ ಡಾಕ್ಟರ್ ಬೆಲಾರಿಯೊ ಹಾಗೂ ಅವನ ಕಾರಕೂನನ ವೇಷದಲ್ಲೇ ಹೆಚ್ಚು ಆರಾಮಾಗಿದ್ದರೆಂದು ಕಾಣುತ್ತದೆ.

ಈ ಸಣ್ಣ ಹುಡುಗರಿಗೆ ಡೆಸ್ಡೆಮೋನ, ಲೇಡಿ ಮೆಕ್‌ಬೆತ್ ಮೊದಲಾದ ಅತ್ಯಂತ

ಸಂಕೀರ್ಣ ಹಾಗೂ ಸೂಕ್ಷ್ಮ ಪಾತ್ರಗಳನ್ನು ಸಮರ್ಥವಾಗಿ ತೂಗಿಸಿಕೊಂಡು ಹೋಗುವ ತಾಕತ್ತು ಇತ್ತೇ ಎಂದು ಪಂಡಿತರು ಶಂಕಿಸಿದ್ದಾರೆ. ಷೇಕ್ಸ್ಪಿಯರನ ನಾಟಕಗಳಲ್ಲಿ ಈ ಸಂಶಯಕ್ಕೆ ಆಧಾರಗಳು ಕಾಣುವದಿಲ್ಲ. ಹಾಗಿದ್ದ ಪಕ್ಷಕ್ಕೆ ಅವನ ನಂತರದ ನಾಟಕಗಳಲ್ಲಿ ಅಂಥ ಪಾತ್ರಗಳು ಹೆಚ್ಚು ಅಮುಖ್ಯವಾಗಬಹುದಿತ್ತು, ಇಲ್ಲವೇ ಅವುಗಳ ಸಂಖ್ಯೆ ಇನ್ನೂ ಕಡಿಮೆಯಾಗಬಹುದಿತ್ತು. ಬಹುಶಃ ಅಂಥ ಹುಡುಗರಿಗೆ ಉಚ್ಚ ಮಟ್ಟದ ತರಬೇತಿ ಕೊಡುವ ಏರ್ಪಾಡು ಇದ್ದಿರಬೇಕು. ಅಥವಾ ಅಂದಿನ ಕಾಲದ ಅಭಿನಯದ ಮಟ್ಟವೇ ಒಟ್ಟಿನಲ್ಲಿ ಅಷ್ಟು ಉಚ್ಚ ಮಟ್ಟದ್ದಾಗಿರಲಿಕ್ಕಿಲ್ಲ.

ಕೊನೆಗೆ, ನಾಟಕವೆಂದರೆ, ಅದು ಯಾವ ನಾಟಕವೇ ಇರಲಿ, ಕೆಲವೊಂದು ರೂಢಿಗತ ಸಂಪ್ರದಾಯಗಳನ್ನು ಒಪ್ಪಬೇಕಾದ್ದು ಅನಿವಾರ್ಯ. ನಾಟಕಕಾರ, ಪ್ರೇಕ್ಷಕ ಇಬ್ಬರೂ ತಮ್ಮ ಕಲ್ಪಕಶಕ್ತಿಯನ್ನು ಬಳಸದೇ ನಿರ್ವಾಹವಿಲ್ಲ. ಷೇಕ್ಸ್ಪಿಯರನೂ ತನ್ನ ಕಾಲದ ರೂಢಿಗಳನ್ನು ಒಪ್ಪಿಕೊಂಡ. ಅವುಗಳನ್ನು ತನ್ನಲ್ಲಿದ್ದ ಅಸಾಮಾನ್ಯ ಪ್ರತಿಭೆಯನ್ನು ಪ್ರಕಟಪಡಿಸಲು ದುಡಿಸಿಕೊಂಡ. ಅದಿದ್ದಂತೆ ನಾಟಕವನ್ನು ಸ್ವೀಕರಿಸಿ, ಅದೆಂದೂ ಕಂಡಿರದ ಹಲವು ಅಂಶಗಳನ್ನು ಅದಕ್ಕೆ ಧಾರೆಯೆರೆದ. ರೂಢಿ, ಪರಂಪರೆಗಳು ಅವನ ನಾಟ್ಯಕಲೆಯ ಮೇಲೆ ತಮ್ಮ ಪ್ರಭಾವ ಬೀರಿರುವದೇನೋ ನಿಜ, ಆದರೆ ಅವೆಂದೂ ಅವನಿಗೆ ಕಾಲ್ತೊಡಕಾಗಿ ಪರಿಣಮಿಸಲಿಲ್ಲ.

## ಒಂದು ಪ್ರಶ್ನೆ

ಇಷ್ಟೆಲ್ಲ ವಿಚಾರ ಮಾಡಿದ ಮೇಲೆ ಮೂಲಭೂತವಾದ ಒಂದು ಪ್ರಶ್ನೆ ಏಳುತ್ತದೆ. ಷೇಕ್ಸ್ಪಿಯರನ ಕಾಲದ ರಂಗಭೂಮಿ, ಪ್ರೇಕ್ಷಕವರ್ಗ, ಅವನ ಜೀವನ ಚರಿತ್ರೆ ಮೊದಲಾದ ಅಂಶಗಳ ನಮ್ಮ ತಿಳುವಳಿಕೆ ನಿಜವಾದ ಷೇಕ್ಸ್ಪಿಯರನ ನಾಟಕದ ಆತ್ಮವನ್ನು ಹೆಚ್ಚು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ನೆರವಾದೀತೆ ?––ಎಂಬುದೇ ಆ ಪ್ರಶ್ನೆ. ಹಾಗೆ ನೋಡಿದರೆ ಇಂಥ ಶುಷ್ಕ ಪಾಂಡಿತ್ಯದಿಂದ ಅಷ್ಟೇನೂ ನೆರವಾಗುವದಿಲ್ಲವೆಂದೇ ಹೇಳಬೇಕು. ಇಂಥ ಪಾಂಡಿತ್ಯ ಎಷ್ಟೋ ಸಲ ಸಾಹಿತ್ಯವಿಮರ್ಶೆಯನ್ನು ತಪ್ಪುಹಾದಿಗೆ ಎಳೆಯುವ ಸಂಭವವೂ ಇಲ್ಲದಿಲ್ಲ. ಷೇಕ್ಸ್ಪಿಯರನ ಯಾವದೋ ಒಂದು ಭಾಗವನ್ನು ಓದಿದಾಗ ಅದು ಇಡಿಯ ನಾಟಕದೊಂದಿಗೆ ಯಾವ ಸಂಬಂಧವನ್ನೂ ಹೊಂದಿಲ್ಲವೆಂದು ನಮಗನಿಸಿತೆಂದು ಭಾವಿಸೋಣ. ಹಾಗಾದರೆ ಈ ಭಾಗ ಯಾಕೆ ಬಂತು ಎಂದು ಯೋಚಿಸಿದಾಗ ಷೇಕ್ಸ್ಪಿಯರ್ ತನ್ನ ಕಥೆಗಾಗಿ ಬಳಸಿಕೊಂಡ ಮೂಲ ಸಾಮಗ್ರಿಯಲ್ಲಿ ಅದು ಇತ್ತೆಂದು ನಮ್ಮ ಪಾಂಡಿತ್ಯ ತಿಳಿಸುತ್ತದೆ. ಓಹೋ ! ಮೂಲದಲ್ಲಿದ್ದುದರಿಂದ ಬಳಸಿಕೊಂಡಿದ್ದಾನೆ, ಎಂದು ಸಮಾಧಾನ ಹೇಳಿಕೊಂಡು ಕ್ಷಮಿಸಿ, ಆ ಘಟನೆಯನ್ನು ತೆಗೆದುಕೊಂಡುದೇಕೆ, ಅದನ್ನು ಯಾವ ಪ್ರಯೋಜನಕ್ಕಾಗಿ ಬಳಸಿಕೊಂಡ ಎಂಬ ಪ್ರಶ್ನೆಗಳನ್ನು ಕೇಳದೇ ಬಿಡಬಹುದು. ಹಾಗೇ ಬರಿಯ ರಂಗಭೂಮಿಯ ಅನುಕೂಲತೆಗಾಗಿ ಒಂದು ಅನವಶ್ಯಕ ದೃಶ್ಯವನ್ನು ಸೇರಿಸಿದನೆಂದು ಅರಿತುಕೊಂಡು ಆ ದೃಶ್ಯವು ನಾಟಕದಲ್ಲಿ ವಹಿಸುವ ಕೆಲಸವೇನೆಂದು ನೋಡದೇ ಬಿಡಬಹುದು. ಇನ್ನೊಂದು ಯಾವುದೊ ಅಸಂಬದ್ಧವಾದ ಭಾಗವನ್ನು ತನ್ನ ಪ್ರೇಕ್ಷಕರ ಪ್ರೀತ್ಯರ್ಥವಾಗಿ ಬರೆದನೆಂದು ಸಮಾಧಾನ

ಹೇಳಿಕೊಳ್ಳಬಹುದು. ತನ್ನ ಪ್ರೇಕ್ಷಕರನ್ನು ಸಮಾಧಾನ ಪಡಿಸಲೆಂದು ಬರೆದದ್ದು ಅವನಿಗೂ ಪ್ರಿಯವಾಗಿರಬಹುದಲ್ಲ ಎಂಬುದನ್ನು ನಾವು ವಿಚಾರಿಸುವದಿಲ್ಲ.

ಒಂದು ಕಲಾಕೃತಿಯು ತನ್ನಷ್ಟಕ್ಕೇ ತಾನು ಸ್ವಯಂಪೂರ್ಣವಾಗಿರುತ್ತದೆ. ಅದನ್ನು ಅರ್ಥಮಾಡಿಕೊಳ್ಳಲು ನಮ್ಮೆದುರಿಗಿರುವ ಕೃತಿಯೊಂದೇ ಸಾಕು, ಇನ್ನೇನೂ ಬೇಕಾಗಿಲ್ಲ. ಆದರೆ ಇಂಥ ಜ್ಞಾನ ಎಷ್ಟೇ ಅಮುಖ್ಯವೆಂದರೂ, ಒಂದು ಕೃತಿಯನ್ನು ಹೆಚ್ಚು ಚೆನ್ನಾಗಿ ಅರ್ಥಮಾಡಿಕೊಳ್ಳಲು ನೆರವಾಗಲಾರದೆಂದು ಖಂಡತುಂಡವಾಗಿ ಹೇಳಲಿಕ್ಕಾಗುವದಿಲ್ಲ. 'ಆ್ಯಂಟೊನಿ ಅಂಡ್ ಕ್ಲಿಯೊಪಾಟ್ರ' ನಾಟಕವನ್ನೇ ತೆಗೆದುಕೊಳ್ಳೋಣ. ಬ್ರ್ಯಾಡ್ಲಿಯವರಿಂದ ಮೊದಲು ಮಾಡಿ ಸಾಮಾನ್ಯವಾಗಿ ಎಲ್ಲ ವಿಮರ್ಶಕರೂ ಷೇಕ್ಸ್ಪಿಯರನ ನಾಟಕಗಳಲ್ಲೆಲ್ಲ ಇದು ರಚನೆಯ ದೃಷ್ಟಿಯಿಂದ ತುಂಬ ದೋಷಪೂರ್ಣವಾದುದೆಂದು ಒಪ್ಪಿಕೊಂಡಿದ್ದಾರೆ. ನಲವತ್ತೆರಡು ಸಣ್ಣ ಸಣ್ಣ ದೃಶ್ಯಗಳಲ್ಲಿ ನಾಟಕದ ಪರಿಣಾಮ ಸಾಂದ್ರವಾಗದೆ ಹರಿಹಂಚಾಗಿದೆಯೆಂದು ಅದಕ್ಕೆ ಅವರು ಕೊಡುವ ಕಾರಣ. ಆದರೆ ಷೇಕ್ಸ್ಪಿಯರನ ರಂಗಭೂಮಿಯ ಸರಿಯಾದ ಕಲ್ಪನೆ ನಾಟಕವನ್ನು ಈ ಅಪವಾದದಿಂದ ಮುಕ್ತಮಾಡಲು ನೆರವಾಗಬಹುದು. ಆಗ ರಂಗ-ಭೂಮಿಯ ಮೇಲೆ ತೆರೆ ಸೀನರಿಗಳ ಕಷ್ಟವಿರಲಿಲ್ಲ. ಹೀಗಾಗಿ ಒಂದರ ಹಿಂದೊಂದು ದೃಶ್ಯಗಳು ಯಾವ ಅಡೆತಡೆಯಿಲ್ಲದೆ ತೀವ್ರಗತಿಯಿಂದ ಮುಗಿದು ಹೋಗುತ್ತಿದ್ದುದರಿಂದ ನಾಟಕದ ಪರಿಣಾಮದ ಸಾಂದ್ರತೆ ಅಳಕವಾಗುವದಕ್ಕೆ ಕಾರಣವೇ ಇರಲಿಲ್ಲ. ಇಂದಿನ ರಂಗಭೂಮಿಯ ಮೇಲೆ, ಇಂದಿನ ಸಲಕರಣೆಗಳೊಂದಿಗೆ ಈ ನಾಟಕವನ್ನಾಡಿದರೆ ಸಾಂದ್ರತೆ ಹರಿಹಂಚಾಗಬಹುದು. ಆದರೆ ಆ ಕಾಲದ ರಂಗಭೂಮಿಯ ಮೇಲೂ ಇಂಥದೇ ಪರಿಣಾಮವಾಗುತ್ತಿತ್ತೆಂದು ಖಂಡಿತ ಹೇಳಲಿಕ್ಕಾಗುವುದಿಲ್ಲ. ನಾವು ಈ ನಿಲುವಿಗೆ ಬರಬೇಕಾದರೆ ಷೇಕ್ಸ್ಪಿಯರ್ ಕಾಲದ ರಂಗಭೂಮಿಯ ತಿಳುವಳಿಕೆ ಇಲ್ಲಿ ಹೇಗೆ ನೆರವಾಯಿತೆಂದು ನೋಡಬಹುದು.

ಅಲ್ಲದೇ ಷೇಕ್ಸ್ಪಿಯರನಂಥ ಮಹಾಕವಿಯ ವಿಷಯದಲ್ಲಿ ಅವನ ವೈಯಕ್ತಿಕ ಜೀವನ, ಅವನ ಕಾಲ, ಅವನು ಕೆಲಸ ಮಾಡಿದ ರಂಗಭೂಮಿ, ಆ ನಾಟಕಗಳಿಗೆ ಹಣ ಕೊಟ್ಟು ನೋಡಿದ ಜನರ ಮನೋಭಾವ ಮೊದಲಾದವುಗಳ ವಿಷಯದಲ್ಲಿ ನಮಗೆಲ್ಲ ಆಸ್ಥೆಯಿರುವದು ಸಹಜವೇ. ಆದ್ದರಿಂದ ಯಾವ ಪಾಂಡಿತ್ಯವನ್ನೇ ಆಗಲಿ ಅದು ತರುವ ಗಂಡಾಂತರಗಳನ್ನು ನೆನೆದು ನಿರಾಕರಿಸಲಿಕ್ಕಾಗುವದಿಲ್ಲ.

### ಮುಖ್ಯ ಆಕರಗಳು

1. *Oxford Lectures on Poetry*, A. C. Bradley.
2. *Introducing Shakespeare*, G. B. Harrison.
3. *A Companion to Shakespeare Studies*, ed. Granville-Barker and G. B. Harrison.
4. *Aspects of Shakespeare* (ed.).
5. 'Shakespeare's Stage in its Bearing upon His Drama' (Appendix to the Warwick editions), C. H. Herford.

ಇನ್ನೂ ಕೆಲವು ಸಣ್ಣ ಪುಟ್ಟ ಲೇಖನಗಳು.



# ಶಿಕ್ಷಕರ ಕೈಯಲ್ಲಿ ಷೇಕ್ಸ್‌ಪಿಯರ್

## ಎಚ್. ವೈ. ಶಾರದಾಪ್ರಸಾದ್



ಅಧಿಕಾರಿ ಮನೆ ಕಟ್ಟವರೆ ಕೋರೆಗಣ್ಣಿಂದ ಜನ ನೋಡುವ ಕಾಲ ಬರುವ ಮುಂಚೆ ದೊಡ್ಡ ಅಧಿಕಾರಿ ಕಟ್ಟಿಕೊಂಡಿದ್ದ ಮನೆ. ದೊಡ್ಡ ಬಯಲು, ಕಲ್ಲುಕಟ್ಟಡ. ಅದರಲ್ಲಿಯೇ ನಮ್ಮ ಶಾಲೆ. ಆ ಕಾಲದಲ್ಲಿ ಅಡಿಗೆಮನೆಯನ್ನು ವಿಶಾಲವಾಗಿ ಕಟ್ಟು ತ್ತಿದ್ದರು, ಯಜಮಾನತಿಯ ಕಾರುಬಾರು ಅಲ್ಲಿಯೇ ನಡೆಯುತ್ತಿದ್ದುದರಿಂದ. ಅಡಿಗೆ ಮನೆಯಲ್ಲಿಯೇ ನಮ್ಮ ತರಗತಿಯಿತ್ತು. ಒಲೆಯ ಸಾಲು ಕಿತ್ತಿದ್ದರು. ಆದರೆ ಎರಡು ಒರಳುಕಲ್ಲು ನೆಲದಲ್ಲಿದ್ದವು. ಒಂದರ ಮೇಲೆ ನಮ್ಮ ಬೆಂಚು ಹಾಸಿತ್ತು. ಆ ಶಾಲೆಯಲ್ಲಿ ನಾನು ಕೆಲವೇ ತಿಂಗಳಿದ್ದೆ. ಒರಳುಕಲ್ಲಿನ ತರಗತಿಯಂತೆ ಅಚ್ಚಳಿಯದೆ ಮನಸ್ಸಿನಲ್ಲಿ ನಿಂತಿರುವುದೆಂದರೆ ಚಂದ್ರಶೇಖರಯ್ಯನವರ ನೆನಪು.

ಚಂದ್ರಶೇಖರಯ್ಯ ನಮಗೆ ಆರೋಗ್ಯಶಾಸ್ತ್ರ ಹೇಳುತ್ತಿದ್ದರು. ಆದರೆ ಅವರು ಆರೋಗ್ಯ ಹೇಳಲು ತಕ್ಕವರೇ ಎಂಬಂಥ ಮೈಕಟ್ಟು! ಬಡಕಲು ಮನುಷ್ಯ. ಆ ಕಾಲದ ಬಳಕೆಯ ಕಡ್ಡಿಮೀಸೆ. ಕರಿಯ ಅಥವಾ ಕೆಂಪು ಬಣ್ಣದ ಕುತ್ತಿಗೆ ಪಟ್ಟಿ. ಕಾಲಿಗೆ ಕಂದು ಬಣ್ಣದ ಕ್ಯಾನ್‌ವಾಸ್ ಮುಚ್ಚಳ. ತಲೆಯ ಮೇಲೆ ಪೇಟ. ಚಂದ್ರಶೇಖರಯ್ಯನವರ ಮೇಲೆ ಮುಖ್ಯೋಪಾಧ್ಯಾಯರಿಗೆ ಅಷ್ಟು ಕರುಣೆಯಿರ ಲಿಲ್ಲವೆಂದು ಕಾಣುತ್ತೆ. ಯಾವ ಅಧ್ಯಾಪಕರು ರಜೆ ತೆಗೆದುಕೊಂಡರೂ ಇವರನ್ನೇ ಬದಲಿಗೆ ಕಳಿಸುತ್ತಿದ್ದರು. ಅವರ ಬದಲಿ-ಸರದಿ ಬಂತೆಂದರೆ ನಮಗೊಂದು ಸಂಭ್ರಮ. ಆರೋಗ್ಯದ ಗಂಟೆಯಲ್ಲಿ ಅಯೋರ್ಟ, ಪಿತ್ತಕೋಶಗಳ ಬಗ್ಗೆಯೇ ಹೇಳಿದರೂ ಬದಲಿ ತರಗತಿಗಳಲ್ಲೆಲ್ಲ ಆತ ಕಥೆ ಹೇಳುವರು. ಚಂದ್ರಶೇಖರಯ್ಯ ಹೇಳುತ್ತಿದ್ದುದೆಲ್ಲ ಷೇಕ್-ಸ್ಪಿಯರ್ ಕಥೆಗಳು. 'ಅಥೆಲ್ಲೊ' ಕಥೆ, 'ದಿ ಮರ್ಚೆಂಟ್ ಅಫ್ ವೆನಿಸ್', 'ಮೆಕ್‌ಬೆತ್' ವೃತ್ತಾಂತ, 'ರೋಮಿಯೊ ಅಂಡ್ ಜೂಲಿಯೆಟ್', 'ಕಿಂಗ್ ಲಿಯರ್', 'ಜೂಲಿಯಸ್ ಸೀಸರ್'—ಇವೆಲ್ಲ ಕಥೆಯಂತೆ ಕೇಳಿದ್ದು, ಮೆಚ್ಚಿ ಕೇಳಿದ್ದು, ಕಿವಿದೆರೆದು ಕೇಳಿದ್ದು, ಬೆರಗಿನಿಂದ ಕೇಳಿದ್ದು, ಮೈಮರೆತು ಕೇಳಿದ್ದು, ಕೇಳಿ ಅದೇ ಗುಂಗಿನಲ್ಲಿ ದಿನಗಟ್ಟಲೆ

ಕಳೆಯುತ್ತಿದ್ದುದು ಆಗ. ಚಂದ್ರಶೇಖರಯ್ಯನವರ ದಯೆ ದೊಡ್ಡ ದಯೆ.

ಕಥೆ ಹೇಳುತ್ತಿದ್ದಾಗ ಮನುಷ್ಯ ಕೈ ಮೈ ಆಡಿಸುತ್ತಿದ್ದಿಲ್ಲ; ಮುಖದ ಚಹರೆ ಬದಲಿಸುತ್ತಿದ್ದಿಲ್ಲ. ನಾವು ಹುಡುಗರು ಎದುರಿಗಿದ್ದುದೂ ಆತನಿಗೆ ಗಮನದಲ್ಲಿರುತ್ತಿತ್ತೋ ಇಲ್ಲವೋ ಕಾಣೆ. ಯಾವುದೋ ಧ್ಯಾನದಲ್ಲಿರುತ್ತಿದ್ದರು. ಆಗ ಕುರ್ಚಿಯ ಮೇಲೊಂದು ಕಲ್ಲಿನಂತೆ ಕುಳಿತಿರುತ್ತಿದ್ದರು, ಸೂಜಿಗಲ್ಲಿನಂತೆ. ಈಗ ಎಲ್ಲಿದ್ದಾರೋ ಪುಣ್ಯಾತ್ಮ; ಯಾರ ಕೈಯಲ್ಲೂ ಹೊಗಳಿಸಿಕೊಂಡಿಲ್ಲ ಆತ ಎಂಬುದು ಖಂಡಿತ. ಆತನಿಗಿಂತ ಷೇಕ್-ಸ್ಪಿಯರನ್ನು ಅಂತರ್ಗತ ಮಾಡಿಕೊಂಡಿದ್ದವರು ಎಷ್ಟು ಜನರಿರಬಹುದು! ಸಾಹಿತ್ಯವನ್ನೇ ಪಾಠಮಾಡುವವರೆಷ್ಟರನ್ನೋ ಬಲ್ಲೆ, ಷೇಕ್ಸ್ಪಿಯರ್-ತಜ್ಞರೆನಿಸಿಕೊಂಡವರನ್ನು ಬಲ್ಲೆ. ಆದರೆ ಕಾವ್ಯವೆಂಬುದೊಂದು ವಿಸ್ಮಯ ಎಂಬುದನ್ನು ಆತ ತೋರಿಸಿಕೊಟ್ಟಂತೆ ಇನ್ನೆಷ್ಟು ಜನ ತೋರಿಸಿಕೊಟ್ಟರು?

ನಾಲ್ಕೈದು ವರ್ಷಗಳ ಅನಂತರ ಷೇಕ್ಸ್ಪಿಯರನ ನಾಟಕವನ್ನು ಓದುವುದು ಒಂದು ವಿಧಿಯಾಯಿತು. ಹನ್ನೆರಡು ವರ್ಷದ ಹುಡುಗರಿಗೂ ಹದಿನಾರು ವರ್ಷದ ಯುವಕರಿಗೂ ಒಂದು ವ್ಯತ್ಯಾಸವಿದೆ. ಹದಿನಾರರ ವೇಳೆಗೆ ಗಿಡ ಎಳೆತನವನ್ನು ದಾಟಿ ಬಂದಿರುತ್ತದೆ; ಹಸಿರು ಕಡ್ಡಿಯಲ್ಲಿ ನಾರು ಕೂಡಿ ಬಂದಿರುತ್ತದೆ. ಬಂಡಾಯದ ಪ್ರವೃತ್ತಿ ಮೂಡಿರುತ್ತದೆ. ಶಿಕ್ಷಣದ ಬಗ್ಗೆ ಒಂದು ಪ್ರತಿರೋಧದ ಭಾವನೆ ಮೊದಲಿಟ್ಟಿರುತ್ತದೆ. "ಹಿರಿಯರು ನಮ್ಮನ್ನು ಹೀಗೆ ಬಗ್ಗಿಸಲು ಹವಣಿಸುತ್ತಿದ್ದಾರೆಯೋ? ಸೈ"—ಎನ್ನುವ ಧೋರಣೆ ಹುಟ್ಟಿರುತ್ತದೆ. ಎಷ್ಟು ಶಿಕ್ಷಕರು ಇದನ್ನು ಮನಸ್ಸಿನಲ್ಲಿಟ್ಟಿರುತ್ತಾರೆ? ಉಪಾಧ್ಯಾಯರಿಗೆ ಯಾವುದು ಹಿರಿದೋ, ವಿದ್ಯಾರ್ಥಿಗೆ ಅದರ ಮೇಲೆ ಅಸಡ್ಡೆ; ನಿಷ್ಕಾರಣವಾದ ಅಸಡ್ಡೆಯಿರಬಹುದು, ಆದರೂ ಅಸಡ್ಡೆಯೇ. "ಷೇಕ್ಸ್ಪಿಯರ್, ಷೇಕ್ಸ್ಪಿಯರ್, ಷೇಕ್ಸ್ಪಿಯರ್. ಅವನನ್ನು ತಲೆಯ ಮೇಲೆ ಅಷ್ಟು ಇಟ್ಟುಕೊಳ್ಳುತ್ತಾರಲ್ಲ, ನೋಡಿಯೇ ಬಿಡೋಣ"—ಈ ಮನೋವೃತ್ತಿಯಿರುವ ವಿದ್ಯಾರ್ಥಿಗಳಿಗೆ ಷೇಕ್-ಸ್ಪಿಯರನ ಇಡೀ ಸೃಷ್ಟಿವಿಜೃಂಭಣೆಯ, ಅವನ ವಾಗ್ವೈಭವದ, ಅವನ ಪಾತ್ರಗಳ ವಿಶಿಷ್ಟತೆಯ, ಅವನ ಉಲ್ಲಾಸದ, ಅವನ ಮರುಕದ, ಅವನ ಲೇವಡಿಯ, ಅವನ ನಿಗೂಢತೆಯ ಪರಿಚಯ ಮಾಡಿಕೊಡಬಲ್ಲ ಉಪಾಧ್ಯಾಯರೆಷ್ಟು ಮಂದಿ? ಈ ರೋಮಾಂಚವನ್ನು ಕೆಲವೇ ನಿಮಿಷವಾದರೂ ಒದಗಿಸಿ ಕೊಟ್ಟ ಅಧ್ಯಾಪಕರಿದ್ದಲ್ಲಿ ವಿದ್ಯಾರ್ಥಿ ಹತ್ತೋ ಇಪ್ಪತ್ತೋ ವರ್ಷದ ಮೇಲೆ ಅವರಿಗೆ ಮನಸ್ಸಿನಲ್ಲಿ ವಂದನೆ ಹೇಳಿಕೊಳ್ಳುತ್ತಾನೆ. ಆದರೆ ಈ ಷೇಕ್ಸ್ಪಿಯರ್ ಜಲಪಾತದ ಬಳಿ ಬಂದೂ ಅದರ ತುಂತುರಿನಲ್ಲಿಯೂ ನೆನೆಯದೆ ಮುಂದೆ ಸರಿದಂಥವರೇ ಬಹಳ. ಕಾವ್ಯವನ್ನು ಪಾಠದ ಪುಸ್ತಕವಾಗಿ ಇಡುವುದು ವರಖಡ್ಗದಲ್ಲಿ ದಾಡಿ ಕೆರೆಮಕೊಂಡಂತೆ; ಗಡ್ಡಕ್ಕೆ ಹಾನಿ, ಕತ್ತಿಗೆ ದುಃಖ ಎಂದು ರವೀಂದ್ರನಾಥ ಠಾಕೂರರು ಹೇಳಿದ್ದು ದಿಟ.

ಐದು ವರ್ಷ ಷೇಕ್ಸ್ಪಿಯರ್ ಪಾಠ ಹೇಳಿಸಿಕೊಂಡೆ, ಪ್ರತಿಭೆಯುಳ್ಳ ಉಪಾಧ್ಯಾಯರನ್ನು ಪಡೆಯುವ ಸುಯೋಗವೂ ಇತ್ತು; ಅನುಭೂತಿಯೂ ಇಲ್ಲದ ಅಧ್ಯಾಪಕರನ್ನು ಸಹಿಸಿಕೊಳ್ಳಬೇಕಾದ ಕಷ್ಟವೂ ಇತ್ತು. ದೇಶದ ಮಿಕ್ಕ ಕಡೆ ಓದಿದ ಸಮವಯಸ್ಕರ ಜತೆ ಅನಂತರ ಅನುಭವ ವಿನಿಮಯ ಮಾಡಿಕೊಳ್ಳುವಾಗ ನನಗೆ ಒದಗಿ ಬಂದ ಅದೃಷ್ಟ

ಇತರ ಎಷ್ಟೋ ಮುಂದಿಗೆ ಒದಗಿರಲಿಲ್ಲವೆಂಬುದು ವೇದ್ಯವಾಯಿತು. ಷೇಕ್ಸ್ಪಿಯರ್ ರಸಾಯನದ ರುಚಿ ಸವಿಯುವಂತೆ ಮಾಡಿಕೊಡುವ ಪ್ರತಿ ಒಬ್ಬ ಅಧ್ಯಾಪಕನಿಗೆ ಜಾಪಾಳದಂತೆ ಅರೆದು ಕುಡಿಸುವ ಅಧ್ಯಾಪಕರು ನಲವತ್ತು.

ಷೇಕ್ಸ್ಪಿಯರ್ ಜಗತ್ತಿನ ಸ್ವತ್ತು; ಇಂಗ್ಲಂಡಿಗೆ ಆತ ಎಷ್ಟು ಸೇರಿದವನೋ ನಮಗೂ ಅಷ್ಟೇ ಎಂದು ನಾವು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ, ಅದೂ ಈ ಚತುಃಶತಾಬ್ದಿಯ ಸಂದರ್ಭದಲ್ಲಿ. ನೂರೆಂಟು ವರ್ಷಗಳಿಂದ ಉಪಾಧ್ಯಾಯರು ನಮ್ಮ ದೇಶದಲ್ಲಿ ಷೇಕ್ಸ್ಪಿಯರನ ಪಾಠ ಮಾಡುತ್ತಿದ್ದಾರೆ. ಆದರೆ ಈ ಸ್ವತ್ತಿನಲ್ಲಿ ಎಷ್ಟು ನಮ್ಮ ಪ್ರಯೋಜನಕ್ಕೆ ಬಂದಿದೆ ಎಂಬುದು ನೋಡಬೇಕಾದ್ದು. ಷೇಕ್ಸ್ಪಿಯರ್ ಆರಾಧನೆ ನಮ್ಮಲ್ಲಿ ಆರಂಭವಾದ ಕಾಲದಲ್ಲಿ, ಅವನ ಕೃತಿಯನ್ನು ಪಾಠ ಹೇಳುತ್ತಿದ್ದವರು ವಿಕ್ಟೋರಿಯನ್ ಆಂಗ್ಲೇಯರು, ಅಥವಾ ಸಂಪ್ರದಾಯಸ್ಥ ಸಂಸ್ಕೃತ ಮನೆತನಗಳಿಂದ ವಿಕ್ಟೋರಿಯನ್ ಪಥಕ್ಕೆ ಬಂದ ಭಾರತೀಯರು. ಇವರಿಬ್ಬರಿಗೂ ಸಾಮ್ಯ ಬಹಳ. ಇಬ್ಬರಿಗೂ ನಗೆಗಿಂತ ಗಾಂಭೀರ್ಯದ ಮೇಲೆ ಒಲವು; ಅಬ್ಬರಿಸುವ ಸಮುದ್ರಕ್ಕಿಂತ ನಿಂತ ಸರೋವರವೇ ಮೆಚ್ಚಿಗೆ. ಎಲ್ಲ ಶೀಲಗಳಲ್ಲೂ ಸಂಯಮವೇ ಶ್ರೇಷ್ಠವೆಂದು ಇವರ ನಂಬಿಕೆ. ನಮ್ಮ ದೇಶದ ಚರಿತ್ರೆಯಲ್ಲಿ ಈ ಯುಗ ಇನ್ನೂ ನಡೆಯುತ್ತಿದೆ. ಈ ಮನೋಧರ್ಮದವರನ್ನು ಕಂಡಾಗ ಒಮ್ಮೊಮ್ಮೆ ಆಂಗ್ಲ ಲೇಖಕನೊಬ್ಬನೊಂದಿಗೆ ಧ್ವನಿ ಕೂಡಿಸಿ "The reins are all right, but where is the bloody horse?" ಎಂದು ಕೇಳಬೇಕೆನಿಸುತ್ತದೆ.

ಅರ್ಥಾತ್ ಷೇಕ್ಸ್ಪಿಯರ್ ಪಾಠ ಹೇಳುವವರಲ್ಲಿ ಬಹುಭಾಗಕ್ಕೆ ಷೇಕ್ಸ್ಪಿಯರನ ಒಟ್ಟಾರೆ ಮನೋವೃತ್ತಿ ಹಿಡಿಸುವಂಥದಲ್ಲ. ಅವನ 'ಮೈಲಿಗೆ' ಭಾಗಗಳನ್ನು ಮರೆಸಿ 'ಮಡಿ' ಭಾಗಗಳನ್ನು ಮಾತ್ರ ಎತ್ತಿತೋರಿಸುತ್ತಿದ್ದುದು ಇದೇ ಕಾರಣದಿಂದ. ಇಂಗ್ಲಂಡಿನಲ್ಲಿ ಬೌಡ್ಲರ್ ಮಹಾಶಯ ಷೇಕ್ಸ್ಪಿಯರನ ಮಡಿಪಾಠ ತಯಾರಿಸಿದ. ನಮ್ಮಲ್ಲಿ ಷೇಕ್ಸ್ಪಿಯರ್ ಪಾಠವನ್ನು ಬಹುಮಟ್ಟಿಗೆ ಬೌಡ್ಲರ್‌ಗಳೇ ಮಾಡಿದ್ದು. ಕಿರಿವಯಸ್ಸಿನವರಿಗೆ ಅಶ್ಲೀಲ ಪದ ತಿಳಿಯಬಾರದೆಂಬ ಸಂಪ್ರದಾಯದಲ್ಲಿ ಒಂದಷ್ಟು ಸರಿಯಿರಬಹುದು; ಆದರೆ ಎಂ. ಎ. ವಿದ್ಯಾರ್ಥಿಗಳಿಗೆ?

ಚೌಕಟ್ಟು ಈ ರೀತಿ 'ನೈತಿಕ'ವಾಗಿದ್ದುದರಿಂದ ನಮ್ಮ ಉಪಾಧ್ಯಾಯರಿಗೆ ಷೇಕ್ಸ್ಪಿಯರ್ ನೀತಿವಾಕ್ಯಗಳ ಉಗ್ರಾಣವಾದ. ಒಬ್ಬ ಗೃಹಸ್ಥರಿಗಂತೂ "Neither a lender nor a borrower be" ಎಂಬುದೇ ಷೇಕ್ಸ್ಪಿಯರ್ ಬರೆದ ಸಾಲುಗಳಲ್ಲೆಲ್ಲ ಸರ್ವೋತ್ಕೃಷ್ಟವೆಂಬ ಭಾವನೆ. ಅವರ ಹುಡುಗನಿಗೆ ಅದನ್ನು ಹೇಳಿದ್ದೂ ಹೇಳಿದ್ದೇ. ಮುದುಕನೊಬ್ಬನ ಬಾಯಲ್ಲಿ ಈ ವಾಕ್ಯವಿಟ್ಟು ಷೇಕ್ಸ್ಪಿಯರ್ ಮುಸಿನಗು ನಕ್ಕಿರಬಹುದೆಂಬ ಊಹೆ ಆ ಗೃಹಸ್ಥರಿಗೆ ಹೊಳೆದಿರಲಾರದು.

ಪ್ರತಿಯೊಂದನ್ನೂ ಇಕ್ಕಟ್ಟಾದ ನೈತಿಕ ಪರೀಕ್ಷೆಗೆ ಒಳಪಡಿಸುವ ಅಭ್ಯಾಸ ಷೇಕ್ಸ್ಪಿಯರ್ ರಸವನ್ನು ಸವಿಯಲು ಅಡ್ಡಿ ಮಾಡಿದೆ. ಇಡೀ ಶಿಕ್ಷಣಪದ್ಧತಿಯೇ ಅದಕ್ಕೆ ದೊಡ್ಡ ಅಡಚಣೆಯಾಗಿದೆ. ನಮ್ಮ ಪಾಲಿಗೆ ಅವನು ಕವಿ, ನಾಟಕಕಾರನಲ್ಲ. ಒಂದು 'ಸಬ್ಜೆಕ್ಟು'. ಅವನನ್ನು ಓದುವುದು ಉಲ್ಲಾಸಕ್ಕಲ್ಲ, ಉತ್ಕರ್ಷಗಲ್ಲ;

ನಂಬರು ಪಡೆಯುವುದಕ್ಕೆ. ಈ ನಂಬರು ಪಡೆಯುವುದು ಹೇಗೆ? ಅವನು ಬಳಸುವ ಎಲ್ಲ ಪದಗಳ ಅರ್ಥ ತಿಳಿದುಕೊಳ್ಳುವುದರ ಮೂಲಕ; ಅವನ ಪದ್ಯಪ್ರಕಾರವನ್ನು ಗದ್ಯಪ್ರಕಾರದಲ್ಲಿ ವಿವರಿಸುವ ಮೂಲಕ. ಅವನ ನಾಟಕಗಳಲ್ಲಿನ ಈ-ಆ ಸನ್ನಿವೇಶ ಗಳನ್ನು ನೂರು ಪದಗಳಲ್ಲಿ ವಿವರಿಸುವುದರಿಂದ; ಬ್ರೂಟಸ್, ಲೇಡಿ ಮೆಕ್‌ಬೆತ್, ಹ್ಯಾಮ್ಲೆಟರ character ಕುರಿತು ಐದ್ವೈದು ಆರಾರು ಪುಟದ ಪ್ರಬಂಧ ಬರೆಯು ವುದರಿಂದ. ಉರು ಹೊಡೆದಷ್ಟೂ ಹೆಚ್ಚು ನಂಬರು. ಹೊಡಿ ಉರು: ಆ್ಯಂಟೊನಿಯ ಭಾಷಣವನ್ನು, ಹ್ಯಾಮ್ಲೆಟನ ಸ್ವಗತಗಳನ್ನು; 'Seven ages of man' ಅನ್ನು, ಪೋರ್ಷಿಯಾಳ ವಕಾಲತ್ತನ್ನು. ಅಧ್ಯಯನಕ್ಕಿಂತ ಕಂಠಪಾಠಕ್ಕೆ ಮಹಿಮೆ ಹೆಚ್ಚು ನಮ್ಮಲ್ಲಿ. 'To be or not to be' ಯ ಮೇಲೆ ನೂರು ಪದ ಬರೆಯುವುದು ಹೇಗೆ, ಬರೆಯಬೇಕೆ, ಬರೆಯುವುದು ಅಪರಾಧವಲ್ಲವೆ? ಈ ಅನಂತ ಸುಂದರ ಕುಂದಣವನ್ನು ಒಡೆಯುವುದೆ? ಇಂಥ ಪ್ರಶ್ನೆಗಳನ್ನು ಯಾರು ಕೇಳಿದರು?

ಆ ಕಾಲಕ್ಕೆ ನಾರಣಪ್ಪನನ್ನಾಗಲಿ, 'ಶಾಕುಂತಲ'ವನ್ನಾಗಲಿ, 'ದಶಕುಮಾರಚರಿತೆ' ಯನ್ನಾಗಲಿ ಪಾಠಮಾಡುವುದೆಂದರೆ ಕಷ್ಟ ಪದಗಳಿಗೆ ಅಷ್ಟೇ ಕಷ್ಟ ಪದಗಳ ಮೂಲಕ ಅರ್ಥ ಹೇಳುವುದು; ಪದ್ಯದ ಸಾಲನ್ನು ಗದ್ಯದ ವಾಕ್ಯವಾಗಿ ಬರೆದಿಡುವುದು; ಮೊಟಕಾಗಿ ತಾತ್ಪರ್ಯ ಸೂಚಿಸುವುದು ಎಂಬ ನಂಬಿಕೆಯಿತ್ತು. **ಹದಿಬದೆ**=ಪತಿವ್ರತೆ, **ಪತಿವ್ರತೆ**=ಹದಿಬದೆ. **ಆತ್ಮಜ**=ತನಯ, **ತನಯ**=ಆತ್ಮಸಂಭವ. ಒಬ್ಬ ಕಾಲೇಜು ಉಪಾಧ್ಯಾಯರಿಗೆ multitudinous seas incarnadine ಬಂದ ದಿನ ಬಹಳ ಸಂತೋಷ. ಬೋರ್ಡಿನ ಮೇಲೆ *multitudinous*=very large; *incarnadine*= red ಎಂದು ಬರೆದರು. ನಮಗೆ ಪ್ರತಿ ಪದದ ಅರ್ಥವೇನು ಎಂಬುದೇನೋ ಬಹುಶಃ ತಿಳಿಯಿತು. ಆದರೆ ಪದಾರ್ಥ ಹಾರಿಹೋಯಿತು. ಇನ್ನೊಬ್ಬ ಉಪಾಧ್ಯಾಯರು ಸಾನೆಟ್ ಪಾಠ ಮಾಡುವಾಗ "Shall I compare thee to a summer's day?" ಎಂಬ ಸಾಲಿನ ಬಗ್ಗೆ "ಇದರಲ್ಲಿ ನಿಮಗೆ ಅರ್ಥವಾಗದಂಥ ಕಷ್ಟ ಪದ ಯಾವುದೂ ಇಲ್ಲವಷ್ಟೆ?" ಎಂದು ತ್ವರೆಯಿಂದ ಮುಂದುವರಿದರು. ಇವರೊಂದು ತರಹದ ಎಕ್ಸ್‌ಪ್ರೆಸ್ ಗಾಡಿಯೂದರೆ ಕೆಲವು ಅಧ್ಯಾಪಕರು ಷಟ್ಲ್ ಬಂಡಿಗಳಂತೆ! ದಿನಕ್ಕೆ ಆರು ಸಾಲು ಹೇಳಿದರೆ ಹೆಚ್ಚು. ಒಬ್ಬರಂತೂ "conclusions be as kisses if your four negatives make your two affirmatives . . ." ಎಂಬ ಸಾಲಿನ ಮೇಲೆ ನಲವತ್ತು ನಿಮಿಷದ ವ್ಯಾಖ್ಯಾನ ಮಾಡಿದರು. ನಾಟಕದ ಆ ಸಂದರ್ಭದಲ್ಲಿ ಅದಕ್ಕೆ ಪ್ರಾಮುಖ್ಯವಿಲ್ಲ, ವಿದೂಷಕನ ಒದರಾಟ ಎಂಬ ಅಂಶ ಅವರ ಸುಳಿವಿಗೆ ಬರಲಿಲ್ಲ. ಬಹಳ ಹೆಸರು ಪಡೆದ ಪಂಡಿತರು ಆ ಉಪಾಧ್ಯಾಯರು. ಆತನ ಸಹೋದ್ಯೋಗಿಗಳಿಗೆ ಆತನೆಂದರೆ ಗೌರವ, ಕರುಬು. ವಿದ್ಯಾರ್ಥಿಗಳಿಗೆ ಮಾತ್ರ ಆತನ ಮೆಲುಕಾಟ ಮಹಾಸಂಕಟವೆನಿಸುತ್ತಿತ್ತು. ಎಲ್ಲವನ್ನೂ ಅಷ್ಟು ಹಿಂಜಬೇಕೆ, ಹಿಂಜಿದಷ್ಟೂ ಹೆಣಿಗೆ ಕಿತ್ತು ಬರುವುದಿಲ್ಲವೆ ಎಂದು ನಮಗೆ ಎಷ್ಟೋ ಸಲ ಅನ್ನಿಸುವುದು. ಷೇಕ್ಸ್ಪಿಯರ್ ಯಾವಾಗಲೂ ಅಂಬಾರಿಯಾನೆಯ ಮಂದಗತಿಯಲ್ಲಿಯೇ ನಡೆಯುತ್ತಿದ್ದನೇ? ಈ ಮದ್ದಾನೆಯೆಂದೂ ನುಗ್ಗಲಿಲ್ಲವೆ?

ಮಹಾಕವಿಯನ್ನು ಪ್ರತಿ ಯುಗವೂ ತನ್ನದೇ ರೀತಿಯಲ್ಲಿ ಅರ್ಥ ಮಾಡಿಕೊಳ್ಳುತ್ತದೆ

ಎನ್ನುತ್ತಾರೆ. ವಿಕ್ಟೋರಿಯನ್ ಯುಗದಲ್ಲಿ ಕಾರಣ-ಫಲಗಳ ಬಗ್ಗೆ ಮಹಾ ದೃಢವಾದ ಸಿದ್ಧಾಂತಗಳಿದ್ದುವು. ಮನುಷ್ಯನ ಪ್ರತಿ ಆಲೋಚನೆ ಅಥವಾ ಕೃತಿಯನ್ನು ವಿಚಾರದ ಅಳತೆಗೋಲಿಂದ ಅಳೆಯಬಹುದೆಂಬ ಭಾವನೆಯಿತ್ತು, ಫ್ರಾಯ್ಡ್, ಯುಂಗ್ ಇನ್ನೂ ಬಂದಿರಲಿಲ್ಲ. ನೆಪೋಲಿಯನ್, ನಿಯ್‌ಚ್ಛೆಗಳ ನೆರಳಿನಲ್ಲಿ ಬೆಳೆದ ಶತಮಾನ ಅದು. ಮಹಾಮಾನವರ ಮೀಮಾಂಸೆಯನ್ನು ಕಾರ್ಲೈಲ್ ಮತ್ತಿತರರು ಮುಂದಿಟ್ಟಿದ್ದ ಕಾಲ. ದೊಡ್ಡ ಗಾತ್ರದ ಕಾದಂಬರಿ ಬೆಳೆಯುತ್ತಿದ್ದ ಸಮಯ. ಅಲ್ಲದೆ ಆಂಗ್ಲ ಸಾಹಿತ್ಯ-ಚರಿತ್ರೆಯಲ್ಲಿಯೇ ನಾಟಕರಚನೆ ಬಹಳ ಹಿಂದೆ ಬಿದ್ದಿದ್ದ ಯುಗ. ಹೀಗಾಗಿ ವಿಕ್ಟೋರಿಯನ್ ಯುಗದ ಸಾಹಿತ್ಯವಿಮರ್ಶೆಯಲ್ಲಿ, ಬೋಧೆಯಲ್ಲಿ, character analysisಗೆ ದೊಡ್ಡ ಸ್ಥಾನ. ಷೇಕ್ಸ್ಪಿಯರ್ ನಾಟಕಗಳನ್ನು ನಾಟಕಗಳೆಂದು ಪರಿಗಣಿಸದೆ ಮಹಾನಾಯಕರ ಜೀವನಚರಿತ್ರೆಗಳೆಂದು ಬ್ರ್ಯಾಡ್ಲಿ ಪರಿಗಣಿಸಿದ್ದು ಈ ಕಾರಣದಿಂದ. ನಮ್ಮ ದೇಶದಲ್ಲಿಯೂ ಮಾರ್ಗಸಾಹಿತ್ಯದಲ್ಲಿ ನಾಟಕಕ್ಕೆ ಪ್ರಾಧಾನ್ಯ ಹೋಗಿ ಶತಮಾನಗಳು ಕಳೆದಿದ್ದುವು. ಸಮಾಜದಲ್ಲಿ ನಟರೆಂದರೆ ತುಚ್ಛವೆಂಬ ಭಾವನೆಯೂ ಇತ್ತು. ಆದ್ದರಿಂದ ಉಪಾಧ್ಯಾಯರು ಷೇಕ್ಸ್ಪಿಯರ್ ಕೃತಿಯನ್ನು ನಾಟಕವಾಗಿ ಪಾಠ ಮಾಡದೆ ಪದ್ಯಕಾವ್ಯವೆಂದು ಪಾಠ ಮಾಡುತ್ತಿದ್ದುದರಲ್ಲಿ ಆಶ್ಚರ್ಯವಿಲ್ಲ.

ಕಾಲೇಜಿನ ಪರೀಕ್ಷೆಯೊಂದಕ್ಕೆ ತಯಾರಿ ಮಾಡಿಕೊಳ್ಳುತ್ತಿದ್ದೆ. ಪುಸ್ತಕಾಲಯದಲ್ಲಿ ಗ್ರ್ಯಾನ್‌ವಿಲ್ ಬಾರ್ಕರರ 'ಪ್ರಿಫೇಸಸ್ ಟು ಷೇಕ್ಸ್ಪಿಯರ್'ನ ಸಂಪುಟಗಳು ಸಿಕ್ಕವು. ಪರೀಕ್ಷೆಯ ಸಮಯವಾದ್ದರಿಂದ ಮನೆಗೆ ತೆಗೆದುಕೊಂಡು ಹೋಗಲು ಕೊಡುತ್ತಿದ್ದಿಲ್ಲ. ಅಲ್ಲಿಯೇ ಕುಳಿತು ಎಂಟು ಗಂಟೆಗಳ ಕಾಲ ಅಲ್ಲಾಡದೆ ಒಂದು ಸಂಪುಟ ಓದಿದೆ. ಮಾರನೆ ಎರಡು ಮೂರು ದಿನಗಳಲ್ಲಿ ಮಿಕ್ಕ ಸಂಪುಟಗಳನ್ನೂ ಓದಿದೆ. ಬ್ರ್ಯಾಡ್ಲಿಯ 'To be or not to be' ವ್ಯಾಖ್ಯೆಗಿಂತ ಗ್ರ್ಯಾನ್‌ವಿಲ್ ಬಾರ್ಕರರ 'To be or not to be' ಮನಸ್ಸಿಗೆ ಹಿಡಿಸಿತು. ಬಾರ್ಕರ್ ಓದಿದ ನಂತರ ವೇರಿಯೋರಮ್ ಸಂಪುಟಗಳನ್ನು ಒಂದೊಂದಾಗಿ ತೆರೆದು ಹಳೆಯ ಕಾಲದ ಹಿರಿಯ ನಟೀನಟರು ಹೇಗೆ ಈ ವಿವಿಧ ಪಾತ್ರ ನಿರ್ವಹಣೆ ಮಾಡಿದ್ದರು ಎಂಬುದನ್ನು ಓದುವ ಆಸೆಯಾಯಿತು. ಓದಿದೆ. ಪರೀಕ್ಷೆ ಇದ್ದರೆ ಇತ್ತು. ಈ ಹೊಸ ಬಾಗಿಲಲ್ಲಿ ಹೋಗದೆ ಇರುವುದೇ ?

ಆ ಬಾಗಿಲು ಹೊಕ್ಕೆನೆಂದು ಈಗ ಸಂತೋಷವಾಗುತ್ತದೆ. ಅದು ಹೊಕ್ಕಿದ್ದೆನಾದ್ದರಿಂದ ಆಲಿವಿಯರ್, ಗೀಲ್‌ಗುಡ್, ರಿಚರ್ಡ್‌ಸನ್ ಇವರನ್ನು ಮೆಚ್ಚುವ ಶಕ್ತಿ ಬಂತು. ಷೇಕ್ಸ್ಪಿಯರನ್ನು 'ಸಬ್ಜೆಕ್ಟ್' ಆಗಿ ಓದಿ ಇಪ್ಪತ್ತು ಇಪ್ಪತ್ತೈದು ವರ್ಷವಾಯಿತು. ಈಗ ಆತನನ್ನು ಸಂತೋಷಕ್ಕಾಗಿ ಓದುತ್ತೇನೆ. ಸಾಹಿತ್ಯವೆಂಬುದು ಎಂತಹ ಸಂಭ್ರಮ ಎಂಬುದರ ಅರಿವಾಗುತ್ತದೆ; ಮನಸ್ಸಿನಲ್ಲಿ ಉಬ್ಬರವೇಳುತ್ತದೆ; ಆಗಾಗ 'ಕೋಟಿಸೂರ್ಯಪ್ರಭೆ' ಎಂದರೆ ಏನು ಎಂಬುದರ ಸೂಕ್ಷ್ಮ ತಿಳಿಯುತ್ತದೆ. ಈ ಅನುಭವ ಷೇಕ್ಸ್ಪಿಯರ್ ಓದುವಾಗ ಬಂದಷ್ಟು ಬೇರೆ ಯಾರನ್ನು ಓದಿದಾಗಲೂ ಬಾರದು. ಋಷಿಯಲ್ಲದವ ಕವಿಯಾಗಲಾರನೆನ್ನುತ್ತಾರೆ. ಸದ್ಯ, ಷೇಕ್ಸ್ಪಿಯರ್ ಋಷಿಯಾಗಿರಲಿಲ್ಲ. ಸಾಧಾರಣ ಮನುಷ್ಯನಾಗಿಯೇ ಇದ್ದ. ಷೇಕ್ಸ್ಪಿಯರನ್ನು ಓದಿದಾಗ

ಕರ್ತೃವಿಗಿಂತ ಕೃತಿ ಹಿರಿದಾಗಿರಬಹುದಾದ ರಹಸ್ಯದ ಅರಿವೂ ಆಗುತ್ತದೆ. ಒಮ್ಮೊಮ್ಮೆ

ಷೇಕ್ಸ್ಪಿಯರ್, ನೀ ಬಂದೆ,
ಹೊಸ ಭುವನವೊಂದನೇ ತೆರೆದೆ ಕಣ್ಮುಂದೆ,
ಆದರೀ ಶಿಕ್ಷಕರ ಕೈಯಲ್ಲಿ ಸಿಕ್ಕಿಬಿದ್ದೆಯಲ್ಲೋ, ತಂದೆ !

ಎನ್ನೋಣ ಎಂದೂ ಎನಿಸುತ್ತದೆ.





# ಷೇಕ್ಸ್ಪಿಯರ್ ಮತ್ತು ಕರ್ನಾಟಕ

## ಎ. ಎನ್. ಮೂರ್ತಿರಾವ್

ಈ ಶತಮಾನದ ಎರಡನೆಯ ದಶಕದಷ್ಟು ಹಿಂದೆ ಕೂಡ, ನಮ್ಮ ವಿದ್ಯಾರ್ಥಿಗಳು ಷೇಕ್ಸ್ಪಿಯರನ ಪರಿಚಯ ಪಡೆಯಲು ಕಾಲೇಜು ಮೆಟ್ಟಲು ಹತ್ತುವವರೆಗೂ ಕಾಯ ಬೇಕಾಗಿರಲಿಲ್ಲ. ಹೈಸ್ಕೂಲು ಎರಡನೆಯ ತರಗತಿಗೆ ಪಠ್ಯಪುಸ್ತಕವಾಗಿದ್ದ ಸಂಗ್ರಹ ವೊಂದರಲ್ಲಿ ಷೇಕ್ಸ್ಪಿಯರನ 'ಆಲ್ ದಿ ವರ್ಲ್ಡ್ಸ್ ಎ ಸ್ಟೇಜ್', 'ದಿ ಕ್ವಾಲಿಟಿ ಅಫ್ ಮರ್ಸಿ' ಮೊದಲಾದ ನಾಟಕಭಾಗಗಳನ್ನು ಓದಿದ ನೆನಪಿದೆ. ಕಾಲೇಜು ತರಗತಿಗಳ ಲ್ಲಂತೂ ಷೇಕ್ಸ್ಪಿಯರ್ ಇಲ್ಲದೇ ನಡೆಯುತ್ತಿರಲಿಲ್ಲ. ಆ ಕಾಲದ ಅಭ್ಯಾಸ-ವಿಷಯಗಳಲ್ಲಿ ಷೇಕ್ಸ್ಪಿಯರ್ ಈಗಿನದಕ್ಕಿಂತ ಹೆಚ್ಚು ಪ್ರಮುಖ ಸ್ಥಾನವನ್ನು ಆಕ್ರಮಿಸಿದ್ದ.

ಶಾಲಾಕಾಲೇಜುಗಳ ರಂಗಭೂಮಿಗಳಲ್ಲಿ ಸಹ ಷೇಕ್ಸ್ಪಿಯರ್ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿದ್ದ. 'ದಿ ಮರ್ಚೆಂಟ್ ಅಫ್ ವೆನಿಸ್'ನ ವಿಚಾರಣೆಯ ದೃಶ್ಯವನ್ನು ನಾನು ಮೊದಲು ನೋಡಿದುದು 1913ರಲ್ಲಿ—ಹೈಸ್ಕೂಲಿನಿಂದ ತೇರ್ಗಡೆ ಹೊಂದಿ ಹೋಗುತ್ತಿದ್ದ ವಿದ್ಯಾರ್ಥಿಗಳಿಗೆ ಕೊಟ್ಟ ಒಂದು ಬೀಳ್ಕೊಡುಗೆಯ ಸಮಾರಂಭದಲ್ಲಿ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ತುಂಬ ಚಟುವಟಿಕೆಯಿಂದ ಕೂಡಿದ ನಾಟಕ-ಮಂಡಳಿಯೊಂದಿತ್ತು. ಸುಮಾರು ಹಣ ಖರ್ಚು ಮಾಡಿ ಆ ಮಂಡಳಿಯವರು ರಂಗ-ಪರಿಕರಗಳನ್ನೂ ಷೇಕ್ಸ್ಪಿಯರ್ ಕಾಲೀನ ಅಥವಾ ಹಾಗೆಂದುಕೊಳ್ಳಬಹುದಾದ ವೇಷ-ಭೂಷಣಗಳನ್ನೂ ಶೇಖರಿಸಿದ್ದರು. ಅವರು ಆಡುತ್ತಿದ್ದ ನಾಟಕಗಳು ಬಹುಮಟ್ಟಿಗೆ ಷೇಕ್ಸ್ಪಿಯರನವು—ಮೋಲಿಯೇರನಿಗೂ ಕೆಲವು ವೇಳೆ ಸ್ಥಾನ ದೊರೆಯುತ್ತಿತ್ತು. ಅವರ 'ಹ್ಯಾಮ್ಲೆಟ್', 'ಮೆಕ್‌ಬೆತ್', ಫಾಲ್‌ಸ್ಟಾಫ್ ಮತ್ತು ಮ್ಯಾಲ್ವೋಲಿಯೊ ದೃಶ್ಯಗಳ ಖ್ಯಾತಿ ಮಹಾರಾಜರ ಕಿವಿಯವರೆಗೂ ಮುಟ್ಟಿತ್ತೆಂದು ಕಾಣುತ್ತದೆ. ಅವರು ಮೈಸೂರು ಅರಮನೆಯಲ್ಲಿ ಸಹ ಒಂದೆರಡು ಪ್ರದರ್ಶನಗಳನ್ನು ಕೊಟ್ಟಿದ್ದರು.

ಕನ್ನಡದಲ್ಲಿ ಷೇಕ್ಸ್ಪಿಯರನ ನಾಟಕಗಳು ಮೊಟ್ಟಮೊದಲು ಭಾಷಾಂತರವಾದದ್ದು —ಅವನ್ನು ಭಾಷಾಂತರವೆನ್ನುವುದಕ್ಕಿಂತ ಭಾಷಾಂತರ-ರೂಪಾಂತರಗಳ ಕಸಿಯೆಂದರೆ

ಹೆಚ್ಚು ಒಪ್ಪುತ್ತದೆ—ರಂಗಪ್ರೇಮಿಗಳಿಂದಲೇ ಹೊರತು ವಿದ್ವಜ್ಜನರಿಂದಲ್ಲ. ನನಗೆ ಗೊತ್ತಿರುವ 'ಮೆಕ್‌ಬೆತ್'ನ ಮೊಟ್ಟಮೊದಲ ಭಾಷಾಂತರ 1881ಕ್ಕೆ ಸ್ವಲ್ಪ ಹಿಂದೆ ಪ್ರಕಟವಾದದ್ದು; 1900ಕ್ಕೂ ಹಿಂದೆಯೇ ಹತ್ತಕ್ಕೂ ಹೆಚ್ಚು ಷೇಕ್‌ಸ್ಪಿಯರನ ಭಾಷಾಂತರಗಳು ಬೆಳಕು ಕಂಡಿದ್ದವು. ಮೈಸೂರು ಮಹಾರಾಜರವರ ಕೃಪಾಶ್ರಯ ದಲ್ಲಿ 'ಪ್ಯಾಲೆಸ್ ಕಂಪೆನಿ' ಅಸ್ತಿತ್ವಕ್ಕೆ ಬಂದದ್ದು 1881ರಲ್ಲಿ. ಕೆಲವಾದರೂ ಇಂಗ್ಲಿಷ್ ನಾಟಕಗಳು ಕನ್ನಡಕ್ಕೆ ಇಳಿದು ಬರಲೆಂಬ ಅವರ ಆಸೆಯ ಫಲವಾಗಿ 'ಅಥೆಲ್ಲೊ' ('ಶೂರಸೇನ ಚರಿತ್ರೆ'), 'ದಿ ಮರ್ಚೆಂಟ್ ಆಫ್ ವೆನಿಸ್' ('ಪಾಂಚಾಲೀ ಪರಿಣಯ') ಮತ್ತು 'ರೋಮಿಯೊ ಅಂಡ್ ಜೂಲಿಯೆಟ್' ('ರಾಮವರ್ಮ-ಲೀಲಾವತಿ')ಗಳು ಭಾಷಾಂತರವಾದವು. ಈ ಮೊದಲಿನ ಭಾಷಾಂತರಗಳು ಪ್ರಧಾನತಃ ಆಡುವುದಕ್ಕಾಗಿ ಮಾಡಿದಂತಹವು. ಮೂಲದ ವಿದೇಶೀಯ ಹೆಸರುಗಳನ್ನು ಯಥಾವತ್ತಾಗಿ ಉಪ ಯೋಗಿಸಿದ್ದಾದರೆ 'ಕಲೆಕ್ಷನ್'ಗೆ ಹಾನಿ ತಟ್ಟುತ್ತಿದ್ದುದರಿಂದ ಅವುಗಳ ಸ್ಥಳದಲ್ಲಿ ಭಾರತೀಯ ಹೆಸರುಗಳನ್ನು ಬಳಸಲಾಯಿತು. ಇದರಿಂದ ಸ್ವಾಭಾವಿಕವಾಗಿ ನಾಟಕದ ಹಿನ್ನೆಲೆಯನ್ನು ಬದಲಿಸುವುದೂ ಅವಶ್ಯಕವಾಯಿತು. ಮೂಲಕ್ಕೆ ಸಾಧ್ಯವಾದಷ್ಟು ಹತ್ತಿರ ಉಳಿದು, ಪಾತ್ರ, ದೃಶ್ಯ, ಸಂಭಾಷಣೆಗಳು ಕನ್ನಡ ರಂಗಭೂಮಿಯ ಮೇಲೆ ಅಸಹಜ ವಾಗಿ ಕಾಣದಂತೆ ಕಾದುಕೊಳ್ಳುವುದು ಆ ಕಾಲದ ಭಾಷಾಂತರಕಾರರ ಗುರಿಯಾಯಿತು.

ಈಗ ಈ ಹಳೆಯ ಭಾಷಾಂತರಗಳ ಪ್ರತಿಗಳು ದುರ್ಲಭ. ಸಿಗುವ ಕೆಲವವರ ಮೇಲೆ ಆಧರಿಸಿ ಒಂದು ನಿರ್ಣಯಕ್ಕೆ ಬರುವ ಸಾಹಸ ಮಾಡಿದ್ದಾದರೆ ಆಗಿನ ಭಾಷಾಂತರ-ಕಾರರು ಮೂಲದ ಸಂಭಾಷಣೆಗಳನ್ನು ಸಾಮಾನ್ಯವಾಗಿ ಅದೇ ಕ್ರಮದಲ್ಲಿ ಅನುಸರಿಸಿ ದರೂ ಮೂಲಕ್ಕೆ ಕಟ್ಟುನಿಟ್ಟಾಗಿ ಅಂಟಿಕೊಂಡೇ ತೀರಬೇಕೆನ್ನುವ ಅಭಿಪ್ರಾಯದವ ರಾಗಿರಲಿಲ್ಲ. ಉದಾಹರಣೆಗೆ, ಎಂ. ಎಲ್. ಶ್ರೀಕಂಠೇಶಗೌಡರ 'ಮೆಕ್‌ಬೆತ್'ನ ಭಾಷಾಂತರದಲ್ಲಿ ('ಪ್ರತಾಪರುದ್ರದೇವ', 1895) 'In thunder, lightning or in rain' ಮತ್ತು 'Fair is foul and foul is fair' ಭಾಗಗಳು ಕೈಬಿಟ್ಟುಹೋಗಿವೆ. ದ್ವಾರಪಾಲಕನ ದೃಶ್ಯ ಹರುಕುಮುರುಕಾಗಿದ್ದು, ಅದು ತನ್ನ ಗುರಿ ಸಾಧಿಸುವುದಿಲ್ಲ. ನೋಡಿದರೆ ಭಾಷಾಂತರಕಾರರಿಗೆ ಇದರ ಮತ್ತು ಇಂತಹ ಇತರ ಭಾಗಗಳ ಆಳವಾದ ಅರ್ಥವಿಶೇಷ ತಿಳಿದಿರದಿದ್ದ ಸಂಭವವೇ ಹೆಚ್ಚು. 'ರೋಮಿಯೊ ಅಂಡ್ ಜೂಲಿಯೆಟ್'ನ ('ರಾಮವರ್ಮ-ಲೀಲಾವತಿ', 1889) ಭಾಷಾಂತರಕಾರರಾದ ಆನಂದರಾಯರು ಇಂಗ್ಲಿಷ್ ಜನರಿಗಷ್ಟೇ ಸ್ವಾಭಾವಿಕವಾದ ವಿಚಾರಗಳನ್ನು ಕೈಬಿಟ್ಟಿರುವುದಾಗಿ ಸ್ಪಷ್ಟ ವಾಗಿ ಒಪ್ಪಿಕೊಳ್ಳುತ್ತಾರೆ. ಅಲ್ಲದೆ ನಾಟಕಗಳು ಸುಖದಲ್ಲಿ ಕೊನೆಗೊಳ್ಳಬೇಕೆಂಬ ಕಾಲಪ್ರತಿಷ್ಠಿತವಾದ ಅಭಿಪ್ರಾಯವನ್ನು ಅನುಸರಿಸಿ ನಾಟಕದ ಅಂತ್ಯವನ್ನು ಬದಲಿ ಸಿರುವುದಾಗಿ ನಿರ್ದಾಕ್ಷಿಣ್ಯವಾಗಿ ಒಪ್ಪಿಕೊಳ್ಳುತ್ತಾರೆ. ಅವರ ನಾಟಕದ ಕೊನೆಗೆ ಒಂದು ಸಣ್ಣ ದೃಶ್ಯವಿದೆ: ಅದರಲ್ಲಿ ಮೂಲದ ಫ್ರಿಯರ್ ಲಾರೆನ್ಸನಿಗೆ ಪ್ರತಿಯಾದ ಪಾತ್ರ ಪ್ರೇಮಿಗಳಿಬ್ಬರನ್ನೂ ಉಳಿಸಬೇಕೆಂದು ದೇವರಿಗೆ ಮೊರೆಯಿಡುತ್ತಾನೆ; ಸತ್ತು ಮಲಗಿದ್ದ ರೋಮಿಯೊ ಮತ್ತು ಜೂಲಿಯೆಟರು ಎದ್ದುಕುಳಿತು, ಕಡೆಯವರೆಗೂ ಸುಖ ದಲ್ಲಿ ಬಾಳುತ್ತಾರೆ.

ಈ ಮೊದಲಿನ ಭಾಷಾಂತರಗಳಲ್ಲಿ ಬಳಸಿದ ಮಾಧ್ಯಮ ಸಾಮಾನ್ಯವಾಗಿ ಕಂದ ವೃತ್ತಗಳಿಂದ ಕೂಡಿದ ಗದ್ಯ. ಇಲ್ಲಿ ಭಾಷಾಂತರಕಾರರು ಅನುಸರಿಸಿರುವುದು ಆ ಕಾಲದ ರಂಗಭೂಮಿಯ ಮೇಲೆ ಜನಪ್ರಿಯವಾಗಿದ್ದ ಸಾಂಪ್ರದಾಯಿಕ ಪೌರಾಣಿಕ ನಾಟಕಗಳ ಧಾಟಿ. ಶ್ರೀಕಂಠೇಶಗೌಡರು ತಮ್ಮ 'ಪ್ರತಾಪರುದ್ರದೇವ'ದಲ್ಲಿ ಪ್ರಾಚೀನ ಕಂದವೃತ್ತಗಳ ಜೊತೆಗೆ ಅದಕ್ಕಿಂತ ಹೆಚ್ಚು ಸ್ವತಂತ್ರವಾದ ರಗಳೆಯ ಛಂದವನ್ನು ಬೇಕೆಂದೇ ಬಳಸಿದ್ದಾರೆಂಬುದು ಗಮನಿಸಬೇಕಾದ ಸಂಗತಿ. ಅಂದಿನ ಲಲಿತ ರಗಳೆಯಿಂದ ಇಂಗ್ಲಿಷಿನ 'ಬ್ಲ್ಯಾಂಕ್ ವರ್ಸ್'ಗೆ ಸರಿಸಮನಾದ ಸರಳ ರಗಳೆಗೆ ಒಂದೇ ಹೆಜ್ಜೆಯ ಅಂತರವಷ್ಟೆ. ಸಾಧಾರಣವಾಗಿ ಇವೆರಡರ ಸಂಬಂಧ ಇಂಗ್ಲಿಷಿನ 'ಹೆರಾಯಿಕ್ ಕಪ್ಲೆಟ್' ಮತ್ತು 'ಬ್ಲ್ಯಾಂಕ್ ವರ್ಸ್'ಗಳ ನಡುವಿನಷ್ಟೆಂದು ಅನ್ನಬಹುದು. ಲಲಿತ ರಗಳೆ ಪ್ರಾಸ ತೊರೆದು, ಪಾದದಿಂದ ಪಾದಕ್ಕೆ ಹರಿಯುತ್ತ ಹೋದರೆ ಅದೇ ಸರಳ ರಗಳೆಯಾಗುತ್ತದೆ. ಮುಂದೆ ಈ ಸರಳ ರಗಳೆಯೇ ಕುವೆಂಪುರವರಂತಹ ಕವಿಗಳ ಕೈಯಲ್ಲಿ ಪದ್ಯನಾಟಕದ ಸಾಮಾನ್ಯ ಮಾಧ್ಯಮವಾಯಿತು. ಮುಖ್ಯವಾಗಿ ಪ್ರಾಸದ ಒತ್ತರಕ್ಕೆ ಸಿಕ್ಕಿ ಹಾಗೂ ಪಾದಾಂತ್ಯದಲ್ಲಿ ಬರುವ ಯತಿಯಿಂದಾಗಿ ಶ್ರೀಕಂಠೇಶಗೌಡರ ರಗಳೆ ಅನಿವಾರ್ಯವಾಗಿ ಸೆಟೆದು ನಿಲ್ಲುತ್ತದೆ.

ಎಂ. ಎಸ್. ಪುಟ್ಟಣ್ಣನವರ 'ಕಿಂಗ್ ಲಿಯರ್' ('ಹೇಮಚಂದ್ರರಾಜ ವಿಲಾಸ', 1899) ಮೊದಲಿನ ರೂಪಾಂತರಗಳ ಮಾದರಿಗೆ ಇನ್ನೊಂದು ಉದಾಹರಣೆ. ಇದು ಸಹ ಇಂಗ್ಲಿಷ್ ನಾಟಕವನ್ನು ಭಾರತದ ನೆಲಸಿನಲ್ಲಿ ನಾಟಿ ಹಾಕುವ ಪ್ರಯತ್ನವೇ. ಬಳಸಿದ ಮಾಧ್ಯಮ ಉದ್ದಕ್ಕೂ ಗದ್ಯ. ಅವರ ಸ್ವತಂತ್ರ ಕೃತಿಗಳಲ್ಲಿ ಪುಟ್ಟಣ್ಣನವರದು ಗ್ರಾಂಥಿಕತೆಯ ಕರೆ ಕಾಣದ ಸರಸವಾದ ಶ್ರೇಷ್ಠ ಕನ್ನಡ ಶೈಲಿ. ಅಂತಹದೇ ಶೈಲಿಯನ್ನು ಭಾಷಾಂತರದಲ್ಲೂ ನಿರೀಕ್ಷಿಸುವುದು ಸರಿಯಲ್ಲ. ಅವರ ಅನುವಾದದ ಉದ್ದಕ್ಕೂ ಇಂಗ್ಲಿಷ್ ವಾಕ್ಯಗಳು ಅವರ ಕಿವಿಯಲ್ಲಿ ಗುಣಗುಣಿಸುತ್ತಿರುವುದನ್ನು ನಾವು ನೋಡಬಹುದು. ಅಲ್ಲದೆ ಎಲ್ಲೋ ಕೆಲವು ದೃಶ್ಯಗಳನ್ನು ಬಿಟ್ಟರೆ, ಮೂಲದ ವಿಷಯ ಸಹ ಅವರು ಪಳಗಿಸಿಕೊಂಡಿದ್ದ ಶೈಲಿಗೆ ಒಗ್ಗುವಂತಹದಲ್ಲ. ಒಟ್ಟಿನಲ್ಲಿ ನಾಟಕ ಓದುವಂತಹುದು. ಆದರೆ ಅಲ್ಲಲ್ಲಿ ನಾಟಕಕ್ಕಿಂತ ಕಥನಕ್ಕೆ ಹೆಚ್ಚು ಒಪ್ಪುವ ಗ್ರಾಂಥಿಕ ಶೈಲಿಯಿಂದಾಗಿ ಕುಂದುಂಟಾಗಿದೆ. ಕೈಲಾಸಂ ಬಂಡಾಯವೇಳುವವರೆಗೆ ನಮ್ಮ ರಂಗ-ಭೂಮಿಗೆ ಅಂತಹ ಬಿಗಿಯಾದ ಸಂಭಾಷಣೆಯ ಶಾಪ ತಟ್ಟಿತ್ತು. ಸಾಧಾರಣವಾದ ಆಡುಮಾತಿಗೆ ಹತ್ತಿರವುಳಿದೂ ತೀಕ್ಷ್ಣತೆಯನ್ನೂ ತೀಕ್ಷ್ಣತೆಗೆ ಅಗತ್ಯವಾದ ಲಯದ ಗುಣವನ್ನೂ ಪಡೆದ, ಗಂಭೀರ ನಾಟಕಗಳಿಗೆ ಒದಗಬಲ್ಲ ಗದ್ಯಶೈಲಿ ಕನ್ನಡಕ್ಕೆ ಇನ್ನೂ ಸಿದ್ಧಿಸಬೇಕಾಗಿದೆಯೆಂಬುದನ್ನು ನಾವು ಒಪ್ಪಿಕೊಳ್ಳಬೇಕು. ಆದುದರಿಂದ ಈ ಹಳೆಯ ಕಾಲದ ನಾಟಕಗಳು ಒಂದು ಕಡೆ ಒಳ್ಳೆಯ ನಾಟಕಯೋಗ್ಯವಾದ ಗದ್ಯದಿಂದ ಇನ್ನೊಂದು ಕಡೆ ರಂಗದ ಮೇಲೆ ಬಾಯಲ್ಲಿ ಹೊರಳದಷ್ಟು ಬಿಗಿಯಾದ ಗ್ರಾಂಥಿಕ ಗದ್ಯಗಳ ನಡುವೆ, ರಸಭಂಗವನ್ನುಂಟುಮಾಡುತ್ತ ತೊಯ್ದಾಡಿದರೆ ಆಶ್ಚರ್ಯವೇನಿಲ್ಲ.

ಸಾಧಾರಣವಾಗಿ ಈ ಶತಮಾನದ ಎರಡನೆಯ ದಶಕದವರೆಗೆ ಆದ ಭಾಷಾಂತರಗಳೆಲ್ಲವೂ ಈ ಬಗೆಯವೇ ಎನ್ನಬಹುದು. ರೂಪಾಂತರಕ್ಕೆ ಆರಿಸಿಕೊಂಡ ನಾಟಕಗಳನ್ನು



**‘ದಿ ಮರ್ಚೆಂಟ್ ಅಫ್ ವೆನಿಸ್’ನಲ್ಲಿ ಯೆಹೂದಿ ಷೈಲಾಕ್ ಮತ್ತು ವಕೀಲ ವೇಷದ ಪೋರ್ಷಿಯಾ**

“ಆಣೆ, ಆಣೆ! ದೇವರ ಮೇಲೆ ಇಟ್ಟಾಣೆ ಅದು.
ಅದ ಮುರಿದು ನನ್ನಾತ್ಮಕ್ಕೆ ಪಾಪ ಹೊರಿಸಲೆ?”—ಷೈಲಾಕ್.

ಕುರಿತು ಒಂದು ಮಾತು ಹೇಳುವುದು ಅವಶ್ಯಕ. ನಿರೀಕ್ಷಿಸಬಹುದಾದಂತೆ ಷೇಕ್ಸ್ಪಿಯರನ ಚಾರಿತ್ರಿಕ ಮತ್ತು ರೋಮನ್ ನಾಟಕಗಳ ಗೋಜಿಗೆ ಯಾರೂ ಹೋಗಿಲ್ಲ. ‘ಆ್ಯಸ್ ಯು ಲೈಕ್ ಇಟ್’ ಅನ್ನು ಒಬ್ಬಿಬ್ಬರು ಭಾಷಾಂತರ ಮಾಡಿದ್ದರೂ ಮೂರು ಹಿರಿಯ ಹರ್ಷನಾಟಕಗಳಲ್ಲಿ ಯಾವುವೂ ಕನ್ನಡ ರಂಗಭೂಮಿಯ ಮೇಲೆ ಕಾಣಿಸಿಕೊಂಡಿಲ್ಲ. ‘ದಿ ಟೇಮಿಂಗ್ ಅಫ್ ದಿ ಷ್ರೂ’ ಮತ್ತೆ ಮತ್ತೆ ರೂಪಾಂತರಗೊಂಡು ರಂಗದ ಮೇಲೆ ತುಂಬ ಯಶಸ್ವಿ ಪಡೆದಿದೆ. ಹಿರಿಯ ದುರಂತನಾಟಕಗಳಲ್ಲಿ ನಾಲ್ಕೂ ಭಾಷಾಂತರವಾಗಿವೆ. ಕೆಲವನ್ನು ರಂಗದ ಮೇಲೂ ಆಡಲಾಗಿದೆ. ಆದರೆ ‘ರಾಮವರ್ಮ-ಲೀಲಾವತಿ’ಯೇ (‘ರೋಮಿಯೊ ಅಂಡ್ ಜೂಲಿಯೆಟ್’) ಇವೆಲ್ಲದಕ್ಕಿಂತ ಹೆಚ್ಚಾಗಿ ಜನರ ಮೆಚ್ಚಿಗೆಯನ್ನು ಗಳಿಸಿದ್ದಂತೆ ತೋರುತ್ತದೆ.

1920ರ ನಂತರದ ಭಾಷಾಂತರಕಾರರಲ್ಲಿ ಅವರು ಭಾಷಾಂತರಿಸಿದ ನಾಟಕಗಳ ಆಳವಾದ ವ್ಯಂಜನಾರ್ಥದ ಅರಿವು ಹೆಚ್ಚು ಹರಿತವೂ ವಿಮರ್ಶಾತ್ಮಕವೂ ಆಗಿರುವುದನ್ನು ಕಾಣಬಹುದು. ಪ್ರದರ್ಶನಕ್ಕೆ ಅತ್ಯಂತ ಯೋಗ್ಯವಾಗಿ ಹೊಂದಿಕೊಂಡ ಪರ್ವತವಾಣಿಯವರ ‘ಬಹದ್ದೂರ್ ಗಂಡ’—‘ದಿ ಟೇಮಿಂಗ್ ಅಫ್ ದಿ ಷ್ರೂ’ನ ರೂಪಾಂತರ—ಭಾಷಾಂತರದ ಗುಂಪಿಗೆ ಸೇರುವುದಿಲ್ಲ. ಹಾಗೆಯೇ ಕುವೆಂಪು ಅವರ ‘ಬಿರುಗಾಳಿ’ ಸಹ. ‘ಬಿರುಗಾಳಿ’, ‘ದಿ ಟೆಂಪೆಸ್ಟ್’ ನಾಟಕದ—ಭಾರತೀಯ ಹೆಸರು ಹಿನ್ನೆಲೆಗಳನ್ನು

ಪಡೆದ—ಸ್ವತಂತ್ರ ಪದ್ಯಾನುವಾದ. ಅವರ ಕರ್ತೃ ಮುಂದೆ ಮಹಾಕವಿಯಾಗಲಿರುವರೆಂದು ಸ್ಪಷ್ಟವಾಗಿ ಸಾರುವ ಉತ್ತಮ ಕೃತಿ ಅದು. ಅವರ 'ರಕ್ತಾಕ್ಷಿ' ನಿಸ್ಸಂದೇಹವಾಗಿ 'ಹ್ಯಾಮ್ಲೆಟ್' ನಾಟಕದಿಂದ ಪ್ರಭಾವಿತವಾಗಿದೆ. ರಾಣಿ ತನ್ನ ಗಂಡನಿಗೆ ವಿಶ್ವಾಸ-ಘಾತಕಿಯಾಗುವುದು, ದೊರೆಯನ್ನು ಕೊಂದ ಅವಳ ಮಿಂಡ ದೊರೆಯ ಮಗನನ್ನೂ ಕೊಲ್ಲಲು ಸಂಚು ಹೂಡುವುದು, ಸತ್ತ ದೊರೆಯ ಪ್ರೇತ ಕಾಣಿಸಿಕೊಂಡು ಗುಟ್ಟನ್ನು ಬಯಲು ಮಾಡುವುದು, ಅಫೀಲಿಯಾಳಿಗೆ ತಾಳೆ ಹೊಂದುವ ಪಾತ್ರವೊಂದಿದ್ದು, ಅವಳಿಗೆ ಹುಚ್ಚು ಹಿಡಿಯುವುದು ಮುಂತಾದ ಸನ್ನಿವೇಶಗಳಲ್ಲಿನ ಹಲಕೆಲವು ಸಾಮ್ಯತೆಗಳನ್ನು ಬಿಟ್ಟರೆ, 'ರಕ್ತಾಕ್ಷಿ'ಯಲ್ಲಿ ಷೇಕ್ಸ್‌ಪಿಯರನದೆನ್ನಬಹುದಾದ ದುರಂತನಾಟಕದೃಷ್ಟಿ ಹೆಚ್ಚಾಗಿಲ್ಲ. ಅವನ್ನು ಬರೆಯುವುದರಲ್ಲಿ ಕವಿಯ ಉದ್ದೇಶ—ಸ್ವತಂತ್ರ ಕೃತಿಯ ರಚನೆ.

ಈ ನಾಟಕಗಳನ್ನು ಬಿಟ್ಟರೆ ಈ ಕಾಲದ ಯಥಾವತ್ತಾದ ಭಾಷಾಂತರಗಳು ಸಾಮಾನ್ಯವಾಗಿ ಹಿಂದಿನವಕ್ಕಿಂತ ಹೆಚ್ಚು ಓದುವಂತಿವೆ; ಮೂಲವನ್ನು ಪ್ರಾಮಾಣಿಕತೆಯಿಂದ ಅನುಸರಿಸುತ್ತವೆ. ಮುಖ್ಯವಾಗಿ ರಂಗದ ಮೇಲೆ ಆಡುವ ಉದ್ದೇಶದಿಂದ ಬರೆದವಲ್ಲವಾದ ಕಾರಣ ಅವುಗಳಲ್ಲಿ ಮೂಲದ ಹೆಸರು ಹಿನ್ನೆಲೆಗಳನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ. ಅಲ್ಲಿಯ ವಾತಾವರಣವನ್ನು ಭಾರತೀಯ ವಾತಾವರಣಕ್ಕೆ ಮಾರ್ಪಡಿಸಿಕೊಳ್ಳುವ ಪ್ರಯತ್ನ ನಡೆದಿಲ್ಲ. ಡಿ. ವಿ. ಜಿ. ಅವರ 'ಮೆಕ್‌ಬೆತ್' ತುಂಬ ಪಾಂಡಿತ್ಯಪೂರ್ಣವೂ ಗಂಭೀರವೂ ಆಗಿದೆ. ಅವರು ಉಪಯೋಗಿಸಿರುವ ಛಂದಸ್ಸು ಸರಳ ರಗಳೆ. ವೈ. ಎಂ. ಷಣ್ಮುಖಯ್ಯನವರ 'ಹ್ಯಾಮ್ಲೆಟ್' ಮತ್ತು 'ರೋಮಿಯೊ ಅಂಡ್ ಜೂಲಿಯೆಟ್'ಗಳ ಗದ್ಯಾನುವಾದಗಳು ಓದುವಂತಿವೆ. ಆದರೆ ಷೇಕ್ಸ್‌ಪಿಯರನ ಕಾವ್ಯಗುಣ ಈ ಅನುವಾದಗಳಲ್ಲಿ ನಷ್ಟವಾಗಿರುವುದು ಅನಿವಾರ್ಯ. ಜಿ. ಗುಂಡಣ್ಣನವರ 'ವೆನಿಸ್ಸಿನ ವ್ಯಾಪಾರಿ' 'ದಿ ಮರ್ಚೆಂಟ್ ಆಫ್ ವೆನಿಸ್'ನ ಹೆಚ್ಚು ಯಶಸ್ವಿಯಾದ ಪದ್ಯಾನುವಾದ. 'ಶ್ರೀನಿವಾಸ'ರು 'ಹ್ಯಾಮ್ಲೆಟ್', 'ಕಿಂಗ್ ಲಿಯರ್', 'ದಿ ಟೆಂಪೆಸ್ಟ್' ಮತ್ತು 'ಟ್ವೆಲ್ಫ್ತ್ ನೈಟ್'ಗಳ ಜೊತೆಗೆ ಇತರ ನಾಟಕಗಳ ಆಯ್ದ ದೃಶ್ಯಗಳ ಪದ್ಯಾನುವಾದಗಳನ್ನೂ ಲಕ್ಷ್ಯವಹಿಸಿ ಮಾಡಿದ್ದಾರೆ. ಮೂಲಕ್ಕೆ ಚ್ಯುತಿ ಬರದಂತೆ ಬಹಳ ಶ್ರಮ ವಹಿಸಲಾಗಿದೆ. ಮೇಲೆ ಹೇಳಿದ ಇತರ ಪದ್ಯಾನುವಾದಗಳಲ್ಲಿಯಂತೆಯೇ ಇಲ್ಲೂ ಬಳಸಿರುವ ಮಾಧ್ಯಮ ಸರಳ ರಗಳೆ. ಕಾವ್ಯಗತಿಯಲ್ಲಿ ವೈವಿಧ್ಯ ಹಾಗೂ ಸಲಿಲತೆಗಳನ್ನು ತರಲು ಪ್ರಜ್ಞಾಪೂರ್ಣವಾದ ಪ್ರಯತ್ನ ನಡೆದಿದೆ. ಆದರೆ ಶೈಲಿಯಲ್ಲಿ ಏನೋ ಒಂದು ಬಗೆಯ ವಿಲಕ್ಷಣತೆ, ವಾಕ್ಯಬಂಧದಲ್ಲಿ ಶಿಥಿಲತೆಗಳು ತಲೆ ಹಾಕಿ ಭಾಷಾಂತರಗಳ ರಸೋ-ತ್ಪಾದನ ಶಕ್ತಿ ಕಡಿಮೆಯಾಗಿದೆ. ಜೊತೆಗೆ ಶುದ್ಧ ವಿದೇಶೀ ವಾತಾವರಣದಲ್ಲಿ ಭಾರತೀಯ ಹೆಸರು, ಹಬ್ಬ ಮುಂತಾದವುಗಳ ಸಂದರ್ಭ-ಸೂಚನೆಗಳು ಬರುವುದು ದುರದೃಷ್ಟಕರ. 'ಕಿಂಗ್ ಲಿಯರ್' ನಾಟಕದ ಒಂದು ಹಾಡಿನಲ್ಲಿ 'Child Rowland'ನ ಪ್ರಸ್ತಾಪ ಬರುತ್ತದೆ. ಆ ಚೈಲ್ಡ್ ರೌಲೆಂಡ್ 'ಶ್ರೀನಿವಾಸ'ರ ಭಾಷಾಂತರದಲ್ಲಿ 'ಬಾಲ ಅಭಿಮನ್ಯು'ವಾಗಿ ಬಿಟ್ಟಿದ್ದಾನೆ. ತನ್ನ ಹೆಸರನ್ನೇ ಉಳಿಸಿಕೊಂಡು, ಬ್ರಿಟನ್ನಿನ ರಾಜನಾಗಿಯೇ ಕಾಣಿಸಿಕೊಳ್ಳುವ ಲಿಯರ್ ದೊರೆ 'ಕಂಚಿಯ ಪಂಡಿತ'ನ (ಮೂಲದ 'ದಿ ಲರ್ನೆಡ್ ಥೀಬನ್') ಪ್ರಸ್ತಾಪ ಮಾಡುತ್ತಾನೆ. 'ಕಿಂಗ್ ಹೆನ್ರಿ ದಿ ಫೋರ್ಥ್'ನ

ಎರಡನೆ ಭಾಗದ ಸೈಲೆನ್ಸ್ ಮೂಲದ 'ಪ್ರೋವ್ ಟ್ರೈಡ್'ನ ಬದಲು 'ಬಲಿಪಾಡ್ಯಮಿ'ಯನ್ನು ಕುರಿತು ಹಾಡುತ್ತಾನೆ. 'ಶ್ರೀನಿವಾಸ'ರು ತಾವು ಭಾಷಾಂತರಿಸಿದ ನಾಟಕಗಳ ಒಳಮರ್ಮವನ್ನು ಸೂಕ್ಷ್ಮವಾಗಿ ಗ್ರಹಿಸಿದ್ದಾರೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದನ್ನು ಹೊರಗೆಡಹುವುದರಲ್ಲಿ ಅವರು ಸದಾ ಯಶಸ್ವಿಯಾಗಿದ್ದಾರೆಂದು ಹೇಳಬರುವುದಿಲ್ಲ.

ಕರ್ನಾಟಕ ರಂಗಭೂಮಿಯ ಮೇಲೆ ಷೇಕ್ಸ್ಪಿಯರನ ನಾಟಕಗಳ ಪ್ರದರ್ಶನವನ್ನು ಕುರಿತು ಹೇಳಿಕೊಳ್ಳುವಂತಹದೇನೂ ಹೆಚ್ಚಿಗೆ ಇಲ್ಲ. 'ರಾಮವರ್ಮ-ಲೀಲಾವತಿ'ಯ ಜನಪ್ರಿಯತೆಗೆ ನಮ್ಮ ನಟಶ್ರೇಷ್ಠ ಎ. ವಿ. ವರದಾಚಾರ್ಯರ ಪ್ರತಿಭೆ ಕೊಂಚಮಟ್ಟಿಗೆ ಕಾರಣ. ನಮ್ಮ ರಂಗಭೂಮಿಯನ್ನು ಷೇಕ್ಸ್ಪಿಯರನ ಬೇರೆ ಯಾವ ಒಂದು ನಾಟಕವೂ ಅದರಷ್ಟು ದೀರ್ಘಕಾಲ ಆಳಿಲ್ಲ. ಬಳ್ಳಾರಿ ರಾಘವಾಚಾರ್ಯರನ್ನು ಪ್ರಮುಖ ನಟರನ್ನಾಗಿ ಪಡೆದಿದ್ದ ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್ 'ಹ್ಯಾಮ್ಲೆಟ್', 'ರೋಮಿಯೊ ಅಂಡ್ ಜೂಲಿಯೆಟ್', 'ಮೆಕ್‌ಬೆತ್' ಮುಂತಾದ ನಾಟಕಗಳನ್ನು ಪ್ರತಿಷ್ಠಿತ ಪ್ರೇಕ್ಷಕವೃಂದಗಳ ಮುಂದೆ ಅನೇಕ ಬಾರಿ ಮೂಲ ಇಂಗ್ಲಿಷಿನಲ್ಲಿಯೇ ಆಡಿ ತೋರಿಸಿದೆ. ಆದರೆ ವ್ಯವಸಾಯೀ ರಂಗಭೂಮಿಯ ಮೇಲೆ ಶ್ರೀ ವರದಾಚಾರ್ಯರ ಕಾಲದ ನಂತರ ಷೇಕ್ಸ್ಪಿಯರ್ ನಾಟಕಗಳ ಪುನರುಜ್ಜೀವನವಾದಂತಿಲ್ಲ.

ನಮ್ಮ ಸಾಹಿತ್ಯದ ಮೇಲೆ ಷೇಕ್ಸ್ಪಿಯರನ ಪ್ರಭಾವ ಎಷ್ಟಾಗಿದೆಯೆಂಬುದನ್ನು ಅಳೆಯುವಾಗ, ಆಗಿರುವ ಭಾಷಾಂತರ-ರೂಪಾಂತರಗಳಿಗಿಂತ ಮಿಗಿಲಾಗಿ ಕವಿಯ ಪ್ರತಿಭೆ ಕನ್ನಡದಲ್ಲಿ ಯಾವ ಬೆಳಕನ್ನು ಹೊತ್ತಿಸಿದೆಯೆಂಬುದನ್ನು ನಾವು ಗಮನಿಸಬೇಕು. ಷೇಕ್ಸ್ಪಿಯರನ ಚೇತನ ಎಂದು ನಾವು ಯಾವುದನ್ನು ಕರೆಯುವೆವೊ—ಮಾನವ ವ್ಯವಹಾರಗಳಲ್ಲಿನ ಜಟಿಲತೆಯನ್ನು ಕಾಣುವ ಅವನ ದೃಷ್ಟಿ, ಮನುಷ್ಯಜೀವನದಲ್ಲಿ ಅವನಿಗಿರುವ ದುರಂತತೆಯ ಪ್ರಜ್ಞೆ, ಇತ್ಯಾದಿ—ಅದು ಕರ್ನಾಟಕದಲ್ಲಿ ನಮ್ಮ ಸ್ವಂತ ಪ್ರತಿಭೆಯಿಂದ ಪುನರ್‌ಸೃಷ್ಟಿ ಪಡೆದಿದೆಯೆ? ನಮ್ಮ ಹಿರಿಯ ಸಾಹಿತಿಗಳಲ್ಲಿ ಯಾರದಾದರೂ ಕೃತಿ "ಅಹ! ಷೇಕ್ಸ್ಪಿಯರನ ಉತ್ತರದಾಯಿ ಇವರು" ಎಂದು ನಾವು ಉದ್ಗಾರವೆತ್ತುವ ಹಾಗೆ ಮಾಡುವಂತಿದೆಯೆ? ಸ್ಪೆನ್ಸರನನ್ನು 'ಕವಿಯ ಕವಿ' ಎನ್ನುವ ಅರ್ಥದಲ್ಲಿ ನಮ್ಮ ಕವಿಗಳಲ್ಲಿ ಯಾರಿಗಾದರೂ ಷೇಕ್ಸ್ಪಿಯರ್ ಕವಿಯಾಗಿದ್ದಾನೆ ಎನ್ನಬಹುದೆ? ಈ ಪ್ರಶ್ನೆಗಳಿಗೆಲ್ಲ ನಕಾರವೇ ಉತ್ತರ. ಹೀಗನ್ನುವುದು ನಮ್ಮ ಕವಿಗಳಿಗೆ ಅಪಚಾರ ಬಗೆದಂತಲ್ಲ. ಅವರ ಮೇಲೆ ಗಾಢವಾದ, ಧಾತುರೂಪವಾದ ಪ್ರಭಾವ ಬೀರಿದವನು ಷೇಕ್ಸ್ಪಿಯರ್ ಅಲ್ಲ ಎಂದಷ್ಟೇ ಅದರ ಅರ್ಥ.

ಆಧುನಿಕ ಕನ್ನಡ ಕಾವ್ಯದಲ್ಲಿ ಅಲ್ಲಲ್ಲಿ ಷೇಕ್ಸ್ಪಿಯರನ ಪ್ರತಿಧ್ವನಿ ಕೇಳಿಬರುತ್ತದೆಂಬುದು ನಿಜ. ಇನ್ನು ಕೆಲವು ಕಾವ್ಯಭಾಗಗಳು ಷೇಕ್ಸ್ಪಿಯರನನ್ನು ನೆನಪಿಗೆ ತರುವಂತಿದ್ದರೂ ಅವು ಅವನಿಂದ ಪ್ರಾಪ್ತವಾದುವಲ್ಲ. ಉದಾಹರಣೆಗೆ ಅವನ 'ಆಲ್ ದಿ ವರ್ಲ್ಡ್ಸ್ ಎ ಸ್ಟೇಜ್' (ಇಡಿಯ ಜಗತ್ತೊಂದು ರಂಗಭೂಮಿ) ಅನ್ನು ನೆನಪಿಗೆ ತರುವ ಕಾವ್ಯಭಾಗಗಳು ಕನ್ನಡದಲ್ಲಿವೆ. ಆದರೆ ಜೀವನವೊಂದು ನಾಟಕ (ಮತ್ತು ದೇವರು ವಿಶ್ವದ ಮಹಾ ಸೂತ್ರಧಾರ) ಎಂಬ ವಿಚಾರಧಾರೆ ಎರಡು ಸಹಸ್ರ ವರ್ಷಗಳಿಗೂ ಹೆಚ್ಚು ಕಾಲದಿಂದ ನಮ್ಮಲ್ಲಿ ನಡೆದು ಬಂದಿದೆ.

ಷೇಕ್ಸ್ಪಿಯರನ ಕಾವ್ಯ ಇಲ್ಲವೇ ನಾಟಕಗಳ ಪುನರ್ನಿರ್ಮಾಣಕ್ಕೆ ಅಗತ್ಯವಾದ ಪ್ರತಿಕ್ರಿಯಾತ್ಮಕ ಕಲ್ಪನಾಶಕ್ತಿ—ಅದು ಸೃಷ್ಟ್ಯಾತ್ಮಕ ಕಲ್ಪನಾಶಕ್ತಿಯಿಂದ ಭಿನ್ನವಾದ ಇನ್ನೊಂದು ಬಗೆಯದೆಂದು ಪರಿಗಣಿಸಬಹುದಾದರೆ—ನಮ್ಮ ಕವಿಗಳಲ್ಲಿ ಅನೇಕರಿಗೆ ಇರಲಿಲ್ಲ. ಷೇಕ್ಸ್ಪಿಯರನ ಮಾದರಿಯ ಸಾನೆಟ್ಟುಗಳು ನಮ್ಮ ಲೇಖಕರಲ್ಲಿ ಅನೇಕರ ಮೇಲೆ ಪ್ರಭಾವ ಬೀರಿದ್ದರೂ ಸ್ವತಃ ಷೇಕ್ಸ್ಪಿಯರನ ಸಾನೆಟ್ಟುಗಳು ಕನ್ನಡಕ್ಕೆ ಭಾಷಾಂತರವಾದುದನ್ನು ನಾನು ಕಾಣೆ.[1] ಕುವೆಂಪು, ಬೇಂದ್ರೆ, ಪುತಿನ ತಮ್ಮ ತಮ್ಮ ಬಗೆಯಲ್ಲಿ ದೊಡ್ಡ ಕವಿಗಳೇ. ಆದರೆ ಅವರಿಗೆ ಅರಿವು ಮಾಡಿಕೊಡಲು ತಮ್ಮ ಸ್ವಂತದ ದರ್ಶನವೇ ಬೇಕಾದಷ್ಟಿರುವ ಕಾರಣ ಅವರು ಷೇಕ್ಸ್ಪಿಯರನಿಂದ ಭಾಷಾಂತರ, ರೂಪಾಂತರ, ಪುನರ್ರಚನೆಗಳ ಕಡೆಗೆ ಗಮನ ಕೊಡಲಾಗಿಲ್ಲ. ಬಿ.ಎಂ.ಶ್ರೀ. ಒಬ್ಬರಿಗೆ ಮೇಲೆ ಹೇಳಿದ ಪ್ರತಿಕ್ರಿಯಾತ್ಮಕ ರೀತಿಯ ಕಲ್ಪನಾಶಕ್ತಿಯಿತ್ತು. ಅವರು ಷೇಕ್ಸ್ಪಿಯರನನ್ನು ಇದು ಮೂರ್ತಿಪೂಜೆಯೋ ಎನ್ನುವ ಮಟ್ಟಿಗೆ ಪ್ರೀತಿಸುತ್ತಿದ್ದರು. ಆದರೆ ಅವರು ಬರೆಯಲು ಕುಳಿತಾಗ ಇಸ್ಕೈಲಸ್ ಮತ್ತು ಸಾಫೊಕ್ಲೀಸರು ಅವರನ್ನು ಷೇಕ್ಸ್ಪಿಯರನಿಂದ ಸೆಳೆದುಕೊಂಡರು. ಪ್ರಾಯಶಃ ಸತ್ಯ ಇದೇನೋ: ಆಧ್ಯಾತ್ಮಿಕವಾಗಿ ಇಂಗ್ಲಿಷರಿಗಿಂತ ಗ್ರೀಕರಿಗೆ ನಾವು ಹೆಚ್ಚು ಹೊಂದಿಕೊಂಡಿದ್ದೇವೆ. ನಮ್ಮಲ್ಲಿ ಗ್ರೀಕರಿಗಿರುವಂತೆಯೇ ವಿಶ್ವರೂಪವಾದ ಶ್ರೀಮಂತ ಪುರಾಣಸಂಪತ್ತಿದೆ. ಈ ಮಹಾ ಪುರಾಣ ಕಥೆಗಳು ನಮ್ಮನ್ನು ಕಟ್ಟಿಹಾಕಿವೆ. ಅವುಗಳಲ್ಲಿ ನಾವು ಕಾಣುವ ಸೂಕ್ಷ್ಮವಾದ ಅರ್ಥ ಹಾಗೂ ಅವು ವಿಧಿಸುವ ಜೀವನ-ವಿಧಿಗಳು ಜೀವನದ ಜಟಿಲತೆಯ ಚಿತ್ರಣಕ್ಕಿಂತ ಹೆಚ್ಚಾಗಿ ನಮ್ಮ ಕಲ್ಪನೆಯನ್ನು ಬೆಳಗಿಸುತ್ತವೆ. ಆದರೆ ಈ ಮಾತು 'ರೊಮ್ಯಾಂಟಿಕ್' ಸಂಪ್ರದಾಯದ ವಿರುದ್ಧ ಬಂಡಾಯವೆದ್ದ 'ನವ್ಯ ಕವಿತೆ'ಯ ಪಂಥಕ್ಕೆ ಅನ್ವಯಿಸುವುದಿಲ್ಲ.

ಈ ಶತಮಾನದ ಎರಡು ಮತ್ತು ಮೂರನೆ ದಶಕಗಳಲ್ಲಿ ತುಂಬು ಬಿರುಸಿನಿಂದ ಬೀಸಿ ಬಂದ ಕನ್ನಡ ಕಾವ್ಯಪ್ರಪಂಚದಲ್ಲಿನ ಮೊದಲ ಬಂಡಾಯ ಎಲಿಜಬೆತ್ ಯುಗದ ಕವಿಗಳಿಗಿಂತ ಹೆಚ್ಚಾಗಿ ಇಂಗ್ಲಿಷ್ 'ರೊಮ್ಯಾಂಟಿಕ್' ಸಂಪ್ರದಾಯದವರಿಗೆ ಋಣಿಯಾಗಿತ್ತು. ಅನೇಕ ವೇಳೆ ನಾವು ಈ ಋಣವನ್ನು ಸಹ ಅತಿ ಮಾಡುತ್ತೇವೆ. 'ರಾಮಾಯಣ', 'ಭಾರತ' ಮುಂತಾದ ಪುರಾತನ ಮಹಾಕಾವ್ಯಗಳ ವಸ್ತು ಮತ್ತು ಅವುಗಳಲ್ಲಿ ಬರುವ ಮಹಾವ್ಯಕ್ತಿಗಳು—ಇವುಗಳ ಮೇಲೆ ನೆಟ್ಟಿದ್ದ ನಮ್ಮ ಗಮನವನ್ನು ಬೇರೆಡೆಗೆ ತಿರುಗಿಸಿದುದು, ಪ್ರಕೃತಿ ಮತ್ತು ಅದರ ಶಬ್ದ-ದೃಶ್ಯಗಳ ಹೊಸದೊಂದು ಅದ್ಭುತ ಜಗತ್ತಿಗೆ ಕಣ್ಣು ತೆರೆಸಿದುದು, ಭಾವಗೀತೆಯ ಛಂದಸ್ಸಿನಲ್ಲಿ ಪ್ರಯೋಗಕ್ಕೆ ದಾರಿ ಮಾಡಿಕೊಟ್ಟುದು, ಎಲ್ಲಕ್ಕಿಂತ ಹೆಚ್ಚಾಗಿ ಜನಸಾಮಾನ್ಯರ ಜೀವನದಲ್ಲಿ ನಮ್ಮ ಆಸಕ್ತಿಯನ್ನು ಕೆರಳಿಸಿದುದು ಇಂಗ್ಲಿಷ್ ಸಾಹಿತ್ಯದ ಪ್ರಭಾವವೇ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಮೊದಲಿನ ಕೆಲ ವರ್ಷಗಳ ನಂತರ ಪಾಶ್ಚಾತ್ಯ ಪ್ರಭಾವ

---

[1] ಪ್ರಾಯಶಃ ಮೊಟ್ಟಮೊದಲ ಬಾರಿಗೆ, ಬೇರೆ ಬೇರೆ ಕವಿಗಳು ಮಾಡಿದ ಷೇಕ್ಸ್ಪಿಯರನ ಹದಿನಾರು ಸಾನೆಟ್ಟುಗಳ ಭಾಷಾಂತರ ಈ ಸಂಪುಟದಲ್ಲಿ ಪ್ರಕಟವಾಗಿದೆ.—ಸಂ.

ಸ್ವಲ್ಪ ಕ್ಷೀಣಿಸಿತು. 'ರಾಮಾಯಣ', 'ಮಹಾಭಾರತ'ಗಳ ಚೇತನ ಸಮುಜ್ಜ್ರೋ-ಪಾದಿಯ ಮಾರ್ಪಾಡು ಹೊಂದಿ ಮತ್ತೆ ಕಾಣಿಸಿಕೊಂಡಿತು. ಉಪನಿಷತ್ತುಗಳ, ರಾಮಕೃಷ್ಣ ಪರಮಹಂಸರ, ಅರವಿಂದರ ಅನುಭಾವಗಳು ನಮ್ಮ ಹಿರಿಯ ಕವಿಗಳ ಕಾಣ್ಕೆಯ ಮೇಲೆ ಪ್ರಭಾವ ಬೀರಿದವು.

ಕಾವ್ಯ ಮತ್ತು ನಾಟಕಗಳಲ್ಲಿ ಹೊಸ ಪ್ರಯೋಗಗಳಾದುದು ಒಂದೇ ಹೊತ್ತಿನಲ್ಲಿ, 1920ರ ವೇಳೆಗೆ. ಮಹಾಕಾವ್ಯ-ಸಂಪ್ರದಾಯದ ವಿರುದ್ಧ ಎರಡೂ ಪ್ರಕಾರಗಳಲ್ಲಿ ಒಂದೇ ಬಗೆಯ ಕ್ರಾಂತಿಯಾಯಿತು. ಆದರೆ ನಾಟಕರಂಗದಲ್ಲಿ ಕೈಲಾಸಂರ ಮುಂದಾ-ಳ್ತನದಲ್ಲಿ ಉಂಟಾದ ಕ್ರಾಂತಿ ಮಾತ್ರ ಉಗ್ರ ವಾಸ್ತವಿಕ ಸ್ವರೂಪದ್ದು. ಅಲ್ಲಿಂದೀಚೆಗೆ ಅದರಲ್ಲಿ ಯಾವ ಸಾರ್ಥಕವಾದ ಬದಲಾವಣೆಯೂ ಆಗಿಲ್ಲ. ವಸ್ತು ಹಾಗೂ ಭಾವದಲ್ಲಿ ಭಾರತೀಯವಾದ ಪದ್ಯನಾಟಕಗಳ ರಚನೆಯಾಗಿದೆ. ಆದರೆ ನಡೆ ಹೆಚ್ಚಾಗಿ ವಾಸ್ತವಿಕ ಗದ್ಯನಾಟಕಗಳ ಕಡೆಯೇ. ಹಿಂದಿನ ಕಾವ್ಯ, ಪುರಾಣ, ರಮ್ಯಕಥೆಗಳು ಒಮ್ಮೊಮ್ಮೆ ಸರಸವಾದ, ಇನ್ನೊಮ್ಮೊಮ್ಮೆ ಕಟುವಾದ ಹಾಸ್ಯ-ವಿಡಂಬನೆಗಳಿಗೆ ಎಡೆಗೊಟ್ಟಿವೆ. ಸಾರ್ವಕಾಲಿಕ ಸಮಸ್ಯೆಗಳ ಸ್ಥಳವನ್ನು ಸಮಕಾಲೀನ ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳು ಆಕ್ರಮಿಸಿವೆ. ಒಬ್ಬಿಬ್ಬರು ನಾಟಕಕಾರರಲ್ಲಿ ಷೇಕ್ಸ್ಪಿಯರನಲ್ಲಿ ನಮಗೆ ಪರಿಚಿತವಾಗಿರುವ ಮಿಂಚಿನ ವೇಗದ ಭಾವಪರಿವರ್ತನೆಯನ್ನು ಕಾಣುತ್ತೇವೆ—ಹಾಸ್ಯಾತ್ಮಕವಾದುದು ಥಟ್ಟನೆ ಕರುಣೆಯಾಗಿ ಮಾರ್ಪಡುತ್ತದೆ; ಸ್ಥಾನಿಕ ಹಾಗೂ ತಾತ್ಕಾಲಿಕ ಸನ್ನಿವೇಶದ ಕಂಡಿಯಿಂದ ಸಾರ್ವತ್ರಿಕ ಹಾಗೂ ಸಾರ್ವಕಾಲಿಕವಾದುದು ಇಣಿಕಿ ಹಾಕುತ್ತದೆ. ಆದರೆ ಇಂಥ ನಿದರ್ಶನಗಳು ಅಪರೂಪ. ಒಟ್ಟಾರೆ ಆಧುನಿಕ ನಾಟಕ ಷೇಕ್ಸ್ಪಿಯರನ ಬಗೆಗೆ ಹೊಂದಿಕೊಂಡುದಲ್ಲ.

ನಾವು ಕನ್ನಡಿಗರು ಷೇಕ್ಸ್ಪಿಯರನಿಗೆ ಗಾಢವಾಗಿ ಒಲಿದಿದ್ದೇವೆ. ಆದರೆ ಸರಳ ರಗಳೆಯ ಮೇಲೆ ಆಗಿರುವ ವಿಶಿಷ್ಟ ಹಾಗೂ ಸಾರ್ಥಕವಾದ ಪ್ರಭಾವವೊಂದನ್ನು ಬಿಟ್ಟರೆ ನಮ್ಮ ಸಾಹಿತ್ಯದ ಮೇಲಿನ ಅವನ ಪ್ರಭಾವ ಬಲುಮಟ್ಟಿಗೆ ಪರೋಕ್ಷವಾದುದು. ಯಾವೊಬ್ಬ ಕರ್ತೃ ಅಥವಾ ಯಾವೊಂದು ಕೃತಿಯ ಮೇಲೂ ಬೆರಳಿಟ್ಟು ಗುರುತಿಸಬಹು ದಾದಂತಹವಲ್ಲ. ಅವನ ಒಂದೆರಡು ನಾಟಕಗಳ ವಸ್ತುಗಳು ಕನ್ನಡ ನಾಡಿಗೆ ಷೇಕ್-ಸ್ಪಿಯರನ ಪರಿಚಯವಾಗುವುದಕ್ಕೆ ಎಷ್ಟೋ ಹಿಂದಿನಿಂದಲೇ ನಮ್ಮಲ್ಲಿ ಪ್ರಚಾರದಲ್ಲಿ ದ್ದವು. ಷೇಕ್ಸ್ಪಿಯರನ ಹೆಸರನ್ನು ಕೇಳಿಯೂ ಇರದ ನಮ್ಮ ಅಜ್ಜಿಯರ ಬಾಯಿಂದ ದೇಶಭ್ರಷ್ಟಳಾದ ರಾಜಕುಮಾರಿಯ (ಷೇಕ್ಸ್ಪಿಯರನ 'ಕಿಂಗ್ ಲಿಯರ್'ನಲ್ಲಿಯಂತೆ ಅವಳು ರಾಜನ ಮೂರನೆ ಮಗಳಲ್ಲ, ಏಳನೆಯವಳು) ಕಥೆಯನ್ನು ನಮ್ಮಲ್ಲಿ ಅನೇಕರು ಕೇಳಿ ತಿಳಿದಿದ್ದೇವೆ. 'ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್'ನ ಮುಖ್ಯ ಕಥಾಸರಣಿ ಷೇಕ್ಸ್ಪಿಯರ್ ಕಂಡು ಕೇಳದ 'ಕಥಾಸರಿತ್ಸಾಗರ'ದಲ್ಲಿ ಕಾಣಸಿಗುತ್ತದೆಯೆಂಬುದನ್ನು ನಾವು ಇಲ್ಲಿ ನೆನೆಯಬಹುದು. ಈ ಕಥೆಗಳು ನಮ್ಮ ಜಾನಪದ ಸಾಹಿತ್ಯದಲ್ಲಿ ಷೇಕ್-ಸ್ಪಿಯರ್ ಮಾದರಿಯ ವಿನ್ಯಾಸ ಪಡೆದಿವೆಯೆಂದಾಗಲಿ ಅವನ ಪ್ರತಿಭಾಶಕ್ತಿಯ ಕಿಂಚಿ ತ್ತಾದರೂ ಅವುಗಳಲ್ಲಿವೆಯೆಂದಾಗಲಿ ನಾವು ಅಂದುಕೊಂಡರೆ ಅದು ಮೂರ್ಖತನ. ಆದರೆ ಈ ಹೋಲಿಕೆಗಳು, ಅವು ಕೆಲವೇ ಆದರೂ ಮೇಲ್ಮೈಯಿನದೇ ಆದರೂ, ಅವ

ನೊಡನೆ ನಮಗೊಂದು ಬಗೆಯ ನಂಟತನದ ಭಾವನೆಯನ್ನು ತಂದುಕೊಡುತ್ತವೆ. ಅವನ ಹಿರಿಯ ರುದ್ರನಾಟಕಗಳನ್ನೋ ಕೊನೆಗಾಲದ ನಾಟಕಗಳನ್ನೋ ನೋಡಿದಾಗ ಈ ನಂಟತನದ ಭಾವನೆ ಇದ್ದಿದ್ದೂ ಹೆಚ್ಚಾಗುತ್ತದೆ. ಇಲ್ಲಿ ಸಹ ನಾಟಕಗಳಲ್ಲಿನ ಕಾವ್ಯ-ಶೈಲಿ ಹಾಗೂ ಸೂಕ್ಷ್ಮತರ ಪಾತ್ರಸಂವಿಧಾನ ನಮಗೆ ಹೊಸತೂ ನಮ್ಮ ಮನಸೆಳೆಯು ವಂತಹುದೂ ಆದರೂ ಅವುಗಳ ಬಗೆ ನಮಗೆ ಹೊಸತಲ್ಲ. ಮಾನವ ವ್ಯವಹಾರಗಳಲ್ಲಿ ದುರಂತಪ್ರಜ್ಞೆ, ಕೇಡಿನ ವಿನಾಶಾತ್ಮಕ ಶಕ್ತಿ, ಅಂತಿಮದಲ್ಲಿ ಅದು ಅನುಭವಿಸುವ ವಿಫಲತೆ, ವಿಪತ್ತಿನ ಎದುರು ಮನುಷ್ಯ ಸೆಟೆದು ನಿಂತಾಗ ವ್ಯಕ್ತವಾಗುವ ಅವನ ಮಹಾ ವ್ಯಕ್ತಿತ್ವ, ಕೇಡಿನ ನಿರ್ನಾಮವಾದ ಮೇಲೆ ಮುಂದುವರಿಕೆಗೆ ಅನುವಾಗುವ ಹೊಸ ಹುಟ್ಟು, ಬದುಕಿನ ತೊರೆ ಎಡರುತೊಡರುಗಳನ್ನು ಲೆಕ್ಕಿಸದೆ ನಿರಂತರವಾಗಿ ಹರಿದೇ ತೀರು ವುದೆಂಬ ಆಕಾಂಕ್ಷೆ, ಜೀವನರಹಸ್ಯವನ್ನು ಕುರಿತ ಚಿಂತನೆ—ಇವೆಲ್ಲವೂ ವಾಲ್ಮೀಕಿ, ವ್ಯಾಸ, ಕಾಳಿದಾಸ, ಭವಭೂತಿಯರನ್ನು ಓದಿದವರಿಗೆ ಆಶ್ಚರ್ಯವೆನಿಸುವಷ್ಟು ನವೀನ ವೇನಲ್ಲ. ಹೀಗಂದ ಮಾತ್ರಕ್ಕೆ ಷೇಕ್ಸ್ಪಿಯರನ ಹಿರಿಮೆಯನ್ನು ಅಲ್ಲಗಳೆದಂತಲ್ಲ. ಬದಲು ಅವನ ಪ್ರತಿಭೆಯ ಸರ್ವತ್ರಗುಣವನ್ನು ಪ್ರಶಂಸಿಸಿದಂತೆ, ಮಾನವ ಚೇತನದ ಮೂಲ ಭೂತವಾದ ಏಕತೆಯನ್ನು ಒತ್ತಿ ಹೇಳಿದಂತೆ. ಇದು ಷೇಕ್ಸ್ಪಿಯರನ ಕಾವ್ಯ, ಕಲೆಗಳ ಅಪ್ರತಿಮ ಗುಣವನ್ನಾಗಲೀ ಅವುಗಳ ಅನನ್ಯತೆಯನ್ನಾಗಲಿ ನಿರಾಕರಿಸುವುದಲ್ಲ. ಷೇಕ್-ಸ್ಪಿಯರನನ್ನು ಅಭ್ಯಸಿಸುವುದರಿಂದ ವಾಲ್ಮೀಕಿ, ವ್ಯಾಸ, ಕಾಳಿದಾಸ, ಭವಭೂತಿಯರ ಬಗೆಗಿನ ನಮ್ಮ ತಿಳಿವು ಹೆಚ್ಚಿದೆಯೆಂದೇ ನಾವು ಒಪ್ಪಿಕೊಳ್ಳಬೇಕು. ನಾವು ಗಮನಿಸದೆ ಬಿಟ್ಟ ನಮಗೆ ಪರಿಚಿತವಾದೊಂದು ಜೀವನದರ್ಶನ ಷೇಕ್ಸ್ಪಿಯರನ ಮೂಲಕ ಹೊಸ ಆವಿಷ್ಕಾರದ ಹುಮ್ಮಸ್ಸಿನಿಂದ ನಮ್ಮ ಕಣ್ಣೆದುರು ನಿಂತಾಗ ನಾವು ಅವನಿಗೆ ಋಣಿ ಗಳೆಂಬುದನ್ನು ಒಪ್ಪಿಕೊಳ್ಳಬೇಕು. ಅಂತೆಯೇ ಈ ದರ್ಶನದ, ಪೂರ್ತಿಯಲ್ಲವಾದರೂ ಬಹ್ವಂಶದ, ಆದಿಮೂಲ ನಮ್ಮ ಪ್ರಾಚೀನ ಸಾಹಿತ್ಯದಲ್ಲೇ ಇದೆ, ನಮ್ಮ ಜೀವನದರ್ಶನದ ಸಂಮಿಶ್ರಣದಲ್ಲಿ ಇತರ ಅಂಶಗಳೂ ಸೇರಿಕೊಂಡಿವೆ ಎಂಬುದರ ಅರಿವೂ ನಮಗಿದೆ.

ಸಾಹಿತ್ಯ ಅಕಾದೆಮಿಯ ಮುಖಪತ್ರವಾದ 'ಇಂಡಿಯನ್ ಲಿಟರೇಚರ್'ನ ಷೇಕ್ಸ್ಪಿಯರ್ ವಿಶೇಷ ಸಂಚಿಕೆಯಲ್ಲಿ (1964) ಪ್ರಕಟವಾದ ಇಂಗ್ಲಿಷ್ ಲೇಖನದ ಅನುವಾದ ಇದು. ಸಾಹಿತ್ಯ ಅಕಾದೆಮಿಯ ಸೌಜನ್ಯಪೂರ್ಣ ಅನುಮತಿಯಿಂದ ಇಲ್ಲಿ ಕೊಡಲಾಗಿದೆ. ಅನುವಾದ ಸಂಪಾದಕರದ್ದು.





# ಕನ್ನಡದಲ್ಲಿ ಷೇಕ್‌ಸ್ಪಿಯರನ ನಾಟಕಗಳು

**ತ. ಸು. ಶಾಮರಾಯ**

ಹತ್ತೊಂಬತ್ತನೆಯ ಶತಮಾನದ ಕಡೆಯ ಘಟ್ಟವನ್ನು ಮುಟ್ಟುವವರೆಗೆ ಕನ್ನಡ ರಂಗಭೂಮಿಯ ಇತಿಹಾಸವೆಂಬುದು ಬರಿಯ ಒಂದು ಮರುಭೂಮಿ. ಅದರಲ್ಲಿ ಕಾಣ ಬರುವ ಏಕೈಕ ಮರುವನವೆಂದರೆ ಹದಿನೇಳನೆಯ ಶತಮಾನದಲ್ಲಿ ಹುಟ್ಟಿಕೊಂಡಿರುವ 'ಮಿತ್ರವಿಂದಾ ಗೋವಿಂದ'. ಸಂಸ್ಕೃತ 'ರತ್ನಾವಳಿ'ಯ ಭಾಷಾಂತರರೂಪದ ಈ ರೂಪಕ ಕನ್ನಡದಲ್ಲಿ ಉಪಲಬ್ಧವಾಗಿರುವ ಮೊಟ್ಟಮೊದಲ ನಾಟಕವೆಂಬುದೆಷ್ಟೊ ಅಷ್ಟೆ ಅದರ ಹಿರಿತನ. ಕನ್ನಡದಲ್ಲಿ ನಾಟಕಗಳ ಪರಂಪರೆಯನ್ನು ಕಾಣಬೇಕಾದರೆ ನಾವು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧಕ್ಕೇ ಬರಬೇಕು. ಈ ಪರಂಪರೆಯನ್ನು ಪ್ರಚೋದಿಸಿದುದು 'ಬಾಲಿವಾಲ' ಎಂಬ ಪಾರ್ಸಿ ನಾಟಕಸಂಸ್ಥೆಯೊಂದೆಂದು ಹೇಳುತ್ತಾರೆ. ಸುಮಾರು 1880ರ ಹಿಂಚೆಮುಂಚೆಯಲ್ಲಿ ಈ ಸಂಸ್ಥೆ ಬೆಂಗಳೂರಿಗೆ ಬಂದಿತ್ತಂತೆ. ಅದರ ರಂಗಪರಿಕರಗಳ ಥಾಳಥಳ್ಯವೂ ಪಾತ್ರಗಳ ನಟನಚಾತುರ್ಯವೂ ನಮ್ಮ ಜನರ ಮನಸ್ಸನ್ನು ಸೂರೆಗೊಂಡು, ನಾಟಕ ಕಲಾಭಿರುಚಿಯನ್ನು ಕೆರಳಿಸಿದವೇನೋ! ಅಂದು ಮೈಸೂರಿನ ಶ್ರೀಮನ್ಮಹಾರಾಜರಾಗಿದ್ದ ಚಾಮರಾಜ ಒಡೆಯ ಬಹದ್ದೂರರು ಈ ಕಲೆಗೆ ಪ್ರೋತ್ಸಾಹ ನೀಡಿ ಪೋಷಕರಾಗಲು ಮುಂದೆ ಬಂದರು. ಅವರ ಉತ್ಸಾಹ ಪ್ರೋತ್ಸಾಹಗಳ ಸುಮಧುರ ಫಲವೇ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ'. 1881ರಲ್ಲಿ ಜನ್ಮ ತಾಳಿದ ಈ ಸಂಸ್ಥೆಯನ್ನು 'ಅರಮನೆಯ ನಾಟಕ ಕಂಪನಿ' ಎಂದೇ ಕರೆಯುವ ರೂಢಿಯಿತ್ತು. ಅಂದಿನ ಕಾಲದ ರಾಜರೇ ಆಸಕ್ತಿ ವಹಿಸಿದ ಮೇಲೆ ಕೇಳಬೇಕೆ? ಕಾವ್ಯಶಕ್ತಿ ಇದ್ದವರೆಲ್ಲರೂ ನಾಟಕರಚನೆಗೆ ಕೈಹಾಕಿದರು. ರಾಜಾಸ್ಥಾನದ ಕವಿಗಳು ಸಂಸ್ಕೃತ ನಾಟಕಗಳನ್ನು ಭಾಷಾಂತರಿಸಿದರು, ಅಥವಾ ಅವುಗಳನ್ನು ಮಾದರಿಯಾಗಿಟ್ಟುಕೊಂಡು ಪೌರಾಣಿಕ ನಾಟಕಗಳನ್ನು ರಚಿಸಿದರು. ಇಂಗ್ಲಿಷ್ ಭಾಷಾಸಾಹಿತ್ಯಗಳಿಗೆ ಅಮಿತವಾದ, ಅಪರಿಮಿತವಾದ ಗೌರವವಿದ್ದ ಕಾಲವದು; ಅವುಗಳಲ್ಲಿ ತಜ್ಞರಾಗಿದ್ದವರು ಇಂಗ್ಲಿಷಿನಿಂದಲೂ ನಾಟಕಗಳನ್ನು ಎತ್ತಿ

ತಂದು ಕನ್ನಡ ನೆಲದಲ್ಲಿ ನಾಟಲು ಯತ್ನಿಸಿದರು. ಇದರ ಫಲವಾಗಿ, ಮರುಭೂಮಿಯಾಗಿದ್ದ ನಮ್ಮ ನಾಟಕಜಗತ್ತು ಇದ್ದಕ್ಕಿದ್ದಂತೆಯೇ ಹಚ್ಚ ಹಸುರಾಗಿ ಹೋಯಿತು.

ಪರಭಾಷೆಯಿಂದ ನಮ್ಮ ಭಾಷೆಗೆ ತಂದುಕೊಳ್ಳುವಾಗ ಅಲ್ಲಿನ ಅತ್ಯುತ್ತಮವಾದುದನ್ನು ತಾನೇ ನಾವು ಆಯ್ದುಕೊಳ್ಳಬೇಕು? ಸಂಸ್ಕೃತ ನಾಟಕಕಾರರಲ್ಲಿ ಕಾಳಿದಾಸನು ಅಗ್ರಗಣ್ಯನಾದರೆ ಇಂಗ್ಲಿಷ್ ನಾಟಕಕಾರರಲ್ಲಿ ಷೇಕ್ಸ್ಪಿಯರನು ನಾಯಕ-ಮಣಿಯೆಂದು ಜಗತ್ಪ್ರಸಿದ್ಧನಾಗಿದ್ದಾನೆ. ಈ ಇಬ್ಬರನ್ನೂ ಕನ್ನಡಕ್ಕೆ ತಂದುಕೊಳ್ಳುವ ಪ್ರಯತ್ನ ಏಕಕಾಲದಲ್ಲಿಯೇ ನಡೆಯಿತು. ಸಂಸ್ಕೃತ, ಇಂಗ್ಲಿಷಿನ ಹಾಗೆ, ನಮಗೆ ಪರಭಾಷೆ ಅಲ್ಲ. ಸಂಸ್ಕೃತ ಪ್ರಕೃತಿಗೆ ಕನ್ನಡ ಪ್ರತ್ಯಯವನ್ನು ಹಚ್ಚಿದರೆ ಅದು ಕನ್ನಡ ಪದವಾಗುತ್ತದೆ. ವಾಕ್ಯಬಂಧ, ಕಾವ್ಯಬಂಧಗಳಲ್ಲಿ ನಾವು ಸಂಸ್ಕೃತವನ್ನು ಅನುಕರಿಸುತ್ತಾ ಬಂದಿದ್ದೇವೆ. ಸಂಸ್ಕೃತದಲ್ಲಿ ವರ್ಣಿತವಾಗಿರುವ ಚಾರಿತ್ರಕ ಮತ್ತು ಭೌಗೋಳಿಕ ವಿಷಯಗಳೂ ಪುರಾಣ, ಇತಿಹಾಸ, ಆಚಾರ, ವ್ಯವಹಾರಗಳೂ ನಮಗೆ ಚಿರಪರಿಚಿತವಾದವು. ಕನ್ನಡದ ಕಾವ್ಯತಟಾಕಕ್ಕೆ ಜೀವನವನ್ನು ಒದಗಿಸಿರುವುದೇ ಸಂಸ್ಕೃತ ಜಲಧಿ. ಆದ್ದರಿಂದ ಕಾಳಿದಾಸನನ್ನು ಕನ್ನಡಕ್ಕೆ ತಂದುಕೊಳ್ಳುವುದು ನಮಗೆ ಅಷ್ಟೇನೂ ಕ್ಲೇಶಕರವಾಗುವುದಿಲ್ಲ. ಆದರೆ ಇದೇ ಧೈರ್ಯವನ್ನು ಷೇಕ್ಸ್ಪಿಯರ್ ವಿಚಾರದಲ್ಲಿ ನಾವು ವಹಿಸುವಂತೆ ಇಲ್ಲ. ಸಂಸ್ಕೃತವಂತೆ ಇಂಗ್ಲಿಷ್ ಪದಗಳನ್ನು ಎತ್ತಿಕೊಂಡು ಕನ್ನಡದಲ್ಲಿ ಬಳಸುವುದಕ್ಕೆ ಸಾಧ್ಯವೆ? ಅಲ್ಲದೆ ಇಂಗ್ಲಿಷ್ ಸಾಹಿತ್ಯದಲ್ಲಿ ವರ್ಣಿತವಾಗಿರುವ ರೀತಿನೀತಿಗಳೂ ಜೀವನ ವಿಧಾನ ಮತ್ತು ಸಂಪ್ರದಾಯಗಳೂ ನಮಗೆ ಅಪರಿಚಿತವಾದವು. ಪರಕಾಯಪ್ರವೇಶ ಮಾಡಿದಂತೆ ಇಂಗ್ಲಿಷ್ ಕಾವ್ಯಗಳ ಅಂತರಂಗವನ್ನು ಗ್ರಹಿಸಿ, ಮೂಲದ ರಸನಿರೂಪಣೆ ಭಾಷಾಂತರದಲ್ಲಿ ಮೈದೋರುವಂತೆ ಮಾಡುವ ಕಾರ್ಯ ಥೇಮ್ಸ್ ನದಿಯ ನೀರನ್ನು ಮೈಸೂರಿನ ಕುಕ್ಕರಹಳ್ಳಿ ಕೆರೆಗೆ ತರುವಷ್ಟೆ ಕಷ್ಟಕರವಾದುದು.

ಇಂಗ್ಲಿಷಿನಲ್ಲಿ ಉದ್ದಾಮ ಕವಿಯೆಂದು ಪ್ರಸಿದ್ಧನಾಗಿರುವ ಷೇಕ್ಸ್ಪಿಯರನ ಉನ್ನತ ಭಾವಗಳನ್ನು ಕನ್ನಡದಲ್ಲಿ ಹೊರಹೊಮ್ಮಿಸುವುದು ಸುಲಭಸಾಧ್ಯವೇನೂ ಅಲ್ಲ. ಆದರೆ ಆತನ ನಾಟಕಗಳಲ್ಲಿ ಕಾಣಬರುವ ವಸ್ತುಸಂವಿಧಾನದ ಅಂಗಗಳಿಗೂ ಭಾರತೀಯ ನಾಟ್ಯಶಾಸ್ತ್ರದ ಸಂಧ್ಯಂಗಗಳಿಗೂ ನಿಕಟವಾದ ಹೋಲಿಕೆ ಇದೆಯೆಂಬುದನ್ನು ವಿಲ್ಸನ್ ಎಂಬ ಆಂಗ್ಲ ವಿದ್ವಾಂಸನು 'ಸೆಲೆಕ್ಟ್ ಸ್ಪೆಸಿಮೆನ್ಸ್ ಆಫ್ ದಿ ಥಿಯೇಟರ್ ಆಫ್ ದಿ ಹಿಂಡೂಸ್' ಎಂಬ ತನ್ನ ಗ್ರಂಥದಲ್ಲಿ 'ರೋಮಿಯೊ ಅಂಡ್ ಜೂಲಿಯೆಟ್' ನಾಟಕದ ಉದಾಹರಣೆಯೊಡನೆ ವಿವರಿಸಿದ್ದಾನೆ.[1] ಷೇಕ್ಸ್ಪಿಯರನ ನಾಟಕಗಳೆಲ್ಲವೂ ನಮ್ಮ ಮುಖಸಂಧಿ, ಪ್ರತಿಮುಖಸಂಧಿ ಇತ್ಯಾದಿ ಐದು ಅವಸ್ಥೆಯ ವ್ಯವಸ್ಥೆಗೆ ಒಳಪಡುತ್ತವೆಯೆಂದು ಆತನ ಧೋರಣೆ. ಹೀಗೆ ವಸ್ತುಸಂವಿಧಾನದಲ್ಲಿ ಷೇಕ್ಸ್ಪಿಯರನ ನಾಟಕಗಳಿಗೂ ಭಾರತೀಯ ನಾಟಕಗಳಿಗೂ ಸಾಮ್ಯ ಕಂಡುಬರುವುದರಿಂದ ಆತನ ನಾಟಕಗಳು ನಮ್ಮ ರಂಗಭೂಮಿಗೆ ಸುಲಭವಾಗಿ ಅಳವಡುತ್ತವೆ. ಆದ್ದರಿಂದಲೇ ಆತನ ನಾಟಕಗಳು

[1] ಸಂಪುಟ 1, ಪುಟ xl.

ಭಾರತದ ಎಲ್ಲ ಭಾಷೆಗಳಿಗೂ ಭಾಷಾಂತರವಾಗಿವೆ; ನಮ್ಮಲ್ಲಿಯೂ ಕಾಣಿಸಿಕೊಂಡಿವೆ—ಎಂದು ಹೇಳಿದರೂ ತಪ್ಪಾಗಲಾರದೇನೊ! ಆದರೂ ಮೊದಮೊದಲು ಅವುಗಳನ್ನು ಭಾಷಾಂತರ ಮಾಡಹೊರಟವರು ಷೇಕ್‌ಸ್ಪಿಯರನಲ್ಲಿ ಎಷ್ಟೊಂದು ಭಯಭಕ್ತಿಗಳನ್ನಿಟ್ಟುಕೊಂಡಿದ್ದರೆಂಬುದನ್ನು ನೋಡಿದರೆ ರೋಮಾಂಚವಾಗುತ್ತದೆ. ಎಂ. ಎಲ್. ಶ್ರೀಕಂಠೇಶಗೌಡರು (1895) ತಮ್ಮ 'ಪ್ರತಾಪರುದ್ರದೇವ' ('ಮೆಕ್‌ಬೆತ್') ನಾಟಕದ ಮುನ್ನುಡಿಯಲ್ಲಿ "ಭರತಖಂಡದ ಸಾಮ್ರಾಜ್ಯಕ್ಕಿಂತಲೂ ಅತಿಶಯವಾದ, ಆ ಕವಿಸಾರ್ವಭೌಮನಾದ ಷೇಕ್‌ಸ್ಪಿಯರ್, ಇಂಥ ಇಂಗ್ಲಿಷ್ ಭಾಷೆಯ (ಅದರ ಶಬ್ದಸಂಪತ್ತನ್ನು ಹಿಂದಿನ ವಾಕ್ಯವೃಂದದಲ್ಲಿ ಮುಕ್ತಕಂಠರಾಗಿ ಹೊಗಳಿದ್ದಾರೆ.) ಅನುಕೂಲಗಳು ಸಾಲದೆ, ಇದ್ದ ನಿರ್ಬಂಧಗಳನ್ನೆಲ್ಲಾ ಉಲ್ಲಂಘಿಸಿ ಮನಸ್ಸಿ ಬರೆದದ್ದು ಛಂದಸ್ಸಿಗೂ ವ್ಯಾಕರಣಕ್ಕೂ ಶಬ್ದಾರ್ಥಕ್ಕೂ ವಿರುದ್ಧವಾಗಿರುವುದೆಂದು ಹೇಳಲು ಪಂಡಿತರಿಗೆ ಶಕ್ತಿ ಸಾಲದೆ, ಅವನು ಬರೆದದ್ದೇ ಛಂದಸ್ಸು, ಅವನು ಬರೆದದ್ದೇ ವ್ಯಾಕರಣ, ಅವನು ಕೊಟ್ಟ ಅರ್ಥವೇ ಶಬ್ದಾರ್ಥವೆಂದು—ಷೇಕ್‌ಸ್ಪಿಯರ್ ಛಂದಸ್ಸು, ಷೇಕ್‌ಸ್ಪಿಯರ್ ವ್ಯಾಕರಣ, ಷೇಕ್‌ಸ್ಪಿಯರ್ ನಿಘಂಟುಗಳಿಗೆ ಅವಕಾಶವನ್ನುಂಟುಮಾಡಿ—ಹುಟ್ಟಿರುವ ಅವನ ಕಾವ್ಯಗಳಲ್ಲೂ ವಿಜಾತೀಯವಾದ ಗಂಭೀರತೆಯೂ ಕಾವ್ಯರಸವೂ ಉಳ್ಳ ಉತ್ತಮ ಕಾವ್ಯವನ್ನು ಭಾಷಾಂತರಿಸಲು ಈ ಬಡ ಕನ್ನಡದ ಪ್ರಾಸ, ಗಣ, ಮಾತ್ರ, ಛಂದಸ್ಸಿನ ಕತ್ತರಿಗೆ ಸಿಕ್ಕಿ ಒದ್ದಾಡಲೇ ಬೇಕಾದ ಕನ್ನಡ ಸುಂಡಗಳು ಪ್ರಯತ್ನಿಸುವ ಸಂದರ್ಭದಲ್ಲಿ ಆ ವಿಸೂವಿಯಸ್ ಪರ್ವತವು ತನ್ನ ಜ್ವಾಲಾವದನದಲ್ಲಿ Translators are murderers ಎಂಬ ಸಾಮತಿಯನ್ನು ಘರ್ಜನಂಗೈಯುತ್ತಿರುವುದು" ಎನ್ನುತ್ತಾರೆ. ಗೌಡರಿಗೆ ಷೇಕ್‌ಸ್ಪಿಯರನಲ್ಲಿ ಇದ್ದ ಈ ಪೂಜ್ಯಭಾವ ಅಂದಿನ ಎಲ್ಲ ನಾಟಕಕಾರರಿಗೂ ಸರ್ವ-ಸಾಮಾನ್ಯವಾಗಿತ್ತು.

ಶ್ರೀಕಂಠೇಶಗೌಡರು ಷೇಕ್‌ಸ್ಪಿಯರನ 'ಮೆಕ್‌ಬೆತ್' ಮತ್ತು 'ಎ ಮಿಡ್ ಸಮ್ಮರ್-ನೈಟ್ಸ್ ಡ್ರೀಮ್' ನಾಟಕಗಳನ್ನು 'ಪ್ರತಾಪರುದ್ರದೇವ', 'ಪ್ರಮೀಳಾರ್ಜುನೀಯ' ಎಂಬ ಹೆಸರುಗಳಿಂದ ಕನ್ನಡಕ್ಕೆ ತಂದುಕೊಂಡಿದ್ದಾರೆ. ಈ ಎರಡು ನಾಟಕಗಳನ್ನು ಸ್ವಲ್ಪ ವಿಸ್ತಾರವಾಗಿ ಪರಿಶೀಲಿಸಿದರೆ ಅಂದಿನ ಭಾಷಾಂತರಗಳ ಸ್ವರೂಪವನ್ನು ಬಹುಮಟ್ಟಿಗೆ ದಿಗ್ದರ್ಶಿಸಿದಂತಾಗುತ್ತದೆ. ಶ್ರೀಕಂಠೇಶಗೌಡರು ಮೂಲವನ್ನು ಕನ್ನಡಕ್ಕೆ ಭಾಷಾಂತರಿಸ ಹೊರಟಿರುವರಾದರೂ ಪಾತ್ರಗಳ ಹೆಸರುಗಳನ್ನೆಲ್ಲಾ ನಮ್ಮವನ್ನಾಗಿ ಬದಲಾಯಿಸಿದ್ದಾರೆ. ನಾಟಕಗಳನ್ನು ಬರೆಯುತ್ತಿರುವುದು ರಂಗಸ್ಥಳಕ್ಕಾಗಿ; ಅಲ್ಲಿನ ಪ್ರೇಕ್ಷಕರು ಇಂಗ್ಲಿಷ್ ಬರದವರು ; ಅಪರಿಚಿತವಾದ ಹೆಸರುಗಳು ಬಂದರೆ ಅವರ ರಸಾಸ್ವಾದನೆ ತೊಡಕು. ಆದ್ದರಿಂದ ಅಪರಿಚಿತವಾದ ಇಂಗ್ಲಿಷ್ ಹೆಸರುಗಳಿಗೆ ಬದಲಾಗಿ ಪರಿಚಿತವಾದ ನಮ್ಮ ಹೆಸರುಗಳಿಂದ ಪಾತ್ರಗಳಿಗೆ ಹೊಸ ನಾಮಕರಣ ಮಾಡಿದುದೇನೊ ಒಂದು ದೃಷ್ಟಿಯಿಂದ ಸರಿ. ಆದರೆ ಮೂಲದ ಭಾವಗಳಾವುವನ್ನೂ ಬದಲಾಯಿಸದೆ ಹೆಸರುಗಳನ್ನು ಮಾತ್ರ ಬದಲಾಯಿಸಿದುದರಿಂದ ನಾಟಕದಲ್ಲಿ ಕೆಲವು ದೋಷಗಳೂ ಅಸ್ವಾಭಾವಿಕ ಘಟನೆಗಳೂ ತಲೆದೋರಿದಂತಾಗಿದೆ. ಷೇಕ್‌ಸ್ಪಿಯರ್ ಸೃಷ್ಟಿಯ ಜಗತ್ತನ್ನು ಕನ್ನಡ ವಾತಾವರಣದಲ್ಲಿ ತದ್ವತ್ತಾಗಿ ಒಡಮೂಡಿಸುವುದು ಹೇಗೆ ಸಾಧ್ಯ? ಡಂಕನ್ ದೊರೆ

ಯನ್ನು ಮೆಕ್‌ಬೆತನಿಗೆ ಬದಲಾಗಿ ಲೇಡಿ ಮೆಕ್‌ಬೆತ್ ಎದುರುಗೊಂಡು, ಪ್ರತ್ಯುತ್ಥಾನ ಮಾಡಿ, ಕೈಹಿಡಿದು ಮನೆಗೆ ಕರೆತರುವುದು ಪಾಶ್ಚಾತ್ಯ ಪ್ರಪಂಚದ ಸದಾಚಾರಕ್ಕೆ ಉಚಿತ ವಾಗಿದೆ. ಆದರೆ ಓಢ್ರದೇಶದ ಮಹಾರಾಜನಾದ ವಿಜಯಧ್ವಜನನ್ನು ವೀರಸೇನನಿಗೆ ಬದಲಾಗಿ ಅವನ ಮಡದಿ ಕೈಹಿಡಿದು ಕರೆದೊಯ್ದುಳೆಂಬುದು ಚಾರಿತ್ರಿಕ ಭಾರತಕ್ಕೆ ಇರಲಿ, ಆಧುನಿಕ ಭಾರತಕ್ಕೆ ಕೂಡ ಅಸಂಭವ. ನಾಟಕದ ಮೂರನೆಯ ಅಂಕದಲ್ಲಿ ಬರುವ ಪಾನಸಹಿತವಾದ ಔತಣವೂ ನಮ್ಮ ಸಂಸ್ಕೃತಿಯಿಂದ ಬಹಿಷ್ಕೃತವಾದುದು. ಇಂತಹ ಅನೌಚಿತ್ಯಗಳು ಅಂದಿನ ಈ ಜಾತಿಯ ನಾಟಕಗಳಲ್ಲೆಲ್ಲಾ ಸರ್ವಸಾಧಾರಣ.

ಷೇಕ್ಸ್ಪಿಯರನ ರುದ್ರನಾಟಕಗಳಲ್ಲಿ ಅತ್ಯುತ್ತಮವೆಂದು ಪರಿಗಣಿತವಾಗಿರು ವವುಗಳಲ್ಲಿ 'ಮೆಕ್‌ಬೆತ್' ಒಂದು. ಅದೃಷ್ಟದ—ದುರದೃಷ್ಟದ—ಕಿಂಕರರಂತಿರುವ ಯಕ್ಷಿಣಿಯರು ಮೆಕ್‌ಬೆತನ ಮನಸ್ಸಿನಲ್ಲಿರುವ ಆಶೆಯನ್ನು ಕೆರಳಿಸಿ ಪಾಪಪ್ರೇರಣೆಯನ್ನು ಪ್ರಚೋದಿಸಿದರು. ದುಷ್ಟಮಾರ್ಗದಲ್ಲಿ ಕಾಲಿಟ್ಟ ಮೆಕ್‌ಬೆತ್ ಅಧೋಗತಿಗೆ ಇಳಿದು ಪ್ರಪಾತಕ್ಕೆ ಬಿದ್ದುಹೋದನು. ಇದರ ನಿವಾರಣೆ ಹೇಗೆಂಬ ತತ್ವಸಿದ್ಧಾಂತಕ್ಕೆ ಕವಿ ಕೈ ಹಾಕಿಲ್ಲ. ಜೀವನರಹಸ್ಯವನ್ನು ಪ್ರದರ್ಶಿಸುವುದಷ್ಟೆ ಆತನ ಕೆಲಸ. ಮೆಕ್‌ಬೆತನ ದುರಂತ ಚಿತ್ರ ಪ್ರೇಕ್ಷಕರ ಮನಸ್ಸಿನಲ್ಲಿ ಸ್ಥಾಯಿಯಾಗಿ ನಿಲ್ಲುತ್ತದೆ. ದೈವದ ದುರ್ನಿವಾರತೆಯೂ ಅದರ ಮುಂದೆ ಮಾನವನ ಅಲ್ಪತೆಯೂ ನಮ್ಮ ಮನಸ್ಸನ್ನು ಆವರಿಸುತ್ತವೆ. ರುದ್ರನಾಟಕಗಳ ಪ್ರದರ್ಶನದಿಂದ ಪ್ರೇಕ್ಷಕರು ಭಯಗೊಂಡು, ಆ ಭಯದಿಂದಲೆ ಭಕ್ತಿಭರಿತರಾಗುವರೆಂದು ಗ್ರೀಕ್ ರುದ್ರನಾಟಕಕಾರರು ಭಾವಿಸಿದ್ದರೆಂದು ತೋರುತ್ತದೆ. ಷೇಕ್ಸ್ಪಿಯರನಿಗೆ ಈ ಉದ್ದೇಶ ಇತ್ತೊ ಇಲ್ಲವೊ! ಆದರೆ ರುದ್ರ-ನಾಟಕದಿಂದ ಮನಸ್ಸಿನ ಮೇಲೆ ಆಗುವ ಪರಿಣಾಮದ ಗಾಢತೆ ಆತನಿಗೆ ಮನವರಿಕೆ ಯಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಭಾರತ ಸಾಹಿತ್ಯದಲ್ಲಿ ಇಲ್ಲವೇ ಇಲ್ಲವೆಂದು ಹೇಳಬಹುದಾದ (ಭಾಸನ 'ಊರುಭಂಗ'ವೊಂದನ್ನು ಬಿಟ್ಟು) ಈ ರುದ್ರ ನಾಟಕಗಳು ಕನ್ನಡಕ್ಕೆ ಮೊಟ್ಟಮೊದಲು ಪರಿಚಿತವಾದುದು ಷೇಕ್ಸ್ಪಿಯರನ ನಾಟಕಗಳಿಂದ. ಈ ನಾಟಕಗಳ ಸಾಲಿನಲ್ಲಿ 'ಪ್ರತಾಪರುದ್ರದೇವ'ನಿಗೆ ಒಂದು ಪ್ರಮುಖ ಸ್ಥಾನವಿದೆ.

ಶ್ರೀಕಂಠೇಶಗೌಡರಿಗೆ ಕವಿಹೃದಯವಿದೆ. ಆದರೆ ತಾವು ಅನುಭವಿಸಿದ ಭಾವ ಗಳನ್ನು ಭಾಷಾಂತರಿಸುವಷ್ಟು ಕನ್ನಡ ಪಾಂಡಿತ್ಯವಿಲ್ಲ. ಭಾವಕ್ಕೆ ತಕ್ಕ ಭಾಷೆಯನ್ನು ಆತ ಅಳವಡಿಸಲಾರರು. ಮೂಲದ ಸ್ವಾರಸ್ಯವನ್ನು ಕನ್ನಡದಲ್ಲಿ ಕಾಣಬೇಕೆಂದರೆ ಡಿ. ವಿ. ಜಿ. ಅವರ 'ಮೆಕ್‌ಬೆತ್' ಅನ್ನು ಓದಬೇಕು. ನಾಟಕದ ಆದಿಯಲ್ಲಿ ಬರುವ ಯಕ್ಷಿಣಿಯರ ಈ ಸಂಭಾಷಣೆಯನ್ನು ನೋಡಿ :

*First Witch.* When shall we three meet again
In thunder, lightning, or in rain?

**ಡಿ. ವಿ. ಜಿ.** ಅವಾಗ ಸೇರ್ವೆವಾಂ ಮೂವರುಂ ಮಗುಳೆ,
—ಸಿಡಿಲಿನೊಳೆ, ಮಿಂಚಿನೊಳೆ, ಮಳೆಯ ಹೊಡೆತದೊಳೆ?

**ಎಂ. ಎಲ್. ಶ್ರೀ.** ತಿರಗ ನಾವು ಸೇರತಕ್ಕದ್ದು ಯಾವಾಗ?

*Second Witch.* When the hurlyburly's done,
When the battle's lost and won.

ಡಿ. ವಿ. ಜಿ. ಸಡಗರವೆಲ್ಲವು ಮುಗಿದಂದು,
ಕದನದಿ ಸೋಲ್ತುಂ ಗೆಲಿದಂದು.

ಎಂ. ಎಲ್. ಶ್ರೀ. ಗಡಿಬಿಡಿಯಾದಾಗ! ಯುದ್ಧವನ್ನು ಗೆದ್ದಾಗ, ಸೋತಾಗ.

*Third Witch.* That will be ere the set of sun.

ಡಿ. ವಿ. ಜಿ. ಅದು ಸೂರ್ಯನು ಮುಳುಗುವ ಮುಂದು.

ಎಂ. ಎಲ್. ಶ್ರೀ. (ಇದನ್ನು ಬಿಟ್ಟಿದಾರೆ.)

*First Witch.* Where the place?

ಡಿ. ವಿ. ಜಿ. ಅದಕೆಡೆಯೆತ್ತಲ್?

ಎಂ. ಎಲ್. ಶ್ರೀ. ಪ್ರದೇಶವೆಲ್ಲಿ?

*Second Witch.* Upon the heath.

ಡಿ. ವಿ. ಜಿ. ಪಾಳ್ಬೀಡತ್ತಲ್.

ಎಂ. ಎಲ್. ಶ್ರೀ. ಕಾವಲು.

*Third Witch.* There to meet with Macbeth.

ಡಿ. ವಿ. ಜಿ. ಮ್ಯಾಕ್‌ಬೆತನನು ನಾಂ ಕಾಣುವೆವತ್ತಲ್.

ಎಂ. ಎಲ್. ಶ್ರೀ. ವೀರಸೇನನ ಕಾಣುವದಕ್ಕೊ?

*First Witch.* I come, Graymalkin!

ಡಿ. ವಿ. ಜಿ. ಬಂದೆನು ನಾನೆಲೆ ಬೂದು ಬಿಡಾಲಿ.

ಎಂ. ಎಲ್. ಶ್ರೀ. ಬಂದೆ ಬಂದೆ ಮಾರ್ಜಾಲ.

*Second Witch.* Paddock calls.

ಡಿ. ವಿ. ಜಿ. ಮರಿಭೇಕಿನಿ ಕರೆವಳು ಬೇಗದಲಿ.

ಎಂ. ಎಲ್. ಶ್ರೀ. ನಡಿ ನಡಿ ಮಾಳಬೆಕ್ಕು ಕೂಗಿತು.

*Third Witch.* Anon!

ಡಿ. ವಿ. ಜಿ. ಇದೊ ನಾಂ ಬಂದೆನ್.

ಎಂ. ಎಲ್. ಶ್ರೀ. ಬಂದೆ! ಬಂದೆ!

*All.* Fair is foul, and foul is fair;
Hover through the fog and filthy air.

ಡಿ. ವಿ. ಜಿ. ಸೊಗಸೇ ಹೊಲಸು, ಹೊಲಸೇ ಸೊಗಸು,
ಸುಳಿವಂ ಮಂಜೊಳು ಕೊಳೆ ಗಾಳಿಯೊಳು.

ಎಂ. ಎಲ್. ಶ್ರೀ. ಬಿಟ್ಟಿದ್ದ ಬಿಟ್ಟಂತೆ ಕೊಟ್ಟಿದ್ದ ಕೊಟ್ಟಂತೆ
ಒಟ್ಟಾಗಿ ಸೇರುತ್ತ ಚಟ್ಟವನ್ನೇರುತ್ತ
ಪಟ್ಟಾದ ಗಾಳೀಲಿ ಮುಟ್ಟುವೆವು ಮುಗಿಲನ್ನು
ಬಿಟ್ಟಿದ್ದ ಬಿಟ್ಟಂತೆ, ಕೊಟ್ಟಿದ್ದ ಕೊಟ್ಟಂತೆ.

ಮೇಲಿನ ಉದಾಹರಣೆಯಿಂದ ಇಷ್ಟು ಸ್ಪಷ್ಟವಾಗುತ್ತದೆ. ಶ್ರೀಕಂಠೇಶ ಗೌಡರು ಮೂಲದ ಭಾವಗಳನ್ನು ಭಾಷಾಂತರಿಸಲಾರದೆ ಭಾವಾನುವಾದ ಮಾಡುತ್ತಾರೆ; ಕೆಲವು ಕಡೆ ಕೈಬಿಡುತ್ತಾರೆ. ಡಿ. ವಿ. ಜಿ. ಅವರು ಮೂಲವನ್ನು ಕೈ ಬಿಡುವುದಿಲ್ಲವಷ್ಟೇ ಅಲ್ಲ; ಮೂಲದ ಪದ್ಯವನ್ನು ಪದ್ಯರೂಪದಲ್ಲಿಯೂ, ಗದ್ಯವನ್ನು ಗದ್ಯರೂಪದಲ್ಲಿಯೂ ಭಾಷಾಂತರಿಸುತ್ತಾರೆ. ಅವರ ರಚನೆಯಲ್ಲಿರುವ ಬಿಗಿಯಾಗಲಿ, ಬರವಣಿಗೆಯಲ್ಲಿರುವ ವೈದುಷ್ಯವಾಗಲಿ ಶ್ರೀಕಂಠೇಶಗೌಡರಲ್ಲಿ ಇಲ್ಲ. ಗೌಡರು ಬರೆಯುತ್ತಿರುವುದು ರಂಗಸ್ಥಳಕ್ಕಾಗಿ. ಭಾಷೆ ಪ್ರೌಢವಾದರೆ ಅದನ್ನು ನಟಿಸುವ ನಟನಾರು? ನೋಡಿ ಸಂತೋಷಿಸಬಲ್ಲ ಪ್ರೇಕ್ಷಕರೆಲ್ಲಿ? ಅದೂ ಈಗ ಎಪ್ಪತ್ತು ವರ್ಷಗಳ ಕೆಳಗೆ?

ಶ್ರೀಕಂಠೇಶಗೌಡರ ಎರಡನೆಯ ನಾಟಕವಾದ 'ಪ್ರಮೀಳಾರ್ಜುನೀಯ' 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್'ನ ರೂಪಾಂತರ. ಮೂಲದ ಕಥಾತಂತುವಿನಲ್ಲಿ ಯಾವ ಬದಲಾವಣೆಯನ್ನೂ ಮಾಡಿಕೊಂಡಿಲ್ಲವಾದರೂ ಇದು ಶ್ರೀಕಂಠೇಶಗೌಡರ ಸ್ವಂತ ಸೃಷ್ಟಿಯೆಂಬಷ್ಟು ಹೊಸತನವನ್ನು ಪಡೆದಿದೆ. ಇಲ್ಲಿನ ಪಾತ್ರಗಳ ಹೆಸರುಗಳೂ ಸಂಭಾಷಣೆಯೂ ರೂಪಾಂತರಕಾರರವೇ. ಅಥೆನ್ಸಿನ ದೊರೆ ಥೀಸ್ಯೂಸನಿಗೂ, ಸ್ತ್ರೀ ರಾಜ್ಯದ ರಾಣಿ ಹಿಪಾಲಿಟಳಿಗೂ ವಿವಾಹವಾಗುವ ಸನ್ನಿವೇಶ ಇಲ್ಲಿ ಅರ್ಜುನ ಪ್ರಮೀಳೆಯರ ವಿವಾಹದ ಸನ್ನಿವೇಶವಾಗಿದೆ. ಆ ವಿವಾಹಸಮಯದಲ್ಲಿ ಮೇನವನೆಂಬ ಮಲೆಯಾಳಿ ತನ್ನ ಮಗಳಾದ ಕೈರವೆಯನ್ನು ತಾನು ಜಯಂತನಿಗೆ ಕೊಡಬೇಕೆಂದಿರುವಾಗ ಅವಳು ವಸಂತನೆಂಬುವನನ್ನು ಮೋಹಿಸುತ್ತಿರುವಳೆಂದು ರಾಣಿಯಲ್ಲಿ ದೂರು ಹೇಳುತ್ತಾನೆ. ಆಕೆ ಕೈರವೆಯನ್ನು ಕರೆಸಿ, ತಾನು ಪೂರ್ಣಚಂದ್ರೋದಯದ ದಿನ ಅರ್ಜುನನನ್ನು ವಿವಾಹವಾಗುವುದಾಗಿಯೂ ಅಷ್ಟರಲ್ಲಿ ಕೈರವೆ ತಂದೆಯ ಅಪ್ಪಣೆಯಂತೆ ನಡೆಯದೇ ಹೋದರೆ ಶಿಕ್ಷಿಸುವುದಾಗಿಯೂ ಅಪ್ಪಣೆಮಾಡುತ್ತಾಳೆ. ಆಗ ಜಯಂತ ಕೈರವೆಯನ್ನು ಕರೆದುಕೊಂಡು ಅಲ್ಲಿಗೆ ಎರಡು ಗಾವುದ ದೂರದಲ್ಲಿದ್ದ ತನ್ನ ಚಿಕ್ಕಮ್ಮನ ಮನೆಗೆ ಪ್ರಯಾಣ ಹೊರಡುತ್ತಾನೆ. ಇದನ್ನು ಅರಿತ ವಸಂತ, ಮಾರ್ಗಮಧ್ಯದಲ್ಲಿಯೇ ಜಯಂತನನ್ನು ಕೊಂದು ಕೈರವೆಯನ್ನು ಸಂಗ್ರಹಿಸಬೇಕೆಂದು ಅವರ ಬೆನ್ನಟ್ಟುತ್ತಾನೆ. ವಸಂತನನ್ನು ಮೋಹಿಸಿದ್ದ ಪದ್ಮಿನಿ ಅವನ ಬೆನ್ನಟ್ಟುತ್ತಾಳೆ. ಅಷ್ಟರಲ್ಲಿ ಮನ್ಮಥ ರತಿಯರು ಪರಸ್ಪರ ಜಗಳವಾಡಿ, ಮನ್ಮಥನು ತನ್ನ ಸಾರಥಿಯಾದ ಆಶುಗನೊಡನೆಯೂ ರತಿಯು ಮಾಲತಿಯೇ ಮೊದಲಾದ ತನ್ನ ನಾಲ್ವರು ಗೆಳತಿಯರೊಡನೆಯೂ ಕಾಡಿನಲ್ಲಿ ಅಲೆಯುತ್ತಾ ಇರುತ್ತಾರೆ; ಮನ್ಮಥನು ತನ್ನ ಹೆಂಡತಿಯ ಸೊಕ್ಕು ಮುರಿಯಲೆಂದು ಹಿಮಾಲಯದಿಂದ ನೀಲೋನ್ಮತ್ತದ ಹೂವನ್ನು ತರಿಸಿ, ಅದರ ರಸವನ್ನು ಆಯಾಸದಿಂದ ಮಲಗಿದ್ದ ರತಿಯ ಕಣ್ಣಿಗೆ ಹಚ್ಚಿದ. ಇದರ ಫಲವಾಗಿ, ನಿದ್ದೆಯಿಂದ ಎದ್ದೊಡನೆ ಕಣ್ಣಿಗೆ ಬಿದ್ದವರನ್ನು ಮೋಹಿಸುವಂತಹ ಮರುಳು ಮುಸುಕುತ್ತದೆ. ರತಿಯ ಕಣ್ಣಿಗೆ ರಸ ಹಚ್ಚಿದ

ಮೇಲೆ, ವಸಂತನನ್ನು ಕಾಮಿಸಿ ಅವನ ಹಿಂದೆ ಓಡುತ್ತಿದ್ದ ಪದ್ಮಿನಿ ಮನ್ಮಥನ ಕಣ್ಣಿಗೆ ಬಿದ್ದಳು. ಅವಳ ಮೇಲಿನ ಕರುಣೆಯಿಂದ ಆತ ವಸಂತನ ಕಣ್ಣಿಗೆ ಆ ರಸ ಹಚ್ಚುವಂತೆ ತನ್ನ ಸಾರಥಿಗೆ ಹೇಳಿದ. ಅವನು ತಿಳಿಯದೆ ಅದನ್ನು ಜಯಂತನ ಕಣ್ಣಿಗೆ ಹಚ್ಚಿದ. ಅವನು ಎದ್ದವನೆ ಪದ್ಮಿನಿಯನ್ನು ಕಂಡು ಅವಳಲ್ಲಿ ಮರುಳಾದ. ಆಗ ಜಯಂತ ಪದ್ಮಿನಿಯ ಹಿಂದೆ, ಪದ್ಮಿನಿ ವಸಂತನ ಹಿಂದೆ, ವಸಂತ ಕೈರವೆಯ ಹಿಂದೆ, ಕೈರವೆ ಜಯಂತನ ಹಿಂದೆ ಮರುಳಾಗಿ ಅಡವಿಯೆಲ್ಲಾ ಅಲೆಯುತ್ತಾರೆ. ಅತ್ತ ರಾಜ-ರಾಣಿಯರ ವಿವಾಹದ ದಿನ ನಾಟಕಪ್ರದರ್ಶನಕ್ಕಾಗಿ ಅಭ್ಯಾಸದಲ್ಲಿ ತೊಡಗಿದ್ದ ವಾಜರ ಮಾಯಾಚಾರಿ, ಮಡಿವಾಳ ಮಾಚಯ್ಯ, ನೆನೆಬಾರದ ನಾಗಪ್ಪ, ಕುಲಾಲ ಕುಂಟಶೆಟ್ಟಿ, ದರ್ಜಿ ಸಂತೂರಾಂ ವಿಠೋಬ ಇವರು ಮನ್ಮಥದೂತನಾದ ಆಶುಗನ ಕಣ್ಣಿಗೆ ಬಿದ್ದರು. ಅವನು ಮಡಿವಾಳ ಮಾಚಯ್ಯನಿಗೆ ರಂಗಪರಿಕರದಲ್ಲಿದ್ದ ಒಂದು ಕತ್ತೆಯ ತಲೆಯನ್ನು ತಗಲಿಸಿ, ಉಳಿದ ನಟರನ್ನೆಲ್ಲಾ ಹೆದರಿಸಿ ಓಡಿಸಿ, ರತಿಯು ನಿದ್ದೆಯಿಂದ ಏಳುವ ಹೊತ್ತಿಗೆ ಸರಿಯಾಗಿ ಅವನನ್ನು ಅವಳ ಮುಂದೆ ನಿಲ್ಲಿಸಿದ. ಆಕೆ ಅವನಲ್ಲಿ ಅನುರಕ್ತಳಾಗಿ ಅವನನ್ನು ಉಪಚರಿಸತೊಡಗುತ್ತಾಳೆ. ಹೀಗೆ ಸ್ವಲ್ಪ ಹೊತ್ತು ಅವಳನ್ನು ಗೋಳು ಹೊಯ್ದುಕೊಂಡ ಮೇಲೆ ಮನ್ಮಥನು ಅವಳ ಹುಚ್ಚನ್ನು ಹೋಗಲಾಡಿಸುತ್ತಾನೆ. ಅಲ್ಲದೆ ಜಯಂತನೇ ಮೊದಲಾದವರ ಪ್ರೇಮಜೀವನವನ್ನೂ ನೇರ್ಪುಗೊಳಿಸುತ್ತಾನೆ. ರಾಜ-ರಾಣಿಯರ ವಿವಾಹದ ಜೊತೆಯಲ್ಲಿ ಜಯಂತ-ಕೈರವೆ ಮತ್ತು ವಸಂತ-ಪದ್ಮಿನಿ ಇವರ ವಿವಾಹವೂ ನಡೆಯುತ್ತದೆ. ಸ್ಥೂಲವಾಗಿ ಇದು 'ಪ್ರಮೀಳಾರ್ಜುನೀಯ'ದ ಕಥೆ.

ಶ್ರೀಕಂಠೇಶಗೌಡರು ಮೂಲದ ಕಥಾತಂತ್ರವನ್ನು ಮಾತ್ರ ಬಳಸಿಕೊಂಡು, ಅದನ್ನು ತಮ್ಮ ಸ್ವಂತ ಮಾತುಗಳಲ್ಲಿ ಕನ್ನಡ ಜಗತ್ತಿನಲ್ಲಿ ನಡೆದ ಕಥೆಯೊಂದನ್ನಾಗಿ ಸೃಷ್ಟಿಸಿದ್ದಾರೆ. ಮೂಲದಂತೆ ರೂಪಾಂತರದಲ್ಲಿಯೂ ನಾಟಕದ ಜೀವಾಳ ಅದರ ಹಾಸ್ಯ. ಷೇಕ್‌ಸ್ಪಿಯರ್ 'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ಬರೆದಾಗ 31-32 ವರ್ಷಗಳ ತರುಣನಾಗಿದ್ದನಂತೆ! ಆತನು ಈ ನಾಟಕದಲ್ಲಿ ಆಳವಾದ ಜೀವನಸಮಸ್ಯೆಯ ವಿಮರ್ಶೆಗೆ ತೊಡಗದೆ, ನಗೆಬಗೆಯ ಚೆಲ್ಲಾಟದಲ್ಲಿ ತೊಡಗಿರುವನೆಂದು ತೋರುತ್ತದೆ. ಇಂಗ್ಲಂಡಿನಂತಹ ಚಳಿದೇಶದಲ್ಲಿ ವಸಂತಮಾಸವೆಂಬುದು ಭಗವಂತನ ಒಂದು ವರ. ಆದ್ದರಿಂದ ನಡುಬೇಸಗೆಯ ಇರುಳ್ಗನಸಿನ ಸವಿಯನ್ನು ಕಲ್ಪನಾಪ್ರಪಂಚದಲ್ಲಿ ಚಪ್ಪರಿಸ ಹೊರಟಿರುವುದು ಸಹಜವೇ. ಇದಕ್ಕೆ ಬರಿಯ ಮಾನವಲೋಕ ಸಾಲದೆಂದು ಗಂಧರ್ವ ಲೋಕವನ್ನೂ ಕವಿ ಎಳೆತಂದಿದ್ದಾನೆ. ಇದರ ಜೊತೆಗೆ ತನ್ನ ನಾಟಕದ ಮಧ್ಯದಲ್ಲಿ ಇನ್ನೊಂದು ನಾಟಕವನ್ನು ತಂದು ಹಾಕಿ, ತನ್ನ ಕಾಲದ ನಟರ ಮತ್ತು ನಾಟಕಗಳ ಆಭಾಸಗಳನ್ನೂ ಕವಿಯು ವಿಡಂಬನೆಗೆ ಒಳಗುಮಾಡಿರುವಂತೆ ತೋರುತ್ತದೆ. ಈ ಕಾರ್ಯವನ್ನು 'ಪ್ರಮೀಳಾರ್ಜುನೀಯ'ದ ಕರ್ತರೂ ಮನೋಹರವಾಗಿ ನಿರ್ವಹಿಸಿದ್ದಾರೆ. ನಾಟಕದೊಳಗಿನ ನಾಟಕ 'ರಾಮವರ್ಮ-ಲೀಲಾವತಿ'ಯ ನಟರುಗಳನ್ನು ನೋಡಿದರೆ ಸಾಕು, 'ಹಲವು ಸನೇಗಾರರು ಸೇರಿ ತೊಗಲು ಹದಗೆಡಿಸಿದರು' ಎಂಬ ಗಾದೆ ಜ್ಞಾಪಕಕ್ಕೆ ಬರುತ್ತದೆ. ಆಗ ತಾನೆ ಪ್ರದರ್ಶಿತವಾಗಲು ಪ್ರಾರಂಭಿಸಿದ್ದ ಆ ನಾಟಕದ ಆಭಾಸಗಳನ್ನೆಲ್ಲಾ ಶ್ರೀಕಂಠೇಶಗೌಡರು ಕಣ್ಣಾರೆ ಕಂಡಿದ್ದರೋ ಏನೋ! ಹಾಸ್ಯದ ಹೊಳೆಯನ್ನೆ ಹರಿಸಿದ್ದಾರೆ,



'ದಿ ಟು ಜೆಂಟಲ್‌ಮೆನ್ ಅಫ್ ವೆರೋನ' ದಲ್ಲಿ ವ್ಯಾಲೆಂಟೈನ್ ಸಿಲ್ವಿಯಾಳಲ್ಲಿ ತನಗಿರುವ ಪ್ರೇಮವನ್ನು ತೋಡಿಕೊಳ್ಳುತ್ತಿದ್ದಾನೆ, ಗೆಳೆಯ ಪ್ರೋಟಿಯಸ್ಸಿನೊಂದಿಗೆ.

"ಮರಳು ಮುತ್ತಿನ ರಾಶಿ, ನೀರು ಅಮೃತದ ಧಾರೆ,
ಕಲ್ಲ ಬಂಡೆಗಳೆಲ್ಲ ಹೊಳೆವ ಹೊನ್ನಿನ ಗಟ್ಟಿ—
ಈ ಸ್ತ್ರೀರತ್ನ ಸಿಲ್ವಿಯಳಿಗೊಲಿದು ನಾನಾದೆ
ಅಂಥದಿಪ್ಪತ್ತು ಸಾಗರದೊಡೆತನಕೆ ಸಾಟಿ."—ವ್ಯಾಲೆಂಟೈನ್.

ಈ ಭಾಗದಲ್ಲಿ. ರಾಮವರ್ಮ ಲೀಲಾವತಿಯನ್ನು ಕಂಡದ್ದು ಬೆಳುದಿಂಗಳಲ್ಲಿ. ಆಟವ ದಿನ ಬೆಳುದಿಂಗಳಿದೆಯೋ ಎಂಬುದು ಚರ್ಚೆ (ರಾಜರಾಣಿಯರ ಮದುವೆ ಪೂರ್ಣಿಮೆ ದಿನ!):

**ಕುಂಟ ಶೆಟ್ಟಿ.** ಪೂರ್ಣಿಮೆಯ ದಿನ ಬೆಳುದಿಂಗಳಿದೆಯೆ?

**ನಾಗಪ್ಪ.** ಎಲ್ಲೋ ಕುಂಬಾರ.

**ಮಾಚಯ್ಯ.** ಅವನು ಕುಂಬಾರ, ನೀನು ಹಜಾಮ; ಪೂರ್ಣಿಮೆ ದಿವಸ ಬೆಳುದಿಂಗಳು ಇದೆಯೇನೊ?

**ನಾಗಪ್ಪ.** ಪೂರ್ಣಿಮೆ ದಿವಸವಲ್ಲದೆ ಬೆಳುದಿಂಗಳು ಅಮಾವಾಸ್ಯೆ ದಿವಸವಿರುತ್ತೆಯೇನೊ?

**ಮಾಯಾಚಾರಿ.** ನಿನ್ನ ತಲೆ, ಪೂರ್ಣಿಮೆಯ ದಿವಸ ಬೆಳುದಿಂಗಳೆಲ್ಲಿ ಬಂತು? ಹುಣ್ಣಿಮೆಯ ದಿವಸ ವಲ್ಲವೇನೊ ಬೆಳುದಿಂಗಳಿರುವುದು?

**ಕುಂಟಶೆಟ್ಟಿ.** ಅದೇಕೆ, ಪಂಚಾಂಗ ನೋಡಿ, ಗೊತ್ತಾಗುತ್ತೆ.

**ಮಾಯಾಚಾರಿ.** ಪಂಚಾಂಗ ತಕೊಳ್ಳಿ, ಪಂಚಾಂಗ ತಕೊಳ್ಳಿ.

**ಮಾಚಯ್ಯ.** ಇಗೊ ಇಲ್ಲಿ ಸಿಕ್ಕಿತು. [ಹುಣ್ಣಿಮೆ-ಪೂರ್ಣಿಮೆ-ಹುಣ್ಣಿಮೆ ಎನ್ನುತ್ತ ಪಂಚಾಂಗದ ಹಾಳೆಗಳನ್ನು ತಿರಿವಿ ಹಾಕಿ] ಈ ಪಂಚಾಂಗವೇ ಸರಿಯಾಗಿಲ್ಲ. ಇನ್ನೊಂದು ತೆಕೊಳ್ಳಿ.

**ಮಾಯಾಚಾರಿ.** ಪಂಚಾಂಗವೇನಾಗಿದೆ?

**ಮಾಚಯ್ಯ.** ಇದರಲ್ಲೆಲ್ಲಾ ಬರಿ ಪೂರ್ಣಿಮೆಗಳಿವೆಯೇ ಹೊರತು ಹುಣ್ಣಿಮೆ ಒಂದೂ ಇಲ್ಲ.

**ನಾಗಪ್ಪ.** ನಿಮ್ಮಪ್ಪನ ಕಾಲದಿಂದ ನೀನು ಪಂಚಾಂಗ ನೋಡಿದ್ದರಲ್ಲವೆ? ಎಲ್ಲಿ ಇಲ್ಲಿ ಕೊಡು. ನಾವು ಆಡುವ ದಿವಸ ಬೆಳುದಿಂಗಳಿದೆಯೆ ಇಲ್ಲವೆ ನೋಡದೆ ಹುಣ್ಣಿಮೆ ಹುಡುಕುತ್ತಾನೆ! (ಪಂಚಾಂಗ ತೆಗೆದುಕೊಂಡು) ವಾಜರ ಮಾಯಾಚಾರ್ರೆ, ನಾವಾಡುವುದು ಮದುವೆ ಯಾಗುವ ದಿವಸವೇ ಅಲ್ಲವೆ?

**ಮಾಯಾಚಾರಿ.** ಹೌದು.

ನಾಗಪ್ಪ ಪುಸ್ತಕವನ್ನು ತಿರಿವಿ ಹಾಕಿ, ಪ್ರಮೀಳೆಯ ಮದುವೆ ಪಂಚಾಂಗದಲ್ಲಿ ಇಲ್ಲವೆಂದು ಅದನ್ನು ಅತ್ತ ಒಗೆಯುತ್ತಾನೆ. ಅಲ್ಲಿಂದ ಮುಂದೆ ನಾಟಕದ ಸಿದ್ಧತೆ—ಕಂದೀಲನ್ನು ತಲೆಯ ಮೇಲಿಟ್ಟುಕೊಂಡ ಚಂದ್ರನ ಪಾತ್ರ, ಮೂವರು ಪರಸ್ಪರ ಕೈ ಹಿಡಿದುಕೊಂಡು ಗೋಡೆಯಾಗುವುದು, ತಲೆಯ ಮೇಲೆ ಕೈ ಇಟ್ಟುಕೊಂಡು ಕಿಟಕಿಯಾಗುವುದು, ಇತ್ಯಾದಿ, ಇತ್ಯಾದಿ. ಹಾಸ್ಯರಸದ ಹುಚ್ಚು ಹೊಳೆಯೇ ಇಲ್ಲಿ ಹರಿಯುತ್ತಿದೆ. ಇನ್ನು ಮುಖ್ಯನಾಟಕದಲ್ಲಿ ಕತ್ತೆಯ ತಲೆಯನ್ನು ಇಟ್ಟುಕೊಂಡು ಬಂದ ಅಗಸನನ್ನು ರತಿದೇವಿ ಸಪ್ರೇಮತೃಷಿತಳಾಗಿ ಹಂಬಲಿಸುತ್ತಾ ಹಿಂಬಾಲಿಸುವುದು ಪ್ರೇಕ್ಷಕರನ್ನು ನಗುವಿನ ಕಡಲಿನಲ್ಲಿ ಅದ್ದುತ್ತದೆ. ಒಟ್ಟಿನಲ್ಲಿ 'ಪ್ರಮೀಳಾರ್ಜುನೀಯ'ವು ನವಿರಲ್ಲದಿದ್ದರೂ ನಿರ್ದುಷ್ಟವಾದ ಹಾಸ್ಯದ ಹೊಳೆ.

'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್'ಅನ್ನು ಕೆರೂರು ವಾಸುದೇವಾಚಾರ್ಯರು 'ವಸಂತಯಾಮಿನೀ ಸ್ವಪ್ನ ಚಮತ್ಕಾರ'ವೆಂಬ ಹೆಸರಿನಿಂದ ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ಪಾತ್ರಗಳ ಹೆಸರನ್ನು ಬಿಟ್ಟು ಉಳಿದುದೆಲ್ಲವೂ ಭಾಷಾಂತರ, ಮನೋಹರವಾದ ಭಾಷಾಂತರ. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿಯೇ ಬಂದಿರುವ ಈ ನಾಟಕ ಈ ಜಾತಿಯ ನಾಟಕಗಳಲ್ಲಿ ಬಹು ಶ್ರೇಷ್ಠವಾದುದೆಂದು ಹೇಳಬೇಕು. ಕೆರೂರರ ಬರವಣಿಗೆ ಬಹು ಶ್ರೀಮಂತವಾದುದು, ಸುಸಂಸ್ಕೃತವಾದುದು, ಮೂಲದ ಹಾಸ್ಯ ಶೃಂಗಾರಗಳು ಸ್ವಲ್ಪವೂ ಕಳೆಗೆಡದೆ ಇವರ ಬರವಣಿಗೆಯಲ್ಲಿ ಹೊರದೋರಿವೆ. ಷೇಕ್‌-ಸ್ಪಿಯರ್ ಕವಿಯ ಭಾವಗಳು ಭಾಷಾಂತರಕಾರನಿಗೆ ಸವಾಲುಗಳಂತಿರುತ್ತವೆ.

I swear to thee by Cupid's strongest bow
By his best arrow with the golden head,
By the simplicity of Venus' doves,
By that which knitteth souls and prospers loves[1],

ಎಂಬುದನ್ನು

ಮದನನ ಹೂಬಿಲ್ಲ ಹೂಬಾಣಗಳನ್ನು ಸ್ಮರಿಸಿ ಹೇಳಿದರೆ ಆಗುವದಷ್ಟೆ? ರತಿದೇವಿಯ ಮಂಜೀರದ

[1] I. i. 169-72.

ಝುಣತ್ಕಾರವನ್ನು ಸ್ಮರಿಸಿ ಹೇಳಲೇನು? ಮದನದೂತಿಯಾದ ಕೋಗಿಲೆಯ ಕೊರಳಾಣೆ ಮಾಡುವೆನು, ತೃಪ್ತಿಯೆ?

ಎಂದು ಭಾಷಾಂತರಿಸಿರುವುದು ಮೂಲದ ಸಂಪೂರ್ಣಾರ್ಥವೆಂದು ಹೇಳಲಾಗದಿದ್ದರೂ ಅದು ಮನೋಹರವಾಗಿದೆಯೆಂದು ಹೇಳುವುದಕ್ಕೆ ಅಡ್ಡಿಯಿಲ್ಲ. ಕೆರೂರರಿಗೆ ಕವಿ-ಹೃದಯವಿದೆ, ಮೂಲದ ಭಾವವನ್ನು ಗ್ರಹಿಸಿ ಭಾಷಾಂತರಿಸಬಲ್ಲರು.

ಷೇಕ್ಸ್‌ಪಿಯರನ ಭಾಷಾಂತರಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದುದು ವೆಂಕಟೇಶ ಭೀಮರಾವ್ ಭಂಡಿವಾಡರ 'ಕಮಲಾಕ್ಷ ಪದ್ಮಗಂಧಿಯರ ಕಥೆ' (1881) ಎಂದು ಕಾಣುತ್ತದೆ. ಇದು 'ರೋಮಿಯೊ ಅಂಡ್ ಜೂಲಿಯೆಟ್'ನ ಭಾಷಾಂತರ. ಷೇಕ್ಸ್‌ಪಿಯರನ ನಾಟಕಗಳಲ್ಲೆಲ್ಲಾ ಇದು ನಮ್ಮವರಿಗೆ ಅತ್ಯಂತ ಪ್ರಿಯವಾಗಿತ್ತೆಂದು ತೋರುತ್ತದೆ. ಇದನ್ನು 'ರಾಮವರ್ಮ-ಲೀಲಾವತಿ' ಎಂಬ ಹೆಸರಿನಿಂದ ಎ. ಆನಂದರಾಯರೂ ಜಯರಾಯಾಚಾರ್ಯರೂ ಕನ್ನಡಕ್ಕೆ ತಂದುಕೊಂಡಿದ್ದಾರೆ. ಇತ್ತೀಚೆಗೆ (1952) ವೈ. ಎಂ. ಷಣ್ಮುಖಯ್ಯನವರು 'ರೋಮಿಯೊ ಜೂಲಿಯೆಟ್' ಎಂಬ ಮೂಲದ ಹೆಸರನ್ನು ಹಾಗೆಯೇ ಇಟ್ಟುಕೊಂಡು ಇದನ್ನು ಬರೆದಿದ್ದಾರೆ. ಈ ನಾಲ್ಕರಲ್ಲಿ ಆನಂದರಾಯರ ನಾಟಕವು ರಂಗಸ್ಥಳದಲ್ಲಿ ಅಪಾರವಾದ ಕೀರ್ತಿಯನ್ನು ಗಳಿಸಿದುದಾಗಿ ಪ್ರಖ್ಯಾತವಾಗಿದೆ. ವರದಾಚಾರ್ಯರ ರತ್ನಾವಳಿ ನಾಟಕ ಸಭೆಯವರು ಈ ನಾಟಕವನ್ನು ಅತ್ಯಂತ ಮನೋಜ್ಞವಾಗಿ ಅಭಿನಯಿಸುತ್ತಿದ್ದುದನ್ನು ಜನ ನೋಡಿ ಸಂತೋಷದಿಂದ ಮೈ ಮರೆತು ನಲಿದಿದ್ದುಂಟು. ಆದರೆ ಅದರ ಕೀರ್ತಿ ನಟರಿಗೆ ಸಲ್ಲಬೇಕಾದುದೇ ಹೊರತು ನಾಟಕಕ್ಕೆ ಅಲ್ಲವೆಂದು ತೋರುತ್ತದೆ. 'ರಾಮವರ್ಮ-ಲೀಲಾವತಿ'ಯಲ್ಲಿ ಮೂಲದ ಪ್ರತಿಭೆಯನ್ನಾಗಲಿ ಕಾವ್ಯರಮಣೀಯತೆಯನ್ನಾಗಲಿ ನಾವು ಕಾಣುವುದಿಲ್ಲ. ಮೂಲದ ಸಂದರ್ಭಗಳು ನಮ್ಮ ಜನಜೀವನಕ್ಕೆ ಹೊಂದುವುದಾದರೂ ಬಹು ಕಷ್ಟ. ಪ್ರೌಢವಯಸ್ಸಿನ ಲೀಲಾವತಿ ಕನ್ಯಾವಸ್ಥೆಯಲ್ಲಿದ್ದುಕೊಂಡು, ಮುಖಪರದೆಯೊಡನೆ ರಾಮವರ್ಮನೊಡನೆ ಕುಣಿದಾಡುವುದೂ, ದೇವಾಲಯಕ್ಕೆ ಹೋಗಿ ಅವನೊಡನೆ ಸಂಕೇತವಿವಾಹ ಮಾಡಿಕೊಳ್ಳುವುದೂ ನಮ್ಮ ಸಂಪ್ರದಾಯವಲ್ಲ. ಇಲ್ಲಿನ ಪಾತ್ರಗಳ ಹೆಸರುಗಳಂತೂ ಭಯಂಕರ. ಮೂಲ ಶಬ್ದಗಳ ಉಚ್ಚಾರಣಾಸಾಮ್ಯವನ್ನು ತರಹೊರಟು, ಪೇಶಲಾಂಗ (ಪ್ಯಾರಿಸ್), ಸೆಂತ (ಸ್ಯಾಂಪ್ಸನ್), ಗ್ರೈವೇಯಕ (ಗ್ರೆಗರಿ), ಪೀವರಾಂಗ (ಪೀಟರ್), ಏಕಪಿಂಗ (ಏಬ್ರಹಂ) ಇತ್ಯಾದಿಯಾದ ಹೆಸರುಗಳು ವಿಕೃತವಾಗಿವೆ. ಈ ವಿಕೃತಗಳನ್ನೆಲ್ಲಾ ಮೀರಿಸಿದ ವಿಕೃತಿಯೆಂದರೆ ಭಾಷಾಂತರಕಾರರ ಸ್ವಕಪೋಲಕಲ್ಪಿತವಾದ ಕಡೆಯ ದೃಶ್ಯ. ಈ ದೃಶ್ಯದಲ್ಲಿ ಪೂಜ್ಯಪಾದ ಯೋಗೀಶ್ವರ (ಫ್ರಿಯರ್ ಲಾರೆನ್ಸ್) ನ ಪ್ರಾರ್ಥನೆಗೆ ಪ್ರತ್ಯಕ್ಷನಾದ ಮಹಾವಿಷ್ಣು ರಾಮವರ್ಮನ ಅನುರಾಗಕ್ಕೂ ಲೀಲಾವತಿಯ ಪಾತಿವ್ರತ್ಯಕ್ಕೂ ಮೆಚ್ಚಿ ಸತ್ತಿದ್ದ ಆ ದಂಪತಿಗಳನ್ನು ಬದುಕಿಸಿ ಅಂತರ್ಧಾನನಾಗುತ್ತಾನೆ. ಹೀಗೆ ರಾಮವರ್ಮ-ಲೀಲಾವತಿಯರನ್ನು ಬದುಕಿಸ ಹೊರಟ ಭಾಷಾಂತರಕಾರರು ಷೇಕ್ಸ್‌ಪಿಯರ್ ಮಹಾಕವಿಯ ಕಗ್ಗೊಲೆಯನ್ನು ಮಾಡಿದ್ದಾರೆ.

'ರೋಮಿಯೊ ಅಂಡ್ ಜೂಲಿಯೆಟ್'ನಂತೆ 'ಹ್ಯಾಮ್ಲೆಟ್' ನಾಟಕವೂ ನಮ್ಮವರಿಗೆ ಅತ್ಯಂತ ಪ್ರಿಯವಾದ ನಾಟಕವಾಗಿತ್ತೆಂದು ತೋರುತ್ತದೆ. 'ರಾಮವರ್ಮ-ಲೀಲಾವತಿ'

ಯನ್ನು ಬರೆದ ಆನಂದರಾಯರೇ 'ಹ್ಯಾಮ್ಲೆಟ್' ನಾಟಕವನ್ನೂ ಬರೆದಿದ್ದಾರೆ. ನಾಯಕನ ಹೆಸರನ್ನು ಬಿಟ್ಟರೆ ಉಳಿದುವೆಲ್ಲ ಕುಲಗೆಟ್ಟ ಕನ್ನಡ ಹೆಸರುಗಳೆ. ಇವು ಹಾಗಿರಲಿ, ಮೇಲೆಯೇ ಎದ್ದು ಕಾಣುವ ಅನೌಚಿತ್ಯಗಳು ಭಾಷಾಂತರಕಾರರ ಕಣ್ಣಿಗೆ ಕಾಣಬರದಿದ್ದುದು ಆಶ್ಚರ್ಯ. ದೇಶಗಳ ಮತ್ತು ಊರುಗಳ ಹೆಸರುಗಳನ್ನು ಮೂಲದಲ್ಲಿ ಇದ್ದಂತೆಯೇ ಇಟ್ಟುಕೊಂಡು ಪಾತ್ರಗಳ ಹೆಸರುಗಳನ್ನು ಮಾತ್ರ ಬದಲಾಯಿಸಿದರೆ ಹೇಗೆ? ಅಣ್ಣನ ಹೆಂಡತಿಯನ್ನು ತಮ್ಮ ಮದುವೆ ಮಾಡಿಕೊಳ್ಳುವ ಆಚಾರವಾಗಲಿ, ತಾಯಿ ಚಿಕ್ಕಪ್ಪನ ಹೆಂಡತಿಯಾದುದನ್ನು ಕಂಡು ಸಹಿಸುವ ಮಗನ ತಾಳ್ಮೆಯಾಗಲಿ ನಮ್ಮ ಸಮಾಜದಲ್ಲಿ ಊಹಾತೀತ. ಇದೇ ನಾಟಕವನ್ನು ಅಮೃತಾಚಾರಿಯವರು 'ಸಂತಾಪಕ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಈ ನಾಟಕವೂ 'ರಾಮವರ್ಮ-ಲೀಲಾವತಿ'ಯಂತೆ ರಂಗಸ್ಥಳದಲ್ಲಿ ಯಶಸ್ಸು ಗಳಿಸಿತ್ತೆಂದು ಹೇಳುತ್ತಾರೆ. ಈಚಿಗೆ ವೈ. ಎಂ. ಷಣ್ಮುಖಯ್ಯನವರೂ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರೂ ಈ ನಾಟಕವನ್ನು ಕನ್ನಡಕ್ಕೆ ತಂದುಕೊಂಡಿದ್ದಾರೆ. ಇವೆರಡೂ ಮೂಲದ ಗೌರವಕ್ಕೆ ಅಪೋಹ ಬರದಂತೆ ಕನ್ನಡದಲ್ಲಿ ಕಾಣಿಸಿಕೊಂಡಿವೆ. ಮಾಸ್ತಿಯವರ ಭಾಷಾಂತರ ಬಹುಮಟ್ಟಿಗೆ ನಿರ್ದುಷ್ಟವಾಗಿದೆ. ಕವಿಹೃದಯವುಳ್ಳ ಭಾಷಾಂತರಕಾರರು ಮೂಲದ ಭಾವವನ್ನು ಸಂಪೂರ್ಣವಾಗಿ ಗ್ರಹಿಸಿ, ಅದನ್ನು ಕನ್ನಡದಲ್ಲಿ ಕಂಡರಿಸುವುದಕ್ಕೆ ಪ್ರಯತ್ನಿಸಿದ್ದಾರೆ. ಅವರು ಬಳಸಿರುವ ಛಂದಸ್ಸು—ಸರಳ ರಗಳೆ—ಸಾಕಷ್ಟು ವೈವಿಧ್ಯಮಯವಾಗಿದೆ. ಸರಳತೆಯೇ ಮನೆ-ದೇವರಂತಿರುವ ಅವರ ಬಂಧದಲ್ಲಿ ಅಲ್ಲಲ್ಲಿ ಶಿಥಿಲತೆ ಕಾಣಬರಬಹುದಾದರೂ ನಿರರ್ಗಳವಾದ ಓಟವಿದೆ. ಈ ಮಾತು 'ಹ್ಯಾಮ್ಲೆಟ್'ನಂತೆ ಅವರ 'ಕಿಂಗ್ ಲಿಯರ್', 'ದಿ ಟೆಂಪೆಸ್ಟ್', 'ಟ್ವೆಲ್ಫ್ತ್ ನೈಟ್'ಗಳ ಭಾಷಾಂತರಗಳಿಗೂ ಅನ್ವಯಿಸುತ್ತದೆ. ಪ್ರತಿಭಾಶಾಲಿಗಳಾದ ಮಾಸ್ತಿಯಂತಹರು ಮೈಯೆಲ್ಲ ಕಣ್ಣಾಗಿ ಭಾಷಾಂತರಕಾರ್ಯವನ್ನು ನಿರ್ವಹಿಸುತ್ತಿದ್ದರೂ ಒಮ್ಮೊಮ್ಮೆ ಮೈದುಂಬಿ, ಮೈಮರೆತು ತಪ್ಪು ಮಾಡುವುದೂ ಉಂಟು. ಅವರ 'ಲಿಯರ್ ಮಹಾರಾಜ' 'ಕಿಂಗ್ ಲಿಯರ್'ನ ಹದಿನಾರಾಣೆ ಭಾಷಾಂತರ. ಇದರಲ್ಲಿ ಬರುವ ಲಿಯರ್ ದೊರೆ ಕಂಚಿಯ ಪಂಡಿತನ (ಮೂಲದ 'ಲರ್ನೆಡ್ ಥೀಬನ್'ಗೆ ಬದಲಾಗಿ) ವಿಚಾರವಾಗಿ ಮಾತನಾಡುವುದು ಹೇಗೆ ಸಾಧ್ಯ? ಇಂತಹ ಸಣ್ಣ ತಪ್ಪುಗಳು ಕ್ವಚಿತ್ತಾಗಿ ಕಾಣಿಸಿಕೊಳ್ಳುವುದನ್ನು ಬಿಟ್ಟರೆ ಅವರ ಭಾಷಾಂತರ ಕಾರ್ಯ ಚೊಕ್ಕವಾಗಿ ಮುದ್ದಾಗಿದೆಯೆಂದು ಹೇಳಬಹುದು.

ಕ್ರಿ. ಶ. 1885ರಲ್ಲಿ ಧಾರವಾಡದ ಮುದ್ರಾಕ್ಷರಶಾಲೆಯೊಂದರಿಂದ ಹೊರಬಿದ್ದಿರುವ 'ರಾಘವೇಂದ್ರರಾವ್ ನಾಟಕ'ವು ಷೇಕ್‌ಸ್ಪಿಯರನ 'ಅಥೆಲ್ಲೊ' ನಾಟಕದ ಭಾಷಾಂತರ. ಗುಂಡೋಕೃಷ್ಣ ಚುರಮುರಿಯವರು ರಚಿಸಿದ ಈ ನಾಟಕ ತನ್ನ ಅಣ್ಣತಮ್ಮಂದಿರಂತೆ ಇರುವ ಅಂದಿನ ಇತರ ನಾಟಕಗಳಂತೆ ಕಥೆ ಭಾಷಾಂತರ, ಹೆಸರು ರೂಪಾಂತರ. ಕೃತ-ಪುರದ ರಾಘವೇಂದ್ರರಾಯನನ್ನು ವೆಂಕೂಬಾಯಿ ತಂದೆಯ ಇಷ್ಟಕ್ಕೆ ವಿರೋಧವಾಗಿ ವರಿಸಿದಳು. ನರಸಿಂಗರಾಯನೆಂಬ ಕಿಡಿಗೇಡಿ ಆ ಗಂಡಹೆಂಡಿರಲ್ಲಿ ವೈಮನಸ್ಯ ಒಡ್ಡಿದ. ಸುಬ್ಬರಾಯನೆಂಬೊಬ್ಬ ನೀಚನಲ್ಲಿ ಅವಳು ವ್ಯಭಿಚಾರಿಣಿಯಾಗಿದ್ದಾಳೆಂದು ಭ್ರಮಿಸಿ, ರಾಘವೇಂದ್ರರಾಯ ಅವಳನ್ನು ಕೊಂದುಹಾಕಿದ. ಮೂಲದ ನೀಗ್ರೊ

ಅಥೆಲ್ಲೊನ ಪರಾಕ್ರಮಕ್ಕೆ ತನ್ನ ಪ್ರೇಮವನ್ನು ಕಾಣಿಕೆಯಾಗಿ ಅರ್ಪಿಸಿದ ಡೆಸ್ಡಿಮೋನಳ ಪ್ರೇಮೌನ್ನತ್ಯವನ್ನು ರಾಘವೇಂದ್ರರಾಯನನ್ನು ಕೈಹಿಡಿದ ವೆಂಕೂಬಾಯಿಯಲ್ಲಿ ಕಾಣ ಹೊರಡುವುದು ಶುದ್ಧ ಅವಿವೇಕವಾದೀತು. ಷೇಕ್ಸ್ಪಿಯರ್ ಮಹಾಕವಿಯ ದಿವ್ಯ ಪ್ರತಿಭೆಯನ್ನಾಗಲಿ, ಗಗನಚುಂಬಿಯಾದ ಕಲ್ಪನೆಯನ್ನಾಗಲಿ 'ರಾಘವೇಂದ್ರರಾವ್ ನಾಟಕ'ದಲ್ಲಿ ಹುಡುಕುವುದು ಕಲ್ಲುಮೊರಡಿಯಲ್ಲಿ ಮಾದಲದ ಹಣ್ಣನ್ನು ಅರಸಿದಂತೆ. ಇದೇ ನಾಟಕವನ್ನು ಆಸ್ಥಾನಕವಿಗಳಾಗಿದ್ದ ಬಸವಪ್ಪಶಾಸ್ತ್ರಿಗಳು 'ಶೂರಸೇನ ಚರಿತ್ರೆ' ಎಂಬ ಹೆಸರಿನಿಂದ ಭಾಷಾಂತರಿಸಿದ್ದಾರೆ. ಆದರೆ ಅದು ಮೂಲದ ರಸರಹಿತ ಛಾಯೆಯಾಗಿ ಪರಿಣಮಿಸಿದೆ. ಶಾಸ್ತ್ರಿಗಳು ಬಹು ದೊಡ್ಡ ಕವಿಗಳಾದರೂ ಅವರಿಗೆ ಇಂಗ್ಲಿಷ್ ಬರದು. ಸಿ. ಸುಬ್ಬರಾಯರು ಇಂಗ್ಲಿಷ್ ನಾಟಕವನ್ನು ಓದಿ ಅರ್ಥ ಹೇಳಬೇಕು; ಶಾಸ್ತ್ರಿಗಳು ಅದನ್ನು ಸಾಹಿತ್ಯರೂಪಕ್ಕೆ ತಿರುಗಿಸುತ್ತಾ ಹೋಗಬೇಕು. ಸುಬ್ಬರಾಯರಿಗೆ ಕವಿತಾಶಕ್ತಿ ಇಲ್ಲ, ಶಾಸ್ತ್ರಿಗಳಿಗೆ ಭಾಷಾಪರಿಚಯವಿಲ್ಲ; ಇಬ್ಬರೂ ಒಟ್ಟಿಗೆ ಸೇರಿ 'ಶೂರಸೇನ ಚರಿತ್ರೆ' ಹೊರತಂದರು. ಮೂಲದ ಜೀವಾಳವನ್ನು ಸಂಪೂರ್ಣವಾಗಿ ಗ್ರಹಿಸುವ ಶಕ್ತಿ ಸ್ವಕೀಯವಾಗಿ ಇಲ್ಲದಿರುವಾಗ, ಅದರಿಂದ ಭಾಷಾಂತರಿತವಾದ ಕಾವ್ಯ ಎಷ್ಟು ಜೀವಪೂರ್ಣವಾದೀತು? ಅಲ್ಲದೆ, ಮೂಲಕಾವ್ಯವು ಭಾರತದ ವಾತಾವರಣಕ್ಕೆ ಹೊಂದಿಕೊಳ್ಳುವುದೂ ಸ್ವಲ್ಪ ಕಷ್ಟವೇ. ಶೂರಸೇನನಾಗಲಿ, ರಾಘವೇಂದ್ರರಾಯನಾಗಲಿ ತಮ್ಮ ಮಡದಿಯರನ್ನು ಎಲ್ಲರೆದುರಿಗೆ ಚುಂಬಿಸುವುದಾಗಲಿ, ಚುಂಬಿಸುವಂತೆ ಪತ್ನಿಯರನ್ನು ಕೇಳುವುದಾಗಲಿ, ಆ ಪತ್ನಿಯರು ಡೆಸ್ಡಿಮೋನಳಂತೆ ಸಲಿಗೆಯಿಂದ ವ್ಯವಹಾರಮಾಡುವುದಾಗಲಿ ನಮ್ಮ ನಾಗರಿಕತೆಗೆ ಹೊರತು.

ಷೇಕ್ಸ್ಪಿಯರನ 'ದಿ ಟೇಮಿಂಗ್ ಅಫ್ ದಿ ಷ್ರೂ' ಅತ್ಯಂತ ರಸಭರಿತವಾದ ಪ್ರಹಸನ; ಅದು ಕನ್ನಡಿಗರಿಗೆ ಅತ್ಯಂತ ಪ್ರಿಯವಾದುದೆಂದೂ ಹೇಳಬೇಕು. ಐದು ಜನ ಬೇರೆ ಬೇರೆ ನಾಟಕಕಾರರು ಅದನ್ನು ಭಾಷಾಂತರಿಸಿದ್ದಾರೆ. ಅವುಗಳಲ್ಲಿ ಸೋಮನಾಥಯ್ಯನವರ 'ಗಯ್ಯಾಳಿಯನ್ನು ಸಾಧುಮಾಡುವಿಕೆ' ಅತ್ಯಂತ ಪ್ರಾಚೀನವಾದುದು (1897). ಅದೇ ಅದರ ಹಿರಿತನ. ಕೆ. ಲಕ್ಷ್ಮಣರಾಯರೂ ಗೋಡಪಲ್ಲಿ ರಾಮಶಾಸ್ತ್ರಿಗಳೂ ಇದನ್ನು 'ಚಂಡೀಮದಮರ್ದನ' ಎಂದೂ, ಗದಿಗಯ್ಯ ಹುಚ್ಚಯ್ಯನವರು 'ತ್ರಾಟಿಕಾ ನಾಟಕ' ಎಂದೂ ನಾಮಕರಣ ಮಾಡಿದ್ದಾರೆ. ಲಕ್ಷ್ಮಣರಾಯರ ಭಾಷಾಂತರ ನೇರವಾಗಿ ಮೂಲದಿಂದಲೇ ಬಂದಿದ್ದರೆ ಗದಿಗಯ್ಯನವರದು ಮರಾಠಿಯಿಂದ ಭಾಷಾಂತರವಾಗಿದೆ. ಪ್ರೊ|| ಕೇಳ್ಕರರವರು ಮರಾಠಿ ನಾಟಕದ ಪಾತ್ರಗಳನ್ನು ಮಾಂಸಾಹಾರಿಗಳಾದ ಮರಾಠರಿಂದ ಆಯ್ದುಕೊಂಡಿದ್ದರೆ ಗದಿಗಯ್ಯನವರು ಶಾಕಾಹಾರಿಗಳಾದ ಬ್ರಾಹ್ಮಣರಿಂದ ಅವರನ್ನು ಆಯ್ದುಕೊಂಡಿದ್ದಾರೆ. ಮೂಲದ ಮರಾಠಿ ಹೆಸರುಗಳಿಗೆ ಬದಲಾಗಿ ವೆಂಕಣ್ಣನಾಯಕ, ರಂಗರಾವ ಇತ್ಯಾದಿ ಧಾರವಾಡದ ಹೆಸರುಗಳನ್ನು ಗದಿಗಯ್ಯನವರು ಬಳಸಿದ್ದಾರೆ. ಎರಡೂ ಗದ್ಯನಾಟಕಗಳು. ಈ ಎಲ್ಲರ ನಾಟಕಗಳೂ ರಮ್ಯವಾಗಿವೆಯಾದರೂ ಲಕ್ಷ್ಮಣರಾಯರ 'ಚಂಡೀಮದಮರ್ದನ' ಅತ್ಯಂತ ರಸವತ್ತಾಗಿದೆ. ಪದ್ಮಾನಗರದ ಚಂಡಿ ಕಮಲಿನಿ, ಆ ಕಂತೆಗೆ ತಕ್ಕ ಬೊಂತೆ ಕಮಲಾಕ್ಷ. ಪಟಮರಾಕ್ಷಸಿಯಾಗಿದ್ದ ಕಮಲಿನಿಯನ್ನು ಪರಮಸಾಧ್ವಿಯಾಗಿ ಪರಿವರ್ತಿಸಿದುದೇ ಈ ನಾಟಕದ ತಿರುಳು. ಆ

ಚಂಡಿಯ ತಂಗಿ ಕುಮುದಿನಿಗಾಗಿ ಕಲಹಂಸ ರಜತಾಂಗರು ಬಾಯಿ ಬಾಯಿ ಬಿಡುತ್ತಿರುವಾಗ ಚಂದ್ರವರ್ಮನು ಅವಳ ಉಪಾಧ್ಯಾಯನಾಗಿ ಸೇರಿಕೊಂಡು ಅವಳನ್ನು ಸಂಗ್ರಹಿಸುತ್ತಾನೆ. ಆ ಗುರು-ಶಿಷ್ಯರ ವ್ಯಾಸಂಗ ಹಾಸ್ಯಭರಿತವಾಗಿದೆ. ಈ ಭಾಗದಲ್ಲಿ ಲಕ್ಷ್ಮಣರಾಯರು ಉಳಿದೆಲ್ಲ ನಾಟಕಕಾರರನ್ನು ಮೀರಿಸಿದ್ದಾರೆ. ಗುರು ಹೇಳಿಕೊಡುತ್ತಿರುವ ಪಾಠ ಇದು:

> **ಸತ್ಯಂ ಮಾತಾ**—ನಾನು ಮೊದಲು ಹೇಳಿದಂತೆ, **ಪಿತಾಜ್ಞಾನಂ**—ಮಹಾಸಿಥಿಯ ಪುತ್ರಸಾದ, **ಧರ್ಮೋಭ್ರಾತಾ**—ಚಂದ್ರವರ್ಮನು ನಾನೇ ; **ದಯಾ ಸಖಾ**—ನಿನ್ನನ್ನು ಮೋಹಿಸಿ, **ಶಾಂತಿಃ ಪತ್ನೀ**—ವೇಷ ಪಲ್ಲಟಿಸಿ ಬಂದಿದ್ದೇನೆ, **ಕ್ಷಮಾಪುತ್ರಃ**—ಇಲ್ಲಿ ಬರುವ ಚಂದ್ರವರ್ಮನು, **ಷಡೇತೇ**—ನನ್ನ ಸೇವಕ ಮದನ ; **ಮಮ**—ರಜತಾಂಗನನ್ನು ಮೋಸಗೊಳಿಸಲು, **ಬಾಂಧವಾಃ**—ನನ್ನ ವೇಷವನ್ನು ಧರಿಸಿದನು.

ಈ ಪಾಠವನ್ನು ಶಿಷ್ಯಳು ಗುರುವಿಗೆ ಒಪ್ಪಿಸುತ್ತಾಳೆ:

> **ಸತ್ಯಂ ಮಾತಾ**—ನೀವು ಯಾರೆಂಬುದು, **ಪಿತಾಜ್ಞಾನಂ**—ನನಗೆ ಗೊತ್ತಿಲ್ಲ; **ಧರ್ಮೋಭ್ರಾತಾ**—ನಿಮ್ಮ ಮಾತುಗಳನ್ನು, **ದಯಾ ಸಖಾ**—ನಾನು ನಂಬಲಾರೆ; **ಶಾಂತಿಃ ಪತ್ನೀ**—ನಿಮ್ಮ ಈ ಅರ್ಥವನ್ನು, **ಕ್ಷಮಾಪುತ್ರಃ**—ಅವನು ಕೇಳದಂತೆ, **ಷಡೇತೇ**—ಜಾಗ್ರತೆಯಿಂದಿರಿ; **ಮಮ ಬಾಂಧವಾಃ**—ನಿರಾಶರಾಗಬೇಡಿ.

ಷೇಕ್ಸ್ಪಿಯರನ ಲ್ಯಾಟಿನ್ ಮತ್ತು ಇಂಗ್ಲಿಷ್‌ಗಳ ಸ್ಥಾನದಲ್ಲಿ ಸಂಸ್ಕೃತ ಮತ್ತು ಕನ್ನಡಗಳು ಬಂದಿವೆ. ಇತ್ತೀಚೆಗೆ ಪರ್ವತವಾಣಿಯವರು 'ದಿ ಟೇಮಿಂಗ್ ಆಫ್ ದಿ ಷ್ರೂ' ಕಥಾವಸ್ತುವನ್ನು ಬಳಸಿಕೊಂಡು 'ಬಹದ್ದೂರ್ ಗಂಡ' ಎಂಬ ನಾಟಕವನ್ನು ಬರೆದಿದ್ದಾರೆ. ಅವರ ಈ ನಾಟಕವೇ ಆಗಲಿ, 'ದಿ ಕಾಮಿಡಿ ಆಫ್ ಎರರ್ಸ್'ನ ಮೂಲತತ್ವಗಳನ್ನಿಟ್ಟುಕೊಂಡು ಬರೆದಿರುವ 'ವಿಪರ್ಯಾಸ'ವೇ ಆಗಲಿ, ಸ್ವತಂತ್ರನಾಟಕಗಳೆಂದು ಹೇಳುವಷ್ಟು ಸ್ವಾಭಾವಿಕವಾಗಿವೆ. ಮೂಲದ ಕವಿತಾವಿಲಾಸವನ್ನು ನಾವು ಇಲ್ಲಿ ಕಾಣಲಾರೆವು. ಇಲ್ಲಿನ ಸನ್ನಿವೇಶಗಳು ಮೂಲದಿಂದ ಭಿನ್ನವಾಗಿವೆ; ಆದರೂ ಮನೋಹರವಾಗಿವೆ. ಮೂಲದಂತೆ ಇಲ್ಲಿಯೂ ಹಾಸ್ಯರಸ ಹೊಳೆಯಾಗಿ ಹರಿಯುತ್ತದೆ. 'ದಿ ಕಾಮಿಡಿ ಆಫ್ ಎರರ್ಸ್' ನಾಟಕವನ್ನು ಬಿ. ವೆಂಕಟಾಚಾರ್ಯರು 'ಭ್ರಾಂತಿವಿಲಾಸ' ಎಂಬ ಹೆಸರಿನಿಂದ ಗದ್ಯರೂಪಕ್ಕೆ ಅನುವಾದ ಮಾಡಿದ್ದಾರೆ. ಅವರ ದೃಷ್ಟಿ ನಾಟಕಕ್ಕಿಂತಲೂ ಕಥೆಯ ಮೇಲೆ ಹೆಚ್ಚು. ಹಾಸ್ಯರಸವೇ ಹೆಗ್ಗುರಿಯಾದ 'ಭ್ರಾಂತಿವಿಲಾಸ' ಕೃತಕೃತ್ಯತೆಯನ್ನು ಪಡೆದಿದೆ.

ಬೆಳ್ಳಾವೆ ಸೋಮನಾಥಯ್ಯನವರು 'ಸತೀಮಣಿ ವಿಜಯ'ವೆಂಬ ಹೆಸರಿನಿಂದ ಕನ್ನಡಿಸಿರುವ 'ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್' ನಾಟಕವೂ 'ಕುಸುಮಾಕರ' ಎಂಬ ಹೆಸರಿನಿಂದ ಅಣ್ಣಾಜಿರಾಯರು ಕನ್ನಡಿಸಿರುವ 'ದಿ ಟು ಜೆಂಟಲ್‌ಮೆನ್ ಆಫ್ ವೆರೋನ' ನಾಟಕವೂ 'ಮಂಜುಘೋಷ' ಎಂಬ ಹೆಸರಿನಿಂದ ಮುದ್ಗಲ್ ರಂಗಾಚಾರ್ಯರು ಕನ್ನಡಿಸಿರುವ 'ದಿ ವಿಂಟರ್ಸ್ ಟೇಲ್' ನಾಟಕವೂ 'ಜಯಸಿಂಹರಾಜ ಚರಿತ್ರ (ತ್ರೆ)' ಎಂಬ ಹೆಸರುಗಳಿಂದ ಸಿ. ಎಂ. ನಂಜಪ್ಪನವರೂ ಎಂ. ಎಸ್ ಪುಟ್ಟಣ್ಣನವರೂ ಕನ್ನಡಿಸಿರುವ 'ಸಿಂಬೆಲೈನ್' ನಾಟಕವೂ ಪ್ರಾರಂಭವೇಸೆಯಲ್ಲಿ ಕನ್ನಡಕ್ಕೆ ತಂದುಕೊಂಡ ಈ ಜಾತಿಯ ಇತರ ನಾಟಕಗಳಂತೆ ವಿಕೃತರೂಪವನ್ನೇ ತಾಳಿವೆ.

ಕೆ. ಮಲ್ಲರಾಜೇ ಅರಸರು ಷೇಕ್‌ಸ್ಪಿಯರನ ಹಲವು ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಅಪ್ರಕಟವಾದ ಆ ನಾಟಕಗಳಲ್ಲಿ 'ಆಂಟೊನಿ ಮತ್ತು ಕ್ಲಿಯೋಪಾತ್ರ' ಗಮನಾರ್ಹವಾದುದು. ಉಳಿದ ಅವರ ನಾಟಕಗಳೆಲ್ಲಾ ಭಾವಾನುವಾದವಾಗಿದ್ದು, ಇದೊಂದು ಮಾತ್ರ ಭಾಷಾಂತರ. ಗದ್ಯಶೈಲಿಯಲ್ಲಿರುವ ಈ ಭಾಷಾಂತರ ಮೂಲದ ಪ್ರತಿಕೃತಿಯಂತಿದೆ; ಕಾವ್ಯಗುಣ ಮಾತ್ರ ಇಲ್ಲ. ಷೇಕ್‌ಸ್ಪಿಯರನ ರೋಮನ್ ನಾಟಕಗಳು ಕನ್ನಡಕ್ಕೆ ಬಂದಿಲ್ಲವೆಂಬ ಕೊರತೆಯನ್ನು ಇದು ಹೋಗಲಾಡಿಸಿದೆ. ಇದರ ಜೊತೆಗೆ ತಿರುಮಲೆ ತಾತಾಚಾರ್ಯಶರ್ಮರು ಕನ್ನಡಿಸಿರುವ 'ಜೂಲಿಯಸ್ ಸೀಸರ್' ನಾಟಕವನ್ನೂ ಸೇರಿಸಿಕೊಂಡು ಷೇಕ್‌ಸ್ಪಿಯರ್ ಕವಿಯ ಎಲ್ಲ ಬಗೆಯ ನಾಟಕಗಳೂ ಕನ್ನಡಕ್ಕೆ ಬಂದಿವೆಯೆಂದು ಸಂತೋಷಪಟ್ಟುಕೊಳ್ಳಬಹುದು.

ಕನ್ನಡಿಗರಿಗೆ ಅತ್ಯಂತ ಪ್ರಿಯವಾಗಿರುವ ಷೇಕ್‌ಸ್ಪಿಯರ್ ನಾಟಕಗಳಲ್ಲಿ 'ದಿ ಮರ್ಚೆಂಟ್ ಅಫ್ ವೆನಿಸ್' ಮತ್ತೊಂದು. ಇದರ ಭಾಷಾಂತರಗಳಲ್ಲಿ ಎ. ಆನಂದ ರಾಯರ 'ಪಾಂಚಾಲಿ ಪರಿಣಯಂ', ಕೆರೂರು ವಾಸುದೇವಾಚಾರ್ಯರ 'ಸುರತನಗರದ ಶ್ರೇಷ್ಠಿ' ಹಿಂದಿನ ಶತಮಾನದ ಕಡೆಯ ಭಾಗದಲ್ಲಿ ಬಂದವುಗಳು; ಹನುಮಂತಗೌಡರು ಬರೆದ 'ವೇಣುಪುರಿಯವರ್ತಕ', ಬಿ. ವೆಂಕಟಾಚಾರ್ಯರು ಬರೆದ 'ವೆನಿಸು ನಗರದ ವಣಿಕ' 1920ರಿಂದ ಈಚಿನವು; ಜಿ. ಗುಂಡಣ್ಣನವರು ಬರೆದ 'ವೆನಿಸಿನ ವ್ಯಾಪಾರಿ' ಕೇವಲ ಇತ್ತೀಚಿನದು. ಗುಂಡಣ್ಣನವರ ನಾಟಕ ಮೂಲದ ಕಾವ್ಯಗುಣಗಳನ್ನು ಬಹುಮಟ್ಟಿಗೆ ಪಡೆದಿರುವುದಲ್ಲದೆ ಸರಳ ರಗಳೆಯಲ್ಲಿದೆ. ಶ್ರೀಯುತರ ರಚನೆಯಲ್ಲಿ ಪದಲಾಲಿತ್ಯ ಅಷ್ಟಾಗಿ ಕಂಡುಬರದಿದ್ದರೂ ನಿರ್ದುಷ್ಟವಾದ ಬಂಧವಿದೆ.

ಆಧುನಿಕ ಕನ್ನಡದ ಕವಿಶ್ರೇಷ್ಠರಾದ ಕುವೆಂಪುರವರ 'ರಕ್ತಾಕ್ಷಿ' ಷೇಕ್‌ಸ್ಪಿಯರನ 'ಹ್ಯಾಮ್ಲೆಟ್' ನಾಟಕದಿಂದ ಪ್ರೇರಿತವಾದುದು. ಬಿದನೂರು ನಾಯಕನ ಮರಣಾನಂತರ ಆತನ ರಾಣಿ ದುರ್ನಡತೆಗೆ ಬೀಳಲು, ಹೈದರನು ಆ ರಾಜ್ಯವನ್ನು ನುಂಗಿ ನೀರುಕುಡಿದ ಇತಿಹಾಸದ ಆಧಾರದ ಮೇಲೆ ಈ ನಾಟಕ ನಿರ್ಮಾಣವಾಗಿದೆ. ಮೂಲವೆನ್ನಿಸಿಕೊಳ್ಳಬಹುದಾದ ಮೇಲಿನ ಸಾಮಗ್ರಿಗಳೆರಡೂ ಕವಿಪ್ರತಿಭೆಯ ಕಾವಿನಲ್ಲಿ ಕರಗಿ, ಕಲ್ಪನೆಯ ಅಚ್ಚಿನಲ್ಲಿ ಚಿರನೂತನವಾದ ರೂಪವನ್ನು ತಳೆದಿವೆ. 'ಹ್ಯಾಮ್ಲೆಟ್' ನಾಟಕದಲ್ಲಿ ಹ್ಯಾಮ್ಲೆಟನಿಗೆ ತನ್ನ ತಂದೆಯ ಮರಣ ಸ್ವಾಭಾವಿಕವಲ್ಲವೆಂಬ ಸಂದೇಹ ಮನಸ್ಸಿನಲ್ಲಿ ಮೂಡುತ್ತದೆ. ಆ ಸಂದೇಹವನ್ನು ಸತ್ತ ತಂದೆಯ ಪ್ರೇತ ನಿವಾರಿಸುತ್ತದೆ. ಸ್ವಾರಸ್ಯಕರವಾದ ಈ ಸಂವಿಧಾನಕೌಶಲವನ್ನು ಕುವೆಂಪುರವರು ತಮ್ಮ 'ರಕ್ತಾಕ್ಷಿ' ಯಲ್ಲಿ ಸ್ವೀಕರಿಸಿದ್ದಾರೆ. ಬಸವಯ್ಯ ಮಂತ್ರಿಯ ಮಗಳಾದ ರುದ್ರಾಂಬೆಯೊಡನೆ ತನ್ನ ಪಿತೃಪ್ರೇತ ತನಗೆ ವಿಧಿಸಿದ 'ವಂಶವನು ಕಿಡಿಸಿದಾ ಕುಲಗೇಡಿಯನ್ನು ಅವಳ ನಿಂಬಯ್ಯನೊಡಗೂಡಿ ಜೀವದಿಂ ಸುಡಿಸಲಾರೆಯಾ, ಬೆಂಕಿಯಲಿ ಅದ್ದಿ' ಎಂಬ ಅಪ್ಪಣೆಯನ್ನು ವಿವರಿಸುತ್ತಾನೆ. ಆ ಪ್ರೇತದ ಪ್ರವೇಶ, ಅದರ ವ್ಯವಹಾರ 'ರಕ್ತಾಕ್ಷಿ'ಯಲ್ಲಿ ಕಾಣಿಸಿಕೊಳ್ಳುವುದು 'ಹ್ಯಾಮ್ಲೆಟ್' ನಾಟಕದ ಪ್ರಭಾವದಿಂದ. ಮಂತ್ರಿಯ ಮಗಳಾದ ರುದ್ರಾಂಬೆ ಬಸವಯ್ಯನನ್ನು ಮೋಹಿಸುವುದು, ಆಶಾಭಂಗದಿಂದ ಅವಳಿಗೆ ಹುಚ್ಚು ಹಿಡಿಯುವುದು 'ಹ್ಯಾಮ್ಲೆಟ್' ನಾಟಕದ ಅಫೀಲಿಯಾಳನ್ನು ಬಹುಮಟ್ಟಿಗೆ ಹೋಲುತ್ತದೆ. ವಿವರಣೆ



**'ದಿ ಟೆಂಪೆಸ್ಟ್'ನಲ್ಲಿ ನಕಲಿ ಟ್ರಿಂಕುಲೊ ಮತ್ತು ಅಡಿಗೆ ಭಟ್ಟ ಸ್ಟಿಫ್ಯಾನೊ ರಾಕ್ಷಸ ಕ್ಯಾಲಿಬಾನನಿಗೆ ಕಳ್ಳಿನ ರುಚಿ ತೋರಿಸುತ್ತಿದ್ದಾರೆ.**
"ನಿನ್ನ ದಾಸನು ನಾನು: ನೀನಿತ್ತ ಆ ಮದ್ದುರ್ ಬರ್ದಿಲರ ಮರ್ದೆ ದಿಟಂ !"

ಗಳಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಅಫೀಲಿಯಾಳಿಗೆ ಹುಚ್ಚುಹಿಡಿಯುವುದು ತಂದೆಯ ಮರಣಕ್ಕಾಗಿ. ಹ್ಯಾಮ್ಲೆಟನಿಗೆ ಅವಳಲ್ಲಿರುವ ಪ್ರೇಮ ತಂದೆಯ ಪ್ರೇತವನ್ನು ಕಂಡಮೇಲೆ ಕರಗಿಹೋಗುತ್ತದೆ. 'ರಕ್ತಾಕ್ಷಿ'ಯಲ್ಲಾದರೊ ರುದ್ರಾಂಬೆಗೂ ಬಸವಯ್ಯನಿಗೂ ಇರುವ ಪ್ರೇಮ ಅನಂತವಾದುದು. ಬಸವಯ್ಯನಿಗಾಗಿಯೇ ರುದ್ರಾಂಬೆ ಹುಚ್ಚಳಾಗುವಳು. ಅಫೀಲಿಯಾ ಕೇವಲ ಮೃದು ಸ್ವಭಾವದವಳು, ಅವಳಿಗೆ ವ್ಯಕ್ತಿತ್ವವೇ ಇಲ್ಲವೇನೊ ಎನ್ನಿಸುತ್ತದೆ. ರುದ್ರಾಂಬೆ ಜೀವಂತವಾದ ಪ್ರತೀಕಾರಶಕ್ತಿ. ರಕ್ತದಾಹದಿಂದ ವಿಜೃಂಭಿಸುವ ಮಹಾಕಾಳಿಯಂತೆ ಅವಳು ವ್ಯವಹರಿಸುತ್ತಾಳೆ. ನಾರಿ ಮುನಿದರೆ ಎಂತಹ ಹೆಮ್ಮಾರಿಯೆಂಬುದನ್ನು ನಾವು ಅವಳಲ್ಲಿ ಕಾಣುತ್ತೇವೆ. ಹೀಗೆ ಅವಳ ಪಾತ್ರ ಅಫೀಲಿಯಾ ಪಾತ್ರದಿಂದ ಭಿನ್ನವಾಗಿದ್ದರೂ, ಪ್ರಣಯದ ಪ್ರಸಂಗದಲ್ಲಿ ಮೂಲದ ಪ್ರಭಾವವಿದೆ.

ಕನ್ನಡದಲ್ಲಿ ಷೇಕ್ಸ್ಪಿಯರ್ ಕವಿಯ ನಾಟಕಗಳನ್ನು ವಿವೇಚಿಸುವಾಗ ಕುವೆಂಪು ರವರ 'ಬಿರುಗಾಳಿ' ಅತ್ಯಂತ ಗಮನಾರ್ಹ. ಇದು ಷೇಕ್ಸ್ಪಿಯರ್ ಕವಿಯ 'ದಿ ಟೆಂಪೆಸ್ಟ್' ನಾಟಕದ ಭಾಷಾಂತರ. ಆದರೂ ಎಂತಹ ಭಾಷಾಂತರ! ನಾಟಕದ ಆರಂಭದಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳನ್ನೇನೊ ಮಾಡಿಕೊಂಡಿದೆ; ಮೂಲದ ಮೊದಲ ದೃಶ್ಯದಲ್ಲಿರುವ ಸಮುದ್ರದಲ್ಲಿನ ಹಡಗು ಮುಳುಗಿ ಹೋಗುತ್ತಿರುವುದು, ಆಗ ಹಡಗಿನ ಯಜಮಾನ ಮತ್ತು ಅವನ ಸಂಗಡಿಗರು ದಿಕ್ಕುತೋಚದೆ ಅದನ್ನು ಉಳಿಸುವುದಕ್ಕಾಗಿ ಪೇಚಾಡು ತ್ತಿರುವುದು—ಈ ಭಾಗ ಭಾಷಾಂತರದಲ್ಲಿ ಇಲ್ಲ. ಅದಕ್ಕೆ ಬದಲಾಗಿ ಎರಡನೆಯ ಅಂಕದ ಎರಡನೆಯ ದೃಶ್ಯದಲ್ಲಿ ಬರುವ ಕೆಲವು ಭಾಗಗಳನ್ನು ಅಳವಡಿಸಿಕೊಂಡು ಮೊದಲ ದೃಶ್ಯವನ್ನು ಸೃಷ್ಟಿಸಲಾಗಿದೆ. ಎರಡನೆಯ ದೃಶ್ಯದಿಂದ ಮುಂದಕ್ಕೆ ನಾವು ಬಹುಮಟ್ಟಿಗೆ ಭಾಷಾಂತರವನ್ನೇ ಕಾಣುತ್ತೇವೆ. ಕುವೆಂಪುರವರು ಬರಿಯ ಭಾಷಾಂತರ ಕಾರರಲ್ಲ; ಅದ್ಭುತ ಕವಿತಾಶಕ್ತಿಯುಳ್ಳವರು. ಆದ್ದರಿಂದ ಷೇಕ್ಸ್ಪಿಯರನ ಕಾವ್ಯಗಂಗೆ ಇವರ ಪ್ರತಿಭೆಯಲ್ಲಿ ಕಾದು ಮೋಡವಾಗಿ ಚಿರನೂತನ ಸೃಷ್ಟಿಯ ಒಂದು ವೃಷ್ಟಿಯಾಗಿದೆ.

ಷೇಕ್ಸ್ಪಿಯರ್ ಮಹಾಕವಿಯ ಲಲಿತನಾಟಕಗಳಲ್ಲೆಲ್ಲಾ 'ದಿ ಟೆಂಪೆಸ್ಟ್' ಅತ್ಯಂತ ಶ್ರೇಷ್ಠವಾದ್ದು. ಅದರಲ್ಲಿ ಬರುವ ಕ್ಯಾಲಿಬಾನನ ಪಾತ್ರ ಒಂದು ಮಹತ್ತರವಾದ ಸೃಷ್ಟಿ (profound conception). ಜೀವಜಗತ್ತೆಲ್ಲ ಅದರಲ್ಲಿ ಪ್ರತಿಮಾವಿಧಾನದಿಂದ ಪ್ರದರ್ಶಿತವಾಗುತ್ತಿರುವಂತೆ ಧ್ವನಿತವಾಗುತ್ತದೆ. ಇದು ಕವಿ ಬರೆದ ಕಡೆಯ ನಾಟಕ ವೆಂದು ವಿದ್ವಾಂಸರ ಊಹೆ. ಇಲ್ಲಿ ಬರುವ ಸೂಚನೆ, ಧ್ವನಿ, ಕಾಕುಗಳು ಮನೋಹರ ವಾಗಿರುವಷ್ಟೆ ತತ್ವಗರ್ಭಿತವಾದುವು. ಇದನ್ನು ರಂಗಸ್ಥಳದಲ್ಲಿ ಪ್ರದರ್ಶಿಸುವುದು ಕಷ್ಟವೆಂದು ಹೇಳುತ್ತಾರೆ. ಮೇಲೆ ಹೇಳಿದ ವಿಮರ್ಶೆಯೆಲ್ಲ 'ಬಿರುಗಾಳಿ'ಗೂ ಅನ್ವಯಿಸು ವುದಾದರೂ ರಂಗಸ್ಥಳದಲ್ಲಿ ಯಶಸ್ವಿಯಾಗುವುದಿಲ್ಲವೆಂಬ ಮಾತು ಇದಕ್ಕೆ ಅನ್ವ ಯಿಸಬಾರದೇನೋ! ಮಹಾರಾಜಾ ಕಾಲೇಜಿನ ವಿದ್ಯಾರ್ಥಿ ಕಲಾವಿದರು 'ಬಿರುಗಾಳಿ' ಯನ್ನು ಅತ್ಯಂತ ಮನೋಹರವಾಗಿ ಪ್ರದರ್ಶಿಸಿ, ಪ್ರೇಕ್ಷಕರನ್ನೆಲ್ಲಾ ಆನಂದಗೊಳಿಸಿದು ದನ್ನು ನಮ್ಮಲ್ಲಿ ಅನೇಕರು ಕಣ್ಣಾರ ಕಂಡಿದ್ದೇವೆ.

ಕುವೆಂಪುರವರ ಭಾಷಾಂತರಾರೂಪದ ಐಂದ್ರಜಾಲಿಕಶಕ್ತಿಗೆ ಒಂದು ಸಣ್ಣ ಉದಾಹರಣೆ: ಮೂಲದಲ್ಲಿ ಏರಿಯಲ್ ಹಾಡುವ ಹಾಡು ಇದು:

Where the bee sucks, there suck I.
In a cowslip's bell I lie ;
There I couch when owls do cry.
On the bat's back I do fly
After summer merrily. . .
Merrily, merrily shall I live now,
Under the blossom that hangs on the bough. [1]

[1] V. i. 88-94.

ಕನ್ನಡದಲ್ಲಿ ಇದು ಮೈವೆತ್ತ ರೀತಿ ಹೀಗಿದೆ:

ದುಂಬಿಯು ಬಂಡನು ಹೀರುವ ಎಡೆಯೊಳು
ನಾ ಮಧುಪಾನವ ಮಾಡುವೆನು.
ತೇಲುವ ತಾವರೆ ಹೂವಿನ ಹೊಡೆಯೊಳು
ಪವಡಿಸೆ ಸಜ್ಜೆಯ ಹೂಡುವೆನು.
ನೇಸರು ಮುಳುಗಲು ಮಲಗುವೆನಲ್ಲಿ!
ಗೂಬೆಯು ಕೂಗಲು ಹುದುಗುವೆನಲ್ಲಿ!
ಕೆತ್ತಲು ಮುತ್ತಲು ಪವಡಿಪೆನಲ್ಲಿ;
ಕೌಮುದಿ ರಂಜಿಸೆ ನಲಿಯುವೆನಲ್ಲಿ!
ಮಳೆ ಬಿಲ್ಗರಿಗಳ ರೆಕ್ಕೆಯ ತಳೆದಿಹ
ಮೇಘ ವಿಮಾನವನೇರಿ,
ಗಾಳಿಯ ಬಟ್ಟೆಯೊಳಲೆಯುವೆ, ನಲಿಯುವೆ,
ಮುಕ್ತಿಯ ಸೊದೆಯನು ಹೀರಿ!

ಇದನ್ನು ಬರಿಯ ಭಾಷಾಂತರವೆಂದು ಕರೆಯಲಾದೀತೆ? ರಾಗರಸರಂಜಿತವಾದ ಸಂದರ್ಭಗಳಲ್ಲೆಲ್ಲಾ ಕವಿ ಕುವೆಂಪು – ಷೇಕ್ಸ್ಪಿಯರ್ ಕವಿಗಳ ಪ್ರತಿಭಾಪ್ರವಾಹಗಳ ಸಂಗಮವನ್ನು ನಾವು ಕಾಣುತ್ತೇವೆ. ಕಥೆ ಸಾಗುವೆಡೆಯಲ್ಲೆಲ್ಲಾ ಬಹುಮಟ್ಟಿಗೆ ಮೂಲದ ಭಾವಗಳನ್ನು ಕನ್ನಡಕ್ಕೆ ತಂದುಕೊಳ್ಳಲಾಗಿದೆ.

ಕನ್ನಡಿಗರಿಗೆ ಷೇಕ್ಸ್ಪಿಯರನಲ್ಲಿ ಅಪಾರವಾದ ಅಭಿಮಾನವಿದೆ. ಆತನ ನಾಟಕಗಳಲ್ಲಿ ಸಾಕಷ್ಟನ್ನು ನಾವು ಕನ್ನಡಕ್ಕೆ ತಂದುಕೊಂಡಿದ್ದೇವೆ. ಈಗ ಪ್ರಕಟಿತವಾಗಿರುವ ನಾಟಕಗಳಷ್ಟೇ ಅಲ್ಲದೆ ಅಪ್ರಕಟಿತವಾದ ನಾಟಕಗಳೂ ನಮ್ಮಲ್ಲಿ ಸಾಕಷ್ಟು ಇವೆ. ರಂಗಸ್ಥಳಕ್ಕಾಗಿ ಬರೆದ ನಾಟಕಗಳಿಗಿಂತಲೂ, ಓದಲೆಂದು ಬರೆದ ನಾಟಕಗಳು ಹೆಚ್ಚು ಪ್ರಮಾಣವಾಗಿವೆ. ಹಲವು ರಂಗಸ್ಥಳದಲ್ಲಿಯೂ ಜನಾದರಣೆಯನ್ನು ಪಡೆದಿವೆ.





# ಷೇಕ್ಸ್ಪಿಯರ್-ನಟ ಬಳ್ಳಾರಿ ರಾಘವಾಚಾರ್ಯರು

## ಎಂ. ಎಲ್. ಶ್ರೀನಿವಾಸಶಾಸ್ತ್ರಿ

"If Shakespeare wrote, you have acted"—ಜಗತ್ತಿನ ಯಾವ ನಟನಾದರೂ ಪ್ರಶಂಸೆಯ ತುತ್ತತುದಿಯೆಂದುಕೊಳ್ಳಬಹುದಾದಂತಹ ಮೆಚ್ಚಿಕೆಯ ಮಾತಿದು. ಇದು ಬಂದದ್ದು ಷೇಕ್ಸ್ಪಿಯರನಂತಹ ಅಪೂರ್ವ ಪ್ರತಿಭೆಯನ್ನೇ ಜರೆಯುವ ದಿಟ್ಟತನವಿದ್ದ ಕಟು ವಿಮರ್ಶಕ, ಇಂಗ್ಲಿಷ್ ನಾಟಕಕಾರ ಜಾರ್ಜ್ ಬರ್ನಾರ್ಡ್ ಷಾ ಅವರ ಬಾಯಿಂದ! ಇದಕ್ಕೆ ಪಾತ್ರರಾದ ವ್ಯಕ್ತಿ ಇಂಗ್ಲಿಷ್ ಮಾತೃಭಾಷೆಯಲ್ಲದ, ನಟನೆ ವೃತ್ತಿಯಲ್ಲದ ಕನ್ನಡನಾಡಿನ ಒಬ್ಬ ಅಮೆಚೂರ್ ನಟರು! ಅವರೆಂದರೆ ದಿ|| ಬಳ್ಳಾರಿ ರಾಘವಾಚಾರ್ಯರು.

ಸುಮಾರು ಒಂದೂವರೆ ಶತಮಾನಗಳ ಇಂಗ್ಲಿಷಿನ ಸಂಪರ್ಕದಲ್ಲಿ ಕನ್ನಡ ನಾಡು ಆ ಭಾಷಾಸಾಹಿತ್ಯಗಳ 'ಅತ್ಯಂತ ಸುಂದರ ಪುಷ್ಪ'ವೆನಿಸಿದ ಷೇಕ್ಸ್ಪಿಯರನನ್ನು ಹಲವಾರು ಬಗೆಯಲ್ಲಿ ತನ್ನದಾಗಿಸಿಕೊಂಡು ಗೌರವಿಸಿದೆ. ಅವನ ನಾಟಕಗಳನ್ನು ಶಾಲಾಕಾಲೇಜುಗಳಲ್ಲಿ ಕಲಿಸಿದೆ. ಅವನ್ನು ಭಾಷಾಂತರ, ರೂಪಾಂತರ, ಪುನರ್ರಚನೆಗಳ ಮೂಲಕ ಕನ್ನಡಕ್ಕೆ ತಂದುಕೊಂಡಿದೆ. ರಂಗದ ಮೇಲೆ ಆಡಿ ಆನಂದಿಸಿದೆ. ಕೆಲವರೇ ಆದರೂ ಅಗ್ರಪಂಕ್ತಿಯ ಷೇಕ್ಸ್ಪಿಯರ್–ನಟರಿಗೆ ಜನ್ಮವಿತ್ತಿದೆ. ಅವರಲ್ಲಿ ನೆನಪು ನಂದದೆ ಉಳಿದಿರುವವರೆಂದರೆ ಒಬ್ಬರು 'ರಾಮವರ್ಮ-ಲೀಲಾವತಿ' ಖ್ಯಾತಿಯ ಎ. ವಿ. ವರದಾಚಾರ್ಯರು; ಇನ್ನೊಬ್ಬರು ಬಳ್ಳಾರಿ ರಾಘವಾಚಾರ್ಯರು.

ರಾಘವರು — ಬಳ್ಳಾರಿ ರಾಘವಾಚಾರ್ಯರಿಗೆ ಅವರ ಪ್ರತಿಭಾಪ್ರೇಮಿಗಳು ಕೊಟ್ಟಿದ್ದ ಪ್ರೀತಿಯ ಹೆಸರು ಇದು — ಜನಿಸಿದ್ದು 1882ರಲ್ಲಿ; ಅನಂತಪುರ ಜಿಲ್ಲೆಯ ತಾಡಪತ್ರಿಯಲ್ಲಿ. ಹುಟ್ಟಿದ ಮನೆತನ ಕಲೆಯ ತವರು. ಆಂಧ್ರನಾಟಕ ಪಿತಾಮಹರೆನಿಸಿದ್ದ ಬಳ್ಳಾರಿ ಕೃಷ್ಣಮಾಚಾರ್ಲು ಅವರು ರಾಘವರ ಸೋದರಮಾವಂದಿರು. ಮನೆತನದ ಉಚ್ಚ ಸಂಪ್ರದಾಯವನ್ನನುಸರಿಸಿ ರಾಘವರು ಮದರಾಸು ವಿಶ್ವವಿದ್ಯಾಲಯದಲ್ಲಿ ಪ್ರೌಢ ಶಿಕ್ಷಣ ಪಡೆದು, ಬಿ. ಎ. ಬಿ. ಎಲ್. ಪದವಿಗಳನ್ನು ಸಂಪಾದಿಸಿ,

ಬಳ್ಳಾರಿಯಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಕಾಲಾಂತರದಲ್ಲಿ ಅಲ್ಲಿನ ಗಣ್ಯ ವಕೀಲರಲ್ಲೊಬ್ಬರೆಂದೂ ಹೆಸರು ಪಡೆದರು. ಆದರೆ ಅವರಿಗೆ ಇನ್ನೂ ಹೆಚ್ಚಿನ, ನಿಜವಾದ ಕೀರ್ತಿ ಕಾದಿದ್ದುದು ಬೇರೊಂದು ಕ್ಷೇತ್ರದಲ್ಲಿ.

ರಾಘವರಿಗೆ ನಾಟಕಕಲೆಯ ಮೇಲಿನ ಒಲವು ವಂಶಪಾರಂಪರ್ಯವಾಗಿ ಬಂದಿತ್ತು. ಜೊತೆಗೆ ಸೋದರಮಾವಂದಿರು ನಾಟಕ ಪಿತಾಮಹರೆಂದ ಮೇಲೆ ಕೇಳಬೇಕೆ, ಬಾಲ್ಯ, ಬೆಳವಣಿಗೆಗಳಿಗೆ ಸಿಕ್ಕ ಪರಿಸರವೂ ಕಲೆಯಿಂದಲೇ ತುಂಬಿತ್ತು. ಚಿಕ್ಕಂದಿನಲ್ಲಿಯೇ ಸಣ್ಣ ಪುಟ್ಟ ಪಾತ್ರಗಳನ್ನು ನಿರ್ವಹಿಸಲು ಆರಂಭಿಸಿದರು. ದೊಡ್ಡವರ ಮೆಚ್ಚಿಗೆ ಗಿಟ್ಟಿತು. ರಂಗಭೂಮಿಯ ರುಚಿ ತಟ್ಟಿತು. ಮುಂದೆ ವ್ಯಾಸಂಗಕಾಲದಲ್ಲಿ ಕಾಲೇಜಿನ ಸಂಘಸಂಸ್ಥೆಗಳಲ್ಲಿ ಅವರು ಏಕಪಾತ್ರಾಭಿನಯಗಳನ್ನು ಮಾಡಿ ಕೈಪಳಗಿಸಿಕೊಂಡರು. ಬರಬರುತ್ತಾ ಒಬ್ಬರೇ ಸಂಪೂರ್ಣ ನಾಟಕಗಳನ್ನು ಆಡಿ ತೋರಿಸಿದುದೂ ಉಂಟು. ವಕೀಲಿ ವೃತ್ತಿ ಹಿಡಿದು ಬಳ್ಳಾರಿಯಲ್ಲಿ ನೆಲಸಿದ ಮೇಲೆ ಅವರ ಪ್ರತಿಭೆಗೆ, ಅವರ ಮಹತ್ವಾಕಾಂಕ್ಷೆಗೆ ಆ ಊರು ಸ್ವಾಭಾವಿಕವಾಗಿ ಕಿರಿದೆನಿಸಿತು. ತಮಗೆ ಸರಿಗಟ್ಟುವ ದೊಡ್ಡ ನಗರ, ದೊಡ್ಡ ಸಂಸ್ಥೆಗಳನ್ನು ಆರಿಸಿಕೊಳ್ಳುವುದು ಅನಿವಾರ್ಯವಾಯಿತು. ಮದರಾಸಿನ 'ಸುಗುಣ ವಿಲಾಸ ಸಭಾ', ಬೆಂಗಳೂರಿನ 'ಅಮೆಚೂರ್ ಡ್ರ್ಯಮಾಟಿಕ್ ಅಸೋಸಿಯೇಷನ್'ಗಳು ಅವರ ಗಮನವನ್ನು ಸೆಳೆದವು. ಇವುಗಳಲ್ಲಿ ಅಮೆಚೂರ್ ಡ್ರ್ಯಮಾಟಿಕ್ ಅಸೋಸಿಯೇಷನ್ನೇ (ಅಂಕಿತ: 'ಎ ಡಿ ಎ') ಅವರನ್ನು ಹೆಚ್ಚು ಒಲಿಸಿ ಕೊಂಡಿತು. ಮುಂದೆ ಜೀವನಪೂರ್ತಿ 'ಎ ಡಿ ಎ' ರಾಘವರ ಕಾರ್ಯಕ್ಷೇತ್ರವಾಯಿತು. ಅಲ್ಲಿ ನಾಟಕಗಳನ್ನು ಆಡಿ, ಆಡಿಸಿ, ಅದರ ಏಳಿಗೆಗಾಗಿ ದುಡಿದರು. ಅವರು ಮದರಾಸು ಬಿಟ್ಟು ಬೆಂಗಳೂರಿಗೆ ಒಲಿದದ್ದು ಕನ್ನಡ ರಂಗಭೂಮಿಯ ಪುಣ್ಯ; ಕನ್ನಡಿಗರ ಪುಣ್ಯ.

'ಎ ಡಿ ಎ' ಬೆಂಗಳೂರಿನ ಸುಸಂಸ್ಕೃತ, ವಿದ್ಯಾವಂತ ಕಲಾಭಿಮಾನಿಗಳಿಂದಲೂ ಕಾಲೇಜು ವಿದ್ಯಾರ್ಥಿಗಳಿಂದಲೂ ಈ ಶತಮಾನದ ಎರಡನೆ ದಶಕದಲ್ಲಿ ಸ್ಥಾಪಿತವಾದ ಕಲಾವಿಲಾಸೀ ಸಂಸ್ಥೆ. ಅಲ್ಲಿಯವರೆಗೆ ಬೆಂಗಳೂರಿನಲ್ಲಿ ಗಣ್ಯತೆ ಪಡೆದಿದ್ದ ನಾಟಕ ವ್ಯವಸಾಯೀ ಸಂಸ್ಥೆಗಳಿದ್ದವೇ ಹೊರತು ಕಲಾವಿಲಾಸೀ ಸಂಘಗಳು ಯಾವುವೂ ಇರಲಿಲ್ಲ. ನಾಟಕಗಳನ್ನು ನೋಡುವುದೇ ಅಗೌರವ, ಅಸಭ್ಯಕರವೆಂಬ ಭಾವನೆ ಸಮಾಜದಲ್ಲಿ ಪ್ರಚಂಡ ತಾಂಡವವಾಡುತ್ತಿದ್ದ ಅಪ್ರಬುದ್ಧ ಕಾಲ ಅದು. ಅಂದ ಮೇಲೆ ನಾಟಕಗಳ ಅಭಿನಯ, ಪ್ರಯೋಗ, ಪ್ರದರ್ಶನಗಳಿಗೆ ಇನ್ನು ಯಾವ ಬೆಲೆಯಿತ್ತೆಂದು ಊಹಿಸಬಹುದು. ಆದರೆ ಅದೃಷ್ಟವಶಾತ್ ಇಂಗ್ಲಿಷ್ ನಾಟಕಗಳಿಗೆ ಈ ಬಗೆಯ ಮೈಲಿಗೆ, ಸೋಂಕು ಅಂಟಿರಲಿಲ್ಲ. 'ಎ ಡಿ ಎ' ರಾಘವರ ನೇತೃತ್ವದಲ್ಲಿ ಸಮಾಜದ ಭಾವನೆಯನ್ನು ಕೆರಳಿಸದಂತೆ ಇಂಗ್ಲಿಷ್ ನಾಟಕಗಳ ಪ್ರದರ್ಶನಗಳಿಂದಲೇ ತನ್ನ ಕೆಲಸ ಆರಂಭಿಸಿ, ಕ್ರಮೇಣ ನೆಲ ಹದಗೊಂಡಂತೆಲ್ಲ ಕನ್ನಡ, ತೆಲುಗು, ಹಿಂದಿ ನಾಟಕಗಳ ಪ್ರಯೋಗಕ್ಕೂ ಕೈ ಹಾಕಿ ನಾಟಕಕಲೆಯ ಬಗ್ಗೆ ಜನರಿಗಿದ್ದ ಜರಿಕೆಯನ್ನು ತೊಲಗಿಸಿ, ಸಾರ್ವಜನಿಕ ಅಭಿಪ್ರಾಯವನ್ನು ಬದಲಿಸಿತು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಒಂದೇ ಸಮನೆ ನಾಟಕಗಳನ್ನು ಪ್ರಯೋಗಿಸಿ ಪ್ರಸಿದ್ಧಿ ಪಡೆಯಿತು. ಹೊಸ ಹೊಸ ನಾಟಕಗಳನ್ನು ಬರೆಸಿ ಆಡಿಸಿತು. ಇದರಿಂದಾಗಿ ಕನ್ನಡದ ಕೇಂದ್ರವಾದ

ಬೆಂಗಳೂರಿನಲ್ಲಿ ನಾಟಕ ಕಲಾಭಿರುಚಿ ಭದ್ರವಾಗಿ ನೆಲೆಯೂರಲು ಅವಕಾಶವಾಯಿತು. ಸಂಸ್ಥೆ ಬೆಳೆಯಿತು. ಬೆಳೆದಂತೆಲ್ಲ ಮಾನ್ಯರ ಮನ್ನಣೆ ಪಡೆಯಿತು. ರಾಜಮಹಾರಾಜರು ಸಹ ಅದರ ಪೋಷಕವರ್ಗಕ್ಕೆ ಸೇರುವುದು ತಮಗೆ ಮರ್ಯಾದೆಯ ಸಂಗತಿಯೆಂದುಕೊಳ್ಳುವ ಕಾಲ ಬಂದಿತು. ಸಂಘದ ಆಶ್ರಯದಲ್ಲಿ ನಾಟ್ಯಮಹೋತ್ಸವಗಳಾದುವು, ಕಲಾಪ್ರದರ್ಶನಗಳಾದುವು. ರವೀಂದ್ರನಾಥ ಠಾಕೂರ್, ಸರೋಜಿನಿ ನಾಯ್ಡುರವರಂತಹ ರಾಷ್ಟ್ರಮಣಿಗಳು ಬಂದು ಈ ಉತ್ಸವಗಳಲ್ಲಿ ಭಾಗವಹಿಸಿದರು. ಸಂಘ ದೇಶದ ಬೇರೆ ಬೇರೆ ಕಡೆಗಳಲ್ಲಲ್ಲದೆ ರಂಗೂನಿನಂತಹ ಹೊರ ದೇಶಗಳಲ್ಲೂ ಪ್ರವಾಸ ಮಾಡಿ ಇಂಗ್ಲಿಷಿನಲ್ಲಿ ನಾಟಕಗಳನ್ನು ಪ್ರದರ್ಶಿಸಿ, ಜಯಭೇರಿ ಹೊಡೆದು ಬಂದಿತು. ಈ ಪ್ರದರ್ಶನಗಳಲ್ಲಿ ಷೇಕ್ಸ್ಪಿಯರನ ನಾಟಕಗಳಿದ್ದವು. ಇತರ ಭಾಷೆಗಳಿಂದ ಮಾಡಿದ ಅನುವಾದಗಳಿದ್ದವು. ಈ ಎಲ್ಲ ಸಾಧನೆ, ಯಶಸ್ಸುಗಳು 'ಎ ಡಿ ಎ' ಗೆ ಸಾಧ್ಯವಾದದ್ದು ಅದರ ಸಾರಥ್ಯ ವಹಿಸಿದ್ದ ರಾಘವರಂತಹ ಪ್ರತಿಭಾಶಾಲಿ ನಟರ ದುಡಿಮೆಯಿಂದಾಗಿ, ಧೈರ್ಯಸಾಹಸಗಳಿಂದಾಗಿ.

ರಾಘವರು ಅದ್ಭುತ ನಟರಾಗಿದ್ದರು. ನಟನಚಾತುರ್ಯದ ಜೊತೆಗೆ ಅದರ ಪೂರ್ಣ ಸಾಧನೆಗೆ ಅನುವಾಗುವ ಅನೇಕ ಸ್ವಾಭಾವಿಕ ವರಗಳು ಅವರಿಗೆ ಪ್ರಕೃತಿದತ್ತವಾಗಿ ಬಂದಿದ್ದವು. ರಾಘವರದು ಎತ್ತರವಾದ ದೇಹ, ಪುಷ್ಟವಾದ ಮೈಕಟ್ಟು. ಗ್ರೀಕ್ ವಿಗ್ರಹಗಳನ್ನು ನೆನಪಿಗೆ ತರುವ, ಯಾವ ಪಾತ್ರಕ್ಕೆಂದರೆ ಅದಕ್ಕೆ ಮಾಡಿಟ್ಟಂತೆ ಒಪ್ಪುವ, ಯಾವ ಭಾವವನ್ನಾದರೂ ಹೊರಗೆಡಹುವ ಮಾಟವಾದ ಮುಖ. ನೀಳವಾದ ಮೂಗು. ಅಗಲವಾದ ಹಣೆ. ವಿಶಾಲವಾದ ಬಟ್ಟಲುಗಣ್ಣುಗಳು, ನೇರವಾದ ನೋಟ. ಕಣ್ಣಿಗೂ ನೋಟಕ್ಕೂ ಕಳೆ ಕೊಟ್ಟಿದ್ದ ಭ್ರೂಚಾಪ. ಠೀವಿಯ ನಡೆ. ಇನ್ನು ನುಡಿಯೊ: ಅದರ ಸೊಗಸೇ ಸೊಗಸು. ಏರು-ತಗ್ಗು, ಗಡಸು-ಮೆದುಗಳ ಸೀಮೆಯಲ್ಲಿ ಲೀಲಾಜಾಲವಾಗಿ ಹರಿದಾಡುತ್ತಾ, ಭಾವಕ್ಕೆ ತಕ್ಕಂತೆ ಬದಲಾಗುವ ಅಪಾರ ವಿನ್ಯಾಸಸಾಮರ್ಥ್ಯ ಪಡೆದಿದ್ದ ಕಂಚಿನ ಕಂಠ ಅವರದ್ದು. ಧ್ವನಿವರ್ಧಕಗಳಿನ್ನೂ ಇರದಿದ್ದ ಆ ಕಾಲದಲ್ಲಿ ಅವರ ಮೆಲ್ಲನೆಯ ಪಿಸುಮಾತು ಸಹ ಸಭಾಂಗಣದ ಯಾವ ಮೂಲೆಗಾದರೂ ಕೇಳಿಸುತ್ತಿತ್ತು. ಅಂಥ ಧ್ವನಿಶಕ್ತಿ ಅವರ ಕಂಠದ್ದು. ತೊರೆಯ ಮೊರೆಯೆ, ಗುಡುಗಿನ ಘರ್ಜನೆಯೆ—ಯಾವುದಕ್ಕೂ ಅದು ಸೈ.

ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ—ಯಾವ ರಸವನ್ನಾಗಲೀ ಸಮರ್ಥವಾಗಿ ಪೋಷಿಸಬಲ್ಲ ಶಕ್ತಿಯಿತ್ತು ರಾಘವರಿಗೆ. ಭಾವವ್ಯತ್ಯಯಕ್ಕೆ ತಕ್ಕಂತೆ ಮುಖಭಂಗಿಯನ್ನು ಬದಲಿಸುವುದರಲ್ಲಿ ಅವರು ಗಟ್ಟಿಗರಾಗಿದ್ದರು. ಬಟ್ಟೆ, ಬಣ್ಣಗಳಿಗೆ ಅವರು ಸಾಕಷ್ಟು ಗಮನಕೊಡುತ್ತಿದ್ದರಾದರೂ ಮೊದಲನೆಯ ಸ್ಥಾನ ಅಭಿನಯಕ್ಕೇ. ಅದೇ ನಾಟಕ, ಅದೇ ಪಾತ್ರ—ಆದರೆ ಒಮ್ಮೆ ನಟಿಸಿದಂತೆ ಇನ್ನೊಮ್ಮೆ ನಟಿಸಿ, ಹಳಸಿನ, ಪಡಿಯಚ್ಚಿನ ಭಾವನೆ ತರಿಸುತ್ತಿರಲಿಲ್ಲ. ನಟನೆಯ ವೈಖರಿ ದಿನವೂ ಬೇರೆಯೆ, ದಿನವೂ ಹೊಸದೆ.

ಷೇಕ್ಸ್ಪಿಯರನ ನಾಟಕಗಳಲ್ಲಿ 'ಹ್ಯಾಮ್ಲೆಟ್', 'ಅಥೆಲ್ಲೊ', 'ಕಿಂಗ್ ಲಿಯರ್' ಮತ್ತು 'ದಿ ಮರ್ಚೆಂಟ್ ಅಫ್ ವೆನಿಸ್'ಗಳು ಅವರಿಗೆ ಅಚ್ಚುಮೆಚ್ಚು. ಇವುಗಳ

ಮುಖ್ಯಪಾತ್ರಗಳನ್ನು ಅವರು ಚೆನ್ನಾಗಿ ಪಳಗಿಸಿಕೊಂಡಿದ್ದರು. ಅವರ ನಟನಕೌಶಲಕ್ಕೆ ನಿದರ್ಶನವಾಗಿ ಈ ಒಂದೊಂದು ನಾಟಕದಿಂದಲೂ ಒಂದೊಂದು ಸನ್ನಿವೇಶವನ್ನು ಉದಾಹರಿಸಬಹುದು. ಇವೆಲ್ಲವೂ ಮೂಲದಲ್ಲಿ ಮಿಂಚಿನ ಸನ್ನಿವೇಶಗಳೇ. ರಾಘವರು ಅವನ್ನು ಅಷ್ಟೇ ಉಜ್ಜ್ವಲ ರೀತಿಯಲ್ಲಿ ಅಭಿನಯಿಸಿ, ಪ್ರೇಕ್ಷಕರಲ್ಲಿ ರೋಮಾಂಚ ವನ್ನುಂಟು ಮಾಡುತ್ತಿದ್ದರು.

'ಹ್ಯಾಮ್ಲೆಟ್' ನಾಟಕದಲ್ಲಿ ಹ್ಯಾಮ್ಲೆಟನ ಸತ್ತ ತಂದೆ ಪ್ರೇತವಾಗಿ ಬಂದು ಮಗನ ಮುಂದೆ ಕಾಣಿಸಿಕೊಂಡಿದ್ದಾನೆ. ಪ್ರೇತಕ್ಕೆ ಹ್ಯಾಮ್ಲೆಟನೊಬ್ಬನಿಗೇ ಏನನ್ನೋ ಗುಟ್ಟಾಗಿ ಹೇಳುವುದಿದೆ. ಅದು ಅವನನ್ನು ಕೈಮಾಡಿ ಕರೆಯುತ್ತಿದೆ. ಹೊರೇಷಿಯೊ ಮತ್ತು ಮಾರ್ಸೆಲಸರು ಹೆದರಿ, ಹ್ಯಾಮ್ಲೆಟನನ್ನು ಹೋಗಗೊಡದೆ ಇಬ್ಬದಿಗಳಲ್ಲಿ ನಿಂತು ಅವನನ್ನು ಹಿಂದೆಳೆಯುತ್ತಿದ್ದಾರೆ. ಎಂತಹ ಗಂಡೆದೆಯನ್ನಾದರೂ ಝಲ್ಲೆನಿಸುವ ಈ ಸನ್ನಿವೇಶದಲ್ಲಿ ಹ್ಯಾಮ್ಲೆಟ್ ಪಾತ್ರದ ರಾಘವರು ರೆಪ್ಪೆ ಮುಚ್ಚದೆ ಪ್ರೇತದ ಕಡೆಯೇ ನೋಡುತ್ತಿದ್ದು, ಅದರ ಕರೆ ತೀವ್ರವಾದಷ್ಟೂ ತಾವೂ ಉದ್ವೇಗಗೊಂಡು, ಜತೆಯವರ ಹಿಡಿತದಿಂದ ಬಿಡಿಸಿಕೊಳ್ಳಲು "unhand me, gentlemen[1]" ಎಂದು ಎರಡೂ ಬಾಹು ಗಳನ್ನು ಎತ್ತಿ ಕೊಡವಿ ಪ್ರೇತದ ಕಡೆ ನುಗ್ಗಿ ಹೋಗುತ್ತಿದ್ದರು. ಅಲ್ಲಿಯವರೆಗೆ ಮಧ್ಯಮ ಸ್ಥಾನದಲ್ಲಿಯೇ ಇದ್ದ ಅವರ ಧ್ವನಿ "unhand me, gentlemen" ಎನ್ನು ವಾಗ ಥಟ್ಟನೆ ಏರಿ, ಕಂಚಿನ ನಾದವಾಗಿ ಹರಿದು, ಪ್ರೇಕ್ಷಕರಲ್ಲಿ ತಾವೂ ಕುಳಿತ ಸ್ಥಳದಿಂದ ಎಗರಿ ಪ್ರೇತದ ಹಿಂದೆ ಹೊರಟೆವೋ ಎಂಬ ಭ್ರಮೆ ಮೂಡಿಸುತ್ತಿತ್ತು.

ಮತ್ತೆ ಮುಂದೆ, ಆಟದವರ ಗುಂಪು ಬಂದು ತಮ್ಮ ಕಲೆಯ ಮಾದರಿಯಾಗಿ ಅವರಲ್ಲೊಬ್ಬ ಗ್ರೀಕರ ಪಿರ್ರಸನು ಟ್ರಾಯ್‌ನ ದೊರೆ ಪ್ರಿಯಾಮನನ್ನು ಕೊಲ್ಲುವ ಸನ್ನಿವೇಶಕ್ಕೆ ಸಂಬಂಧಿಸಿದ ಒಂದು ಸಂಭಾಷಣೆಯನ್ನು ಏಕಪಾತ್ರಾಭಿನಯ ಮಾಡಿ ತೋರಿಸಿ ಹೋದ ಮೇಲೆ, ಹ್ಯಾಮ್ಲೆಟ್ ಅವನ ನಟನೆಗೆ ತನ್ನ ಚರ್ಯೆಯನ್ನು ಹೋಲಿಸಿ ಕೊಳ್ಳುತ್ತ

> O, what a rogue and peasant slave am I ! [2]

ಎಂದು ಸ್ವಗತಕ್ಕೆ ಆರಂಭಿಸಿ

> Yet I,
> A dull and muddy-mettl'd rascal, peak,
> Like John-a-dreams, unpregnant of my cause [3],

ಎಂದು ತನ್ನನ್ನೇ ಹಳಿದುಕೊಂಡು ಮುಂದರಿದು

> The play's the thing
> Wherein I'll catch the conscience of the King. [4]

ಎಂಬ ಎರಡು ಸಾಲನ್ನು ಮಾತ್ರ ಗಟ್ಟಿಯಾಗಿ ಪಿಸುಗುಟ್ಟುತ್ತಿದ್ದುದು (loud whisper) ರಾಘವರ ನಟನಕೌಶಲಕ್ಕೆ ಇನ್ನೊಂದು ನಿದರ್ಶನ. ಇದು ಮನಸ್ಸಿನ ವಿವಿಧ ಭಾವ ಗಳನ್ನು ಪ್ರತಿಬಿಂಬಿಸುವ ಅರವತ್ತು ಸಾಲುಗಳಷ್ಟು ದೀರ್ಘವಾದ ಸ್ವಗತ ಭಾಷಣ. ಇದನ್ನಾಗಲೀ ಷೇಕ್ಸ್ಪಿಯರನ ಇತರ ಸ್ವಗತಗಳನ್ನಾಗಲೀ ನಟಿಸಿ ತೋರಿಸುವಾಗ

[1] I. iv. 84. [2] II. ii. 543. [3] ibid., 560-2. [4] ibid., 600-1.

ರಾಘವರು ಅಂತಹ ಸಂದರ್ಭಗಳಲ್ಲಿ ಸಾಧಾರಣವಾಗಿ ಬಂದೇ ತೀರುವ ಏಕನಾದಕ್ಕೆ (monotony) ಅವಕಾಶ ಕೊಡದೆ, ಆ ಸ್ವಗತಗಳ ದೀರ್ಘತೆಯ ಹೊರೆ ಪ್ರೇಕ್ಷಕರ ಗೋಚರಕ್ಕೆ ಬರದಂತೆ ನಿರ್ವಹಿಸುತ್ತಿದ್ದರು. ಅತ್ಯಂತ ಶ್ರೇಷ್ಠ ನಟರಿಗೆ ಮಾತ್ರ ಸಾಧ್ಯವಾದ ಈ ಚಮತ್ಕಾರಿಕವಾದ ಸಾಮರ್ಥ್ಯ ರಾಘವರಿಗೆ ಸಿದ್ಧಿಸಿತ್ತು.

'ಅಥೆಲ್ಲೊ' ನಾಟಕದಲ್ಲಿ ಅಥೆಲ್ಲೊ ಡೆಸ್ಡಿಮೋನಳನ್ನು ಕೊಲ್ಲುವ ಶಿಖರದೃಶ್ಯ. "Have you pray'd tonight, Desdemona?[1]" ಎಂದು ಆರಂಭಿಸಿ, ತಾನು ಮಾಡುತ್ತಿರುವುದೊಂದು ಅಸಹ್ಯ, ಪಾಪಕರ ಕೃತ್ಯವೆಂಬುದನ್ನು ಅರಿತು, ಅದನ್ನು ಬೇಗ ಮಾಡಿ ಮುಗಿಸುವ ಎಂಬ ಆತುರವನ್ನು ಮುಖಭಂಗಿಯಿಂದ, ಮಾತಿನ ಆವೇಗ ಉದ್ವೇಗಗಳಿಂದ ತೋರ್ಪಡಿಸಿ ಅವಳನ್ನು ಮೇಲುಹೊದಿಕೆಯಲ್ಲಿ ಸುತ್ತಿ ಕತ್ತು ಹಿಸುಕಿ ಕೊಲ್ಲುವುದು; ಮುಂದೆ ಕೊಲೆಯ ನಂತರ, ಕೊನೆಯಲ್ಲಿ ರಾಜ್ಯದ ಅಧಿಕಾರಿಗಳು ಅವನನ್ನು ಕೈದು ಮಾಡಲು ಬಂದಾಗ ಅವರಿಗೆ ಸೆರೆಯಾಗಬಾರದೆಂದು ಸಂಕಲ್ಪಿಸಿ, ಕುದುರೆಯಂತೆ ಮೈ ಝಾಡಿಸಿ ಎದ್ದು, ಯಾವುದೋ ಹಳೆಯ ಘಟನೆಯೊಂದನ್ನು ನೆನಪುಮಾಡಿಕೊಡುವವನಂತೆ

... that in Aleppo once,
. . . .
I took by the throat the circumcised dog
And smote him, thus.[2]

ಎಂದು ಕಠಾರಿಯಿಂದ ಎದೆ ತಿವಿದುಕೊಳ್ಳುತ್ತಿದ್ದುದು—ರೋಮಾಂಚಕಾರಿ ದೃಶ್ಯಗಳು. ತಲ್ಲೀನರಾದ ಪ್ರೇಕ್ಷಕರಿಗೆ ಘಟನೆಗಳು ಮಿಂಚಿದ ಮೇಲೆಯೇ ಎಚ್ಚರ!

ಹೀಗೆಯೇ 'ದಿ ಮರ್ಚೆಂಟ್ ಆಫ್ ವೆನಿಸ್' ನಾಟಕದ ವಿಚಾರಣೆಯ ದೃಶ್ಯ ಸಹ. ಷೈಲಾಕ್ ಆ್ಯಂಟೋನಿಯೊನ ಎದೆಯ ಭಾಗದಿಂದ ಒಂದು ಪೌಂಡು ಮಾಂಸ ಕೊಯ್ದುಕೊಳ್ಳಲೆಂದು ಕತ್ತಿ ಮಸೆಯುತ್ತ, ಸೇಡು ತೀರಿಸಿಕೊಳ್ಳುವ ಅವಕಾಶ ದೊರೆತುದಕ್ಕೆ ಉಬ್ಬಿ ಮುನ್ನುಗ್ಗಿದಾಗ, ಪೋರ್ಷಿಯಾ ತಡೆದು:

... take thou thy pound of flesh ;
But in the cutting it, if thou dost shed
One drop of Christian blood ...[3]

ಎಂದು ಕರಾರನ್ನು ಒಡ್ಡಲು, ಒಮ್ಮೆಲೇ ಸಿಡಿಲು ಬಡಿದವನಂತಾಗಿ, ಉಬ್ಬಿಳಿದು, ಉತ್ಸಾಹ ಉಡುಗಿ, ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿ ಗೊಣಗುತ್ತ ಹೊರಗೆ ಹೋಗುವಾಗ ರಾಘವರು ತೋರುತ್ತಿದ್ದ ಆ ಮುಖಭಾವ—ಅಂತರಿಕ್ಷದಲ್ಲಿ ಹಾರಾಡುತ್ತಿದ್ದ ಹಕ್ಕಿ ಗರಿ ಮುರಿದು ಧೊಪ್ಪನೆ ಭೂಮಿಗೆ ಕುಸಿದ ಕಲ್ಪನೆಯನ್ನುಂಟುಮಾಡುತ್ತಿದ್ದ ಆ ಭಾವ—ಅನ್ಯಾದೃಶ. ಷೈಲಾಕನ ಕೀಳುತನವನ್ನು ಮರೆಸಿ "ಅಯ್ಯೋ, ಎಂಥ ಅಪಚಾರವಾಯಿತು ಅವನಿಗೆ!" ಎಂದು ಯಾರಲ್ಲಾದರೂ ಉದ್ಗಾರವೆಬ್ಬಿಸುತ್ತಿತ್ತು ಅದು. ಅಷ್ಟು ಪರಿಣಾಮಕಾರಿ ರಾಘವರ ಷೈಲಾಕ್!

ಇನ್ನು 'ಲಿಯರ್'. ಮೊದಲಿಂದ ಕೊನೆಯವರೆಗೆ ಅದು ರುದ್ರ, ಘೋರ ರುದ್ರ.

---
[1] V. ii. 25. [2] ibid., 355, 358-9. [3] IV. i. 303-5.

ರಾಘವರು ಜೀವಂತ ಲಿಯರನನ್ನೇ ನಮ್ಮ ಕಣ್ಣ ಮುಂದೆ ಕಡೆದು ನಿಲ್ಲಿಸುತ್ತಿದ್ದರು. ಅದರಲ್ಲೂ ಬಿರುಗಾಳಿಯ ದೃಶ್ಯದಲ್ಲಿ ಗಾಳಿಗೆ ನಡುಗುತ್ತ, ಮಳೆಯಲ್ಲಿ ತೊಯ್ಯುತ್ತ ತನ್ನ ಕಣ್ಣೀರೂ ಮಳೆಗರೆದಂತೆಯೇ ಸುರಿಯುತ್ತಿದೆಯೆಂದು ತೋರುತ್ತಿದ್ದ ದೃಶ್ಯ, ಕಾರ್ಡೀಲಿಯಾಳ ಮೃತದೇಹವನ್ನು ಎರಡೂ ಕೈಗಳಿಂದಲೂ ಎತ್ತಿ ತರುವಾಗಿನ ದೃಶ್ಯ ಪ್ರೇಕ್ಷಕರಿಗೆ ಚಿರಸ್ಮರಣೀಯ ಅನುಭವ.

ರಾಘವರು ಆಂಧ್ರ ಮನೆತನದವರಾದರೂ ಕನ್ನಡ ನೆಲಕ್ಕೆ ಒಲಿದರು, ಕನ್ನಡ ಜನಕ್ಕೆ ಒಲಿದರು. ಹೆಚ್ಚಾಗಿ ಬೆಂಗಳೂರಿನ 'ಎ ಡಿ ಎ' ಆಶ್ರಯದಲ್ಲಿ ಪ್ರದರ್ಶಿತವಾಗುತ್ತಿದ್ದ ಕನ್ನಡ, ತೆಲುಗು, ಇಂಗ್ಲಿಷ್ ನಾಟಕಗಳಲ್ಲೇ ಕಾಣಿಸಿಕೊಳ್ಳುತ್ತಿದ್ದುದರಿಂದ ಕನ್ನಡ ನಾಡಿನ ನೆಚ್ಚಿನ ನಟರಾದರು. ಕನ್ನಡ ರಂಗಭೂಮಿಯನ್ನು ತಮ್ಮದಾಗಿಸಿಕೊಂಡು ಆ ಮೂಲಕ ತಮ್ಮ ಪ್ರತಿಭೆಯನ್ನು ಬೆಳಗಿದರು. ಆದರೂ ಅವರ ಷೇಕ್ಸ್ಪಿಯರ್ ನಾಟಕಾಭಿನಯದ ರುಚಿ ಕನ್ನಡಿಗರಿಗಷ್ಟೇ ಮೀಸಲಾಗಿರಲಿಲ್ಲ. ರಾಘವರು ನಾಡಿನ ಹೊರಗೆ ಭಾರತದ ಇತರ ಪ್ರದೇಶಗಳಲ್ಲಿ ಹಾಗೂ ಬರ್ಮಾ, ಸಿಲೋನ್, ಯೂರೋಪ್ ದೇಶಗಳಲ್ಲಿ ಪ್ರವಾಸ ಕೈಗೊಂಡು ಅಲ್ಲಿಯ ರಸಿಕರಿಗೂ ತಮ್ಮ ಕಲೆಯ ದರ್ಶನ ಮಾಡಿಸಿದರು. 1937ರಲ್ಲಿ ಅವರು ಲಂಡನಿನಲ್ಲಿ ತೋರಿಸಿದ ಷೇಕ್ಸ್ಪಿಯರ್ ನಾಟಕಾಭಿನಯವನ್ನು ನೋಡಿಯೇ ಬರ್ನಾರ್ಡ್ ಷಾ ಮೇಲೆ ಹೇಳಿದ ಪ್ರಶಂಸೆ ಕೊಟ್ಟದ್ದು. ಆ ಪ್ರದರ್ಶನದಲ್ಲಿ ಸರ್ ಜಾನ್ ಫೋರ್ಬ್ಸ್ ರಾಬರ್ಟ್‌ಸನ್, ಮಿಸೆಸ್ ವಿಲೋಲಿ ಮುಂತಾದ ಪ್ರತಿಭಾನ್ವಿತ ಕಲಾವಿದರೂ ಇದ್ದರು. ಅವರು ಕಾಲಾಧೀನರಾಗಿ (1946) ಸುಮಾರು ಇಪ್ಪತ್ತು ವರ್ಷಗಳಾದರೂ ಬದುಕಿದ್ದಾಗ ಅವರ ಅಭಿನಯವನ್ನು ಕಂಡಿದ್ದವರ ಹೃದಯಪಟಲದಲ್ಲಿ ಇಂದಿಗೂ ಹಸಿರಾಗಿ ನಿಂತಿದೆ, ರಾಘವರ ಷೇಕ್ಸ್ಪಿಯರ್ ನಾಟಕಪಾತ್ರಾಭಿನಯದ ಹಿರಿಮೆ.





# ಸಾನೆಟ್ ಮತ್ತು ಇತರ ಕವನಗಳು

# ಹಾಗೂ ಗೀತಗಳು

['ಪಡುವ ಕಡಲ ಹೊನ್ನ ಹೆಣ್ಣ'ನ ತೊಡಿಗೆಯನ್ನು 'ನಮ್ಮ ಹೆಣ್ಣು ಕನ್ನಡ ನುಡಿ'ಗೆ ಇಟ್ಟು ಹಾಡ ಬಯಸಿದ ಕಾವ್ಯರಸಿಕರಲ್ಲಿ 'ಶ್ರೀ' ಅವರಿಗೆ ಅಗ್ರಸ್ಥಾನ ಸಲ್ಲುತ್ತದೆ. ಅವರಿಗೂ ಹಿಂದೆ ಕನ್ನಡ ಕಾವ್ಯಕ್ಷೇತ್ರದಲ್ಲಿ ಈ ಬಗೆಯ ಅನುವಾದಕಾರ್ಯವನ್ನು ಒಬ್ಬಿಬ್ಬರು ಮಾಡಿದ್ದರೂ ಅದು ವಿಧಿವತ್ತಾಗಿ ನಡೆದದ್ದು, ಅದರಿಂದ ಹೊಸ ಯುಗದ ಹೆಬ್ಬಾಗಿಲು ತೆರೆದದ್ದು 'ಶ್ರೀ' ಅವರಿಂದಲೇ. ಅವರ 'ಇಂಗ್ಲಿಷ್ ಗೀತಗಳು' ಆಧುನಿಕ ಕನ್ನಡ ಸಾಹಿತ್ಯದ ಒಂದು ಮೈಲಿಗಲ್ಲು. ಷೇಕ್ಸ್‌ಪಿಯರನ ಪರಮಪ್ರೇಮಿಯಾಗಿದ್ದ 'ಶ್ರೀ' ಅವರು ಅದರಲ್ಲಿ ಅವನ ಎರಡು ತುಣುಕುಗಳನ್ನು ಅನುವಾದಿಸಿಕೊಟ್ಟಿದ್ದಾರೆ. ಒಂದು ಕವನ; ಇನ್ನೊಂದು ಗೀತ. ಕವನ ಕೆಳಗಿದೆ; ಗೀತವನ್ನು ಮುಂದೆ ಉಳಿದ ಗೀತಗಳ ಜೊತೆಯಲ್ಲಿ ಕೊಡಲಾಗಿದೆ. ಕವನ 'ದಿ ಪ್ಯಾಷನೇಟ್ ಪಿಲ್‌ಗ್ರಿಮ್' ಸಂಗ್ರಹದಲ್ಲಿ ಬರುವ 'Crabbed age and youth' ಎಂಬ ಸುಪ್ರಸಿದ್ಧ ಕವನದ ಭಾಷಾಂತರ. ಆ ಸಂಗ್ರಹದ ಮೊದಲ ಸಂಸ್ಕರಣದಲ್ಲಿ ಅದರ ಕರ್ತೃ ಷೇಕ್ಸ್‌ಪಿಯರ್ ಎಂದು ಮುದ್ರಿಸಲಾಗಿದ್ದರೂ ಅದರ ಎಲ್ಲ ಕವನಗಳೂ ಷೇಕ್ಸ್‌ಪಿಯರನವಲ್ಲವೆಂದು ಪಂಡಿತರ ಮತ.]

## ಮುಪ್ಪು ಯೌವನ

ನರೆಮುಪ್ಪು ಯೌವನಕೆ
ಒಲ್ಲದೊಡನಾಟ ;
ಯೌವನವು ಸುಮ್ಮಾನ,
ಮುಪ್ಪು ಮಿಡುಕಾಟ.
ಯೌವನವು ಸಿರಿ ಸುಗ್ಗಿ
ಮುಪ್ಪು ಬರಿ ಮಾಗಿ;
ಯೌವನವು ಶೃಂಗಾರಿ,
ಮುಪ್ಪು ತಲೆದೂಗಿ.
ಯೌವನಕೆ ಚೆಲ್ಲಾಟ,
ಮುಪ್ಪಿಗುಸಿರೆಳೆದಾಟ,

ಹುಲ್ಲಿನೆಗೆ ಯೌವನವು, ಹೆಳವು ಮುಪ್ಪು;
ಯೌವನದ ರಕ್ತ ಬಿಸಿ,
ಮುಪ್ಪೆಲ್ಲ ಕುಗ್ಗು ಕುಸಿ,
ಎದೆಗೆಚ್ಚು ಯೌವನವು, ಪೆಚ್ಚು ಮುಪ್ಪು.
ಎಲೆ ಮುಪ್ಪೆ ಸಾರತ್ತ,
ಯೌವನವೆ ಬಾರಿತ್ತ,
ಬರುವಳದೊ ಚಿಕ್ಕವಳು ನನ್ನ ಚೆಲುವೆ;
ಮುಪ್ಪೆ, ನಡೆ, ನಡೆ, ಒಲ್ಲೆ,
ಮುದಿಕುರುಬ, ನಿಲ್ಲಲ್ಲೆ,
ಬಂದಳದೊ ಚಿಕ್ಕವಳು ನನ್ನ ಚೆಲುವೆ.

— 'ಶ್ರೀ'
**ಮೂಲ: 'ದಿ ಪ್ಯಾಷನೇಟ್ ಪಿಲ್‌ಗ್ರಿಮ್', 12**
'ಇಂಗ್ಲಿಷ್ ಗೀತಗಳು' ಸಂಗ್ರಹದಿಂದ

[ಷೇಕ್ಸ್ಪಿಯರ್ ಬರೆದ 154 ಸಾನೆಟ್ಟುಗಳನ್ನು ಅವುಗಳ ಮುಖ್ಯವಸ್ತುವಿನ ಆಧಾರದ ಮೇಲೆ ಎರಡು ಪಂಗಡಗಳಾಗಿ ವಿಂಗಡಿಸುವುದು ವಾಡಿಕೆ. ಮೊದಲಿನ 126 ಸಾನೆಟ್ಟುಗಳು ಒಬ್ಬ ಯುವಕನನ್ನು ಕುರಿತು ಬರೆದವು. ಆ ಯುವಕ, ಕವಿಯ ಆಶ್ರಯದಾತ; ಅವನಿಗಿಂತ ವಯಸ್ಸಿನಲ್ಲಿ ಚಿಕ್ಕವ; ತುಂಬ ಚೆಲುವ. ಅವನದು ಗಂಡುಚೆಲುವಲ್ಲ, ಚೆಲುವೆಯರ ಚೆಲುವು, ಚೆಲುವೆಯರನ್ನೂ ಮೀರಿಸುವ ಚೆಲುವು. ಇಲ್ಲಿ ಅನುವಾದಿತವಾಗಿರುವ ಹದಿನಾರು ಸಾನೆಟ್ಟುಗಳಲ್ಲಿ ಈ ಮೊದಲ ಪಂಗಡಕ್ಕೆ ಸೇರಿದವು ಹದಿಮೂರಿವೆ. ಮೂಲದ ಸಂಖ್ಯಾನುಕ್ರಮದಲ್ಲಿಯೇ ಅವನ್ನು ಮುದ್ರಿಸಲಾಗಿದೆ.]

## ಒಂಟಿ ಬಾಳೇತಕ್ಕೆ?

ಚೆನ್ನಿಗ ಮದುವೆಗೆ ಒಪ್ಪುತ್ತಿಲ್ಲ. ಮದುವೆಯಾಗೆಂದು ಕವಿ ಅವನಿಗೆ ಗೋಗರೆಯುತ್ತಾನೆ. ಚೆನ್ನಿಗನ ರೂಪವಳಿಯುವ ಮುನ್ನ ಅದು ಸಂತಾನರೂಪದಲ್ಲಿ ಪುನರ್ಜನ್ಮ ಪಡೆದು ಅದರ ಫಲ ಲೋಕಕ್ಕೆ ದೊರೆಯಲೆಂದು ಕವಿಯ ಹಾರೈಕೆ.

ಒಬ್ಬ ವಿಧವೆಯ ಕಣ್ಣು ಹನಿಗೂಡದಿರಲೆಂದು
ಒಂಟಿ ಬಾಳಿಗೆ ನೀನು ಮೊರೆಹೋದೆಯೋ ಏನು!
ಮಕ್ಕಳಿಲ್ಲದೆ ಸತ್ತು ಹೋಗಲೆಂದಿರೆ ನೀನು
ಜಗವೆ ಜತೆಯಿರದ ಸತಿಯಂತೆ ಗೋಗರೆಯುವುದು!
ಇನ್ನುಳಿದ ವಿಧವೆಯರು ತಮ್ಮ ಮಕ್ಕಳ ಮೊಗದ
ಕಣ್ಣು ಕಾಸಾರದಲಿ ಪತಿಯ ಪ್ರತಿಬಿಂಬವನು
ಕಂಡು ಸಾಂತ್ವನ ಪಡೆಯುವನಿತು ನೆಮ್ಮದಿಯಿಲ್ಲ
ತನಗೆಂದು, ಈ ನಿನ್ನ ವಿಧವೆ-ಜಗ ಹಲಬುವುದು!

ತನ್ನ ನಿಧಿಯನ್ನೆಲ್ಲ ಸೂರೆಗೊಳಿಸಿದನೊಬ್ಬ
ಅಗಲಿ ಹೋದರು ಜಗವು ಅವನ ಸ್ಮೃತಿ ಸವಿಯುವುದು ;
ಜೀವನದ ಸೌಂದರ್ಯ ವಿನಿಯೋಗವಾಗದಿರೆ
ಅದನು ಬಳಸುವ ಕೈಯೊಳೇ ಅದರ ಕೊನೆಯಹುದು !
ತನ್ನತನವನ್ನಿಂತು ಹಾಳ್ಗೆಡಿಸಿ ಹೊರಟವನ
ಹೃದಯದೊಳು ಮೂಡುವುದೆ ಲೋಕದೊಲವಿನ ಕವನ ! (ಸಾನೆಟ್ 9)

—ಬಿ. ಎ. ಸನದಿ

## ತನ್ನೊಲುಮೆಗೆ

ಕಾವ್ಯಕ್ಕೆ ಸಾವಿಲ್ಲ. ಅಂತೆಯೇ ಕಾವ್ಯದಲ್ಲಿ ಘನಿಸಿದ ಚೆನ್ನಿಗನ ಚೆಲುವಿಗೆ ಸಹ.

ಬೇಸಗೆಯ ಹಗಲಿಗೆ ನಿನ್ನ ನಾನು ಹೋಲಿಪೆನೆ ?
ನಿನ್ನ ಲಾವಣ್ಯವೇ ಸೌಮ್ಯತೆಯೆ ಮಿಗಿಲು ಅದಕೆ:
ಮೇ ಮುದ್ದು ಮೊಗ್ಗೆಗಳ ನಡುಗಿಪುದು ಬಿರುಗಾಳಿ ;
ಕಿರಿದರಲೆ ಮುಗಿಯುವುದು ಬೇಸಿಗೆಯ ದೋಣಿ.
ಕೆಲವೊಮ್ಮೆ ಬಾನಕಣ್ ಕಡು ಸುಟ್ಟು ಬೆಳಗುವನು ;
ಹಲ ವೇಳೆ ಮಸುಕಹುದು ಅವನ ಹೊಂಬೆಳಕು.
ಚೆಲುವಾದುದೊಂದೊಂದು ಚೆಲುವಿಂದ ಇಳಿವುದೊವ್ಮೊಮ್ಮೆ,
ಯೋಗದಿಂದಲೊ ಪ್ರಕೃತಿ ಮಾರ್ಪಡಲೊ, ನೇರಗೊಳದೆ,
ಮುಗಿವಿರದ ನಿನ್ನ ಬೇಸಗೆ ಬಾಡದುಳಿಯುವುದು,
ನಿನ್ನದಿಹ ಚೆಲುವನದು ನೀಗಿಕೊಳದು.
ಸಾವು ಗರ್ವಿಸದಿರಲಿ ನೀನವನ ಛಾಯೆಯಲಿ ಅಲೆವೆಯೆಂದು,
ಕಾಲದೆಡೆಗೀ ನಿತ್ಯಪಂಕ್ತಿಯಲಿ ನೀ ಬೆಳೆಯುವಂದು.—
ನರರು ಉಸಿರಾಡಬಲ್ಲನಕ, ಕಣ್ ಕಾಣುವನಕ,
ಬದುಕಿ ತಾನೂ, ನಿನಗೆ ಈವುದಿದು ಬದುಕ. (ಸಾನೆಟ್ 18)

— ಕೆ. ಎಸ್. ನರಸಿಂಹಸ್ವಾಮಿ

## ಮುಕ್ಕಿನೊಗೆಯುವೆ ಕಾಲ

ಒಂದಲ್ಲ ಒಂದು ದಿನ ಎಲ್ಲವೂ ಕಾಲಾಸುರನ ದವಡೆಗೆ ತುತ್ತಾಗಿ ನಶಿಸಲೇ ಬೇಕು. ಕವಿ ಒಲಿದ ಚೆನ್ನಿಗನ ಚೆಲುವಿಗೂ ಇದೇ ಪಾಡು. ಆದರೂ ಅಂತಾಗದಿರಲೆಂದು ಕವಿ ಆಶಿಸುತ್ತಾನೆ. ಕೊನೆಗೆ ಆ ಚೆಲುವನ್ನು ಕಾವ್ಯದಲ್ಲಾದರೂ ಚಿರಂಜೀವಿಯನ್ನಾಗಿ ಮಾಡುವೆನೆಂದುಕೊಂಡು ತೃಪ್ತಿ ಪಡೆಯುತ್ತಾನೆ.

ಮುಕ್ಕಿನೊಗೆಯುವೆ ಕಾಲ! ಮೊಂಡಗೊಳಿಸುವೆ ಸಿಂಹ-
ಪಂಜಗಳ, ನಿನ್ನಿಂದ ತನ್ನ ಮಕ್ಕಳ ತಾನೆ
ನುಂಗುತಿಹುದೀ ಭೂಮಿ, ಉಗ್ರವ್ಯಾಘ್ರನ ಹರಿತ
ಹಲ್ಲು ಕಿತ್ತೆಸೆವೆ, ಪುರಾತನ ಪಕ್ಷಿ ಫೀನಿಕ್ಸ್
ತನ್ನ ರಕ್ತದಿ ಬೂದಿ. ನಿನ್ನ ಪುಟಗಾಲಿನಲಿ
ಹರ್ಷ-ದುಃಖದ ಋತು. ನೀನೊ, ನಿನ್ನೀ ಜಗವೊ—
ಬೇಕಾದ್ದು ಮಾಡು, ಬಾಡುವುದೆಲ್ಲ ಮಾಧುರ್ಯ.
ಆದರೊಂದು ಮಾತ್ರವ ಮಾಡದಿರು, ನಿನಗಾಣೆ
ಚಣದ ಚಾಣಗಳಿಂದ ಕೆಡಿಸದಿರು ಕುಡಿಹುಬ್ಬು,
ಹಳೆಯ ಲೇಖನಿ ಗೆರೆಯ ಹಣೆಗೆ ಮೂಡಿಸಬೇಡ
ಬಿಟ್ಟು ಬಿಡು ಎನಿತು ಕೊಂಕಿಸದಂತೆ ಇನಿಯನನು
ಮುಂಬರುವ ಜನಕಿದೇ ಚೆಲುವು ಮಾದರಿಯಾಗಿ.
ನಿನ್ನ ಕೈ ತೋರಿಸದೆ ಬಿಡುವೆಯ ಮುದಿಯ, ಇರಲಿ;
ನನ್ನ ಕವಿತೆಯೊಳಾತ ಚಿರಯುವಕ, ನೆನಪಿರಲಿ. (ಸಾನೆಟ್ 19)

— **ಚೆನ್ನವೀರ ಕಣವಿ**

## ನನ್ನ ನೇತ್ರವು ನಿನ್ನ ಚಿತ್ರಕಾರ

ಚೆನ್ನಿಗನ ಕಣ್ಣುಗಳು ಕವಿಯ ಬದುಕಿಗೆ ಬೆಳಕನ್ನಿತ್ತಿವೆ. ಕವಿಯ ಕಣ್ಣುಗಳು ಚೆನ್ನಿಗನನ್ನು ಚಿತ್ರಿಸಿವೆ. ಆದರೆ ಕಣ್ಣಿನದು ಹೊರನೋಟ, ಅಷ್ಟೆ. ಅದು ಎದೆಯಾಳದ ಒಲುಮೆಯನ್ನೆಂತು ಎಟುಕೀತು? ಎಂತು ಚಿತ್ರಿಸೀತು?

ನನ್ನ ನೇತ್ರವು ಚಿತ್ರಕಾರನಂದದಿ ನಿನ್ನ
ರೂಪವನು ರೇಖಿಸಿದೆ ಎದೆಯ ಪತ್ರದ ಮೇಲೆ
ಎಸೆವ ತಸಬೀರಿಗಿದೊ ನನ್ನ ದೇಹವೆ ಹೊನ್ನ
ಚೌಕಟ್ಟು; ಕಲೆ ಕಲಾವಿದನ ದೃಷ್ಟಿಯ ಲೀಲೆ.
ಈ ಚಿತ್ರಶಿಲ್ಪಿ ಚಿತ್ತದಲಿ ಪಡೆದಿಹ ಪುಣ್ಯ
ನಿನ್ನ ರೂಪಿಸುವ ನೈಪುಣ್ಯ. ಅದನೇ ಕಾಂಬೆ

ನನ್ನ ಚಿನ್ಮಂದಿರದ ಭಿತ್ತಿಯಲಿ ಓ ಚಿನ್ನ
ಕಣ್ಣು ಕಣ್ಣಿಗೆ ಸೂಸುವೈಸಿರಿಯನೇನೆಂಬೆ !
ನನ್ನೆದೆಯ ಅರಮನೆಯ ಕಿಟಕಿ ಕಿಟಕಿಯ ಗಾಜು
ನಿನ್ನ ನಯನಂಗಳಿಂದೋಜೆವಡೆದಿವೆ ನೋಡು.
ನಿನ್ನ ಕಣ್ ನನ್ನೆದೆಯ ಜಾಲಂಧ್ರವಾಗಿರಲು
ರವಿ ತಾನು ರಶ್ಮಿಗಳ ಬಲೆ ಹೆಣೆದು ನಲಿಯುವನು.
ಕಲೆಗೆ ಕಳೆ ಕಟ್ಟಬಹುದಿಂತು ಕಂಗಳ ಜಾಣ್ಮೆ
ಆದರೇಂ? ಹೊರ ಹೊಳಪಿನಾಚೆಗಿದೆ ಎದೆಯೊಲುಮೆ. (ಸಾನೆಟ್ 24)

— ಡಿ. ಎಸ್. ಕರ್ಕಿ

## ರುದ್ರ ರಾತ್ರಿಯಲಿ ಹೊಳೆವ ವಜ್ರ

ಚಿನ್ನಿಗನಿಂವಾಗಿ ಕವಿಗೆ ಬಿಡುವೇ ಇಲ್ಲ. ಹಗಲು ಅವನ ಸೇವೆಯಲ್ಲಿ ದೇಹ ದುಡಿಯುತ್ತದೆ. ರಾತ್ರಿ ಅವನ ಕಲ್ಪನೆಯಲ್ಲಿ ಮನಸ್ಸು ದಣಿಯುತ್ತದೆ.

ದಿನವಿಡೀ ತಿರುಗಾಟದಲಿ ದಣಿದು
ಸೋತ ಮೈಯನು ಹೊತ್ತು ಮನೆಗೆ ಬಂದು
ಧಾವಿಸುವೆ ಹಾಸುಗೆಗೆ ಪ್ರಿಯ ವಿರಾಮದ ನೆಲೆಗೆ
ಇರುಳಿನೊಳಗೆ.
ಮಲಗಿದೆನೊ, ಸರಿ, ಮತ್ತೆ ಶುರುವಾಗುವುದು
ಇನ್ನೊಂದು ಸಂಚಾರ ತಲೆಯ ಒಳಗೆ!
ಮೈ ಸೋತು ಬಿದ್ದಿರಲು ಈಗ ಬುದ್ಧಿಗೆ ಕೆಲಸ
ಮನಸಿನೊಳಗೆ.
ನನ್ನೆಲ್ಲ ಭಾವಗಳು ಉತ್ಸಾಹದುತ್ಸವಕೆ
ಹೊರಟುನಿಲ್ಲುವುವೆಲ್ಲೊ ನೀನಿರುವ ನೆಲೆಗೆ !
ಸೋತ ರೆಪ್ಪೆಯನೆತ್ತಿ ಬಟ್ಟಗಣ್ಣನು ತೆರೆದು
ದಿಟ್ಟಿಸುವೆ ಕುರುಡನ ಹಾಗೆ
ಇರುಳ ಕಡೆಗೆ.
ಆಗ ಕಾಣುವುದೊಂದೆ ನಿನ್ನಛಾಯಾರೂಪ
ನನ್ನ ಕಲ್ಪನೆಯಲ್ಲಿ ತೇಲಿ ಬಂದು
ರುದ್ರ ರಾತ್ರಿಯ ನಡುವೆ ಹೊಳೆವ ವಜ್ರದ ಹಾಗೆ,
ಹಳೆಯ ಕಾರಿರುಳಿಗೂ ಚೆಲುವ ತಂದು!
ಇಗೊ, ಹೀಗೆಯೇ ದಿನವೆಲ್ಲ—
ಹಗಲು ಅವಯುವಗಳಿಗೆ, ಇರುಳು ಈ ತಲೆಯೊಳಗೆ

ನಿನಗಾಗಿ ಹಾತೊರೆದು, ನಿನಗೂ ನನಗು
ಬಿಡುವೆಂಬುದೇ ಇಲ್ಲ. (ಸಾನೆಟ್ 27)

— ಜಿ. ಎಸ್. ಶಿವರುದ್ರಪ್ಪ

## ಅಮೃತಶಿಲೆಯಲ್ಲ

ಕವಿಗೆ ತನ್ನ ಕವಿತೆಯಲ್ಲಿ, ಅದರ ಚಿರಂತನತೆಯಲ್ಲಿ ದೃಢ ವಿಶ್ವಾಸ. ಚೆನ್ನಿಗನ ಚೆಲುವಿಗೆ, ಕವಿಯ ಒಲವಿಗೆ ಅದಕ್ಕಿಂತ ಯೋಗ್ಯವಾದ ಸ್ಮಾರಕ ಯಾವುದು? ಕಾಲದ ಪೆಟ್ಟಿಗೆ ಸಿಕ್ಕಿ ಶಿಲಾಪ್ರತಿಮೆಗಳು ಒಡೆಯಬಹುದು, ಹೊನ್ನಲೇಪದ ಸ್ಮಾರಕಗಳು ಉರುಳಬಹುದು. ಆದರೆ ಕಾವ್ಯ ಮಾತ್ರ ಅದನ್ನು ರೂಪಿಸುವ ಅಕ್ಷರದಂತೆಯೇ ಅ-ಕ್ಷರ.

ಅಮೃತಶಿಲೆಯಲ್ಲ, ಅರಸರಟ್ಟಹಾಸದ ಸ್ವರ್ಣ-
ಸ್ಮಾರಕವಲ್ಲ—ಈ ಕವನ ಭವನದ ಎದುರು.
ದಿನದಿನಕೆ ಮಾಸಿ ಬುರುಸುಗಟ್ಟುವದು ಕಲ್ಲಿನ
ಪ್ರತಿಮೆ, ನುಡಿಯೊಳಗೊ ಮತ್ತಿನಿತು ಹೊಳೆದು ಹೊಡಕರಿಸಿ
ನಿಲ್ಲುವೆ ನೀನು. ಕಾಳಗದಲೆಲ್ಲ ವಿಗ್ರಹ ಹಾಳು,
ಗಲಭೆಯಲಿ ಭಾರಿ ಕಟ್ಟಡವೆನಿತೊ ಬುಡಮೇಲು.
ರಣಚಂಡಿ ಕತ್ತಿ ಕಡಿಯದು, ಯುದ್ಧ ಸುಡಲರಿದು
ನಿನ್ನ ನೆನಪಿನ ಕವನ ಜೀವಂತ ದಾಖಲೆಯ.
ಮೃತ್ಯುವನು, ಮಹಾವಿಸ್ಮೃತಿಯನೂ ದಾಟಿರುವೆ,
ನಿನ್ನ ಸ್ತುತಿಗಿಂಬುಂಟು ಇನ್ನೂ, ಮುಂದಿನೆಲ್ಲ
ತಲೆಮಾರುಗಳ ಜನದ ಕಣ್ಣಿನಲಿ, ಜಗವೆಲ್ಲ
ಜೀರ್ಣವಾಗುತ ಕೊನೆಯ ಗತಿಯ ಮುಟ್ಟುವವರೆಗು.
ಮತ್ತುದಿಸಿ ದೇವನೆಡೆ ಕೊನೆಯ ತೀರ್ಪಿನವರೆಗು
ಇಲ್ಲಿ ಬದುಕಿರುವೆ, ಪ್ರಣಯಿಗಳ ಕಣ್ಣ ಬೆಳಕು. (ಸಾನೆಟ್ 55)

— ಚೆನ್ನವೀರ ಕಣವಿ

## ಈ ಇಂಥ ಕಾಲವನು ನನ್ನಲ್ಲಿ ಕಂಡೀಯೆ

ಮುಪ್ಪು, ಸಾವು ತಪ್ಪಿದ್ದಲ್ಲ. ಅವು ಬಂದು ಮುಂಬಾಗಿಲು ತಟ್ಟಿದಾಗ ಒಲವು ವಿದಾಯ ಹೇಳಿ ಹಿಂಬಾಗಿಲಿನಿಂದ ಓಡುವುದು ಸ್ವಾಭಾವಿಕ. ಹಾಗಾಗುವ ಬದಲು ಆ ಮುಪ್ಪು ಸಾವುಗಳ ಮೇಲೆಯೇ ಒಲವು ಬೆಳೆಯಲಿ, ಬಲಿಯಲಿ ಎಂದು ಕವಿಹೃದಯದ ಹಾರೈಕೆ.

ಮೊನ್ನೆಮೊನ್ನೆಯೆ ಪಕ್ಷಿಗಾನ ಮಂದಿರವಿದ್ದ
ಟೊಂಗೆ, ಭಣಭಣ ಈಗ. ತುಂಬ ಹಣ್ಣೆಲೆ ಜೋತ,

ಅಥವ ಎಲೆಯೇ ಇರದ, ಅಥವ ಒಂದೊಂದಿದ್ದ
ಕಾಲವಿದು. ಚಳಿ ಸೋಂಕಿದರೆ ನಡುಕ. ಈ ಇಂಥ
ಕಾಲವನು ನನ್ನಲ್ಲಿ ಕಂಡೀಯೆ. ಗುಟ್ಟಿನಲಿ
ಎಲ್ಲ ಗಪ್ಪಾಗಿಸುವ ಸಾವು—ಕಪ್ಪನೆ ರಾತ್ರಿ
ಬೆಳಕ ನುಂಗಲು, ಪಡುವಣಕ್ಕೆ ಕಾಣುವ ಮಂಜು-
ಸಂಜೆ-ಮಬ್ಬನು ನೀನು ಕಂಡೀಯೆ. ಇಷ್ಟು ದಿನ
ಉರಿಗೆ ಬದುಕನ್ನಿತ್ತು ಈಗ ಸಾಯುತ್ತಿರುವ
ಯೌವನದ ಮೈಮೇಲೆ ಉಳಿದ ಬೆಂಕಿಯ ಕಿಡಿಯ
ಬೆಳಕ ನನ್ನಲ್ಲಿ ನೀ ಕಂಡೀಯೆ. ಇದನೆಲ್ಲ
ಕಂಡೆ ಕಾಣುವಿ ನೀನು. ಇದರಿಂದ, ಯಾವುದನು
ತೊರೆದು ಬಿಡುವೆಯೊ, ಅದರ ಬಗ್ಗೆ ನಿನ್ನೆದೆಯೊಲುಮೆ
ಮತ್ತಷ್ಟು ಹೆಚ್ಚುವುದು, ಚೆನ್ನಾಗಿ ಬಲಿಯುವುದು. (ಸಾನೆಟ್ 73)

— ಚಂದ್ರಶೇಖರ ಪಾಟೀಲ

## ಏಕಿಷ್ಟು ಬರಡು ನಾ ಬರೆವ ಕಾವ್ಯ ?

ಹೊಸ ತಂತ್ರ, ಹೊಸ ರೂಪಗಳನ್ನು ಅಳವಡಿಸಿಕೊಳ್ಳಲಾರದೇ ಹೋಗಿ ತನ್ನ ಕಾವ್ಯ ಹಳಸಿತೇನೋ ಎಂಬ ಕವಿಸಹಜವಾದ ಶಂಕೆ ಕವಿಯಲ್ಲಿ ಮೂಡಿದೆ. ಕಾವ್ಯ ಚೆನ್ನಿಗನಿಗೂ ಅವನ ಒಲವಿಗೂ ಮೀಸಲಾಗಿದ್ದು ವಿಷಯವೈವಿಧ್ಯವಿಲ್ಲವಾದುದೇ ಅಲ್ಲವೇ ಇದಕ್ಕೆ ಕಾರಣ. ಈ ಕಾರಣದಲ್ಲಿಯೇ ಕವಿಯ ಸಮಾಧಾನವೂ ಅಡಗಿದೆ.

ಏಕಿಷ್ಟು ಬರಡು ಹೊಸ ಗೆಲುವ ಬೆಳಗದ ಕಾವ್ಯ
ಬಿಟ್ಟುಕೊಟ್ಟಂತೆ ಮಿಂಚನ್ನು, ವೈವಿಧ್ಯವನ್ನು ?
ದಿನವುರುಳಿದಂತೇಕೆ ಹೊರಳುವುದಿಲ್ಲ ನವ್ಯ
ತಂತ್ರಗಳ ಕಡೆ ನವ್ಯ ಪಾಕಗಳ ಕಡೆ ಕಣ್ಣು ?
ಎಂದೊ ಬರೆದಿದ್ದೆ ಇಂದಿಗು ಕೂಡ; ಪಡಿಯಚ್ಚು
ಮಾತು; ಕಲ್ಪನೆ ಬಂದಿ ರಾಜವಸ್ತ್ರದ ಒಳಗೆ.
ಹಿಡಿದೆತ್ತಿದಂತೆ ಹುಟ್ಟಿದ ನೆಲ, ಜೊತೆಗೆ ಗೊತ್ತು-
ಗುರಿಯನ್ನು; ಸಹಿ ಮಾಡಿದಂತೆ ಮಾತಿನ ಕೆಳಗೆ.
ಒಲವೆ, ನೀನೇ ತಾನೆ ನನ್ನ ಕಾವ್ಯದ ವಸ್ತು,
ನೀನು, ಜೊತೆಗೊಲವಷ್ಟೆ ಅದರೊಳಗಿರುವ ಚರ್ಚೆ ?
ಹಳೆ ನುಡಿಗೆ ಹೊಸ ಉಡಿಗೆ ತೊಡಿಸುವುದು; ಸಂಪತ್ತು
ವೆಚ್ಚ ಮಾಡಿದ್ದನ್ನು ವೆಚ್ಚ ಮಾಡುವುದಷ್ಟೆ.

ಬೆಳಗಾಗ ಬರುವ ರವಿ ಹಳಬನಾದರು ಹೊಸಬ.
ಅಂತೆ ನನ್ನೊಲವು ; ನುಡಿ ಮರುಕೊಳಿಸುವುದೆ ಕಸುಬು. (ಸಾನೆಟ್ 76)

— ರಾಮಚಂದ್ರ ಶರ್ಮ

## ಎದುರಾಳಿ - ಕವಿ

ಈವರೆಗೆ ಸಾನೆಟ್ಟಿನ ಕಣದಲ್ಲಿದ್ದ ಪಾತ್ರಗಳೆಂದರೆ ಇಬ್ಬರೇ: ಕವಿ ಮತ್ತು ಚೆನ್ನಿಗ. ಈಗ ಮೂರನೆಯವನೊಬ್ಬ ತಲೆ ಹಾಕಿ, ಘರ್ಷಣೆಗೆ ಎಡೆಮಾಡಿಕೊಡುತ್ತಾನೆ. ಅವನೂ ಒಬ್ಬ ಕವಿಯೇ. ಈ ಎದುರಾಳಿ ಬಲು ಗಟ್ಟಿಗ. ಅವನಿಗೆ ಚೆನ್ನಿಗನ ಒಲವು ಆಸರೆಗಳು ದೊರೆತು ಕವಿಯನ್ನು ಕೇಳುವವರಿಲ್ಲವಾಗಿದೆ. ಅವನ ಲೇಖನಿಯೂ ಮೂಕವಾಗಿದೆ.

ಬಲು ಬೆಲೆಯ ಬಹುಮಾನ ನೀನು. ನಿನ್ನನು ಗೆಲ್ಲೆ
ಬಳಿಹಾಯ್ದ ಅವನ ಮದಿಸಿದ ಕಾವ್ಯವೈಭವದ
ತುಂಬುಹಾಯಿಯೆ, ನನ್ನ ಭಾವಗಳನೊಳಗೊತ್ತಿ
ಎದೆಬಸಿರಲೇ ಅವಕೆ ಗೋರಿಯನು ಕಟ್ಟಿದ್ದು ?
ದುಷ್ಟ ಶಕ್ತಿಗಳಿಂದ ನರರಿಗೆಟುಕದ ಕಾವ್ಯ-
ಕಲೆ ಕಲಿತವನ ಚೇತನವೆ ನನ್ನ ಕೊಂದದ್ದು ?
ಅಲ್ಲ, ನನ್ನ ಕವಿತೆಗೆ ಗರ ಬಡಿದುದವನಲ್ಲ,
ಅವಗೆ ಬೆಂಬಲವೀವ ಇರುಳಕೆಳೆಗಳು ಅಲ್ಲ.
ನನ್ನ ಮೌನದ ವಿಜಯ ತಮ್ಮದೆಂಬೊಣ ಹೆಮ್ಮೆ
ಸಲ್ಲದು ಅವಗೆ, ಇರುಳವಗೆ ಜಾಣ್ಮುಂಬಿ ಮಂಕು
ಬಡಿಸುವಾ ನಗೆಮೊಗದ ಪಳಕೆಯ ಪಿಶಾಚಕ್ಕೆ.
ಅವರಾವ ಬೆದರಿಕೆಗು ನಾನು ಎದೆಗೆಡಲಿಲ್ಲ.
ಅವನ ಕಾವ್ಯವು ನಿನ್ನ ಚೆಲ್ಮೊಗವ ಸೂರೆಗೊಳೆ
ಉಳಿಯಿತೇನೆನಗೆ? ನಾನಾದೆ ನಿಶ್ಚೇತನ. (ಸಾನೆಟ್ 86 )

— ಶಾ. ಬಾಲುರಾವ್

## ಕುಸುಮ ಕಳೆಯೊಡನೆ ಕೂಡಿವರೆ . . .

ಹೂವಿಗೆ ಹುಳು ಹತ್ತಿತೆ? ಚೆನ್ನಿಗ ದಾರಿ ತಪ್ಪಿದನೆ? ಅವನ ವರ್ತನೆಯನ್ನು ಕಂಡು ಕವಿಗೆ ಸಂದೇಹ ಉಂಟಾದಂತಿದೆ. ದೈವದೊಲುಮೆ ಬೇಕೆನ್ನುವವರು ಲೋಕವನ್ನು ಕರಗಿಸಿಯೂ ಕಲ್ಲಾಗಿ ಉಳಿಯಬೇಕೆಂದು ಉಪದೇಶಿಸುತ್ತಾನೆ ಕವಿ.

ನೋಯಿಸುವ ಬಲವಿದ್ದು ಅಂತೆಸಗದಿದ್ದವರು
ಮಾಡಿದೊಲು ತೋರಿವರು ಮಾಡದೆಯೆ ಇದ್ದವರು

ಜಗದ ಮನ ಕರಗಿಸುವ ಬಲವಿದ್ದು, ಕಲ್ಲಿನೊಲು
ಅಲ್ಲಾಡದೆಯೆ ನಿಂದು ಆಮಿಷವ ಗೆದ್ದವರು
ಸ್ವರ್ಗೀಯ ಸನ್ಮಾನವನು ಸಹಜ ಪಡೆಯುವರು !
ಪ್ರಕೃತಿಯೈಸಿರಿ ಹಾಳ್ಗೆಡಿಸದೆಯೆ ಕಾಯ್ವವರು
ತಮ್ಮ ಮುಖ-ಭಾವಗಳ ಯಜಮಾನರೇ ದಿಟವು ;
ಇತರ ಜನಕವರ ಗುಣ-ಪಾರುಪತ್ಯದ ಪುಟವು !
ಬೇಸಿಗೆಯ ಹೂಗಂಪ ಸವಿಯುವುದು ಬಿಸಿಗಾಳಿ
ತನ್ನಷ್ಟಕೇ ತಾನು ಹೂವರಳಿ ಉರುಳಿದರು !
ಆದರದೆ ಕುಸುಮ ಕೆಳತರಗತಿಯ ಕಳೆಯೊಡನೆ
ಕೂಡಿದರೆ ಕಳೆಯ ಗುಣ ಮೇಲೆದ್ದು ಮೆರೆಯುವುದು !
ತನ್ನ ಕೃತಿಯಿಂದಿಂತು ಸವಿಯೆಂಬುದೂ ಹುಳಿಯು !
ಕಸಕಿಂತ ಕಡೆಯಾಗಿ ನಾರುವುದು ನೈದಿಲೆಯು ! (ಸಾನೆಟ್ 94)

— ಬಿ. ಎ. ಸನದಿ

## ಎಲ್ಲಿರುವೆ ಏ ವಾಣಿ ?

ನಡುವೆ ಕೆಲವೊಂದು ದಿನ ಕವಿಯ ಮನಸ್ಸು ತನ್ನ ಆರಾಧ್ಯದೇವತೆಯಿಂದ ದೂರವಾಗಿ ಬೇರೆ ವಿಷಯಗಳ ಕಡೆ ಹರಿದಿದೆ. ಈ ಮಧ್ಯೆ ಕಾಲದ ಹೊಡೆತದಿಂದಾಗಿ ಚೆನ್ನಿಗನ ಚೆಲುವೂ ಕೊಂಚ ಮಾಸಿದೆ. ಮರೆವು ತಿಳಿದು ಎಚ್ಚರಗೊಂಡಾಗ ಕವಿಗೆ ವ್ಯಥೆಯಾಗುತ್ತದೆ. ತಪ್ಪನ್ನು ತಿದ್ದಿಕೊಳ್ಳೆಂದು ತನ್ನ ಕವಿತೆಗೆ ಆಗ್ರಹಿಸುತ್ತಾನೆ.

ಎಲ್ಲಿರುವೆ ಏ ವಾಣಿ ನಿನಗೆಲ್ಲ ಬಲವೀವು-
ದನು ನೀನು ಬಣ್ಣಿಸುವುದೀಸು ದಿನ ಮರೆತೆಯ ?
ಹಾಳು ಹಾಡಿಗೆ ಕಳೆಯುವಿಯ ನಿನ್ನ ಕಿಡಿಕಾವು
ಕೀಳು ವಿಷಯವ ಬೆಳಗಿ ಕರೆತಂದು ಕತ್ತಲೆಯ ?
ಮರಗೂಳಿ ವಾಣಿಯೇ ಮರಳಿ ಬಾ ಮಿದುವಾಗಿ
ಮೈಗಳ್ಳತನದ ತಪ್ಪನು ಈಗ ತಿದ್ದಿಕೊಳು.
ನಿನ್ನ ನುಡಿ ಮನ್ನಿಸುವ ಕಿವಿಯೊಳಗೆ ಕಲೆ ಮಾಗಿ
ಹಾಡು ನೀ ಲೆಕ್ಕಣಿಯ ಮುಳುಗಿಸುತ ಜಾಣೆನೊಳು.
ಏಳು ಒರಗಿದ ವಾಣಿ ಪ್ರಿಯತಮನ ಸವಿಮೊಗದಿ
ಕಾಲವೇನಾದರೂ ಕೊರೆದ ನಿರಿಗೆಯ ನೋಡು.
ಸೊರಗು ಕೊರಗಿನ ಕತೆಯ ಕೊರಚಾಡಿ ಅಣಕದಿ
ಎಲ್ಲೆಲ್ಲು ಹೀಗಳೆದು ಕಾಲನ ಸುಲಿಗೆ-ಸೂಡು.

ಕಾಲನಿಂದಲು ಬೇಗ ನನ್ನೊಲವ ಪಸರಿಸು
ಅವನ ಕೊಯ್ತುವ ತಡೆದು ನೀ ಮಾತ್ರ ಹಸುರಿಸು ! (ಸಾನೆಟ್ 100)

— ರಂ. ಶ್ರೀ. ಮುಗಳಿ

## ನಿಜವಾದ ಒಲವು

ನಿಜವಾದ ಒಲವು ಯಾವುದು ? ಅದು ಹೇಗಿರಬೇಕು ? ಅದರ ಗೊತ್ತುಗುರಿಗಳೇನು ? — ಈ ಸುಪ್ರಸಿದ್ಧ ಸಾನೆಟ್ಟನಲ್ಲಿ ಕವಿ ಅದರ ವ್ಯಾಖ್ಯೆ ಮಾಡಿದ್ದಾನೆ.

ಒಲಿದು ಕದಲದ ಮನಸ್ಸುಗಳ ಸಂಲಗ್ನಕ್ಕೆ
ವಿಘ್ನಗಳ ಬರಗೊಡೆನು. ಒಲವು ಒಲವೇ ಅಲ್ಲ
ಮಾರ್ಪಾಡು ಹೊಂದಲದು ಮಾರ್ಪಡಲು ಅನು ದೊರಕೆ,
ಒಯ್ಯಬಂದವನೊಡನೆ ಮಣಿದು ದೂರಕೆ ಸರಿಯೆ, ಅಲ್ಲ :
ಅಲ್ಲವೇ ಅಲ್ಲ ! ಬಿರುಗಾಳಿಗಳ ಎದುರಿನಲಿ
ಎಂದಿಗೂ ಅಲುಗದದು, ನಿತ್ಯನಿಶ್ಚಲ ಚಿಹ್ನ ;
ಕಡಲಲೆವ ಎಲ್ಲ ನೌಕೆಗು ತಾರೆ, ಅಳೆದಿರಲಿ
ಅದರ ಉನ್ನತಿ, ಅರಿವೆವೇನದರ ಬಲವನ್ನ ?
ಒಲವು ಕಾಲನು ನಗುವ ಮಂಕಲ್ಲ, ಕೆಂಪು ತುಟಿ
ಕೆನ್ನೆಗಳು ಅವನ ಕುಡುಗೋಲ ಕುಯ್ಲಿಗೆ ಬಲಿ ;
ಒಲವು ಮಾರ್ಪಡದವನ ಲಘು ಗಂಟೆವಾರಗಳು ಮುಟ್ಟಿ,
ನಾಶದಂಚನು ಸೋಕಿಯೂ ಸ್ಥಿರವು ತಾನಲ್ಲಿ :
ತಪ್ಪಾದರಿದು, ಅಂತು ತೋರಿಸಿದರೆನಗೆಲ್ಲ,
ನನ್ನ ನುಡಿ ಸಲ್ಲ ; ಒಲಿದಾತನಾರೂ ಇಲ್ಲ. (ಸಾನೆಟ್ 116)

— ವೈವೆಂಸೀ ರಾಘವ

## ಮುರಿದ ಒಲವಿನ ಮನೆಯು ಬಿಚ್ಚಿ ಕಟ್ಟಲು . . .

ಕವಿ ಪ್ರೇಮದ 'ಹುಚ್ಚು ಜ್ವರ'ದಲ್ಲಿದ್ದಾನೆ. ಆಸೆ ಕಟ್ಟಿಕೊಂಡು ಎಲ್ಲೆಲ್ಲೋ ಅಲೆದಾಡಿದವನು ಹತಾಶನಾಗಿ ಹಿಂದಿರುಗುತ್ತಾನೆ. ಆ ಹತಾಶೆ ಅವನನ್ನು ಮತ್ತೆ ಚೆನ್ನಿಗನಲ್ಲಿಗೇ ಎಳೆಯುತ್ತದೆ.

ಒಡಲ ನರಕದ ಭಾಂಡ ಕುದಿಸಿ ಭಟ್ಟಿಯ ತೆಗೆದ
ಮೋಹಿನಿಯ ಕಣ್ಣೀರ ಗುಟುಕನೆಷ್ಟೋ ಕುಡಿದೆ.

ಭರವಸೆಗೆ ಅಂಜಿಕೆಯು, ಶಂಕೆಗಾಸೆಯು ಸವರಿ,
ಕಳಕೊಂಡೆ ಗೆದ್ದೆನೆನ್ನುತ ಕೈಗೆ ಬಂದುದನು.
ನಾ ಸುದೈವಿಯು ಎಂದು ಹಿಗ್ಗಿ ಹಾರೈಸಿರಲು
ಯಾವ ಅಪರಾಧಕೀ ಶಿಕ್ಷೆ? ಎಂಥ ಹತಭಾಗ್ಯ !
ಇರುವ ಕಣ್ಣನು ಕಿತ್ತು ಹತ್ತಿಸಿದಂತೆ ಮತ್ತೆ
ಈ ಜ್ವರದ ಸನ್ನಿಪಾತದ ಹುಚ್ಚು ದಿಗ್ಭ್ರಮಣೆ.
ಅನಿಷ್ಟದುಪಕಾರವೀಗ ಹೊಳೆಯಿತು ಸ್ಪಷ್ಟ,
ಕೇಡಿನಿಂದೊಳಿತು ಮತ್ತಿನಿತು ಲೇಸೆನಿಸುವದು
ಮುರಿದ ಒಲವಿನ ಮನೆಯು ಬಿಚ್ಚಿ ಕಟ್ಟಲು ಹೊಸತು
ಮೊದಲಿಗಿಂತಲು ಚೆಂದ, ಗಟ್ಟಿ, ಗೌರವ, ಘನತೆ.
ಆಕ್ಷೇಪಣೆಯ ಹೊತ್ತು ಮರಳಿದೆನು ಸಾಕಷ್ಟು
ಕಾಯಿಲೆಯ ನಷ್ಟಕೊದಗಿದ ಲಾಭ ಮೂರುಪಟ್ಟು. (ಸಾನೆಟ್ 119)

— ಚೆನ್ನವೀರ ಕಣವಿ

[ಸಾನೆಟ್ಟುಗಳಲ್ಲಿ ಒಂದರಿಂದ 126 ರವರೆಗಿನವು ಕವಿ—ಚೆನ್ನಿಗರ ಸಂಬಂಧವನ್ನು ಕುರಿತಿದ್ದು ಒಂದು ಮಾಲೆಯಾದರೆ 127ರಿಂದ ಮುಂದಿನವು ಇನ್ನೊಂದು ಮಾಲೆಗೆ ಸೇರುತ್ತವೆ. ಈ ಎರಡನೆಯ ಮಾಲೆಯ ಸೂತ್ರವೆಂದರೆ ಒಬ್ಬ ಕಪ್ಪು ಹೆಣ್ಣು, ಕವಿಯ ಪ್ರೇಯಸಿ. ಆಕೆ ಚಪಲೆ, ವಿಷಯಾಸಕ್ತೆ. ಆವಳಿಂದಾಗಿ ಕವಿಗೆ ಮಾನಸಿಕವಾಗಿ ತುಂಬ ಘಾಸಿಯಾಗುತ್ತದೆ. ಆದರೂ ಅವನು ಅವಳನ್ನು ಬಿಡಲಾರ. ಎಳೆತ-ಬಿಡುತೆಗಳ ನಡುವೆ ತೊಯ್ದಾಡುತ್ತ ಬಳಲುತ್ತಾನೆ. ಅವಳ ಸಂಬಂಧದಲ್ಲಿ ಕವಿ ಪಡುವ ಪಾಡಿನ ಸುಳಿವು ಈ ಸಾನೆಟ್ಟುಗಳಲ್ಲಿ ಸಿಗುತ್ತದೆ.]

## ವಲ್ಲಭೆಯ ಕಂಗಳು

ಈ ಮೊದಲಿನದರಲ್ಲಿ ಕವಿ ತನ್ನವಳ ಸಾಧಾರಣ ಸೌಂದರ್ಯದ 'ಅಪರೂಪತೆ'ಯನ್ನು ಬಣ್ಣಿಸುತ್ತ ತನ್ನ ಕಾಲದ ಸ್ತ್ರೀವರ್ಣನೆಯ ಸಂಪ್ರದಾಯವನ್ನು ಅಣಕವಾಡಿದ್ದಾನೆ.

ನನ್ನ ವಲ್ಲಭೆಯ ಕಂಗಳು ಸೂರ್ಯನಂತಿಲ್ಲ ;
ಅವಳ ತುಟಿಗೆಂಪಿಗಿಂತಲು ಕೆಂಪು ಕೆಂಬವಳ ;
ಹಿಮ ಬಿಳುಪು, ಬೂದುಮಾಸಲು ಅವಳ ಕುಚವೆಲ್ಲ ;
ಕುರುಳು ತಂತಿಯೆನೆ, ಕರಿತಂತಿ ತಲೆಬೆಳೆಸವಳ.
ನೋಡಿಹೆನು ರೇಷ್ಮೆ ನುಣುಪಿನ ಕೆಂಪು ಬಿಳಿ ಗುಲಾಬಿಗಳ,
ಕಾಣೆನಂತಹ ಗುಲಾಬಿಯನವಳ ಕೆನ್ನೆಯಲಿ ;
ನನ್ನ ಪ್ರಾಣೇಶ್ವರಿಯ ಉಸಿರಿಗಿಂತಲು ಬಹಳ
ಮಿಗಿಲಿನಾನಂದವಿದೆ ಕೆಲವು ಪರಿಮಳಗಳಲಿ ;

ಅವಳ ನುಡಿ ಕೇಳಲಿನಗಿಷ್ಟ, ಆದರೆ ನಾನು
ಬಲ್ಲೆ, ಸಂಗೀತಕಿದೆ ಮಿಗಿಲಾದ ಇಂಪುದನಿ ;
ನಡೆತಂದ ದೇವತೆಯ ನಾ ಕಾಣೆ, ಒಪ್ಪುವೆನು !
ನಡೆವಾಗ, ನೆಲದ ಮೇಲೆಯೆ ನಡೆವಳೆನ್ನ ರಾಣಿ :
ಆದರೂ, ನನ್ನಿನಿಯೆ ಬಹು ವಿರಳ, ದೇವರಾಣೆ ;
ಹುಸಿಹೋಲಿಕೆಗಳ ಹುಸಿಗೈದಳಿಗೆ ಎಣೆಯ ಕಾಣೆ. (ಸಾನೆಟ್ 130)

— ಮೈನಂಸೀ ರಾಘವ

## ಭರವಸೆಯ ಭಾಸ

ಇನ್ನೊಂದು ಮುಖ : ಕಪ್ಪು ಹೆಣ್ಣು ಕೊನೆಗೂ ಕವಿಗೆ ಒಲಿದಿದ್ದಾಳೆ. ಇಬ್ಬರೂ ಒಬ್ಬರನ್ನೊಬ್ಬರು ನಂಬಿಸುವ ಆಟ ಹೂಡಿದ್ದಾರೆ. ಆ ಹತ್ತು ಹಲವರ ಹೆಣ್ಣು ತಾನು ವಿಶ್ವಾಸಾರ್ಹಳೆಂದು ತೋರಿಸಿಕೊಳ್ಳಬೇಕು ; ಈ ಹರೆಯ ಕಳೆದ ಕವಿ ತಾನು ಅವಳಿಗೆ ತಕ್ಕವನೆಂದು ಕಾಣಿಸಿಕೊಳ್ಳಬೇಕು. ಈ ಬಗೆಯ ತೋರ್ಕೆ-ನಂಬಿಕೆಗಳೇ ಪ್ರೇಮದ ಜಾಯಮಾನವಂತೆ !

ಅವಳು ಸಟೆ ನುಡಿವುದನು ಕಂಡರಿತರೂ ಕೂಡ
ಸತ್ಯವತಿಯೆಂದಾಣೆಯಿಟ್ಟೊಡನೆ ನಂಬುವೆನು ;
ಲೋಕ ಮೆಚ್ಚುವ ಕುಶಲ ತಂತ್ರಗಳನರಿಯದವ,
ಕಲಿಯದವನೀ ಯುವಕನೆಂದುಕೊಂಡಾಳೆಂದು !
ನನ್ನ ಹರಯದ ಏರುಗಾಲವಿಳಿದಿಹುದೆಂದು
ಅರಿತರೂ ನಾ ಹರಯದವನೆಂದೆ ನಂಬಿಹಳು !
ನಾನು ಸುಮ್ಮನೆ ಅವಳ ಸುಳ್ಳುನುಡಿ ಮನ್ನಿಸುವೆ ;
ಉಭಯ ಪಕ್ಷದಿ ದಿಟವು ಅಡಗಿರುವುದರಿತಿರುವೆ !
ಆದರೆಲ್ಲಿಯ ತನಕ ಅವಳು ಸಟೆಯಾಡುವಳು ?
ನಾನು ಎಲ್ಲಿಯ ತನಕ ಯುವಕನೊಲು ನಡೆದೇನು !
ಭರವಸೆಯ ಈ ಬಗೆಯ ಭಾಸದೊಳೆ ಸಂತೃಪ್ತಿ
ಪಡೆವುದಲ್ತೇ ಕಾಲಮಿತಿಯನರಿಯದ ಪ್ರೀತಿ !
ಅಂತೆಯೇ, ನಾವಿಬ್ಬರೆದುರು ಸಟೆಯಾಡುವುದು ;
ಮುಖಸ್ತುತಿಯ ತಪ್ಪಿನೊಳೆ ತೃಪ್ತಿಯನು ಪಡೆಯುವುದು ! (ಸಾನೆಟ್ 138)

— ಬಿ. ಎ. ಸನದಿ

## ಸಾವೆ ಸತ್ತರೆ ಒಮ್ಮೆ . . .

ಇದೊಂದು ಅಪರೂಪದ ಸಾನೆಟ್. ಇದರ ಧಾಟಿ ಇತರ ಸಾನೆಟ್ಟುಗಳದ್ದಕ್ಕಿಂತ ತುಂಬ ಬೇರೆಯಾಗಿದೆ : ಇದು ಹದಿನಾರಾಣೆ ಆಧ್ಯಾತ್ಮಿಕ. ದೇಹದ ನಶ್ವರತೆಯನ್ನು ಎತ್ತಿ ತೋರುವ ಇಲ್ಲಿನ ವೇದಾಂತಿಕ ದೃಷ್ಟಿ ಕಪ್ಪು ಹೆಣ್ಣಿನ ಸಂಗದಲ್ಲಿ ಕವಿ ಕಲಿತ ಪಾಠವೇನೊ !

ಬಡ ಆತ್ಮವೇ, ನನ್ನ ಪಾಪಭೂಮಿಯ ಕೇಂದ್ರ
ನೀನು, ಈ ಪುಂಡುಪಡೆಗಳ ಗಸ್ತು ನೆಲಸುತ್ತುವ.
ಹೊರಗೋಡೆಗಳಿಗಷ್ಟು ಹರ್ಷವರ್ಣ ದುಬಾರಿ
ಬಳಿದು, ಒಳಗೇ ಕ್ಷಯಿಸಿ ಕ್ಷಾಮನವೆಯುವೆಯೇಕೆ ?
ಅಡವು ಪಡೆದದ್ದು ನಾಲ್ಕೇ ದಿನಕೆ, ಇದು ಖೊಟ್ಟಿ
ಕರಗುವರಗಿನ ಮಹಲಿಗೀ ವೆಚ್ಚ ಬಲು ತುಟ್ಟಿ.
ಈ ಹೆಚ್ಚಳಕ್ಕೆ ವಾರಸುದಾರ ಹುಳುಗಳಿವೆ
ಅವು ತಿನ್ನಲೆನ್ನುವೆಯ, ದೇಹದಂತ್ಯವು ಹೀಗೆ ?
ಅಲ್ಲ. ಚಾಕರನ ನಷ್ಟದ ಮೇಲೆ ನೀ ಬದುಕು.
ಅದು ಕ್ಷಯಿಸಿ ವರ್ಧಿಸಲಿ ನಿನ್ನ ಬೊಕ್ಕಸ ಸರಕು.
ಉಗ್ರಾಣ ತುಂಬಿರಲಿ. ಜಗುಲಿ ಶ್ರೀಮಂತಿಕೆಯ
ಕೊನೆಗೊಳಿಸು. ಬಾಳ್ ಕಿಲುಬು ಮಾರಿ ದಿವ್ಯವ ಕೊಳ್ಳು.
    ಜೀವ ಮೇಯುವ ಮೃತ್ಯುವನ್ನುಂಡು ನೀ ಬಾಳು
    ಸಾವೆ ಸತ್ತರೆ ಒಮ್ಮೆ ಮತ್ತಿರದು ಮರಣ ಮನೆಹಾಳು. (ಸಾನೆಟ್ 146)

—ಕೆ. ವಿ. ಸುಬ್ಬಣ್ಣ

# ಗೀತಗಳು

## ಅಡವಿಮರದಡಿಯಲ್ಲಿ

ತಮ್ಮಸಿಂದ ದೇಶಭ್ರಷ್ಟನಾದ ರಾಜ್ಯದ ಹಿರಿಯ ಡ್ಯೂಕ್ ಆರ್ಡೆನ್ ಬನ ಸೇರಿ, ಪ್ರಕೃತಿಯ ಮಡಿಲಿನಲ್ಲಿ ಹೊಸ ಸುಖ ಕಂಡುಕೊಂಡಿದ್ದಾನೆ. ಅಲ್ಲಿ ಅವನ ಸಂಗಡಿಗರಲ್ಲೊಬ್ಬನಾದ ಏಮಿಯನ್ ಹಾಡುವ ಗೀತಗಳಿವು.

ಅಡವಿಮರದಡಿಯಲ್ಲಿ
ನನ್ನೊಡನೆ ಕೆಡೆದಲ್ಲಿ,
ಇನಿಯ ಹಕ್ಕಿಯ ಕೊರಲ

ತನ್ನ ಕೊರಲಲಿ ತಂದು ನಲಿವನಾರೈ—
ಇತ್ತಬಾ, ಇತ್ತಬಾ, ಇತ್ತಬಾರೈ,
ಎತ್ತ ನೋಡಿಲ್ಲೆಲ್ಲ
ಮತ್ತೆ ಹಗೆಯೊಂದಿಲ್ಲ
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೈ.

ಆಸೆಬಲೆಯನು ತೊಲಗಿ,
ಬಿಸಿಲ ಕಾಯುತ ಮಲಗಿ,
ಉಣ್ಣುವೂಟವ ಕಂಡು,
ತಣ್ಣನೆಯೆ ತಣಿದುಂಡು ನಲಿವನಾರೈ—
ಇತ್ತಬಾ, ಇತ್ತಬಾ, ಇತ್ತಬಾರೈ,
ಎತ್ತ ನೋಡಿಲ್ಲೆಲ್ಲ,
ಮತ್ತೆ ಹಗೆಯೊಂದಿಲ್ಲ,
ಕೊರೆವ ಚಳಿ ಬಿರುಗಾಳಿಯಲ್ಲದಿಲ್ಲೈ.

— 'ಶ್ರೀ'

ಮೂಲ: 'Under the greenwood tree'.
**'ಆ್ಯಸ್ ಯು ಲೈಕ್ ಇಟ್',** II. v. 1-8; 36-43.
'ಇಂಗ್ಲಿಷ್ ಗೀತಗಳು' ಸಂಗ್ರಹದಿಂದ.

## ಬೀಸು ಬೀಸೆಲೆ ಚಳಿಯ ಗಾಳಿ

ಬೀಸು ಬೀಸೆಲೆ ಚಳಿಯ ಗಾಳಿ;
ಪಡೆದ ನೆರವನು ಮರೆವನಳತೆಗೆ
ಮರುಕವಳಿದವನಲ್ಲ ನೀ.
ನಿನ್ನ ಹಲ್ಲಿಗೆ ಇಲ್ಲವಾ ಮೊನೆ
ಇಲ್ಲ ನಿನ್ನನು ಕಾಂಬ ಯಾತನೆ
ನಿನ್ನುಸಿರು ಗಡುಸಾದರೂ.
ಹೈ ಹೊ — ಹಾಡಿರಿ, ಹೈ ಹೊ ಎನ್ನುತ
ಹಸುರು ಬೇಲಿಯ ಹೊದರಿಗೆ.
ಬಹಳ ಮಟ್ಟಿಗೆ ನಟನೆ ನೇಹ
ಒಲುಮೆ ಬಲು ಸಲ ಬರಿಯ ದ್ರೋಹ
ಇರಲಿ, ಎತ್ತಿರಿ ದನಿಯ "ಹೈ ಹೋ"
ಹಸುರು ಬೇಲಿಯ ಹೊದರಿಗೆ — ಈ
ಬದುಕೆ ಸರಿ ಬಲು ಹಿಗ್ಗಿಗೆ.

ಘನಿಸು ಘನಿಸೆಲೆ ಕಹಿಯ ಬಾನೇ,
ಉಪಕೃತಿಯ ವಿಸ್ಮರಣೆಯುಳತೆಗೆ
   ಕಚ್ಚಿ ಘಾತಿಸಲರಿಯೆ ನೀ.
ನೀರುಗಳ ಕಿವಿಚಿದರು ನೀನು
ನಿನ್ನಿರಿತ ಸಮನಪ್ಪುದೇನು
   ಮರೆವ ನೇಹಿಗನಿರಿತಕೆ ?
ಹೈ ಹೊ – ಹಾಡಿರಿ, ಹೈ ಹೊ ಎನ್ನುತ
ಹಸುರು ಬೇಲಿಯ ಹೊದರಿಗೆ.
ಬಹಳ ಮಟ್ಟಿಗೆ ನಟನೆ ನೇಹ
ಒಲುಮೆ ಬಲು ಸಲ ಬರಿಯ ದ್ರೋಹ
   ಇರಲಿ, ಎತ್ತಿರಿ ದನಿಯ "ಹೈ ಹೋ"
   ಹಸುರು ಬೇಲಿಯ ಹೊದರಿಗೆ — ಈ
   ಬದುಕೆ ಸೈ ಬಲು ಹಿಗ್ಗಿಗೆ.

— ಪು ತಿ ನ

ಮೂಲ : 'Blow, blow, thou winter wind'.
'ಆ್ಯಸ್ ಯು ಲೈಕ್ ಇಟ್', II. vii. 174-193.

## ವಸಂತ—ಶಿಶಿರ

ನೆರೆಯ ನವರೆ ದೇಶಕ್ಕೆ ಅತಿಥಿಯಾಗಿ ಬಂದ ಫ್ರಾನ್ಸಿನ ರಾಜಕುಮಾರಿಯ ಗೌರವಾರ್ಥವಾಗಿ ಅಲ್ಲಿನ ಪ್ರಜೆಗಳು ಆಡಿತೋರಿಸುವ 'ಪ್ರಸಂಗ'ವೊಂದರ ಕೊನೆಯ ಗೀತಗಳಿವು.

**ವಸಂತ :** ರಂಗುರಂಗಿನ ಡೈಸಿಗಳು
ನೀಲಿಯ ವಯಲೆಟ್ಟು
ಬೆಳ್ಳಗೆ ಬೆಳಗುವ ಲೇಡಿ ಸ್ಮಾಕ್ಸ್
ಹಳದಿಯ ಬಣ್ಣದ ಕಕ್ಕೂ ಬಡ್ಸ್
ಹಿಗ್ಗನು ಬಳಿದಿರೆ ಹೊಲಹೊಲಕೆ
ಮರಕೂ ಮರಕೂ ಕೋಗಿಲೆ ಕುಳಿತು
ಗಂಡಂದಿರ ಮೂಕರಿಸುವುದು —
ಏಕೆನೆ, ಇಂತಲ್ಲವೆ ಅದು ಕೂಗುವುದು—"ಕಕೂ"

"ಹೆಂಡಿರು ಮಿಂಡರಿಗಾದರು, ಮರುಳೇ
ಕಕೂ ಕಕೂ"—ಎದೆ ನಡುಗುವ ಸರ
ಗಂಡರ ಕಿವಿಗಿದು ಬಲು ಘೋರ. [1]

ಕುರುಬರೂದೆ ಜವೆ ಹುಲ್ಲಿನ ಪೀಪಿ
ಉಳುವವಗಾಗಲು ಗೆಲು ಲಾರ್ಕ್ ಗಂಟೆ
ಅಡಿಯಿಡಲಾವು ಕಾಗೆ ಕರಿ ಚಿಕ್ಕ
ಕನ್ಯೆ ಮಡಿಮಾಡೆ ಬೇಸಗೆಯುಡುಪ
ಕೋಗಿಲೆ ಆ ಸಮಯದಿ ಮರಮರದಿ
ಮದುವೆಯಾದವರ ಮಾಕರಿಸುವುದು—
ಇಂತಲ್ಲವೆ ಅದು ಸರ ತೆಗೆಯುವುದು—"ಕಕೂ"
"ಹೋದರು ಹೆಂಡಿರು ಮಿಂಡರ ಜತೆಗೆ
ಕಕೂ ಕಕೂ" — ಭೀಕರ ನುಡಿಯೋ, —
ಗಂಡಂದಿರಿಗಿದು ಕಚ್ಚು ಕಹಿ.

**ಶಿಶಿರ:** ಮಂಜಿನ ಹರಳು ಗೋಡೆಗೆ ನೇಲೆ
ಕುರುಬ ಡಿಕ್ಕು ತನ್ನ ಗುರುಗಳೂದೆ
ಅಂಗಳಕೊಯ್ಯಲು ಟಾಂ ಸೌದೆಗಳ
ಗಡ್ಡೆಯು ಕಟ್ಟಲು ಕಂಚೊಳು ಹಾಲು
ನೆತ್ತರಿಗಾಗಲು ಚಿವುಟಿನ ನೋವು
ದಾರಿಗಳೆಲ್ಲವು ಬಲು ಹೊಲಸಾಗೆ
ಆಗಿರುಳೊಳು ಬಿರುಕಂಗಳ ಗೂಬೆ
ಸರವೆತ್ತುವುದು — "ಟು ವ್ಹಿಟ್
ಟುಹೂ" — ಗೆಲುವಿನ ಮಟ್ಟು
ಬಟ್ಟೆಯ ಸೋದಿಸೆ ಮಣಕಿನ ಜೋನ್.

ಊಳುತೆತ್ತಲೂ ಬೀಸಲು ಗಾಳಿ
ಕೆಮ್ಮಲೊಳದ್ದಲು ಪಾದ್ರಿಯ ಪಾಠ

---

[1] 'ಕಕೂ' ಶಬ್ದ ದ್ವಂದ್ವಾರ್ಥಸೂಚಕ. 'ಕೋಗಿಲೆ', 'ಕೋಗಿಲೆಯ ಕೂಗು' ಎಂದಲ್ಲದೆ 'ಹಾದರಗಿತ್ತಿಯ ಗಂಡ' (cuckold, from Fr. *cucuault—cucu*, cuckoo) ಎಂಬ ಅರ್ಥವೂ ಅದಕ್ಕಿದೆ. ಕವಿ ಆ ಶ್ಲೇಷೆಯ ಉಪಯೋಗ ಪಡೆದು ಕೋಗಿಲೆ ಕೂಗಿದಾಗ ಅದು ಮನುಷ್ಯನನ್ನು "ಮಿಂಡನ ಬೆನ್ನು ಹತ್ತಿದ ಹೆಂಡತಿಯ ಗಂಡ ನೀನು" ಎಂದು ಅಣಕಮಾಡುತ್ತಿದೆಯೆಂದು ಕಲ್ಪಿಸಿದ್ದಾನೆ. — ಸಂ.

ಮಂಜೊಳು ಕುಳಿತಿರೆ ಬಿಮ್ಮನೆ ಹಕ್ಕಿ
ಕೆಂಪೇರಲು ಮರಿಯಾನಳ ಮೂಗು
ಸುಟ್ಟ ನಳ್ಳಿ ಬೋಗುಣಿಯೊಳು ಹಿಸ್ಸೆನೆ
ಆಗಿರುಳೊಳು ಬಿರುದಿಟ್ಟಿಯ ಗೂಬೆ
ಸರ ತೆಗೆಯುವುದು —"ಟು ವ್ಹಿಟ್
ಟುಹೂ"— ಗೆಲುವಿನ ಮಟ್ಟು
ಬಟ್ಟೆಯನಿಳಿಸಲು ಮಣಕಿನ ಜೋನ್.

— ಪು ತಿ ನ

ಮೂಲ : Spring—Winter.
**'ಲವ್ಸ್ ಲೇಬರ್ಸ್ ಲಾಸ್ಟ್'**, V. ii. 881-916.

## ತೆಗೆ, ಓ, ತೆಗೆ

ಮದುವೆಯಾಗುವೆನೆಂದು ನಂಬಿಸಿ ಕೈಕೊಟ್ಟ ನಲ್ಲ ಏಂಜೆಲೋನಿಂದ ವಂಚಿತಳಾದ ಮರಿಯಾನ ಈ ಗೀತದಲ್ಲಿ ತನ್ನ ಬಯಕೆಯ ನೆನಪನ್ನು, ಅದು ತಂದ ನೋವನ್ನು ತೋಡಿಕೊಂಡಿದ್ದಾಳೆ.

ತೆಗೆ, ಓ, ತೆಗೆ, ನಿನ್ನಾ ತುಟಿಗಳನು
ಕಡು ಸವಿ ಹುಸಿಯಾಣೆಯನಿಟ್ಟವನು
ಆ ಕಂಗಳ—ಮೂಡಣ ಮುಂಬೆಳಕನು—
ಹಗಲನೆ ಬಳಿಗೆಡಿಸುವ ದೀಪ್ತಿಗಳ.

ಆದೊಡೆ ತಾರೆನ್ನಾ ಮುದ್ದುಗಳ, ತಾ ತಾ ಮರಳಿ
ಒಲುಮೆಯ ಮುದ್ರೆಗಳ—
ಆದೊಡೆ ಬರಿದೆಯೆ ಒತ್ತಿದವ
ಬರಿದೆಯೆ ಒತ್ತಿದವ.

— ಪು ತಿ ನ

ಮೂಲ : 'Take, O, take those lips away'.
**'ಮೆಷರ್ ಫರ್ ಮೆಷರ್'**, IV. i. 1-6.

## ಅಂಜದಿರು

ಸಂಮೋಹನ-ದ್ರವ್ಯವೊಂದನ್ನು ಸೇವಿಸಿ ಮೂರ್ಛೆಹೋದ ಇಮೊಜೆನಳ ಮುಖ ಮರಣದ ಛಾಯೆಯನ್ನು ತಳೆದಿದೆ. ಅವಳ ತಮ್ಮಂದಿರಾದ ಗಿಡೇರಿಯಸ್ ಮತ್ತು ಎರ್ವಿರೇಗಸರು ಅಕ್ಕ ಸತ್ತಳೆಂದು ಭಾವಿಸಿ ಅವಳ 'ಮೃತದೇಹ'ದ ಮುಂದೆ ಈ ಗೀತವನ್ನು ಹಾಡುತ್ತಾರೆ.

ಇನ್ನು ಮೇಲಂಜದಿರು ಬಿಸಿಲ ಬೇಗೆಗೆ ನೀನು
ಬೆನ್ನೆಲುಬು ಕೊರೆವಂಥ ಚಳಿಗಾಳಿಗೆ.

## ಷೇಕ್ಸ್ಪಿಯರಿಗೆ ನಮಸ್ಕಾರ

ದಿನದಿನದ ದುಡಿಮೆಯನು ದುಡಿದು ಮುಗಿಸಿಹೆ ನೀನು
ಕೊನೆಯಾಸರವ ಸೇರುವೀ ವೇಳೆಗೆ.
ಇದ್ದವರು ಇಲ್ಲದರು ಮನೆಗೆ ಮರಳುವರಯ್ಯ
ಸಲ್ಲಬೇಕಾದ ದಿನಗೂಲಿ ಸಂದು
ಬಂಗಾರದಂಥ ಹುಡಿಗೆಯರು ಹುಡುಗರು ತಾವು
ಮುಸರೆಯವರಂತಾಗಿ ಮಣ್ಣಿನೊಡನೊಂದು.

ಉಳ್ಳವರ ಉರಿಮೋರೆಗಂಜದಿರು ನೀನಿನ್ನು
ಉಗ್ರದಂಡವ ದಾಟಿದಗ್ರಗಣಿ ನೀನು.
ಅನ್ನವಸ್ತ್ರದ ಚಿಂತೆಯಾವರಣ ನಿನಗೇಕೆ ?
ಬತ್ತಲೇನದು ನಿನಗೆ ಮುತ್ತಲೇನು ?
ಕಾಲ ಬಂದಿರಲಹುದು ರಾಜದಂಡವು ಮಣ್ಣು.
ಅತುಲ ವಿದ್ಯೆಯು ಮಣ್ಣು ವೈದ್ಯ ಮಣ್ಣು
ಓ ! ನಿಯತಿನಿಯಮವಿದ ಮೀರಿದವರೇ ಇಲ್ಲ
ಮಣ್ಣು ಮುಕ್ಕಿದರೆಲ್ಲರೂ ಮುಚ್ಚಿ ಕಣ್ಣು.

ವಜ್ರಿಯಾ ವಜ್ರನಿರ್ಘೋಷಕಂಜದಿರಿನ್ನು
ಅಂಜದಿರು ಕಾರ್ಗಾಲ ಕೋಲ್ಮಿಂಚಿಗೆ
ಪಿಸುಣರಾಪಾದನೆಗೆ ನಿಂದಕರ ನಿಂದನೆಗೆ.
ಗೆರೆಯೆಳೆದೆ ಸುಖದುಃಖಗಳ ಹೊಂಚಿಗೆ.
ತರುಣ ಕಾದಲರೆಲ್ಲ ಓ ಸಕಲ ಪ್ರೇಮಿಗಳು
ಸಹಿಯಿಕ್ಕುವರು ಮಣ್ಣಿಗಾಗಿ ಭರತಿ
ಮಣ್ಣಿನಾ ಮಾಂಡಲಿಕರಾಗಿ ನಿನ್ನೊಲು ಬೀಡು
ಬಿಡದೆ ಗತಿಯೇ ಇಲ್ಲ ಬರಲು ಸರತಿ.

— ವಿನಾಯಕ

ಮೂಲ : 'Fear no more the heat o' th' sun'.
'ಸಿಂಬೆಲೈನ್', IV. ii. 258-275.





# ನಾಟಕಗಳಿಂದ ಆರಿಸಿದ

# ಭಾಗಗಳು

[ಪ್ರಾಯಶಃ 'ಶ್ರೀ' ಅವರಿಗೂ ಸ್ವಲ್ಪ ಹಿಂದೆಯೋ ಅಥವಾ ಅವರ ಸರಿಸುಮಾರಿಗೋ ಇಂಗ್ಲಿಷ್ ಕಾವ್ಯ-ಸಾಹಿತ್ಯದ ಮುತ್ತುರತ್ನಗಳನ್ನು ಹೊಸಗನ್ನಡ ಸಾಹಿತ್ಯಕ್ಕೆ ಪರಿಚಯ ಮಾಡಿಕೊಟ್ಟ ಇನ್ನೊಬ್ಬ ಪ್ರಮುಖರೆಂದರೆ ದಿ॥ ಹಟ್ಟಿಯಂಗಡಿ ನಾರಾಯಣರಾಯರು (1863—1921). ಅವರ 'ಆಂಗ್ಲಕವಿತಾ ಸಾರ' ಗ್ರಂಥದಲ್ಲಿ ಇಂಗ್ಲಿಷ್ ಕಾವ್ಯಕೃತಿಗಳಿಂದ ಆಯ್ದು ಮಾಡಿದ ಅನುವಾದಗಳಿವೆ. ಅದರಲ್ಲಿ ಷೇಕ್-ಸ್ಪಿಯರನ ನಾಟಕಗಳಿಂದ ಹನ್ನೊಂದು ಕವಿತಾಖಂಡಗಳನ್ನು ಆರಿಸಿ ಇಪ್ಪತ್ತೈದು ಪದ್ಯಗಳಲ್ಲಿ 'ಸುಭಾಷಿತ ಕಲಾಪ'ವೆಂಬ ಶೀರ್ಷಿಕೆಯಲ್ಲಿ ಅನುವಾದಿಸಿ ಪ್ರಕಟಿಸಿದ್ದಾರೆ. ಈ ಗ್ರಂಥ ದುರ್ಲಭ. ದೊರೆತ ಕೆಲವು ಪದ್ಯಗಳನ್ನು ಇಲ್ಲಿ ಕೊಡಲಾಗಿದೆ. "ಸುರಪತಿ ಸಿಡಿಲಿನಿಂದ . . . ." ಎಂಬ ಸಾಲಿನಿಂದ ಮೊದಲಾಗುವ ಪದ್ಯವನ್ನು ಶ್ರೀ ಎಸ್. ಅನಂತನಾರಾಯಣ ಅವರ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಗ್ರಂಥದಿಂದ ಎತ್ತಿಕೊಂಡಿದೆ. ಉಳಿದೆಲ್ಲವೂ ಮತ್ತು ಈ ಟಿಪ್ಪಣಿಗೆ ಸಾಮಗ್ರಿ ಸಹ ಶ್ರೀ ತೀ. ನಂ. ಶ್ರೀಕಂಠಯ್ಯ ಅವರ ಅನುಗ್ರಹದಿಂದ ದೊರೆತದ್ದು. —ಸಂ.]

## ಸುಭಾಷಿತ ಕಲಾಪ

ಮರುಳನೋಪನು ಸುಕವಿ ಕಲ್ಪನೆಯ ಮೂರ್ತಿಗಳು
ಇರದಮಿತ ಛಾಯೆಗಳು ಹುಚ್ಚಾಗಿಹವು;
ಗರವಟಿಗೆಯೋಪನಿಗೆ ಬೇಡತಿಯ ಮೋರೆಯಲಿ
ಸುರರನಿಳ್ಕುಳಿಗೊಳುವ ರತಿಯ ಚಲುವು.

ಕವಿಯ ಕಂಣಂದದಾ ವೇಶದಿಂದುರುಳಾಡಿ
ದಿನದೊಳಗು ಬುವಿಯೊಳಗು ತಿರುಗುತಿಹುದು,
ಅವಿಷಯವ ಕಲ್ಪನೆಯು ರೂಪಿಸಲು ಲೇಖಣಿಕೆ
ನವನಾಮಧಾಮಗಳನೊದಗಿಸುವುದು.

—'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್', V. i. 7-17.

ಕರುಣ ರಸ ಹಿಂಡಿ ತೆಗೆಯುವುದಲ್ಲ, ದಿವದಿಂದ
ಸುರಿವ ಶೀಕರದ ಸ್ವಭಾವಿ ಅಹುದು;
ಹರಸಿ ಹದುಳಿನಲಿರಿಸಿ ನೀಡುವನ ಪಡೆಯುವನ,
ಎರಡು ಗುಣದಿಂದ ಸುಕೃತಾರ್ಥವಹುದು.

ಹಿರಿಯರಲಿ ಹಿರಿದು, ಗದ್ದುಗೆ ಮಕುಟಗಳಿಗಿಂತ
ಅರಸನಲಿ ಮಿಗಿಲೆನಿಸಿ ಒಪ್ಪುತಿಹುದು;
ನರಪತಿಯ ದಂಡ ಲೌಕಿಕ ವಿಭವ ಲಾಂಛನವು,
ಗರಿಮ ಸಾಧ್ವಸಗಳಿಗೆ ಪೀಠವಹುದು.

ಕರುಣವೀ ದಂಡಾಂಕಿತ ಪ್ರಭುತ್ವಕೆ ಮೇಲು
ಧರಣಿಪರ ಹೃದಯದಲಿ ಪಟ್ಟವದಕೆ;
ಕರುಣದಿಂದವರ ಬಲ ನೀತಿಯನು ತಂಪಿಸಲು
ಪರಮೇಶನೀಶತೆಯ ಸಾಮ್ಯವದಕೆ.

— 'ದಿ ಮರ್ಚೆಂಟ್ ಅಫ್ ವೆನಿಸ್', IV. i. 181-94.

ಜಾತಿಮತ ಬೇರಾದರೇತಕ್ಕೆ ಶತ್ರುತ್ವ?
ನೂತನ ಪ್ರತನ ಮಾರ್ಗಸ್ಥರಾರು?
ಆತನಿಗು ಕಣ್ಣುಕೈ, ಈತನಿಗು ನೇತ್ರಕರ,
ಚೇತನೇಂದ್ರಿಯ ಗುಣಗಳಿರದರಾರು?

ಕಾಯಪೋಷಣದಲ್ಲಿ ನೋಯಿಸುವ ರುಜೆಯಲ್ಲಿ
ಮಾಯಿಸುವ ತೆರದಲಿತರತ್ವ ಎಲ್ಲಿ?
ಗಾಯಮಾಡಲು ರಕುತ, ಕಟ್ಟಾಡಿಸಿದರೆ ನಗೆ
ಸಾಯರೇ ವಿಷದಿಂದ, ಭೇದವೆಲ್ಲಿ?

— ಅದೇ, III. i. 54-61.

ಅರಿತವಗೆ ಸಂಕಷ್ಟ ಸುಖಲಾಭದವಕಾಶ
ದೊರೆಯುವುದು ಮಣಿಫಣಿಯ ಶಿರಸಿನಲ್ಲಿ;
ಮರಗಳಲಿ ಮಾತವನಿಗುಪಲಗಳ ಉಪದೇಶ
ಒರತೆಗಳಲೋದು ಶುಭ ನೋಡಿದಲ್ಲಿ.

—'ಆ್ಯಸ್ ಯು ಲೈಕ್ ಇಟ್', II. i. 12-17.

ನರಲೋಕವೆಲ್ಲ ನಾಟಕಶಾಲೆಯಂತಿರುತ
ಪುರುಷವನಿತೆಯರು ಬರಿಯಾಟದವರು.
ಮೆರೆದವರು ನಿಷ್ಕ್ರಮಿಸಿ ಹೆರರು ಪ್ರವೇಶಿಸುತ
ಪರಿಪರಿಯ ವೇಷಗಳ ನಟಿಸುತಿಹರು.

— ಅದೇ, II. vii. 139-142.

ದೀವಟಿಗೆಗಳ ಪರರ ಹಿತಕೆ ಹೊತ್ತಿಸಿದಂತೆ
ದೇವರು ಮನುಷ್ಯನನು ಯೋಜಿಸುವನು,
ಸೇವೆಯಿಂದುತ್ಕೃಷ್ಟ ಕಾರ್ಯಗಳ ಸಾಧನಕೆ
ಜೀವಗುತ್ತಮ ಶಕ್ತಿ ಪಾಲಿಸುವನು.

ಲೋಭಿ ಪ್ರಕೃತಿದೇವಿ, ಸರ್ವಶಕ್ತಿಪ್ರದಳು ;
ಲಾಭವೆಣಿಸದೆ ಒಂದು ಕಾಸ ಕೊಡಳು.
ಆ ಭರತಿವೃದ್ಧಿಯೊಡನವಳ ಸಾಲವ ತೆರಲು
ಶೋಭಿಸುವ ವರಗಳನು ನೀಡುತಿಹಳು.

— 'ಮೆಷರ್ ಫರ್ ಮೆಷರ್', I. i. 33-41.

ಸುರಪತಿ ಸಿಡಿಲಿನಿಂದ ಹೆಮ್ಮರಗಳನು ಸೀಳಿ
ಕಿರಿಯ ಗಿಡಗಳನುಳಿಸಿ ಕರುಣಿಸುವನು.
ನರನಲ್ಪಪದವಿಯಲಿ ಮಂಡಿಸಲು ಹೆಕ್ಕಳಿಸಿ
ಸುರರೆದುರೆ ಮಂಗಾಟವಾಡುತಿಹನು.

— ಅದೇ, III. ii. 114-121.[1]

**— ಹಟ್ಟಿಯಂಗಡಿ ನಾರಾಯಣರಾವ್**
'ಆಂಗ್ಲ ಕವಿತಾಸಾರ'ದಿಂದ.

[1] ಈ ಸಂದರ್ಭಸೂಚನೆಗಳು ಅನುವಾದಕರು ನಿರ್ದೇಶಿರುವವಲ್ಲ. ಮೂಲಪಾಠದೊಡನೆ ಅರ್ಥದ ತಾಳೆ ಹೊಂದಿಸಿ, ಅನುಮಾನದ ಮೇಲೆ ಅವನ್ನು ಕೊಡಲಾಗಿದೆ. — ಸಂ.



## ಎರಡನೆಯ ರಿಚರ್ಡ್: ಪದಚ್ಯುತಿಯ ದೃಶ್ಯ

ಗ್ಲಾಸೆಸ್ಟರನನ್ನು ಕೊಂದನೆಂಬ ಸುಳ್ಳು ಆರೋಪದ ಮೇಲೆ ಎರಡನೆಯ ರಿಚರ್ಡ್ ದೊರೆಯಿಂದ ಆರು ವರ್ಷಗಳ ಕಾಲ ದೇಶಭ್ರಷ್ಟನಾಗಿದ್ದ ಅವನ ದಾಯಾದಿ ಬೋಲಿಂಗ್ ಬ್ರೋಕ್ ಏಕಾಏಕಿ ಹಿಂದಿರುಗಿ ಬಂದು, ರಿಚರ್ಡ್ ರಾಜಧಾನಿಯಲ್ಲಿಲ್ಲದ ಹೊತ್ತಿನಲ್ಲಿ ದಂಗೆಯೆದ್ದು ರಾಜ್ಯವನ್ನು ಆಕ್ರಮಿಸಿಕೊಳ್ಳುತ್ತಾನೆ. ರಿಚರ್ಡನ ಕೈಸೆರೆಯಾಗುತ್ತದೆ. ಕೊಲೆಯ ವಿಚಾರಣೆಯಿಂದ ಮೊದಲಾಗುವ ಈ ದೃಶ್ಯದಲ್ಲಿ ಬೋಲಿಂಗ್‌ಬ್ರೋಕ್ ರಿಚರ್ಡನನ್ನು ಪದಚ್ಯುತಗೊಳಿಸಿ ಅವನ ದಂಡಮುಕುಟಗಳನ್ನು ಕಸಿದುಕೊಳ್ಳುವ ಚಿತ್ರಣವಿದೆ. ಒಂದು ದೃಷ್ಟಿಯಲ್ಲಿ ಈ ದೃಶ್ಯ ಸಾಂಕೇತಿಕ. ಎಲ್ಲ ಕಾಲಗಳ, ಎಲ್ಲ ದೇಶಗಳ ರಾಜಕೀಯ ಚರಿತ್ರೆಯ ಜೀವಾಳವೇ ಇದರಲ್ಲಿ ಅಡಗಿದೆ.

**ಸ್ಥಾನ:** ವೆಸ್ಟ್‌ಮಿನಿಸ್ಟರ್ ಹಜಾರ.

**ಪ್ರವೇಶ:** ಬೋಲಿಂಗ್‌ಬ್ರೋಕ್, ಆಮುರ್ಲಿ, ನಾರ್ದಂಬರ್‌ಲ್ಯಾಂಡ್, ಪರ್ಸಿ, ಫಿಟ್ಸ್‌ವಾಟರ್, ಸರ್ರಿ, ಪಾದ್ರಿ ಕಾರ್ಲಿಸ್ಲಿ, ಅಧಿಪಾದ್ರಿ ವೆಸ್ಟ್‌ಮಿನಿಸ್ಟರ್, ಒಬ್ಬ ಪ್ರಭು, ದೂತ, ಅಧಿಕಾರಿಗಳು ಮತ್ತು ಬೇಗಟ್.

**ಬೋಲಿಂಗ್‌ಬ್ರೋಕ್.** ಯಾರಯ್ಯ ಯಾರಲ್ಲಿ? ಕರೆ ಬೇಗಟನನಿತ್ತ.
ಅಳುಕದುಸಿರೊಳವಗೆಯನೀಗ, ಬೇಗಟ್, ಬೇಗ —
ಧೀರ ಗ್ಲಾಸೆಸ್ಟರನ ಸಾವಿನೊಳಮೆಯು ಗೊತ್ತೆ?
ರಾಜಕೈಂಕರ್ಯದಿಂದೊಡರಿಸಿದನದನಾವನ್?
ಅವನಕಾಲಿಕ ನಿಧನವನ್ನೊಡರಿಸಿದರಾರು?

**ಬೇಗಟ್.** ಹಾಗಾದರಾಮುರ್ಲಿ ಪ್ರಭುವನೀ ಕಡೆ ಕರೆಸು.

**ಬೋಲಿಂಗ್‌ಬ್ರೋಕ್.** ಬಂದು ನಿಲ್ಲಿವನೆದುರು ತಮ್ಮ ಆಮುರ್ಲಿ ನೀನ್.

**ಬೇಗಟ್.** ಒಮ್ಮೆ ಉಸಿರಿದುದನಂತಲ್ಲವೆಂಬುದ ನಿನ್ನ
ವೀರ ನಾಲಗೆ ಧಿಕ್ಕರಿಸದಿರದು ಬಲ್ಲೆ ನಾ.
ಗ್ಲಾಸೆಸ್ಟರನ ಕೊಲುವ ಸಂಚು ನಡೆಯುತ್ತಿದ್ದ
ಭೀಕರಾವಧಿಯಲ್ಲಿ—'ಆಂಗ್ಲ ರಾಜಾಸ್ಥಾನ

ದಿಂದ ಕೆಲೆ ಪಟ್ಟಣದ ಗಡಿಯುವರೆಗಿನ ನೆಲವನ್
ಅಳಿದೆನ್ನ ನೀಳ್ಗೈಲ ಪಿತೃವ್ಯಶಿರ ಮುಟ್ಟುವುದೆ ?'—
ಎಂದು ನೀನೊರೆದುದನು ಕೇಳಿದ್ದೆ ನಾನ್; ಅಲ್ಲ-
ದಿತರ ಮಾತುಗಳನೆಷ್ಟೋ ಹೇಳಿ ನೀನಂದು —
'ಲಕ್ಷವರಹಗಳ ಮೆಚ್ಚನು ಕೊಡಲು ಬಂದರೂ
ಅದರಾಸೆಗಾಗಿ ಬೋಲಿಂಗ್‌ಬ್ರೋಕನೀಯಾಂಗ್ಲ-
ರಾಜ್ಯಕ್ಕೆ ದೊರೆಯಾಗಿ ಬರುವುದನು ಸಂಮತಿಸೆನ್'-
ಎಂದು ನೀನೆಂದುದನ್ನೂ ನಾನು ಕೇಳಿದ್ದೆ.
ನನ್ನ ದಾಯಾದ ಸೋದರ ಸತ್ತರೀ ನಾಡ-
ದೆಷ್ಟು ಧನ್ಯತೆಯ ಪಡೆದೀತೆಂದು ಕೂಡ ನೀನ್
ಆಡಿದ್ದೆ.

ಆಮುರ್ಲೆ. ರಾಜಪುತ್ರರೆ, ಘನಸ್ಥರೆ, ನಾನ-
ದೇನೆಂದು ಈ ನೀಚಗುತ್ತರವ ಕೊಡಬಹುದು ?
ದಂಡಿಸಲು ಸರಿದೊರೆಯೆ ನನಗವನು? ನಾನೀಗ
ದಂಡಿಸಲೆ ಬೇಕಾಯ್ತು. ಇಲ್ಲದೊಡೆ ನನಗಿರುವ
ಮರ್ಯಾದೆ ಮುಸುಳಿಸುವುದಪವಾದದೀ ಜಿಹ್ವೆ
ಮಾಡಿದಪಲಾಪಫಲದಿಂದ. ನೋಡಿದೊ ನನ್ನ
ಶಪಥ, ಮರಣದ ಗಂಡು ಮುದ್ರೆ, ನಿನ್ನನ್ನೀಗ
ನರಕಾರ್ಹನೆಂದು ತೆಗೆದಿಟ್ಟದೆ. ನರಾಧಮಾ,
ಸುಳ್ಳು ಹೇಳುವೆ ನೀನು; ನೀನು ಹೇಳಿದ್ದೆಲ್ಲ
ಸುಳ್ಳೆಂದು ಸಾಧಿಸುವೆ. ನನ್ನ ವೀರಕೃಪಾಣ-
ದಲಗು ನಿನ್ನೆದೆಯ ತೀರಾ ಹೇಸು ನೆತ್ತರನು
ಮುಟ್ಟೆ ಹೊಲಸಾದೀತು—ಹುಸಿದ ಹೊಲೆಯುದರೊಳಿರೆ.

ಬೋಲಿಂಗ್‌ಬ್ರೋಕ್. ಸಹಿಸು, ಬೇಗಟ್, ಸಹಿಸು ; ಆ ವಿಷಯವೆತ್ತದಿರು.

ಆಮುರ್ಲೆ. ಒಬ್ಬನಿಲ್ಲದೆ ಹೋದರಿಲ್ಲಿಷ್ಟು ಜನರೆದುರು
ನನ್ನ ಕೆರಳಿಸಿದವನ ನಾ ಬಿಡುತ್ತಿರಲಿಲ್ಲ.

ಫಿಟ್ಸ್‌ವಾಟರ್. ನಿನ್ನಳವು ಕರುಣೆಯನ್ನಾಧರಿಸಿ ಸೈರಿಸಿದೆ
ಎನ್ನುವೆಯ ? ಹಾಗಾದರೆಲೆ ನಿನ್ನ ಶಪಥಕ್ಕೆ
ಪ್ರತಿಶಪಥ ನನ್ನದಿದೊ—ನೀನಲ್ಲಿ ನಿಂತಿಹುದ
ತೋರಿಸುವ ಈ ರಮ್ಯ ರವಿಯಾಣೆಯಾಗಿಯೂ
ನೀನಂತು ಹೇಳಿದ್ದ ಕೇಳಿದ್ದೆ ನಾನಾಗ;
ಘನವಂತನಾದ ಗ್ಲೌಸೆಸ್ಟರನ ಮರಣಕ್ಕೆ
'ನಾನೆ ಕಾರಣನ್' ಎಂದು ನೀ ಜಂಭ ಕೊಚ್ಚಿದ್ದೆ.
ಇಪ್ಪತ್ತು ಸಲ ನೀನು ಹೇಳಿಲ್ಲವೆಂದರೂ

ನಿನ್ನ ಹೇಳಿಕೆಯೆಲ್ಲ ಹುಸಿಯೆ ಸರಿ; ಈ ನನ್ನ
ಕರವಾಳ ಮೊನೆಯಿಂದ ಅನೃತಕ್ಕೆ ತವರಾದ
ನಿನ್ನೆದೆಯ ಕಡೆಗೆ ನಾ ತಿವಿದದನ್ನಟ್ಟುವೆನು.

**ಆಮುರ್ಲಿ.** ಆ ದಿನವ ನೋಡಲೆಂದೂ ಉಳಿಯಲಾರೆ ನೀನ್;
ಎಲ್ಲಿ ನಿನಗಾ ಧೈರ್ಯ? ಹೆಂಬೇಡಿ, ತೊಲಗಾಚೆ!

**ಫಿಟ್ಸ್‌ವಾಟರ್.** ನನ್ನಾತ್ಮದಾಣೆ—ಇದೆ ಆಗದೇನಾ ಗಳಿಗೆ?

**ಆಮುರ್ಲಿ.** ಫಿಟ್ಸ್‌ವಾಟರನೆ, ನಿನಗೆ ನರಕ ಕಟ್ಟಿಟ್ಟದ್ದು
ಈ ಮಾತನಾಡಿದ್ದಕೆಲವೊ ಬಾಯ್ಮುಚ್ಚು, ನಡೆ.

**ಪರ್ಸಿ.** ಆಮುರ್ಲಿ, ಹುಸಿವೆ ನೀನೀ ಪ್ರಕರಣದಲ್ಲವನು
ಎಷ್ಟು ಸತ್ಯಾತ್ಮನೋ ನೀನಷ್ಟುಸತ್ಯಾತ್ಮ.
ನೀನಷ್ಟುರವನೆಂದು ಸಿದ್ಧಮಾಡಲು ನಾನು
ಪ್ರಾಣಪಣವಿಟ್ಟಿರುವೆ; ಧೈರ್ಯವಿದ್ದರೆ ನೀನು
ಸ್ವೀಕರಿಸು ನಾನೀಯುವೀ ರಣಾಹ್ವಾನವನು!

**ಆಮುರ್ಲಿ.** ನಾನು ಸ್ವೀಕರಿಸದಿರೆ ಕೊಳೆತುಹೋಗಲಿ ನನ್ನ
ಕೈಗಳಿನ್ನೆಂದಿಗೂ ನನ್ನ ಹಗೆ ಹೊತ್ತಿರುವ
ಚಮಕಿಪ ಶಿರಸ್ತ್ರಾಣದೆದುರೀ ಪ್ರತೀಕಾರ-
ನಿಷ್ಠ ಖಡ್ಗವ ಝಳಪಿಸಲು ಸಾಧ್ಯವಿರದಂತೆ!

**ಮತ್ತೊಬ್ಬ ಪ್ರಭು.** ಹಾಗೆ ಮಾಡಲು ಕೊಡುವೆನಾಣತಿಯ ಭೂಮಿಗೇ —
ಬದ್ಧಪ್ರತಿಜ್ಞನಾದಾಮುರ್ಲಿ, ದಿನವಿಡೀ
ನಿನ್ನ ವಿದ್ರೋಹಿಕರ್ಣಗಳಲ್ಲಿ ಪಡಿನುಡಿವ
ಹಾಗೆ ಗರ್ಜಿಸಿ ತುಂಬಿಸುವೆನು ಸುಳ್ಳುಗಳನ್ನು
ಎಷ್ಟು ಬೇಕಾದರೂ ಛಲಿಸಿ ನಿನ್ನನು; ಇಕೋ
ಪಣವಿಡುವೆನೆನ್ನಮಾನವನಿದಕೆ, ಧೈರ್ಯವಿರೆ
ಒರೆಗೆ ಹಚ್ಚಲು ಹೊರಡದನ್ನು ಮುಟ್ಟಾಳನೇ!

**ಆಮುರ್ಲಿ.** ಇನ್ನಾರು ಜಿದ್ದುಕಟ್ಟುವರೆನ್ನ ಮೇಲೀಗ?
ಯಾರೇ ಬರಲಿ ಅವರ ಬಡಿದಪ್ಪಳಿಸುವೆನಿದೊ
ದೇವರಾಣೆಯ ಮಾಳ್ಪೆ — ನಿಮ್ಮಂಥ ಇಪ್ಪತ್ತು
ಸಾವಿರ ಮನುಷ್ಯರೆದುರಾದರೂ ಎದುರಿಸಲು
ಸಾವಿರಾಳುಗಳ ಬಲವಿದೆ ನೋಡಿ ನನ್ನೆದೆಗೆ.

**ಸರ್ರಿ.** ಘನವಂತ ಫಿಟ್ಸ್‌ವಾಟರ್, ಎನಗೆ ನೆನಪಿದೆ ಸ್ಪಷ್ಟ-
ವಾಗಿ ಆಮುರ್ಲಿ ಮೇಣ್ ನೀನು ಮಾತಾಡಿದ್ದು
ಯಾವ ಹೊತ್ತಿನೊಳೆಂದು, ನಾ ಮರೆಯಲಿಲ್ಲವದ.

**ಫಿಟ್ಸ್‌ವಾಟರ್.** ನಿಜ ನೀನು ಹೇಳಿದ್ದು, ನೀನಾಗ ಅಲ್ಲಿದ್ದೆ;
ಇದರ ಸತ್ಯತೆಯ ನೀನೆನ್ನೊಡನೆಯೇ ನೋಳ್ಪೆ.

ಸರ್ರಿ. ದೇವರಿರುವುದು ಎಷ್ಟು ಸತ್ಯವೋ ನಿನ್ನ ನುಡಿ
ಅಷ್ಟೇ ಅಸತ್ಯ—ಕುಲದೇವರಾಣೆಯಿದಕ್ಕೆ.

ಫಿಟ್ಸ್‌ವಾಟರ್. ಸುಳ್ಳು ಹೇಳುವೆ ಸರ್ರಿ.

ಸರ್ರಿ. ಮರ್‍ಯಾದೆಗೇಡಿಯೇ,
ನೀ ನುಡಿದ ಸುಳ್ಳ ಹೊರೆ ನನ್ನ ಖಡ್ಗಕ್ಕೆಷ್ಟು
ಭಾರವೆನ್ನಿಸಿತೆಂದರದು ಸುಳ್ಳುಗಾರನಾ-
ಗಿರುವ ನಿನ್ನೊಡನೆ ನಿಮ್ಮಪ್ಪನಾ ತಲೆಚಿಪ್ಪು
ಮಿಣ್ಣನೊರಗಿರುವ ನೆಲದಲ್ಲಿ ಮಲಗುವವರೆಗೆ
ಸೇಡುತೀರಿಸಿಕೊಳ್ಳಲೆದ್ದಿಹುದು ; ನನ್ನ ಮಾ-
ನವಿದಕ್ಕೆ ಪಣವಾಗಿ ಸಾಕ್ಷಿಗೊಡುತಿದೆ ನೋಡು—
ಧೈರ್ಯವಿದ್ದರೆ ಒರೆಗೆ ಹಚ್ಚು ದುರ್ವಾದಿಯೇ !

ಫಿಟ್ಸ್‌ವಾಟರ್. ಮುನ್ನುಗ್ಗುವಶ್ವವನ್ನೆಷ್ಟು ಮರುಳ್ತನದಿಂದ
ಬೆನ್ನುಚಪ್ಪರಿಸುವೆ ! ಇದೋ ನೋಡು ನಾನಿಲ್ಲಿ
ತಿನ್ನುವುದು, ಉಣ್ಣುವುದು, ಉಸಿರಾಡಿಸುವುದು ಮೇಣ್
ಬದುಕುವುದು ನಿಜವಿದ್ದ'ರೆಲೆಲೆ, ಏ ಸರ್ರಿ, ನೀ
ಹುಸಿವೆ, ನೀ ಹುಸಿವೆ, ನೀ ಹುಸಿವೆ'-ಎಂದೆನ್ನುತ್ತ
ಮುಖದ ಮೇಲುಗುಳುವೆನು ನಿರ್ಜನ ಸ್ಥಳದಲ್ಲಿ
ಕಂಡರೂ, ನಾನು ಸರಿಯೆಂದುದಕೆ ಬಲವಾಗಿ
ನಿನ್ನನ್ನು ಕಟ್ಟುವುದು ನನ್ನ ಧರ್ಮ. ನವೀನ-
ವಾದ ಈ ಜಗದಲ್ಲಿ ವರ್ಧಿಸುವ ಬಯಕೆಯಿಹ
ನನ್ನ ಪ್ರಾಮಾಣಿಕ ಪ್ರಾರ್ಥನೆಯು ಮನ್ನಿಸದ
ಪಾಪಕ್ಕೆ ಆಮುರ್ಲೆ ಪಕ್ಕಾದನಿಂದು ಮೇಣ್
ಘನ ಡ್ಯೂಕನನು ಕೊಲ್ಲಲೆಂದು ಕೆಲೆಯಲ್ಲಿ ನೀನ್
ಆಮುರ್ಲೆ, ನಿನ್ನಿಬ್ಬರಾಳುಗಳ ಕಳಿಸಿದುದ
ಗಡಿಪಾರಿಗೀಡಾದ ನಾರ್‌ಫೋಕ ತಿಳಿಸಿಹನು.

ಆಮುರ್ಲೆ. ನಾರ್‌ಫೋಕ ಹುಸಿದಿರುವನೆಂಬೆನ್ನ ಮಾತನ್ನು
ಶಪಥ ಮೂಲಕ ಹೇಳುತಿರುವೆನಿದ ನಿಮ್ಮಲ್ಲಿ
ನಿಜವಾದ ಕ್ರಿಸ್ತೀಯರಾರಾದರೂ ಇದ್ದ-
ರವರು ನಂಬಲಿ—ಇಕೋ ನಾರ್‌ಫೋಕನಿಗೆ ನಾನು
ಕೊಟ್ಟೆ ಕಾಳಗದ ಕರೆಯನ್ನು ; ಅವನಿಗೆ ತನ್ನ
ಮಾನವನ್ನುಳಿಸಿಕೊಳಲವಕಾಶ ದೊರಕಿದರೆ
ಬರಲಿ.

ಬೋಲಿಂಗ್‌ಬ್ರೋಕ್. ನಾರ್‌ಫೋಕ ತಾ ನಾಡೊಳಗೆ ಬರುವಂತೆ
ಗಡಿಪಾರಿನಾಜ್ಞೆಯನು ಹಿಂತೆಗೆದುಕೊಳುವರೆ-

ಗೀ ಭಿನ್ನಮತಗಳೆಲ್ಲಾ ಶಪಥಬಂಧದ-
ಲ್ಲಿರಲಿ. ನಾರ್‌ಫೋಕ ಬಿಡುಗಡೆ ಹೊಂದುವುದು ಖಚಿತ.
ನನ್ನ ಹಗೆಯವನು ದಿಟ — ಆದರೂ ಅವನೆಲ್ಲ
ಭೂಮಿಕಾಣಿಗಳನ್ನು, ಬಿರುದುಬಾವಲಿಗಳನು
ಮತ್ತೆ ಕೊಡಿಸುವೆನವಗೆ. ಅವನು ಮರಳಿದ ಬಳಿಕ
ಆಮುರ್ಲಿಗೆದುರಾಗಿ ತನಿಖೆ ನಡೆಸುವೆನವನ.

**ಕಾರ್ಲಿಸ್ಲಿ.** ಅಂಥ ಗೌರವದ ದಿನ ಬರಲಾರದಿನ್ನು ; ಗಡಿ-
ಪಾರಿಗೊಳಗಾದ ನಾರ್‌ಫೋಕ ಯೇಸುವಿಗಾಗಿ
ಕೀರ್ತಿಕರ ಕ್ರಿಸ್ತೀಯ ರಂಗದಲಿ ಹಲವು ಸಲ
ಕಾಳ ದಸ್ಯುಗಳೊಡನೆ, ತುರಕ–ಸಾರ್ಸೆನರೊಡನೆ
ಕ್ರೂಜೆ ಹಿಡಿದೆತ್ತಿ ಹೋರಾಡಿದನು ; ಸಮರದಲಿ
ತೊಳಲಿದನು —ಕೊನೆಗೆ ಇಟಲಿಗೆ ಹೋಗಿ ವಿಶ್ರಮಿಸಿ
ವೆನಿಸು ನಗರದ ನೆಲಕೆ ದೇಹವನು ಮುಡಿಪಿಟ್ಟ :
ಕ್ರಿಸ್ತಧ್ವಜವ ಹಿಡಿದು ಮರಣಪರ್ಯಂತವೂ
ಹೋರಾಡಿ ಸವೆದಂಥ ತನ್ನ ಶುದ್ಧಾತ್ಮವನು
ಕ್ರಿಸ್ತನಾಯಕನಿಗರ್ಪಿಸಿದ.

**ಬೋಲಿಂಗ್‌ಬ್ರೋಕ್.** ನಾರ್‌ಫೋಕ ಗುರು
ಸತ್ತುಹೋದನೆ ?

**ಕಾರ್ಲಿಸ್ಲಿ.** ನಾನು ಬದುಕಿದಷ್ಟೇ ಸತ್ಯ
ಆತ ಸತ್ತದ್ದು.

**ಬೋಲಿಂಗ್‌ಬ್ರೋಕ್.** ಆ ಅಬ್ರಹಾಮನ ತೊಡೆಯನ್
ಏರಿಸಲಿ ಅವನ ಮಧುರಾತ್ಮವನು ಮಾಧುರ್ಯ-
ಮಯ ಶಾಂತಿ ; ದೂರುಗಳ ಕೊಟ್ಟಿರುವ ಪ್ರಭುಗಳೇ
ತನಿಖೆ ನಡೆಸುವ ದಿನವ ಗೊತ್ತುಮಾಡುವವರೆಗೆ
ನಿಮ್ಮ ಮತಭೇದಗಳು ಶಪಥದಲ್ಲೇ ಇರಲಿ.

[ಯಾರ್ಕನ ಸಪರಿವಾರ ಪ್ರವೇಶ.

**ಯಾರ್ಕ್.** ಲ್ಯಾಂಕಾಸ್ಟರಿನ ಡ್ಯೂಕ್‌ಮಹಾಶಯನೆ ನಿನ್ನೆಡೆಗೆ
ಬಂದೆ ತೇಜೋಭಂಗ ಹೊಂದಿದ ರಿಚರ್ಡ್ ನೃಪತಿ-
ಯೆಡೆಯಿಂದ. ನಿನ್ನನ್ನು ತನ್ನುತ್ತರಾಧಿಕಾ-
ರಕ್ಕೆಂದು ತೆಗೆದುಕೊಂಡಿರುವನವ ಮನವೊಲಿದು ;
ಅವನೆತ್ತರದ ರಾಜದಂಡ ನಿನ್ನೀ ರಾಜ-
ಹಸ್ತಕ್ಕೆ ವಶ್ಯ ; ನೀನೇರವನ ಪೀಳಿಗೆಯ
ಸಿಂಹಾಸನವ — ನಾಲ್ಕನೆಯ ಹೆನ್ರಿಯೆಂದೆನಿಸಿ
ಬಾಳಯ್ಯ ಬಹುಕಾಲ — ಭದ್ರವಾಗಲಿ ನಿನಗೆ !

ಬೋಲಿಂಗ್‌ಬ್ರೋಕ್. ದೇವರಂಕಿತದೆ ಸಿಂಹಾಸನವನೇರುವೆನು.

ಕಾರ್ಲಿಸ್ಲಿ. ಆಯಿತಬ್ರಹ್ಮಣ್ಯ ; ದೇವ ನಿಲ್ಲಿಸಲಿದನು.
ರಾಜಶಕ್ತಿಗೆ ದುರ್ವಚಸ್ಸೆಂದು ಕಂಡರೂ
ಸತ್ಯ ಹೇಳುವುದೀಗ ಶ್ರೇಷ್ಠವೆನ್ನಿಸುತಿಹುದು—
ಘನ ರಿಚರ್ಡನ ಬೆಲೆಯ ಕಟ್ಟಬಲ್ಲಷ್ಟಿಲ್ಲಿ
ಘನವಂತಿಕೆಯದಾರಿಗಿದೆ ? ದೇವರೇ ಸಾಕ್ಷಿ!
ಅಂಥ ದುಷ್ಕಾರ್ಯಕ್ಕೆ ಕೈಹಾಕದಿರುವಂತೆ
ನಿಜವಾದ ಘನತೆ ಕೈಯಡ್ಡ ಮಾಡೀತಯ್ಯ.
ಯಾವ ಪ್ರಜೆ ದಂಡ ವಿಧಿಸುವನು ಸ್ವನೃಪಾಲನಿಗೆ ?
ಯಾವನಿಲ್ಲಿಹ ರಿಚರ್ಡನಿಗೆ ಪ್ರಜೆಯಲ್ಲದವ ?
ಕಳ್ಳರನ್ನೂ ಅವರ ಹೇಳಿಕೆಯ ಕೇಳದೆಯೆ
ಶಿಕ್ಷಿಸನದಾವನೂ ಆಪಾದನೆಯ ನಂಬಿ.
ಇಂತಿರಲು ರೂಢಿ, ದೈವಿಕ ಮಹಾಗಾಂಭೀರ್ಯ-
ಸಂಕೇತನಾಗಿ, ಆತನ ಕಡೆಯ ನಾಯಕೋ-
ತ್ತಮನಾಗಿ, ಯಜಮಾನನಾಗಿ, ಪ್ರತಿನಿಧಿಯಾಗಿ
ಅಭಿಷಿಕ್ತನಾದ, ಮಕುಟವ ಹೊತ್ತು ಬಹುಕಾಲ
ರಾಜ್ಯವಾಳಿದ ರಿಚರ್ಡನನವನಿಗಿಂತ ಕೀ-
ಳಾದ ಯಾವನು ಅವನ ಗೈರುಹಾಜರಿಯಲ್ಲಿ
ತಪ್ಪಿತಸ್ಥನೊ ಅಲ್ಲವೋ ಎಂದು ಹೇಳುವವ ?
ದೇವರಿದ ತಪ್ಪಿಸಲಿ ; ಕ್ರಿಸ್ತೀಯ ಜಗದಲ್ಲಿ
ಇಂಥ ಹೀನ ಕರಾಳ ಕಾಳ ಕಜ್ಜವ ಮಾಡ-
ಲೀ ಸುಧಾರಿಸಿದ ಜನರಿಳಿಯುವುದೆ ! ನಾನೀಗ
ಒಬ್ಬ ಪ್ರಜೆಯಾಗಿ ಇತರ ಪ್ರಜೆಗಳಿಗೆ ನುಡಿವೆ
ನನ್ನ ದೊರೆಗಾಗಿ ದಿವ್ಯಕ್ಷೋಭೆಯಿಂದೆದ್ದು:
ನೀವು ದೊರೆಯೆಂದು ಕರೆವೀ ಹಿಯರ್‌ಫರ್ಡ ತಾ
ದುಷ್ಟ ವಿದ್ರೋಹಿ ಹೆಮ್ಮೆಯ ಹಿಯರ್‌ಫರ್ಡ್-ದೊರೆಗೆ.
ಇವನಿಗಭಿಷೇಕ ಮಾಡಿದರೆ—ನುಡಿವೆ ಭವಿಷ್ಯ—
ಆಂಗ್ಲರಕ್ತವು ನೆಲಕ್ಕಭಿಷೇಕ ಮಾಡೀತು ;
ಈ ಕುಕೃತ್ಯಕ್ಕಾಗಿ ಭಾವಿಯುಗದವರೆಲ್ಲ
ಮರುಗದಿರರ್ ! ಎಯ್ದೀತು ಶಾಂತಿದೇವತೆ ತುರು-
ಷ್ಕರ ಕಡೆಗೆ, ಮಿಕ್ಕ ಧರ್ಮೀಯರೆಡೆ ನಿದ್ರಿಸಲು !
ಶಾಂತಿಪದವಾದಿಲ್ಲಿ ಪ್ರಕ್ಷುಬ್ಧ ಯುದ್ಧಗಳು
ನಡೆದಾವು ; ಸೋದರರ, ನೆಂಟರಿಷ್ಟರ ನಡುವೆ
ಘನಘೋರ ಘರ್ಷಣಗಳುಂಟಾಗಿ ಎಲ್ಲೆಲ್ಲು

ತುಂಬಿಹೋದೀತು ನರಕಧ್ವಾನ! ರಣಗಾನ,
ಭಯ, ದಿಗ್‌ಭ್ರಮೆ, ವಿಮರ್ದದಲ್ಲೋಲಕಲ್ಲೋಲ,
ದಂಗೆದಾಳಿಗಳಿಲ್ಲಿ ನಡೆದಾವು! ಈ ನೆಲವ
ಸತ್ತವರ ತಲೆಬುರುಡೆಗಳ ನಾಡು, ಗೊಲ್ಗೋಥ
ಎಂದು ಕರೆದಾರು! ಈ ರಾಜಮನೆತನವನ್ನು
ಇದರೆದುರು ಎತ್ತಿ ಕಟ್ಟಿದರೆ ಈ ದುರ್ಧರೆಯು
ಈವರೆಗೆ ಕಾಣದಿಹ ದುಃಖಕರ ವಿಭಜನೆಯ
ಕಂಡೀತು—ತಡೆಯಿರಿದನಿಲ್ಲೆ ನಿಲ್ಲಿಸಿರೀ ಅ-
ನರ್ಥ ಸಂಭವಿಸದಿರಲಯ್ಯ—ಸಂಭವಿಸಿದರೆ
ಪುತ್ರಪೌತ್ರರು 'ನಿಮಗೆ ನರಕ ತಪ್ಪದೆ ಇರಲಿ'
ಎಂದು ರೋದಿಸಿ ಜರೆದು ನೊರೆದು ಶಪಿಸದೆ ಬಿಡರು!

**ನಾರ್ದಂಬರ್‌ಲ್ಯಾಂಡ್.** ವಾದವನು ಸರಿಯಾಗಿ ಮಾಡಿದಿರಿ, ಪೂಜ್ಯರೇ,
ತಮ್ಮ ಶ್ರಮಕಾಗಿ ರಾಜದ್ರೋಹವನು ಹೊರಿಸಿ
ತಮ್ಮನ್ನು ಬಂಧಿಸಿಹೆವಿಲ್ಲಿ ನಾವೀಗ. ಓ
ವೆಸ್ಟ್‌ಮಿನಿಸ್ಟರ್ ಪ್ರಭುವೆ, ಇವನ ತನಿಖೆಯ ಕಾಲ
ಬರುವವರೆಗಿವನನ್ನು ಕಾದುಕೊಂಡಿರಬೇಕು.
ರಾಜಾಧಿಕಾರಿಗಳೆ, ಸಾರ್ವಜನಿಕರ ದಾವೆ-
ಗವಕಾಶವನ್ನು ಕೊಡಬೇಕೆಂದು ಬೇಡುವೆನು.

**ಬೋಲಿಂಗ್‌ಬ್ರೋಕ್.** ಕರೆತನ್ನಿರಾ ರಿಚರ್ಡನನಿಲ್ಲಿ; ನಿಮ್ಮೆಲ್ಲ-
ರೆದುರಾತ ನಮಗೆ ತನ್ನೆಲ್ಲವನ್ನೊಪ್ಪಿಸಲಿ:
ನಮ್ಮ ನಡೆ ಸಂದೇಹರಹಿತವಾಗಲಿ ಜನಕೆ.

**ಯಾರ್ಕ್.** ನಾನವನ ಕರೆತರುವೆ.

[ಯಾರ್ಕ್ ನಿಷ್ಕ್ರಮಿಸುತ್ತಾನೆ.

**ಬೋಲಿಂಗ್‌ಬ್ರೋಕ್.** ನೆರೆದಿರುವ ಪ್ರಭುಗಳೇ,
ನೀವೆಲ್ಲ ನಮ್ಮ ಬಂಧನದೊಳಿರುವಿರಿ, ನಿಮ್ಮ
ತನಿಖೆಯವಧಿಯವರೆಗೆ ಮುಕ್ತರಾಗಿರಲು ನೀವ್
ಹೊಣೆಗಾರರನು ಹುಡುಕಿ ತರಬೇಕು: ನಿಮ್ಮೊಲುಮೆ
ನಮಗೆ ಬೇಕಾಗಿಲ್ಲ; ನಿಮ್ಮ ನೆರವನು ನಾವು
ಬಯಸಿಲ್ಲ ಈವರೆಗೆ, ಈಗ ಬಯಸುವುದಿಲ್ಲ.

[ರಾಜಮುದ್ರೆಗಳನ್ನು ಹಿಡಿದ ಅಧಿಕಾರಿಗಳೊಡನೆ ಯಾರ್ಕನು ದೊರೆ ರಿಚರ್ಡನನ್ನು ಕರೆದುಕೊಂಡು ಪುನಃ ಪ್ರವೇಶಿಸುತ್ತಾನೆ.

**ದೊರೆ ರಿಚರ್ಡ್.** ಅಕಟ ನನ್ನೀವರೆಗಿನಾಳಿಕೆಯೊಳಿಟ್ಟುಕೊಂ-
ಡಿದ್ದ ದೊರೆತನದ ಕಲ್ಪನೆಗಳನು ತಲೆಯಿಂದ
ಕೊಡಹಿ ತೂರುವ ಮುನ್ನವೇ ಒಬ್ಬ ರಾಜನಿದಿ-

ರೇಕೆ ನನ್ನನ್ನು ಕರೆತರಲಾಯಿತೋ ಏನೊ!
ನಾನನುಗ್ರಹಕಾಗಿ ನೃಪನನೋಲಯಿಸುವುದ,
ಹೊಗಳುವುದ, ಬಾಗುವುದ, ಮಂಡಿಯೂರುವುದನಿ-
ನ್ನೂ ಕಲಿಯದಿರುವೆನ್; ಈ ಶರಣಾಗತ ಸ್ಥಿತಿಯನ್
ಎನಗರುಹಲೆಂದು ದುಃಖಕ್ಕೆ ಕಾಲಾವಧಿಯ
ನೀಡಿರೆನ್ನುವೆನ್; ಆದರೂ ನೆನೆದುಕೊಂಬೆ ನಾನ್
ಈ ಜನರು ನನಗೆ ತೋರಿದನುಗ್ರಹವನಹಹ!
ಇವರೆಲ್ಲ ನನ್ನವರೆ ಅಲ್ಲವೇ? 'ಭೋ ಪರಾಕ್'
ಎಂದು ಕೆಲ ಕಾಲ ಅಭಿನಂದಿಸಿಲ್ಲವೆ ನನ್ನ?
ಜೂಡಾಸ ಕ್ರಿಸ್ತನಿಗೆ ಹೀಗೆಯೇ ಮಾಡಿದ್ದ;
ಆದರವ ಹನ್ನೆರಡು ಜನರ ಮಧ್ಯದೊಳೊಬ್ಬ-
ನಲ್ಲಾದರೂ ಸತ್ಯವಂತಿಕೆಯ ಕಂಡ—ನಾ
ಹನ್ನೆರಡು ಸಾವಿರದ ನಡುವೆ ಕಾಣದೆ ಹೋದೆನ್
ಒಬ್ಬನಲ್ಲೂ ಸತ್ಯವಂತಿಕೆಯ—ದೇವರೇ
ದೊರೆಯ ರಕ್ಷಿಸು!—ಯಾವನೂ ಹೇಳಲಾರನೆ 'ತ-
ಥಾಸ್ತು' ಎಂದರರೆ ನಾ ಪಾದ್ರಿಯೂ ಕ್ಲಾರ್ಕನೂ
ಆಗಬೇಕೇನೀಗ? ಆಗಲಿ — ತಥಾಸ್ತು; ದೇ-
ವರು ರಾಜನನ್ನು ರಕ್ಷಿಸಲಿ ನಾನವನಲ್ಲ-
ವಾದರು ತಥಾಸ್ತು—ದೇವರು ನನ್ನನವನೆಂದು
ತಿಳಿದಿದ್ದರೊಮ್ಮೆ. ನೀವಾವ ಸೇವೆಯ ನೀಡ
ಲೆಂದೆನ್ನನೀ ಸ್ಥಳಕೆ ಕರೆತಂದು ನಿಲಿಸಿಹಿರಿ?

ಯಾರ್ಕ್. ನಿನ್ನ ಸುಪರಿಶ್ರಾಂತ ದೊರೆತನದ ದೆಸೆಯಿಂದ
ನಿನ್ನ ಸದ್ಬುದ್ಧಿಗನುಗುಣವಾಗಿ, ನೀ ಹೆನ್ರಿ
ಬೋಲಿಂಗ್‌ಬ್ರೋಕನಿಗೆ, ಸತ್ಕೃತ್ಯವೆಂದರಿತು
ನಿನ್ನ ರಾಜ್ಯಕಿರೀಟಗಳನು ತೆಗೆದೊಪ್ಪಿಸಲು.

ದೊರೆ ರಿಚರ್ಡ್. ಮಕುಟವನು ಕೊಡಿರಿತ್ತ. ಇಕೊ ತಮ್ಮ, ನೀನಿದನು
ಕಸಿದುಕೋ; ಇಕೊ ತಮ್ಮ, ಇದರೊಂದು ಬದಿಯಲ್ಲಿ
ನನ್ನ ಕೈ, ಇನ್ನೊಂದು ಬದಿಯಲ್ಲಿ ನಿನ್ನ ಕೈ.
ಈಗಳೀ ಸ್ವರ್ಣಮಯ ಮಕುಟವೊಂದರಿನೊಂದ
ತುಂಬಿಸುವ ಜೋಡುದೊಟ್ಟಿಯು ನೀರ ಕೊಡಲಿರುವ
ಗಂಭೀರ ಕೂಪದಂತಾಯ್ತು; ದೊಟ್ಟಿಗಳಲ್ಲಿ
ಖಾಲಿಯಾದುದು ಗಾಳಿಯಲ್ಲಿ ತೂಗಾಡುವುದು,
ತುಂಬಿದ್ದು ಕೆಳಗೆ ಹೋಹುದು ಕಾಣದಂತಾಗಿ.
ಕಣ್ಣೀರ ತುಂಬಿಕೊಂಡಿರುವ ನಾನಿಳಿದೊಟ್ಟಿ—

ನನ್ನ ದುಃಖಗಳನ್ನು ನಾ ಕುಡಿಯುತಿರುವೆ; ನೀನ್
ಏರುದೊಟ್ಟಿ !

**ಬೋಲಿಂಗ್‌ಬ್ರೋಕ್.** ಇದೇನು ! ಸಿದ್ಧನಾಗಿಹೆ ನೀನು
ರಾಜ್ಯದರಸೊತ್ತಿಗೆಯ ಬಿಡಲೆಂದು ತಿಳಿದಿದ್ದೆ.

**ದೊರೆ ರಿಚರ್ಡ್.** ನನ್ನ ಮುಕುಟವ ಬಿಡಲು ಸಿದ್ಧನಾಗಿಯೆ ಇರುವೆನ್ !
ಆದರೀಯೆನ್ನ ದುಃಖಗಳೆನ್ನವೀಗಳೂ
ನೀ ನನ್ನ ರಾಜ್ಯವೈಭವಗಳನು ಕಳೆದೀಯೆ,
ನನ್ನ ದುಃಖಗಳ ನೀ ಕಳೆಯಲಾರೆ — ಅವಕ್ಕೆ
ನಾನೀಗಳೂ ರಾಜ.

**ಬೋಲಿಂಗ್‌ಬ್ರೋಕ್.** ನಿನ್ನರ್ಧ ಚಿಂತೆಗಳ
ನಿನ್ನ ಮುಕುಟವ ಜೊತೆಗೆ ಕೊಡು ನನಗೆ—ಆಗದೇ ?

**ದೊರೆ ರಿಚರ್ಡ್.** ನೀ ಚಿಂತೆ ವಹಿಸಿದರೆ ನನ್ನದೆಯ್ದದು ಕಳೆದು ;
ಚಿಂತೆಯನು ಕಳೆದುಕೊಂಡುದರಿಂದ, ಹಳ ಚಿಂತೆ
ಹರಿದುಹೋದುದರಿಂದ ಬಂದುದೆನ್ನೀ ಚಿಂತೆ !
ನಿನ್ನದಾದರೊ ಲಾಭಗಳ ಹೊತ್ತಿರುವ ಚಿಂತೆ
ಹೊಸ ಚಿಂತೆಯನು ಗೆದ್ದುಕೊಂಡದ್ದರಿಂದ ಕೇಳ್ ;
ಕೊಟ್ಟರೂ ಕೊಟ್ಟಂಥ ಚಿಂತೆಗಳು ಬಿಡವೆನ್ನ :
ಮುಕುಟವನ್ನಿವು ಸಾಕುವುವು—ಆದರೂ ನನ್ನ
ಬಳಿಯಲ್ಲೆ ಉಳಿಯುವುವು.

**ಬೋಲಿಂಗ್‌ಬ್ರೋಕ್.** ಮುಕುಟವನು ತ್ಯಜಿಸುವುದು
ನಿನಗೆ ತೃಪ್ತಿಯನೊಡರಿಸುವುದೇನು ? ಹೇಳು, ಹೇಳ್.

**ದೊರೆ ರಿಚರ್ಡ್.** ಅಹುದಿಲ್ಲ; ಇಲ್ಲ ಅಹುದೇಕೆಂದರೀ ನಾನು
ಶೂನ್ಯಾತ್ಮನಾಗಬೇಕಾಗುವುದು ನೋಡೀಗ.
ಆದರಿಂದ ಇಲ್ಲವೆನಬೇಕಾಯ್ತು; ನಿನಗೆ ನಾ
ಶರಣುಹೋಗಬೇಕಾದುವದಕೆ ಕಾರಣ, ಕೇಳು.
ನೋಡೀಗ ನಾ ನನ್ನ ಬರಿದುಮಾಡುವೆನೆಂತು
ಎಂಬುದನು—ನನ್ನ ತಲೆಯಿಂದೆತ್ತಿ ಈ ಭಾರ-
ವಾದ ಹೊರೆಯನು, ಹಿಡಿಯಲಾರದೀ ದಂಡವನು
ನನ್ನ ಕೈಯಿಂದೆತ್ತಿ, ಮತ್ತೀ ನೃಪಪ್ರಭಾ-
ವದ ಮೇಲ್ಮೆಯನ್ನು ನಿನಗೀಯುವೆನು—ಕೊಳ್ಳು ಕೊಳ್.
ನನ್ನ ಗಾಯದ ಮುಲಾಮನು ನನ್ನ ಕಂಬನಿಗ-
ಳಿಂದಲೇ ತೊಳೆಯುವೆನು, ನನ್ನ ಕೈಯಿಂದಲೇ
ನನ್ನ ಮುಕುಟವ ಕೊಡುವೆ, ನನ್ನ ನಾಲಿಗೆಯಿಂದ
ನನ್ನ ಸುಪವಿತ್ರ ರಾಜತ್ವ ನನಗಿಲ್ಲವೆಂ-

ದೆಂಬೆ, ಕರ್ತವ್ಯದಾಚಾರಗಳನೆನ್ನು ಸಿರಿ-
ನಿಂದ ನಿರ್ಮುಕ್ತಗೊಳಿಸುವೆನಿದೋ ಶಪಥವಿದು —
ನನ್ನೆಲ್ಲ ರಾಜಗಾಂಭೀರ್ಯ-ಮೆರವಣಿಗೆಗಳ,
ಭೂಮಿಗಳ, ಗೇಣಿಗಳ, ಕಂದಾಯಗಳ ಬಿಟ್ಟೆ ;
ನನ್ನಾಜ್ಞೆ, ಪರಿನಿಯತಿ, ವಿಧಿಗಳೆಲ್ಲವನಲ್ಲ-
ಗಳೆವೆ. ಮನ್ನಿಸಲಿ ದೇವರು ಈಗ ನನ್ನಿಂದ
ಮುರಿದೊಯ್ದ ನನ್ನ ಪ್ರತಿಜ್ಞೆಗಳ ಮೇಣ್ ಆತ
ನಿನಗೆ ನಾ ವಹಿಸಿದೆಲ್ಲಾ ವ್ರತಗಳನು ನಡೆಸಿ-
ಕೊಡಲಿ, ಶೂನ್ಯಾತ್ಮನಾದೆನ್ನ ಮಾಡೆಲೆ ದುಃಖ-
ಶೂನ್ಯನನ್ನಾಗಿ; ಎಲ್ಲವ ಪಡೆದ ನೀನಿನ್ನು
ಸಂತುಷ್ಟನಾಗೆಲ್ಲರೊಡನೆ — ಹರಸುವೆ ನೀನು
ಈ ರಿಚರ್ಡನ ಪೀಠದಲ್ಲಿ ರಾರಾಜಿಸಲು
ಬದುಕು ಬಹುಕಾಲ; ಬಹು ಬೇಗ ಈತನ ತೆಗೆದು
ಬುವಿಯಾಳದಲ್ಲಿ ಹೂಳ್ — ದೊರೆ ಹೆನ್ರಿಯನು ದೇವ
ಸಲಹಲೆಂದೀ ವಿರಾಜೀಕೃತ ರಿಚರ್ಡ್ ನುಡಿವ —
ಸುಖದ ಬಹುಕಾಲವನು ಕೊಡಲೆಂದು ಪ್ರಾರ್ಥಿಸುವ !
ಉಳಿಯಿತೇನಿನ್ನು ?

**ನಾರ್ದಂಬರ್‌ಲ್ಯಾಂಡ್.** ಏನೂ ಇಲ್ಲ; ಆದರೀ
ಆರೋಪಗಳನು—ನೀನೂ ನಿನ್ನ ಬಂಟರೂ
ರಾಜ್ಯಕ್ಕೆ, ರಾಜ್ಯವಾಸಿಗಳ ಹಿತಗಳಿಗೆ ಕೇ-
ಡಾಗುವಂತೆಸಗಿದುಗ್ರಾಪರಾಧಗಳನ್ನು —
ಓದು ! ಇವುಗಳನೊಪ್ಪಿಕೊಂಡೆಯಾದರೆ ನೀನು
ಯೋಗ್ಯಕ್ರಮದೆ ಪದಚ್ಯುತನಾದೆಯೆಂದು ಜನ-
ರಾತ್ಮಗಳು ತಿಳಿದಾವು.

**ದೊರೆ ರಿಚರ್ಡ್.** ಹಾಗೆ ಮಾಡಲೆ ಬೇಕೆ ?
ನೀವ್ ಕೃತಕದಿಂ ಸಮೆದ ನನ್ನ ತಪ್ಪಿನ ಸುರುಳಿ-
ಯನ್ನು ಬಿಚ್ಚಲೆಬೇಕೆ ನಾನು ? ಕಳಕಳಿಯೆದೆಯ
ನಾರ್ದಂಬರನೆ ಹೇಳು—ನಿನ್ನ ತಪ್ಪುಗಳನ್ನು
ಬರೆದು ಸಭ್ಯರ ಮುಂದೆ ಓದೆಂದರಾಗ ನಿನ-
ಗವಮಾನವಾಗದೇ ? ಒಮ್ಮೆ ನೀನೀ ಬರೆಹ
ಓದ ಹೊರಟಾಗ ನೃಪನೊಬ್ಬನ ಪದಚ್ಯುತಿಯ
ಓದುವೆಯ ಅತಿಬಲಾವಿಷ್ಟ ಶಪಥವ ಮುರಿದು ?
ಅಂಥಂತವೋಲಾಂಛನವ ಹೊತ್ತು, ಚಿತ್ರಗು-
ಪ್ತನ ದಫ್ತರದಲಿ ನಿಂದ್ಯವೆನಿಪ್ಪ ಅಂಥ ಲೇ-

ಖನವನೋದುವೆಯು ? ಹಾಗಲ್ಲ— ನೀವೆಲ್ಲರೂ
ನಿಂತು ನೋಡುತ್ತಿರಲು ನನ್ನ ಹತಭಾಗ್ಯತ್ವ
ನನ್ನನಣಕಿಸುತಿರಲು ಪೈಲೇಟರೊಡನೆ ನಿ-
ಮ್ಮಲ್ಲಿ ಕೆಲವರು ಕೈಯ ತೊಳೆದುಕೊಳಬಹುದು ಹೊರ-
ಹೊರಗೆ 'ಅಯ್ಯೋ ಪಾಪ' ಎಂದು — ಪೈಲೇಟರೇ,
ನೀವೀಗ ನನ್ನನ್ನು ನನ್ನ ಕಹಿ ಕ್ರೂಜೆಗೆ ಸ-
ಮರ್ಪಿಸಿದ ಈ ನಿಮ್ಮ ಪಾಪ ತೊಲಗದು ತೊಳೆಯೆ.

**ನಾರ್ದಂಬರ್ಲ್ಯಾಂಡ್.** ಪ್ರಭುವೆ, ಹಿಡಿದೋದಿದೋ ಈ ಬರಹಗಳ ಮೊದಲು.

**ದೊರೆ ರಿಚರ್ಡ್.** ಕಣ್ಣೀರು ತುಂಬಿ ಕಣ್ಣುಗಳಲ್ಲಿ ಕಾಣೆ ನಾನ್ ;
ಆದರೂ ಆ ಉಪ್ಪುನೀರಷ್ಟು ಕುರುಡು ಮಾ-
ಡದು ಕಂಗಳನ್ನವಿಲ್ಲೊಬ್ಬಗೆಯ ದ್ರೋಹಿಗಳ
ಕಾಣಬಲ್ಲವು — ಅಲ್ಲ ಅಲ್ಲ — ನಾನೀ ನನ್ನ
ಕಂಗಳನ್ನೆನ್ನತ್ತ ತಿರುಗಿಸಿದರುಳಿದವರಿ-
ಗಾಗಿರುವೆ ನಾ ದ್ರೋಹಿ ಎಂದು ಗೊತ್ತಾಗುವುದು.
ಏಕೆಂದರಿಲ್ಲಿ ದೊರೆಯೊಬ್ಬನಾಭರಣಮಯ
ಕಾಯವ ಸಿರಾಭರಣಗೊಳಿಸಲಾತ್ಮಾನುಮತಿ
ಇತ್ತೆ ; ಮಾನ್ಯ ಯಶಸ್ಸ ಕೀಳ್ಗೈದೆ ; ಸಾರ್ವಭೌ-
ಮಾಧಿಕಾರವ ದಾಸನನ್ನಾಗಿ ಮಾಡಿದೆ : ಮ-
ಹಾಭಿಮಾನದ ರಾಜರಾಜತ್ವವನ್ನು ಕೇ-
ವಲ ಪ್ರಜಾಪದಕಿಳಿಸಿಬಿಟ್ಟೆ ; ರಾಜ್ಯವ ರೈತ-
ತನದ ಮಟ್ಟಕ್ಕೆಸೆದೆನ್.

**ನಾರ್ದಂಬರ್ಲ್ಯಾಂಡ್.** ಎನ್ನ ಪ್ರಭು,

**ದೊರೆ ರಿಚರ್ಡ್.** ನಿನ್ನ ಪ್ರಭು
ನಾನಲ್ಲ ; ಮಲೆತ, ಮಾನಾಪಹರಣಕೆ ನಿಂತ
ಮನುಜ, ನಾನಾವ ಮಾನವನಿಗೂ ಪ್ರಭುವಲ್ಲ.
ನನಗೆ ಹೆಸರಿಲ್ಲ, ಬಿರುದಿಲ್ಲ — ಎಂಬೆನೆ ? ತಪ್ಪು ;
ನಾಮಕರಣವನೆನಗೆ ಮಾಡಿಲ್ಲವೆಂದಲ್ಲ —
ಕೃತನಾಮವನು ಕಸಿದುಕೊಳ್ಳಲಾಗಿದೆ — ಅಕಟ,
ಈ ದಿನ ಮಹಾಭಾರವೆನ್ನಿಸಿದೆ ; ನಾನೆಷ್ಟೊ
ಚಳಿಗಾಲಗಳ ಕಳೆದೆನಾದರೀ ದಿನವೆನ್ನ
ಕರೆದುಕೊಳ್ಳಲು ಹೆಸರನರಿಯದಾಗಿಹೆನಹಹ !
ಬೋಲಿಂಗ್‌ಬ್ರೋಕ ರವಿ ; ಅವನೆದುರು ನಾನೊಬ್ಬ
ಹಿಮದಿಂದ ಸಮೆದಣಕದರಸ — ಹನಿಹನಿಯಾಗಿ
ಕರಗಬೇಕಲ್ಲವೇ ? ಒಳ್ಳೆ ದೊರೆ, ದೊಡ್ಡ ದೊರೆ —

ಆದರೇನ್ ? ದೊಡ್ಡೊಳ್ಳೆ ದೊರೆಯಲ್ಲ — ಅಲ್ಲವೇ ?
ಈಗಳೂ ಇಂಗ್ಲೆಂಡಿನಲ್ಲಿನ್ನ ನುಡಿಗೆ ಬಂ-
ಗಾರಬೆಲೆಯಿದ್ದರದು ತರಲೊಂದು ಕನ್ನಡಿಯ
ನೇರವಾಗಿದಿರೆನ್ನ ; ರಾಜಾಧಿರಾಜತ್ವ-
ವನು ಕಳೆದುಕೊಂಡ ಈ ಮೊಗವಿದೆಂತಿದೆಯೆಂದು
ತೋರಿಸಲಿ ತಾ ಬಂದು.

**ಬೋಲಿಂಗ್‌ಬ್ರೋಕ್.** ಯಾರಾದರೂ ಹೋಗಿ
ಕನ್ನಡಿಯ ತಂದು ಕೊಡಿ, ಕನ್ನಡಿಯ ತಂದುಕೊಡಿ.

[ಜವಾನನೊಬ್ಬ ತೆರಳುತ್ತಾನೆ.

**ನಾರ್ದಂಬರ್‌ಲ್ಯಾಂಡ್.** ಕನ್ನಡಿಯು ಬರುವಷ್ಟರಲ್ಲಿದನ್ನೋದು ಪ್ರಭು.

**ದೊರೆ ರಿಚರ್ಡ್.** ಭೂತ, ಪ್ರೇತ, ಪಿಶಾಚ ! ನರಕವನು ನಾ ಸೇರು-
ವಷ್ಟರೊಳಗೇ ನೀನು ಚಿತ್ರಹಿಂಸೆಯ ಕೊಡುವೆ.

**ಬೋಲಿಂಗ್‌ಬ್ರೋಕ್.** ಒತ್ತಾಯಪಡಿಸದಿರು ನಾರ್ದಂಬರ ಪ್ರಭುವೆ.

**ನಾರ್ದಂಬರ್‌ಲ್ಯಾಂಡ್.** ಜನತೆಗೆ ಸಮಾಧಾನವಾಗದದನೆಸಗದಿರೆ.

**ದೊರೆ ರಿಚರ್ಡ್.** ಅವರಿಗೆ ಸಮಾಧಾನವಾಗಿಯೇ ತೀರುವುದು—
ನನ್ನಘಗಳನ್ನೆಲ್ಲ ಬರೆದಿಟ್ಟ ಪುಸ್ತಕವ
ನಾನು ಸಾಕಷ್ಟೋದಿದಾಗ — ಅಂದರೆ ನಾನು
ನನ್ನನ್ನು ಚೆನ್ನಾಗಿ ಕಂಡಾಗ — ತಿಳಿಯಿತೇ ?

[ಜವಾನನು ಕನ್ನಡಿಯೊಡನೆ ಪ್ರವೇಶಿಸುತ್ತಾನೆ.

ಕನ್ನಡಿಯ ಕೊಡು ನನಗೆ, ಅದರಲ್ಲಿ ಓದುವೆನು.
ಸುಕ್ಕುಗಳು ಸಾಕಷ್ಟು ಆಳವಾಗಿಲ್ಲವೇ ?
ಈ ನನ್ನ ಮೊಗಕೆ ದುಮ್ಮಾನ ಬೇಕಾದಷ್ಟು
ಪೆಟ್ಟು ಕೊಟ್ಟದ್ದರೂ ಆಗಿಲ್ಲವೇನಿವ-
ಕ್ಕಿಂತ ಗಂಭೀರವ್ರಣಂಗಳ್ ? ಓ ಸ್ತುತಿಪರನ-
ಪಾಂಡಿತ್ಯಪೂರ್ಣ ದರ್ಪಣವೆ, ಸೌಭಾಗ್ಯದಲಿ
ನನ್ನುತ್ತರಾಧಿಕಾರಿಗಳಾದ ಜನರಂತೆ
ನನ್ನನ್ನು ವಂಚಿಸುತ್ತಿರುವೆ. ತನ್ನರಮನೆಯೊಳ್
ಈರೈದು ಸಾಸಿರ ಜನರ್ಕಳನು ನಿತ್ಯವೂ
ಇಟ್ಟುಕೊಂಡಿದ್ದ ಮೊಗ ಈ ಮೊಗವೆ ನಿಜವಾಗಿ ?
ನೋಳ್ಪವರು ಹೆಪ್ಪಳಿಸುವಂತೆ ನೇಸರ ಹಾಗೆ
ಪ್ರಭವಿಸುತ್ತಿದ್ದಾಸ್ಯವಿದೆಯೇನ್ ? ಅಸಂಖ್ಯಾಪ-
ರಾಧಗಳನೆದುರಿಸಿದ ಮೇಲಂತ್ಯದಲ್ಲೀಗ
ಬೋಲಿಂಗಬ್ರೋಕ ಮೇಲ್ಪಾಯ್ದು ಹಿಮ್ಮೆಟ್ಟಿಸಿಹ
ಮೊಗವಿದೇನ್ ? ಈ ಮೊಗದಿ ನಶ್ವರ ಯಶಸ್ಸು ಬೆಳ-

ಗುತ್ತಿದೆ ; ಯಶಸ್ಸಿನಷ್ಟೇ ನಶ್ವರವಿದಲ್ತೆ !

[ಕನ್ನಡಿಯನ್ನು ನೆಲಕ್ಕೆ ಅಪ್ಪಳಿಸುತ್ತಾನೆ.

ಮೌನದಿಂದಿರುವರಸ, ನೋಡಿದೋ ನೋಡು ಕ-
ನ್ನಡಿ ನೂರು ಚೂರಾಗಿ ಚೆಲ್ಲಿ ಹೋಗಿಹುದಿಲ್ಲಿ.
ನನ್ನಳಲದೆಷ್ಟು ಬೇಗನೆ ನನ್ನ ಮೊಗವನ್ನು
ಹಾಳುಗೆಡಹಿತು ನೋಡು.

**ಬೋಲಿಂಗ್‌ಬ್ರೋಕ್.** ನಿನ್ನ ದುಃಖದ ನೆರಳು ನಿನ್ನ ವದನದ ನೆರಳ
ನಾಶ ಮಾಡಿದೆ, ರಿಚರ್ಡ್, ನಾಶಮಾಡಿದೆ ನೋಡು.

**ದೊರೆ ರಿಚರ್ಡ್.** ಹೇಳು ಮತ್ತೊಂದು ಸಲ. ನನ್ನ ದುಃಖದ ನೆರಳು
ನಾಶವಾಯ್ತೀಗ, ನಿಜ, ನನ್ನಿಯಿದು — ಅಹುದಹುದು —
ನನ್ನೆಲ್ಲ ದುಃಖವೂ ಎದೆಯಾಳದಲ್ಲಿಹುದು.
ರೋದನದ ಈ ಬಾಹ್ಯ ರೀತಿನೀತಿಗಳೆಲ್ಲ
ಚಿತ್ರಹಿಂಸಾಗ್ರಸ್ತನಾದ ಜೀವಾತ್ಮನಲಿ
ನಿರ್ನೆರಂ ಬಲಿಯುತಿಹ, ಕಾಣಿಸದೆ ಕುಳಿತಿರುವ
ವೆತೆಯ ನೆರಳೇ ಸರಿ. ನಿಜಾರ್ಥ ನಿನ್ನುಕ್ತಿಗಿದೆ.
ಧನ್ಯವಾದಗಳಿದೋ ನಿನಗೆ ದೊರೆ: ನೀನೆನಗೆ
ದುಃಖಿಸಲು ಕಾರಣವನೊದಗಿಸಿದ್ದಲ್ಲದೆಯೆ
ಆ ಕಾರಣಕ್ಕಾಗಿ ದುಃಖಿಸುವ ಬಗೆಯನೂ
ಕಲಿಸುತಿಹೆ — ನಿನ್ನುದಾರತೆಗೆ ನಾನಾದೆ ಋಣಿ.
ವರವೊಂದ ಬೇಡುವೆನು, ಆಮೇಲೆ ಹೊರಟು ಹೋ-
ಗುವೆ, ಮತ್ತೆ ಬಂದು ಕರಕರೆಯ ಕೊಡೆ ನಿನಗೆ ನಾ.
ಪಡೆವೆನೇ ಬೇಡಿದುದ ?

**ಬೋಲಿಂಗ್‌ಬ್ರೋಕ್.** ನ್ಯಾಯವಾದವ ಹಿಡಿದ ದಾಯಾದ ಸೋದರನೆ,
ಹೇಳು ಹೇಳಾವ ವರ ?

**ದೊರೆ ರಿಚರ್ಡ್.** ನ್ಯಾಯಸ್ಥ ದಾಯಾದ ನಾನಾದರೀಗಳೀ
ದೊರೆಗಿಂತ ಹೆಚ್ಚಿನವನಾದೆ. ನಾ ದೊರೆಯಾಗಿ
ಬಾಳುತಿರೆ ನನ್ನ ವಂದಿಗಳೆಲ್ಲರೂ ಪ್ರಜೆಗ-
ಳಾಗಿದ್ದರ್. ಎನಗೀಗ ಪ್ರಜೆಯಾದ ಮೇಲೆ ದೊರೆ-
ಯೊಬ್ಬ ಹೊಗಳಲು ನಿಂತನ್. ಅದರಿಂದ ಹೆಚ್ಚಿನವ
ನಾನಾದೆ. ನನಗೀಗ ಬೇಳ್ಪಗತ್ಯವೆ ಇಲ್ಲ !

**ಬೋಲಿಂಗ್‌ಬ್ರೋಕ್.** ಆದರೂ ಕೇಳು ಕೇಳ್.

**ದೊರೆ ರಿಚರ್ಡ್.** ಪಡೆವೆನೇ ಕೇಳಿದರೆ ?

**ಬೋಲಿಂಗ್‌ಬ್ರೋಕ್.** ಪಡೆವೆ ಖಂಡಿತವಾಗಿ

**ದೊರೆ ರಿಚರ್ಡ್.** ಹಾಗಾದರಿಲ್ಲಿಂದ ಹೋಗಗೊಡು.

**ಬೋಲಿಂಗ್‌ಬ್ರೋಕ್.** ಯಾವೆಡೆಗೆ ?

**ದೊರೆ ರಿಚರ್ಡ್.** ನೀನಿಚ್ಛಿಸುವ ಕಡೆಗೆ.
ನಿನ್ನ ಕಣ್ಣೆದುರಿಂದ ದೂರ ಹೋದರೆ ಸಾಕು.

**ಬೋಲಿಂಗ್‌ಬ್ರೋಕ್.** ಯಾರಾದರೂ ಇವನ ರಾಜಬಂದೀ ಗೃಹಕೆ
ಒಯ್ಯಿರಿ.

**ದೊರೆ ರಿಚರ್ಡ್.** ಇದೇನು ? ನೀವೆಲ್ಲರೂ ಒಯ್ವವರೆ ?
ಚೆನ್ನಾಯ್ತು, ಚೆನ್ನಾಯ್ತು ! ನಿಜವಾದ ದೊರೆ ಬಿದ್ದ
ಕೂಡಲೇ ಚೆಂಗನೇಳಿಗೆಯಟ್ಟವೇರುವಿರಿ !

[ಕೆಲ ಪ್ರಭುಗಳೂ ದೊರೆ ರಿಚರ್ಡನೂ ರಕ್ಷೆಯೂ ಹೋಗುತ್ತಾರೆ.

**ಬೋಲಿಂಗ್‌ಬ್ರೋಕ್.** ನಾಳೆ ಬುಧವಾರ ನಾವ್ ಗಂಭೀರವಾಗಿ ಕುಳಿ-
ತಾಲೋಚಿಸೋಣ ಪಟ್ಟಾಭಿಷೇಕಕ್ಕೆನ್ನ;
ನೀವೆಲ್ಲ, ಪ್ರಭುಗಳೆ, ಸಿದ್ಧರಾಗಿರಿ ಹೋಗಿ.

[ಪಾದ್ರಿ ಕಾರ್ಲಿಸ್ಲಿ, ವೆಸ್ಟ್‌ಮಿನಿಸ್ಟರಿನಧಿಪಾದ್ರಿ ಮತ್ತು ಆಮುರ್ಲಿ
ಗಳನ್ನುಳಿದು ಮಿಕ್ಕೆಲ್ಲರೂ ಹೋಗುತ್ತಾರೆ.

**ಅಧಿಪಾದ್ರಿ.** ನಾವಿಲ್ಲಿ ಕಂಡೆವೀಗ ವಿಷಾದಕರ ದೃಶ್ಯ-
ವನ್ನು.

**ಕಾರ್ಲಿಸ್ಲಿ.** ಬರಲಿಹ ವಿಷಾದವನ್ನೆನ್ನು — ಹುಟ್ಟಲಿಹ
ಮಕ್ಕಳೀ ದಿನವ ಮುಳ್ಳೆಂದು ಭಾವಿಸದಿರರು !

**ಆಮುರ್ಲಿ.** ಧಾರ್ಮಿಕೋತ್ತಮರೆ, ಈ ದುರ್ಲಾಂಛನವ ರಾಜ್ಯ-
ದಿಂದಳಿಸಲೇನಾದರೂ ರಹಸ್ಯೋಪಾಯ-
ವಿಲ್ಲವೇ ?

**ಅಧಿಪಾದ್ರಿ.** ನನ್ನ ಪ್ರಭು, ನಾನಿಲ್ಲಿ ನನ್ನ ಮನ-
ವನ್ನ ನಿರ್ಬಂಧದಿಂದುಸಿರುವೊಡೆ ನೀ ಮೊದಲ್
ನಾನುಸಿರುವೆಲ್ಲವನ್ನಡಗಿಸಿಡುವೆನು ಎಂದು,
ನಾನುಸಿರ್ದೆಲ್ಲವನ್ನೂ ಮಾಡುವೆನು ಎಂದು
ಧರ್ಮಪ್ರತಿಜ್ಞೆ ಗೆಯ್. ನಾ ನೋಡುತಿಹೆ ನಿನ್ನ
ಹುಬ್ಬುಗಳ ತೃಪ್ತಿಯಿಂದುಬ್ಬಿದುದ, ಹೃದಯ ದುರ್-
ಭರ ದುಃಖದಿಂದ ಬಿರಿವಂತಿಹುದ, ಕಣ್ಣುಗಳು
ಕಂಬನಿಗಳನು ತುಂಬಿಕೊಂಡು ತತ್ತರಿಸುವುದ !
ಇರುಳ ಭೋಜನಕೆನ್ನ ಮನೆಗೆ ಬಾ ನಾನೊಂದು
ಸಂಚನುಸಿರುವೆನಾಗ; ಅದರಂತೆ ಮಾಡಿದರೆ
ಸಂತಸದ ದಿನವನ್ನು ನಾವೆಲ್ಲ ಕಂಡೇವು !

— **ಬಿ. ಎಚ್. ಶ್ರೀಧರ**

**'ಕಿಂಗ್ ರಿಚರ್ಡ್ ದಿ ಸೆಕೆಂಡ್',** ಅಂಕ IV, ದೃಶ್ಯ i.

## ಉನ್ಮತ್ತ, ಪ್ರೇಮಿ, ಕವಿ

'ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್' ಒಂದೇ ಚೌಕಟ್ಟಿನಲ್ಲಿ ಅಚ್ಚುಕಟ್ಟಾಗಿ ಕಟ್ಟಿದ ಹಲವು ಪ್ರೇಮಪ್ರಸಂಗಗಳ ಕಥೆ. ಅದರಲ್ಲಿ ಸ್ವತಃ ಪ್ರೇಮಿಯಾದ ಅಥೆನ್ಸಿನ ದೊರೆ ಥೀಸ್ಯೂಸ್ ಪ್ರೇಮಿಯ ಬಗೆ ಎಂತಹದೆಂಬುದನ್ನು ಹೀಗೆ ವ್ಯಾಖ್ಯಾನ ಮಾಡಿದ್ದಾನೆ.

ಉನ್ಮತ್ತ, ಪ್ರೇಮಿ, ಕವಿ — ಇವರಲಿ ವಿಜೃಂಭಿಸಿಹು-
ದೇಕಘನವಾಗಿ ಕಲ್ಪನೆ. ಒಬ್ಬ ಕಾಣುವನು
ವಿಸ್ತರದ ನರಕವೂ ಹಿಡಿಸದ ಪಿಶಾಚಿಗಳ
ಮೊತ್ತವನು; ಇವನೆ ಉನ್ಮತ್ತ. ಅಂತುಟೆ ಮರುಳು
ಮಸಗಿ, ಹೆಲೆನಳ ಚೆಲುವನೊಂದು ಕರಿಮೋರೆಯಲಿ
ಕಾಣುವನು ಪ್ರೇಮಿ. ಭಾವಾವೇಶದಲಿ ಕವಿಯ
ಕಣ್ಣು ಹೊರಳುತ, ಸ್ವರ್ಗದಿಂದ ಭೂಮಿಗೆ ಮತ್ತೆ
ಭೂಮಿಯಿಂ ಸ್ವರ್ಗಕ್ಕೆ ದಿಟ್ಟಿಹಾಯಿಸುತಿಹುದು ;
ಅರಿಯದಿಹ ವಸ್ತುಗಳ ಆಕಾರಗಳನೆಲ್ಲ
ಹಿಡಿದು ಮೈದೊಡಿಸಿ ಕಲ್ಪನೆ ಹೊಮ್ಮಿಸುತ್ತಲಿರೆ,
ಕವಿಯ ಲೆಕ್ಕಣಿಕೆ ಮೂರ್ತಿಗಳಾಗಿ ಕಡೆಯುವುದು,
ಗಾಳಿಹಗುರದ ಶೂನ್ಯಕೊಂದು ನೆಲೆದಾಣವನು
ನೀಡುವುದು, ಜೊತೆಗೊಂದು ನಾಮಧೇಯವನು !

— ತೀ. ನಂ. ಶ್ರೀಕಂಠಯ್ಯ
'ಡ್ರೀಮ್', V. i. 7-17.

## 'ಪಿರಮಸ್ ಮತ್ತು ತಿಸ್ಬಿ'

'ಡ್ರೀಮ್' ನಾಟಕದ ಹಲವಾರು ಸೊಗಸುಗಳಲ್ಲಿ ಅದರ ಕೊನೆಗೆ ಬರುವ 'ಪಿರಮಸ್-ತಿಸ್ಬಿ' ಉಪನಾಟಕದ ಸರಸ ಸನ್ನಿವೇಶವೂ ಒಂದು. ದೊರೆ ಥೀಸ್ಯೂಸನ ಮದುವೆಯ ಸಂದರ್ಭದಲ್ಲಿ ಊರಿನ ಕೈಕೆಲಸದ ಕೆಲವು ಒರಟು ಹುಂಬರು ಈ 'ಹಾಸ್ಯ-ದುರಂತ'ವನ್ನು ಆಡಿ ತೋರಿಸುತ್ತಾರೆ. ಅದರ ಒಂದು ಸಂಗ್ರಹಾನುವಾದ ಇಲ್ಲಿದೆ.

**ಪಿರಮಸ್.** ಎಲೆ ಹುಬ್ಬುಗಂಟಿಸಿದ ಕತ್ತಲೆಯೆ! ಎಲೆ ಕಪ್ಪುಕಪ್ಪಾಗಿರುವ ರಾತ್ರಿ! ಎಲೆ ಹಗಲಿಲ್ಲದಾಗೆಲ್ಲ ಖಾತ್ರಿಯಿಂದುಂಟಾಗುತಿಹ ರಾತ್ರಿ! ಎಲೆ ರಾತ್ರಿ ... ಎಲೆ ರಾತ್ರಿ ... ಅಕಟಕಟಕಟಕಟಾsss. ಎನ್ನ ಮನವನ್ನೆ ತಿಸ್ಬಿಯು ಇತ್ತ ವಚನವನೆ ಮರೆತಿಹಳೆ? ಎಲೆ ಗೋಡೆ ... ಓ ಗೋಡೆ ... ಎಲೆ ಮುದ್ದುಮುದ್ದಾದ ಗೋಡೆಯೇ, ಅವಳ ತಂದೆಯ ಮನೆಯ ಮೇಣೆನ್ನ ಮನೆ ನಡುವೆ ನಿಂತಿರುವ ಗೋಡೆಯೇ, ಎಲೆ ಗೋಡೆ ... ಓ ಗೋಡೆ ... ಎಲೆ ಮುದ್ದುಮುದ್ದಾದ ಗೋಡೆಯೇ, ನಿನ್ನ ಕಿಂಡಿಯ ತೋರು: ಅದರ ಮೂಲಕ ಕಣ್ಣ ಚಿವುಟುವೆನು

ನಾನೆನ್ನ ಪ್ರೇಯಸಿಯ ಕುರಿತು ... ಹಾಂ, ಸಾಕು...ಸಾಕಿಷ್ಟು ರಂಧ್ರ ಎಲೆ ಗೋಡೆ ... ನಿನಗೆ ನಾನು ಚಿರಋಣಿಯು: ನಿನ್ನ ಕಲ್ಗಳಿಗೆಲ್ಲ ಪುಣ್ಯ ಬರಲಿ. ಆದರೆ ಹಾಯ್! ಆಚೆಗೇನೂ ಇಲ್ಲ ... ತಿಸ್ಬಿಯೇ ಇಲ್ಲ! ಎಲೆ ಕ್ರೂರ ಗೋಡೆಯೇ, ನಿನ್ನಿಂದ ನಾನೇನು ಸುಖ ಕಾಣಲಿಲ್ಲ. ಇಂತೆನಗೆ ಮೋಸ ಮಾಡಿದುದಕ್ಕೆ ನಿನ್ನ ಪ್ರತಿ ಇಟ್ಟಿಗೆಗು ತಟ್ಟಲೆನ್ನಯ ಶಾಪ.

**ತಿಸ್ಬಿ.** ಓ ಗೋಡೆ, ಎನ್ನ ಮನದನ್ನ ಪಿರಮುಸನಿಂದ ಬೇರ್ಪಡಿಸಿ ಎನ್ನ ದುಃಖಾಲಾಪ ಕೇಳಿರುವೆ ನೀನೆನಿತೊ. ನನ್ನ ತೊಂಡೆಯ ತುಟಿಗಳೆನಿತೊ ಸಲ ಚುಂಬಿಸಿಹವೀ ನಿನ್ನ ಕಲ್ಲುಗಳ...ಮಣ್ಣು ಸುಣ್ಣಗಳಿಂದ ಮೆತ್ತಿರುವ ಕಲ್ಲುಗಳ.

**ಪಿರಮುಸ್.** ಯಾವುದೋ ಧ್ವನಿಯೊಂದು ಕಾಣುತಿದೆ! ನೋಡುವೆನು ಕಿಂಡಿಯೊಳು: ಮುಖವು ಕೇಳಿಸಬಹುದು. ತಿಸ್ಬಿ ... ಓ ನನ್ನ ತಿಸ್ಬಿ!

**ತಿಸ್ಬಿ.** ಓ ನನ್ನ ಪ್ರಿಯಕರಾ ... ನೀನೆನ್ನ ಪ್ರಿಯಕರನೆ ಇರಬಹುದೆಂದು ತೋರುತಿದೆ.

**ಪಿರಮುಸ್.** ನಿನಗೇನು ಬೇಕಾದರೂ ತೋರಲಿ, ನಾನಂತು ಸಾಕ್ಷಾತ್ ನಿನ್ನ ಪ್ರಿಯಕರನೆ ನಿಜ. ತಿಸ್ಬಿ, ಈ ದುಷ್ಟ ಗೋಡೆಯಾ ಕಿಂಡಿಯಿಂ ಎನಗೊಂದು ಮುತ್ತು ಕೊಡು.

**ತಿಸ್ಬಿ.** ಬರಿ ಗೋಡೆಯಾ ಕಿಂಡಿಗೇ ಮುತ್ತು ಕೊಟ್ಟಾಯ್ತು. ನಿನ್ನ ತುಟಿಗಳು ನಿಲುಕಲೇ ಇಲ್ಲ.

**ಪಿರಮುಸ್.** ಹಾಗಾದರೀಗಲೇ ಹೊರಟು ನೀಂ 'ನಿನ್ನಿ'ಯಾ ಗೋರಿ ಬಳಿ ಸಂಧಿಸುವೆಯಾ ನನ್ನ?

**ತಿಸ್ಬಿ.** ಬರುವೆ ... ಖಂಡಿತ ಬರುವೆ ... ಬದುಕಿದ್ದರೂ ಬರುವೆ, ಸತ್ತಿದ್ದರೂ ಬರುವೆ ...ಸಮಾಧಿ ಬಳಿ ಸಂಧಿಸುವೆ ನಿನ್ನ.

['ನಿನ್ನಿ'ಯ ಗೋರಿಯ ಬಳಿ. ಸಿಂಹದ ಪ್ರವೇಶ.]

**ಸಿಂಹ.** ಎಲೆ ಹೆಂಗಳೆಯರೆ ... ಇಲಿ-ಜೊಂಡಿಂಗಗಳ ಕಂಡು ಹೆದರಿ ಚೀರುವ ಮುಹಿಳೆಯರೆ ... ನಾನು ಸಿಂಹ. ಮುಂದಿನ ಪ್ರವೇಶದಲ್ಲಿ ನಾನು ಗುಡುಗುವೆ ಹೀಗೆ (ಗುಡುಗುವನು) ... ತಿಸ್ಬಿಯ ಮೇಲುದರ ಬಟ್ಟೆಯನ್ನು ಮಾತ್ರ ಹರಿದು ಚೆಲ್ಲಿ ಹೋಗುವೆ. ಅವಳನ್ನು ಕೊಲ್ಲುವುದಿಲ್ಲ. ಈಗಲೇ ಹೇಳಿರುವೆ. ಯಾರೂ ಅಂಜದಿರಿ. ಇದೋ ತಿಸ್ಬಿ ಬಂದಳು.

**ತಿಸ್ಬಿ.** ಇದುವೆ 'ನಿನ್ನಿ'ಯ ಗೋರಿ. ಎಲ್ಲಿ ನನ್ನ ನಲ್ಲನು?

[ಸಿಂಹ ಗುಡುಗುವುದು, ತಿಸ್ಬಿ ಚೀರಿ ಓಡುವಳು. ನಂತರ ಪಿರಮುಸನ ಪ್ರವೇಶ.]

**ಪಿರಮುಸ್.** ಎಲೆ ಮುದ್ದು ಚಂದಿರನೆ, ಪ್ರಖರ ಕಿರಣಗಳಿತ್ತು ಮಾರ್ಗ ತೋರಿದ ನಿನಗೆ ವಂದನೆಯು. ನಿನ್ನ ಈ ಹೊಂಗಿರಣಗಳ ಮಾಲೆಗಳ ಮೂಲಕವೆ ಕುಸುಮಕೋಮಲೆಯಾದ ತಿಸ್ಬಿಯಾ ಮುಖವನ್ನು ಕಾಣಲಿಹೆ ... ಆದರಯ್ಯೋ ... ಆಃ ವಿಧಿಯೆ! ಏನು ಘೋರ ದೃಶ್ಯವಿದು! ಅಕಟಕಟಾ! ಎಲೆ ಕಣ್ಣುಗಳೆ, ಕಾಣುವುದೆ ಈ ದೃಶ್ಯ? ಎಂತಾದುದಿಂತು? ಹಾ ಎನ್ನ ರನ್ನೆ! ಎನ್ನ ಮೋಹದ ಮುದ್ದು ಬಾತುಕೋಳಿಯೆ, ನಿನ್ನ ಮೇಲುದರ ಬಟ್ಟೆಯಿಂತು ಚಿಂದಿಯಾಯ್ತೆ? ಇದರ ಮೇಲೆ ರಕ್ತದಾ ಕಲೆಗಳೇಕೆ? ಎಲೆ

ಮುಗಿಲಲಿಹ ಸಿಡಿಲುಗಳೆ, ಮುಗಿಸಿಬಿಡಿ ಎಲ್ಲವನು. ಬಂದೆರಗಿ ಎನ್ನ ತಲೆಯ ಮೇಲೆ. ಎಲೆ ನಿಸರ್ಗವೆ, ನೀನೀ ಜಗದಿ ಸಿಂಹಗಳನೇಕಾದರೂ ಹುಟ್ಟಿಸಿದೆ? ನನ್ನ ಕುಸುಮವ ಹರಿದು ಚೆಲ್ಲುವ ಕ್ರೂರ ನಖಗಳನ್ನೇಕಿತ್ತೆ ಸಿಂಹಕ್ಕೆ? ಬನ್ನಿ ಕಂಬನಿಗಳೇ, ನನ್ನ ದೃಷ್ಟಿ ಮಂಜಾಗಲಿ. ಬಾರೆನ್ನ ಖಡ್ಗವೇ, ಪಿರಮಸನ ಎದೆಯನ್ನು ಇರಿದು ಬಿಡು. ಊಹುಂ. ಈಚೆ ... ಎಡಬದಿಗೆ ... ಅಲ್ಲಿಹುದು ಹೃದಯ. ಇದೊ ನಾ ಸತ್ತೆ ... ಸತ್ತೆ ... ಹೀಗೆ. ನಾನೀಗ ಸತ್ತಿರುವೆ, ನಾನೀಗ ಹೊರಟಿರುವೆ. ನನ್ನಾತ್ಮ ಆಕಾಶಕೇರಿಹುದು. ನಾಲಿಗೆಯೆ, ನಿನ್ನ ಹೊಳಪು ಕಳೆದುಕೊಳು. ಚಂದಿರನೆ, ನೀನಿನ್ನು ಮುಳುಗಿಬಿಡು. ನಾನಿದೋ ಸತ್ತೆ ... ಸತ್ತೆ ... ಸತ್ತೆ ... ಸತ್ತೆ.

— **ವಸಂತ ಕವಲಿ**

**ಅದೇ,** V. i. 169 **ಮತ್ತು ಆ ಮುಂದೆ**

## ಯಕ್ಷರ ಹಾಡು — ಹರಕೆ

'ಪಿರಮಸ್-ತಿಸ್ಬಿ'ಯ ಆಟದೊಂದಿಗೆ ವಿವಾಹಸಮಾರಂಭ ಮುಗಿಯುತ್ತದೆ. ರಾತ್ರಿಯ ಹನ್ನೆರಡು ಗಂಟೆ. ನಲ್ಲರೆಲ್ಲರೂ ತಮ್ಮ ತಮ್ಮ ಕೋಣೆಗೆ ತೆರಳುತ್ತಾರೆ. ಅವರ ನಡುವೆ ಸಾಕಷ್ಟು ಗೊಂದಲ ಹಚ್ಚಿ, ಕೊನೆಗೆ ಅವರನ್ನು ಸುಖದಲ್ಲಿ ಕೂಡಿಸಿದ ಯಕ್ಷರಾಜರಾಣಿಯರು ಆಗ ತಮ್ಮ ಪರಿವಾರದೊಂದಿಗೆ ಅರಮನೆಗೆ ಬಂದು ದಂಪತಿಗಳೆಲ್ಲರನ್ನೂ ಹರಸಿ, 'ಮಂಗಳ' ಹಾಡಿ, ಕುಣಿಯುತ್ತಾರೆ. ಹರಕೆಗೆ ಮುನ್ನ, ಪೊರಕೆ ಹಿಡಿದು ಬಂದ ಪಕ್ ರಾತ್ರಿಯ ವರ್ಣನೆ ನೀಡುತ್ತಾನೆ.

**ಪಕ್.** ಹಸಿದ ಸಿಂಹವು ಈಗ ಗುಡುಗು ಹಾಕುವುದು
ಮತ್ತೆ ತಿಂಗಳ ಕಂಡು ತೋಳ ಬೊಗಳುವುದು
ಜಡನಾದ ಒಕ್ಕಲಿಗ ಗೊರಕೆ ಹೊಡೆಯುವುದು
ದುಡಿತದಣಿತದ ದಗದ ತಾನೆ ಜಗುಳುವುದು

ಈಗ ತಂಗಳ ಕುಡಂಗಳಿಗೆ ಹೊಳಹೊಳಪು
ಕಿರಿಚು-ಗೂಗೆಗೆ ಕಿರಿಚಿ ಕಿರಿಚಿ ತಣಿಪು
ನೋವಿನಲಿ ನರಳುವಾ ನರಪೇತುಗಳಿಗೆ
ಪ್ರೇತವಸ್ತ್ರದ ಸುತ್ತುಸುತ್ತು ನೆನೆಪು

ಈಗ ಇರುವುದು ಕಾಲ ರಾತ್ರಿಹೊತ್ತು
ಗೋರಿಗೋರಿಯ ಬಾಯಿ ಅಕಳಿಸಿ ತೆರೆದು
ಒಳಗೊಂಡ ಪ್ರೇತಗಳ ಬಿಡುಗಡೆಯು ಆಗೆ
ಮಸಣವಾಟಿಯಲವೂ ಬಹವು ಹಾತೊರೆದು

ಮುವ್ಮೊಗ ಹೆಕೇಟಗಣಯಕ್ಷಿಯರು ನಾವು
ಮಾಡುವುದು ಓಡುವುದು ಅವಳಂತೆ ಮನಸು
ಸೂರ್ಯನಿಗೆ ಬೆಂಗೊಟ್ಟು ಬಹೆವು ನೆರಳಾಗಿ
ಕತ್ತಲೆಯ ಬೆಂಬತ್ತಿ ಬರುವಂತೆ ಕನಸು

ಈಗ ನಮ್ಮದೆ ಕ್ರೀಡೆ, ಮನೆ ಮಂತ್ರಬದ್ಧ
ಮಿಸುಕಾಡುವಂತಿಲ್ಲ ಇಲ್ಲಿ ಮೂಷಕವು
ಕಸಪೊರಕೆ ನಾ ತಂದೆ ಹೋಗಲಿಲ್ಲಿಂದ
ಕಸಕಡ್ಡಿ ಹೊಲೆ-ಧೂಳು ಎಲ್ಲ ದೂಷಕವು

[ಓಬೆರಾನ್ ಟೈಟೇನಿಯ ಸಪರಿವಾರ ಪ್ರವೇಶ.

**ಓಬೆರಾನ್.** ಈ ಮನೆಯ ತುಂಬಿಹುದು ಮಿಣುಮಿಣುಕು ಬೆಳಕು
ಬೂದಿ ಹೊದ್ದಿಹ ಬೆಂಕಿ ಮಾಡುತಿದೆ ನಿದ್ದೆ
ಎಲೆ-ಯಕ್ಷಿ, ಮಲೆ-ಯಕ್ಷಿ, ಪ್ರೀತಿಭೂತುಗಳು
ಪೊದೆಹಕ್ಕಿ ಕುಕ್ಕುಣಿವ ಹಾಗೆ ನಟ-ವಿದ್ಯೆ
ಹಾಡಿನಲಿ ಕುಣಿತದಲಿ ಅನುಸರಿಸಿ ಹೆಜ್ಜೆ
ಬರಲಿ ಗೀತದ ಹಿಂದೆ ಅನುರಣಿಸಿ ಗೆಜ್ಜೆ.

**ಟೈಟೇನಿಯ.** ಮೊದಲು ಆಗಲಿ ಕಂಠಪಾಠ ತರಬೇತು
ಪದ-ಪದಕೆ ಹೊಸ-ಹೊಸಾ ಕೂಕೂಜನ
ಕೈಯಲ್ಲಿ ಕೈಹಾಕಿ ಯಕ್ಷ-ನಯ-ದಕ್ಷತೆಗೆ
ಹಾಡಿ ಹರಸುವೆವು ನಾವೀ ನಮ್ಮನೆ
[ ಗೀತ ಮತ್ತು ನೃತ್ಯ ]

— **ಅಂಬಿಕಾತನಯದತ್ತ**
**ಅದೇ,** V. i. 369-398

## ಅರಸನಿಗೆ ಅರೆನಿದ್ದೆ

ಕಿರೀಟ ತೊಟ್ಟ ತಲೆಗೆ ನೆಮ್ಮದಿಯೆಂಬುದಿಲ್ಲ. 'ಕಿಂಗ್ ಹೆನ್ರಿ ದಿ ಫಿಫ್ತ್' ನಾಟಕದಲ್ಲಿ ಯುದ್ಧದ ಸಿಕ್ಕಿನಲ್ಲಿ ಬಿದ್ದ ದೊರೆ ಐದನೆಯ ಹೆನ್ರಿ ಒಬ್ಬ ಅರಸನಿಗಿಂತ ಸಾಮಾನ್ಯ ಮನುಷ್ಯ ಎಷ್ಟು ಸುಖಿಯೆಂಬುದನ್ನು ಕುರಿತು ಆಲೋಚಿಸುತ್ತಾನೆ.

ರಾಜಮಸ್ತಕಕೆಂದೆ ತಂದ ಮೀಸಲು ತೈಲ,
ರಾಜಗೌರವದಲವು, ನರ್ತನದ ವರ್ತುಲವು,
ದೊರೆಯ ಖಡ್ಗವು, ರಾಜದಂಡ, ಮುಕುಟಾಭರಣ,
ಚಿನ್ನದಲಿ ಚಿಂಬವಳ ಕೋದ ವಸ್ತ್ರಾವರಣ,

ಭೂಷಣದ ಉದ್ದಗಲ ನಾಮಾಭಿಧಾನಗಳು,
ರಾಜಸಿಂಹಾಸನವು, ಮುಗಿಲಂಚನೇ ಮುಟ್ಟಿ
ಮತ್ತೆ ಮಾರ್ದನಿಗೊಂಬ ಅಟ್ಟಹಾಸದ ಅಲೆಯು :
ಅಲ್ಲ, ಅದೊಂದೂ ಅಲ್ಲ, ಇನ್ನೆನಿತೊ ಸಡಗರವು
ಶಯನಸೌಂದರ್ಯವನು ಹೆಚ್ಚಿಸಿದರೂ ಸರಿಯೆ
ಸುಖನಿದ್ದೆ ಕೊಡಲಿಲ್ಲ ದೊರೆಗೊಬ್ಬ ಆಳಿನೊಲು!

ತುಂಬು ದೇಹದೊಳೊಂದು ಬರಿದಾದ ಮನ ಹೊತ್ತು
ಸ್ವಂತ ರಟ್ಟೆಯ ಮುರಿದು ದುಡಿದ ರೊಟ್ಟಿಯ ತಿಂದು
ಮಲಗುವಾಳಿಗೆ ಎಂದೂ ನರಕಸಮ ರಾತ್ರಿಗಳು
ಕಾಣಲಾರವು ! ಮಾತ್ರ ದುಡಿವುದೊಂದೇ ಗೊತ್ತು—
ಉದಯಾಸ್ತಗಳ ನಡುವೆ ದಿನಮಣಿಯ ಸಾಕ್ಷಿಯೊಳು !
ರಾತ್ರಿಯೊಳಗೋ ಸ್ವರ್ಗಸುಖ ನಾಚಿಸುವ ನಿದ್ರೆ !
ಮರುದಿನದ ಬೆಳಗಾಗೆ, ಸೂರ್ಯದೇವನ ರಥಕೆ
ಕುದುರೆ ಹೂಡಲು ನೆರವು ನೀಡುವೊಲು ಕಣಕಿಳಿವ !
ವರ್ಷವರ್ಷವು ಗೈವನಿಂಥ ಹರ್ಷದ ದುಡಿತ;
ಸಾವವರೆಗವಗಿಲ್ಲ ನಿದ್ದೆಗೆಡಿಸುವ ಕಡಿತ !

— ಬಿ. ಎ. ಸನದಿ

'ಕಿಂಗ್ ಹೆನ್ರಿ ದಿ ಫಿಫ್ತ್', IV. i. 256-73

## 'ಜೂಲಿಯಸ್ ಸೀಸರ್' : ಕೊಲೆಯ ಬಿತ್ತನೆ

ಪಾಂಪೆಯನ್ನು ಗೆದ್ದು ಬಂದ ಸೀಸರನ ಭಾಗ್ಯತಾರೆ ಮೇಲೇರುತ್ತಿದೆ. ಅದನ್ನು ಕಂಡು ಕ್ಯಾಸಿಯಸನಿಗೆ ಕರುಬು. ಅವನು ಸೀಸರನ ಕೊಲೆಯ ಸಂಚು ಹೂಡಿದ್ದಾನೆ. ಆದರೆ ಕೊಲೆ ನಡಸಿ ತಾನುಳಿಯ ಬೇಕಾದರೆ ಅದಕ್ಕೆ ದೇಶಹಿತದ ಬೆಲೆ ಕಾಣಿಸಿ, ಘನೋದ್ದೇಶದ ಮುಸುಕು ಹೊದಿಸಬೇಕು. ರೋಮಿನ ಸ್ವಾತಂತ್ರ್ಯ, ಪ್ರಜಾಸತ್ತೆಗಳ ರಕ್ಷಣೆಗಾಗಿ ಏನನ್ನು ಮಾಡಲೂ ಹಿಂಜರಿಯದ ಘನವಂತ ಬ್ರೂಟಸನನ್ನು ಪ್ರಚೋದಿಸಿ ಅವನಿಂದ ಕೊಲೆ ಮಾಡಿಸುವುದೇ ಇದಕ್ಕೆ ಮಾರ್ಗ. ಕ್ಯಾಸಿಯಸ್ ಈ ದೃಶ್ಯದಲ್ಲಿ ಅದನ್ನು ಸಾಧಿಸುತ್ತಾನೆ.

**ಕ್ಯಾಸಿಯಸ್.** ನಾ ನಿನ್ನ ಇತ್ತೀಚೆ ನೋಡುತಿರುವೆನು, ಬ್ರೂಟಸ್.
ಮುನ್ನ ಯಾವದು ಸೌಮ್ಯ ಭಾವ, ಒಲವಿನ ತೋರ್ಕೆ,
ದೊರೆವ ವಾಡಿಕೆ, ಈಗ ನನಗೆ ಅವು ದೊರಕದಿವೆ.
ನಿನ್ನ ಪ್ರೀತಿಸುತಿರುವ ನಿನ್ನ ಗೆಳೆಯನ ಮೇಲೆ

ನೀನು ಅತಿ ಅಪರಿಚಿತ, ಅತಿ ಕಠಿನ, ಅಹ ಕೈಯ
ತಳೆದಿರುವೆ.

ಬ್ರೂಟಸ್. ಕ್ಯಾಸಿಯಸ್, ತಪ್ಪಾಗಿ ತಿಳಿಯದಿರು.
ನನ್ನ ನೋಟವ ನಾನು ಮರೆಸಿರುವೆನೆನೆ, ನಾನು
ನನ್ನ ಮೋರೆಯ ಕಳವಳವ ನನ್ನ ಮೇಲಷ್ಟೆ
ತಿರುಗಿಸಿರುವೆನು. ಈಚೆ ನನಗೆ ಏನೋ ಒಂದು
ತೆರದ ಭಾವಗಳಿಂದ, ನನ್ನ ಮಾತ್ರಕೆ ತಗುವ
ಯೋಚನೆಗಳಿಂದ, ಮನ ಆಕುಲಿತವಾಗಿಹುದು.
ಇವು ನನ್ನ ನಡತೆಯನು ಒಂದಿನಿಸು ಕೆಡಿಸಿಹುದು
ಸಂಭವ. ಆದರೀ ಕತದಿಂದ ನನ್ನ ಕೆಳೆ—
ಅವರ ಸಂಖ್ಯೆಯಲಿ ನೀನೂ ಸೇರು, ಕ್ಯಾಸಿಯಸ್—
ಮರುಗುವುದು ಬೇಡ; ನನ್ನತು ಅನಾದರಣೆಗೆ,
ಬಡಪಾಯಿ, ತನ್ನೊಡನೆ ತಾನೆ ಸೆಣಸುತ, ಬ್ರೂಟಸ್
ಹೆರವರಿಗೆ ಪ್ರೇಮ ತೋರುವ ಕೃತಿಯ ಮರೆತಿಹನು,
ಎಂಬನಿತಕೇನೆ ಮಿಗಿಲರ್ಥವನು ನೀಡದಿರಿ.

ಕ್ಯಾಸಿಯಸ್. ಇಂತಿರಲು ನಾ ನಿನ್ನ ಉದ್ಯೋಗವನು, ಬ್ರೂಟಸ್
ತೀರ ತಪ್ಪಾಗಿ ತಿಳಿದೆನು. ಇದರ ಫಲವಾಗಿ
ಈ ನನ್ನ ಎದೆ ತುಂಬ ಬೆಲೆಯ ಯೋಚನೆಗಳನು,
ಯೋಗ್ಯ ಚಿಂತನಗಳನು ಹುಗಿದಿರಿಸಿಕೊಂಡಿತು.
ನಿನ್ನ ಮುಖ ನಿನಗೆ ಕಾಂಬುದೆ, ನನಗೆ ಇದ ಹೇಳು,
ಅಣ್ಣ ಬ್ರೂಟಸ್.

ಬ್ರೂಟಸ್. ಇಲ್ಲ ಕ್ಯಾಸಿಯಸ್. ಹೆರವಸ್ತು
ತೋರುತಿಹ ಪ್ರತಿಬಿಂಬದಿಂದ ಅಲ್ಲದೆ ಕಣ್ಣು
ತಾ ತನ್ನ ಕಾಣದು.

ಕ್ಯಾಸಿಯಸ್. ಸತ್ಯ ಈ ಉಕ್ತಿ.
ಅಂತೆ ಬ್ರೂಟಸ್ ನಿನ್ನ ಗುಪ್ತ ಅರ್ಹತೆಯನು
ನಿನ್ನ ದೃಷ್ಟಿಗೆ ತಿರುಹಿ ನಿನ್ನ ನೆರಳನು ನೀನು
ಕಾಂಬಂತೆ ಗೆಯ್ವ ಕನ್ನಡಿ ಇಲ್ಲವಾದುವೇ
ಎಂದು ಬಹು ವ್ಯಥೆ ಆಗಿಹುದು. ಅಮರ ಸೀಸರನ
ಹೊರತಾಗಿ ರೋಮಿನತ್ಯಂತ ಗೌರವಿತ ಜನ
ಹಲರು ಬ್ರೂಟಸ್ ವಿಷಯ ನುಡಿವುದನು, ಈ ಯುಗದ
ನೊಗದ ಅಡಿ ಸಿಲುಕಿ ನರಳುತ, ಉದ್ಧ ಬ್ರೂಟಸ್‌ಗೆ
ಕಣ್ಣಿದ್ದವೇ ಚೆನ್ನವಿತ್ತೆಂದುಕೊಂಡುದನು,
ನಾನು ಕೇಳಿಹೆನು.

ಬ್ರೂಟಸ್. ನನ್ನೊಳಗಿಲ್ಲದಿಹ ಹುರುಳ
ಕಾಣುವರೆ ನಾನೆ ನನ್ನಾಂತರ್ಯದಲಿ ಅರಸ
ನನ್ನ ಪ್ರೇರಿಸಿ, ಕ್ಯಾಸಿಯಸ್ ನೀನು ನನ್ನನು
ಯಾವವು ಅಪಾಯಗಳಿಗೆಳೆಯುತಿಹೆ ?

ಕ್ಯಾಸಿಯಸ್. ಅಂತೆನಲು,
ಅಣ್ಣ ಬ್ರೂಟಸ್, ಕೇಳಲಣಿಯಾಗು. ಆಯ್ತೆ, ನೀ
ಪ್ರತಿಬಿಂಬದಿಂದೆಂತು ಅಂತು ನೀನೇ ನಿನ್ನ
ಚೆನ್ನ ಕಾಂಬುದಸಾಧ್ಯ ಎಂದು ತಿಳಿದಿಹೆಯಾಗಿ,
ನಿನ್ನ ಕನ್ನಡಿ ನಾನು, ನಿನ್ನ ವಿಷಯ ಅದೇನ
ನೀನು ಇನ್ನೂ ಕಾಣದಿರುವೆ, ಅದ ತಕ್ಕನಿತು
ಮಿತವಾಗಿ ನಿನಗೆಯೇ ಪ್ರಕಟಗೆಯ್ವೆನು. ಆಯ್ತೆ
ಸೌಮ್ಯ ಬ್ರೂಟಸ್, ನನ್ನ ಕುರಿತು ನೀ ಸಂದೇಹ
ಪಡಬೇಡ. ನಾನು ಎಲ್ಲರ ಜೊತೆಗೆ ನಗುವಂಥ
ಒಬ್ಬನೋ, ಒಬ್ಬೊಬ್ಬ ಹೊಸ ಶಪಥಕಾರನಿಗೆ
ನನ್ನ ಪ್ರೇಮುವನು ಬೀದಿಯ ಆಣೆ ನುಡಿಯಿಂದ
ಹಳಸು ಮಾಡುವ ಬಳಕೆಯವನೋ, ಆಗಿರುವೆನೆ;
ಇಲ್ಲವೇ ಜನರನೋಲೈಸಿ ಬಿಗಿದಪ್ಪಿ, ಅದೆ
ಆಮೇಲೆ ಅವರ ನಿಂದಿಸುವೆನೆಂಬುದ ನೀನು
ಕಂಡಿರುವೆಯೇ; ಇಲ್ಲವೇ ಸಂತೆ-ಜನಕೆಲ್ಲ
ಔತಣವನುಣಿಸಿ ಭೇಷಜವಾಡುವವನೆಂದು
ನಿನಗೆ ಕಂಡಿರುವುದೇ; ಇವನಪಾಯದ ಮನುಜ
ಎಂದು ನನ್ನನು ಕಾಣು.

[ಸಂಭ್ರಮದ ಓಲಗ, ಕೋಲಾಹಲ.

ಬ್ರೂಟಸ್. ಏನೊ ಈ ಕೋಲಾಹಲದ ಅರ್ಥ. ನನಗೆ ಭಯ,
ಜನ ಸೀಸರನ್ನು ದೊರೆಯಾಗಿ ವರಿಸುವರೆಂದು.

ಕ್ಯಾಸಿಯಸ್. ಅಂತೆ, ನಿನಗದು ಭಯವೆ? ಎನೆ ನೀನು ಅದನೊಲ್ಲೆ
ಎಂದೆ ನಾ ತಿಳಿಯುವೆನು.

ಬ್ರೂಟಸ್. ಒಲ್ಲೆ ದಿಟ, ಕ್ಯಾಸಿಯಸ್.
ಇಂತಿದ್ದು ನನಗವನು ತುಂಬ ಪ್ರಿಯ. ಆಯಿತೇ,
ನೀನು ನನ್ನನು ಏಕೆ ಇನಿತಿಲ್ಲಿ ನಿಲ್ಲಿಸಿಹೆ ?
ನೀ ನನಗೆ ಹೇಳ ಬಯಸಿರುವ ಸಂಗತಿ ಏನು ?
ಸರ್ವ ಜನತೆಯ ಶುಭವ ಸಾಧಿಸುವ ಏನೊಂದು
ವಿಷಯವೇ ಅದು, ಒಂದು ಕಣ್ಣೆದುರು ಮರ್ಯಾದೆ
ಇನ್ನೊಂದರೆದುರು ಸಾವನು ಇರಿಸು, ನಾ ಅವನು

ಎರಡನೂ ಸಮವಾಗಿ ನೋಡುವೆನು ; ಸಾವೆನಲು
ಎನಿತಂಜುವೆನು ಅದಕು ಮಿಗಿಲು ಮರ್ಯಾದೆಯೆನೆ
ನಾನು ಒಲಿವೆನೆ, ಆಗ ಮಾತ್ರ ದೈವಗಳೆನಗೆ
ಶುಭವ ನೀಡಲಿ.

**ಕ್ಯಾಸಿಯಸ್.** ನಿನ್ನಲಿಂತಪ್ಪ ಗುಣ ಇಹುದು
ನಾನು ಬಲ್ಲೆನು, ಬ್ರೂಟಸ್. ನಿನ್ನ ಹೊರಮೊಗವನು
ಎನಿತು ಚೆನ್ನ ಅನಿತು ಚೆನ್ನ. ಒಳ್ಳಿತು, ನನ್ನ
ಕತೆ ಇದರ ವಸ್ತು ಮರ್ಯಾದೆ. ನೀನು, ಬೇರೆ
ಜನ, ಬಾಳ್ವೆ ಇದ ಕುರಿತು ಏನು ನೆನೆವಿರೊ, ನಾನು
ಒರೆಯಲರಿಯೆನು. ಇದ್ದು, ನನ್ನೊಬ್ಬನದು ಮಾತ
ಹೇಳುವೆನೆ, ಈ ನಾನು ಎಂಥದಂಥದೆ ಒಂದು
ವಸ್ತುವೆನೆ ಭಯಪಡುತ ಬಾಳುವುದಕಿಂತಲೂ
ಬಾಳದಳಿವುದು ಅಶುಭವಲ್ಲ ಎಂಬೆನು ನಾನು.
ಸೀಸರಂತೆಯೆ ನಾನು ಹುಟ್ಟನಿಂದ ಸ್ವತಂತ್ರ.
ನೀ ಅಂತೆ. ನಾವಿಬ್ಬರೂ ಅವನು ಎಂತಂತೆ
ಉಂಡಿಹೆವು. ಅಂತೆ ನಾವಿಬ್ಬರೂ ಅವನೆನಿತು
ಅನಿತೆ ಮಾಗಿಯ ಚಳಿಯ ಸಹಿಸಬಲ್ಲೆವು. ಏಕೆ,
ಒಮ್ಮೆ, ತಂಡಿಯ ಒಂದು ದಿನ, ಗಾಳಿಯಲಿ ಟೈಬರ್
ಕ್ಷೋಭೆಯಲಿ ದಡಗಳನು ಬಡಿವಂದು, ಸೀಸರ್
ನನಗೆ, "ಕ್ಯಾಸಿಯಸ್, ಈಗ ನನ್ನೊಡನೆ ನೀನು ಈ
ಕೋಪದ ಪ್ರವಾಹದೊಳಗಡೆಗೆ ದುಮ್ಮಿಕ್ಕುವೆಯ ?"
ಎಂದು ಕೇಳಿದನು. ಹೇಳಿದುದೆ ತಡ, ವಸ್ತ್ರಾಸ್ತ್ರ
ಸಹಿತ ಎಂತಿದ್ದೆ ಅಂತೇ ನಾನು ದುಮ್ಮಿಕ್ಕಿ
ಹಿಂದೆ ಬಾ ಎಂದು ಕರೆದೆನು ಅವನ. ಅವನು ಸಹ
ದುಮ್ಮಿಕ್ಕಿದನು, ಉಂಟು. ನಿರ್ಝರಿಣಿ ಗರ್ಜಿಸಿತು.
ಅಂತೆ ನಾವದ ಶಕ್ತಿಯುಕ್ತ ಬಾಹುಗಳಿಂದ
ಮರ್ದಿಸುತ ಅದನು ಬದಿಗೆಸೆದು ಅಹಮಹಮಿಕೆಯ
ಮನದಿಂದ ಮಲೆತು ಹರಿದೆವು. ಇರುತ, ಯಾವೆಡೆಯ
ಸೇರ ಹೊರಟೆವು ಅದನು ನಾವು ಮುಟ್ಟುವ ಮುನ್ನ
"ಕ್ಯಾಸಿಯಸ್ ನೆರವಾಗು, ಇಲ್ಲ, ನಾ ಮುಳುಗಿದೆ"
ಎಂದು ಸೀಸರ್ ಕೂಗಿದನು. ನಾನು, ಈನಿಯಾಸ್,
ಮಹನೀಯ ನಮ್ಮ ಪೂರ್ವಜ, ಉರಿವ ಟ್ರಾಯಿಂದ
ವೃದ್ಧ ಆ್ಯಂಕೀಸಸನ ತನ್ನ ಹೆಗಲಲಿ ಹೊತ್ತು
ಹೊರಗೆ ತಂದಂದ, ಟೈಬರ್ ತರಂಗಗಳಿಂದ

ಸೋತಿದ್ದ ಸೀಸರನ ಹೊತ್ತುತಂದೆನು. ಕಾಣ,
ಈ ಮನುಜ ಈಗೊಬ್ಬ ದೇವರು, ಕ್ಯಾಸಿಯಸ್,
ಬಡಪಾಪಿ ಜಂತು ಒಂದಾಗಿರುತ, ಕಂಡೆಯ,
ಸೀಸರ್ ಉದಾಸೀನ ಭಾವದಲಿ ಇವನತ್ತ
ತಲೆ ಆಡಿಸಿದನೆನಲು ಮೈಯ್ಯ ಮಣಿಯಲು ಬೇಕು.
ಸ್ಪೈಯಿನಿನಲಿ ಇದ್ದಂದು ಜ್ವರ ಬಂದಿತಿವನಿಗೆ.
ಆಯ್ತೆ, ಜ್ವರ ಬಾರಿಸಿದ ವೇಳೆ ಇವನು ಅದೆನಿತು
ನಡುಗಿದನು ಅದ ನಾನು ಗಮನಿಸಿದೆ. ದಿಟವಾಗಿ
ನಡುಗಿದನು ಈ ದೇವ. ಇವನಂಜುಪುರುಕ ತುಟಿ
ತಮ್ಮ ಬಣ್ಣವನು ತೊರೆದೋಡಿದವು. ಅಂತೆ ಆ
ಕಣ್ಣು ಇವನವು, ಬಾಗಿದವೆ ಲೋಕವನು ತ್ರಾಸ
ಗೊಳಿಸುವವು, ತಮ್ಮ ಬೆಳಕನೆ ನೀಗಿಕೊಂಡವು.
ಇವನು ನರಳಿದನು, ನಾ ಕೇಳಿದೆನು; ದಿಟ ಇದು.
ಅಂತೆ ದಿಟ, ರೋಂ ನಗರಿಗರಿಗೆ, 'ನಾ ಹೇಳುವುದ
ಮನಕೊಟ್ಟು ಕೇಳಿ ನಿಮ್ಮವು ಹೊತ್ತಗೆಗಳೊಳಗೆ
ಬರೆದಿಟ್ಟುಕೊಳ್ಳಿರಿ,' ಎಂದ ಆಣತಿಗೆಯ್ದ
ಇವನ ಆ ನಾಲಗೆ, 'ಅಯ್ಯೋ, ಟಿಟನಿಯಸ್,
ತುಸು ನೀರು ಕುಡಿಸೆ'ಂದು ಕೂಗಿತು, ರೋಗಿಷ್ಠ
ಹುಡುಗಿ ಒಂದೆಂಬಂದ. ಅಯ್ಯ ದೇವರುಗಳೇ,
ನನಗಿದಚ್ಚರಿ, ಇಂಥ ನಿತ್ರಾಣ ಚೇತನದ
ಒಬ್ಬವನು ರಾಜಘನ ಜಗವೆಲ್ಲವನು ತನ್ನ
ಹಿಂದಿಕ್ಕಿ ವಿಜಯಕೇತನವ ತಾನೊಬ್ಬನೇ
ಹೊತ್ತಿರುವನೆನ್ನುವುದು.

[ಸಂಭ್ರಮದ ಓಲಗ, ಕೋಲಾಹಲ.

**ಬ್ರೂಟಸ್.** ಮತ್ತೆ ಜನತೆಯ ಘೋಷ!
ನನಗೆ ನಿಶ್ಚಯ, ಘೋಷ ಇವು ಸೀಸರನ ಮೇಲೆ
ಹೇರುತಿಹ ಯಾವವೋ ಹೊಸ ಗೌರವಗಳ ಸಲು
ಎಂದು.

**ಕ್ಯಾಸಿಯಸ್.** ಏಕಯ್ಯ, ಕಿರಿ ಅಗಲದೀ ಭೂಮಿಯನು ಇವನು
ತನ್ನ ಕಿಸುಗಾಲ ಮಧ್ಯದಲಿರಿಸಿ ವಿಕ್ರಮಿಸಿ
ನಿಂದಿಹನು. ನಾವೊ, ಕುತ್ಸಿತಮಂದಿ, ಇವನ ಹಿರಿ
ಕಾಲಿವುಗಳಡಿಯೆ ನಡೆದಾಡಿ ಹೀನಾಯದವು
ನಮ್ಮ ಹೂಣ್ಕುಳಿಗಳನು ಕಂಡು ಕೊಳಲಿತ್ತತ್ತ
ಇಣಿಕಿನೋಡುತಲಿಹೆವು. ಮಾನವರು ಕೆಲಸಮಯ

ತಮ್ಮದೃಷ್ಟವ ತಾವು ಆಳುವರು. ಪ್ರಿಯ ಬ್ರೂಟಸ್,
ನಾವು ಊಳಿಗವಾಗಿ ಇಹೆವೆಂಬ ಕೊರೆ ಇದಕೆ
ನಮ್ಮ ತಾರೆಗಳು ಹೊಣೆ ಅಲ್ಲ, ನಾವೇ ಹೊಣೆ.
ಬ್ರೂಟಸ್; ಸೀಸರ್. ಸೀಸರ್ ಶಬ್ದದಲಿ
ಅದು ಏನು ಇರಬಹುದು? ನಿನ್ನದಕು ಮಿಗಿಲು ಸಲ
ಆ ಹೆಸರನುಸುರಬೇಕೇಕೆ? ಅವ ಜೊತೆಗೆ ಬರೆ,
ನಿನತು ಅನಿತೇ ಚೆಲುವ ಹೆಸರು; ಅವ ನುಡಿ, ನಿನತು
ಆದರನಿತೆ ಬಾಯೊಳೆಸೆವುದು. ಎರಡನೂ ತೂಗು,
ಇದು ಅದಕೆ ಸಮಭಾರ. ಇವ ನುಡಿದು ಮಂತ್ರಿಸು,
ಸೀಸರ್‌ಗೆ ಎನಿತನಿತೆ ವೇಗದಲಿ ಬ್ರೂಟಸ್‌ಗೆ
ಒಂದು ಚೇತನ ಹೊರಟು ಬಹುದು. ಇಂತಿರೆ, ಎಲ್ಲ
ದೈವಗಳ ಹೆಸರಲೊಮ್ಮೆಗೆ ಆಣೆ ಇಕ್ಕಿ ನಾ
ಕೇಳುವೆನು, ನಮ್ಮ ಈ ಸೀಸರುಣ್ಣುವ ಊಟ
ಯಾವುದದು, ಇನಿಸಿವನ ಹಿರಿತನಕೆ ಬೆಳಸಿಹುದು?
ಕಾಲವೇ, ಹೀನಾಯ ಉಂಡೆ ನೀ. ರೋಂ, ನೀನು
ಉದ್ಘಶೋಣಿತದ ತಳಿಗಳ ನೀಗಿಕೊಂಡಿರುವೆ.
ಚಂಡಜಲದುದ್ರೇಕ ಕಾಲದಿಂದಿತ್ತೀಚೆ
ಹಾಯ್ದ ಯುಗ ಒಂದು ಯಾವುದು, ಒಬ್ಬ ಮನುಜನದು
ಸಲು, ಹೆಚ್ಚು ಜನರ ಸಲು ಅಲ್ಲ, ಹೆಸರಾಂತುದು?
ರೋಂ ನಗರವನು ಕುರಿತು ಮಾತನಾಡುವ ಮಂದಿ,
ಅದರ ವಿಸ್ತರದ ಭಿತ್ತಿಗಳು ಒಳಗೊಂಡಿಹುದು
ಬರಿ ಒಬ್ಬ ಮನುಜನನು ಎಂದೆನಲು, ಈ ಮುನ್ನ
ಎಂದು ಬಂದಿತು? ಈಗ ರೋಂ ಏಕ ನರ ಧಾಮ
ದಿಟ. ಏಕೆ? ಅದು ಉಸುರುವುದು ಒಬ್ಬನದೆ ನಾಮ.
ಅಯ್ಯ, ನಾ, ಅಂತೆ ನೀ, ನಮ್ಮಪ್ಪ ತಾತದಿರು
ರೋಮಿನಲಿ ದೊರೆ ಒಬ್ಬ ವಿಭವದಲಿ ಮೆರೆವುದನು
ಶಶ್ವತ್ಪಿಶಾಚ ಅಂತೆಸಗುವುದನೆನಿತನಿತು
ಸುಲಭ ಸಹಿಸುವ ಬ್ರೂಟಸ್ ಒಬ್ಬ ಇದ್ದನು ಒಮ್ಮೆ
ಎಂದುದನು ಕೇಳಿಹೆವು.

ಬ್ರೂಟಸ್. ನೀ ನನ್ನ ಪ್ರೀತಿಸುವೆ;
ಇದರಲೆನಸೂ ಶಂಕೆ ಇಲ್ಲೆನಗೆ. ನೀ ಎನ್ನ
ಎತ್ತ ಪ್ರೇರಿಸ ಬಯಸುತಿಹೆ, ಇನಿಸು ಕಾಣುತಿದೆ.
ಇದ ಕುರಿತು, ಈ ಕಾಲವನು ಕುರಿತು, ನಾನೆಂತು
ಎಣಿಸಿಹೆನು, ಮುಂದೆ ನಿನಗದ ಬಿಡಿಸಿ ತಿಳಿಸುವೆನು.

ಇಂತಿರುತ, ನಾ ನಿನ್ನ ಪ್ರೀತಿಯಿಂದಲೆ ಇಂತು
ಬೇಡಬಹುದೆನೆ, ಸದ್ಯ ನೀ ನನ್ನ ಇನ್ನನಿತು
ಚೋದಿಸಲುಬೇಡ. ನೀ ನುಡಿದುದೇನದ ನಾನು
ಆಲೋಚಿಸುವೆನು. ಹೇಳುವುದು ಇನ್ನೇನಿಹುದು
ಅದ ತಾಳ್ಮೆಯಿಂದ ಕೇಳುವೆನು. ಅಂತೇ ಇಂಥ
ಉನ್ನತ ವಿಚಾರಗಳ ಕೇಳುವುದು, ಉತ್ತರವ
ಹೇಳುವುದು, ಎರಡಕೂ ಯುಕ್ತವಹ ಸಮಯವನು
ಕಂಡು ತಿಳಿಸುವೆನು. ಅದುವರೆಗೆ, ಘನಚೇತನದ
ಓ ನನ್ನ ಮಿತ್ರ, ಇದ ಮೆಲ್ಲುತಿರು. ಈ ಕಾಲ
ನಮ್ಮ ಮೇಗಡೆ ಹೇರಬಹುದೆಂದು ತೋರುತಿಹ
ಕಠಿನವಹ ಸಂದರ್ಭಗಳಲಿ ರೋಮಿನ ಒಬ್ಬ
ಮಗನೆನಿಸಿಕೊಂಬುದಕು ಮಿಗಿಲು ಬ್ರೂಟಸ್ ಒಬ್ಬ
ಹಳ್ಳಿಗಾಡವನಾಗಲೆಳಸುವನು.

ಕ್ಯಾಸಿಯಸ್. ಬಲಹೀನ
ವಾಕ್ಯ ನನ್ನವು ಬ್ರೂಟಸಿಂದ ಇನಿಸಾದರೂ
ಕಿಡಿ ಕಾಣುವಂತೆ ಹೊಡೆದವು, ನನಗೆ ಸಂತೋಷ.

— ಶ್ರೀನಿವಾಸ

'ಜೂಲಿಯಸ್ ಸೀಸರ್', I. ii. 32-177.

## ಕೊಲೆ ಬಿಟ್ಟ ಫಲ

ಸೀಸರನ ಕೊಲೆಯಾಯಿತು. ಆ ಕಗ್ಗೊಲೆಯಲ್ಲಿ ಅವನ ಆಪ್ತಮಿತ್ರನೆನಿಸಿದ್ದ ಬ್ರೂಟಸನದೇ 'ಅತ್ಯಂತ ನಿರ್ದಯದ ಇರಿತ'. ಆದರೆ ದೈವತಂತ್ರದಲ್ಲಿ ಬಿತ್ತಿದವರಿಗೆ ವಿಷವಾಗಲೆಂದೇ ಪಾಪ ಫಲ ಬಿಡುವುದೇನೊ! ಅಂತ್ಯಸಂಸ್ಕಾರದ ಮುನ್ನ ಬ್ರೂಟಸ್ ಕೊಲೆಯ ಹಿಂದಿದ್ದ ತನ್ನ ಸದುದ್ದೇಶವನ್ನು ಜನರಿಗೆ ವಿವರಿಸಿ ಕ್ಷಣಕಾಲ ಅವರನ್ನು ಒಲಿಸಿಕೊಂಡರೂ ಅವನ ನಂತರ ವೇದಿಕೆಯೇರುವ ಸೀಸರನ ನಿಷ್ಠಾವಂತ ಮಿತ್ರ ಮಾರ್ಕ್ ಆಂಟೊನಿ ತನ್ನ ಚತುರ ಭಾಷಣದಿಂದ ಸೀಸರನನ್ನು ನಿರಂಕುಶತೆಯ ಆರೋಪದಿಂದ ಮುಕ್ತ ಮಾಡಿ, ಕೊಲೆಗಾರರ ವಿರುದ್ಧ ಸೇಡು ತೀರಿಸಿಕೊಳ್ಳುವಂತೆ ಜನತೆಯನ್ನು ರೊಚ್ಚಿಗೆಬ್ಬಿಸುತ್ತಾನೆ. ಇಲ್ಲಿ ಬ್ರೂಟಸ್ ಮತ್ತು ಆಂಟೊನಿ ಅವರ ಮಹಾವಾಗ್ಝೋಷವೈಖರಿಗಳ ಭಾಷಾಂತರಗಳಿವೆ.

ರೋಮ್ ಪಟ್ಟಣದ ಚಾವಡಿ. ಬ್ರೂಟಸ್ ಕಾಸಿಯಸ್ ಮತ್ತು ಜನತಂಡದ ಪ್ರವೇಶ.

ಪೌರರು. ಬೇಕು ನಮಗಿದಕೆ ಸಮಜಾಯಿಷಿಯು; ಹೇಳು ಸಮಜಾಯಿಷಿಯ.

ಬ್ರೂಟಸ್. ಅಂತಾಗಲೆನ್ನೊಡನೆ ಬನ್ನಿ ಕೆಳೆಯರೆ! ಕೇಳಿ
ನಾ ಹೇಳುವುದ ನೀವು. ಕಾಸಿಯಸ್! ಆ ಬೀಡಿ-

ಗೈದಿ ನೀನಿಬ್ಭಾಗಿಸೀ ಜನರ. ಉಳಿದುಕೊಳ-
ಲವರಿಲ್ಲಿ ನನ್ನ ಮಾತನು ಕೇಳಬಯಸುವರು.
ಕಾಸಿಯಸಿನೊಡ ಹೋಗುವರು ಹೋಗಲವನೊಡನೆ.
ಬಹಿರಂಗ ಕಾರಣವ ಕೊಡಲಹುದು ಸೀಸರಿನ
ಸಾವಿಂಗೆ.

**ಮೊದಲ ಪೌರ.** ನಾ ಕೇಳುವೆನು ಬ್ರೂಟಸನ ಮಾತ.

**ಎರಡನೆಯ ಪೌರ.** ಕೇಳ್ವೆ ನಾ ಕಾಸಿಯಸ. ಬೇರೆ ಬೇರೆಯೆ ಕೇಳಿ
ಕೊಟ್ಟ ಕಾರಣಗಳನು ತಾಳಿನೋಡುವ ಬಳಿಕ.

[ಕೆಲವು ಪೌರರೊಡನೆ ಕಾಸಿಯಸಿನ ನಿರ್ಗಮನ. ಬ್ರೂಟಸ್ ವೇದಿಕೆ ಏರುವನು.

**ಮೂರನೆಯ ಪೌರ.** ಸದ್ದು.
ಸಂಮಾನ್ಯ ಬ್ರೂಟಸನು ವೇದಿಕೆಯನೇರಿಹನು.

**ಬ್ರೂಟಸ್.** ತಾಳ್ಮೆಯಿಂದಿರಿ ಕಡೆಯತನಕ ಓ ರೋಮಕರೆ! ದೇಶಬಾಂಧವರೆ! ಕೆಳೆಯರೆ! ನನ್ನ ಮಾತಾಲಿಸಿರಿ ನೀವು — ನನ್ನ ತತ್ವಸಮರ್ಥನೆಗಾಗಿ. ಮಾತು ಕಿವಿಮುಟ್ಟಗೊಡಿ, ಗದ್ದಲ ಮಾಡದಿರಿ. ನನ್ನ ಘನತೆ ನೋಡಿ ನಂಬಿ ನನ್ನನ್ನು. ನನ್ನನ್ನು ನಂಬುವುದಕ್ಕೆ ನನ್ನ ಘನತೆಯನ್ನು ಗೌರವಿಸಿ, ನಿಮ್ಮ ಬುದ್ಧಿವಂತಿಕೆಯಿಂದ ನನ್ನನ್ನು ಪರಾಮರ್ಶಿಸಿ. ಚೆನ್ನಾಗಿ ಪರಾಮರ್ಶಿಸುವುದಕ್ಕಾಗಿ ನಿಮ್ಮ ಬುದ್ಧಿಯನ್ನು ಜಾಗ್ರತಗೊಳಿಸಿ. ಈ ನೆರವಿಯಲ್ಲಿ ಯಾರಾದರೂ ಇದ್ದರೆ, ಸೀಸರಿನ ಪ್ರಿಯ ಮಿತ್ರನಿದ್ದರೆ, ಅವನಿಗೆ ಹೇಳುತ್ತೇನೆ — ಸೀಸರನ್ನು ಕುರಿತು ಬ್ರೂಟಸಿನ ಪ್ರೀತಿ ಅವನದಕ್ಕಿಂತ ಕಡಮೆಯದೇನೂ ಅಲ್ಲ. ಹಾಗಾದರೆ, ಬ್ರೂಟಸ್ ಸೀಸರಿನ ಮೇಲೇಕೆ ಎದ್ದ ಎಂದು ಆ ಮಿತ್ರ ಕೇಳಿದರೆ, ಇಗೊ ನನ್ನ ಉತ್ತರ. ಸೀಸರನನ್ನು ನಾನು ಕಡಮೆ ಪ್ರೀತಿಸಿದೆನೆಂದಲ್ಲ; ಆದರೆ, ರೋಮನ್ನು ಇನ್ನೂ ಮಿಗಿಲು ಪ್ರೀತಿಸಿದೆ. ಸೀಸರ್ ಸತ್ತು ಎಲ್ಲರೂ ಸ್ವತಂತ್ರವಾಗಿ ಬಾಳುವುದಕ್ಕಿಂತ, ಸೀಸರ್ ಬಾಳಿ ಎಲ್ಲರೂ ಗುಲಾಮರಾಗಿ ಸಾಯುವುದನ್ನು ಒಪ್ಪುವಿರಾ? ಸೀಸರ್ ನನ್ನನ್ನು ಪ್ರೀತಿಸಿದ; ಇಗೊ ಅವನಿಗಾಗಿ ಅಳುತ್ತೇನೆ. ಅವನು ಭಾಗ್ಯಶಾಲಿಯಾಗಿದ್ದ; ಅದಕ್ಕಾಗಿ ನಲಿಯುತ್ತೇನೆ. ಅವನು ಕಲಿಯಾಗಿದ್ದ; ಅದಕ್ಕಾಗಿ ಗೌರವಿಸುತ್ತೇನೆ. ಆದರೆ, ಅವನು ಅತ್ಯಾಸೆ ಪಟ್ಟ; ಅದಕ್ಕಾಗಿ ಅವನನ್ನು ಕೊಂದೆ. ಅವನ ಪ್ರೀತಿಗಾಗಿ ಕಣ್ಣೀರು; ಅವನ ಭಾಗ್ಯಕ್ಕಾಗಿ ನಲಿವು; ಅವನ ಕಲಿತನಕ್ಕಾಗಿ ಗೌರವ; ಅವನ ಅತ್ಯಾಸೆಗಾಗಿ ಮರಣ. ತೊತ್ತಾಗಿ ಬಾಳಬಯಸುವ ಕೀಳ ಉಂಟೆ ಯಾರಾದರೂ? ಇದ್ದರೆ ಹೇಳಿ. ಅವನಿಗೆ ಅಪಚಾರ ಮಾಡಿದ್ದೇನೆ ನಾನು. ರೋಮಕನಾಗಿರಬಯಸದ ಬರ್ಬರನು ಉಂಟೆ

ಯಾರಾದರೂ? ಇದ್ದರೆ ಹೇಳಿ. ಅವನಿಗೆ ಅಪಚಾರ ಮಾಡಿದ್ದೇನೆ ನಾನು. ತನ್ನ ನಾಡ ಪ್ರೀತಿಸದ ಕ್ಷುದ್ರನಾರಾದರೂ ಉಂಟೆ? ಇದ್ದರೆ ಹೇಳಿ. ಅವನಿಗೆ ಅಪಚಾರ ಮಾಡಿದ್ದೇನೆ ನಾನು. ಉತ್ತರಕ್ಕಾಗಿ ಕಾಯುತ್ತೇನೆ.

**ಎಲ್ಲರೂ.** ಒಬ್ಬರೂ ಇಲ್ಲ, ಬ್ರೂಟಸ್! ಒಬ್ಬರೂ ಇಲ್ಲ.

**ಬ್ರೂಟಸ್.** ಹಾಗಾದರೆ, ನಾನು ಯಾರಿಗೂ ಅಪಚಾರ ಮಾಡಿಲ್ಲ. ನೀವು ಬ್ರೂಟಸಿಗೆ ಮಾಡಬಹುದಾದ್ದಕ್ಕಿಂತ ಹೆಚ್ಚೇನೂ ನಾನೂ ಸೀಸರಿಗೆ ಮಾಡಿಲ್ಲ. ಅವನ ಮರಣ ಕಾರಣ ವಿವರ ಶಾಸನಸಭೆಯಲ್ಲಿ ಬರೆದಿಟ್ಟದೆ. ಯೋಗ್ಯತೆ ಸಲ್ಲುವೆಡೆ ಅವನ ಹಿರಿಮೆಯನ್ನು ಕುಗ್ಗಿಸಿಲ್ಲ; ಅವನಿಗೆ ಮರಣ ತಂದ ಅವನ ತಪ್ಪನ್ನು ಹಿಗ್ಗಿಸಿಯೂ ಇಲ್ಲ.

[ಸೀಸರಿನ ದೇಹ ಹೊತ್ತು ಆಂಟೊನಿ ಮತ್ತಿತರರ ಪ್ರವೇಶ.

ಇಗೊ! ಅವನ ದೇಹ ಬರುತ್ತಿದೆ, ಅವನಿಗಾಗಿ ಆಂಟೋನಿ ಅಳುತ್ತ. ಸೀಸರನ ಸಾವಿನಲಿ ಅವನ ಹೊಣೆ ಏನೂ ಇಲ್ಲದಿದ್ದರೂ ಅದರಿಂದ ಅವನಿಗೆ ಪ್ರಯೋಜನ ಉಂಟು; ಆಡಳಿತದಲ್ಲಿ ಒಂದು ಸ್ಥಾನ. ನಿಮ್ಮಲ್ಲಿ ಯಾರಿಗೆ ತಾನೆ ಸ್ಥಾನವಿಲ್ಲ? ಇಗೊ, ಇದ ಹೇಳಿ ನಾ ಹೊರಟೆ — ರೋಮಿನ ಹಿತಕ್ಕಾಗಿ ನನ್ನ ಪ್ರಿಯತಮನನ್ನು ನಾ ಕೊಂದಂತೆಯೆ ನನ್ನ ಸಾವು ನಾಡಿಗೆ ಬೇಕೆಂದೆನಿಸಿದಾಗ, ಅದೇ ಸುರಿಗೆ ನನ್ನ ಪಾಲಿಗೂ ಸಿದ್ಧವಾಗಿದೆ.

**ಎಲ್ಲರೂ.** ಬಾಳು, ಓ ಬ್ರೂಟಸ್! ಬಾಳು ಬಾಳು.

**ಮೊದಲ ಪೌರ.** ಮೆರವಣಿಗೆ ಮೆರಸಿಕೊಂಡುಯ್ಯಿರವನನು ಮನೆಗೆ.

**ಎರಡನೆಯ ಪೌರ.** ಅವನ ಪ್ರತಿಮೆಯು ನಿಲಿಸಿ ಅವನ ಹಿರಿಯರ ನಡುವೆ.

**ಮೂರನೆಯ ಪೌರ.** ಆಗಲವ ಸೀಸರನು.

**ನಾಲ್ಕನೆಯ ಪೌರ.** ಸೀಸರನ ಸದ್ಭಾಗ
ತಾನೆಲ್ಲ ಮುಡಿಗೊಂಡು ಬೆಳಗಲೀ ಬ್ರೂಟಸಲಿ.

**ಮೊದಲ ಪೌರ.** ಹೊಗಳಿ ಜಯಭೇರಿಯಿಡುತಿವನ ಮನೆಗೊಯ್ಯುವೆವು.

**ಬ್ರೂಟಸ್.** ಓಯೆನ್ನ ದೇಶಬಾಂಧವರೆ!

**ಎರಡನೆಯ ಪೌರ.** ಹೋ ಸದ್ದು! ಶಾಂತಿ! ಮಾತಾಡುವನು ಬ್ರೂಟಸನು.

**ಮೊದಲ ಪೌರ.** ಹೋ ಶಾಂತಿ!

**ಬ್ರೂಟಸ್.** ದೇಶಬಾಂಧವರೆ! ಬಿಡಿ, ತೆರಳ್ವೆ ನಾನೊಬ್ಬನೆಯೆ.
ನನಗಾಗಿ ಆಂಟೊನಿಯ ಬಳಿ ನಿಲ್ಲಿ ನೀವಿಲ್ಲಿ;
ಗೌರವಿಸಿ ಸೀಸರಿನ ಶವವ; ನಮ್ಮೊಪ್ಪಿಗೆಯ
ಪಡೆದು ಆಂಟೊನಿ ಮಾಡಲಿಹ ಸೀಸರಿನ ಕೀರ್ತಿ
ಹೊಗಳಿಕೆಯನಂತೆಯೇ ಗೌರವಿಸಿ. ಬೇಡುವೆನು
ನಾ ನಿಮ್ಮನೀಗ — ನನ್ನೊಬ್ಬನುಳಿದಿನ್ನಾರು

ಕದಲದಿರಿ ಆಂಟೋನಿ ಮಾತಾಡಿ ಮುಗಿವನಕ.

[ಬ್ರೂಟಸಿನ ನಿರ್ಗಮನ.

**ಮೊದಲ ಪೌರ.** ನಿಲ್ಲಿ! ಆಂಟೊನಿ ಆಡುವಾ ಮಾತ ಕೇಳೋಣ.

**ಮೂರನೆಯ ಪೌರ.** ವೇದಿಕೆಯ ಮೇಲೇರಿ ಮಂಡಿಸಲಿ ತಾನವನು. ಕೇಳೋಣ
ನಾವವನ ಮಾತ. ಮೇಲೇರು ನೀ ಸಂಮಾನ್ಯ ಆಂಟೋನಿ.

**ಆಂಟೊನಿ.** ಬ್ರೂಟಸಿದಕೊಪ್ಪಿದ್ದು, ಋಣಿಯಿಹೆನು ನಾ ನಿಮಗೆ.

**ನಾಲ್ಕನೆಯ ಪೌರ.** ಏನಂತೆ ಬ್ರೂಟಸ್ ಅದು ?

**ಮೂರನೆಯ ಪೌರ.** ಬ್ರೂಟಸಿದಕೊಪ್ಪಿದ್ದು.
ತಾನೀಗಳೆಮಗೆ ಋಣಿಯಾಗಿರುವೆನೆಂಬನವ.

**ನಾಲ್ಕನೆಯ ಪೌರ.** ಬ್ರೂಟಸನ ಕುರಿತು ಕೆಡುಕಾಡದಿರಲವನೊಳಿತು.

**ಮೊದಲ ಪೌರ.** ನಿರಂಕುಶನಿದ್ದನೀ ಸೀಸರನು.

**ಮೂರನೆಯ ಪೌರ.** ಹೌದು ದಿಟ.
ಸುಖವಿಹೆವು ನಾವೀಗ ರೋಮಿಂದಲವ ತೊಲಗಿ.

**ಎರಡನೆಯ ಪೌರ.** ಸದ್ದು ! ಆಂಟೊನಿ ಹೇಳಬಲ್ಲುದನು ಕೇಳೋಣ.

**ಆಂಟೊನಿ.** ಓ ಸಭ್ಯ ರೋಮುಕರೆ !

**ಎಲ್ಲರೂ.** ಹೋ ಸದ್ದು ! ಹೇಳುವುದ ಕೇಳೋಣ.

**ಆಂಟೊನಿ.** ಓ ಕೆಳೆಯರೇ ! ರೋಮುಕರೆ ! ದೇಶಬಾಂಧವರೆ !
ಕಿವಿಯ ಕೊಡಿ ನೀವೆನಗೆ. ಬಂದಿಹೆನು ನಾನಿಲ್ಲಿ
ಸೀಸರನ ಹುಗಿಯಲ್ಕೆ, ಹೊಗಳುವುದಕಲ್ಲ, ದಿಟ.
ಮನುಜರೆಸಗುವ ಕೆಡುಕು ಉಳಿವುದವರಳಿದ ಮೇ-
ಲೆಯು ನೆಲಸಿ. ಒಡಲೊಡನೆ ಹೂತುಹೋಗುವುದವರು
ಗೈದೊಳಿತು. ನಡೆಯಲಂತೆಯೆ ಸೀಸರನ ಕುರಿತು.
ಸಂಮಾನ್ಯ ಬ್ರೂಟಸನು ಹೇಳಿಹನು ನಿಮಗೆಲ್ಲ—
ತಾನಿದ್ದನತ್ಯಾಸೆಗಾರ ಸೀಸರನೆಂದು.
ಅಂತಿದ್ದಿತೇ ಪರಮ ದೋಷವದು. ತೆತ್ತಿಹನು
ತಾನೀಗ ಪರಮ ದಂಡವನದಕೆ. ಬಂದಿಹೆನು
ಸೀಸರಿನ ಪ್ರೇತಸಂಸ್ಕಾರದಲಿ ಮಾತಾಡೆ,
ಬ್ರೂಟಸನ ಮತ್ತೆ ಮಿಕ್ಕವರ ಅಪ್ಪಣೆ ಪಡೆದು.
ಸಂಮಾನ್ಯ ತಾನಿಹನು ಬ್ರೂಟಸನು, ಮಿಕ್ಕವರು-
ಮಂತೆಯೇ ಸಂಮಾನ್ಯರಿಹರವರು. ಇದ್ದನವ
ಕೆಳೆಯೆನಗೆ, ಸಂದವೆನಗವನಿಂದ ನ್ಯಾಯ ವಿ-
ಶ್ವಾಸಗಳು. ಆದೊಡತ್ಯಾಸೆಗಾರನೆ ಎಂದು
ಹೇಳುವನು ಬ್ರೂಟಸನು. ಬ್ರೂಟಸೋ ತಾನಿಹನು
ಸಂಮಾನ್ಯ. ತಂದಿಹನು ಸೀಸರನು ಬಲು ಸೆರೆಯ

ರೋಮಿಂಗೆ. ಅವರ ಬಿಡುಗಡೆಯ ಹಣ ತುಂಬಿಹುದು
ರಾಜ್ಯದಾ ಕೋಶವನು. ಇದುವೆ ತಾನತ್ಯಾಸೆ
ಎನಿಸಿತೇ ಸೀಸರಲಿ? ಬಡವರಾ ಗೋಳಿನಲಿ
ಅತ್ತಿಹನು ಸೀಸರನು. ಅತ್ಯಾಸೆಯಾ ಚೀಗು
ಇದಕಿಂತ ಗಡುಸು ತಾನಿರಬೇಕು. ಆದೊಡೆಯು
ಅತ್ಯಾಸೆಗಾರನಹನೆಂದು ತಾ ಹೇಳುವನು
ಬ್ರೂಟಸನು. ಬ್ರೂಟಸೋ ಇಹನವನು ಸಂಮಾನ್ಯ.
ನೀವೆ ನೋಡಿದಿರಿ ಲೂಪರ್ಕಲಿಯ ಹಬ್ಬದಲಿ
ನೀಡಿದೆನು ನಾನವಗೆ ಮಕುಟವನು ಮೂರು ಸಲ.
ಮೂರು ಸಲವೂ ಬೇಡವೆಂದನದ. ಅತ್ಯಾಸೆ
ಅಹುದೊ ಇದು? ಆದೊಡೆಯು ಬ್ರೂಟಸನು ಹೇಳುವನು
ಅತ್ಯಾಸೆಗಾರನಹನವನೆಂದು. ಸಂಮಾನ್ಯ-
ನೀ ಬ್ರೂಟಸನು ನಿಜಕು. ಬ್ರೂಟಸಾಡಿದುದ-
ನಲ್ಲಗಳೆಯಲ್ಕೆಂದು ನುಡಿಯೆ. ಬಂದಿಹೆನಿಲ್ಲಿ
ನುಡಿಯಲ್ಕೆ ನಾ ನೆರೆಯೆ ಬಲ್ಲುದನು. ನೀವೆಲ್ಲ
ಪ್ರೀತಿಸಿದಿರವನ ಹಿಂದೊಮ್ಮೆ; ಕಾರಣವಿಲ್ಲ-
ದಿಲ್ಲದಕೆ. ಅಂತಾಗಲಾವ ಕಾರಣವೀಗ
ನಿಮ್ಮಳುವ ತಡೆದಿಹುದು? ಓವೋ ವಿವೇಕವೇ!
ಆದೆ ನೀ ಕಾಡುಮೃಗಗಳ ಪಾಲು. ನೀಗಿಕೊಂ-
ಡರೆ ಮಾನವರು ಮತಿಯ! ಕ್ಷಮಿಸೆನ್ನ, ತಾಳಿಕೊಳಿ.
ಈಗೆನ್ನ ಹೃದಯ ಶವಸಂಪುಟದಲಿಹುದು ಸೀ-
ಸರಿನ ಬಳಿ. ನನ್ನ ಬಳಿಗದು ಮರಳಿ ಬರುವನಕ
ನಾ ತಡೆಯಬೇಕಿಹುದು. ತಾಳಿಕೊಳಿ, ಕ್ಷಮಿಸೆನ್ನ.

**ಮೊದಲ ಪೌರ.** ಇವನೊರೆದ ಮಾತಲಿ ವಿವೇಕ ಮಿಗಿಲಿಹುದೆಂದು ತೋರುವುದು.

**ಎರಡನೆಯ ಪೌರ.** ನೇರವಿದನಾರೈಯೆ, ಆಗಿಹುದು ಸೀಸರಿಗೆ
ಬಲು ದೊಡ್ಡ ಅಪರಾಧ.

**ಮೂರನೆಯ ಪೌರ.** ಆಗಿಹುದೆ ಒಡೆಯರೇ!
ಅವನಿಗಿಂತಲು ಹೀನ ಬಹನೆಂಬ ದಿಗಿಲೆನಗೆ.

**ನಾಲ್ಕನೆಯ ಪೌರ.** ಗಮನಿಸಿದಿರಾ ಅವನ ಮಾತುಗಳ? ಕೊಳ್ಳನವ ಮಕುಟವನು.
ಸ್ಪಷ್ಟವಹುದದರಿಂದ ಅತ್ಯಾಸೆಗಾರನವನಲ್ಲೆಂದು.

**ಮೊದಲ ಪೌರ.** ಅಂತು ರುಜುವಾತಾಗೆ, ತೆರುವರಾರೋ ಮಹಾದಂಡವನು.

**ಎರಡನೆಯ ಪೌರ.** ಅಯ್ಯೊ ಪಾಪ! ಅತ್ತತ್ತು ಕೆಂಡವಾಗಿಹವವನ ಕಣ್ಣುಗಳು.

**ಮೂರನೆಯ ಪೌರ.** ಆಂಟೋನಿಗಿಂತ ಸಂಮಾನ್ಯನಾವನುಮಿಲ್ಲ ರೋಮಿನಲಿ.

**ನಾಲ್ಕನೆಯ ಪೌರ.** ಅದೊ ನೋಡಿ! ಮತ್ತೆ ಮಾತಾಡತೊಡಗುವನವನು.

ಆಂಟೊನಿ. ನಿನ್ನೆಯೂ ಸೀಸರಿನ ಮಾತು ತಾ ಜಗವನೆದು-
ರಿಸಿ ನಿಲ್ಲ ಬಹುದಿತ್ತು. ಈಗ ಕೆಡೆದಿಹನಿಲ್ಲಿ,
ಅವನ ಗೌರವಿಸೆ ದೀನದರಿದ್ರನೂ ಆವ-
ನಿಲ್ಲದೆಯೆ. ಒಡೆಯರೇ! ನಿಮ್ಮ ಎದೆ ಮನಗಳನು
ಕಲಕುತ್ತೆ ಸಿಟ್ಟೆದ್ದು ದಂಗೆಗೈವಂತೆ ನಾ
ನಿಮ್ಮ ಕೆರಳಿಸಲೆಣಿಸೆ ಗೈವೆನಪರಾಧವನು
ಬ್ರೂಟಸಿಗೆ, ಗೈವೆನಪರಾಧವನು ಕಸಿಯುಸಿಗೆ.
ನೀವೆಲ್ಲ ಬಲ್ಲಿರಿದ — ಸಂಮಾನ್ಯರಿಹರವರು.
ಅಪರಾಧ ನಾನೆಸಗೆನವರಿಂಗೆ. ಅಂತಪ್ಪ
ಸಂಮಾನ್ಯ ಮೂರ್ತಿಗಳಿಗಪರಾಧವೆಸಗುವುದ-
ಕಿಂತೊಲ್ವೆ ಸತ್ತವನಿಗಪರಾಧವೆಸಗಲ್ಕೆ,
ನನಗೆ ನಾನಪರಾಧವೆಸಗಲ್ಕೆ, ಮೇಣ್ ನಿಮಗೆ.
ಇಗೊ ಇಲ್ಲಿ ಸೀಸರಿನ ಮುದ್ರೆಯೊತ್ತಿದ ಪತ್ರ ;
ಸಿಕ್ಕಿತಿದು ನನಗವನ ಕೋಣೆಯಲಿ; ಅವನಿಷ್ಟ -
ಪತ್ರವಿದು. ಪತ್ರವನು ಜನರೀಗ ಕೇಳ್ದರೆನೆ,
— ಆದೊಡೀಗದನೋದಲೆಣಿಸಿಲ್ಲ, ಕ್ಷಮಿಸೆನ್ನ —
ಒಡನೆದ್ದು ಮುತ್ತಿಡುವರೀ ಸತ್ತ ಸೀಸರಿನ
ಗಾಯಗಳ. ಅದ್ದುವರು ತಮ್ಮ ಕರವಸ್ತ್ರಗಳ-
ನವನ ಪಾವನ ರಕ್ತದಲಿ. ಬೇಡಿದಪರವನ
ಕೂದಲನು ನೆನಪಿಂಗೆ; ಮತ್ತವರು ಸಾವಂದು
ಬರೆದಪರು ತಮ್ಮಿಷ್ಟಪತ್ರದಲಿ ಕಾಣಿಸುತೆ
ಆ ಸಿರಿಯ ಬಳುವಳಿಯ ಮುಂದಿನ ಪೀಳಿಗೆಗೆ.

ನಾಲ್ಕನೆಯ ಪೌರ. ಕೇಳೆ ತೀರುವೆವಿಷ್ಟಪತ್ರವನು ಓದು ನೀ ಸಂಮಾನ್ಯ ಆಂಟೋನಿ !

ಎಲ್ಲರೂ. ಪತ್ರ ! ಓ ಪತ್ರ ! ಸೀಸರಿನಿಷ್ಟಪತ್ರವನು ಕೇಳೆ ತೀರುವೆವಾವು.

ಆಂಟೊನಿ. ತಾಳ್ಮೆಯಿಂದಿರಿ ನೀವು ಸಖ್ಯಸ್ನೇಹಿತರೆ! ಅದ -
ನೋದಬಾರದು ನಾನು. ತಗದು ನೀವರಿಯುವುದು
ಸೀಸರನು ತಾ ನಿಮ್ಮನೆನಿತೊಲ್ದನೆಂಬುದನು.
ಮರವಲ್ಲ ನೀವು, ಕಲ್ಲಲ್ಲ ನೀವು ; ಮಾನವರು.
ಅಂತು ಮಾನವರಾಗಿ, ಸೀಸರಿನ ಇಷ್ಟಪ-
ತ್ರವ ನೀವು ಕೇಳ್ದೊಡನೆ ಕೆರಳಿಪುದು ನಿಮ್ಮನದು ;
ಹುಚ್ಚೆಬ್ಬಿಪುದು ನಿಮ್ಮ. ಅವನುತ್ತರಾಧಿಕಾ-
ರಿಗಳು ನೀವೆಂಬುದನು ನೀವರಿಯದಿಹುದೊಳಿತು.
ಅರಿತಿರೆನೆ, ಅಬ್ಬಬ್ಬ ! ಏನಹುದೊ ಅದರಿಂದ!

ನಾಲ್ಕನೆಯ ಪೌರ. ಇಷ್ಟಪತ್ರವನೋದು, ಕೇಳುವೆವು, ಆಂಟೋನಿ. ನೀನೋದ-

ಲೇಬೇಕು ನಮಗಿಷ್ಟಪತ್ರವನು, ಸೀಸರಿನಪತ್ರವನು.

ಆಂಟೊನಿ. ತಾಳ್ಮೆಯಿಂದಿರುವಿರಾ ? ತುಸ ತಡೆದುಕೊಳ್ಳುವಿರ ?
ತುಟಿ ಮೀರಿ ಬಂತು ಮಾತಿಷ್ಟಪತ್ರವ ಕುರಿತು.
ಅಳುಕುವೆನು ನಾನೀಗ, ಸೀಸರನ ಸುರಿಗೆಯಿಂ-
ದಿರಿದ ಆ ಸಂಮಾನ್ಯ ಪುರುಷರಿಗೆ ನಾಗೈವೆ-
ನಪರಾಧವೆಂದು. ದಿಟ, ಅಳುಕುವೆನು ನಾನೀಗ.

ನಾಲ್ಕನೆಯ ಪೌರ. ದ್ರೋಹಿಗಳು ತಾವವರು, ಸಂಮಾನ್ಯ ಪುರುಷರೇ ?

ಎಲ್ಲರೂ. ಇಷ್ಟಪತ್ರ ! ಓ ಪತ್ರ !

ಎರಡನೆಯ ಪೌರ. ಖಳರವರು, ಕೊಲೆಪಾತಕರು. ಪತ್ರ ! ನೀನೋದು ಪತ್ರವನು

ಆಂಟೊನಿ. ಇಷ್ಟಪತ್ರವನೋದಲೊತ್ತಾಯ ಪಡಿಸುವಿರ ?
ಅಂತಾಗೆ ಈ ಸೀಸರಿನ ಹೆಣದ ಸುತ್ತ ಬಳೆ-
ಗಟ್ಟಿ ನಿಲ್ಲಿರಿ. ಇಷ್ಟಪತ್ರವನು ಬರೆದವನ
ನಿಮಗೆ ನಾ ತೋರಗೊಡಿ. ಕೆಳಗಿಳಿದು ನಾ ಬರಲೆ ?
ನೀವೀಗಳಪ್ಪಣೆಯ ಕೊಡುವಿರಾ ನನಗಿದಕೆ ?

ಎಲ್ಲರೂ. ಇಳಿದು ಬಾ.

ಎರಡನೆಯ ಪೌರ. ಇಳಿದು ಬಾ.

ಮೂರನೆಯ ಪೌರ. ಉಂಟು ಅಪ್ಪಣೆ ನಿನಗೆ.

ನಾಲ್ಕನೆಯ ಪೌರ. ಬಳೆಗಟ್ಟಿ. ಸುತ್ತಲೂ ನಿಲ್ಲಿ.

ಮೊದಲ ಪೌರ. ನಿಲ್ಲಿ ಸಂಪುಟ ಬಿಟ್ಟು; ಹೆಣ ಬಿಟ್ಟು ದೂರವಿರಿ.

ಎರಡನೆಯ ಪೌರ. ಎಡೆಮಾಡಿ ಆಂಟೊನಿಗೆ, ಓ ಪರಮ ಸಂಮಾನ್ಯ ಆಂಟೊನಿಗೆ.

ಆಂಟೊನಿ. ಬೇಡ; ಅಂತೆನ್ನ ಮೇಲೊತ್ತಿ ಬರದಿರಿ ನೀವು. ದೂರವಿರಿ.

ಪೌರರು. ಹಿಂದೆ ಸರಿಯಿರಿ; ಸರಿದು ನಿಲ್ಲಿ. ಎಡೆಮಾಡಿಕೊಡಿ.

ಆಂಟೊನಿ. ಇರೆ ನಿಮಗೆ ಕಣ್ಣೀರು, ಅನುವಾಗಿ ಅದ ಸುರಿಸೆ.
ನೀವೆಲ್ಲ ಬಲ್ಲಿರೀ ಹೊದಿಕೆಯನು. ನೆನಪುಂಟು
ನನಗೆ ಸೀಸರನದನು ಮೊದಲ ಸಲ ಹೊದೆದಂದು —
ನೆರ್ವಿಗಳ ಗೆದ್ದ ದಿನ, ಬೇಸಗೆಯ ಬೈಗಿನಲಿ,
ತನ್ನ ಬೀಡಾರದಲಿ ತಾನದನು ಹೊದೆದ ದಿನ.
ನೋಡಿ, ಹೊಕ್ಕಿತು, ಇಲ್ಲಿ ಕಾಸಿಯಸಿನಾ ಸುರಿಗೆ.
ನೋಡಿ ಇಗೊ, ಕರುಬುಕಿಚ್ಚಿನ ಕಾಸ್ಕ ಕೊರೆದಿರುವ
ಕಂಡಿಯನು. ಇರಿದನೀಯೆಡೆಯೆ ಆ ಕಟ್ಟೊಲುಮೆ
ಬ್ರೂಟಸನು. ಹೊರಸೆಳೆಯಲಿರಿದ ಸುರಿಗೆಯನೊಡನೆ,
ನೋಡಿ ಹಾಳಲಗನೆಂತಟ್ಟಿ ಬಂತಾ ಸೀಸ-
ರಿನ ರಕ್ತವೆಂಬುದನು : ಅಷ್ಟು ನಿರ್ದಯೆಯಿಂದ
ಬಡಿದವನು ಬ್ರೂಟಸೋ ಅಲ್ಲವೋ ಎಂದು ತಾ

ನಿರ್ಧರಿಸಿ ಕೊಳಲುಣ್ಮಿ ಹೊರಚಿಮ್ಮಿತೆಂಬಂತೆ.
ನೆರೆಬಲ್ಲಿರಿದ ನೀವು; ಅಚ್ಚುಮೆಚ್ಚಿದ್ದನೀ
ಬ್ರೂಟಸನು ಸೀಸರಿಗೆ. ದೇವತೆಗಳೇ ಸಾಕ್ಷಿ
ಸೀಸರನು ತಾನೆನಿತು ಕಟ್ಟೊಲುಮೆಯಿಂದವನ
ಪ್ರೀತಿಸಿದನೆಂಬುದಕೆ. ಎಲ್ಲಕಿಂತತಿ ಪರಮ
ನಿರ್ಘೃಣಾಘಾತವಿದು. ಆತನಿರುವುದ ಕಂಡು
ಸಂಮಾನ್ಯ ಸೀಸರನು ದ್ರೋಹಿಗಳ ಕೈದುಗಳಿ-
ಗಿಂತ ಮಿಗಿಲಾರ್ಪಿನ ಕೃತಘ್ನತೆಗೆ ತಾ ಸೋತು
ಬಸವಳಿದ. ಬಿರಿಯಿತಾಗಳೆ ಅವನ ವಜ್ರದೆದೆ.
ಹೊದಿಕೆ ಮುಖವನು ಕವಿದು ಮಾಸಾಸಿ ಸೀಸರನು
ಕುಸಿದು ಬಿದ್ದೊರಗಿದನು ಹೊನಲಿಟ್ಟ ಕೆನ್ನೀರ
ಮಿಗೆ ಮಿಂದ ಪಾಂಪೆ ವಿಗ್ರಹಪೀಠದಡಿಯಲ್ಲಿ:
ಓ ದೇಶಬಾಂಧವರೆ! ಎಂತಪ್ಪ ಪತನವದು!
ಬಿದ್ದೆವಾವೆಲ್ಲ ಒಡನೆಯೆ, ನಾನು ನೀವೆಲ್ಲ.
ರಕ್ತಮಯ ದ್ರೋಹಗೆಲ್ಲಂಗೊಂಡು ಮೆರೆಯಿತೇ
ತಲೆಮೆಟ್ಟಿ! ಅಳುತಿಹಿರಿ ನೀವೀಗ. ನಾ ಕಾಣ್ಬೆ
ಮರುಕ ನಿಮ್ಮನು ಕೊರೆಯುತಿಹುದೀಗ. ಬಲ್ಲೆನಿದ
ಪಾವನಾಶ್ರುಗಳಹವು ಈ ನಿಮ್ಮ ಕಣ್ಣೀರು.
ಓವೊ! ಕರುಣಾಳುಗಳೆ! ನಮ್ಮ ಸೀಸರಿನ ಈ
ಹೊದಿಕೆ ಮೇಲಣ ಗಾಯಗಳ ಕಂಡೆ ಅಳುವಿರಾ
ನೀವಿಂತು? ಇದೊ ನೋಡಿ, ಇಹನವನೆ ದ್ರೋಹಿಕೈ-
ದುಗಳಿರಿದು ಮೈಯೆಲ್ಲ ಬಿಗಿದು ಬಿದ್ದಿಹನಿಲ್ಲಿ.

[ ಹೊದಿಕೆ ಕಳಚಿ ಹಾಕುವನು.

**ಮೊದಲ ಪೌರ.** ಓ ಕಣ್ಣರಾವೆಯೇ!
**ಎರಡನೆಯ ಪೌರ.** ಅಯ್ಯೋ ಸಂಮಾನ್ಯ ಸೀಸರಾ!
**ಮೂರನೆಯ ಪೌರ.** ಓ ಗೋಳು ದಿನವೆ!
**ನಾಲ್ಕನೆಯ ಪೌರ.** ಓ ದ್ರೋಹಿಗಳೆ! ಘಾತುಕರೆ!
**ಮೊದಲ ಪೌರ.** ಓ ರಕ್ತಮಯ ನೋಟವೇ!
**ಎರಡನೆಯ ಪೌರ.** ಸೇಡು ತೀರಿಪೆವಾವು.
**ಪೌರರು.** ಸೇಡ ತೀರಿಸೇಳಿ! ನುಗ್ಗಿ! ಹುಡುಕಿ! ಸುಡಿರಿ! ಕೊಳ್ಳಿಯಿಡಿರಿ! ಕೊಲ್ಲಿ! ಕೊಚ್ಚಿ! ಜೋಕೆ ನೋಡಿ, ದ್ರೋಹಿಯೊಬ್ಬನುಳಿಯದಿರಲಿ.
**ಆಂಟೊನಿ.** ತಾಳಿ ಓ ದೇಶಬಾಂಧವರೆ!
**ಮೊದಲ ಪೌರ.** ಓ ಶಾಂತಿ! ಇದೊ ಇಲ್ಲಿ ಸಂಮಾನ್ಯ ಆಂಟೊನಿ.
**ಎರಡನೆಯ ಪೌರ.** ಕೇಳುವೆವು ನಾವವನ; ಹಿಡಿವೆವಾವವನಬಳಿ; ಸಾವೆವಿನ್ನವನೊಡನೆ.



'ಜೂಲಿಯಸ್ ಸೀಸರ್' ನಾಟಕದಲ್ಲಿ ಸೀಸರನ ಶವದ ಮುಂದೆ ಮಾರ್ಕ್ ಆಂಟೊನಿ
"ತೋರಿದಪೆ ನಿಮಗಿನಿಯ ಸೀಸರಿನ ಗಾಯಗಳ . . ." — ಆಂಟೊನಿ.

ಆಂಟೊನಿ. ಓ ನಲ್ಲ ಕೆಳೆಯರೇ! ಓ ಇನಿಯ ಕೆಳೆಯರೇ!
ಇಂಥ ಸಹಸೋದ್ರಿಕ್ತ ರೋಷದಾವೇಶಕ್ಕೆ
ನಿಮ್ಮ ಕೆರಳಿಸದಿರ್ಕೆ ನಾನೀಗ. ಈ ಕೃತ್ಯ
ಗೈದವರು ಸಂಮಾನ್ಯರಿಹರವರು. ಇದಗೈಯ-
ಲವರವರಿಗಾವಾವ ಸ್ವಂತ ಕಾರಣವಿತ್ತೊ
ನಾನರಿಯೆ. ಸಂಪನ್ನರಹರವರು, ಜ್ಞಾನಿಗಳು.
ನಿಮಗಿದಕೆ ಖಂಡಿತವೆ ಕಾರಣವ ಕೊಟ್ಟಪರು.
ಕೆಳೆಯರೇ! ನಿಮ್ಮ ಹೃದಯವ ಕಸಿಯ ಬಂದಿಲ್ಲ
ನಾನಿಲ್ಲಿ. ಬ್ರೂಟಸಿನವೊಲು ವಾಗ್ಮಿ ನಾನಲ್ಲ.

ನೀವೆಲ್ಲ ಅರಿವಂತೆ ನನ್ನ ಕೆಳೆಯನನೊಲ್ದ
ನಾಡಾಡಿ ಒರಟಾಳು ನಾನಿಹೆನು. ಬಹಿರಂಗ-
ವಾಗವನ ಕುರಿತಲ್ಲಿ ನಾನೀಗ ಮಾತಾಡ-
ಲೊಪ್ಪಿಗೆಯನಿತ್ತವರು ಬಲ್ಲರದ ಚೆನ್ನಾಗಿ.
ಜನರ ರಕ್ತವ ಕುದಿಸಿ ಕೆರಳಿಸುವ ಬುದ್ಧಿಸಾ-
ಮರ್ಥ್ಯಗಳು, ಹಾವಭಾವಗಳು, ವಾಕ್‌ಛಕ್ತಿ ವ-
ಕ್ತೃತ್ವಗಳು ನನಗಿಲ್ಲ. ನುಡಿವೆ ನಾ ನೇರಾಗಿ.
ನೀವೆ ನೆರೆ ಬಲ್ಲುದನೆ ನಾ ನುಡಿವೆ. ತೋರಿದಪೆ
ನಿಮಗಿನಿಯ ಸೀಸರಿನ ಗಾಯಗಳ. ಅಯ್ಯೊ! ತ-
ಬ್ಬಲಿ ಮೂಕ ಬಾಯಿಗಳು ನುಡಿದಪುವು, ನಾನಲ್ಲ.
ನಾನೆ ಬ್ರೂಟಸನಿದ್ದು, ಬ್ರೂಟಸೇ ಆಂಟೋನಿ
ಯಿದ್ದನೇ, ಇರುತಿದ್ದನೊಬ್ಬನಾಂಟೋನಿ ನಿ-
ಮ್ಮೆದೆ ಕಲಕಿ, ಸೀಸರಿನ ಗಾಯವೊಂದೊಂದರಲು
ನಾಲಗೆಯ ಮೂಡಿಸುತೆ, ರೋಮಿನಾ ಕಲ್ಲುಗಳೆ
ಸಿಡಿಸಿಡಿದು ಬಂಡೆದ್ದು ನಿಲ್ವಂತೆ ಕೆರಳಿಸಲು.

**ಪೌರರು.** ಬಂಡೆದ್ದಪೆವು ನಾವು.

**ಮೊದಲ ಪೌರ.** ಸುಟ್ಟಪೆವು ಬ್ರೂಟಸಿನ ಮನೆಯ.

**ಮೂರನೆಯ ಪೌರ.** ಹೊರಡಿ! ಹೋ! ಬನ್ನಿ! ಹುಡುಕಿರಿ ಸಂಚುಗಾರರನು.

**ಆಂಟೊನಿ.** ಇನ್ನುಮಾನಾಡುವುದ ಕೇಳಿ ನೀವೋ ದೇಶ-
ಬಾಂಧವರೆ! ಕೇಳಿ ನೀವಿನ್ನು ನಾ ಹೇಳುವುದ.

**ಪೌರರು.** ಓ ಶಾಂತಿ! ಕೇಳ್ವ ನಾವಾಂಟೊನಿಯ.
ಓ ಪರಮ ಸಂಮಾನ್ಯ ಆಂಟೋನಿ!

**ಆಂಟೊನಿ.** ಕೆಳೆಯರೇ ಏನು ಮಾಡುವಿರೆಂದು ನೀವೀಗ-
ಳರಿಯದೆಯೆ ನುಗ್ಗುವಿರಿ. ಸೀಸರಿಗೆ ನಿಮ್ಮೊಲುಮೆ
ತಾ ಸಲ್ಲ ಬೇಕೇಕೆ? ಪಾಪ ನೀವರಿಯಿರದ.
ನಾ ಹೇಳಬೇಕಿಹುದು ನಿಮಗದನು. ಆಗಳೇ
ನಾ ಹೇಳಿದಿಷ್ಟಪತ್ರವ ನೀವು ಮರೆತಿಹಿರಿ.

**ಪೌರರು.** ನಿಜ ನಿಜ! ಇಷ್ಟಪತ್ರ! ನಿಂತು ಕೇಳುವ ಇಷ್ಟಪತ್ರವನು.

**ಆಂಟೊನಿ.** ಇದೊ, ಇಲ್ಲಿ, ಸೀಸರಿನ ಮುದ್ರೆಯೊತ್ತಿದ ಇಷ್ಟ-
ಪತ್ರ. ಕೊಟ್ಟಿಹನವನು ರೋಮ ಪ್ರಜೆಯೊಬ್ಬೊಬ್ಬ-
ನಿಗೆಯು ತಲೆ ತಲೆಗೆ ಎಪ್ಪತ್ತೈದು ದ್ರಮ್ಮಗಳ.

**ಎರಡನೆಯ ಪೌರ.** ಓ ಪರಮ ಸಂಮಾನ್ಯ ಸೀಸರಾ!
ಅವನ ಕೊಲೆ ಸೇಡ ತೀರಿಪೆವಾವು.

**ಮೂರನೆಯ ಪೌರ.** ಓ ಭೂಪ ಸೀಸರಾ!

ಆಂಟೊನಿ. ತಾಳ್ಮೆಯಿಂದಲೆ ಕೇಳಿ.
ಪೌರರು. ಓ ಶಾಂತಿ !
ಆಂಟೊನಿ. ಅಲ್ಲದೆಯೆ, ತನ್ನ ವನವೆಲ್ಲವನು, ಟೈಬರಿನ
ಈ ಪಕ್ಕದಾ ಸ್ವಂತ ಬಳ್ಳಿಮಾಡಗಳು, ಹೊಸ
ನಟ್ಟ ಹಣ್ಣೋಟಗಳನೆಲ್ಲವನು ಬಿಟ್ಟಹನು.
ಬಿಟ್ಟಹನು ನಿಮಗೆಲ್ಲ, ನಿಮ್ಮ ಮಕ್ಕಳಿಗೆಲ್ಲ,
ಅನುಭವಿಸಲೆಂದೆಂದು; ನಡೆದಾಡಿ, ನಲಿದಾಡಿ,
ವಿಹರಿಸಲು ಬಿಟ್ಟಹನು ಪುದುವಾಗಿ ನಿಮಗೆಲ್ಲ.
ಇದ್ದನಿಲ್ಲೊಬ್ಬ ಸೀಸರನು. ಬಹನೆಂದೊ ತಾ-
ನಿನ್ನೊಬ್ಬನಂಥವನು.
ಮೊದಲ ಪೌರ. ಇಲ್ಲವೆಂದಿಗು ಇಲ್ಲ.
ಓ ಬನ್ನಿ! ಸುಡುವ ನಾವೀ ಶವವ ಪುಣ್ಯಭೂ-
ಮಿಯಲಿ. ಅದೆ ಕೊಳ್ಳಿಗಳ ಕೊಂಡೊಯ್ದು ಕಿಚ್ಚಿಡುವ
ದ್ರೋಹಿಗಳ ಮನೆಗಳಿಗೆ. ಎತ್ತಿಕೊಳಿ ದೇಹವನು.
ಎರಡನೆಯ ಪೌರ. ಹೋ ತನ್ನಿ ಬೆಂಕಿಯನು.
ಮೂರನೆಯ ಪೌರ. ಉರುಳಿಸಿರಿ ಪೀಠಗಳ!
ಕಿತ್ತುಕೊಳಿ ಕಿಟಕಿಗಳ! ಹಿರಿದುಕೊಳಿ ಸಿಕ್ಕಿದುದ!
ಆಂಟೊನಿ. ಇನ್ನು ನಡೆಯಲಿ ಕೆಲಸ. ಕೀಟಲೆಯೆ! ಕಾಲಾಟ-
ಗೊಂಡಿರುವೆ ನೀನು! ಹಿಡಿ ಮನಬಂದ ದಾರಿಯನು.

— ಕೆ. ವೆಂ. ರಾಘವಾಚಾರ್
ಅದೇ, III. ii. 1-262.

## ಜೀವನ-ಸಪ್ತಾಂಕ

" ಈ ಜಗತ್ತು ಒಂದು ನಾಟಕಶಾಲೆ. ಮನುಷ್ಯ ಅದರ ಮಹಾನಟ. ಮಗುವಾಗಿ ರಂಗ-ಪ್ರವೇಶ ಮಾಡಿದ ಅವನು ವಿವಿಧ ಪಾತ್ರಗಳನ್ನು ನಟಿಸಿ ಮತ್ತೆ ಮಗುವಾಗಿಯೇ ಇಲ್ಲಿಂದ ನಿಷ್ಕ್ರಮಿಸುತ್ತಾನೆ." — ಇದು ಷೇಕ್ಸ್ಪಿಯರ್ 'ಆ್ಯಸ್ ಯು ಲೈಕ್ ಇಟ್'ನಲ್ಲಿ ಸದಾಖಿನ್ನ ಜ್ಯಾಕ್ವಿಸನ ಬಾಯಲ್ಲಿ ನುಡಿಸುವ ಅನುಭವದ ಮಾತು.

ನೆಲವೆಲ್ಲ ಆಟದ ಅಟ್ಟ
ಮತ್ತೆ ಎಲ್ಲಾ ಗಂಡು-ಹೆಣ್ಣು ಬರಿ ಆಟ ನಟಿಸುವರು.
ಅಟ್ಟವನು ಏರುವುದು, ಬಿಟ್ಟು ಹೊರಡುವುದು
ಅವರವರಿಗುಂಟು; — ಒಬ್ಬನೇ ಆಡುವನು ಹಲವು ಪಾತ್ರ,
ಏಳಂಕು, ಏಳು ಮೆಟ್ಟು. ಮೊಟ್ಟಮೊದಲಿಗೆ ಕೂಸು,

ಆ್ಯಂ ಎಂದು ಬಿಕ್ಕುವದು, ಕಕ್ಕುವದು ದಾದಿತೋಳುಗಳಲ್ಲಿ.
ಆಮೇಲೆ ಬಿಟ್ಟಬೇಸರಿಕೆಯಲಿ, ಚೀಲ ತೂಗಾಡುತ್ತ
ಉತ್ಸಾಹದುದಯದ ಮೋರೆ, ಬಸವನ ಹುಳದ ನಡಿಗೆ,
ಹೋಗಲಾರದೆ ಹಿಡಿದ ಸಾಲಿಹಾದಿ; ಆಮೇಲೆ ಹರೆಯ,
ತಿದಿಯಂತೆ ಬಿಸಿಯುಸಿರು, ಶೃಂಗಾರ ಲಾವಣಿಯ ಮಂಕುರಾಗ:
'ಹೆಣ್ ಹುಬ್ಬು ಕಾಮನ ಕಬ್ಬು'; ಮುಂದೆ ಸೈನಿಕ ಶೂರ,
ಮಾತುಮಾತಿಗೆ ಆಣೆ, ಪಂಥ, ಗಂಡು ಚಿರ್ಚಿನ ಗಡ್ಡ,
ಅವಮಾನ ಪವಮಾನ, ಅಪ್ಪಿಪ್ಪಕೋ ಜಗಳ,
ನೀರ್ಗುಳ್ಳೆ ಕೀರ್ತಿಗೋ 'ಆ' ಎಂದು ಬಾಯ್ದೆರೆದು
ತೋಫಿಗೂ ತಲೆಗೊಡುವ; ಮುಂದೆ ಊರಿನ ಹಿರಿಯ,
ದುಂಡ ಬೊಜ್ಜಿಗೆ ಲಂಚಕೋಳಿ ಪಿಂಡದ ಮಡಕೆ,
ದಿಟ್ಟಿಸುವ ಕಣ್ಣು, ಅದ್ಧೂರಿ ಗಡ್ಡ ಮೀಸೆ,
ಬಾಯ್ತುಂಬ ಜಾಣನುಡಿ, ಹೊಸಗಾಲ ಸಾಮತಿಯು,
ಪಾತ್ರಕ್ಕೆ ತಕ್ಕಂತೆ ಆಟ ನೋಟ; — ಇನ್ನು ಆರನೆ ಮೆಟ್ಟು,
ಬಡಕಲಾಯಿತ್ತು ಮೈ, ಅಡ್ಡಗಲ ಪಾಯ್ಜಾಮು,
ಕನ್ನಡಕ ಮೂಗುಗೊನೆ, ಜೇಬುಗಿಸೆ ಎಡಬಲಕು,
ಹರೆಯದಾ ಬಿಗಿವಸ್ತ್ರ ಉಳಿದರೂ ಸಡಿಸಡಿಲು,
ಒಮ್ಮೆ ಗುಡುಗಿದ್ದ ದನಿ ಏರುಚೀರು, ಬರಬರುತ ಸಣ್ಣ ಸನಾದಿ,
ಸಿಳ್ಳು ಸೀಳು . . . . ಎಲ್ಲಕ್ಕು ಕೊನೆ ಮೆಟ್ಟು,
ಚಿತ್ರ-ಘಟನಾವಲಿಯ ಕಥೆಯ ಕೊನೆಗೊನೆ, ಮತ್ತೆ
ಮರಳಿತ್ತು ಕೂಸುತನ, ಸರುವವೂ ಅರೆಮರೆವು,
ಹಲ್ಲಿಲ್ಲ, ಕಣ್ಣಿಲ್ಲ, ರುಚಿ ಇಲ್ಲ, ಎಲ್ಲ, ಬರಿ ಇಲ್ಲಾ.

— ಅಂಬಿಕಾತನಯದತ್ತ

'ಆ್ಯಸ್ ಯು ಲೈಕ್ ಇಟ್', II. vii. 139-166

## ಕಾಲದ ಕಣ್ಣಿನಲ್ಲಿ ನಿನ್ನೆ

ಟ್ರೋಜನ್ ಯುದ್ಧವಿನ್ನೂ ನಡೆದಿರುವಾಗಲೇ ಮಹಾಸಾಧನೆಗಳ ವ್ಯಕ್ತಿ, ಗ್ರೀಕರ ವೀರಾಗ್ರಣಿ ಆ್ಯಕಿಲೀಸ್ ನಿರುತ್ಸಾಹಿಯಾಗುತ್ತಾನೆ. ಅವನಿಗೆ ಟ್ರೋಜನರ ವಿರುದ್ಧ ಕಾದಾಟ ಮುಂದುವರಿಸುವುದು ಬೇಕಿಲ್ಲ. ಟ್ರೋಜನರ ಹೆಕ್ಟರ್ ತನ್ನನ್ನು ಮಲ್ಲಯುದ್ಧದಲ್ಲಿ ಎದುರಿಸುವ ಗ್ರೀಕ್ ವೀರ ಯಾರಿದ್ದಾನೆಂದು ತೊಡೆ ತಟ್ಟಿ ಕರೆದರೂ ಆ್ಯಕಿಲೀಸಿನ ಜಳಿ ಬಿಡುವುದಿಲ್ಲ. ಅವನಲ್ಲಿ ಅರಿವು ಮೂಡಿಸಲೆಂದು ಸಹಜನ ಅವನನ್ನು ನಿಕೃಷ್ಟವಾಗಿ ಕಾಣುತ್ತಾರೆ. "ಏಕೆ, ಇವರಿಗೆ ನನ್ನ ಮಹತ್ಕಾರ್ಯಗಳು ಮರೆತವೆ?" ಎಂದು ಆಗ ಅವನಲ್ಲಿ ಏಳುವ ಪ್ರಶ್ನೆಗೆ ಯೂಲಿಸಿಸ್ ಕೊಡುವ ಉತ್ತರ ಈ ಭಾಗ.

ಕಾಲಕ್ಕಿದೆ, ಮಹಾನುಭಾವ, ಹೆಗಲ ಮೇಲಿನ ಚೀಲ.
ಭಿಕ್ಷೆಗಳ ತುಂಬಿ ಮರೆವಿಗಾಗಿಯೆ ದಾನ ನೀಡಲಿಕ್ಕೆ,
ದೀರ್ಘಕಾಯದ ದೈತ್ಯ, ಕೃತಘ್ನತೆಗೆ ಪ್ರಸಿದ್ಧ ಆತ:
ಚೀಲಕ್ಕೆ ತುಂಬಿದ್ದು ನಿನ್ನೆಯ ಮಹತ್ಕಾರ್ಯಗಳು: ಹುಟ್ಟುತಿದ್ದಂತೆ
ಕಬಳಿಸಿದಂಥವು. ಮಾಡಿದೊಡನೆಯೇ ಮರೆತಂಥವು:
ಮರಳಿ ಮಾಡುವ ಯತ್ನ, ಪ್ರಿಯ ಮಹಾನುಭಾವ,
ಗೌರವದ ಹೊಳಪನುಳಿಸುವುದು: ಮುಗಿಸಿದ್ದು ತೂಗುವುದು
ತುಕ್ಕು ಕವಚದ ಹಾಗೆ ವ್ಯಂಗ್ಯಸ್ಮಾರಕವಾಗಿ
ಪದ್ಧತಿಗೆ ಹೊರಗೆ. ಸಂದರ್ಭ ಕಳೆದಾಗ ಎಲ್ಲ ಕಳೆದಂತೆ;
ಏಕೆನ್ನು, ಗೌರವವು ನಡೆಯುವುದು ಇಕ್ಕಟ್ಟುಹಾದಿಯಲ್ಲ-
ದೆಯೆತ್ತಿ ನಡೆದಂತೆ: ದಾರಿ ತುಳಿಯಲೆ ಬೇಕು;
ಪ್ರಶಂಸೆಗೋ ಸಹಸ್ರ ಸಂತಾನ, ಒಂದರ ಹಿಂದೆ ಮತ್ತೊಂದು:
ದಾರಿ ಕಡಿಯಿತೊ, ಅಥವ ಪಕ್ಕಕ್ಕೆ ಸರಿದೆಯೊ ನೇರ
ದಾರಿಯ ಬಿಟ್ಟು, ತೆರೆ ನುಗ್ಗಿದಂತೆದ್ದು ನಿನ್ನನ್ನು
ಕೊಟ್ಟಕೊನೆಯಲ್ಲಿ ಹಾಕುವುವು;
ಅಥವ, ನೀನಾಗುವುದು ಮುಂಚೂಣಿಯಲ್ಲಿ ಬಿದ್ದ ಠಾಕಣದಂತೆ,
ಹಿಂಚೂಣಿ ನುಗ್ಗಿ, ತುಳಿದು ಮೇಲ್ನಡೆವ ಹಾದಿ:
ಅದಕ್ಕಾಗಿ ಅವರು ಮಾಡುವ ಕೆಲಸ ಸದ್ಯಕ್ಕೆ,
ನಿನ್ನ ಹಿಂದಿನದಕ್ಕೆ ಕೀಳಾದರು ಕೂಡ, ನೀನು
ಮಾಡಿದ್ದಕ್ಕೆ ಮೇಲಾಗುವುದು;
ಏಕೆನ್ನು, ಕಾಲ ಸಮಯಾನುವರ್ತಿ ಯಜಮಾನನಂತೆ,
ಬೀಳ್ಕೊಡುವ ಅತಿಥಿಯ ಕೈಯ ಸ್ವಲ್ಪ ಕುಲುಕುತಿದ್ದಂತೆಯೇ,
ಕೈಗಳನುದ್ದಕ್ಕೆ ಚಾಚಿ, ಅವನು ಮರೆಯಾದೊಡನೆ,
ಮತ್ತೊಬ್ಬನನ್ನು ತಬ್ಬಿಕೊಳ್ಳುವನು: ಮುಗುಳುನಗೆ ಸರ್ವದಾ ಸ್ವಾಗತಕ್ಕೆ,
ಬೀಳ್ಕೊಡುಗೆ ನಿಡುಸುಯ್ದು ಹೋಗುವುದು. ಓ! ಬೇಡ ಪ್ರತಿಫಲದಾಸೆ
ಸದ್ಗುಣಕ್ಕೆ. ತಾನು ಇದ್ದದ್ದಕ್ಕೆ;

ಏಕೆನ್ನು, ಸೌಂದರ್ಯ, ಚಾತುರ್ಯ,
ದೊಡ್ಡ ಕುಲ, ತೋಳಿನ ಶಕ್ತಿ, ದುಡಿವಾಗ ಸಿಕ್ಕ ಪ್ರಶಸ್ತಿ,
ಒಲವು, ಸ್ನೇಹ, ದಾನಧರ್ಮಗಳೆಲ್ಲ,
ಹೊಟ್ಟೆಕಿಚ್ಚಿಂದುರಿವ, ಕೆಟ್ಟ ಹೆಸರನ್ನಿಡುವ ಕಾಲದಾಡಳಿತಕ್ಕೆ ಒಳಪಟ್ಟವು.
ಸ್ವಭಾವವೊಂದರಿಂದಲೆ ಎಲ್ಲ ಬಂಧುಗಳು,
ಹಾಗಾಗಿ ಎಲ್ಲ ಒಕ್ಕೊರಲಿಂದ ಹೊಸತಾದ ತೋರಿಕೆಯ ವಸ್ತುಗಳನ್ನ
ಹಳೆಯ ವಸ್ತುಗಳಿಂದ ಜಜ್ಜಿ ಮಾಡಿದ್ದರೂ ಹೊಗಳುವರು;
ಮಣ್ಣಿಗೇ ಸ್ವಲ್ಪ ಚಿನ್ನದ ಮಿರುಗುಕೊಟ್ಟಿದ್ದರೂ ಸಾಕು
ಮಣ್ಣು ಮೆತ್ತಿರುವ ಚಿನ್ನಕ್ಕಿಂತ ಭಾರಿ ಬೆಲೆ ತೆತ್ತುವರು.
ಸದ್ಯದ ಕಣ್ಣು ಸದ್ಯಕ್ಕೆ ಕಾಣುವ ವಸ್ತು ಮೆಚ್ಚುವುದು:
ಅದಕ್ಕಾಗಿ ಗ್ರೀಕರೆಲ್ಲರು ಈಗ ಏಜಾಕ್ಸನನ್ನೇ ಮೆಚ್ಚಿ
ಪೂಜಿಸುತ್ತಿದ್ದರೂ, ನೀನು ಮಹಾವ್ಯಕ್ತಿ, ಆಶ್ಚರ್ಯಪಡಬೇಡ.
ಚಲಿಸುವ ವಸ್ತು ದೃಷ್ಟಿತಾಗುವ ಹಾಗೆ
ಚಲಿಸದ ವಸ್ತು ಆಕರ್ಷಿಸದು. ಬದುಕಿದ್ದಂತೆ ಸಮಾಧಿಯಾಗದಿದ್ದರೆ ನೀನು,
ನಿನ್ನ ವಿಖ್ಯಾತಿಯನ್ನೀಗ ಗುಡಾರದಲ್ಲಿ ಗೋರಿ ಮಾಡದಿದ್ದರೆ ನೀನು;
ಇತ್ತೀಚೆ ಇದೇ ಕಾಳಗದ ಕಣದಲ್ಲಿ ನಿನ್ನ ಸಾಮರ್ಥ್ಯಗಳು
ದೇವತೆಗಳಲ್ಲಿಯೇ ಸ್ಪರ್ಧೆಗಾಸ್ಪದವಾಗಿ
ಮಾರ್ಸ್‌ನನ್ನು, ಯುದ್ಧದೇವತೆಯನ್ನೆ ಯುದ್ಧಕ್ಕೆ ಎಳೆದಾಗ,
ಒಮ್ಮೆ ಜೈಕಾರ ನಿನಗಾಗಿತ್ತು, ಹಾಗೆಯೆ ಆದೀತು, ಮತ್ತೆ ಆದೀತು.

— **ಸುಮತೀಂದ್ರ ನಾಡಿಗ**

**'ಟ್ರಾಯ್‌ಲಸ್ ಅಂಡ್ ಕ್ರೆಸಿಡ',** III. iii. 145-89.

## ನಾಳೆ, ಮತ್ತೂ ನಾಳೆ, ಮತ್ತೂ ನಾಳೆ

ಡಂಕನನನ್ನು ಕೊಂದು ತಾನೇ ರಾಜನಾಗ ಹೊರಟ ಮಹತ್ವಾಕಾಂಕ್ಷಿ ಮೆಕ್‌ಬೆತ್ ತುಳಿದದ್ದು ಕೇಡಿನ ಹಾದಿ. ದಾರಿ ಮುಗಿಸುವ ಮುನ್ನ ಹಿಂದಿರುಗಿ ನೋಡಿದಾಗ ಅವನಿಗೆ ಕಂಡ ಸತ್ಯ ಇದು: "ಈ ಬದುಕು ಬರಿ ಅಬ್ಬರ, ಅರ್ಥಶೂನ್ಯ."

ನಾಳೆ, ಮತ್ತೂ ನಾಳೆ, ಮತ್ತೂ ನಾಳೆ
ತೆವಳುವುದು ಈ ಕ್ಷುದ್ರಗತಿಯಿಂದ ದಿನದಿನ ಹೀಗೆ
ಕಾಲಕಡತದ ಕೊಟ್ಟಕೊನೆಯ ಮಾತ್ರೆಯ ವರೆಗೆ,
ನಮ್ಮೆಲ್ಲ ನಿನ್ನೆ ಬೆಳಗಿದ್ದಾವೆ ಮೂರ್ಖರ ದಾರಿ
ಸಾವು ಧೂಳಿನ ಕಣಕೆ. ಆರು, ಆರು, ಸಂಕ್ಷಿಪ್ತ ಮೋಂಬತ್ತಿಯೇ!
ಬದುಕು ಕೇವಲ ನಡೆವ ನೆಳಲು, ರಂಗದ ಮೇಲೆ

ತನ್ನೊಂದು ಗಳಿಗೆ ಸೆಟೆನಡೆವ, ಸಿಡಿವ ಬಡ ನಟ,
ಅನಂತರ ಅವನ ಸೊಲ್ಲಿಲ್ಲ: ಮಂಕನಾವನೊ ಹೇಳಿ-
ದಂಥ ಕಥೆ, ಬರಿ ಗುಲ್ಲು, ಉದ್ರೇಕ, ವ್ಯಂಜಿಸುವಂಥ
ಅರ್ಥ ಕೇವಲ ಶೂನ್ಯ.

— ಗೋಪಾಲಕೃಷ್ಣ ಅಡಿಗ
'ಮೆಕ್‌ಬೆತ್', V. v. 19-28.

## ಕ್ಲಿಯೊಪಾಟ್ರಳ ಸಾವು

ಷೇಕ್ಸ್ಪಿಯರ್ ಸೃಷ್ಟಿಸಿದ ಕ್ಲಿಯೊಪಾಟ್ರಳ ಬದುಕು ಅದೆಷ್ಟು ಭವ್ಯವೋ ಅವಳ ಸಾವು ಸಹ ಅಷ್ಟೇ ಭವ್ಯ! ಅವಳು ಸತ್ತಳೆಂಬ ಸುಳ್ಳುಸುದ್ದಿಯನ್ನು ಕೇಳಿ ಆ್ಯಂಟನಿ ಆತ್ಮಾರ್ಪಣೆ ಮಾಡಿಕೊಂಡರೆ ಅವನ ಪ್ರೇಮುಕ್ಕೆ ಅಷ್ಟೇ ಘನವಾಗಿ ಕೃತಜ್ಞತೆ ಅರ್ಪಿಸುತ್ತಾಳೆ, ಆ ನಲ್ಲೆ. ಅವಳ ಸಾವಿನ ದೃಶ್ಯದ ಸಂಗ್ರಹಾನುವಾದ ಇಲ್ಲಿದೆ.

ನನಗೀಗ ರಾಜವಸ್ತ್ರವ ತೊಡಿಸಿ, ತಲೆಗಿಡಿರಿ ಕಿರೀಟವ—
ನನ್ನ ಹೃದಯದೊಳಿಂದು ಕಲ್ಪಾಂತಸ್ಥಾಯಿಭಾವಗಳುದಿಸಿಹವು:
ಇಂದಿನಿಂದೀಯೆನ್ನ ತುಟಿಗಳ್ಗೆ ಈಜಿಪ್ತಿನಾ ಮಧುರ ದ್ರಾಕ್ಷಾರಸವು
ವರ್ಜ್ಯ... ಕರೆದನೇನ್ ಆ್ಯಂಟನಿಯು ಈಗೆನ್ನ? ಈ ನನ್ನ ಘನ
ಕಾರ್ಯ ಕಂಡೆನ್ನ ಹೊಗಳಲಿಕೆ ಅವನೆದ್ದು ಬಂದಂತೆ ಭಾಸ-
ವಾಗುತಲಿಹುದು. ಬರುತಲಿಹೆನೆಲೆ ನಾಥ! 'ನಾಥ'ನೆಂದಿಂದು
ನಿನ್ನನ್ನು ಸಂಬೋಧಿಸಲು ಧೈರ್ಯ ಬಂದಿಹುದು. ನಾನಿಂದು
ಅಗ್ನಿ ಮೇಣ್ ವಾಯು! ಪಂಚಭೂತಗಳಲ್ಲಿ ಉಳಿದ ಮೂರನ್ನಿಂದು
ಈ ಜಡಪ್ರಪಂಚಕೆ ಬಿಟ್ಟು ಹೋಗುತಲಿರುವೆ. ಬಾರಿಲ್ಲಿ ಚಾರ್ಮಿಯನ್,
ಕೊನೆಯ ಸಲ ನನ್ನ ಈ ಅಧರಗಳ ಚುಂಬಿಸೌ... ಹಾಗೆ,
ಇದೊ ಇರಾಸ್... ನಿನಗೊಂದು ಸವಿ ಮುತ್ತು... ಇದೆ ಕೊನೆಯು —
ಏನ್? ಎನ್ನಧರ ನಾಗರದ ಹೆಡೆಯಾಯ್ತೆ? ಮೃತ್ಯುವನ್ನಪ್ಪಿದೆಯ?
ಜೀವ ದೇಹಗಳಿನಿತು ಸುಲಭದಲಿ ಅಗಲುವೊಡೆ
ಕಾಲನಾ ಕೋರೆಗಳು ಪ್ರಿಯಕರನ ಉಗುರುಗಳು: ಹೃದಯಕ್ಕೆ
ಚುಚ್ಚಿ ನೋವಾದರೂ ಮತ್ತೆ ಬೇಕೆನಿಸುವುದು.
ಇನಿತು ಬೇಗದಲಿ ತೆರಳಿದೆಯ ನೀನ್? ಹಾಗಾದರಿದೊ
ಹೋಗಿ ಬಹೆನೆಂಬ ಮಾತಿಗರ್ಥವೆ ಇಲ್ಲ... ಬಾರಿನ್ನು
ಮುದ್ದು ಮಿಡಿನಾಗರವೆ: ಕಚ್ಚಿಂತು ನನ್ನೆದೆಯ.
ನಿನ್ನವೀ ಹದನಾದ ಹಲ್ಲೆರಡರಿಂದಲೀ ಬಾಳಿನಾ ಕಗ್ಗಂಟ
ಬಿಡಿಸಿಬಿಡು: ಎಲೆ ಮೊದ್ದು ವಿಷಜಂತು, ಕೋಪಗೊಳ್-

ಮುಗಿಸಿಬಿಡು — ಶ್ ಶ್ss. ಸದ್ದು... ಸದ್ದಡಗಲಿ:
ಯಾರಲ್ಲಿ? ಸುಮ್ಮನಿರಿ. ಕಾಣಿಸದೆ? ನನ್ನ ಮಗು
ಮೊಲೆಯನುಣ್ಣುತಲಿಹುದು! ಮೊಲೆಗುಡಿದು
ಮಲಗಿಸುತ್ತಿಹುದು ತಾಯನೇ — ಚಿರನಿದ್ರೆಗೈಯಲ್ಕೆ.
ಏನು ಸುಖ! ಎದೆಗೆ ಶೀತಲದ ಚಂದನವ ತೊಡೆದಂತೆ,
ಮಲಯ ಮಾರುತ ತೀಡಿ ಮೆಲ್ಮೆಲನೆ ಸುಳಿದಂತೆ,
ಬಂದೆನಿದೊ... ಆ್ಯಂಟನೀ, ಇದೊ ಬಂದೆ.

— ವಸಂತ ಕವಲಿ

'ಆ್ಯಂಟನಿ ಅಂಡ್ ಕ್ಲಿಯೊಪಾಟ್ರ', V. ii. 280-312.

## ಬದುಕಿರಲೆ, ಬಾಳಿಗಂತವ ತರಲೆ: ಅದುವೆ ಪ್ರಶ್ನೆ!

ಹ್ಯಾಮ್ಲೆಟನ ತಾಯಿ ಗಂಡನಿಗೆ ವಿಷವಿಟ್ಟು ಕೊಂದು, ಅವನ ಶವ ಮಣ್ಣುಗೂಡುವ ಮೊದಲೇ ಮೈದುನನೊಡನೆ ಕೂಡಿಕೆ ಮಾಡಿಕೊಂಡಿದ್ದಾಳೆ. ಇದನ್ನು ಕಂಡು ರೋಸಿದ ಹ್ಯಾಮ್ಲೆಟನ ಮನಸ್ಸು ಘೋರ ಉತ್ಪಾತಕ್ಕೆ ಸಿಕ್ಕಿ ತೊಳಲುತ್ತಿದೆ. ಅವನಿಗೆ ಇಡಿಯ ಸ್ತ್ರೀಕುಲದ ಬಗ್ಗೆ ಹೇಸಿಗೆ, ತನ್ನ ನಿಷ್ಕ್ರಿಯತೆಗೆ ತನ್ನ ಮೇಲೆಯೇ ತಾತ್ಸಾರ. ಈ ಸನ್ನಿವೇಶದಲ್ಲಿ ಸ್ವಾಭಾವಿಕವಾಗಿ ಆತ್ಮಹತ್ಯೆಯ ಯೋಚನೆ ಬರುತ್ತದೆ. ಆದರೆ ಸಾವು ಬಾಳಿನೆಲ್ಲ ಸಮಸ್ಯೆಗಳಿಗೆ ಪರಿಹಾರವಾಗ ಬಲ್ಲುದೆ? ಮರಣಾನಂತರ ವೇದನೆ ಅಳಿದು ಸುಖ ದೊರೆಯುವುದೆಂದು ಯಾರು ಬಲ್ಲರು? — 'ಹ್ಯಾಮ್ಲೆಟ್' ನಾಟಕದ ನಾಲ್ಕು ಮಹಾ ಸ್ವಗತ-ಸಂವಾದಗಳಲ್ಲಿ ಇದು ಒಂದು.

**ಹ್ಯಾಮ್ಲೆಟ್.** ಬದುಕಿರಲೆ, ಬಾಳಿಗಂತವ ತರಲೆ: ಅದುವೆ ಪ್ರಶ್ನೆ!
ದುಷ್ಟ ಅದೃಷ್ಟವದು ಎಸೆವಂಬು, ಕವಣೆಗಳ
ಮುಟ್ಟಿದಲ್ಲದ ತೆರದಿ ಸಹಿಸುವುದು ಲೇಸೇ?
ಇಲ್ಲಿಲ್ಲ, ಅಟ್ಟಬಹ ಸಂಕಷ್ಟ ಸಾಸಿರವ
ನಿಷ್ಠುರದಿ ಎದೆಯೊಡ್ಡಿ ಕೊನೆಗೊಳಿಸೆ ಲೇಸೇ?
ಸಾವೆಂಬ ಸೀಮೆಯಲಿ ಕಾಯಕ್ಕೆ ಕಟ್ಟಿಟ್ಟ
ಮಾಯದಾ ಎದೆನೋವು, ಸಾಸಿರಾಘಾತಗಳ
ಇಲ್ಲದಾಗಿಸಿ ಮಾಳ್ಪ ನಿದ್ದೆ ಶ್ರೇಯಸ್ಸೆ?
ಯಾಕೊಲ್ಲ? ಯಾಕೊಲ್ಲದಾ ಸಾವು, ನಿದ್ದೆ,
ಹಂಬಲಿಸಿ ಹಂಬಲಿಸಿ ಭಾಗ್ಯ ಪಡೆದಂತೆ.
ನಿದ್ದೆಯೆಂದೊಡೆವುಂಟು ಕನಸುಗಳ ಬಾಧೆ!
ಅಲ್ಲಿಯೇ ತೊಡಕುಂಟು, ಆ ಕನಸು ಇನ್ನೆಂತೊ!
ಕಳಚಿಯೆಸೆದಾಕ್ಷಣಕೆ ನಮ್ಮೀ ಭೌತಕಾಯ
ಬೇಕೆಬೇಕೊಂದು ಕೊನೆ, ಬಾಳ್ಬವಣೆ ಸಸಿಗೆ ತೆನೆ.

ಇಲ್ಲದಿರೆ ಬೆಲೆಯೇನು? ಸಹಿಸಿದಕೆ ಫಲವೇನು?
ಕಾಲನಾ ಮೂದಲೆಯ, ಚಮ್ಮಟಿಗೆಯೇಟುಗಳ,
ಹಗೆಯೆಸೆವುವನ್ಯಾಯ, ಉದ್ಧಟನ ದುಮ್ಮಾನ,
ಕಾಲ ಮೀರಿದ ನ್ಯಾಯ, ಪ್ರೇಮನಿಂದಿತ ಗಾಯ,
ಅಧಿಕಾರಿ ತಾತ್ಸಾರ ಒಗ್ಗೂಡಿ ಜರೆಯುತಿರೆ
ಬಗ್ಗಿ ಬಾಳಲು ಬೇಕೆ, ವಿನಯ ಅವಿನಯಕ್ಕೆ,
ತಾನೆ ಕೊನೆಗೊಂಬೊಂದು ಸುಲಭ ಪಥವಿರಲಿಕ್ಕೆ?
ಬರಿಯ ದಬ್ಬಣ ಸಾಕು, ನಿಜಕು ಅದಕೆ.
ಈ ಭಾರ ಹೊರಲೇಕೆ, ಬೆವರುತ್ತೆ, ಗೊಣಗುತ್ತೆ,
ಸಾಕುಸಾಕಾಯ್ತೆಂಬ ದನಿಯ ತೆಗೆವುತ್ತೆ?
ಸಾವಿನಾಚೆಗೆಯೇನು ಎಂಬೊಂದೆ ಭಯವಲ್ತೆ?
ಕಂಡಿಲ್ಲದಾ ಸೀಮೆ, ಮರಳ್ದ ಯಾತ್ರಿಕನಿಲ್ಲ
ವೆಂಬ ಬೆಕ್ಕಸಬೆರಗು ಮತಿಯ ಕಳವಳಿಸೆ,
ಅರಿತ ಭವಣೆಯೆ ಲೇಸು ಅರಿಯದಿಹ ಪರಕಿಂತ
ಎಂಬ ಸಹನೆಯ ಪಾಠ ನಿಲಿಸಿ ಕಲಿಸೆ.
ಈಯಂತಃಸ್ಸಾಕ್ಷಿಯೇ ಭೀರುಗಳನಾಗಿಸಲು
ದುರ್ಬಲ ಮನೋಧರ್ಮ ಬೇನೆಯಿಂ ಬೆಂದವುದು
ಸಾಹಸದ ಎದೆಗೆಚ್ಚು, ಉಬ್ಬು, ಉಕ್ಕುಗಳೆಲ್ಲ
ಬಂದ ದಾರಿಯ ಹಿಡಿದು ತಮ್ಮಂತೆ ಮರಳುತಲಿ
ಕಾರ್ಯ್ಯಕರ್ಮದ ಹೆಸರೆ ಕೇಳದಾಗುವುದು.
ಮಿದುವಾಗು ಎಲೆ ಮನವೆ, ಬರುತಿಹಳು ಈ ಚೆಲುವೆ!
ಚೆಲುವೆಯೊಫೀಲಿಯೆಯೆ, ಅಪ್ಸರಸಿ ನೀನು,
ದಿನದ ಜಪತಪದಲ್ಲಿ ಎನ್ನ ಪಾಪಗಳನ್ನು
ನೆನೆಯುವಂತಾಗಲ್ಲೈ.

**ಒಫೀಲಿಯ.** ಒಳಿತೇನು ಪ್ರಭುದೇವ?
ಕುಶಲವೇ ತಾವಿಂದು, ಬಹುದಿನಕೆ ಭೇಟಿ.

**ಹ್ಯಾಮ್ಲೆಟ್.** ಒಳಿತೊಳಿತು, ಬಹು ಚೆನ್ನು, ವಂದನೆಯದಿನ್ನು.

**ಒಫೀಲಿಯ.** ತಮ್ಮ ಸ್ಮರಣೆಗಳನ್ನು ಮರಳಿ ಸಲ್ಲಿಸಲೆಂದು
ಹಲವು ದಿನ ಹಂಬಲಿಸಿ ಹೊತ್ತು ತಂದಪೆನಿಂದು,
ಹೇ ಪ್ರಭುವೆ, ನೀವಿಂದು ಪರಿಗ್ರಹಿಪುದದನು.

**ಹ್ಯಾಮ್ಲೆಟ್.** ನಾನೊಲ್ಲೆನೊಲ್ಲೆ, ನಾ ಕೊಟ್ಟುದೇನಿಲ್ಲವಲ್ಲ.

**ಒಫೀಲಿಯ.** ಪ್ರಭುವರನೆ, ಉಂಟೆಂಬುದನು ನೀವು ಬಲ್ಲಿರಲ್ಲ.
ಕೊಡುವಾಗ ಬೆರೆತಿದ್ದ ಸವಿನುಡಿಯ ಕಂಪಿಂದ
ಕೊಟ್ಟುದರ ಫಲ ತಾನು ನೂರು ಮಡಿ ಹೆಚ್ಚಿತ್ತು,

ಮತ್ತೆ ಮುಸಳಿಸೆ ಕಂಪು, ಮುರಳಿ ತರುವಂತಾಯ್ತು;
ಕೊಟ್ಟ ದಾನಿಯು ತಾನು ನಿಷ್ಕರುಣಿಯಾದಂದು
ಅಂಗಚಿತ್ತದ ಶೋಭೆ ಉಳಿದಿಲ್ಲ ಕ್ವಚಿತ್ತೂ.

ಹ್ಯಾಮ್ಲೆಟ್. ಹಾಹಾಹ, ಸಂಭಾವಿತೆಯೆ ನೀನು?

ಒಫೀಲಿಯು. ಏನೇನು ಪ್ರಭುವೆ?

ಹ್ಯಾಮ್ಲೆಟ್. ಚೆಲುವೆಯೂ ಅಲ್ಲೇನು?

ಒಫೀಲಿಯು. ತಮ್ಮ ಇಂಗಿತವೇನು?

ಹ್ಯಾಮ್ಲೆಟ್. ಚೆಲುವೆ, ಸಂಭಾವಿತೆಯು ನಿಜಕು ನೀನಿರುವಂದು
ಸಂಭಾವಿತೆಗೆ ಊನ ತರಲರಿದೆ ಚೆಲುವು?

ಒಫೀಲಿಯು. ಚೆಲುವಿನಾ ಕೆಳೆತನಕೆ ಸಂಭಾವಿತೆಯಲ್ಲ ನಂಟು?

ಹ್ಯಾಮ್ಲೆಟ್. ಸಂಭಾವಿತೆಯು ಚೆಲುವ ತನ್ನ ಪಡಿಯಚ್ಚಿನಲಿ
ತಿದ್ದಿ ತೋರುವ ಬದಲು, ಚೆಲುವಿಕೆಯೆ ಅದ ತಿದ್ದಿ
ಅಂದಗೆಡಿಸುವ ಮೋಡಿ ದಿಟವು, ಸಹಜ.
ಅದೆ ಜಿಡುಕು ಕೆಲವು ಸಲ ಕಾಣಿಸುತಲಿತ್ತು;
ಇಂದದಕೆ ಕಾಲ ತಾ ಸಾಕ್ಷಿ ನೀಡಿತ್ತು.
ಹಿಂದೊಂದು ಕಾಲದಲಿ ನಾ ನಿನ್ನ ಪ್ರೀತಿಸಿದ್ದೆ.

ಒಫೀಲಿಯು. ಪ್ರಭುವೆ, ನಿಮ್ಮಿಂದ ನಾನದನು ನಂಬಿಬಂದೆ

ಹ್ಯಾಮ್ಲೆಟ್. ನಂಬಬಾರದು ಇತ್ತು, ನಂಬಿ ತಪ್ಪಾಯ್ತು.
ಹಳೆಯ ನೆನಹುಗಳೊಂದು ತುಂಬಿ ಬಪ್ಪಂತಿಲ್ಲ;
ನೆನಪುಗಳ ಸವಿಯಿರಲಿ, ಅದರಿಂ ಬಾಧಕವಿಲ್ಲ,
ಆದರೂ ನಾ ನಿನ್ನ ಪ್ರೀತಿಸಿದ್ದೇ ಇಲ್ಲ.

ಒಫೀಲಿಯು. ಅಂತಿರಲು ನಾನೆ ವಂಚಿತೆಯಾದೆ.

ಹ್ಯಾಮ್ಲೆಟ್. ಹೋಗು ನೀ, ಸೇರಪ್ಪ, ಕನ್ನೆಮಠವೊಂದ,
ಯಾಕಾದರೂ ಬೇಕು ಪಾಪಿಗಳ ಹೆರುವಂದ
ನಾನೆ ಹೀಗಿಹೆನಂತೆ ಋಜುಪಥದೊಳಲಸಿಗನು;
ಆದರೂ ಅನಿಸುತಿದೆ — ಆಯೆನ್ನ ಮಾತಾಯಿ
ಹಡೆಯದಿದ್ದರೆ ಲೇಸು ಎಂಬ ಚಿಂತೆ.
ಹೆಮ್ಮೆ ನನಗುಂಟೆಷ್ಟು, ಸೇಡ ಹಂಬಲವೆಷ್ಟು,
ಅಭಿಲಾಷೆ ಮತ್ತೆಷ್ಟು — ಇದ್ದರೂ ಬಂತೇನು?
ಎಣಿಕೆಗಳ ಬೆಂಬತ್ತಿ, ರೂಪರೇಷೆಯನಿತ್ತು
ಕಜ್ಜವೆಸಗುವ ಶಕ್ತಿ ಇಲ್ಲದಿರಲು,
ಎಸಗುತಿಹ ಅಪರಾಧಗಳ ಸಂಖ್ಯೆ ಮಿಗಿಲು.
ಭೂಮಿಬಾಂದಳದೆಡೆಯೊಳೆನ್ನಂಥ ಜೀವಿಗಳು
ಹರಿದು ಮಾಡುವುದೇನು, ಸಾಧ್ಯವಿನ್ನೇನು?

ಶುದ್ಧಶುಂಠರದೆಲ್ಲ, ನೆಚ್ಚದಿರು ಯಾರನ್ನು;
ಹಿಡಿ ನೀನು ದಾರಿಯನು, ಕನ್ನೆಮಠಕಿನ್ನು.
ಎಲ್ಲಿರುವ ತವ ಪಿತನು ?

ಒಫೀಲಿಯ. ಮನೆಯಲ್ಲಿ, ಪ್ರಭುವೆ.

ಹ್ಯಾಮ್ಲೆಟ್. ಕದವಿಕ್ಕಿ ಒಳಗಿರಿಸು, ಬಿಡದಿರೌ ಹೊರಗೆ,
ಅವನ ಕಪಿಚೇಷ್ಟೆಗಳು ನಡೆಯಲದರೊಳಗೆ.

ಒಫೀಲಿಯ. ಸವಿಸಗ್ಗದಮರಚಯ, ಪೊರೆಯಿರಿವನ !

ಹ್ಯಾಮ್ಲೆಟ್. ಮದುವೆ ನೀನಾಗುವೊಡೆ, ಸಲಿಪೆನಿದೊ ಬಳುವಳಿಯ:
ನಿನ್ನ ಶುಚಿ, ಪಾವಿತ್ರ್ಯ ಬೆಳ್ಮಂಜಿನಂತಿರಲಿ,
ಲೋಕಾಪವಾದವದು ಬೆನ್ನ ಬಿಡದಿಹುದು.
ಸೇರು ನೀ, ಸರಿ ಬೇಗ, ಕನ್ನೆಯರ ಮಠವೊಂದ;
ಸುಕ್ಷೇಮ ನಿನಗಹುದು; ಮತ್ತೆ ನೀ ವರಿಪಂದು
ಮತಿವಿಕಲನನೆ ವರಿಸು; ಅದೆ ವಾಸಿ, ಕಡು ಸೊಗಸು.
ಬುದ್ಧಿಯಿದ್ದವ ಬಲ್ಲ, ಹೊದ್ದಿದರೆ ನೀವವರ
ತಿದ್ದಿ ತೊಡಿಸುವಿರೆಂದು ಘೋರ ರಕ್ಕಸ ರೂಪ.
ಹೋಗು ನೀ, ಹೋಗವ್ವ, ಕನ್ನೆಮಠಕೆ.

ಒಫೀಲಿಯ. ಓ ದೈವಶಕ್ತಿಗಳೆ, ಚೇತರಿಸಿ ಕಾಪಾಡಿ.

ಹ್ಯಾಮ್ಲೆಟ್. ಚಿತ್ತಾರಗಳ ಬರೆವ ಕುಶಲೆ ನೀನೆಂದು
ಕೇಳಿಹೆನು ಬಲುವಾಗಿ, ಅದರಿಂದಲಿಂದು —
ದೇವನಿತ್ತಿಹ ಮೊಗವು ಸಾಲದೆಂಬುದಕೆ
ಬದಲೊಂದೆ ಮೊಗವನ್ನೆ ತೊಡುವ ಬಯಕೆ.
ದೈವಸೃಷ್ಟಿಯೊಳಿರುವ ಜೀವಿಗಳ ನೀ ಕಂಡು
ಪದವೆತ್ತಿ, ಪದವಿಟ್ಟು ಅಲೆಯ ಬಲ್ಲೆ
ಮುದದಿಂದ ನಲಿದಾಡಿ ತೊದಲ ಬಲ್ಲೆ
ಅವಕೆಲ್ಲ ಹೆಸರಿಟ್ಟು ಕರೆಯ ಬಲ್ಲೆ
ಸ್ವೈರವಜ್ಞತೆಯೆಂದು ತೋರ ಬಲ್ಲೆ
ಪೋ ಪೋಗು, ಸಾರ್ ಸಾರು, ಕಂಡಾದೆ ಮರುಳ.
ಮುನ್ನಾರಿಗೂ ಬೇಡ, ದಾಂಪತ್ಯವದು ಹೊಲ್ಲ
ಮದುವೆಯಾದವರಲ್ಲಿ ಬದುಕಿಗೊಬ್ಬನು ಸಲ್ಲ.
ಮಿಕ್ಕವರು ಇರಲಂತೆ. ನೀ ಸೇರು ಕನ್ನೆಮಠ.

ಒಫೀಲಿಯ. ಉದಾತ್ತ ಮಾನಸಗೆ ಏನಿದುತ್ಪಾತ!
ಪರಿಚರ ಪದಾತಿ ಪಂಡಿತರ
ಕಣ್ ಕೈದು ಜಿಹ್ವೆಯಾದವನು,
ಸೊಗದ ರಾಷ್ಟ್ರದಯೆಲ್ಲ ಅಭಿಲಾಷೆ ಕುಸುಮ,

ಸಂಭ್ರಮಕೆ ಕನ್ನಡಿಯು, ರೂಪದಾ ಪಡಿಯಚ್ಚು,
ಕಾಂಬೆಲ್ಲ ಕಣ್‌ಗುರಿಯು ಇಂತಾಯ್ತೆ ಗತಿಯು,
ಎನ್ನಂಥ ಹತಭಾಗ್ಯೆ ನಾರಿಯರದಿನ್ನಾರು
ಚೆನ್ನಿವನ ಭಾಷೆಯಾ ಮಧುವೀಂಟಿದರೊಳು.
ಸವಿಗೆಜ್ಜೆ ಝಣರಂತೆ ಉಲಿದ ಪರಮವಿವೇಕ
ತಾಲ ತಪ್ಪುತೆ ತೆಗೆವ ತಾನವದು ಏನಕೇನ.
ಪಾಪಿ ನಾನಿರಲಿಕ್ಕೆ, ಹಿಂದಷ್ಟು ಕಂಡುದಕೆ
ಇಂದಿಷ್ಟು ಕಾಂಬುವುದ ಕಾಣುತಿರಲಿಕ್ಕೆ.

— **ಶಿವರಾಮ ಕಾರಂತ**
**'ಹ್ಯಾಮ್ಲೆಟ್',** III. i. 56-161.

## ಲಾನ್ಸನ ನಾಯಿ

ಷೇಕ್‌ಸ್ಪಿಯರನದು ಬಹುಮುಖ ಪ್ರತಿಭೆ. ಅವನ ಸೃಷ್ಟಿಯಲ್ಲಿ ಗಂಭೀರಾರಣ್ಯಗಳು ಇರುವಂತೆ ಹಾಸ್ಯೋದ್ಯಾನಗಳೂ ಇವೆ. ಅಲ್ಲಿ ಸಹ ಅದೆಷ್ಟು ಬಗೆ! ನಯ, ನವಿರು, ಒರಟು, ಒಡ್ಡು— ಯಾವುದೆಂದರೆ ಅದಕ್ಕೆ ಸೈ ಈ ಕವಿ. ಇದೊ, ಅವನ ಒರಟು ಹಾಸ್ಯದ ಒಂದು ಮಾದರಿ ಇಲ್ಲಿದೆ. 'ದಿ ಟು ಜೆಂಟಲ್‌ಮೆನ್ ಅಫ್ ವೆರೋನ'ದ ಪ್ರೊಟ್ಯೂಸ್ ಒಮ್ಮೆ ತನ್ನ ಆಳುಮಗ ಲಾನ್ಸನನ್ನು ದೊರೆಸಾನಿ ಸಿಲ್ವಿಯಾಳ ಬಳಿ ಕಳಿಸುತ್ತಾನೆ. ಅಲ್ಲಿ ಅವನೂ ಅವನ ನಾಯಿಯೂ ಮಾಡುವ ಅನಾಹುತ ಒಂದೊಂದಲ್ಲ!

[ಲಾನ್ಸ್, ನಾಯಿಯೊಡನೆ ನೇಪಥ್ಯದಿಂದ ಆಗಮಿಸಿ, ನರಳುತ್ತ, ಪೊದೆಯ ಬಳಿ ಕುಸಿಯುತ್ತಾನೆ.

**ಲಾನ್ಸ್.** (ನಾಯಿಗೆ) ನೋಡು, ಭಂಟನೊಬ್ಬ ತನ್ನ ಯಜಮಾನನಿಗೇ ಹೀಗೆ ಎರಡು ಬಗೆದಾಗ ತುಂಬ ಕಷ್ಟವಾಗುತ್ತದೆ. ಎಳೆಮರಿ ಆಗಿದ್ದಾಗಿನಿಂದ ನಿನ್ನನ್ನು ಜೋಪಾನ ಮಾಡಿದ್ದೇನೆ. ಕಣ್ಣೇ ತೆರೆಯದ ನಿನ್ನ ಮೂವರು ನಾಲ್ವರು ಸೋದರಸೋದರಿಯರು ನೀರಿಗೆ ಜಾರಿ ಬಿದ್ದು ನಿರ್ನಾಮವಾದ ಸಂದರ್ಭದಲ್ಲಿ, ಮುಳುಗಿ ಹೋಗುತ್ತಿದ್ದ ನಿನ್ನನ್ನು ಬಿಡದೆ ಬಚಾಯಿಸಿದ್ದೇನೆ. ಎಳೆತನದಿಂದ, ಅಡಿಗಡಿಗೂ ಪಾಠ ಹೇಳಿ, 'ನನ್ನ ನಾಯಿಗೆ ಇದನ್ನು ಕಲಿಸಬೇಕು... ಅದನ್ನು ಕಲಿಸಬೇಕು' ಎಂದುಕೊಂಡು ನಿಶ್ಚಿತವಾದ ಶಿಕ್ಷಣ ಕೊಟ್ಟದ್ದೇನೆ... ಈಗ ಯಜಮಾನರ ಅಪ್ಪಣೆಯಂತೆ, ಅವರ ಒಲವಿನ ಸಿಲ್ವಿಯಾದೇವಿಗೆ ಉಡುಗೊರೆಯಾಗಿ ನಿನ್ನನ್ನು ಒಪ್ಪಿಸಿಕೊಡಲು ಹೋದಾಗ, ಅಲ್ಲs, ಇನ್ನೂ ನಾವು ಭೋಜನಶಾಲೆಯೊಳಗೆ ಕಾಲಿಡುವುದಕ್ಕಿಲ್ಲ ... ಅಷ್ಟರಲ್ಲಿಯೇ ನೆಗೆದು, ಕಣ್ಣುಮುಚ್ಚಿಬಿಡುವಷ್ಟರಲ್ಲಿ ಮಾಂಸದ ತುಕಡವನ್ನು ಕದ್ದು ತಂದೆಯಲ್ಲ! ಏನು ಗ್ರಹಚಾರ ನನ್ನದು! ಎಲ್ಲೆಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದೇ ನಿನಗೆ ತಿಳಿಯದೆ ಹೋದರೆ ಏನು ಗತಿ? ಎಲ್ಲ ಕಡೆಯಲ್ಲಿಯೂ ನೀನು ನಾಯಿಬುದ್ಧಿಯನ್ನೇ



**ಲಾನ್ಸ್, ಅವನ ನಾಯಿಯೊಂದಿಗೆ.**

"ಎಲ್ಲೆಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುವೇ ನಿನಗೆ ತಿಳಿಯದೇ ಹೋದರೆ ಏನು ಗತಿ." — ಲಾನ್ಸ್.

ತೋರಿಸಿದರೆ ಏನು ಮಾಡಲಿ ನಾನು? ಸಧ್ಯ, ಕೂಡಲೇ ನಾನು ಬುದ್ಧಿ ಖರ್ಚು ಮಾಡಿ, ಮಾಂಸ ಕದ್ದ ನಿನ್ನ ತಪ್ಪನ್ನು ನನ್ನ ತಲೆಯ ಮೇಲೆ ಹಾಕಿಕೊಂಡೆ, ಇಲ್ಲದಿದ್ದರೆ ಅಂತಹ ತಪ್ಪಿಗಾಗಿ ಖಂಡಿತ ನಿನ್ನನ್ನು ನೇಣು ಹಾಕುತ್ತಿದ್ದರು. (ಪ್ರೇಕ್ಷಕರಿಗೆ) ಅಲ್ಲ, ನೀವೇ ಯೋಚಿಸಿ ನೋಡಿ ಈ ಹೀನಶ್ವಾನಕ್ಕೆ ಹಿಂದೆಯೇ ಒಮ್ಮೆ ಅದೆಂತಹ ಘೋರ ಶಿಕ್ಷೆ ಆಗಬೇಕಾಗಿತ್ತು . . . . ಶ್ರೀಮಂತರು ಸ್ವತಃ ಅವರ ಗೆಳೆಯರೊಡನೆ ಭೋಜನಕ್ಕೆ ಕುಳಿತಿದ್ದಾರೆ . . . . ಇದು ತಾನೇತಾನಾಗಿ ಮೆಲ್ಲನೆ ನುಗ್ಗಿ, ಮೇಜವಾನಿಯ ಮೇಜಿನ ಕೆಳಗೇ ... ಸ್ವಲ್ಪ, ಹಾಗೆ, ಮೂತ್ರ ಬಿಟ್ಟಾಗ, ಹಾಳು ದುರ್ವಾಸನೆ ಭೋಜನಶಾಲೆಯನ್ನೇ ಆವರಿಸಿಕೊಂಡಿತು. "ಥೂ, ಯಾವುದು ಆ ದರಿದ್ರನಾಯಿ? ಹೊಡೆದೋಡಿಸು" ಎಂದು ಒಬ್ಬಾತ ಮೂಗು ಮುಚ್ಚಿ ಅರಚಿಕೊಂಡ. "ಎಂಥ ಹೊಲಸು ಹಳವಂಡ ಇದು" ಎಂದು ಮತ್ತೊಬ್ಬ ರೇಗಿದ. "ಕೊರಡಿನಿಂದ ನಾಲ್ಕು ಬಾರಿಸು ಅದಕ್ಕೆ" ಎಂದು ಮೂರನೆಯಾತ ಕೆರಳಿ ಕೂಗಿದ. "ಮೊದಲು ನೇಣು ಹಾಕು ಅವನ್ನ" ಎಂದು ಸ್ವತಃ ಶ್ರೀಮಂತರೇ ಗುಡುಗಿದರು . . . . ಆ ದುರ್ವಾಸನೆಯ ನಿಕಟ ಪರಿಚಯವಿದ್ದ ನಾನು ಯಾರದ್ದು ಈ ಕೆಲಸ ಎಂಬುದನ್ನು ತಕ್ಷಣ ಚೆನ್ನಾಗಿ ಅರಿತುಕೊಂಡೆ ... ನಾಯಿಗೆ ಬಾರಿಸಲು ಕೊರಡೆತ್ತಿ ನಿಂತವನ ಬಳಿಗೆ ನಡೆದು "ಏನಪ್ಪಾ, ನೀನು ನಿಜವಾಗಿ ನಾಯಿಗೆ ಬಾರಿಸಬೇಕೆಂದಿ

ದ್ದೀಯಾ?" ಎಂದು ಕೇಳಿದೆ. "ಹೌದು, ಖಂಡಿತವಾಗಿ" ಎಂದ ಆತ. ಆಗ ನಾನು "ಅಲ್ಲಯ್ಯಾ... ಯಾರ ತಪ್ಪಿಗೆ ಯಾರಿಗೆ ಶಿಕ್ಷೆ? ನೀನು... ಭಾವಿಸಿಕೊಂಡುದನ್ನು ಮಾಡಿದವನು ಸ್ವತಃ ನಾನು! ನಾಯಿಯಲ್ಲ! ನನ್ನ ತಪ್ಪಿನ ಸಲುವಾಗಿ ನಾಯಿಗೆ ಬಾರಿಸಿದರೆ. ಇನ್ನು ಇದಕ್ಕಿಂತ ಬೇರೆ ಅನ್ಯಾಯವುಂಟೆ" ಎಂದು ಕೇಳಿದೆ. ಆಗ ಆತ ಬೇರೆ ಸದ್ದುಗದ್ದಲ ಮಾಡದೆ, ಕೊರಡಿನಿಂದ ನನಗೇ ನಾಲಕ್ಕು ಬಾರಿಸಿ, ಭೋಜನ ಶಾಲೆಯಿಂದ ಒದ್ದು ಹೊರಗಟ್ಟಿದ. ಹೀಗೆ ಅಂತಹ ಹೀನ ಅಪರಾಧವನ್ನೂ ತನ್ನ ತಲೆಯ ಮೇಲೆಯೇ ಹಾಕಿಕೊಂಡು ಅದಾವ ಯಜಮಾನ ತಾನೇ ತನ್ನ ನಾಯಿಯನ್ನು ಕಾಪಾಡಿದ್ದಾನೆ? ಆಣೆಮಾಡಿ ಹೇಳುತ್ತೇನೆ ನೋಡಿ, ಇದು ಕದ್ದು ತಿಂದ ಕಡುಬಿಗಾಗಿ ಅದೆಷ್ಟು ಬಾರಿ ನಾನು ಶಿಕ್ಷೆ ಅನುಭವಿಸಿದೆನೋ ಏನೋ! 'ನಾನೇ ಕದ್ದೆ' ಎಂದು ಇದು ಮಾಡಿದ ತಪ್ಪನ್ನು ನನ್ನ ಮೇಲೆ ಹಾಕಿಕೊಳ್ಳದಿದ್ದರೆ ಅದೆಂದೋ ಇದರ ಚರ್ಮ ಸುಲಿದು ಬಿಡುತ್ತಿದ್ದರು. ಇನ್ನು ಇದು ಕದ್ದು ತಿಂದ ಕೋಳಿಮರಿಗಳ ಸಲುವಾಗಿ ಅದೆಷ್ಟು ಸಲ ನಾನು ಎಂತೆಂತಹ ಶಿಕ್ಷೆ ಅನುಭವಿಸಿದೆನೋ ಆ ಪರಮಾತ್ಮ ನಿಗೇ ಪ್ರೀತಿ! ಇಲ್ಲದಿದ್ದರೆ ಇದರ ಕತೆ ಅದೆಂದೋ ಮುಗಿದು ಹೋಗುತ್ತಿತ್ತು. (ನಾಯಿಗೆ) ಈಗ ಅದಾವುದೂ ನಿನ್ನ ನೆನಪಿಗೇ ಬರುವುದಿಲ್ಲ ಅಲ್ಲವೆ?.... ಅಬ್ಬ, ಈಗ ಸಿಲ್ವಿಯಾದೇವಿಯಿಂದ ನಾವು ಬೀಳ್ಕೊಂಡಾಗ ನೀನು ಮಾಡಿದ ಕೆಲಸ! ಅಲ್ಲಯ್ಯಾ 'ನಾನು ಮಾಡಿದಂತೆ ನೀನು ಮಾಡು' ಎಂದು ನಿನಗೆ ಅದೆಷ್ಟು ಸಲ ಹೇಳಿಲ್ಲ ನಾನು? ಆದರೆ ನಾನು ಕಾಲೆತ್ತಿ ಒಬ್ಬ ಮರ್ಯಾದಸ್ಥ ಹೆಣ್ಣುಮಗಳ ಲಂಗದ ಮೇಲೆ ಮೂತ್ರ ಮಾಡಿದುದನ್ನು ನೀನೆಂದು ನೋಡಿದೆ? ಅಂತಹ ಕೆಟ್ಟ ಆಟವನ್ನು ನಾನೆಂದಾದರೂ ಆಡಿದೆನೆ? ಎಂದಾದರೂ ನೋಡಿದೆಯಾ ನೀನು?

**ಪ್ರೊಟ್ಯೂಸ್.** (ಪ್ರವೇಶಿಸಿ) ಎಲಾ ... ಈಗ ಇಲ್ಲೇನು ಮಾಡುತ್ತಿದ್ದೀಯೋ, ತೊತ್ತಿನ ಮಗನೆ! ಈ ಎರಡು ದಿನ ಎಲ್ಲಿ ತಲೆ ಮರಸಿಕೊಂಡು ತಿರುಗುತ್ತಿದ್ದೆ?

**ಲಾನ್ಸ್.** ಏಕೆ ಸ್ವಾಮಿ, ತಾವೇ ಹೇಳಿದಂತೆ, ಸಿಲ್ವಿಯಾದೇವಿಗೆಂದು ನಾಯಿಯನ್ನು ಉಡುಗೊರೆ ಕೊಡಲು ಕೊಂಡುಹೋಗಿದ್ದೆ.

**ಪ್ರೊಟ್ಯೂಸ್.** ಹಾಂ, ಆ ನನ್ನ ಮುದ್ದುಮರಿಯ ಬಗೆಗೆ ಸಿಲ್ವಿಯಾ ಏನು ಹೇಳಿದಳು?

**ಲಾನ್ಸ್.** ತಮ್ಮ ನಾಯಿ ಶುದ್ಧ ಕತ್ತೆಯೆಂದು ಶಪಿಸಿದರು. ಅಂತಹ ಉಡುಗೊರೆ ಕಳುಹಿಸಿದುದಕ್ಕಾಗಿ ತಮಗೆ ಎಂತಹ ಶಾಪ ಹಾಕಿದರೂ ಸಾಲದೆಂದರು.

**ಪ್ರೊಟ್ಯೂಸ್.** ಅಲ್ಲs... ಆದರೂ ಆಕೆ ಆ ಮುದ್ದುಮರಿಯನ್ನು ಸ್ವೀಕರಿಸಿದಳು ತಾನೆ?

**ಲಾನ್ಸ್.** ಇಲ್ಲ ಸ್ವಾಮಿ, ಖಂಡಿತ ಸ್ವೀಕರಿಸಲಿಲ್ಲ. ಎಂದೇ ಇವನ್ನು ಮತ್ತೆ ಹಿಂದಕ್ಕೆ ತಂದಿದ್ದೇನೆ ನೋಡಿ!

**ಪ್ರೊಟ್ಯೂಸ್.** ಎಲಾ ಇವನ, ಏನೋ ಇದು? ನಾನು ಆಕೆಗೆ ಈ ಗಡವ ನಾಯಿಯನ್ನು ಕಳುಹಿಸಿದ್ದೆನೆ?

ಲಾನ್ಸ್. ಇಲ್ಲ ಸ್ವಾಮಿ, ಆದರೆ ತಾವು ಕಳುಹಿಸಿದ್ದ ಅಳಿಲಿನಂತಹ ಆ ಪುಟ್ಟ ಮುದ್ದುಮರಿಯನ್ನು ಮಾರುಕಟ್ಟೆಯಲ್ಲಿ ಯಾರೊ ಲಫಂಗರು ಲಪಟಾಯಿಸಿಬಿಟ್ಟರಲ್ಲ! ಆದ್ದರಿಂದ ಅದರ ಬದಲು ನನ್ನ ಈ ನಾಯಿಯನ್ನೇ ಕೊಂಡುಹೋಗಿ ನಿಮ್ಮ ಪರವಾಗಿ ಆಕೆಗೆ ಅರ್ಪಿಸುವ ಪ್ರಯತ್ನ ಮಾಡಿದೆ. ಅಲ್ಲದೆ, ನೋಡಿ, ನನ್ನ ನಾಯಿ ಗಾತ್ರದಲ್ಲಿ ನಿಮ್ಮದಕ್ಕಿಂತ ಹತ್ತು ಪಟ್ಟು ದೊಡ್ಡದು. ಆದ್ದರಿಂದ ಉಡುಗೊರೆ, ಹತ್ತು ಪಾಲು ಹೆಚ್ಚಿನದಾಗಲಿಲ್ಲವೆ?

ಪ್ರೋಟ್ಯೂಸ್. ಥೂ ಮುಠ್ಠಾಳ, ತೊಲಗು. ಮೊದಲು ಹೋಗಿ ನನ್ನ ನಾಯಿಮರಿಯನ್ನು ಪತ್ತೆಹಚ್ಚು. ಇಲ್ಲದಿದ್ದರೆ ನಿನ್ನ ಹಾಳು ಮೂತಿಯನ್ನು ಮತ್ತೆ ತೋರಿಸಬೇಡ.... ಹುಂ, ತೊಲಗಿ ಹೋಗು ... ಇಲ್ಲೇಕೆ ಇನ್ನೂ ನಿಂತು ನನ್ನ ಹೊಟ್ಟೆಯಲ್ಲಿ ಹುಳಿ ಹಿಂಡುತ್ತಿದ್ದೀಯೆ? ಎಂದೂ ನನ್ನ ಮಾನ ಕಳೆಯುವ ಸಲುವಾಗಿಯೇ ಹುಟ್ಟಿಕೊಂಡ ದೆಯ್ಯ ನೀನು... ತೊಲಗಾಚೆ!

[ಹಿಂಬಾಲಿಸುತ್ತಿರುವ ಶುನಕದೊಂದಿಗೆ ಲಾನ್ಸ್ ಹೊರಡುತ್ತಾನೆ.

— ಎಚ್. ಕೆ. ರಂಗನಾಥ್

'ದಿ ಟು ಜೆಂಟಲ್‌ಮೆನ್ ಆಫ್ ವೆರೋನ', IV. iv. 1-59





# ಷೇಕ್ಸ್ಪಿಯರನ ಕೃತಿಗಳ ಪರಿಚಯ

ಶಾ. ಬಾಲುರಾವ್

## ಕವನಗಳು

### 1. ವೀನಸ್ ಅಂಡ್ ಆ್ಯಡೋನಿಸ್

**ರಚನೆ :** 1592-3. **ಮೊದಲ ಪ್ರಕಟನೆ:** 1593.

**ಆಕರ:** ರೋಮಿನ ಮಹಾಕವಿ ಆವಿಡನ 'ಮೆಟಾಮಾರ್ಫಸಿಸ್'.

199 ಪದ್ಯಗಳಿಂದ ಕೂಡಿದ ಈ ಕಥನ-ಕವನ ಷೇಕ್ಸ್ಪಿಯರನ ಪ್ರಪ್ರಥಮ ಕೃತಿ. ಅವನೇ ಆದರ ಅರ್ಪಣೆಯ ಪಂಕ್ತಿಗಳಲ್ಲಿ ಹೇಳಿಕೊಂಡಿರುವಂತೆ ಈ ಕೃತಿ ಅವನ 'ಕಲ್ಪನೆಯ ಮೊದಲ ವಾರಸುದಾರ'. ಕವಿ ಇದನ್ನು ಸಮರ್ಪಿಸಿರುವುದು ತನ್ನ ಆಶ್ರಯ ದಾತನಾಗಿದ್ದ ಸೌತ್ಯಾಂಪ್ಟನ್ನಿನ ಅರ್ಲ್, ಹೆನ್ರಿ ರಿಯೋಥಿಸ್ಲಿಗೆ.

ಇದು 'ಸೆಸ್ಟ ರಿಮ' ಎಂಬ ಛಂದದಲ್ಲಿದೆ : ಒಂದೊಂದು ವೃತ್ತದಲ್ಲೂ ಆರು ಆರು ಸಾಲುಗಳು. ಮೊದಲ ನಾಲ್ಕು, ಪರ್ಯಾಯ ಪಾದಗಳಲ್ಲಿ ಪ್ರಾಸವಿಟ್ಟ ಒಂದು ಚೌಪದಿ. ಮುಂದಿನ ಎರಡು ಕೂಡಿ ಒಂದು ದ್ವಿಪದಿ. ಅದಕ್ಕೂ ತನ್ನದೇ ಪ್ರಾಸ. ಒಟ್ಟಿನ ಪ್ರಾಸತಂತ್ರ ಹೀಗೆ : **ಕಖಕಖ ಗಗ.**

**ಕಥೆ :** ರೋಮನರ ಪ್ರೇಮಸೌಂದರ್ಯಗಳ ದೇವತೆ ವೀನಸ್ ತರುಣ ಆ್ಯಡೋನಿಸನಲ್ಲಿ ಮೋಹಗೊಂಡು ಅವನನ್ನು ಪ್ರೇಮಿಸಿ ವಿಫಲಳಾಗುವುದು, ಅವನ ಆಕಸ್ಮಿಕ ಮರಣ ಇದರ ಕಥಾವಸ್ತು.

ಆ್ಯಡೋನಿಸ್ ಹರೆಯದ ಹುಡುಗ, ತುಂಬ ಚೆಲುವ. ಆದರೆ ಸೃಷ್ಟಿ ಎಲ್ಲಿ ಎಡವಿತೊ ಏನೊ, ವಯಸ್ಸಿಗೆ ಅನುಗುಣವಾಗಿ ಅವನಲ್ಲಿ ಹರೆಯ ಹೂ ಬಿಟ್ಟಿಲ್ಲ, ಪುರುಷಸಹಜವಾದ ಲೈಂಗಿಕ ಪ್ರವೃತ್ತಿ, ಅಭಿಲಾಷೆಗಳು ಅವನಿಗೆ ಹೊರತು.

ಆ್ಯಡೋನಿಸಿಗೆ ಬೇಟೆಯೆಂದರೆ ಪ್ರಾಣ. ಒಂದು ಮುಂಜಾನೆ ಒಬ್ಬನೇ ಬೇಟೆಗೆ ಹೊರಟಿರುವಾಗ ಅವನು ವೀನಸಳ ಕಣ್ಣಿಗೆ ಬೀಳುತ್ತಾನೆ. ಅವನನ್ನು ಕಂಡು ಅವಳಲ್ಲಿ

ಬಯಕೆ ಕೆರಳುತ್ತದೆ. ಅವನನ್ನು ತಡೆದು ನಿಲ್ಲಿಸುತ್ತಾಳೆ. ಬಯಕೆ ಅವಳಲ್ಲಿ ಅಪೂರ್ವವಾದ ಬಲ ಮೂಡಿಸಿದೆ. ಅವನನ್ನು ಬಲವಂತದಿಂದ ಕುದುರೆಯಿಂದಿಳಿಸಿ, ಅದನ್ನು ತಾನೇ ಕಟ್ಟಿಹಾಕಿ, ಅವನನ್ನು ಪಕ್ಕದಲ್ಲಿ ಕೂರಿಸಿಕೊಂಡು ಪ್ರೇಮಕ್ರೀಡೆಗೆ ತೊಡಗುತ್ತಾಳೆ. ಮೊದಮೊದಲು ಮೃದುವಾಗಿ ಬಿನ್ನವಿಸಿಕೊಳ್ಳುತ್ತಾಳೆ, ಬೇಡಿಕೊಳ್ಳುತ್ತಾಳೆ. ಅವಳಾವ ಚೇಷ್ಟೆಗೂ ಅವನು ಬಗ್ಗುವುದಿಲ್ಲ. ಬರುಬರುತ್ತಾ ಒರಟಾಗಿ ಬಲಪ್ರಯೋಗಕ್ಕೆ ಇಳಿಯುತ್ತಾಳೆ. ಅದಕ್ಕೂ ಅವನು ಜಗ್ಗ. ಅವಳ ಬಾಹುಗಳಲ್ಲಿ ಆ್ಯಡೋನಿಸ್ ಬಲೆಗೆ ಸಿಕ್ಕಿದ ಹಕ್ಕಿಯಾಗಿ ನರಳುತ್ತಾನೆ. ಅದೇ ಹೊತ್ತಿಗೆ ದೂರದಲ್ಲಿ ಯಾವುದೋ ಹೆಣ್ಣು ಕುದುರೆಯೊಂದು ಕೆನೆಯುತ್ತದೆ. ಅದನ್ನು ಕೇಳಿದ ಆ್ಯಡೋನಿಸಿನ ಗಂಡುಕುದುರೆ ಮೈನಿಮಿರಿಸಿ ಕಟ್ಟು ಬಿಚ್ಚಿ ಓಡುತ್ತದೆ. ಈ ಘಟನೆ ವೀನಸಳಿಗೆ ಮೆಚ್ಚಿಗೆಯಾಗುತ್ತದೆ. ಆದರೆ ಅದು ಆ್ಯಡೋನಿಸಿಗೆ ಪ್ರಚೋದನೆಯಾಗದು. ಅವನು ಎಂದಿನಂತೆಯೇ ಗೋರ್ಕಲ್ಲು. ವೀನಸ್ ಹತಾಶಳಾಗುತ್ತಾಳೆ. ಸಂಜೆಯಾಗುತ್ತದೆ, ಮಾರನೆ ದಿನ ಗೆಳೆಯರೊಂದಿಗೆ ಕಾಡಹಂದಿಯ ಬೇಟೆಗೆ ಹೋಗಬೇಕಾಗಿರುವುದನ್ನು ನೆನೆದು ಆ್ಯಡೋನಿಸ್ ಹೊರಡಲು ಏಳುತ್ತಾನೆ. ವೀನಸ್ ಹೆದರಿ ಅಂತಹ ಅಪಾಯದ ಹವ್ಯಾಸಗಳಿಂದ ದೂರ ಉಳಿಯುವಂತೆ ಗೋಗರೆಯುತ್ತಾಳೆ. ಆದರೆ ಅವನಿಗೆ ಅವನದೇ ದಾರಿ ಸಿದ್ಧವಾಗಿದೆ!

ಏಕಾಕಿ ವೀನಸ್ ರಾತ್ರಿಯೆಲ್ಲ ಹಾಡುತ್ತ ಕಳೆಯುತ್ತಾಳೆ. ಬೆಳಗಾಗ ಬೇಟೆಗಾರರ ಕಹಳೆಯ ಕೂಗು, ಗಾಯಗೊಂಡ ಬೇಟೆನಾಯಿಗಳ ಆರ್ತನಾದ ಕಾಡ ಮೌನವನ್ನು ಸೀಳಿ ಅವಳನ್ನು ಬಡಿದೆಬ್ಬಿಸುತ್ತವೆ. ಆ ಗದ್ದಲದ ಬೆನ್ನು ಹಿಡಿದು ಹೊರಡುತ್ತಾಳೆ. ಕಾಡಹಂದಿಯೊಂದು ಎದುರಾಗುತ್ತದೆ. ಅದರ ಬಾಯಿ ಹೊಸ ರಕ್ತದಿಂದ ಕೆಂಪಾಗಿದೆ. ಒಂದು ಕ್ಷಣ ಅವಳಿಗೆ ತನ್ನ ಭೀತಿ ನಿಜವಾಯಿತೇನೋ ಎಂಬ ಭಯ. ಮತ್ತೆ ಮರುಕ್ಷಣ ಹಾಗಿರಲಾರದೆಂಬ ಧೈರ್ಯ. ಈ ತೀಕ್ಷ್ಣ ವಿಪರೀತ ಭಾವನೆಗಳ ನಡುವೆ ಹೊಯ್ದಾಡುತ್ತ ಅವಳು ಮುನ್ನಡೆಯುತ್ತಾಳೆ. ಅಲ್ಲಿ ನಲ್ಲ ಆ್ಯಡೋನಿಸನ ಮೃತದೇಹ ಕಣ್ಣಿಗೆ ಬೀಳುತ್ತದೆ. ಕಾಡಹಂದಿಯ ಕೋರೆದಾಡೆಗಳು ಅವನ ಪಕ್ಕೆಗೆ ನಾಟಿವೆ. ವೀನಸ್ ಅಳುತ್ತಾಳೆ, ಗೋಳಿಡುತ್ತಾಳೆ. ದುಃಖ ಶಮನವಾಗದು. ಕೊನೆಗೆ ಅವನ ಮೃತದೇಹವನ್ನು ಒಂದು ಕೆನ್ನೀಲಿಯ ಹೂವಾಗಿ ಮಾರ್ಪಡಿಸಿ, ಅದನ್ನು ಎದೆಯಲ್ಲಿ ಮುಡಿದು ತನ್ನ ಬೆಳ್ಳಿಯ ಪಾರಿವಾಳಗಳನ್ನು ಹತ್ತಿ ಆಕಾಶದಲ್ಲಿ ಹಾರಿ ಮರೆಯಾಗುತ್ತಾಳೆ.

## 2. ದಿ ರೇಪ್ ಅಫ್ ಲೂಕ್ರೀಸ್

**ರಚನೆ :** 1593-4. **ಮೊದಲ ಪ್ರಕಟನೆ** 1594.

**ಆಕರಗಳು :** ನಿಶ್ಚಿತವಾಗಿ ಯಾವೊಂದನ್ನೂ ಆಕರವೆನ್ನಲಾಗದಿದ್ದರೂ ಚಾಸರ್ ಕವಿಯ 'ದಿ ಲೆಜೆಂಡ್ ಅಫ್ ಗುಡ್ ವಿಮೆನ್', ಅದಕ್ಕೆ ಆಧಾರವಾದ ಚರಿತ್ರಕಾರ ಲಿವಿಯ 'ಆ್ಯನಲೆಸ್' ಮತ್ತು ಅವಿಡನ 'ಫಾಸ್ಟಿ' ಕಾವ್ಯದಲ್ಲಿನ ಸದೃಶ ಭಾಗ, ಹಾಗೂ ವಿಲಿಯಂ ಪೇಂಟರನ 'ಪ್ಯಾಲೆಸ್ ಅಫ್ ಪ್ಲೆಷರ್' ಎಂಬ ಸಮಕಾಲೀನ ಕೃತಿ—ಇವು ಸ್ಫೂರ್ತಿಯಾಗಿರಬಹುದೆಂದು ಪಂಡಿತರ ಮತ.

## ದಿ ರೇಪ್ ಅಫ್ ಲೂಕ್ರೀಸ್

'ವೀನಸ್ ಅಂಡ್ ಅ್ಯಡೋನಿಸ್' ಕವಿಯ 'ಕಲ್ಪನೆಯ ಮೊದಲ ವಾರಸಾ'ದರೆ ಇದರದು ಎರಡನೆಯ ಹಕ್ಕು. ಅದನ್ನು ಬರೆದ ಪೂರನೆಯ ವರ್ಷ ಇದರ ರಚನೆ ಯಾಯಿತು. ಅದರಂತೆ ಸಮರ್ಪಿಸಿರುವುದೂ ಸೌತ್ಯಾಂಪ್ಟನ್ನಿನ ಅರ್ಲನಿಗೇ.

ಇದರ ಛಂದ ರಾಜಛಂದ — 'ರೈಮ್ ರಾಯಲ್'. ಸ್ಕಾಟ್‌ಲೆಂಡಿನ ಮೊದಲನೆ ಜೇಮ್ಸ್ ದೊರೆ ತನ್ನ 'ದಿ ಕಿಂಗಿಸ್ ಕ್ವೈರ್'ನಲ್ಲಿ ಮೊದಲಬಾರಿಗೆ ಬಳಸಿದನೆಂಬ ಕಾರಣ ದಿಂದ ದೊರೆತ ನಾಮಧೇಯ ಅದು. ಒಂದೊಂದು ವೃತ್ತದಲ್ಲೂ ಏಳು ಸಾಲುಗಳು. ಪ್ರಾಸತಂತ್ರ : **ಕಖಕಖಖ ಗಗ.** ಒಟ್ಟು ಕವನದಲ್ಲಿ ಅಂತಹ 265 ವೃತ್ತಗಳಿವೆ.

'ವೀನಸ್ ಅಂಡ್ ಅ್ಯಡೋನಿಸ್'ನಂತೆ ಇದೂ ಒಂದು ಕಥನ-ಕವನ. ಅದು ನಾಣ್ಯದ ಒಂದು ಮುಖವಾದರೆ ಇದು ಇನ್ನೊಂದು ಮುಖ. ಎರಡರ ಧಾತುವೂ ಒಂದೇ : ಹದ್ದು ಮೀರಿದ ವಿಷಯಾಸಕ್ತಿ. ಅಲ್ಲಿ ಹಸಿದ ಹೆಣ್ಣು–ಒಲ್ಲದ ಗಂಡು. ಇಲ್ಲಿ ಸಚ್ಚರಿತಳಾದ ಹೆಂಡತಿ – ಮೋಸದಿಂದ ಮಾನಭಂಗ ಮಾಡಿ ಚಪಲ ತೀರಿಸಿಕೊಳ್ಳುವ ಪರಪುರುಷ. ಎರಡೂ ದುರಂತವೇ. ಒಂದರಲ್ಲಿ ಅವಶ್ಯವಾದರೂ ಹೇಗೋ ಆಕಸ್ಮಿಕ; ಇನ್ನೊಂದರಲ್ಲಿ ಅದು ನಿರ್ದಿಷ್ಟ, ಪೂರ್ವಸಿದ್ಧ.

**ಕಥೆ :** ರೋಮಿನ ದೊರೆ ಲೂಷಿಯಸ್ ಟಾರ್ಕ್ವಿನಿಯಸ್ ಮಹಾಗರ್ವಿ. ತನ್ನ ಮಾವನನ್ನೇ ಕೊಲ್ಲಿಸಿ, ಸಂಪ್ರದಾಯದಂತೆ ಜನರ ಒಪ್ಪಿಗೆಗೆ ಕಾಯದೆ ಸಿಂಹಾಸನ ಹತ್ತಿ ದರ್ಪದಿಂದ ರಾಜ್ಯಭಾರಕ್ಕೆ ಪ್ರಾರಂಭಿಸಿದ್ದಾನೆ. ಅವನ ಮಗ ಸೆಕ್ಸ್‌ಟಸ್ ಆ ಹಾವಿಗೆ ಹುಟ್ಟಿದ ಮರಿ, ಪಾಪಿ, ಕಾಮಿ.

ಲೂಷಿಯಸ್ ತನ್ನ ಮಕ್ಕಳನ್ನೂ ದೊರೆಜನರನ್ನೂ ಕೂಡಿಕೊಂಡು ನೆರೆಯ ಆರ್ಡಿಯಾ ರಾಜ್ಯದ ಮೇಲೆ ದಂಡೆತ್ತಿ ಹೋಗಿದ್ದಾನೆ. ಒಂದು ರಾತ್ರಿ ದಂಡಿನ ಮುಂದಾಳು ಗಳೆಲ್ಲರೂ ಸೆಕ್ಸ್‌ಟಸನ ಶಿಬಿರದಲ್ಲಿ ಇರುಳೂಟಕ್ಕೆ ಸೇರುತ್ತಾರೆ. ಊಟವಾದ ಮೇಲೆ ಪ್ರತಿಯೊಬ್ಬರೂ ತಮ್ಮ ತಮ್ಮ ಹೆಂಡಂದಿರ ಗುಣಗಾನಕ್ಕೆ ತೊಡಗುತ್ತಾರೆ. ದೊರೆ-ಜನರಲ್ಲೊಬ್ಬನಾದ ಕೊಲೇಟಿನಸನ ಸರದಿ ಬರುತ್ತದೆ. ಅವನ ಪತ್ನಿ ಲೂಕ್ರೀಸ್ ಮಹಾ ಪತಿವ್ರತೆ, ಅಷ್ಟೇ ಪರಮ ಸುಂದರಿ. ಅವಳಲ್ಲಿ ಈ ಎರಡು ಗುಣಗಳೂ 'ನಾ ಮೇಲು, ತಾ ಮೇಲು' ಎನ್ನುವಷ್ಟು ಸಮವಾಗಿವೆ. ಕೊಲೇಟಿನಸ್ ಅವಳ ಪಾತಿವ್ರತ್ಯವನ್ನು ಕೊಂಡಾಡುತ್ತಾನೆ. ಮಾತು ಅಲ್ಲಿಗೇ ನಿಲ್ಲದು. ರಾತ್ರಿ ಎಲ್ಲರೂ ತಲೆ ಮರೆಸಿಕೊಂಡು ಹೋಗಿ ಒಬ್ಬೊಬ್ಬನೂ ತನ್ನ ಹೆಂಡತಿಯಲ್ಲಿದೆಯೆಂದು ಹೊಗಳಿಕೊಂಡ ಸದ್ಗುಣ ನಿಜ ವಾಗಿ ಇದೆಯೆ ಇಲ್ಲವೆ ಎಂದು ಸತ್ವಪರೀಕ್ಷೆ ನಡಸುವುದೆಂದು ನಿಶ್ಚಯಿಸುತ್ತಾರೆ ಆ ಜನ.

ಕೊಲೇಟಿನಸ್ ಒಬ್ಬನ ವಿಷಯದಲ್ಲಿ ಅವನು ಆಡಿದುದು ನಿಜವಾಗುತ್ತದೆ. ಲೂಕ್ರೀಸ್ ಮಹಾಸತಿ. ಉಳಿದವರ ಹೆಂಡಿರು ಹಾಡು-ಕುಣಿತಗಳಲ್ಲಿ ತಮ್ಮ ಏಕಾಕಿತನ ವನ್ನು ಮರೆಯಲು ಪ್ರಯತ್ನಿಸಿದ್ದರೆ ಲೂಕ್ರೀಸ್ ತನ್ನ ಹೆಣ್ಣಾಳುಗಳೊಡನೆ ಕೂಡಿಕೊಂಡು ನಡುರಾತ್ರಿಯಲ್ಲಿ ನೂಲುತ್ತಿರುತ್ತಾಳೆ. ಗೆಳೆಯರು ಕೊಲೇಟಿನಸನಿಗೆ ವಿಜಯಪಟ್ಟ ಕಟ್ಟುತ್ತಾರೆ. ಲೂಕ್ರೀಸಳ ಕೀರ್ತಿ ಬೆಳಗುತ್ತದೆ.

ಹಾಗೆ ಸತ್ವಪರೀಕ್ಷೆಗೆ ಹೋಗಿದ್ದವರಲ್ಲಿ ದೊರೆಮಗ ಸೆಕ್ಸ್‌ಟಸ್ ಟಾರ್ಕ್ವಿನನೂ ಒಬ್ಬ. ಲೂಕ್ರೀಸಳ ಚೆಲುವನ್ನು ಕಂಡೊಡನೆಯೇ ಅವನಲ್ಲಿ ಕಾಮ ಕಿಡಿಕಾರುತ್ತದೆ.

ಜತೆಗೆ ಅವಳು ಪತಿವ್ರತೆಯಾಗಿರುವುದು ಅವನ ಪಾಪಸ್ವಭಾವಕ್ಕೆ ಸಹಿಸದೇನೋ! ಆ ಗಳಿಗೆ ಬಯಕೆಯನ್ನು ಹತ್ತಿಕ್ಕಿ ಜತೆಯವರೊಡನೆ ಶಿಬಿರಕ್ಕೆ ವಾಪಸಾದರೂ ರಾತ್ರಿ ಅವರನ್ನು ಬೀಳ್ಕೊಂಡಮೇಲೆ ಒಬ್ಬನೇ ಮತ್ತೆ ಲೂಕ್ರೀಸಳ ಮನೆಗೆ ಬರುತ್ತಾನೆ. ಸೆಕ್ಸ್‌ಟಸ್ ಅರಸುಮಗ, ದಣಿ, ಗಂಡನ ಗೆಳೆಯ. ಲೂಕ್ರೀಸ್ ಅವನನ್ನು ಸದ್ಭಾವನೆ ಯಿಂದ ಸ್ವಾಗತಿಸಿ, ರಾಜಯೋಗ್ಯವಾದ ಅತಿಥಿಸತ್ಕಾರ ಮಾಡುತ್ತಾಳೆ. ರಾತ್ರಿ ಅಲ್ಲೇ ಕಳೆಯಲು ಅವನಿಗೆ ಬೇರೆ ಕೋಣೆ ಏರ್ಪಡಿಸುತ್ತಾಳೆ.

ನಡುರಾತ್ರಿ ಎಲ್ಲರೂ ಮಲಗಿದ ಮೇಲೆ ಟಾರ್ಕ್ವಿನ್ ಅವಳ ಮಲಗುವ ಕೋಣೆಗೆ ಕದ್ದು ಬರುತ್ತಾನೆ. ಲೂಕ್ರೀಸಳಿಗೆ ಎಚ್ಚರವಾಗಿ ದಿಗ್ಭ್ರಮೆಯಾಗುತ್ತದೆ. ಟಾರ್ಕ್ವಿನ್ ತನ್ನ ಇಂಗಿತ ತಿಳಿಸುತ್ತಾನೆ. ಅವಳು ಈ ಪಾಪಕ್ಕೆ ಹೇಗೆ ಒಪ್ಪಿಯಾಳು? ಟಾರ್ಕ್ವಿನ್ ಅವಳನ್ನು ಹಿಡಿದು ಬಲವಂತವಾಗಿ ಮಾನಭಂಗಮಾಡಿ ಹಿಂದಿರುಗುತ್ತಾನೆ.

ಬೆಳಗಾಗ ಲೂಕ್ರೀಸ್ ತಂದೆ-ಗಂಡಂದಿರಿಗೆ ಕರೆ ಕಳುಹಿಸಿ, ಶೋಕಸಂಕೇತವಾದ ಕಪ್ಪುಡಿಗೆ ತೊಟ್ಟು ಅವರನ್ನು ಎದುರುಗೊಳ್ಳುತ್ತಾಳೆ. ಮೊದಲು ಅವರಿಂದ ಪ್ರತೀಕಾರದ ಭರವಸೆ ಪಡೆದು, ನಡೆದುದೆಲ್ಲವನ್ನೂ ತಿಳಿಸಿ ಎದೆಯಿರಿದುಕೊಂಡು ಸಾಯುತ್ತಾಳೆ.

ಕೊಲೇಟಿನಸ್ ಮತ್ತು ಅವನ ಬಂಧುಮಿತ್ರರು ಟಾರ್ಕ್ವಿನರ ವಂಶವನ್ನೇ ನಿರ್ಮೂಲ ಮಾಡುವ ಪಣ ತೊಡುತ್ತಾರೆ. ಲೂಕ್ರೀಸಳ ಶವದ ಸಾಕ್ಷ್ಯದೊಂದಿಗೆ ರೋಮಿಗೆ ಬಂದು, ಜನತೆಗೆ ಟಾರ್ಕ್ವಿನರ ದುರ್ನಡತೆ, ದುರಾಡಳಿತಗಳನ್ನು ಮನವರಿಕೆ ಮಾಡಿಕೊಟ್ಟು ಜನಮತವನ್ನು ಗೆದ್ದು, ಟಾರ್ಕ್ವಿನರನ್ನು ದೇಶದಿಂದ ಹೊರಗಟ್ಟುತ್ತಾರೆ.

## 3. ದಿ ಪ್ಯಾಷನೇಟ್ ಪಿಲ್‌ಗ್ರಿಮ್

1599ರಲ್ಲಿ ಡಬ್ಲ್ಯು. ಜ್ಯಾಗರ್ಡ್ ಎಂಬ ಒಬ್ಬ ಅಪ್ರಾಮಾಣಿಕ ಪ್ರಕಾಶಕ 21 ಕವನಗಳ ಒಂದು ಸಂಕಲನವನ್ನು ಆಗ ಷೇಕ್‌ಸ್ಪಿಯರನ ಕೃತಿಗಳಿಗೆ ಒಳ್ಳೆಯ ಸೇಟೆಯಿದ್ದುದ ರಿಂದಲೋ ಏನೋ ಅದರ ಮೇಲುಪುಟದಲ್ಲಿ ಅವನನ್ನೇ ಕರ್ತೃವೆಂದು ತಪ್ಪಾಗಿ ತೋರಿಸಿ, 'ದಿ ಪ್ಯಾಷನೇಟ್ ಪಿಲ್‌ಗ್ರಿಮ್'ಎಂಬ ಹೆಸರಿನಲ್ಲಿ ಪ್ರಕಟಿಸಿದ. ಕಾನೂನಿನ ಪ್ರಕಾರ ಸಂಕಲನದ ದಾಖಲೆಯೂ ಆಗಿರಲಿಲ್ಲ. ಆ 21 ಕವನಗಳಲ್ಲಿ ಅಧಿಕೃತವಾಗಿ 'ಇವು ಷೇಕ್‌ಸ್ಪಿಯರನವೇ' ಎನ್ನಬಹುದಾದವು ಐದೇ: ಹಿಂದಿನ ವರ್ಷ ಪ್ರಕಟವಾಗಿದ್ದ 'ಲವ್ಸ್ ಲೇಬರ್ಸ್ ಲಾಸ್ಟ್'ನ ನಾಲ್ಕನೆ ಅಂಕದಲ್ಲಿ ಬರುವ ಲಾಂಗ್‌ವಿಲೆ, ಬಿರಾನ್ ಮತ್ತು ಡುಮೇನರು ಹೇಳುವ ಒಂದೊಂದು ಸಾನೆಟ್ಟುಗಳ ಹಾಗೂ 1609ರಲ್ಲಿ ಪ್ರಕಟವಾದ ಸಾನೆಟ್-ಸಂಕಲನದಲ್ಲಿ 138 ಮತ್ತು 144ನೇ ಕ್ರಮಾಂಕದಿಂದ ಅಚ್ಚಾದ ಎರಡು ಸಾನೆಟ್ಟುಗಳ ಪಾಠಾಂತರಗಳು. ಉಳಿದವುಗಳಲ್ಲಿ ಕೆಲವು ಮಾರ್ಲೊ, ಬಾರ್ತೊಲೋಮ್ಯೊ ಗ್ರಿಫಿನ್, ರಿಚರ್ಡ್ ಬಾರ್ನ್‌ಫೀಲ್ಡ್ ಮುಂತಾದ ಸಮಕಾಲೀನ ಲೇಖಕರವು. ಇನ್ನು ಕೆಲವರ ಕರ್ತೃತ್ವ ತಿಳಿದು ಬಂದಿಲ್ಲ.

ಮುಂದೆ ಸಂಕಲನದ ಪುನರ್ಮುದ್ರಣವಾದಾಗ ಹೇವುಡ್ ಎಂಬ ಲೇಖಕನಿಂದ ತೀವ್ರವಾದ ಪ್ರತಿಭಟನೆ ಬಂದು, ಜ್ಯಾಗರ್ಡ್ ಮಾರದೆ ಉಳಿದ ಪ್ರತಿಗಳಲ್ಲಿ ಷೇಕ್‌ಸ್ಪಿಯರನ

ಹೆಸರನ್ನು ತೆಗೆದು ಹಾಕಿದ. ಆದರೆ ಇಂದಿಗೂ, ಮೊದಲ ಫೋಲಿಯೋ ಪ್ರತಿಯ ಮೇಲೆ ಆಧಾರಿತವಾಗಿ ಪ್ರಕಟವಾದ ಷೇಕ್‌ಸ್ಪಿಯರ್ ರಚನಾವಳಿಯ ಎಲ್ಲ ಪ್ರತಿಗಳಲ್ಲೂ ಈ ಕವನಗುಚ್ಛ ಇಲ್ಲದೇ ಇಲ್ಲ. (ಈ ಸಂಪುಟದ 165ನೆ ಪುಟವನ್ನೂ ನೋಡಿ.)

## 4. ದಿ ಫೀನಿಕ್ಸ್ ಅಂಡ್ ಟರ್ಟಲ್

**ರಚನೆ:** ಸು. 1600. **ಮೊದಲ ಪ್ರಕಟನೆ:** 1601.

1601ರಲ್ಲಿ ರಾಬರ್ಟ್ ಚೆಸ್ಟರ್ ಎಂಬ ಕವಿ 'ಲವ್ಸ್ ಮಾರ್ಟರ್' ಅಥವಾ 'ರೊಸಲಿನ್ಸ್ ಕಂಪ್ಲೇಂಟ್' ಎಂಬ ಒಂದು ಕವನ ಬರೆದು ಪ್ರಕಟಿಸಿದ. ಆ ಕಾಲದಲ್ಲಿ ಕವಿಗಳ ಆಶ್ರಯದಾತರು, ಕಾವ್ಯಾಭಿಮಾನಿಗಳು ಎಂದು ಹೆಸರಾಗಿದ್ದ ಸರ್ ಜಾನ್ ಸ್ಯಾಲಿಸ್‌ಬರಿ ಮತ್ತು ಆತನ ಪತ್ನಿ ಅರ್ಸೂಲಾರ ಆದರ್ಶ ದಾಂಪತ್ಯಪ್ರೇಮವನ್ನು ಹಾಡಿ ಹೊಗಳುವುದು ಅದರ ಉದ್ದೇಶ. ಪುಸ್ತಕದ ಅನುಬಂಧದಲ್ಲಿ ಅದೇ ವಸ್ತುವಿನ ಮೇಲೆ ಇತರ ಕವಿಗಳು ಬರೆದ 14 ಕವನಗಳನ್ನು ಸೇರಿಸಲಾಗಿತ್ತು. ಅವುಗಳಲ್ಲಿ ಷೇಕ್‌ಸ್ಪಿಯರನದೂ ಒಂದು. ಅದಕ್ಕೆ ತನ್ನದೇ ಬೇರೆ ಶೀರ್ಷಿಕೆಯಿಲ್ಲ. ವಸ್ತುವಿನ ಆಧಾರದ ಮೇಲೆ ಅದನ್ನು 'ದಿ ಫೀನಿಕ್ಸ್ ಅಂಡ್ ಟರ್ಟಲ್' ಎಂದೇ ಕರೆಯುವ ಪರಿಪಾಟ ಬಂದಿದೆ.

ಇದು ಬಲು ಚಿಕ್ಕ ಕವನ. ಕೇವಲ ಹದಿನೆಂಟೇ ಪದ್ಯಗಳು. ಮೊದಲ ಹದಿಮೂರು ನಾಲ್ಕು ನಾಲ್ಕು ಸಾಲಿನವು. ಒಂದು-ನಾಲ್ಕನೆ, ಎರಡು-ಮೂರನೆ ಸಾಲುಗಳಲ್ಲಿ ಪ್ರಾಸ (**ಕಖಖಕ**). ಮುಂದಿನ ಐದು ಪದ್ಯಗಳು ಮೂರು ಸಾಲುಗಳ, ಏಕಪ್ರಾಸವುಳ್ಳ 'ಥ್ರೀನೋಸ್' ಅಥವಾ ಚರಮಗೀತೆಗಳು.

ಇದೊಂದು ವಿಶಿಷ್ಟವಾದ, ಅಷ್ಟೇ ವಿಚಿತ್ರವಾದ ಕವನ. ಷೇಕ್‌ಸ್ಪಿಯರನ ಬೇರೆ ಯಾವ ಕವನವೂ ಇದರಂತಿಲ್ಲ. ನಡುನಡುವೆ ಒಂದೊಂದು ವಾಕ್ಯಬಂಧದಲ್ಲಿ ಅವನ ಶೈಲಿಯ ಗುಂಗಿದ್ದರೂ ಒಟ್ಟಿನ ಸ್ವರೂಪ ಅವನದೆನ್ನುವಂತಿಲ್ಲ.

ಇದರ ನಿರೂಪಣೆ ಸಾಂಕೇತಿಕ. ಅರ್ಥ ಗೂಢ, ಗಹನ. ಒಟ್ಟಿನ ಮೇಲೆ ಕವನ ಅಸ್ಪಷ್ಟವೆಂದರೂ ಸರಿಯೆ. ಗುಣರೂಪಗಳಲ್ಲಿ ಇಂದಿನ ಯಾವ ನವ್ಯಕವಿತೆಗೂ ಕಡಿಮೆಯಿಲ್ಲ. ಇದು ವಿಮರ್ಶಕರಿಗೆ ಸಾಕಷ್ಟು ತಲೆ ತುರಿಸಿದೆ, ಸ್ವಾರಸ್ಯಕರವಾದ ಟೀಕೆ, ವಿವರಣೆಗಳಿಗೆ ಎಡೆಕೊಟ್ಟಿದೆ. ಒಟ್ಟಿನ ಅಭಿಪ್ರಾಯ: "ಎದ್ದು ಹೊಳೆಯುವ ವಜ್ರ ಇದು" . . . "ಸುಂದರ, ಗಂಭೀರ".

ಎರಡು ಪುರಾಣ ಪಕ್ಷಿಗಳು. ಒಂದು ತನ್ನನ್ನು ತಾನು ದಹಿಸಿಕೊಂಡು ತನ್ನ ಚಿತಾಭಸ್ಮದಿಂದ ಹೊಸ ಜೀವ ಪಡೆದು ಉದಿಸುವುದೆಂದು ಕಲ್ಪಿತಗೊಂಡ ಮರಳುಗಾಡಿನ ಫೀನಿಕ್ಸ್; ಪ್ರೇಮದ ಸಂಕೇತ. ಇನ್ನೊಂದು ವೀನಸಳ ವಾಹನವಾಗಿ, ನಿಷ್ಠೆಗೆ ಗುರುತಾಗಿ ನಿಂತ ಪಾರಿವಾಳ (ಟರ್ಟಲ್). ಇವುಗಳದು ಉಜ್ವಲ, ಆದರ್ಶ ಪ್ರೇಮ; ಲೋಕಾತೀತವಾದ ಪ್ರೇಮ. ಇವು ಸತ್ತು, ಸುಟ್ಟು, ಉರಿದು, ಉರಿಗೆ ಉರಿ ಬೆರೆಸಿ ಒಂದುರಿಯಾಗಿ, ಸಾವಿನಲ್ಲೂ ತಮ್ಮ ಪ್ರೇಮ-ನಿಷ್ಠೆಗಳನ್ನು ಸಾಧಿಸಿ, ಸಾರುತ್ತವೆ.

ಇವುಗಳ ಶ್ರಾದ್ಧವೇ ಕವನದ ಸಂದರ್ಭ. ಮತ್ತೊಂದು ಪಕ್ಷಿ—ಪ್ರಾಯಶಃ

ಫೀನಿಕ್ಸಿನ ಬೂದಿಯಿಂದ ಅವತರಿಸಿದ ಹೊಸ ಫೀನಿಕ್ಸ್ ಏನೋ! — ಉಳಿದ ಹಕ್ಕಿಗಳಿಗೆ ಅಂತ್ಯಕರ್ಮಕ್ಕೆ ಬರಲು ಕರೆಕೊಟ್ಟಿದೆ. ಗರುಡನೊಂದನ್ನುಳಿದು ಸ್ವಭಾವದಿಂದ ಕ್ರೂರಿಗಳಾದ ಕೇಡಿಗ ಹಕ್ಕಿಗಳಿಗೆ ಎಡೆಯಿಲ್ಲ. ಅಂತೆಯೇ ಇರುಳಹಕ್ಕಿಯಾದ ಕಿರಿಚುಗೂಬೆಗೆ ಸಹ. ಬೆಳ್ಗರಿಯ ಹಂಸ ಇಲ್ಲಿ ಶ್ರೋತ್ರಿಯ. 'ಮೂರೂ ಕಾಲಕ್ಕೆ ಸೇರಿದ' ಕಾಗೆ ಶೋಕಘೋಷಕ. ಹೀಗೆ ಹಕ್ಕಿಗಳೆಲ್ಲಾ ಸೇರಿ ಬ್ರಹ್ಮತ್ವಕ್ಕೇರಿದ ಫೀನಿಕ್ಸ್-ಪಾರಿವಾಳಗಳ ಪ್ರೇಮದ ಗುಣಗಾನ ಮಾಡಿ, ಚರಮಗೀತೆ ಹಾಡುತ್ತವೆ. ಸತ್ಯ, ಸೌಂದರ್ಯ, ಶಿವಗಳು ಈ ಜೋಡುಹಕ್ಕಿಗಳ ಬೂದಿಯಲ್ಲಿ ಅಡಗಿವೆಯಂತೆ! ಯಾರ ಪ್ರೇಮ ಸತ್ಯವೊ ಸುಂದರವೊ ಅವರಿಗೆ ಇವು ಹರಕೆಯಿಕ್ಕುವವಂತೆ!

### 5. ಸಾನೆಟ್ಸ್

ಈ ಸಂಪುಟದಲ್ಲಿ ಬೇರೊಂದೆಡೆ ಪ್ರಕಟವಾಗಿರುವ ಶ್ರೀ ಎಸ್. ಅನಂತನಾರಾಯಣ ಅವರ 'ಷೇಕ್ಸ್‌ಪಿಯರನ ಸಾನೆಟ್ಟುಗಳು' ಎಂಬ ಲೇಖನವನ್ನೂ (ಪುಟ 45), ಆರಿಸಿದ ಸಾನೆಟ್ಟುಗಳ ಅನುವಾದಗಳಿಗೆ ಪೀಠಿಕೆಯಾಗಿ ಕೊಟ್ಟಿರುವ ಸಂಪಾದಕರ ಟಿಪ್ಪಣಿಗಳನ್ನೂ (ಪುಟಗಳು 166-77) ನೋಡಿ.

### 6. ಎ ಲವರ್ಸ್ ಕಂಪ್ಲೇಂಟ್

1609ರಲ್ಲಿ ಪ್ರಕಟವಾದ ಷೇಕ್ಸ್‌ಪಿಯರನ 'ಸಾನೆಟ್ಸ್' ಸಂಕಲನದಲ್ಲಿ ಅಚ್ಚಾಗಿರುವ ಕಥನರೂಪದ ಕವನ ಇದು. ಇದೊಂದು ಬಾಹ್ಯ ಆಧಾರ ಹೇಗೇ ಇರಲಿ, ಎಲ್ಲೋ ಅಲ್ಲೊಂದು ಸಾಲಿನಲ್ಲೊ, ಇಲ್ಲೊಂದು ಭಾಗದಲ್ಲೊ ಷೇಕ್ಸ್‌ಪಿಯರನ ಷುರುವಿನ ಶೈಲಿಯ ರಿಂಗಣವಿದ್ದರೂ ಒಟ್ಟಿನ ಆಂತರಿಕ ಆಧಾರದ ಮೇಲೆ ಈ ಕೃತಿ ಅವನದಲ್ಲವೆಂದು ಪಂಡಿತರ ಅಭಿಪ್ರಾಯ. ಇದರಲ್ಲಿ 'ಲೂಕ್ರೀಸ್' ಕವನದಲ್ಲಿ ಬಳಸಿದ 'ರೈಮ್ ರಾಯಲ್' ಛಂದದ 47 ಪದ್ಯಗಳಿವೆ. ಬದುಕಿನಲ್ಲಿ ಅಸುಖಿಯಾದ ಪ್ರೇಮಿಯೊಬ್ಬಳು ಇಲ್ಲಿ ತನ್ನ ದುಃಖವನ್ನು ಭಾವನಾತ್ಮಕವಾಗಿ ತೋಡಿಕೊಂಡಿದ್ದಾಳೆ.

## ಚಾರಿತ್ರಕ ನಾಟಕಗಳು

### 1. ದಿ ಲೈಫ್ ಅಂಡ್ ಡೆತ್ ಆಫ್ ಕಿಂಗ್ ಜಾನ್

**ರಚನೆ :** 1596-97 ? **ಮೊದಲ ಪ್ರಕಟನೆ :** 1623.

**ಆಕರಗಳು :** 1591ರಲ್ಲಿ ಪ್ರಕಟವಾದ 'ದಿ ಟ್ರಬಲ್‌ಸಮ್ ರೆಯ್ನ್ ಆಫ್ ಜಾನ್ ಕಿಂಗ್' ಎಂಬ, ಕರ್ತೃ ಯಾರೆಂದು ಸೂಚಿತವಾಗದ ಒಂದು ನಾಟಕದ ಆಧಾರದ ಮೇಲೆ ಇದು ರಚಿತವಾಗಿದೆ. ಅದೂ ಷೇಕ್ಸ್‌ಪಿಯರನದೇ ಎಂಬ ವಾದವೂ ಒಂದಿದೆ. ಏನೇ ಇರಲಿ,

ಷೇಕ್‌ಸ್ಪಿಯರ್ ಆಕರ-ನಾಟಕವನ್ನು ಧಾರಾಳವಾಗಿ ಬಳಸಿಕೊಂಡಿದ್ದಾನೆ. ಘಟನೆಗಳೆಲ್ಲ ಅವೇ. ರಚನೆ, ದೃಷ್ಟಿ ಹೊಸವು. ಇದಲ್ಲದೇ ಖ್ಯಾತ ಚರಿತ್ರಕಾರರಾದ ರ್‍ಯಾಫೆಲ್ ಹಾಲಿನ್‌ಷೆಡ್, ಎಡ್ವರ್ಡ್ ಹಾಲ್ ಮತ್ತು ಫೇಬಿಯನರ ಇಂಗ್ಲಿಷ್ ಚರಿತ್ರೆಗಳೂ ನಾಟಕಕ್ಕೆ ವಸ್ತು, ವಿವರಗಳನ್ನು ಒದಗಿಸಿವೆ.

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು:** 1199-1216. ಇಂಗ್ಲಿಷ್ ರಾಜತ್ವದ ಮೇಲೆ ಎಳೆಯ ಆರ್ಥರಿನ ಹಕ್ಕಿನ ಸ್ಥಾಪನೆ; ಮೊದಲು ಫ್ರಾನ್ಸಿನ ಫಿಲಿಪ್‌ನೊಂದಿಗೆ ಆಮೇಲೆ ಪೋಪನೊಂದಿಗೆ ಜಾನ್ ದೊರೆಯ ಒಪ್ಪಂದ; ಆರ್ಥರನ ಸಾವು; ಶ್ರೀಮಂತರ ಪಕ್ಷಾಂತರ; ಇಂಗ್ಲಂಡಿನ ಮೇಲೆ ಫ್ರಾನ್ಸಿನ ದಾಳಿ; ಜಾನನ ಕೊಲೆ.

**ಕಥೆ:** 'ಸಿಂಹದ ಗುಂಡಿಗೆ'ಯವನೆನಿಸಿಕೊಂಡಿದ್ದ ಮೊದಲನೆಯ ರಿಚರ್ಡ್ ದೊರೆಗೆ ಇಬ್ಬರು ತಮ್ಮಂದಿರು. ಜೆಫ್ರಿ ಮತ್ತು ಜಾನ್. ಅವರಲ್ಲಿ ಹಿರಿಯ ಜೆಫ್ರಿ, ಹೆಂಡತಿ ಕಾನ್‌ಸ್ಟನ್ಸ್ ಮತ್ತು ಹಸುಳೆ ಆರ್ಥರರನ್ನು ಹಿಂದೆ ಬಿಟ್ಟು ಸತ್ತಿದ್ದಾನೆ. ರಿಚರ್ಡನ ಕಾಲಾನಂತರ ರಾಜ್ಯ ನ್ಯಾಯಸಮ್ಮತವಾಗಿ ಆರ್ಥರನ ಪಾಲಿಗೆ ಬರಬೇಕು, ಅವನು ಮೊದಲ ತಮ್ಮನ ಮಗನಾದ್ದರಿಂದ. ಆದರೆ ಕಪಟಿ ಜಾನ್ ಅವನ ಕೈ ತಪ್ಪಿಸಿ ತಾನು ಗದ್ದುಗೆಯೇರಿದ್ದಾನೆ. ಇದರಲ್ಲಿ ಅವನ ಮುದಿ ತಾಯಿ ಎಲಿನಾರಳು ಅವನಿಗೆ ಶರೀಕಾಗಿದ್ದಾಳೆ. ಜಾನನ ದುರ್ಬುದ್ಧಿಯ ಸೂತ್ರವೆಲ್ಲ ಅವಳದೇ. ಅಪ್ಪನ ಹಾದರದ ಮಗ ಫಿಲಿಪ್‌ನೂ ಅವನ ಬೆಂಬಲಕ್ಕಿದ್ದಾನೆ.

ಆರ್ಥರನ ಪರ ಅವನ ತಾಯಿ ಕಾನ್‌ಸ್ಟನ್ಸ್ ಇರುವುದಂತೂ ಸರಿಯೇ ಸರಿ. ಜೊತೆಗೆ ನೆರೆಯ ಫ್ರಾನ್ಸ್ ದೇಶದ ದೊರೆ ಫಿಲಿಪ್ ಮತ್ತು ಆಸ್ಟ್ರಿಯಾದ ಡ್ಯೂಕರು ಆ ತಬ್ಬಲಿಗೆ ಬೆಂಬಲಿಗರಾಗಿದ್ದಾರೆ.

ಜಾನ್ ದೊರೆ ಮತ್ತು ಫ್ರೆಂಚರ ನಡುವೆ ಈ ಪಟ್ಟದ ವಿಷಯವಾಗಿ ಕದನ ಮೊದಲಾಗುತ್ತದೆ. ಹೇಗೋ ಸಂಧಿಯೂ ಆಗುತ್ತದೆ. ಸಂಧಿಯ ಕರಾರಿನ ಪ್ರಕಾರ ಜಾನ್ ತನ್ನ ತಂಗಿಯ ಮಗಳು ಬ್ಲ್ಯಾಂಷಳನ್ನು ಫ್ರಾನ್ಸಿನ ದೊರೆಮಗ ಲೂಯಿ 'ಡಾಫಿನ್'ಗೆ ಕೊಟ್ಟು ಮದುವೆ ಮಾಡುತ್ತಾನೆ. ಈ ಸಂಧಿ ಕಾನ್‌ಸ್ಟನ್ಸ್‌ಳಿಗೆ ಹಿತವಿಲ್ಲ.

ಈ ಸಂಧಿಯಿಂದ ಉಂಟಾದ ಶಾಂತಿ ಸ್ಥಿರವಲ್ಲ. ಪೋಪಿನ ಪ್ರತಿನಿಧಿಯಾದ ಪ್ಯಾಂಡಲ್ಫನಿಗೂ ಜಾನನಿಗೂ ಧರ್ಮದ ವಿಷಯವಾಗಿ ಭಿನ್ನಾಭಿಪ್ರಾಯವಿದೆ. ಪ್ಯಾಂಡಲ್ಫ್ ಜಾನನನ್ನು ಧರ್ಮದ್ರೋಹಿಯೆಂದು ಸಾರಿ, ಅವನ ಮೇಲೆ ಹೊಸದಾಗಿ ಯುದ್ಧ ಹೂಡುವಂತೆ ಫ್ರಾನ್ಸಿನ ದೊರೆಯನ್ನು ಪ್ರಚೋದಿಸುತ್ತಾನೆ. ಆ ಯುದ್ಧದಲ್ಲಿ ಇಂಗ್ಲಿಷರಿಗೆ ಗೆಲುವಾಗುತ್ತದೆ. ಫ್ರೆಂಚರ ಆಶ್ರಯದಲ್ಲಿದ್ದ ಆರ್ಥರ್ ಜಾನನ ಕೈವಶನಾಗುತ್ತಾನೆ. ಜಾನ್ ತನ್ನ ನೆಚ್ಚಿನ ಮನೆವಾರ್ತೆಯ ಅಧಿಕಾರಿ ಹ್ಯೂಬರ್ಟನಿಗೆ ಆರ್ಥರನನ್ನು ಒಪ್ಪಿಸಿ, ಆ ಹುಡುಗನ ಕಣ್ಣು ಸುಟ್ಟು ಕೊಲ್ಲುವಂತೆ ಅಪ್ಪಣೆ ಮಾಡುತ್ತಾನೆ. ಸುದ್ದಿ ತಿಳಿದ ಕಾನ್‌ಸ್ಟನ್ಸ್ ದುಃಖ ತಾಳಲಾರದೆ ಹುಚ್ಚು ಹಿಡಿದು ಸಾಯುತ್ತಾಳೆ.

ಹ್ಯೂಬರ್ಟ್ ಹೊರನೋಟಕ್ಕೆ ಒರಟಾದರೂ ಅವನದು ಮಿದುವೆದೆ. ಕೇಡರಿಯದ ಆ ಮುಗ್ಧ ಬಾಲಕನನ್ನು ಕೊಲ್ಲುವ ಕಟುಕತನ ಅವನಲ್ಲಿಲ್ಲ. ಆ ಮಗುವಿನ ಮೊರೆಗೆ ಕರಗುತ್ತಾನೆ.

ಆರ್ಥರ್ ಸೆರೆಯಿಂದ ತಪ್ಪಿಸಿಕೊಂಡು ಹೋಗುವ ಯತ್ನದಲ್ಲಿ ಕೋಟೆಯ ಗೋಡೆ ಹಾರಿ ಸಾಯುತ್ತಾನೆ. ಈವರೆಗೆ ಜಾನನ ಪರ ಇದ್ದ ಇಂಗ್ಲಿಷ್ ಶ್ರೀಮಂತರು ಹ್ಯೂಬರ್ಟನೇ



ಜಾನ್ ದೊರೆ

ಆರ್ಥರನನ್ನು ಕೊಂದಿರುವನೆಂದು, ಆ ಕೊಲೆಗೆ ಕಾರಣ ಜಾನನೆಂದು ನಿರ್ಧರಿಸಿ, ಪಕ್ಷ-ತ್ಯಾಗ ಮಾಡಿ, ಫ್ರೆಂಚರ ಕಡೆಗೆ ಹೋಗುತ್ತಾರೆ.

ಧರ್ಮದರ್ಶಿ ಪ್ಯಾಂಡಲ್ಫನ ಹಗೆ ಆರಿಲ್ಲ. ಈ ಹೊತ್ತಿಗಾಗಲೇ ಅವನು ಮತ್ತೊಮ್ಮೆ ಫ್ರೆಂಚರನ್ನು ಜಾನನ ವಿರುದ್ಧ ಎತ್ತಿ ಕಟ್ಟಿದ್ದಾನೆ. ಫ್ರಾನ್ಸಿನ ದೊರೆ ಡಾಫಿನ್ ಬ್ರಿಟನ್ನಿನ ಮೇಲೆ ದಂಡೆತ್ತಿ ಬಂದಿದ್ದಾನೆ. ಅವನಿಗೆ ಇಂಗ್ಲಿಷ್ ಶ್ರೀಮಂತರ ನೆರವಿದೆ.

ಜಾನ್ ಚರ್ಚಿಗೆ ಶರಣಾಗತನಾಗಿ ಪ್ಯಾಂಡಲ್ಫನಿಗೆ ಕಿರೀಟವನ್ನೊಪ್ಪಿಸಿ, ಮರಳಿ ಪಡೆಯುತ್ತಾನೆ. ಪ್ಯಾಂಡಲ್ಫ್ ಶಾಂತನಾದರೂ ಅವನು ಊದಿ ಹಚ್ಚಿದ ಯುದ್ಧದ ಕಿಡಿ ಶಾಂತವಾಗದು. ಡಾಫಿನನಿಗೆ ಯುದ್ಧ ನಿಲ್ಲಿಸಿ ವಾಪಸಾಗೆಂದರೆ ಅವನು ಒಪ್ಪುವುದಿಲ್ಲ. ಅವನಿಗೆ ರಾಜ್ಯದಾಹ.

ಫ್ರೆಂಚರ ಪಕ್ಷ ವಹಿಸಿದ ಇಂಗ್ಲಿಷ್ ಶ್ರೀಮಂತರಿಗೆ ಈ ನಡುವೆ ಇನ್ನೊಂದು ಭಯ ಹುಟ್ಟುತ್ತದೆ. ತಮ್ಮಿಂದಲೇ ಯುದ್ಧ ಜಯಿಸಬಹುದಾದ ಫ್ರೆಂಚರು ನಾಳೆ ಯುದ್ಧಾನಂತರ ತಮ್ಮನ್ನೇ ರಾಜದ್ರೋಹದ ಆಪಾದನೆಗೆ ಗುರಿಮಾಡಿ, ಅವರ ದಾರಿ ಸುಗಮ ಮಾಡಿಕೊಳ್ಳಬಹುದೇನೋ ಎಂದೆನಿಸುತ್ತದೆ. ಅವರು ಮತ್ತೆ ಜಾನನ ಪಕ್ಷಕ್ಕೇ ಬರುತ್ತಾರೆ. ಆದರೆ ಆರ್ಥರನ ಮರಣದಿಂದ ಎದ್ದ ದುರಂತದ ಸುಳಿ ಜಾನನ ಕೊರಳಿಗೆ

ಉರುಲಾಗುತ್ತದೆ. ಒಬ್ಬ ಪಾದ್ರಿ ಅವನಿಗೆ ವಿಷವಿಟ್ಟು ಕೊಲ್ಲುತ್ತಾನೆ. ಅದೂ ಚರ್ಚಿನ ಅಂಗಳದಲ್ಲೇ!

ಫ್ರೆಂಚ್ ಮತ್ತು ಇಂಗ್ಲಿಷರ ನಡುವೆ ಶಾಂತಿ ಏರ್ಪಡುತ್ತದೆ. ಜಾನನ ಮಗ ಹೆನ್ರಿ ಪಟ್ಟಕ್ಕೇರುತ್ತಾನೆ. ಇಂಗ್ಲೆಂಡ್ ತನಗೆ ತಾನು ಸತ್ಯದಿಂದಿದ್ದರೆ, ಯಾರೂ ಅದನ್ನು ಗೋಳಿಗೆ ಸಿಕ್ಕಿಸಲಾರರು ಎಂಬ ದೇಶಪ್ರೇಮಭರಿತವಾದ ಮಾತುಗಳಿಂದ ಈ ಭೀಕರ ದುರಂತ ಮುಕ್ತಾಯಗೊಳ್ಳುತ್ತದೆ.

## 2. ದಿ ಟ್ರ್ಯಾಜೆಡಿ ಆಫ್ ಕಿಂಗ್ ರಿಚರ್ಡ್ ದಿ ಸೆಕೆಂಡ್

**ರಚನೆ:** 1595-6. **ಮೊದಲ ಪ್ರಕಟನೆ:** 1597.

**ಆಕರ:** ರ್ಯಾಫೆಲ್ ಹಾಲಿನ್‌ಷೆಡ್‌ನ 'ದಿ ಕ್ರಾನಿಕಲ್ಸ್ ಆಫ್ ಇಂಗ್ಲೆಂಡ್, ಸ್ಕಾಟ್‌ಲೆಂಡ್ ಅಂಡ್ ಐರ್ಲೆಂಡ್'. ಮೂರನೆ ಅಂಕದಲ್ಲಿ ಬರುವ ರಾಣಿ-ತೋಟಗಾರರ ಸಂವಾದದ ದೃಶ್ಯ ಷೇಕ್ಸ್‌ಪಿಯರನ ಸ್ವಂತ ಸೃಷ್ಟಿ.

**ನಾಟಕದ ಚಾರಿತ್ರಿಕ ಕಾಲಾವಧಿ ಹಾಗೂ ಘಟನೆಗಳು:** 1397-1400. ಲ್ಯಾಂಕಾಸ್ಟರ್ ಪಂಗಡದವರ ದಂಗೆ; ಬುಲಿಂಗ್‌ಬ್ರೂಕ್ ಮತ್ತು ಮೋಬ್ರೆ ಅವರ ಅಂತಃಕಲಹ; ಜಾನ್ ಆಫ್ ಗಾಂಟನ ಸಾವು: ಐರ್ಲೆಂಡಿನ ಕದನ; ಬುಲಿಂಗ್‌ಬ್ರೂಕ್‌ನಿಂದ ರಿಚರ್ಡನ ಪದಚ್ಯುತಿ; ರಿಚರ್ಡನ ಕೊಲೆ.

**ಕಥೆ:** ಮೂರನೆಯ ಎಡ್ವರ್ಡನ ನಂತರ ಪಟ್ಟಕ್ಕೆ ಬಂದ ಅವನ ಮೊಮ್ಮಗ ಎರಡನೆಯ ರಿಚರ್ಡ್ ದೊರೆ ಬುದ್ಧಿವಂತನಾದರೂ ದುರ್ಬಲಮನಸ್ಕ. ಅವನಿಗೆ ಸತ್ಯ-ಸ್ಥಿತಿಯನ್ನು ಅರಿತು, ಎದುರಿಸಿ, ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯವಿಲ್ಲ.

ಹೆನ್ರಿ ಬುಲಿಂಗ್‌ಬ್ರೂಕ್ ರಿಚರ್ಡನ ಚಿಕ್ಕಪ್ಪಂದಿರಲ್ಲಿ ಒಬ್ಬನಾದ ಜಾನ್ ಆಫ್ ಗಾಂಟನ ಮಗ. ರಕ್ತದಿಂದೆಂತೊ ಅಂತೆ ವ್ಯವಹಾರದಿಂದಲೂ ಇವನು ದೊರೆಗೆ ದಾಯಾದಿ! ಕುಟಿಲತೆ ಇವನ ಕೈಪಟ್ಟು. ಕತ್ತಲಲ್ಲೇ ಕುಳಿತು ಕುಟುಕಬಲ್ಲ; ತಣ್ಣನೆಯ ವಿಷ ಹರಿಸಿ ಕೊಲ್ಲಬಲ್ಲ. ಹೆನ್ರಿ ರಿಚರ್ಡನನ್ನು ಉರುಳಿಸಿ, ಗದ್ದುಗೆಯೇರುವುದು ನಾಟಕದ ಕಥಾವಸ್ತು.

ರಿಚರ್ಡ್ ಸಿಂಹಾಸನವನ್ನೇರಿದ ಹೊಸದರಲ್ಲಿ ಅವನ ಇನ್ನೊಬ್ಬ ಚಿಕ್ಕಪ್ಪನಾದ ಡ್ಯೂಕ್ ಆಫ್ ಗ್ಲಾಸ್ಟರನು ಬುಲಿಂಗ್‌ಬ್ರೂಕ್ ಹಾಗೂ ನಾರ್ಫೋಕನ ಡ್ಯೂಕನಾದ ಮೋಬ್ರೆ ಅವರ ಸಹಾಯ ಪಡೆದು ರಿಚರ್ಡ್ ದೊರೆಯ ವಿರುದ್ಧ ಪಿತೂರಿ ನಡಸುತ್ತಾನೆ. ಆದರೆ ಅರ್ಧದಲ್ಲಿಯೇ ಮೋಬ್ರೆ ಗ್ಲಾಸ್ಟರನಿಗೆ ಕೈ ಕೊಟ್ಟು, ದೊರೆಗೆ ಗುಟ್ಟೊಯ್ಯುತ್ತಾನೆ. ದೊರೆಯ ಅಪ್ಪಣೆಯಂತೆ ಗ್ಲಾಸ್ಟರನನ್ನು ಕದ್ದು ಕೊಲೆಮಾಡುತ್ತಾನೆ.

ಬುಲಿಂಗ್‌ಬ್ರೂಕನಿಗೆ ಮೋಬ್ರೆಯ ವರ್ತನೆ ಸಹಿಸದು. ಗ್ಲಾಸ್ಟರನ ಕೊಲೆಯ ಆರೋಪ ಹೊರಿಸಿ, ದೊರೆಗೆ ದೂರೊಯ್ದು, ವಿಚಾರಣೆ ನಡಸೆನ್ನುತ್ತಾನೆ.

ನಾಟಕದ ಮೊದಲ ಅಂಕದಲ್ಲಿ ಬುಲಿಂಗ್‌ಬ್ರೂಕ್ ಮತ್ತು ಮೋಬ್ರೆ ಆಸ್ಥಾನದಲ್ಲಿ ವಿಚಾರಣೆಗೆ ಸೇರಿದ್ದಾರೆ. ಅವರಿಬ್ಬರೂ ಪರಸ್ಪರ ಕಾದಾಡಿ, ಆ ಸೋಲು-ಗೆಲುವಿನ

ಮೇಲೆ ನ್ಯಾಯದ ತೀರ್ಮಾನ ಮಾಡುವುದೆಂದಾಗುತ್ತದೆ. ಆದರೆ, ಅವರ ನಡುವಣ ಜಗಳಕ್ಕೆ ತಾನೇ ಕಾರಣಭೂತನೆಂಬುದನ್ನು ರಿಚರ್ಡ್ ಬಲ್ಲ. ಏಕೆಂದರೆ ಮೋಬ್ರೆ ತನ್ನ ಪರ; ಕೊಲೆಯಾದದ್ದು ತನ್ನ ಇಚ್ಛೆಯ ಮೇರೆಗೆ. ಅವರು ಕಾದಾಟದಲ್ಲಿ ಛಲ್ಲೆಯೆತ್ತುವ ಮೊದಲೇ ಒಂದು ಐಲು ನ್ಯಾಯ ನೀಡುತ್ತಾನೆ: ಕಾದಾಟವನ್ನು ನಿಲ್ಲಿಸ ಹೇಳಿ, ತನ್ನ ವಿರುದ್ಧ ಮುಂದೆಂದೂ ಅವರು ಸಂಚು ಹೂಡುವುದಿಲ್ಲವೆಂಬ ಆಶ್ವಾಸನೆ ಪಡೆದು, ಬುಲಿಂಗ್‌ಬ್ರೂಕನನ್ನು ಆರು ವರ್ಷಗಳ ಕಾಲ, ಮೋಬ್ರೆಯನ್ನು ಜೀವಾವಧಿ ದೇಶಭ್ರಷ್ಟರನ್ನಾಗಿ ಮಾಡುತ್ತಾನೆ.

ಬುಲಿಂಗ್‌ಬ್ರೂಕ್ ದೇಶಬಿಟ್ಟು ಹೊರಡುವುದಕ್ಕಿಲ್ಲ, ಇತ್ತ ಅವನ ತಂದೆ ಜಾನ್ ಅಫ್ ಗಾಂಟ್ ಹಾಸಿಗೆ ಹಿಡಿದು, ರಿಚರ್ಡನ ಸ್ವೇಚ್ಛಾವೃತ್ತಿ, ದುರಾಡಳಿತಗಳನ್ನು ಬಯ್ಯುತ್ತ, ಅವನ ಪಾಪಕ್ಕೆ ದೇಶ ಕಷ್ಟಸಂಕಟಗಳನ್ನೆದುರಿಸುವುದೆಂದು ಭವಿಷ್ಯ ನುಡಿದು ಸಾಯುತ್ತಾನೆ.

ಅವನು ಸಾಯುವುದೇ ತಡ, ನ್ಯಾಯಸಮ್ಮತವಾಗಿ ಮಗ ಬುಲಿಂಗ್‌ಬ್ರೂಕನಿಗೆ ಬರಬೇಕಾದ ಅವನ ಆಸ್ತಿಪಾಸ್ತಿಯೆಲ್ಲವನ್ನೂ ಐರ್ಲೆಂಡ್ ಕದನದ ಖರ್ಚಿಗೆ ಅದು ಅವಶ್ಯವೆಂಬ ಕಾರಣವನ್ನು ಮುಂದೊಡ್ಡಿ ದಕ್ಕು ಹಾಕುತ್ತಾನೆ. ಇನ್ನೊಬ್ಬ ಚಿಕ್ಕಪ್ಪನಾದ ವೃದ್ಧ ಡ್ಯೂಕ್ ಅಫ್ ಯಾರ್ಕ್ ಎತ್ತುವ ಅಭ್ಯಂತರಕ್ಕೆ ಬೆಲೆಕೊಡುವುದಿಲ್ಲ. ಬುಲಿಂಗ್‌ಬ್ರೂಕನಿಗೆ ದೇಶಾಂತರವಾಸದಿಂದ ಹಿಂದಿರುಗಿ ಬರಲು ಇದು ಒಳ್ಳೆಯ ನೆಪ. ಅವನು ಖದೀಮ. ಬರುವಾಗಲೇ ಮುಂದಿನ ಒಂದೊಂದು ನಡೆಯನ್ನೂ ನಿರ್ಧರಿಸಿ, ತನ್ನ ಭವಿಷ್ಯವನ್ನು ಭದ್ರಪಡಿಸಿಕೊಂಡು ಬಂದಿದ್ದಾನೆ. ದೊರೆಜನರಲ್ಲಿ ಒಂದು ಪಂಗಡ ಅವನ ಬೆಂಬಲಕ್ಕಿದೆ. ರಿಚರ್ಡನ ದುರದೃಷ್ಟ: ಬುಲಿಂಗ್‌ಬ್ರೂಕ್ ಹಿಂದಿರುಗಿದ ಹೊತ್ತಿನಲ್ಲಿ ಅವನು ರಾಜಧಾನಿಯಲ್ಲಿಲ್ಲದೆ ಹೋಗಬೇಕೆ! ಭವಿಷ್ಯದ ತಲೆಕೆಳಗು ಮಾಡಲು ಇದೊಂದೇ ಸಂಗತಿ ಸಾಕು!

ಐರ್ಲಂಡಿಗೆ ಹೋಗಿದ್ದ ರಿಚರ್ಡ್ ವೇಲ್ಸಿಗೆ ಓಡಿ ಬರುತ್ತಾನೆ. ಅವನು ಸತ್ತನೆಂಬ ಸುಳ್ಳುಸುದ್ದಿ ಹರಡಿದೆ ಅಲ್ಲಿ. ತನ್ನ ನೆಚ್ಚಿನ ವೇಲ್ಸ್ ಸೈನ್ಯ ದಿಕ್ಕಾಪಾಲಾಗಿದೆ. ಸೈನಿಕರಲ್ಲಿ ಹಲವರು ಬುಲಿಂಗ್‌ಬ್ರೂಕನ ಕಡೆ ಸೇರಿದ್ದಾರೆ. ರಿಚರ್ಡ್ ಈಗ ರೆಕ್ಕೆ ತರಿದ ಹಕ್ಕಿ. ಅವನು ವೇಲ್ಸಿನ ಫ್ಲಿಂಟ್ ಕ್ಯಾಸಲಿನಲ್ಲಿ ಶರಣಾರ್ಥಿಯಾಗಿ ಕಾಲ ತಳ್ಳುತ್ತಿರುವಾಗ ಬುಲಿಂಗ್‌ಬ್ರೂಕ್ ಅವನನ್ನು ಅರಸಿ ಅಲ್ಲಿಗೇ ಬರುತ್ತಾನೆ. ಆಸ್ತಿಯ ಮೇಲಿನ ಹಕ್ಕಿನ ಸ್ಥಾಪನೆಗಾಗಿ ದೇಶಾಂತರವಾಸ ಬಿಟ್ಟು ಬಂದವನೆಂಬಂತೆ ತೋರಿಸಿಕೊಳ್ಳುತ್ತ, ರಿಚರ್ಡನನ್ನು ಕೈದು ಮಾಡಿ, ಲಂಡನ್ನಿಗೆ ಕರೆದೊಯ್ಯುತ್ತಾನೆ.

ವೆಸ್ಟ್‌ಮಿನ್‌ಸ್ಟರ್ ಸಭಾಂಗಣದಲ್ಲಿ, ರಿಚರ್ಡನ ಬಹಿರಂಗ ವಿಚಾರಣೆ ನಡೆಸಿ ಅವನನ್ನು ಪದಚ್ಯುತಗೊಳಿಸಲೆಂದು ಬುಲಿಂಗ್‌ಬ್ರೂಕ್ ದೊರೆಜನರನ್ನು ಕೂಡಿಸುತ್ತಾನೆ. (186ನೆ ಪುಟ ನೋಡಿ.) ಮೊದಲು ಗ್ಲಾಸ್ಟರನ ಕೊಲೆಯ ತನಿಖೆಯಿಂದ ವಿಚಾರಣೆ ಆರಂಭವಾಗುತ್ತದೆ. ಆದರೆ ಕೊಲೆ ಮಾಡಿದ ದೇಶಭ್ರಷ್ಟ ಮೋಬ್ರೆ ಆಗಾಗಲೇ ಸತ್ತಿರುವ ಸಂಗತಿ ಅಲ್ಲಿ ಬಯಲಾಗುತ್ತದೆ. ನಂತರ ರಿಚರ್ಡನಿಗೆ ಕರೆ ಕಳುಹಿಸಲಾಗುತ್ತದೆ. ಅವನ ವೈರಿಗಳು ಅವನಿಂದಾದ ದೇಶದ್ರೋಹದ, ಪಾಪಕೃತ್ಯಗಳ ಪಟ್ಟಿ ತಯಾರಿಸಿ

ತಂದಿದ್ದಾರೆ. ಭಾವನಾಪ್ರಿಯ ರಿಚರ್ಡ್ ಅದನ್ನು ಓದದೆಯೇ ಬುಲಿಂಗ್‌ಬ್ರೂಕನಿಗೆ ಕಿರೀಟ ಒಪ್ಪಿಸುತ್ತಾನೆ. ಇನ್ನು ಬುಲಿಂಗ್‌ಬ್ರೂಕ್ ದೊರೆ, ನಾಲ್ಕನೆ ಹೆನ್ರಿ. ತನ್ನ ಪಟ್ಟಾಭಿಷೇಕದ ದಿನ ಗೊತ್ತು ಮಾಡಿ, ರಿಚರ್ಡನನ್ನು ಸೆರೆಗೆ ಕಳಿಸುತ್ತಾನೆ.

ದೊರೆಯ ಹುಟ್ಟಿನೊಡನೆಯೇ ಅವನ ಬೀಳಿನ ಸಂಚಿನ ಬೀಜವೂ ಮೊಳೆಯುವುದು ಅಂದಿನ ಕಾಲಧರ್ಮ. ಹೆನ್ರಿಯ ಚಿಕ್ಕಪ್ಪ ಡ್ಯೂಕ್ ಆಫ್ ಯಾರ್ಕನ ಮಗನಾದ ದಾಯಾದಿ ಆಮರ್ಲ್ ಪಾದ್ರಿ ಕಾರ್ಲಿಸ್ಲಿಯೊಡನೆ ಸೇರಿ ಅಲ್ಲೇ, ಅದೇ ಕ್ಷಣ ಹೆನ್ರಿಯ ವಿರುದ್ಧ ಸಂಚು ಹೂಡುತ್ತಾನೆ. ಅದು ಯಾರ್ಕನಿಗೆ ತಿಳಿದು, ಅವನೇ ಹೆನ್ರಿಗೆ ತಿಳಿಸುತ್ತಾನೆ. ತಪ್ಪು ಮಗನದಾದರೂ ಅವನನ್ನು ಗಲ್ಲಿಗೇರಿಸೆಂದು ಒತ್ತಾಯ ಮಾಡುತ್ತಾನೆ ಆ ಧರ್ಮಿಷ್ಠ! ಆಮರ್ಲ್ ಹೆನ್ರಿಯ ಕ್ಷಮಾಯೋಚನೆ ಕೋರಿ, ತಾಯಿಯ ಬೆಂಬಲದಿಂದ ಬದುಕಿಕೊಳ್ಳುತ್ತಾನೆ.

ಇತ್ತ ಬಂದಿ ರಿಚರ್ಡ್ ತನ್ನ ರಾಣಿಯ ಬೀಳ್ಕೊಡುಗೆ ಪಡೆದು ಸೆರೆ ಸೇರುತ್ತಾನೆ. ಅಲ್ಲಿ ಅವನ ಕೊಲೆಯಾಗುತ್ತದೆ. "ಈ ಜೀವಂತ ಭಯದಿಂದ ನನ್ನನ್ನು ತಪ್ಪಿಸುವ ಗೆಳೆಯರಾರೂ ಇಲ್ಲವೆ ?" ಎಂದು ಹೆನ್ರಿ ಎಸೆಯುವ ಒಂದು ಪ್ರಾಸಂಗಿಕ ಸೂಚನೆ ಎಕ್ಸ್‌ಟನ್ನನ ಸರ್ ಪಿಯರ್ಸನನ್ನು ಕೊಲೆಗೆ ಪ್ರೇರೇಪಿಸುತ್ತದೆ. ಆದರೆ ಕೊಲೆಯ ವಿಷಯ ತಿಳಿದು ಬಂದಾಗ, ಹೆನ್ರಿ "ನನ್ನ ಬೆಳೆಗೆ ರಕ್ತದ ನೀರೆ? ಈ ಕೊಲೆಯ ಪಾಪ ಕಳೆಯಲು ತೀರ್ಥಯಾತ್ರೆಗೆ ಹೋಗುತ್ತೇನೆ" ಎನ್ನುತ್ತ ಸರ್ ಪಿಯರ್ಸನನ್ನು ಗಡೀಪಾರು ಮಾಡುತ್ತಾನೆ!

## 3. ದಿ ಫಸ್ಟ್ ಪಾರ್ಟ್ ಆಫ್ ಕಿಂಗ್ ಹೆನ್ರಿ ದಿ ಫೋರ್ತ್

**ರಚನೆ:** 1597-8. **ಮೊದಲ ಪ್ರಕಟನೆ:** 1598.

**ಆಕರಗಳು :** ಚಾರಿತ್ರಕ ಅಂಶಗಳಿಗೆ ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್'. ವಿನೋದದೃಶ್ಯಗಳಿಗೆ ಪ್ರೇರಣೆ 'ದಿ ಫೇಮಸ್ ವಿಕ್ಟರೀಸ್ ಆಫ್ ಹೆನ್ರಿ ದಿ ಫಿಫ್ತ್' ಎಂಬ ಅಜ್ಞಾತ ಕರ್ತೃತ್ವದ ನಾಟಕ.

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು :** 1402-3. ದೇಶದಲ್ಲಿ ಒಳಯುದ್ಧ; ಪರ್ಸಿ ಕುಟುಂಬದ ದಂಗೆ; ಹೋಮ್‌ಡನ್ ಕದನ; ನಂತರದ ಷ್ರೂಸ್‌ಬರಿ ಕದನ; ಹೆನ್ರಿ 'ಹಾಟ್‌ಸ್ಪರ್'ನ ಸಾವು.

**ಕಥೆ:** ರಿಚರ್ಡನನ್ನು ಕೆಳಗಿಳಿಸಿ ಗದ್ದುಗೆ ಹತ್ತಿದ ನಾಲ್ಕನೆ ಹೆನ್ರಿಗೆ ಸಿಂಹಾಸನ ಮುಳ್ಳಿನ ಮೆತ್ತೆಯಾಗಿದೆ. ಸುಖವಿಲ್ಲ, ಶಾಂತಿಯಿಲ್ಲ. ಪಾಪದ ಅರಿವು ಭೀತಿಯಾಗಿ ಬೆನ್ನಟ್ಟಿದೆ. ರಿಚರ್ಡನನ್ನು ಪದಚ್ಯುತಗೊಳಿಸುವುದರಲ್ಲಿ ಹೆನ್ರಿಗೆ ಬೆಂಬಲರಾಗಿದ್ದ ನಾರ್ದಂಬರ್‌ಲಂಡಿನ ಅರ್ಲ್, ಅವನ ಮಗ ಹೆನ್ರಿ ಪರ್ಸಿ 'ಹಾಟ್‌ಸ್ಪರ್' ಮತ್ತಿತರರು ಅವನ ವಿರುದ್ಧ ತಿರುಗಿ ಬಿದ್ದು ದಂಗೆಯೆದ್ದಿದ್ದಾರೆ. ಈ ದಂಗೆ ಹಾಗೂ ಕಡೆಯಲ್ಲಿ ಹೆನ್ರಿಯ ಮಗ ರಾಜಕುಮಾರ ಹಾಲ್ ಅದನ್ನು ಅಡಗಿಸಿ ಪ್ರತಿರೋಧಿ ಹಾಟ್‌ಸ್ಪರನನ್ನು ಸೋಲಿಸಿ ಸಾಯಿಸುವುದು ಈ ನಾಟಕದ ಮುಖ್ಯ ಕಥಾವಸ್ತು. ಜತೆಗೆ ಎರಡನೆಯ

ಎಳೆಯೂ ಒಂದಿದೆ: ಪೋಲಿ ಬಿದ್ದ ರಾಜಕುಮಾರನ ಹಿರಿಯ ಸಂಗಡಿಗ, ಹಾಸ್ಯ-ಮೂರ್ತಿ ಸರ್ ಜಾನ್ ಫಾಲ್‌ಸ್ಟಾಫನ ವಿನೋದಪ್ರಸಂಗಗಳು ನಾಟಕವನ್ನು ಬೆಳಗಿವೆ.

ರಿಚರ್ಡನ ಕೊಲೆಯ ಪ್ರಾಯಶ್ಚಿತ್ತವಾಗಿ ಹೆನ್ರಿ ದೊರೆ ಜೆರುಸಲೇಮಿಗೆ ತೀರ್ಥಯಾತ್ರೆ ಕೈಗೊಳ್ಳುವ ಯೋಚನೆಯಲ್ಲಿದ್ದಾನೆ. ಆದರೆ ಹಿಂದೆ ಅವನಿಗೆ ಬೆಂಬಲಿಗರಾಗಿದ್ದ ನಾರ್ದಂಬರ್‌ಲಂಡ್, ಅವನ ಮಗ ಹಾಟ್‌ಸ್ಪರ್, ತಮ್ಮ ಥಾಮಸ್ ಪರ್ಸಿ ಮುಂತಾದ ಉತ್ತರದ ಶ್ರೀಮಂತರು ಬೆಳಸುತ್ತಿರುವ ವೈಮನಸ್ಯ ಅದಕ್ಕೆ ಅಡ್ಡಿ ಒಡ್ಡುತ್ತದೆ. ಆ ಎದುರು ಗುಂಪಿನ ಮುಖಂಡ ಹಾಟ್‌ಸ್ಪರ್. ಅವನದು ಬಿಸಿ ರಕ್ತ, ತಿರುಗಿದ ತಲೆ. ಬೆಳಗಿನ ಫಲಾಹಾರದ ವೇಳೆಗಾಗಲೇ ಆರೇಳು ಡಜನ್ ಸ್ಕಾಟರನ್ನು ಕೊಂದು, ಕೈತೊಳೆದು, "ಛೆ! ಈ ನಿಷ್ಕ್ರಿಯೆಯ ಜೀವನ ಹಾಳಾಗ! ಮಾಡಲು ಏನಾದರೂ ಕೆಲಸ ತಾ" ಎಂದು ಕೇಳುವಷ್ಟು ಕೆಚ್ಚಿನ ಯೋಧ ಅವನು.

ಎರಡನೆಯ ರಿಚರ್ಡನ ನಂತರ ಇಂಗ್ಲಂಡಿನ ಗದ್ದುಗೆ ನ್ಯಾಯಸಮ್ಮತವಾಗಿ ಹಾಟ್‌ಸ್ಪರನ ಹೆಂಡತಿಯ ಅಣ್ಣ ಎಡ್ಮಂಡ್ ಮಾರ್ಟಿಮರನಿಗೆ ಬರಬೇಕು. ಆ ಸತ್ಯಕ್ಕೆ ಅಂಜಿದ ಹೆನ್ರಿ ಎಡ್ಮಂಡನನ್ನು ಕೈಸೆರೆ ಹಿಡಿಸಿ ತರಿಸಿಟ್ಟಿದ್ದಾನೆ.

ಹೋಮ್‌ಡನ್ ಕದನದಿಂದ ಹಿಂದಿರುಗಿದ ಹಾಟ್‌ಸ್ಪರ್ ಕೆಲವು ಸ್ಕಾಟ್ ಬಂದಿಗಳನ್ನು ಹಿಡಿದು ತಂದಿದ್ದಾನೆ. ಅವರನ್ನು ತನಗೆ ಒಪ್ಪಿಸಬೇಕೆಂದು ದೊರೆಯ ಆಜ್ಞೆಯಾಗುತ್ತದೆ. ಅದಕ್ಕೆ ಹಾಟ್ಸ್‌ಪರ್ ಮುಂದಿಡುವ ಷರತ್ತಿದು: "ಎಡ್ಮಂಡನನ್ನು ಬಿಟ್ಟುಕೊಟ್ಟು ಸ್ಕಾಟ್ ಬಂದಿಗಳನ್ನು ತೆಗೆದುಕೊ". ಹೆನ್ರಿ ಸಮ್ಮತಿಸುವುದಿಲ್ಲ. ಬಂದಿಗಳನ್ನು ಒಪ್ಪಿಸಿಯೇ ತೀರಬೇಕೆಂದು ಒತ್ತಾಯ ಮಾಡುತ್ತಾನೆ. ಹಾಟ್‌ಸ್ಪರ್ ಕಿಚ್ಚೆದ್ದು 'ಈ ನೀಚ ರಾಜಕಾರಣಿ ಬುಲಿಂಗ್‌ಬ್ರೂಕ್'ನಿಗೆ ಬುದ್ಧಿ ಕಲಿಸುವೆನೆಂದು ಶಪಥ ಮಾಡಿ ದಂಗೆಗೆ ಸಿದ್ಧ ಮಾಡಿಕೊಳ್ಳುತ್ತಾನೆ. ದೊರೆಗೆ ಆಗದ ರಿಚರ್ಡ್ ಸ್ಕ್ರೂಪ್, ಓವನ್ ಗ್ಲೆಂಡೊವರ್ ಮುತ್ತು ಡಗ್ಲಸ್ ಮುಂತಾದವರ ಸಹಾಯ ಪಡೆದು ಸೈನ್ಯ ಸೇರಿಸುತ್ತಾನೆ.

ಈ ನಡುವೆ ಹೆನ್ರಿಯ ಮಗ ರಾಜಕುಮಾರ ಹಾಲ್ ತನ್ನದೇ ಬೇರೆ ಒಂದು ಬದುಕು ನಡಸುತ್ತಿದ್ದಾನೆ. ಅವನು ಹಾಟ್‌ಸ್ಪರನ ಸಮವಯಸ್ಕ. ಅಂತೆಯೇ ಕೆಚ್ಚಾಳು, ಧೀರ, ಘನವಂತ. ಇಂಗ್ಲಂಡಿನ ಯುವಜನಾಂಗದ ಪ್ರತೀಕದಂತಿದ್ದಾನೆ. ಆದರೆ ಅವನ ಜೀವನಪ್ರೇಮ, ಹಾಸ್ಯಪ್ರೇಮ ಅವನನ್ನು ಅಡ್ಡದಾರಿಗೆಳೆದು, ಅಂತಸ್ತಿಗೆ ಕೀಳಾದವರೊಡನೆ ಸಹವಾಸ ಬೆಳಸುವಂತೆ ಮಾಡಿ, ಲೋಕದ ಕಣ್ಣಿನಲ್ಲಿ ಪೋಲಿಯನ್ನಾಗಿ ಮಾಡಿದೆ. ಅವನ ಜತೆಗಾರರಲ್ಲಿ ಪ್ರಮುಖನೆಂದರೆ ಸರ್ ಜಾನ್ ಫಾಲ್‌ಸ್ಟಾಫ್ — ಷೇಕ್‌ಸ್ಪಿಯರ್ ಸೃಷ್ಟಿಸಿದ ಅದ್ಭುತ ಹಾಸ್ಯಪಾತ್ರ. ಅವನು ಬಾಯಿಬಿಟ್ಟರೆ ಸಾಕು, ಚತುರೋಕ್ತಿ ಪಟಪಟನೆ ಉದುರುತ್ತದೆ. ಸ್ವತಃ ಜಾಣನಷ್ಟೇ ಅಲ್ಲ, ಅವನಿದ್ದೆಡೆ ಜಾಣು ಅರಳುತ್ತದೆ. ಆಕಾರದಲ್ಲಿ ಮಾಂಸದ ಗುಡ್ಡ. ಹೆಂಡ, ಹೆಣ್ಣು, ಹಾಡು — ಇವನ ಬದುಕಿನ ದೌರ್ಬಲ್ಯಗಳು. ಇವನು ಕೊಳಕ, ಕುಡುಕ, ಕಳ್ಳ, ಸುಳ್ಳ. ಆದರೆ ಒಳಗೆ ಕಪಟವಿಲ್ಲ, ಮೇಲೆ ಮುಸುಕಿಲ್ಲ. ಆಡಿದಂತೆ ನಡೆಯುತ್ತಾನೆ. ಇವನ ಪಾತ್ರಕ್ಕೆ ಹಿರಿಮೆ ಒದಗಿಸುವುದು ಈ ಗುಣವೇ. ಪೀಟೋ, ಬಾರ್ಡೊಲ್ಫ್ ಇವನ ಬಾಲಂಗಚ್ಚಿಗಳು. ಮಿಸ್ಟ್ರೆಸ್ ಕ್ವಿಕ್ಲಿ ಎಂಬಾಕೆ ನಡಸುತ್ತಿರುವ ಬೋರ್ಸ್‌ಹೆಡ್ ಪಡಖಾನೆ ಇವರ ಕೂಡುಗಟ್ಟೆ.

ಗ್ಯಾಡ್ಸ್‌ಹಿಲ್ ಎಂಬಲ್ಲಿ ಫಾಲ್‌ಸ್ಟಾಫ್ ದಾರಿಹೋಕರನ್ನು ಮುತ್ತಿ ದೋಚುವುದು, ಹೊಂಚು ತಿಳಿದ ಹಾಲ್ ಆ ನಂತರ ಮುಖವಾಡ ಕಟ್ಟಿ ಫಾಲ್‌ಸ್ಟಾಫ್ ತಂಡದ ಮೇಲೆ ಬಿದ್ದು ಹೆದರಿಸಿ ಓಡಿಸುವುದು, ಪಡಖಾನೆಯಲ್ಲಿ ಎಲ್ಲರೂ ಸೇರಿದಾಗ ಫಾಲ್‌ಸ್ಟಾಫ್




**ಸರ್ ಜಾನ್ ಫಾಲ್‌ಸ್ಟಾಫ್**

ಮುಖವಾಡ ಕಟ್ಟಿ ಬಂದ ಹನ್ನೊಂದು ಜನರೊಡನೆ ಒಬ್ಬಂಟಿ ಕಾದು ಗೆದ್ದೆನೆಂದು ಸುಳ್ಳೇ ಜಂಭ ಕೊಚ್ಚುವುದು, ಹಾಲ್ ಅವನ ಮುಖಭಂಗ ಮಾಡುವುದು, ಫಾಲ್‌ಸ್ಟಾಫ್ ಬಿದ್ದರೂ ಮೀಸೆ ಮಣ್ಣಾಗಗೊಡದಿರುವುದು— ಹೀಗೆ ಈ ತಂಡದ ವಿಲಾಸಗಳು ಅನೇಕ!

ಹೆನ್ರಿ ದೊರೆ 'ದಾರಿಗೆಟ್ಟ' ಮಗನನ್ನು ಕರೆಸಿ, ದೇಶದ ಸಂಕಟ-ಪರಿಸ್ಥಿತಿಯ ಅರಿವು ಮಾಡಿಸಿ ಅವನನ್ನು ಪರಿವರ್ತಿಸುತ್ತಾನೆ. ಸೈನ್ಯದ ನಾಯಕತ್ವ ವಹಿಸಿ ದಂಗೆಕೋರ ಶ್ರೀಮಂತರೊಡನೆ ಕಾದಲು ಕಳಿಸುತ್ತಾನೆ. ಫಾಲ್‌ಸ್ಟಾಫನಿಗೂ ಒಂದು ಕಾಲಾಳು ಪಡೆಯನ್ನು ನಡಸುವ ಅವಕಾಶ ದೊರೆಯುತ್ತದೆ! ಇತ್ತ ಷ್ರೂಸ್‌ಬರಿಯ ಶಿಬಿರದಲ್ಲಿ ಕದನಾರಂಭಕ್ಕೆ ಮೊದಲೇ ದಂಗೆಕೋರ ಶ್ರೀಮಂತರು ಮುಂದೆ ರಾಜ್ಯದ ಹಂಚಿಕೆ ಹೇಗಾಗ ಬೇಕೆಂದು ನಿರ್ಧರಿಸ ಹೊರಟಿದ್ದಾರೆ. ಆ ಬಗ್ಗೆ ಅವರಲ್ಲಿ ವಿರಸ ಹುಟ್ಟುತ್ತದೆ. ಯುದ್ಧದ ಹೊತ್ತಿನಲ್ಲಿ ಒಕ್ಕಟ್ಟು ಒಡೆಯುತ್ತದೆ. ನಾರ್ದಂಬರ್‌ಲಂಡ್ ಅನಾರೋಗ್ಯದ ಕಾರಣ

ದಿಂದ ಹಿಂದುಳಿಯುತ್ತಾನೆ. ಮಂತ್ರತಂತ್ರಗಳ ಗ್ಲೆಂಡೋವರ್ ಇನ್ನು ಹದಿನಾಲ್ಕು ದಿನ ಕದನಕ್ಕಿಳಿಯದಿರಲು ಕಣಿ ಹೇಳಿದೆಯೆನ್ನುತ್ತಾನೆ. ಸೋಲು ಸಿದ್ಧವೆಂದರಿತ ಸ್ಕ್ರೂಪ್ ದೊರೆಯೊಡನೆ ಒಪ್ಪಂದಕ್ಕೆ ಹೊರಡುತ್ತಾನೆ. ಹಾಟ್‌ಸ್ಪರ್, ಡಗ್ಲಸ್, ಥಾಮಸ್ ಪರ್ಸಿ, ವರ್ನಾನ್ ತಮ್ಮವರಿಂದಲೇ ಪರಿತ್ಯಜ್ಯರಾಗಿ ಕಾಳಗಕ್ಕೆ ಇಳಿಯುತ್ತಾರೆ.

ಷ್ರೂಸ್‌ಬರಿಯ ಬಳಿ ಭೀಕರ ಕದನ ನಡೆಯುತ್ತದೆ. ಡಗ್ಲಸನ ಕತ್ತಿಯ ಇರಿತಕ್ಕೆ ಸಿಕ್ಕಿ ಸಾಯುವುದರಲ್ಲಿದ್ದ ಹೆನ್ರಿಯನ್ನು ಮಗ ಹಾಲ್ ರಕ್ಷಿಸುತ್ತಾನೆ. ಹಾಟ್‌ಸ್ಪರನೊಡನೆ ಕೈಗೆ ಕೈ ಕಾದು ಅವನನ್ನು ಕೊಲ್ಲುತ್ತಾನೆ. ಥಾಮಸ್ ಪರ್ಸಿ ಮತ್ತು ವರ್ನಾನರನ್ನು ಸೆರೆಹಿಡಿದು ಗಲ್ಲಿಗೇರಿಸಲಾಗುತ್ತದೆ. ಕೈವಶನಾದ ಡಗ್ಲಸನಿಗೆ ಕ್ಷಮೆ ದೊರೆಯುತ್ತದೆ. ತಮ್ಮವರಿಗೇ ಮೋಸಮಾಡಿ ಓಡಿದ ನಾರ್ದಂಬರ್‌ಲಂಡ್, ಸ್ಕ್ರೂಪ್ ಮತ್ತು ಗ್ಲೆಂಡೋವರರ ವಿನಹ ದಂಗೆಕೋರರೆಲ್ಲರ ಹುಟ್ಟಡಗುತ್ತದೆ.

ಕಾಲಾಳು ಪಡೆಯೊಡನೆ ಹೋಗಿದ್ದ ಫಾಲ್‌ಸ್ಟಾಫ್ ಪ್ರಾಣಭಯದಿಂದ ಸತ್ತವನಂತೆ ನಟಿಸಿ ಬದುಕಿ ಬಂದರೂ ಹಾಟ್‌ಸ್ಪರನನ್ನು ಕೊಂದವನು ತಾನೇ ಎಂದು ಜಂಭ ಕೊಚ್ಚಿ ನಗೆ ತೇಲಿಸುತ್ತಾನೆ!

## 4. ದಿ ಸೆಕಂಡ್ ಪಾರ್ಟ್ ಅಫ್ ಕಿಂಗ್ ಹೆನ್ರಿ ದಿ ಫೋರ್ತ್

**ರಚನೆ:** 1597-8. **ಮೊದಲ ಪ್ರಕಟನೆ:** 1600.

**ಆಕರಗಳು:** 'ಹೆನ್ರಿ ದಿ ಫೋರ್ತ್'ನ ಮೊದಲ ಭಾಗದ ಆಕರಗಳೇ.

**ನಾಟಕದ ಚಾರಿತ್ರಿಕ ಕಾಲಾವಧಿ ಹಾಗೂ ಘಟನೆಗಳು:** 1403-13. ದೇಶದಲ್ಲಿ ಒಳಯುದ್ಧದ ಮುಂಬರಿಕೆ; ಷಿಪ್ಟನ್ ಬಯಲಿನಲ್ಲಿ ದ್ವಂದ್ವಪಕ್ಷಗಳ ಮುಖಾಮುಖಿ; ಬಂಡಾಯದ ನಿರ್ಮೂಲನ; ನಾಲ್ಕನೆ ಹೆನ್ರಿಯ ಸಾವು; ಐದನೆ ಹೆನ್ರಿಯಾಗಿ ಹಾಲ್‌ನ ಪಟ್ಟಾಭಿಷೇಕ.

**ಕಥೆ:** ದಂಗೆಯ ಹುಟ್ಟಡಗಿ, ನಾಲ್ಕನೆ ಹೆನ್ರಿಯ ನಿಧನಾನಂತರ ಯುವರಾಜ ಹಾಲ್ ಪಟ್ಟಕ್ಕೆ ಬರುವುದು ನಾಟಕದ ಕಥಾವಸ್ತು. ಯುದ್ಧದಲ್ಲಿ ಹಾಟ್‌ಸ್ಪರ್ ಮೃತನಾದರೂ ಅವನೇ ಹಾಲ್‌ನನ್ನು ಕೊಂದು ವಿಜಯಿಯಾಗಿರುವನೆಂಬ ಸುಳ್ಳುಸುದ್ದಿ ಎಲ್ಲೆಲ್ಲೂ ಹರಡಿದೆ. ಆದರೆ ನಿಜಸ್ಥಿತಿ ಹೊರಬೀಳಲು ಬಹಳ ಕಾಲ ಬೇಕಾಗುವುದಿಲ್ಲ. ಬಂಡಾಯಗಾರರ ಸೋಲಿನ ಹಾಗೂ ಮಗನ ಸಾವಿನ ವಿಷಯ ಷ್ರೂಸ್‌ಬರಿಯ ಕದನದ ಹೊತ್ತಿನಲ್ಲಿ ಅವರಿಗೆ ಕೈಕೊಟ್ಟು ಓಡಿದ್ದ ತಂದೆ ನಾರ್ದಂಬರ್‌ಲಂಡಿಗೆ ತಿಳಿಯುತ್ತದೆ. ಜೊತೆಗೆ ದೊರೆಯ ಎರಡನೆಯ ಮಗ ಲ್ಯಾಂಕಾಸ್ಟರಿನ ಜಾನ್ ಮತ್ತು ವೆಸ್ಟ್‌ಮೋರ್‌ಲಂಡಿನ ಅರ್ಲರ ನೇತೃತ್ವದಲ್ಲಿ ರಾಜಸೈನ್ಯ ತನ್ನ ಮೇಲೆ ನುಗ್ಗಿ ಬರುತ್ತಿರುವ ಸಂಗತಿಯೂ ಗೊತ್ತಾಗಿ ಅವನು ಕೆರಳಿ ಕಿಡಿಕಿಡಿಯಾಗುತ್ತಾನೆ. ಪರಿಸ್ಥಿತಿಯನ್ನೆದುರಿಸಲು ಷ್ರೂಸ್‌ಬರಿಯಲ್ಲಿ ತನ್ನಂತೆಯೇ ಹಿಮ್ಮೆಟ್ಟಿದ್ದ ಸ್ಕ್ರೂಪ್‌ನೊಡನೆ ಕೈಕೂಡಿಸಿ ಯುದ್ಧಸನ್ನದ್ಧನಾಗುತ್ತಾನೆ.

ಫಾಲ್‌ಸ್ಟಾಫ್ ಮುದಿ ಮಿಸ್ಟ್ರೆಸ್ ಕ್ವಿಕ್ಲಿಯನ್ನು ಮದುವೆಯಾಗುವುದಾಗಿ ಪುಸಲಾಯಿಸಿ, ಅವಳ ಪಡಖಾನೆಯಲ್ಲಿ ತಿಂದು ಕುಡಿದು, ಅವಳಿಂದಲೇ ಸಾಲ ಸುಲಿದಿದ್ದಾನೆ! ಅವಳಿತ್ತ ದೂರಿನ ಮೇಲೆ ಇನ್ನೇನು ಅವನ ಕೈಗೆ ಬೇಡಿ ಬೀಳಬೇಕು, ಅಷ್ಟರಲ್ಲೇ

ಬಂಡಾಯಗಾರರ ವಿರುದ್ಧ ಉತ್ತರಕ್ಕೆ ತೆರಳಲಿರುವ ಸೈನ್ಯದ ಜತೆ ಹೋಗಿ, ದಾರಿಯಲ್ಲಿ ಸೈನಿಕರನ್ನು ಭರ್ತಿಮಾಡುವ ಮಹತ್ವದ ನಿಯೋಗ ತನಗೆ ಸಿಕ್ಕಿರುವ ಸುದ್ದಿಯನ್ನು ಹೊರಗೆಡವಿ, ಆ ಅಪ್ರಿಯ ಸನ್ನಿವೇಶವನ್ನೂ ತನ್ನ ಅನುಕೂಲಕ್ಕೆ ತಿರುಗಿಸಿಕೊಳ್ಳುತ್ತಾನೆ ಆ ಭೂಪ! ಸೆರೆ ಸಿಕ್ಕುವುದಿರಲಿ, ಅವಳಿಂದ ಇನ್ನೂ ಅಷ್ಟು ಸಾಲ ಕೀಳುತ್ತಾನೆ. ಅವನ ಸಂತೋಷ ಪೂರ್ಣಗೊಳ್ಳಲೆಂದು ಕ್ವಿಕ್ಲಿ ಸೂಳೆ ಡಾಲ್ ಟೀರ್‌ಷೀಟಳನ್ನೂ ಕರೆಸುತ್ತಾಳೆ! ಅವರ ಚೆಲ್ಲಾಟದ ನಡುವೆ ಯುವರಾಜ ಹಾಲನೂ ಬಂದು ಸೇರಿ ಸನ್ನಿವೇಶಕ್ಕೆ ಕಳೆ ಕಟ್ಟುತ್ತದೆ. ಆ ಹೊತ್ತಿಗೆ ಯುದ್ಧಕ್ಕೆ ಹೊರಡಬೇಕೆಂದು ಹಾಲ್ ಮತ್ತು ಫಾಲ್‌ಸ್ಟಾಫ ರಿಗೆ ರಾಜನಿಂದ ಕರೆ ಬಂದು ದೃಶ್ಯ ಮುಗಿಯುತ್ತದೆ. ಮುಂದೆ ಫಾಲ್‌ಸ್ಟಾಫ್ ಸೈನ್ಯಕ್ಕೆ ಭರ್ತಿ ಮಾಡಲು ಗ್ಲಾಸ್ಟರ್‌ಷೈರಿಗೆ ಬರುತ್ತಾನೆ. ಅಲ್ಲಿ ಗೆಳೆಯ ಷ್ಯಾಲೊ ಇವನಿಗಾಗಿ ಕೆಲಸಕ್ಕೆ ಬಾರದ ಕಳಪೆ ಜನರ ಒಂದು ಮಂದೆಯನ್ನು ಕೂಡಿಸಿಟ್ಟಿದ್ದಾನೆ. ಅವರಲ್ಲಿ ಸಹ ಸೈನ್ಯ ಸೇರಲು ಒಲ್ಲದವರಿಗೆ ಬಿಡುಗಡೆ ಕೊಟ್ಟು ಲಂಚ ಕೀಳುತ್ತಾನೆ ಫಾಲ್‌ಸ್ಟಾಫ್!

ಇತ್ತ ನಾರ್ದಂಬರ್‌ಲಂಡಿನ ಮಡದಿ, ಸೊಸೆಯರಿಗೆ ಅವನು ಯುದ್ಧಕ್ಕೆ ಕೈ ಹಾಕುವುದು ಇಷ್ಟವಿಲ್ಲ. ಹಾಟ್‌ಸ್ಪರನನ್ನು ರಣಮಾರಿಗೆ ಬಲಿಗೊಟ್ಟು ಘಾಸಿಗೊಂಡ ಅವರ ಹೆಣ್ಣುಹೃದಯ ಮತ್ತೊಂದು ಆಹುತಿಗೆ ಸಿದ್ಧವಿಲ್ಲ. ನಾರ್ದಂಬರ್‌ಲಂಡ್ ಸ್ಕ್ರೂಪ್‌ನೊಡನೆ ಮಾಡಿಕೊಂಡ ಯುದ್ಧದ ಒಪ್ಪಂದವನ್ನು ಮುರಿದು ಮತ್ತೆ ಅನುಕೂಲ ಸಮಯ ಬರುವವರೆಗೆ ಸ್ಕಾಟ್‌ಲಂಡಿನಲ್ಲಿ ಆಶ್ರಯಿಯಾಗಿರಲು ಅವನನ್ನು ಒಪ್ಪಿಸುತ್ತಾರೆ. ಈ ವಂಚನೆ ಕದನಕ್ಕೆ ನೆರೆದ ಸ್ಕ್ರೂಪ್ ಹಾಗೂ ಅವನ ಜತೆಗಾರರ ಎದೆಗೆಡಿಸುತ್ತದೆ. ರಾಜಸೈನ್ಯದ ಸೇನಾಧಿಪತಿಗಳಲ್ಲೊಬ್ಬನಾದ ವೆಸ್ಟ್‌ಮೋರ್‌ಲಂಡಿನ ಅರ್ಲ್ ದಂಗೆಕೋರರನ್ನು ಕಂಡು ವೃಥಾ ಕದನ ಸಾಧುವಲ್ಲವೆಂದು ಬೋಧಿಸಿ, ಸಂಧಿಯ ಉದ್ದೇಶದಿಂದ ಲ್ಯಾಂಕಾಸ್ಟರಿನೊಡನೆ ಭೇಟಿ ಮಾಡಿಸುತ್ತಾನೆ. ಲ್ಯಾಂಕಾಸ್ಟರ್ ಕಪಟಿ. ದಂಗೆಗೆ ಕಾರಣವಾದ ಅವರ ಎಲ್ಲ ಅಸಮಾಧಾನಗಳನ್ನೂ ಬೇಗನೆ ಪರಿಹರಿಸುವ ಸುಳ್ಳು ಭರವಸೆಯಿತ್ತು, ಎರಡೂ ಪಕ್ಷದವರು ಸೈನ್ಯ ಚದರಿಸಬೇಕೆನ್ನುತ್ತಾನೆ. ದಂಗೆಕೋರರು ಅವನ ಮಾತನ್ನು ನಂಬಿ ಚದರುತ್ತಾರೆ. ಕೂಡಲೇ ಲ್ಯಾಂಕಾಸ್ಟರ್ ದಂಗೆಯ ಮುಂದಾಳು ಗಳೆಲ್ಲರನ್ನೂ ಮೋಸದಿಂದ ಹಿಡಿಸಿ ಕೊಲ್ಲಿಸುತ್ತಾನೆ. ಇದೇ ಹೊತ್ತಿಗೆ ಯಾರ್ಕ್‌ಷೈರಿನಲ್ಲಿ ರಾಜ್ಯದ ಅಧಿಕಾರಿಗಳು ನಾರ್ದಂಬರ್‌ಲಂಡನನ್ನೂ ಅವನ ಹಿಂಬಾಲಕರನ್ನೂ ಕೈಸೆರೆ ಹಿಡಿಯುತ್ತಾರೆ. ದಂಗೆಯ ನಿರ್ಮೂಲನವಾಗುತ್ತದೆ.

ದೊರೆ ಹೆನ್ರಿ ಪಟ್ಟಕ್ಕೆ ಬಂದಾಗಿನಿಂದ ಅವನನ್ನು ಕಾಡಿದ್ದ ಹಗೆಗಳು ಈಗಿಲ್ಲ. ಆದರೆ ಈ ಸಂತಸದ ಫಲವನ್ನು ಸವಿಯುವ ಸೌಭಾಗ್ಯ ಅವನ ಹಣೆಯಲ್ಲಿ ಬರೆದಿಲ್ಲ. ಅವನು ಅನಾರೋಗ್ಯದಿಂದ ಹಾಸಿಗೆ ಹಿಡಿದು ಗಳಿಗೆ ಎಣಿಸುತ್ತಿದ್ದಾನೆ.

ಯುವರಾಜ ಹಾಲ್ ಯುದ್ಧದಿಂದ ಹಿಂದಿರುಗಿ ದೊರೆಯ ಅಂತಿಮ ದರ್ಶನ ಪಡೆ ಯುತ್ತಾನೆ. ಕೊನೆಯ ಗಳಿಗೆಯಲ್ಲಿ ತಂದೆ ಮಗನಿಗೆ ಕೊಡುವ ಉಪದೇಶ ಕುಟಿಲ ರಾಜ ನೀತಿಯ ಒಂದು ಮಹಾಮಂತ್ರ : ಜನ ದಂಗೆಯ ಯೋಚನೆ ತೊರೆದು ದೇಶದಲ್ಲಿ ಶಾಂತಿ ನೆಲಸಬೇಕಾದರೆ ಅವರ ಮನಸ್ಸನ್ನು ಹೊರದೇಶಗಳ ಕಡೆ ಹರಿಸಬೇಕು!

ಹೆನ್ರಿಗೆ ಜೆರುಸಲೇಮಿನ ಯಾತ್ರೆಯ ಗೀಳು ಬಿಟ್ಟಿಲ್ಲ. ಅವನು ಸಾಯುವುದು ಜೆರುಸ

ಲೇಮಿನಲ್ಲೇ ಎಂಬುದು ಭವಿಷ್ಯವಾಣಿ. ಅದನ್ನು ನಿಜವಾಗಿಸಲೆಂಬಂತೆ ಅರಮನೆಯಲ್ಲಿರುವ 'ಜೆರುಸಲೇಮ್ ಗೃಹ'ಕ್ಕೆ ಒಯ್ಯುತ್ತಾರೆ. ಅಲ್ಲಿ ಅವನು ಕಣ್ಣು ಮುಚ್ಚುತ್ತಾನೆ.

ನಾಲ್ಕನೆ ಹೆನ್ರಿ ಸತ್ತ ಮೇಲೆ ಯುವರಾಜ ಹಾಲ್ ಪಟ್ಟಕ್ಕೇರುತ್ತಾನೆ. ಈಗ ಅವನು ದೊರೆ, ಐದನೆ ಹೆನ್ರಿ. ಅವನಲ್ಲಿ ಅದ್ಭುತ ಪರಿವರ್ತನೆಯುಂಟಾಗಿದೆ. ಕೀಳರೊಡನೆ ಬೆರೆತ, ಗ್ಯಾಡ್ಸ್‌ಹಿಲ್‌ನಲ್ಲಿ ಕೊಳ್ಳೆಗಾರರೊಡನೆ ಕೂಡಿದ, ಕ್ವಿಕ್ಲಿಯ ಮನೆಯಲ್ಲಿ ಚೆಲ್ಲಾಟವಾಡಿದ ಹುಡುಗತನ ಇನ್ನಿಲ್ಲ. ಈಗ ಅವನ ವರ್ತನೆಯಲ್ಲಿ ಗಾಂಭೀರ್ಯವಿದೆ, ಹೊಣೆಗಾರಿಕೆಯಿದೆ.

ಹೆನ್ರಿ ಸತ್ತು, ತನ್ನ ಜತೆಗಾರ ಹಾಲ್ ದೊರೆಯಾದ ಸುದ್ದಿ ಫಾಲ್‌ಸ್ಟಾಫನಿಗೆ ಮುಟ್ಟುತ್ತದೆ. ಇನ್ನು ತನ್ನ ಭಾಗ್ಯದ ಬಾಗಿಲು ತೆರೆಯಿತೆಂದು ಅವನು ರಾಜಧಾನಿಗೆ ಓಡಿ ಬರುತ್ತಾನೆ. ಬರುವ ಮೊದಲು, ತನ್ನ ನಾಳಿನ ಶ್ರೀಮಂತಿಕೆಯನ್ನು ಒತ್ತೆಯಿಟ್ಟ ಗೆಳೆಯ ಷ್ಯಾಲೊನಿಂದ ಸಾವಿರ ಪೌಂಡು ಕೈಸಾಲವನ್ನು ಎತ್ತಿದ್ದಾನೆ! ಆದರೆ ಈಗ ಅವನು ಹಾಲ್‌ನಲ್ಲಿ ಕಾಣುವುದು ಬುದ್ಧಿ ಬಲಿಯದ ಪೋಲಿಯನ್ನಲ್ಲ; ದೊರೆಯಾದ ಹೆನ್ರಿಯನ್ನು. "ನೀನಾರೋ ಕಾಣೆ. ನರೆತ ಕೂದಲಿಗೆ ಮಂಕುತನ, ನಕಲಿತನ ಒಪ್ಪದು" ಎಂದು ಹೇಳಿ ಹೆನ್ರಿ ಅವನನ್ನು ಧಿಕ್ಕರಿಸುತ್ತಾನೆ. ಅಧಿಕಾರಿಗಳು ಫಾಲ್‌ಸ್ಟಾಫನನ್ನೂ ಅವನ ಪುಂಡ ತಂಡವನ್ನೂ ಸೆರೆಗೆ ಕಳಿಸುತ್ತಾರೆ.

## 5. ದಿ ಲೈಫ್ ಅಫ್ ಕಿಂಗ್ ಹೆನ್ರಿ ದಿ ಫಿಫ್ತ್

**ರಚನೆ:** 1598-9. **ಮೊದಲ ಪ್ರಕಟನೆ:** 1600.

**ಆಕರಗಳು:** 'ಹೆನ್ರಿ ದಿ ಫೋರ್ತ್'ನವೇ.

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು:** 1414-20. ಫ್ರಾನ್ಸಿನೊಡನೆ ಯುದ್ಧ; ಹಾರ್‌ಫ್ಲರನ ಮುತ್ತಿಗೆ; ಆ್ಯಜಿನ್‌ಕೋರ್ಟಿನ ಕದನ; ಟ್ರಾಯ್ಸ್ ಒಡಂಬಡಿಕೆ; ಫ್ರಾನ್ಸಿನ ಕ್ಯಾಥರೀನಳೊಡನೆ ಐದನೆ ಹೆನ್ರಿಯ ಲಗ್ನನಿಶ್ಚಯ.

**ಕಥೆ:** ಸಾಯುವ ಮುನ್ನ ತಂದೆ ಕೊಟ್ಟ ಉಪದೇಶದಂತೆ ಹೆನ್ರಿ ಫ್ರಾನ್ಸಿನೊಡನೆ ಯುದ್ಧ ಹೂಡಿ ಸೋಲಿಸಿ, ಅಲ್ಲಿನ ರಾಜಕುಮಾರಿ ಕ್ಯಾಥರೀನಳನ್ನು ವರಿಸುವುದು ಈ ನಾಟಕದ ಕಥಾವಸ್ತು. ಇಲ್ಲಿರುವುದು ಕಥೆಗಿಂತ ಹೆಚ್ಚಾಗಿ ಐದನೆ ಹೆನ್ರಿಯ ಜೀವನದಲ್ಲಿ ನಡೆದ ಘಟನೆಗಳ ಮಾಲೆ. ದೇಶಪ್ರೇಮಭರಿತವಾದ ಸುಂದರ ಕಾವ್ಯ ವಾಗ್ಝರಿಯಾಗಿ ಹರಿದು ನಾಟಕ 'ಐದು ಅಂಕಗಳ ಇಂಗ್ಲಂಡಿನ ರಾಷ್ಟ್ರಗೀತೆ' ಎನಿಸಿಕೊಂಡಿದೆ. ಷೇಕ್‌ಸ್ಪಿಯರನ ಚಾರಿತ್ರಕ ನಾಟಕಗಳಲ್ಲೆಲ್ಲ ಕಾವ್ಯಮಯತೆಗೆ ಪ್ರಸಿದ್ಧವಾಗಿದೆ.

ದೇಶದಲ್ಲಿ ಶಾಂತಿ ನೆಲಸಬೇಕಾದರೆ ಹೊರದೇಶದೊಡನೆ ಯುದ್ಧ ಹೂಡಿ ದಂಗೆಕೋರರ ಗಮನವನ್ನು ಅತ್ತ ತಿರುಗಿಸಬೇಕೆಂದು ತಂದೆ ಕೊಟ್ಟಿದ್ದ ಉಪದೇಶವನ್ನು ಆಚರಣೆಗೆ ತರಲು ಹೆನ್ರಿ ಹಾತೊರೆಯುತ್ತಿದ್ದಾನೆ. ಅವನ ಗರುಡದೃಷ್ಟಿ ಫ್ರಾನ್ಸಿನ ಮೇಲೆ. ಅಲ್ಲಿನ ಕಾನೂನಿನ ಪ್ರಕಾರ ಸ್ತ್ರೀಸಂತಾನಕ್ಕೆ ರಾಜ್ಯದ ಉತ್ತರಾಧಿಕಾರದ ಹಕ್ಕಿಲ್ಲ. ಇದರಿಂದಾಗಿ ಹೆನ್ರಿಯ ಪೂರ್ವಿಕ ಮೂರನೆ ಎಡ್ವರ್ಡನ ಕಾಲದಲ್ಲಿ ಇಂಗ್ಲಂಡಿನ

ಆಧಿಪತ್ಯಕ್ಕೆ ಬರಬೇಕಾಗಿದ್ದ ಫ್ರಾನ್ಸ್ ಬಾರದೆಯೇ ಉಳಿದಿದೆ. ಹೆನ್ರಿ ಈಗ ಅಲ್ಲಿನ ಕೆಲ ಪ್ರಾಂತಗಳನ್ನು ಕೇಳುತ್ತಿದ್ದಾನೆ. ಕ್ಯಾಂಟರ್‌ಬರಿಯ ಧರ್ಮಗುರು ಹೆನ್ರಿಯ ಆಸೆಗೆ ನ್ಯಾಯ, ಧರ್ಮಗಳ ಮುದ್ರೆಯೊತ್ತಿ ಅದಕ್ಕೆ ಹಕ್ಕಿನ ಘನತೆ ಕೊಡುತ್ತಾನೆ.

ಆರನೆಯ ಚಾರ್ಲ್ಸ್ ಫ್ರಾನ್ಸಿನ ದೊರೆ. ಅವನ ಮಗ ಲೂಯಿ ಡಾಫಿನ್ ಸೊಕ್ಕಿನ ಯುವಕ. ಬಂಡವಾಳ ಮೀರಿದ ಬಡಾಯಿ ಅವನದು. ಅವನಿಗೆ ಹೆನ್ರಿಯ, ಇಂಗ್ಲಿಷ್



ರಾಜಕುಮಾರಿ ಕ್ಯಾಥರೀನ್

ಸೈನ್ಯಶಕ್ತಿಯ ಅಗಾಧತೆಯ ಕಲ್ಪನೆಯಿಲ್ಲ. ಹೆನ್ರಿಯ ಬೇಡಿಕೆಗೆ ಪ್ರತಿಯಾಗಿ ಟೆನಿಸ್ ಚೆಂಡುಗಳನ್ನು ಬಹುಮಾನವಾಗಿ ಕಳಿಸಿಕೊಟ್ಟು ಗೇಲಿಮಾಡುತ್ತಾನೆ. ಹೆನ್ರಿ ಆ ಚೆಂಡುಗಳನ್ನು ಗುಂಡುಗಳಾಗಿ ತಿರುಗಿಸುವ ಪಣ ತೊಟ್ಟು, ಯುದ್ಧದ ಸಿದ್ಧತೆ ಮಾಡುತ್ತಾನೆ.

ಇತ್ತ ದೊರೆಯಿಂದ ಪರಿತ್ಯಜ್ಯನಾಗಿ ಎದೆಯೊಡೆದ ಫಾಲ್‌ಸ್ಟಾಫ್ ದುರ್ಧರ ರೋಗಗಳಿಗೆ ತುತ್ತಾಗಿ ಸಾಯುತ್ತಾನೆ. ಅದರ ಹೃದಯಸ್ಪರ್ಶಿ ವರ್ಣನೆ ದೊರೆಯುವುದು ಮಿಸ್ಟ್ರೆಸ್ ಕ್ವಿಕ್ಲಿಯಿಂದ. ಅವಳ ಜೀವನದಲ್ಲೂ ತುಂಬಾ ಮಾರ್ಪಾಡಾಗಿದೆ. ಅವಳು ಈಗ ಗೃಹಿಣಿ! ಫಾಲ್‌ಸ್ಟಾಫ್ ತಂಡದ ಪಿಸ್ಟಲ್ ಅವಳನ್ನು ಲಗ್ನವಾಗಿದ್ದಾನೆ. ಅವನು ಹಾಗೂ ಆ ತಂಡದಲ್ಲಿ ಕೊನೆಗೆ ಉಳಿದ ಇನ್ನಿಬ್ಬರು ಸದಸ್ಯರಾದ ನಿಮ್ ಮತ್ತು ಬಾರ್ಡೊಲ್ಫರು ಯುದ್ಧದ ಸುದ್ದಿ ಕೇಳಿ ಸೈನ್ಯ ಸೇರಲು ತೀರ್ಮಾನಿಸುತ್ತಾರೆ.

ಹೆನ್ರಿಯ ಸೈನ್ಯ ಫ್ರಾನ್ಸಿನತ್ತ ನಡೆದಿದೆ. ದಾರಿಯಲ್ಲಿ, ಸೌತ್ಯಾಂಪ್ಟನಿನಲ್ಲಿ, ಫ್ರೆಂಚರಿಂದ ಲಂಚ ತಿಂದು ತನ್ನನ್ನು ಕೊಲ್ಲುವ ಸಂಚು ಹೂಡಿದ್ದ ಮೂವರು ಇಂಗ್ಲಿಷ್ ಶ್ರೀಮಂತರನ್ನು ಹೆನ್ರಿ ಮರಣದಂಡನೆಗೆ ಗುರಿ ಮಾಡುತ್ತಾನೆ. ಇನ್ನಾದರೂ ಫ್ರಾನ್ಸಿನ

ರಾಜ್ಯಮುಕುಟಗಳನ್ನು ತನಗೊಪ್ಪಿಸದಿದ್ದರೆ ಯುದ್ಧ ಖಂಡಿತವೆಂದು ಚಾರ್ಲ್ಸ್ ಮತ್ತು ಡಾಫಿನರಿಗೆ ಅಂತ್ಯನಿರ್ದೇಶ ಕಳಿಸುತ್ತಾನೆ.

ಹೆನ್ರಿ ಅದ್ಭುತ ರಾಜತಂತ್ರಕೌಶಲ ಪ್ರದರ್ಶಿಸಿ, ಮುರಿದೊಡೆದಿದ್ದ ವೆಲ್ಸ್, ಸ್ಕಾಟ್, ಐರಿಷ್ ಮತ್ತು ತನ್ನ ಇಂಗ್ಲಿಷ್ ಬಣಗಳನ್ನು ಒಂದೇ ಧ್ವಜದಡಿ ಕೂಡಿಸಿ, ಫ್ರಾನ್ಸಿನ ಹಾರ್‌ಫ್ಲರ್ ನಗರಕ್ಕೆ ಮುತ್ತಿಗೆ ಹಾಕಿ ಅದನ್ನು ಕೈವಶಮಾಡಿಕೊಳ್ಳುತ್ತಾನೆ. ಅವನ ಸೈನ್ಯ ಅನಾರೋಗ್ಯ, ಆಹಾರಾಭಾವ, ನಿರಂತರ ಕದನಗಳಿಂದ ಬೇಸತ್ತಿದ್ದರೂ ಎದೆಗೆಡದೆ ಕ್ಯಾಲೇ ನಗರದತ್ತ ಮುನ್ನಡೆಯುತ್ತದೆ. ಹೆನ್ರಿಯ ವ್ಯಕ್ತಿತ್ವ, ನೇತೃತ್ವಗಳಲ್ಲಿ ಅಂಥ ಚೈತನ್ಯ ತುಂಬುವ ಚಮತ್ಕಾರವಿದೆ. ಇಲ್ಲಿ ಸಹ ಹೆನ್ರಿಗೆ ತನ್ನದೇ ತಂತ್ರ: ತಲೆ ಮರಸಿಕೊಂಡು ಶಿಬಿರಗಳಲ್ಲಿ ಓಡಾಡುತ್ತಾನೆ, ಸೈನಿಕರನ್ನು ಪರೀಕ್ಷಿಸುತ್ತಾನೆ, ಸೋತವರನ್ನು ಹುರಿದುಂಬಿಸುತ್ತಾನೆ. ಒಂಟಿಯಿದ್ದಾಗ ರಾಜನ ಹೊಣೆಗಾರಿಕೆಯನ್ನು ಕುರಿತು ಚಿಂತಿಸುತ್ತಾನೆ (ಪುಟ 203). ಅವನ ಹಳೆಯ ಹಾಸ್ಯಪ್ರಿಯತೆ ಹೋಗಿಲ್ಲ. ವೈಯಕ್ತಿಕವಾಗಿ ಸೈನಿಕರೊಡನೆ ಯಾವುದಾದರೊಂದು ವಿಷಯವಾಗಿ ಪಣ ತೊಟ್ಟು ಯುದ್ಧ ಮುಗಿದ ಮೇಲೆ ಅದರ ತೀರ್ಮಾನವಾಗಲೆಂದು ಗುರುತು ಕೊಟ್ಟು ಬರುತ್ತಾನೆ.

ಆ್ಯಜಿನ್‌ಕೋರ್ಟ್ ಬಳಿ ಇಂಗ್ಲಿಷ್ ಮತ್ತು ಫ್ರೆಂಚರ ನಡುವೆ ಭೀಕರ ಕದನವಾಗುತ್ತದೆ. ಫ್ರೆಂಚರ ಸೈನ್ಯ, ಸಲಕರಣೆ ದೊಡ್ಡದು. ಆದರೆ ದುರಹಂಕಾರವೇ ಅವರ ಕುತ್ತಾಗುತ್ತದೆ. ಹೆನ್ರಿಯ ದಂಡನೈಪುಣ್ಯ ಅವರಿಗೆಲ್ಲಿ ಬಂತು? ಅಂತಿಮದಲ್ಲಿ ಅವರಿಗೆ ಸೋಲಾಗುತ್ತದೆ. ಬರ್ಗಂಡಿಯ ಡ್ಯೂಕನ ಸಂಧಾನದಲ್ಲಿ ಚಾರ್ಲ್ಸ್ ಹೆನ್ರಿಯ ಬೇಡಿಕೆಯನ್ನು ಮನ್ನಿಸಿ, ತನ್ನ ಚೆಲುವೆ ಮಗಳು ಕ್ಯಾಥರೀನಳನ್ನು ಅವನಿಗೆ ಧಾರೆಯೆರೆದು ಕೊಟ್ಟು, ಫ್ರೆಂಚ್ ಸಿಂಹಾಸನದ ಮೇಲಿನ ಅವನ ಉತ್ತರಾಧಿಕಾರವನ್ನು ಒಪ್ಪುತ್ತಾನೆ.

ಬಾರ್ಡೋಲ್ಫ್ ಮತ್ತು ನಿಮ್ ಸೈನ್ಯದಲ್ಲಿ ಕಳ್ಳತನ, ಲೂಟಿ ಮಾಡುತ್ತಿದ್ದರೆಂದು ಅವರಿಗೆ ನೇಣಾಗುತ್ತದೆ.

## 6. ದಿ ಫಸ್ಟ್ ಪಾರ್ಟ್ ಅಫ್ ಕಿಂಗ್ ಹೆನ್ರಿ ದಿ ಸಿಕ್ಸ್ತ್

**ರಚನೆ:** 1589-90. **ಮೊದಲ ಪ್ರಕಟನೆ:** 1623.

**ಆಕರಗಳು:** ಎಡ್ವರ್ಡ್ ಹಾಲ್‌ನ 'ದಿ ಯೂನಿಯನ್ ಅಫ್ ದಿ ಟು ನೋಬಲ್ ಅಂಡ್ ಇಲುಸ್ಟ್ರ ಫ್ಯಾಮಿಲೀಸ್ ಅಫ್ ಲ್ಯಾಂಕಾಸ್ಟರ್ ಅಂಡ್ ಯಾರ್ಕ್'; ಜೋನ್ ಅಫ್ ಆರ್ಕಳಿಗೆ ಸಂಬಂಧಿಸಿದ ಘಟನೆಗಳಿಗೆ ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್'.

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು:** 1422-53. ಐದನೆ ಹೆನ್ರಿಯು ಸಾವು; ಆರ್ಲಿಯನ್ಸ್ ನಗರದ ಮುತ್ತಿಗೆ; ಪ್ಯಾರಿಸ್‌ನಲ್ಲಿ ಆರನೆ ಹೆನ್ರಿಯ ಪಟ್ಟಾಭಿಷೇಕ; ಟ್ಯಾಲ್ಬಟನ ಮರಣ; ಜೋನ್ ಅಫ್ ಆರ್ಕಳ ಸೆರೆ ಮತ್ತು ಮರಣದಂಡನೆ; ಆ್ಯಂಜೂವಿನ ಮಾರ್ಗರಿಟಳೊಂದಿಗೆ ಆರನೆ ಹೆನ್ರಿಯ ವಿವಾಹ.

ಇದರ ರಚನೆಯಲ್ಲಿ ಷೇಕ್‌ಸ್ಪಿಯರನ ಜೊತೆಗೆ ಇನ್ನೂ ಒಬ್ಬ ಅಥವಾ ಹೆಚ್ಚು ಮಂದಿ ಲೇಖಕರ ಕೈವಾಡವಿದೆಯೆಂದು ಪಂಡಿತರ ಮತ. ಆ ಪ್ರಕಾರ, ಮುಖ್ಯವಾಗಿ ಇಂಗ್ಲಿಷ್

ದೃಶ್ಯಗಳು, ಅವುಗಳಲ್ಲೂ ಎರಡನೆ ಅಂಕದಲ್ಲಿ ಗುಲಾಬಿಗಳನ್ನು ಕೀಳುವ ಟೆಂಪಲ್ ಗಾರ್ಡನ್ ದೃಶ್ಯ ಷೇಕ್ಸ್ಪಿಯರನವು; ಫ್ರೆಂಚರ ದೃಶ್ಯಗಳು ಬಹುವಾಗಿ ಬೇರೆಯವರವು.

**ಕಥೆ:** ಯಾರ್ಕ್ ಮತ್ತು ಲ್ಯಾಂಕಾಸ್ಟರ್ ಇಂಗ್ಲಂಡ್ ರಾಜಮನೆತನದ ಎರಡು ಪ್ರಬಲ, ಪರಸ್ಪರ ವಿರುದ್ಧ ಪಕ್ಷಗಳು. ಬಿಳಿಗುಲಾಬಿ, ಕೆಂಗುಲಾಬಿಗಳನ್ನು ತಮ್ಮ ಸಂಕೇತವಾಗಿಟ್ಟು 'ಗುಲಾಬಿಗಳ ಯುದ್ಧ'ವೆಂಬ ಹೆಸರಿನಲ್ಲಿ ಇವು ತಮ್ಮೊಳಗೆ ಆಡಿದ ಒಳಜಗಳ, ಕಚ್ಚಾಟ, ಕದನಗಳು ಮೂರು ಭಾಗಗಳಲ್ಲಿರುವ 'ಹೆನ್ರಿ ದಿ ಸಿಕ್ಸ್ತ್' ನಾಟಕ ಮಾಲೆಯ ಕಥಾವಸ್ತು. ಇದು ಆ ಮಾಲೆಯ ಮೊದಲ ಭಾಗ.

ಸೋಲರಿಯದ ದೊರೆ ಐದನೆ ಹೆನ್ರಿ ಸಾವಿಗೆ ಸೋತು ಅಮರನಾಗಿದ್ದಾನೆ. ಅವನ ಆದರ್ಶ ರಾಜ್ಯಭಾರ, ಅವನು ದೇಶದಲ್ಲಿ ಸಾಧಿಸಿದ ಶಾಂತಿ, ಸಾಮರಸ್ಯ, ಭದ್ರತೆಗಳೆಲ್ಲ ಅವನೊಡನೆಯೇ ಅಳಿದಿವೆ. ಅವನ ಸಾವಿನ ದುಃಖದಲ್ಲಿ ಮುಳುಗಿದ ಇಂಗ್ಲಂಡಿಗೆ ಅದೊಂದೇ ಸಾಲದೆಂಬಂತೆ ಒಂದರ ಹಿಂದೊಂದರಂತೆ ಅನೇಕ ಪೆಟ್ಟುಗಳು ಬೀಳುತ್ತವೆ. ಇನ್ನೂ ಅವನ ಶವಸಂಸ್ಕಾರವಾಗುವುದಕ್ಕಿಲ್ಲ, ಅವನು ಗೆದ್ದಿದ್ದ ಫ್ರಾನ್ಸಿನ ಪ್ರದೇಶಗಳನ್ನು ಫ್ರೆಂಚರು ಮತ್ತೆ ಕಸಿದುಕೊಂಡಿದ್ದಾರೆ. ಅಲ್ಲಿ ಚಾರ್ಲ್ಸ್ ಡಾಫಿನ್ ಪಟ್ಟಾಭಿಷಿಕ್ತನಾಗಿದ್ದಾನೆ. ಇಂಗ್ಲಿಷ್ ಸೇನಾಪತಿ ವೀರ ಟ್ಯಾಲ್ಬಟ್ ಫ್ರೆಂಚರಿಗೆ ಸೆರೆ ಸಿಕ್ಕಿದ್ದಾನೆ.

ದೊರೆಮಗ ಆರನೆ ಹೆನ್ರಿಯಿನ್ನೂ ಎಳೆಗೂಸು. ಅವನ ಸುತ್ತ ಅವನೆಲ್ಲ ಚಿಕ್ಕಪ್ಪ ದೊಡ್ಡಪ್ಪಂದಿರು ಮುತ್ತಿಕೊಂಡು, ಬಣಗಳನ್ನು ಕಟ್ಟಿ, ತಮ್ಮ ತಮ್ಮ ಹಿತಾಸಕ್ತಿಗಳನ್ನು ಬೆಳಸಿಕೊಳ್ಳುತ್ತಿದ್ದಾರೆ. ಇವರಲ್ಲಿ ಮೊದಲು ದೊರೆಮಗನ ಚಿಕ್ಕಪ್ಪ, ಗ್ಲಾಸ್ಟರಿನ ಡ್ಯೂಕನಾದ ರಾಜಪಾಲಕ ಹಂಫ್ರಿಗೂ ಅವನ ಚಿಕ್ಕಜ್ಜ, ವಿಂಚೆಸ್ಟರನ ಪಾದ್ರಿ ಹೆನ್ರಿ ಬೋಫರ್ಟನಿಗೂ ಮನಸ್ತಾಪ ಹುಟ್ಟಿ, ಅವರು ತಮ್ಮ ಆಳುಗಳನ್ನು ಕೂಡಿಸಿಕೊಂಡು ಹಾದಿಬೀದಿಯಲ್ಲೇ ಗುದ್ದಾಡುತ್ತಾರೆ.

ಪ್ರತಿಪಕ್ಷದ ಒಬ್ಬ ಯುದ್ಧಬಂದಿಗೆ ವಿನಿಮಯಗೊಂಡು ಟ್ಯಾಲ್ಬಟ್ ಫ್ರೆಂಚರಿಂದ ಬಿಡುಗಡೆ ಪಡೆದು ಮತ್ತೆ ಕಾಳಗದ ಕಣಕ್ಕಿಳಿಯುತ್ತಾನೆ. ಇನ್ನೊಬ್ಬ ಇಂಗ್ಲಿಷ್ ವೀರ ಸಾಲ್ಸ್‌ಬರಿ ಅವನಿಗೆ ಬೆಂಬಲನಾಗಿದ್ದಾನೆ. ಆದರೆ ಅವರ ಕೆಚ್ಚಿಗೆ ಸರಿತೂಗುವ ಸಹಾಯ ಸಾಮಗ್ರಿಗಳು ರಾಜನ ಕಡೆಯವರಿಂದ ದೊರೆಯದೆ ಹೋಗುತ್ತವೆ.

ಈ ನಡುವೆ ಫ್ರೆಂಚರ ಶಕ್ತಿಯನ್ನು ಬಲಗೊಳಿಸುವ ಒಂದು ಸಂಗತಿ ನಡೆಯುತ್ತದೆ. ಒಬ್ಬ ಕುರುಬ ಕನ್ನೆ — ಜೋನ್ ಆಫ್ ಆರ್ಕ್ — ತಾನು ದೇವದೂತಳೆಂದುಕೊಂಡು ಚಾರ್ಲ್ಸ್ ದೊರೆಯ ಮೆಚ್ಚಿಗೆ ಗಳಿಸಿ ಕಾಳಗಕ್ಕೆ ಇಳಿಯುತ್ತಾಳೆ. ಆರ್ಲಿಯನ್ಸ್‌ನ ಮುತ್ತಿಗೆಗೆ ತೊಡಗುತ್ತಾಳೆ. ಇಂಗ್ಲಿಷರ ದುರದೃಷ್ಟ, ಸಾಲ್ಸ್‌ಬರಿಯನ್ನು ಒಬ್ಬ ಫ್ರೆಂಚ್ ಗುಂಡಿನಾಳು ಮೋಸದಿಂದ ಕೊಲ್ಲುತ್ತಾನೆ. ಟ್ಯಾಲ್ಬಟ್ ಈಗ ಏಕಾಕಿ. ಆರ್ಲಿಯನ್ಸ್ ನಗರ ಒಮ್ಮೆ ಇಂಗ್ಲಿಷರ ಕೈ ಬಿಟ್ಟು, ಮತ್ತೆ ಇನ್ನೊಂದು ಹೋರಾಟದಲ್ಲಿ ವಾಪಸು ದೊರೆಯುತ್ತದೆ.

ಇತ್ತ ಇಂಗ್ಲಂಡಿನಲ್ಲಿ ದೊರೆಯ ದಾಯಾದಿಗಳ ನಡುವಿನ ತಿಕ್ಕಾಟ ದಿನೇ ದಿನೇ ಬಿರುಸಾಗುತ್ತಿದೆ. ಯಾರ್ಕರ ಹಿರಿಯ ರಿಚರ್ಡ್ ಪ್ಲ್ಯಾಂಟಾಜೆನೆಟ್ ಮತ್ತು ಲ್ಯಾಂಕಾಸ್ಟರರ ಹಿರಿಯ ಸಮರ್‌ಸೆಟ್‌ನ ಅರ್ಲರು ಇಂಗ್ಲಂಡಿನ ಸಿಂಹಾಸನದ ಮೇಲೆ ತಮ್ಮ ತಮ್ಮ ಹಕ್ಕು ಸ್ಥಾಪಿಸಿದ್ದಾರೆ. ಜಗಳ ಬಗೆಹರಿಯದು. ಅವರಿಬ್ಬರೂ ನಾಡಿನ ನ್ಯಾಯ-

ಪಂಡಿತರನ್ನು ಕೂಡಿಸಿಕೊಂಡು ಅರಮನೆಯ ತೋಟದಲ್ಲಿ ಸೇರುತ್ತಾರೆ. ಎಲ್ಲರ ಮುಖದಲ್ಲೂ ಮೌನ, ಬಿಗಿತ. ಕೊನೆಗೆ ಯಾರ್ಕ್ ಮತಗಣನೆಯ ಆಧಾರದ ಮೇಲೆ ವಿವಾದದ ಇತ್ಯರ್ಥವಾಗಲೆನ್ನುತ್ತಾನೆ. ಅವನ ಪರ ಇದ್ದವರು ಆ ತೋಟದ ಒಂದೊಂದು ಬಿಳಿ ಗುಲಾಬಿಯನ್ನು, ಸಮರ್‌ಸೆಟ್‌ಗೆ ಪರವಾದವರು ಒಂದೊಂದು ಕೆಂಗುಲಾಬಿಯನ್ನು ಕಿತ್ತು ಮತ ಸೂಚಿಸುತ್ತಾರೆ. ಬಹುಮತ ಬಿಳಿ ಗುಲಾಬಿಯ ಯಾರ್ಕನಿಗೆ. ಮುಂದಿನ 'ಗುಲಾಬಿಗಳ ಯುದ್ಧ'ಕ್ಕೆ ಇದು ನಾಂದಿ.

ಹಿಂದೆ ಐದನೆ ಹೆನ್ರಿ ರಾಜದ್ರೋಹಕ್ಕಾಗಿ ಗಲ್ಲಿಗೇರಿಸಿದ್ದ ಮೂವರು ಶ್ರೀಮಂತರಲ್ಲಿ ಯಾರ್ಕನ ತಂದೆಯೂ ಒಬ್ಬ. ಎರಡನೆ ರಿಚರ್ಡನ ನಂತರ ಸಿಂಹಾಸನವೇರಲು ಹೆನ್ರಿಯ ಸಂತತಿಗಿಂತ ಮೇಲಾಗಿ ತನ್ನದೇ ನ್ಯಾಯಬದ್ಧವಾದ ಹಕ್ಕೆಂಬುದಕ್ಕೆ ಯಾರ್ಕನಿಗೆ ಹೊಸ ಆಧಾರಗಳು ಸಿಗುತ್ತವೆ. ಅವನು ಹಕ್ಕನ್ನು ಮುಂದೊತ್ತಿ ದೊರೆಯಿಂದ ತನ್ನ ತಂದೆಯ ಮರಣಾನಂತರ ಕಳೆದು ಹೋಗಿದ್ದ ಡ್ಯೂಕ್ ಪಟ್ಟವನ್ನು ಸಂಪಾದಿಸುತ್ತಾನೆ.

ಫ್ರಾನ್ಸಿನಲ್ಲಿ ಜೋನಳ ಸೇನಾಧಿಪತ್ಯದಲ್ಲಿ ಫ್ರೆಂಚರು ರೂವ್ಹಾ ಪಟ್ಟಣವನ್ನು ಗೆದ್ದು, ಮತ್ತೆ ಕಳೆದುಕೊಳ್ಳುತ್ತಾರೆ. ಇಂಗ್ಲಿಷರ ಪರ ಕಾದುತ್ತಿದ್ದ ಬರ್ಗಂಡಿಯ ಡ್ಯೂಕನನ್ನು ಜೋನ್ ಸಿಹಿಮಾತುಗಳಿಂದ ಮರುಳುಮಾಡಿ ತಮ್ಮ ಕಡೆ ಒಲಿಸಿಕೊಳ್ಳುತ್ತಾಳೆ.

ಇಂಗ್ಲಿಷ್ ದೊರೆಜನ ಆರನೆ ಹೆನ್ರಿಗೆ ಪ್ಯಾರಿಸ್‌ನಲ್ಲಿ ಪಟ್ಟಾಭಿಷೇಕ ಮಾಡುವುದೆಂದು ನಿರ್ಧರಿಸಿ, ಎಲ್ಲರೂ ಅಲ್ಲಿಗೆ ತೆರಳುತ್ತಾರೆ. ಮುಹೂರ್ತದ ಹೊತ್ತಿನಲ್ಲಿ ಯಾರ್ಕ್ – ಲ್ಯಾಂಕಾಸ್ಟರರ ನಡುವೆ ಮತ್ತೆ ಹಗರಣವೆದ್ದು, ಹೇಗೋ ತಾತ್ಕಾಲಿಕ ಸಮಾಧಾನವೂ ಆಗುತ್ತದೆ. ಯಾರ್ಕ್ ಫ್ರಾನ್ಸಿನಲ್ಲಿ ಇಂಗ್ಲಂಡಿನ ರಾಜಪ್ರತಿನಿಧಿಯ ಹುದ್ದೆ ಪಡೆಯುತ್ತಾನೆ. ಅವನಿಗೆ ಕಾಲಾಳು-ಪಡೆಯ, ಸಮರ್‌ಸೆಟ್‌ಗೆ ಕುದುರೆ-ಪಡೆಯ ದಂಡಾಧಿಕಾರ ದೊರೆತು ಅವರು ಫ್ರೆಂಚರ ವಿರುದ್ಧ ಸೈನ್ಯ ಕೊಂಡು ಹೋಗುತ್ತಾರೆ. ಟ್ಯಾಲ್ಬಟ್ ಬರ್ಗಂಡಿಯ ಡ್ಯೂಕನಿಂದ ಬೋರ್ಡೋ ಪಟ್ಟಣವನ್ನು ಕಸಿದುಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಆದರೆ ಯಾರ್ಕ್ – ಲ್ಯಾಂಕಾಸ್ಟರರ ನಡುವಿನ ಅಸಹಕಾರದಿಂದಾಗಿ ಅವನಿಗೆ ಸಾಕಷ್ಟು ಸೈನ್ಯದ ಪೂರೈಕೆಯಾಗದೆ ಅವನೂ ಅವನ ವೀರಪುತ್ರನೂ ಸೋಲುವಂತಾಗುತ್ತದೆ. ಮಗ ಸಾಯುತ್ತಾನೆ. ಎದೆಯೊಡೆದ ಟ್ಯಾಲ್ಬಟ್ ಮಗನ ಮೃತದೇಹವನ್ನು ತೆಕ್ಕೆಯಲ್ಲಪ್ಪಿ ಪ್ರಾಣ ನೀಗುತ್ತಾನೆ.

ಫ್ರೆಂಚರಿಗೆ ಯುದ್ಧ ಸಾಕಾಗಿದೆ. ಚಾರ್ಲ್ಸ್ ದೊರೆ ಮತ್ತು ಪೋಪರು ಇಂಗ್ಲಿಷರೊಡನೆ ಶಾಂತಿಯ ಸಂಧಾನ ನಡಸುತ್ತಾರೆ. ಸಂಧಿಯ ಅಂಗವಾಗಿ ಫ್ರೆಂಚರ ಆರ್ಮನಕ್ ಡ್ಯೂಕನ ಮಗಳನ್ನು ಹೆನ್ರಿಗೆ ಕೊಟ್ಟು ಮದುವೆ ಮಾಡುವುದೆಂದಾಗುತ್ತದೆ. ಈಗ ಕಾರ್ಡಿನಲ್ ಪದವಿಗೇರಿರುವ ಬೋಫರ್ಟ್ ಮಾತುಕತೆ ಮುಂದುವರಿಸಿ ಬರಲು ಫ್ರಾನ್ಸಿಗೆ ತೆರಳುತ್ತಾನೆ.

ಈ ನಡುವೆ ಆ್ಯಂಜಿಯರ್ಸ್‌ನಲ್ಲಿ ನಡೆದಿರುವ ಕದನದಲ್ಲಿ ಇಂಗ್ಲಿಷರ ಕೈ ಮೇಲಾಗಿ ಅವರು ಫ್ರೆಂಚರ ಜೀವವಾಗಿದ್ದ ಜೋನಳನ್ನು ಕೈಸೆರೆ ಹಿಡಿದು, ಅವಳಿಗೆ ಮಾಯಾವಿ, ಮಾನಗೆಟ್ಟ ಸೂಳೆ ಎಂದೆಲ್ಲ ಹೆಸರು ಕೊಟ್ಟು ಅವಳನ್ನು ಸುಟ್ಟು ಕೊಲ್ಲುತ್ತಾರೆ.

ಇದೇ ಹೊತ್ತಿಗೆ ಸಫಕ್‌ನ ಅರ್ಲನು ನೇಪಲ್ಸನ ದೊರೆಮಗಳಾದ ಮಾರ್ಗರಿಟಳನ್ನು ಸೆರೆ ಹಿಡಿದು, ಆ ಪರಮ ಸುಂದರಿಯ ಚೆಲುವಿಗೆ ತಾನೇ ಸೆರೆಯಾಗಿದ್ದಾನೆ. ಆದರೆ ತಾನಾಗಲೇ ವಿವಾಹಿತ; ಅವಳನ್ನು ವರಿಸುವ ಹಾಗಿಲ್ಲ. ಅವಳನ್ನು ನಾಮಮಾತ್ರಕ್ಕೆ ದೊರೆ ಹೆನ್ರಿಗೆ ಗಂಟು ಹಾಕಿ 'ಸ್ವಕಾರ್ಯ, ಸ್ವಾಮಿಕಾರ್ಯ'ಗಳೆರಡನ್ನೂ ತೀರಿಸಿಕೊಳ್ಳುವ ದುರಾಲೋಚನೆ ಮಾಡುತ್ತಾನೆ, ಆ ನೀತಿಭ್ರಷ್ಟ! ಅವನು ಬಣ್ಣಿಸುವ ಮಾರ್ಗರಿಟಳ ಚೆಲುವಿನ ಚಿತ್ರ ಹೆನ್ರಿಯ ಬಾಯಲ್ಲಿ ನೀರೂರಿಸುತ್ತದೆ. ಹೆನ್ರಿ ಆರ್ಮನಕ್‌ನ ಮಗಳೊಡನೆ ಆಗುವುದೆಂದಿದ್ದ ಮದುವೆಯ ಒಪ್ಪಂದವನ್ನು ಮುರಿದು, ಮಾರ್ಗರಿಟಳನ್ನು ಕರೆತರಲು ಸಫಕ್‌ನನ್ನು ಕಳಿಸುತ್ತಾನೆ. 'ಮಾರ್ಗರಿಟ್ ಈಗ ರಾಣಿ. ಅವಳು ದೊರೆಯನ್ನು ಆಳಲಿ. ನಾನು ಅವಳನ್ನೂ ಅವನನ್ನೂ ರಾಜ್ಯವನ್ನೂ ಆಳುವೆ'ನೆನ್ನುತ್ತ ಆ ಪಾಪಿ ಫ್ರಾನ್ಸಿಗೆ ಹೊರಡುತ್ತಾನೆ.

## 7. ದಿ ಸೆಕಂಡ್ ಪಾರ್ಟ್ ಅಫ್ ಕಿಂಗ್ ಹೆನ್ರಿ ದಿ ಸಿಕ್ಸ್ತ್

**ರಚನೆ**: 1590-1. **ಮೊದಲ ಪ್ರಕಟನೆ**: 1594.

**ಆಕರಗಳು**: ಹಾಲಿನ್‌ಷೆಡ್, ಹಾಲ್, ಹಾಗೂ ಪ್ರಾಯಶಃ ರಿಚರ್ಡ್ ಗ್ರಾಫ್ಟನ್ ಮತ್ತು ಜಾನ್ ಸ್ಟೋ ಅವರ ಚಾರಿತ್ರಕ ಕೃತಿಗಳು.

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು**: 1445-55. ಬಿಳಿ ಗುಲಾಬಿ ಮತ್ತು ಕೆಂಗುಲಾಬಿ ಪಂಗಡದವರ ನಡುವೆ ಯುದ್ಧ; ಗ್ಲಾಸ್ಟರ್‌ನ ಡ್ಯೂಕ್ ಹಂಫ್ರಿಯ ಕೊಲೆ; ಜ್ಯಾಕ್ ಕೇಡನ ಬಂಡಾಯ; ಸೇಂಟ್ ಆಲ್ಬನ್ಸ್‌ನಲ್ಲಿ ಯಾರ್ಕರ ವಿಜಯ.

**ಕಥೆ**: ಗ್ಲಾಸ್ಟರ್ – ಕಾರ್ಡಿನಲ್ ಬೋಫರ್ಟ್, ಯಾರ್ಕ್–ಲ್ಯಾಂಕಾಸ್ಟರ್ — ಈ ಪಕ್ಷ, ಪ್ರತಿಪಕ್ಷಗಳ ನಡುವೆ ತಾಂಡವವಾಡಿದ ದ್ವೇಷ, ಅಸೂಯೆ, ಉದ್ವೇಗ, ಉದ್ರೇಕ, ಕಲಹ, ಕೋಲಾಹಲಗಳ ಚಿತ್ರಣ ಈ ನಾಟಕ. ಮುಖ್ಯವಾಗಿ ಈ ಕಡೆ ಗ್ಲಾಸ್ಟರನ ಅಧಃಪತನ, ಬೋಫರ್ಟನ ಅಳಿವುಗಳನ್ನು, ಆ ಕಡೆ ಯಾರ್ಕನ ಭಾಗ್ಯತಾರೆ ಮೇಲೇರಿ, ಜೊತೆಗೇ ಹೆನ್ರಿಯ ಬೆಂಬಲಿಗರು ಸತ್ತು ಅವನ ದೊರೆತನ ಕ್ರಮೇಣ ಅಸ್ತಂಗತವಾಗುವುದನ್ನು ಇಲ್ಲಿ ಕಾಣುತ್ತೇವೆ.

ಮಾರ್ಗರಿಟ್ ಹೆನ್ರಿಯ 'ರಾಣಿ'ಯಾಗಿ ಇಂಗ್ಲಂಡಿಗೆ ಬಂದಿದ್ದಾಳೆ. ಅವಳಿಗೊಲಿದ ಸಫಕ್ ಇಂಗ್ಲಂಡಿನ ಗೌರವಕ್ಕೆ ಕಳಂಕ ತಟ್ಟುವಂತಹ ಕರಾರಿನ ಮೇಲೆ ಅದನ್ನು ಆಗು ಮಾಡಿಸಿದ್ದಾನೆ. ಪದ್ಧತಿಯಂತೆ ಬಳುವಳಿ ತರುವುದಿರಲಿ, ಇಂಗ್ಲಂಡಿಗೆ ಸೇರಬೇಕಾದ ಕೆಲ ಪ್ರದೇಶಗಳ ಆಧಿಪತ್ಯವನ್ನು ಮಾರ್ಗರಿಟಳ ಅಪ್ಪನಿಗೇ ಬಿಟ್ಟು ಕೊಡಲು ಒಪ್ಪಿ ಬಂದಿದ್ದಾನೆ. ಹೆನ್ರಿಗೂ ಇದು ಒಪ್ಪಿಗೆಯೇ. ಏಕೆಂದರೆ ಈವರೆಗೆ ಯಾವ ರಾಜನಿಗೂ ಅಷ್ಟು ಚೆಲುವೆ ರಾಣಿ ಸಿಕ್ಕಿಲ್ಲ! ತನ್ನ ಸಂತೋಷದಲ್ಲಿ ಸಫಕ್‌ನನ್ನು ಡ್ಯೂಕ್ ಪಟ್ಟಕ್ಕೆ ಏರಿಸಿ ಗೌರವಿಸುತ್ತಾನೆ. ಕರಾರನ್ನು ತೀವ್ರವಾಗಿ ಪ್ರತಿಭಟಿಸುವವನೆಂದರೆ ಗ್ಲಾಸ್ಟರಿನ ಡ್ಯೂಕ್ ರಾಜ-ಪಾಲಕ ಹಂಫ್ರಿ. ಈ ವಿರೋಧಕ್ಕೆ ಹಂಫ್ರಿ ತೆರಬೇಕಾಗಿ ಬರುವ ದಂಡ ಅಗಾಧವಾದುದು. ಅವನಿಗಾಗದ ಶ್ರೀಮಂತರೆಲ್ಲರೂ ಅವನನ್ನು ರಾಜಪಾಲಕ ಪದವಿಯಿಂದ ಕೆಳಗಿಳಿಸುವ

ಸನ್ನಾಹ ಮಾಡುತ್ತಾರೆ. ಕೊಡುವ ಕಾರಣ: ದೊರೆ ಈಗ ವಯಸ್ಸಿಗೆ ಬಂದಿದ್ದಾನೆ, ತನ್ನನ್ನು ತಾನು ಆಳಿಕೊಳ್ಳಬಲ್ಲ.

ಮಾರ್ಗರಿಟ್ ಗತ್ತಿನ ಹುಡುಗಿ. ಹೆನ್ರಿಯ ಮದುವೆದೆ, ರಾಜನಿಗಿಂತ ಮೇಲಾಗಿ ಸಂತಯೋಗ್ಯವಾದ ಅವನ ಗುಣ ಅವಳಿಗೆ ಹಿಡಿಸದು. ಮೊದಲೇ ಒಡೆದು ಹತ್ತು ಹೋಳಾದ ಇಂಗ್ಲಂಡಿನ ರಾಜಕಾರಣದಲ್ಲಿ ಅವಳು ತನ್ನ ಪಾತ್ರವನ್ನೂ ಸೇರಿಸುತ್ತಾಳೆ. ಹಂಫ್ರಿಯ ಪತ್ನಿ ಎಲಿನಾರಳನ್ನು ಕಂಡರೆ ಅವಳಿಗೆ ಮಹಾ ಅಸೂಯೆ. ಎಲಿನಾರ್ ಈ ಬಡ ಡ್ಯೂಕನ ಮಗಳನ್ನು ಹೀಯಾಳಿಸುತ್ತ, ತಾನೇ ರಾಣಿಯೆಂಬಂತೆ ಮೆರೆದಾಡು ತ್ತಿದ್ದಾಳೆ. ಷೇಕ್ಸ್ಪಿಯರ್ ಮುಂದೆ ಸೃಷ್ಟಿಸಿದ ಲೇಡಿ ಮೆಕ್‌ಬೆತಳ ಪೂರ್ವರೂಪ ವೇನೊ! ಮುಂದೊಮ್ಮೆ ರಾಣಿಯಾಗುವ ಚಪಲ ಬಲವಾಗಿದೆ. ಹಂಫ್ರಿಯ ವಿರೋಧಿ ಗಳಾದ ಕಾರ್ಡಿನಲ್ ಬೋಫರ್ಟ್ ಮತ್ತು ಸಫಕ್‌ರು ಮಾಯಮಂತ್ರದವರನ್ನು ಛೂ ಬಿಟ್ಟು ಎಲಿನಾರಳ ಕುತೂಹಲ ಕೆರಳಿಸುತ್ತಾರೆ. ಈ ವ್ಯೂಹದಲ್ಲಿ ರಾಣಿಯೂ ಶರೀಕು.

ಗ್ಲಾಸ್ಟರನ ತೋಟದಲ್ಲಿ ಮಾಟಗಾರರ ಕೂಟ ಸೇರಿ ಪ್ರೇತಗಳ ಆವಾಹನೆ ನಡೆದಿದೆ. ಎಲಿನಾರ್ ಮೂರು ಪ್ರಶ್ನೆಗಳನ್ನು ಕೇಳಿಸುತ್ತಾಳೆ. ಅವಕ್ಕೆ ಮಾರ್ಮಿಕವಾದ ಉತ್ತರ ಗಳು ದೊರೆಯುತ್ತವೆ:

'ದೊರೆಗೇನು ಕಾದಿದೆ?'—'ಅವನನ್ನು ಉರುಳಿಸುವ ಡ್ಯೂಕನಿಲ್ಲದೇ ಇಲ್ಲ!'

'ಸಫಕ್‌ನಿಗೆ?'—'ಅವನಿಗೆ ಜಲಮರಣ!'

'ಲ್ಯಾಂಕಾಸ್ಟರನಿಗೆ?'— 'ಅವನು 'ಕ್ಯಾಸಲ್' (ದುರ್ಗದ ಮನೆ)ಗಳಿಂದ ದೂರ ವಿರಲಿ!'

ಈ ಮಾಟಕೂಟದ ನಡುವೆಯೇ ಯಾರ್ಕ್ ಮತ್ತು ಇತರ ಶ್ರೀಮಂತರು ಬಂದು ಎಲಿನಾರಳನ್ನೂ ಮಂತ್ರವಾದಿಗಳನ್ನೂ ರಾಜದ್ರೋಹದ ಆಪಾದನೆಯ ಮೇಲೆ ಬಂಧಿಸು ತ್ತಾರೆ. ಅವಳ ವಿಚಾರಣೆಯಾಗಿ ದೇಶಾಂತರವಾಸದ ಶಿಕ್ಷೆಯಾಗುತ್ತದೆ. ಕಾನೂನಿನಿಂದ ಅವಳನ್ನು ರಕ್ಷಿಸಲಾಗದ ಗಂಡ ಹಂಫ್ರಿ ದುಃಖ ಅವಮಾನಗಳಿಂದ ಕುಸಿದು ತನ್ನ ಹುದ್ದೆಗೆ ರಾಜಿನಾಮೆ ಕೊಟ್ಟು ಏಕಾಂತ ಬಯಸುತ್ತಾನೆ. ಪ್ರತಿಪಕ್ಷದ ಶ್ರೀಮಂತರ ಹಾಗೂ ರಾಣಿಯ ಅಭೀಚ್ಛೆ ಪೂರೈಸುತ್ತದೆ. ಆದರೂ ಅವರ ಹಗೆ ತೀರದು. ಮುಖದ ಮೇಲೆ ಸತ್ಯ, ನಿಷ್ಠೆ, ಗೌರವಗಳ ನಕ್ಷೆಹೊತ್ತ ಆ ಧರ್ಮಾತ್ಮನ ಮೇಲೆ ರಾಜದ್ರೋಹ ಹೊರಿಸುತ್ತಾರೆ. ಹಂಫ್ರಿಯನ್ನು ಕಂಡರೆ ಜನತೆಗೆ ಪ್ರೀತಿಗೌರವಗಳಿವೆ. ನಾಳೆ ಸುದ್ದಿ ತಿಳಿದು ಅವರು ತಿರುಗಿಬೀಳಬಹುದೆಂಬ ಕಲ್ಪನೆ ಬಂದಾಗ ವಿಚಾರಣೆಗೆ ಮೊದಲೇ ಅವನನ್ನು ಕೊಲ್ಲಿಸುತ್ತಾರೆ. ಕೊಲೆಯ ಪಾರುಪತ್ಯ ಸಫಕ್‌ನದು; ಕೊಲೆಗಾರರ ಸರಬರಾಜು ಕಾರ್ಡಿನಲ್‌ದು!

ಈ ಮಧ್ಯೆ ಐರ್ಲಂಡಿನಲ್ಲಿ ದಂಗೆಯೆದ್ದಿದೆ. ಕಾರ್ಡಿನಲ್ ಮತ್ತು ಸಫಕ್‌ರು ತಮಗೆ ತಾವೇ ಆಡಳಿತಾಧಿಕಾರ ವಹಿಸಿಕೊಂಡು ದಂಗೆಯನ್ನು ಅಡಗಿಸಲು ಎದುರಾಳಿ ಯಾರ್ಕನನ್ನು ಅಲ್ಲಿಗೆ ಸಾಗಹಾಕುತ್ತಾರೆ. ಯಾರ್ಕ್ ಬಯಸುವುದೂ ಅದನ್ನೇ. ಅವನು ಈ ಮೊದಲೇ ಸಾಲ್ಸ್‌ಬರಿ, ವಾರಿಕ್ ಮುಂತಾದ ಶ್ರೀಮಂತರಿಗೆ ಗದ್ದುಗೆಯ ಮೇಲಿನ ತನ್ನ ಹಕ್ಕಿನ ಮನವರಿಕೆ ಮಾಡಿಕೊಟ್ಟು ಸಮಯ ಕಾಯುತ್ತಿದ್ದಾನೆ. ಈಗ

ಐರ್ಲ್ಯಾಂಡಿನಿಂದಲೇ ಸೈನ್ಯ ಕೂಡಿಸಿ ತಂದು ದೊರೆಯನ್ನು ಉರುಳಿಸುವ ಆಲೋಚನೆ ಮಾಡುತ್ತಾನೆ. ಹೋಗುವ ಮುಂಚೆ ಜ್ಯಾಕ್ ಕೇಡ್ ಎಂಬೊಬ್ಬ ಸಾಮಾನ್ಯ ಕೂಲಿಕಾರನನ್ನು ಎತ್ತಿ ಕಟ್ಟಿ ದೇಶದೊಳಗೆ ಗಲಭೆಯೆಬ್ಬಿಸುವಂತೆ ಪ್ರಚೋದಿಸುತ್ತಾನೆ. ನೀರು ಕದಡಿದಷ್ಟೂ ಮೀನು ಹಿಡಿಯುವುದು ಸುಲಭ!

ತಮ್ಮ ನೆಚ್ಚಿನ ಹಂಫ್ರಿಯ ಕೊಲೆಯ ಸುದ್ದಿ ಜನತೆಗೆ ತಿಳಿದು ಅವರು ಬಂಡಾಯ ಏಳುತ್ತಾರೆ. ಸಫಕ್‌ನ ಮೇಲೆ ಆರೋಪ ತರುತ್ತಾರೆ. ದೊರೆ ಅವನನ್ನು ದೇಶಬಿಟ್ಟು ಕಳಿಸಲು ಒಪ್ಪುತ್ತಾನೆ. ಮಾರ್ಗರಿಟ್ ಸಫಕ್‌ನಲ್ಲಿ ತನಗಿರುವ ಪ್ರೇಮವನ್ನು ತೋಡಿಕೊಂಡು ಅವನನ್ನು ಹಿಂದಕ್ಕೆ ಕರೆಸುವ, ಇಲ್ಲವೇ ತಾನೇ ಅವನನ್ನು ಹಿಂಬಾಲಿಸುವ ಪ್ರತಿಜ್ಞೆ ಮಾಡುತ್ತಾಳೆ. ಈ ನಡುವೆ ಕಾರ್ಡಿನಲ್ ಬೋಫರ್ಟನಿಗೆ ಮನೋರೋಗ. ಆ 'ದೇವರ ಮನುಷ್ಯ' ದೇವ, ಮನುಷ್ಯರಿಬ್ಬರನ್ನೂ ಶಪಿಸುತ್ತ ಸಾಯುತ್ತಾನೆ.

ಸಫಕ್ ಕೆಂಟ್ ತೀರದಾಚೆ ಕಡಲಗಳ್ಳರ ಕೈಗೆ ಸಿಕ್ಕಿಬಿದ್ದು ಅವರಿಂದ ಕೊಲೆಯಾಗುತ್ತಾನೆ. ಹಿಂದೆ ಎಲಿನಾರಳಿಗೆ ದೊರೆತಿದ್ದ ಅವನ ಜಲಮರಣದ ಭವಿಷ್ಯ ನಿಜವಾದಂತಾಗುತ್ತದೆ. ಅವನ ರುಂಡ ಮಾರ್ಗರಿಟಳಿಗೆ ತಲಪಿ, ತಬ್ಬಲು ಮುಂಡವಿಲ್ಲದೇ ಹೋಯಿತಲ್ಲ ಎಂದು ಅವಳು ಮಿಂಡನ ಸಾವಿಗೆ ಕಣ್ಣೀರು ಹಾಕುತ್ತಾಳೆ!

ಇಂದಿನ ಪುಢಾರಿಗಳನ್ನು ನೆನಪಿಗೆ ತರುವ ಜ್ಯಾಕ್ ಕೇಡ್ ದೊಂಬಿ ಕಟ್ಟಿಕೊಂಡು ಲಂಡನ್ ಸೇತುವೆಯನ್ನು ಮುತ್ತಿದ್ದಾನೆ. ತಾನು ರಾಜಸಂತತಿಯವನೆಂದು, ಗದ್ದುಗೆಗೆ ವಾರಸುದಾರನೆಂದು ವಾದಿಸಿದ್ದಾನೆ. ಕ್ಲಿಫರ್ಡನೆಂಬ ಶ್ರೀಮಂತ ಚತುರತೆಯಿಂದ ಕೇಡನ ಹಿಂಬಾಲಕರನ್ನು ಐದನೆ ಹೆನ್ರಿಯ ಹೆಸರಿನಲ್ಲಿ ಒಲಿಸಿಕೊಂಡು ಅವರೇ ಕೇಡನ ಮೇಲೆ ತಿರುಗಿಬೀಳುವಂತೆ ಮಾಡುತ್ತಾನೆ. ಕೇಡ್ ದಿಕ್ಕೆಟ್ಟು ಓಡಿ, ತಲೆಮರಸಿಕೊಂಡು ಹೊಟ್ಟೆಗಿಲ್ಲದೆ ಅಲೆದಾಡುತ್ತಾನೆ. ಕೊನೆಗೆ ಯಾರೋ ಅವನ ಕತೆ ಮುಗಿಸುತ್ತಾರೆ.

ಯಾರ್ಕ್ ಐರ್ಲ್ಯಾಂಡಿನಿಂದ ಸೈನ್ಯಸಜ್ಜಿತನಾಗಿ ನುಗ್ಗುತ್ತಿರುವ ಸುದ್ದಿ ಬರುತ್ತದೆ. ಅವನ ಪ್ರತಿರೋಧಿಯಾದ ಲ್ಯಾಂಕಾಸ್ಟರನನ್ನು ಸೆರೆಗೆ ತಳ್ಳುವ ಭರವಸೆಯೊಡನೆ ದೊರೆ ಹೆನ್ರಿ ಅವನೊಡನೆ ಒಪ್ಪಂದಕ್ಕೆ ತೊಡಗುತ್ತಾನೆ. ಆದರೆ ಮಾತಿನಂತೆ ಲ್ಯಾಂಕಾಸ್ಟರನ ಬಂಧನವಾಗುವುದಿಲ್ಲ. ಯಾರ್ಕ್ ದೊರೆಯನ್ನು ಹೀನಾಯವಾಗಿ ಬೈದು, ಬಹಿರಂಗವಾಗಿ ವೈರಪ್ರದರ್ಶನ ಮಾಡುತ್ತಾನೆ. ದೊರೆ ಲ್ಯಾಂಕಾಸ್ಟರನ ಕಡೆ; ಕ್ಲಿಫರ್ಡ್ ಮತ್ತು ಅವನ ಮಗ ದೊರೆಯ ಕಡೆ. ಸಾಲ್ಸ್‌ಬರಿ, ವಾರಿಕ್‌ರು ಯಾರ್ಕನ ಪಕ್ಷ. ಸೇಂಟ್ ಆಲ್ಬನ್ಸ್‌ನಲ್ಲಿ ಯಾರ್ಕ್ ಮತ್ತು ಲ್ಯಾಂಕಾಸ್ಟರರ ನಡುವೆ ಘೋರ ಕದನವಾಗಿ, ಯಾರ್ಕ್ ಹಿರಿಯ ಥಾಮಸ್ ಕ್ಲಿಫರ್ಡನನ್ನು ಕೊಲ್ಲುತ್ತಾನೆ; ಯಾರ್ಕನ ಮಗ ಗೂನುಬೆನ್ನಿನ ರಿಚರ್ಡ್ ಲ್ಯಾಂಕಾಸ್ಟರನನ್ನು 'ಕ್ಯಾಸಲ್ ಇನ್' ಎಂಬಲ್ಲಿ ತುಂಡರಿಸುತ್ತಾನೆ. ಎಲಿನಾರಳಿಗೆ ಸಿಕ್ಕಿದ್ದ ಭವಿಷ್ಯಗಳಲ್ಲಿ ಇನ್ನೂ ಒಂದು ತನ್ನದೇ ರೀತಿಯಲ್ಲಿ ನಿಜವಾಗುತ್ತದೆ. 'ಕ್ಯಾಸಲ್'ಗಳಿಂದ ಅವನು ದೂರವಿರಬೇಕೆಂದಲ್ಲವೇ ಕಣಿ ಹೇಳಿದ್ದುದು!

ರಾಜರಾಣಿಯರು ಯುದ್ಧರಂಗದಿಂದ ಕಾಲು ಕೀಳುತ್ತಾರೆ. ಯಾರ್ಕ್ ಸಹ ಅವರ ಹಿಂದೆಯೇ ಲಂಡನ್ ದಾರಿ ಹಿಡಿಯುತ್ತಾನೆ — ಅವರಿಗೆ ಮೊದಲೇ ಅವನು ಲಂಡನ್ ತಲಪಿದನೆಂದರೆ ಸಿಂಹಾಸನ ಅವನ ಪಾಲು!

## 8. ದಿ ಥರ್ಡ್ ಪಾರ್ಟ್ ಅಫ್ ಕಿಂಗ್ ಹೆನ್ರಿ ದಿ ಸಿಕ್ಸ್ತ್

**ರಚನೆ :** 1590-1. **ಮೊದಲ ಪ್ರಕಟನೆ :** 1595.

**ಆಕರಗಳು :** 'ಹೆನ್ರಿ ದಿ ಸಿಕ್ಸ್ತ್'ನ ಎರಡನೆ ಭಾಗದವೇ.

**ನಾಟಕದ ಚಾರಿತ್ರಿಕ ಕಾಲಾವಧಿ ಹಾಗೂ ಘಟನೆಗಳು :** 1455-71. 'ಗುಲಾಬಿಗಳ ಯುದ್ಧ'ದ ಮುಂಬರಿಕೆ. ರಾಜ್ಯದ ಉತ್ತರಾಧಿಕಾರಿಯೆಂದು ಯಾರ್ಕನ ಘೋಷಣೆ; ವೇಕ್‌ಫೀಲ್ಡ್‌ನಲ್ಲಿ ಲ್ಯಾಂಕಾಸ್ಟರರ ಜಯ ಹಾಗೂ ಯಾರ್ಕನ ಸಾವು; ಮಾರ್ಟಿಮರ್ ಕ್ರಾಸಿನಲ್ಲಿ ಯಾರ್ಕ್ ಪಂಗಡಕ್ಕೆ, ಸೇಂಟ್ ಆಲ್ಬನ್ಸ್‌ನಲ್ಲಿ ಮತ್ತೆ ಲ್ಯಾಂಕಾಸ್ಟರ್ ಪಂಗಡಕ್ಕೆ ವಿಜಯ; ನಾಲ್ಕನೆ ಎಡ್ವರ್ಡ್ ರಾಜನಾದ ಘೋಷಣೆ; ಟೌಟನ್‌ನಲ್ಲಿ ಯಾರ್ಕರ ವಿಜಯ; ಎಲಿಜಬೆತ್ ವುಡ್‌ವಿಲ್‌ಳೊಂದಿಗೆ ನಾಲ್ಕನೆ ಎಡ್ವರ್ಡನ ಮದುವೆ; ಹೆಕ್ಸಾಮ್‌ನಲ್ಲಿ ಯಾರ್ಕರ ವಿಜಯ; ಆರನೆ ಹೆನ್ರಿಯ ಬಂಧನ. ಐದು ವರ್ಷಗಳ ನಂತರ ಪುನಃ ಅವನಿಗೆ ಪ್ರಭುತ್ವದಾನ; ಮತ್ತೆ ನಾಲ್ಕನೆ ಎಡ್ವರ್ಡ್‌ನಿಂದ ಸಿಂಹಾಸನದ ಆಕ್ರಮಣ; ಬಾರ್ನೆಟ್‌ನಲ್ಲಿ 'ರಾಜಕರ್ತ' ವಾರಿಕ್‌ನ ಮರಣ; ಟ್ಯೂಕ್ಸ್‌ಬರಿಯಲ್ಲಿ ಮಾರ್ಗರಿಟಳ ಸೋಲು; ಅವಳ ಮಗ ಎಡ್ವರ್ಡನ ಕೊಲೆ; ಸೆರೆಯಲ್ಲಿ ಆರನೆ ಹೆನ್ರಿಯ ಕೊಲೆ.

**ಕಥೆ:** ಆರನೆ ಹೆನ್ರಿ ಪದಚ್ಯುತನಾಗಿ, ಪಕ್ಷ-ಪ್ರತಿಪಕ್ಷದ ಶ್ರೀಮಂತ ತೋಳಗಳ ನಡುವೆ ಕುರಿಮರಿಯಾಗಿ, ಸಿಂಹಾಸನದಿಂದ ಸೆರೆಗೂ ಸೆರೆಯಿಂದ ಸಿಂಹಾಸನಕ್ಕೂ ಅಲೆದಾಡುತ್ತ ಕೊನೆಗೆ ಕೊಲೆಗೆ ತಲೆ ತೆರುವುದು ಈ ನಾಟಕದ ವಸ್ತು.

ಯಾರ್ಕ್ ಹೆನ್ರಿಗಿಂತ ಮೊದಲೇ ಲಂಡನಿಗೆ ಹಿಂದಿರುಗಿ ಸಿಂಹಾಸನವೇರಿ ಕುಳಿತು, ಹಿಂದೆ ಎರಡನೆ ರಿಚರ್ಡನಿಂದ ಹೆನ್ರಿಯ ತಾತ ರಾಜ್ಯ ಕಸಿದುಕೊಂಡಿದ್ದ ಕಾರಣ ಹೆನ್ರಿಗೆ ಸಿಂಹಾಸನದ ಮೇಲೆ ನ್ಯಾಯಬದ್ಧವಾದ ಅಧಿಕಾರವೇ ಇಲ್ಲವೆಂದು ವಾದಿಸಿದ್ದಾನೆ. ಪಾಪ, ಬಡ ಹೆನ್ರಿ ತಾನು ಬದುಕಿರುವವರೆಗಾದರೂ ರಾಜನಾಗಿರುವ ಅವಕಾಶ ಕೊಡಬೇಕೆಂದೂ ತನ್ನ ನಂತರ ರಾಜ್ಯದ ಉತ್ತರಾಧಿಕಾರವನ್ನು ಯಾರ್ಕನಿಗೆ ವಹಿಸಿಕೊಡುವೆನೆಂದೂ ಅಂಗಲಾಚುತ್ತಾನೆ. ಈ ಕೋರಿಕೆಯಿಂದ ಮಾರ್ಗರಿಟಳಲ್ಲಿ ಹುಟ್ಟಿದ ತನ್ನ ಸಂತತಿಗೆ ತಾನೇ ಅನ್ಯಾಯ ಬಗೆಯುತ್ತಿರುವೆನೆಂದು ಅವನು ಬಲ್ಲ. ಆದರೆ ಆ ದುರ್ಬಲನಿಗೆ ಬೇರೆ ಮಾರ್ಗವೇ ಇಲ್ಲ. ಯಾರ್ಕ್ ಹಾಗೂ ಅವನ ಕಡೆಯ ಶ್ರೀಮಂತರು ಆ ಕ್ಷಣ ಈ ಕರಾರಿಗೆ ಒಪ್ಪುತ್ತಾರೆ. ರಾಜಪಕ್ಷದ ಶ್ರೀಮಂತರಿಗೆ ಇದು ಸರಿಗಾಣದೆ ಅವರು ದೊರೆಗೆ ಎದುರುಬೀಳುತ್ತಾರೆ. ಮಾರ್ಗರಿಟಳಿಗೆ ಸುದ್ದಿ ತಿಳಿದಾಗ ಕೋಪದಿಂದ ಕುದಿಯುತ್ತಾಳೆ. ಹೆನ್ರಿಯ ಹೇಡಿತನಕ್ಕೆ ರೋಸಿ, ಅವನನ್ನು ಹೀನಾಮಾನವಾಗಿ ಬೈದು, ಜಾನ್ ಕ್ಲಿಫರ್ಡ್ ಮೊದಲಾದ ರಾಜಪಕ್ಷದ ಶ್ರೀಮಂತರ ಸಹಾಯದಿಂದ ತಾನೇ ಸೈನ್ಯ ಕಟ್ಟಿ ತಂದು ಈ ಅನ್ಯಾಯವನ್ನು ಸರಿಪಡಿಸುವ ಪಣ ತೊಡುತ್ತಾಳೆ.

ಹೆನ್ರಿಯೊಡನೆ ಯಾರ್ಕ್ ಮಾಡಿಕೊಂಡ ಒಪ್ಪಂದ ಅವನ ಮಕ್ಕಳಾದ ಎಡ್ವರ್ಡ್ ಮತ್ತು ಗೂನ ರಿಚರ್ಡರಿಗೆ ಸರಿಬೀಳದು. ಕೂಡಲೇ ಹೆನ್ರಿಯನ್ನು ಕೆಳಗಿಳಿಸಿ ಸಿಂಹಾಸನವನ್ನು ಆಕ್ರಮಿಸುವಂತೆ ಆ ಮಹತ್ವಾಕಾಂಕ್ಷಿಗಳು ತಂದೆಯನ್ನು ಒತ್ತಾಯಿಸಿ, ಒಪ್ಪಿಸುತ್ತಾರೆ. ಅಷ್ಟರಲ್ಲೇ ಮಾರ್ಗರಿಟ್ ಸೈನ್ಯಸಮೇತಳಾಗಿ ಬಂದು ಮೇಲೆ ಬಿದ್ದ ಸುದ್ದಿ ಬರುತ್ತದೆ. ವೇಕ್‌ಫೀಲ್ಡ್ ಬಳಿ ಯಾರ್ಕ್ ಮತ್ತು ಮಾರ್ಗರಿಟರ ಸೇನೆಗಳಿಗೆ ಕದನ

ವಾಗುತ್ತದೆ. ಯಾರ್ಕ್ ಮತ್ತು ಅವನ ಮಗ ರಟ್ಲೆಂಡ್ ಸಿಕ್ಕಿ ಬೀಳುತ್ತಾರೆ. ಯಾರ್ಕ್ ಹಿಂದೆ ಸೇಂಟ್ ಆಲ್ಬನ್ಸ್‌ನಲ್ಲಿ ತನ್ನ ತಂದೆಯನ್ನು ಕೊಂದಿದ್ದನೆಂಬ ಕಾರಣದಿಂದಾಗಿ ಜಾನ್ ಕ್ಲಿಫರ್ಡನ ಎದೆಯಲ್ಲಿ ಸೇಡು ಕೂಗಿಡುತ್ತಿದೆ. ಅವನೂ ಮಾರ್ಗರಿಟಳೂ ಮೊದಲು ರಟ್ಲೆಂಡನನ್ನು ತಿವಿದು ಕೊಲ್ಲುತ್ತಾರೆ; ನಂತರ ಯಾರ್ಕನ ತಲೆಗೆ ಕಾಗದದ ಕಿರೀಟವಿಟ್ಟು ಅವಮಾನ ಮಾಡಿ, ಅವನನ್ನು ಕೊಂದು, ಅವನ ರುಂಡವನ್ನು ಯಾರ್ಕ್ ಪಟ್ಟಣದ ಕೋಟೆಯ ಬಾಗಿಲಿಗೆ ತೂಗುಹಾಕುತ್ತಾರೆ. ಸಾಯುವ ಮುನ್ನ ಯಾರ್ಕ್ ಅಂದಂತೆ ನಿಜವಾಗಿಯೂ ಹೆಣ್ಣಿನ ತೊಗಲನ್ನು ಹೊದೆದ ಹುಲಿಯ ಎದೆ ಮಾರ್ಗರಿಟಳದು!

ಯಾರ್ಕನ ದುರ್ಮರಣದ ವಾರ್ತೆ ಅವನ ಮಕ್ಕಳಾದ ಎಡ್ವರ್ಡ್ ಮತ್ತು ರಿಚರ್ಡರಿಗೆ ತಿಳಿದು ಅವರ ಕೆಚ್ಚು ಕೆರಳುತ್ತದೆ. ಏನೇ ಆಗಲಿ, ಹೋರಾಟವನ್ನು ಮುಂದುವರಿಸಿಯೇ ತೀರುವ ಪ್ರತಿಜ್ಞೆ ಮಾಡುತ್ತಾರೆ ಅವರು. ಇನ್ನೊಂದು ಕದನದಲ್ಲಿ ರಾಣಿಯ ಸೈನ್ಯಕ್ಕೆ ಸೋತ ವಾರಿಕ್ ಸಹ ಈ ಪಣದಲ್ಲಿ ಅವರಿಗೆ ಬೆಂಬಲಿಗ. ಯಾರ್ಕ್‌ಷೈರ್‌ನಲ್ಲಿ ಟೌಟನ್, ಸ್ಯಾಕ್ಸ್‌ಟನ್‌ಗಳ ನಡುವೆ ಎರಡೂ ಪಕ್ಷಗಳಿಗೆ ಮತ್ತೆ ಕದನವಾಗುತ್ತದೆ. ಕಾಳಗದ ನಡುವೆಯೇ ಮಾರ್ಗರಿಟ್ ಗಂಡ ಹೆನ್ರಿಗೆ ಛೀಮಾರಿ ಹಾಕುತ್ತಾಳೆ. ಅವನದು ಮಿದುವಾದ ಅಂತರಂಗ. ಹೊತ್ತ ಕಿರೀಟ ಬೇರೆಯವರದೆಂಬ ಅರಿವು ಅವನನ್ನು ಕೊರೆಯುತ್ತಿದೆ. ಒಂದು ಗುಡ್ಡದ ಮೇಲೆ ಹೋಗಿ ಕುಳಿತು, ತಂದೆ ಮಕ್ಕಳು ಒಬ್ಬರ ಮೇಲೊಬ್ಬರು ಕತ್ತಿ ಮಸೆಯುವ ಈ ದುರ್ದೆಸೆಯನ್ನು ಕಾಣಲು ಬದುಕಿರುವ ಬದಲು ಸತ್ತಿದ್ದರೆ, ದೊರೆಯಾಗುವ ಬದಲು ಹಳ್ಳಿಯ ಕುರುಬನಾಗಿ ಹುಟ್ಟಿದ್ದರೆ ಚೆನ್ನಾಗಿತ್ತಲ್ಲ ಎಂದು ಅವನು ಪರಿತಪಿಸುತ್ತಾನೆ.

ಕದನದಲ್ಲಿ ರಾಣಿಯ ಸೈನ್ಯ ಸೋಲುತ್ತದೆ. ಮಾರ್ಗರಿಟ್ ಫ್ರಾನ್ಸಿಗೆ ಓಡಿಹೋಗುತ್ತಾಳೆ. ದೊರೆ ಹೆನ್ರಿ ಸ್ಕಾಟ್‌ಲಂಡಿಗೆ ತಲೆ ತಪ್ಪಿಸಿಕೊಂಡು ಹೋಗಿ, ಮತ್ತೆ ಮುಂದೆ ಇಂಗ್ಲಂಡನ್ನು ನೋಡುವ ಆಸೆಯಾಗಿ ವಾಪಸು ಬಂದು ಸೆರೆಸಿಗುತ್ತಾನೆ. ಯಾರ್ಕರು ಕ್ಲಿಫರ್ಡನನ್ನು ಹಿಡಿದು ತಲೆ ಕಡಿಯುತ್ತಾರೆ. ಯಾರ್ಕನ ಮೊದಲ ಮಗ ಎಡ್ವರ್ಡ್ ರಾಜನಾಗಿ ಘೋಷಿತನಾಗುತ್ತಾನೆ. ತಮ್ಮಂದಿರಲ್ಲಿ ಜಾರ್ಜ್ ಕ್ಲಾರೆನ್ಸ್‌ನ ಡ್ಯೂಕ್ ಆಗಿಯೂ ರಿಚರ್ಡ್ ಗ್ಲಾಸ್ಟರನ ಡ್ಯೂಕ್ ಆಗಿಯೂ ನೇಮಿತರಾಗುತ್ತಾರೆ. ಹನ್ನೊಂದನೆ ಲೂಯಿಯ ನಾದಿನಿ ಬೋನಳನ್ನು ಎಡ್ವರ್ಡನಿಗೆ ತಂದುಕೊಳ್ಳುವುದೆಂದಾಗಿ ಲಗ್ನದ ಮಾತುಕತೆ ನಡಸಿ ಬರಲು ವಾರಿಕ್ ಫ್ರಾನ್ಸಿಗೆ ಹೊರಡುತ್ತಾನೆ.

ಎಲಿಜಬೆತ್ ವುಡ್‌ವಿಲ್ ಎಂಬ ವಿಧವೆ ತನ್ನ ಗಂಡನ ನಿಧನಾನಂತರ ಕೈಬಿಟ್ಟಿದ್ದ ಆಸ್ತಿಯನ್ನು ವಾಪಸು ಪಡೆಯುವ ಬಗ್ಗೆ ನಾಲ್ಕನೆ ಎಡ್ವರ್ಡನನ್ನು ಬಂದು ಕಾಣುತ್ತಾಳೆ. ಎಡ್ವರ್ಡ್ ಅವಳಲ್ಲಿ ಮೋಹಿತನಾಗುತ್ತಾನೆ. ಅವಳು ಆ ಕಾಮುಕನ ಯಾವ ಅಧರ್ಮಸಂಬಂಧದ ಸೂಚನೆಗೂ ಒಪ್ಪಳು. ಕೊನೆಗೆ ತನ್ನ ಮದುವೆಯ ಪ್ರಸ್ತಾಪ ಬೇರೆ ನಡೆದಿದೆಯೆಂಬುದನ್ನು ಲೆಕ್ಕಿಸದೆ ಅವಳನ್ನೇ ರಾಣಿಯಾಗಿ ಅಂಗೀಕರಿಸಲು ಮುಂದಾಗುತ್ತಾನೆ. ಮದುವೆ ನಡೆಯುತ್ತದೆ.

ಇತ್ತ ವಾರಿಕ್ ಫ್ರಾನ್ಸಿನಲ್ಲಿ ಲೂಯಿ, ಬೋನರನ್ನು ಎಡ್ವರ್ಡ್‌ನೊಡನೆ ಸಂಬಂಧ ಬೆಳಸಲು ಒಪ್ಪಿಸಿದ್ದಾನೆ. ಆ ಹೊತ್ತಿಗೆ ಎಡ್ವರ್ಡ್ ಮಾತು ಮುರಿದು ಬೇರೆ ಮದುವೆಯಾದ

ಸುದ್ದಿ ಬರುತ್ತದೆ. ವಾರಿಕ್ ಅವಮಾನದಿಂದ ಕುದಿದು ಈ ಅಕೃತ್ಯಕ್ಕೆ ಎಡ್ವರ್ಡನ ಮೇಲೆ ಸೇಡು ತೀರಿಸಿಕೊಳ್ಳಲು ಹಾತೊರೆಯುತ್ತಾನೆ. ಮೊನ್ನೆಮೊನ್ನೆಯವರೆಗೆ ತನ್ನ ಬದ್ಧವೈರಿಯಾಗಿದ್ದ ಮಾರ್ಗರಿಟಳೊಡನೆಯೇ ದೊರೆ ಹೆನ್ರಿಯ ಪುನಸ್ಸ್ಥಾಪನೆಗಾಗಿ ಯುದ್ಧ ಹೂಡುವ ಸಂಧಾನ ಮಾಡಿಕೊಳ್ಳುತ್ತಾನೆ. ಈ ಸಂಧಾನದ ಗುರುತಾಗಿ ವಾರಿಕ್ ತನ್ನ ಒಬ್ಬ ಮಗಳನ್ನು ಮಾರ್ಗರಿಟಳ ಮಗ ರಾಜಕುಮಾರ ಹೆನ್ರಿಗೂ, ಇನ್ನೊಬ್ಬಳನ್ನು ತನ್ನಂತೆಯೇ ದೊರೆಯ ಮದುವೆಗೆ ಹೇಸಿ ತನ್ನ ಪಕ್ಷಕ್ಕೆ ಬಂದ ಕ್ಲಾರೆನ್ಸ್‌ಗೂ ಕೊಟ್ಟು ಮದುವೆ ಮಾಡುತ್ತಾನೆ.

ಇಂಗ್ಲಂಡಿನಲ್ಲಿ ಎಡ್ವರ್ಡ್, ರಿಚರ್ಡರ ನಡುವೆ ತಿಕ್ಕಾಟ ಆರಂಭವಾಗಿದೆ. ರಿಚರ್ಡನಿಗೆ ಅಣ್ಣನಿಗೆ ದಕ್ಕಿದ ಸಿಂಹಾಸನದ ಮೇಲೆ ಕಣ್ಣು. ಆದರೂ ಫ್ರಾನ್ಸಿನಿಂದ ಮಾರ್ಗರಿಟ್, ವಾರಿಕ್‌ರು ಸೈನ್ಯ ತರಲಿರುವ ಸುದ್ದಿ ಬಂದಾಗ ತನ್ನ ನಾಳಿನ ರಾಜತ್ವದ ಮೇಲೆ ಗಮನವಿಟ್ಟು ಎಡ್ವರ್ಡನ ಬೆಂಬಲಕ್ಕೆ ನಿಲ್ಲುತ್ತಾನೆ. ವಾರಿಕ್ ಪಟ್ಟಣದ ಬಳಿ ಕದನವಾಗಿ ಎಡ್ವರ್ಡ್ ಸೋತು ಸೆರೆಯಾಗುತ್ತಾನೆ. ಸೆರೆಯಲ್ಲಿದ್ದ ಹೆನ್ರಿಯನ್ನು ಮಾರ್ಗರಿಟ್, ವಾರಿಕ್‌ರು ಬಿಡಿಸಿ ಮತ್ತೆ ಸಿಂಹಾಸನ ಹತ್ತಿಸುತ್ತಾರೆ.

ಎಡ್ವರ್ಡ್ ಸೆರೆಯಿಂದ ತಪ್ಪಿಸಿಕೊಂಡು ಬರ್ಗಂಡಿಗೆ ಹೋಗಿ, ಅಲ್ಲಿಂದ ಸೈನ್ಯ ಕಟ್ಟಿ ತಂದು, ಮರಳಿ ಸಿಂಹಾಸನವನ್ನು ಕಸಿದುಕೊಳ್ಳುತ್ತಾನೆ. ದೊರೆ ಹೆನ್ರಿ ಮತ್ತೊಮ್ಮೆ ಸೆರೆಗೆ! ಕದನದಲ್ಲಿ ಸೋದರರ ವಿರುದ್ಧ ಕಾದೆನೆಂದು ಕ್ಲಾರೆನ್ಸ್ ವಾರಿಕ್‌ನ ಪಕ್ಷ ತ್ಯಜಿಸುತ್ತಾನೆ. ವಾರಿಕ್ ಪರಾಕ್ರಮದಿಂದ ಕಾದು, ಸಾವಪ್ಪುತ್ತಾನೆ. ಮಾರ್ಗರಿಟ್ ಸೆರೆಯಾಗುತ್ತಾಳೆ. ರಾಜಕುಮಾರ ಎಡ್ವರ್ಡ್ ಪ್ರತಿಪಕ್ಷದ ಮೂವರು ಅಣ್ಣತಮ್ಮಂದಿರನ್ನು ಧೈರ್ಯದಿಂದ ಎದುರಿಸಿ ಕೊಲೆಯಾಗುತ್ತಾನೆ. ಸೆರೆಯಲ್ಲಿರುವ ಹೆನ್ರಿ ಆತ್ಮಮಗ್ನ. ತನ್ನನ್ನು ತಾನು ಓದಿನಲ್ಲಿ ಮರೆತಿರುವಾಗ ರಿಚರ್ಡ್ ಬಂದು ಅವನನ್ನು ಕೊಲ್ಲುತ್ತಾನೆ. ಮಾರ್ಗರಿಟಳ ತಂದೆ ಹಣ ತೆತ್ತು ಅವಳ ಬಿಡುಗಡೆ ಪಡೆಯುತ್ತಾನೆ.

ಈಗ ನಾಲ್ಕನೆ ಎಡ್ವರ್ಡ್ ಹೆಂಡತಿ ಎಲಿಜಬೆತಳೊಡನೆ ಸಿಂಹಾಸನ ಹತ್ತಿದ್ದಾನೆ. ಅವನ ಶತ್ರುಗಳೆಲ್ಲರೂ ಅಳಿದಿದ್ದಾರೆ. ಆದರೆ ರಾಜನಿಗೆ ಶತ್ರುಗಳು ಬೆಳೆಯಲು ಎಷ್ಟು ಹೊತ್ತು! ತಮ್ಮ ರಿಚರ್ಡ್ ಅವನ ಮೇಲೆ ವಕ್ರದೃಷ್ಟಿ ಹರಿಸಿ ಹೊಂಚಿಗೆ ಕೂರುತ್ತಾನೆ.

## 9. ದಿ ಟ್ರ್ಯಾಜೆಡಿ ಅಫ್ ಕಿಂಗ್ ರಿಚರ್ಡ್ ದಿ ಥರ್ಡ್

**ರಚನೆ :** 1592-3. **ಮೊದಲ ಪ್ರಕಟನೆ :** 1597.

**ಆಕರಗಳು :** ಪಾಲಿಡೋರ್ ವರ್ಜಿಲನ 'ಹಿಸ್ಟಾರಿಯ ಆ್ಯಂಗ್ಲಿಕ'ದ ಆಧಾರದ ಮೇಲೆ ರಚಿತವಾದ ಹಾಲಿನ್‌ಷೆಡ್ ಮತ್ತು ಹಾಲ್‌ರ ಚರಿತ್ರೆಗಳು ಹಾಗೂ ಸರ್ ಥಾಮಸ್ ಮೋರನ 'ಹಿಸ್ಟರಿ ಅಫ್ ರಿಚರ್ಡ್ ದಿ ಥರ್ಡ್.'

**ನಾಟಕದ ಚಾರಿತ್ರಕ ಕಾಲಾವಧಿ ಹಾಗೂ ಘಟನೆಗಳು :** 1471-85. ಆರನೆ ಹೆನ್ರಿಯ ಶವಸಂಸ್ಕಾರ; ಆ್ಯನಳೊಂದಿಗೆ ಮೂರನೆ ರಿಚರ್ಡನ ಮದುವೆ; ಕ್ಲಾರೆನ್ಸನ ಕೊಲೆ; ನಾಲ್ಕನೆ ಎಡ್ವರ್ಡನ ಸಾವು; ಮೊದಲು ರಾಜಪಾಲಕನಾಗಿ, ನಂತರ ದೊರೆಯಾಗಿ

ರಿಚರ್ಡನಿಂದ ಅಧಿಕಾರಗ್ರಹಣ; ಸೆರೆಮನೆಯಲ್ಲಿ ರಾಜಕುಮಾರರ ಕೊಲೆ; ಆ್ಯನಳ ಸಾವು; ಬಾಸ್‌ವರ್ತ್‌ನಲ್ಲಿ ರಿಚರ್ಡನ ಸೋಲು, ಸಾವು; ಹೆನ್ರಿ ರಿಚ್ಮಂಡ್ ಏಳನೆ ಹೆನ್ರಿಯಾಗಿ ಘೋಷಿತನಾಗಿ ನಾಲ್ಕನೆ ಎಡ್ವರ್ಡನ ಮಗಳನ್ನು ಲಗ್ನವಾಗುವುದು.

**ಕಥೆ:** ನೀಚನೊಬ್ಬನು ತನ್ನ ಪೈಶಾಚಿಕ ಯೋಜನೆಗಳಿಂದ ಮೇಲೇರಿ, ತಾನು ಬಯಸಿದ ಫಲ ದೊರೆಯುವ ಮುನ್ನವೇ ಕೆಳಗುರುಳಿ, 'ಕೇಡಿಗೆ ಕಟ್ಟಿಟ್ಟ ಬುತ್ತಿ ಇದೇ' ಎಂದು ತೋರಿಸುವುದು ಹಾಗೂ ಮಾನವ ಜೀವನದಲ್ಲಿನ ಅನಿಶ್ಚಿತತೆ ಈ ನಾಟಕದ ವಸ್ತು. ಇದು ಷೇಕ್ಸ್‌ಪಿಯರನ ಚಾರಿತ್ರಕ ನಾಟಕಗಳಲ್ಲೆಲ್ಲ ಉತ್ತಮ ಕಲ್ಪನೆಗೆ, ಕಾವ್ಯಕ್ಕೆ, ನಾಟಕೀಯ ಗುಣಗಳಿಗೆ ಹೆಸರುವಾಸಿಯಾಗಿದ್ದು ಓದುವವರ ಹಾಗೂ ಆಡುವವರ ಮೆಚ್ಚಿನ ಕೃತಿಯಾಗಿದೆ.

ಲ್ಯಾಂಕಾಸ್ಟರರ ಮನೆತನ ಸೋತು ಯಾರ್ಕ್‌ರಿಗೆ ವಿಜಯವಾಗಿ ದೇಶದಲ್ಲಿ ಶಾಂತಿ ಏರ್ಪಟ್ಟಿದೆ. ಆದರೆ ದೊರೆ ನಾಲ್ಕನೆ ಎಡ್ವರ್ಡನ ತಮ್ಮ ಗೂನುಬೆನ್ನಿನ ರಿಚರ್ಡನಿಗೆ ಈ ಶಾಂತಿ ಅಪಥ್ಯ! ಪ್ರಕೃತಿ ಅವನಿಗೆ ಮೋಸ ಮಾಡಿದೆ; ಜನ್ಮತಃ ಅವನು ವಕ್ರದೇಹಿ. ಮೈಯ ಡೊಂಕು ಎದೆ,ಮನಸ್ಸನ್ನುಗಳನ್ನೂ ಡೊಂಕು ಮಾಡಿದೆ. ಜೀವನದಲ್ಲಿ ತನಗೆ ಖಳನ ಪಾತ್ರವೇ ತಕ್ಕದೆಂದುಕೊಂಡು, ಅದಕ್ಕೆ ತಕ್ಕಂತೆಯೇ ನಡೆ ನಿರ್ಧರಿಸಿಕೊಳ್ಳುತ್ತಾನೆ. ಅದು ಕೇಡಿನ ನಡೆ, ರಕ್ತದ ದಾರಿ.

ರಿಚರ್ಡನ ಮೊದಲ ಬೇಟೆ ಕ್ಲಾರೆನ್ಸ್. ಎಡ್ವರ್ಡನ ವಾರಸರಲ್ಲಿ ಯಾರ ಹೆಸರು 'ಜಿ' ಇಂದ ಮೊದಲಾಗುವುದೋ ಅವರು ಕೊಲೆಗಾರರಾಗುವರೆಂದು ಒಂದು ಹಳೆಯ ಭವಿಷ್ಯವಂತೆ! ರಿಚರ್ಡ್ ಎಡ್ವರ್ಡನ ಕಿವಿಗೆ ಇದನ್ನು ಸುರಿದು, ಭಯ ಹುಟ್ಟಿಸಿ, ಕ್ಲಾರೆನ್ಸನನ್ನು (ಅವನ ಹೆಸರು ಜಾರ್ಜ್, 'ಜಿ' ಇಂದ ಆರಂಭಿತ) ಸೆರೆಗೆ ತಳ್ಳಿಸುತ್ತಾನೆ. ಅದು ರಾಣಿ ಎಲಿಜಬೆತಳ ತಂತ್ರವೆಂಬಂತೆ ತೋರಿಸಿ, ತಪ್ಪನ್ನೆಲ್ಲ ಅವಳ ಮೇಲೆ ತಳ್ಳುತ್ತಾನೆ. ತಾನು ಕ್ಲಾರೆನ್ಸನ ಸ್ವಾತಂತ್ರ್ಯಕ್ಕೆ ಯತ್ನಿಸುತ್ತಿರುವವನಂತೆ ನಟಿಸಿ, ಜೊತೆಗೇ ಅವನ ಕೊಲೆಯ ಯೋಜನೆ ಹೂಡುತ್ತಾನೆ.

ಆರನೆ ಹೆನ್ರಿಯ ಶವಯಾತ್ರೆ ಹೊರಟಿದೆ. ಸೊಸೆ, ಕೊಲೆಯಾದ ರಾಜಕುಮಾರ ಎಡ್ವರ್ಡನ ಹೆಂಡತಿ ಲೇಡಿ ಆ್ಯನ್ ಅದರೊಡನೆ ಇದ್ದಾಳೆ. ಒಮ್ಮೆಲೇ ತಂದೆ, ಗಂಡ, ಮಾವಂದಿರ ದುರ್ಮರಣವನ್ನು ಕಂಡ ಹತಭಾಗ್ಯೆ ಅವಳು. ರಿಚರ್ಡ್ ಶವಯಾತ್ರೆಯನ್ನು ತಡೆಯುತ್ತಾನೆ. ಆ್ಯನ್ ಆ ನೀಚನನ್ನು ಬಾಯಿ ತುಂಬ ಶಪಿಸುತ್ತಾಳೆ. ಮೊದಲು ಕೊಲೆಗಡಿಕ ತಾನಲ್ಲವೆಂದು ವಾದಿಸಿ, ನಂತರ ಅವಳಿಗಾಗಿಯೇ, ಅವಳ ಕೈಹಿಡಿಯಲು ದಾರಿ ತೆರವು ಮಾಡಿಕೊಳ್ಳಲು ಹಾಗೆ ಮಾಡಿದೆನೆಂದು ನಂಬಿಸಿ ಅವಳ ಸ್ತ್ರೀಚಾಂಚಲ್ಯವನ್ನು ಕೆಣಕುತ್ತಾನೆ. ತನ್ನನ್ನು ವರಿಸೆಂದು ಬೆರಳಿಗೆ ಉಂಗುರ ತೊಡಿಸುತ್ತಾನೆ — ಇಷ್ಟೆಲ್ಲವೂ ಹೆನ್ರಿಯ ಹೆಣದ ಮುಂದೆಯೇ!

ಎಡ್ವರ್ಡನಿಗೆ ಕಾಹಿಲೆ. ಎಲಿಜಬೆತ್ ಮತ್ತು ರಿಚರ್ಡರ ನಡುವೆ ಸಂಧಾನ ಮಾಡಿಸಿ ಅವರ ವಿರಸವನ್ನು ಕೊನೆಗಾಣಿಸಬೇಕೆಂದು ಅವನ ಆಸೆ. ಎರಡೂ ಕಡೆಯವರು ಅರಮನೆಯಲ್ಲಿ ಸೇರಿದಾಗ ಕ್ಲಾರೆನ್ಸ್ ಹಾಗೂ ತನ್ನ ವಿರುದ್ಧ ದೊರೆಯನ್ನು ಎತ್ತಿ ಕಟ್ಟಿದವಳು ಎಲಿಜಬೆತಳೇ ಎಂದು ದೂರಿ, ದೊರೆಜನರನ್ನು ನಂಬಿಸುತ್ತಾನೆ, ರಿಚರ್ಡ್.



**ಗೂನುಬೆನ್ನಿನ ರಿಚರ್ಡ್ ಮತ್ತು ಲೇಡಿ ಆ್ಯನ್**

ಗಂಡ, ಮಗ, ರಾಜ್ಯಗಳೆಲ್ಲವನ್ನೂ ಕಳೆದುಕೊಂಡು ದೇಶಭ್ರಷ್ಟಳಾದ ಮಾರ್ಗರಿಟ್ ಈಗ ಪಿಶಾಚಿನಿ. ಹುಚ್ಚಿಯಂತೆ ಓಡಾಡುತ್ತಿದ್ದಾಳೆ. ಏಕಾಏಕಿ ಅರಮನೆಯಲ್ಲಿ ಕಾಣಿಸಿಕೊಂಡು ಗಂಡ, ಮಗನನ್ನು ಕೊಂದ ರಿಚರ್ಡನ ಮೇಲೆ, ತನ್ನ ರಾಣಿಯ ಪಟ್ಟವನ್ನು ಕಿತ್ತುಕೊಂಡ ಎಲಿಜಬೆತಳ ಮೇಲೆ ಶಾಪ ಕಾರುತ್ತಾಳೆ. ಅವಳ ಮಾತೆಂದರೆ ಬೆಂಕಿಯ ಮಳೆ, ವಿಷದ ಹೊಳೆ. ಅದಕ್ಕೆ ನಡುಗದ ಗಂಡೆದೆಯಿಲ್ಲ!

ಉಳಿದವರು ದೊರೆಯನ್ನು ಕಾಣಲು ಮುಂದೆ ಹೋದೊಡನೆಯೇ ರಿಚರ್ಡ್ ಕೊಲೆ-ಗಡಿಕರನ್ನು ಕ್ಲಾರೆನ್ಸನಲ್ಲಿಗೆ ಅಟ್ಟುತ್ತಾನೆ, ದೊರೆಯೇ ಅವರನ್ನು ಕಳಿಸಿಕೊಟ್ಟಿರುವನೆಂದು ನಂಬಿಸುವಂತೆ ತಾಕೀತು ಮಾಡಿ! ಅವನ ಕೊಲೆಗೆ ಇದೇ ಸುಸಮಯ. ಸೆರೆಯಲ್ಲಿ ತನ್ನ ಪಾಪಗಳಿಗೆ ಪಶ್ಚಾತ್ತಾಪ ಪಡುತ್ತ ಕುಳಿತ ಅವನನ್ನು ಅವರು ಕೊಂದು, ಹೆಣವನ್ನು ಹೆಂಡದ ಪೀಪಾಯಿಯಲ್ಲಿ ಎಸೆಯುತ್ತಾರೆ.

ಮರಣಶಯ್ಯೆಯಲ್ಲಿರುವ ಎಡ್ವರ್ಡ್ ಎರಡೂ ಪಕ್ಷಗಳ ನಡುವೆ ರಾಜಿ ಮಾಡಿಸುತ್ತಾನೆ. ಏನೋ ಒಂದು ಬಗೆಯ ಶಾಂತಿ ನೆಲಸುತ್ತದೆ. ಆ ಹೊತ್ತಿಗೆ ಕ್ಲಾರೆನ್ಸನ ಕೊಲೆಯಾಗಿರುವ ಸುದ್ದಿ ಬಯಲಾಗುತ್ತದೆ. ಆ ಭ್ರಾತೃಹತ್ಯೆಗೆ ತಾನೇ ಕಾರಣನೆಂದು ದೊರೆಗೆ ಭಾಸ! ಅವನು ಕೊರಗುತ್ತ ಜೀವ ಬಿಡುತ್ತಾನೆ. ಎಲಿಜಬೆತಳಿಗೆ ದೊರೆ ಎಡ್ವರ್ಡ್‌ನಿಂದ ಹುಟ್ಟಿದ ಮಕ್ಕಳು ಇಬ್ಬರು—ಯುವರಾಜ ಎಡ್ವರ್ಡ್ ಮತ್ತು ಕಿರಿಯ ರಿಚರ್ಡ್. ಎಡ್ವರ್ಡ್ ಲಡ್ಲೋನಲ್ಲಿದ್ದಾನೆ. ಅವನನ್ನು ಪಟ್ಟಕ್ಕೆ ಹತ್ತಿಸುವುದೆಂದಾಗಿ ಎಲಿಜಬೆತಳ ಪಕ್ಷದ ಗ್ರೇ, ರಿವರ್ಸ್ ಮತ್ತು ವಾನ್ ಅವನನ್ನು ಕರೆತರಲು ಹೋಗುತ್ತಾರೆ. ಆದರೆ ರಿಚರ್ಡ್ ಆ ಮೊದಲೇ ಯುವರಾಜನನ್ನು ತನ್ನ ವಶಕ್ಕೆ ತೆಗೆದುಕೊಂಡು, ಅಂಗರಕ್ಷಣೆಗೆಂದು ಹೋಗಿದ್ದ ಮೂವರು ಶ್ರೀಮಂತರನ್ನೂ ಸೆರೆಗೆ ತಳ್ಳುತ್ತಾನೆ. ವಿಷಯ ತಿಳಿದ ಎಲಿಜಬೆತ್ ಪ್ರಾಣಭಯದಿಂದ ಕಿರಿಯ ಮಗನೊಡನೆ ಚರ್ಚಿನ ಆಶ್ರಯ ಪಡೆಯುತ್ತಾಳೆ. ತಂತ್ರಿ ರಿಚರ್ಡ್ ಪಾದ್ರಿಗಳ ಸಹಾಯದಿಂದ ಕಿರಿಯ ಮಗನನ್ನೂ ತಾಯಿಯಿಂದ

ಬೇರ್ಪಡಿಸಿ, ಅಣ್ಣತಮ್ಮಂದಿರಿಬ್ಬರನ್ನೂ ಲಂಡನ್ ಟವರಿನಲ್ಲಿ ವಾಸಕ್ಕೆ ಇಡುತ್ತಾನೆ. ಅದು ಸೆರೆಮನೆ! ಹೊರಗೆ ಅವರ ಬಗ್ಗೆ ಅಪಾರ ವಿಶ್ವಾಸ ನಟಿಸುತ್ತ ಅವರ ಪಟ್ಟಾಭಿಷೇಕಕ್ಕೆ ಏರ್ಪಾಡು ಮಾಡುತ್ತಿರುವವನಂತೆ ತೋರಿಸಿಕೊಳ್ಳುತ್ತ, ಜೊತೆಜೊತೆಗೇ ತಾನು ಸಿಂಹಾಸನ ಹತ್ತುವ ಯೋಚನೆ ಮಾಡುತ್ತಾನೆ. ತನ್ನ ಮಿತ್ರಗಣದವರಲ್ಲೊಬ್ಬನಾದ ಹೇಸ್ಟಿಂಗ್ಸ್ ಅದಕ್ಕೆ ವಿರೋಧಿಯೆಂದು ಗೊತ್ತಾದಾಗ, ಅವನ ಮೇಲೆ ರಾಜದ್ರೋಹ ಹೊರಿಸಿ, ಮರಣದಂಡನೆ ಸಾರಿ, ಕ್ಷಣಮಾತ್ರದಲ್ಲಿ ಅವನ ತಲೆ ಉರುಳುವಂತೆ ಮಾಡುತ್ತಾನೆ. ಗ್ರೇ, ರಿವರ್ಸ್ ಮತ್ತು ವಾನ್‌ರಿಗೂ ಅದೇ ಗತಿಯಾಗುತ್ತದೆ.

ಬಕಿಂಗಮ್ ರಿಚರ್ಡನ ಬಲಗೈ. ಅವನ ಮೂಲಕ ಎಡ್ವರ್ಡನ ಮಕ್ಕಳು ಹಾದರಕ್ಕೆ ಹುಟ್ಟಿದವರೆಂದು ಹಬ್ಬಿಸುತ್ತಾನೆ. ಸ್ವತಃ ಎಡ್ವರ್ಡನ ಮೇಲೂ ಅದೇ ಅನುಮಾನ ಬರುವಂತೆ ಮಾಡುತ್ತಾನೆ. ಸರಿ, ಈಗ ಸಿಂಹಾಸನದ ಹಿರಿಯ ಅಧಿಕಾರಿ ತಾನೆ! ದೊರೆಜನ ಅವನಿಗೆ ಕಿರೀಟ ಅರ್ಪಿಸುತ್ತಾರೆ. ಆಗ ರಿಚರ್ಡ್ ಕಪಟಸನ್ಯಾಸ ತಾಳಿ, ಕೇವಲ ದೇಶಹಿತಕ್ಕೋಸ್ಕರ ರಾಜನಾಗಲು ಒಪ್ಪುತ್ತಿರುವವನಂತೆ ಜನರನ್ನು ನಂಬಿಸುತ್ತಾನೆ. ಆ ಹೊತ್ತಿನಲ್ಲಿ ಅವನ ಇಕ್ಕೆಲಗಳಲ್ಲೂ ಪಾದ್ರಿಗಳು, ಕೈಯಲ್ಲಿ ಸ್ತೋತ್ರಗ್ರಂಥ! ತತ್‌ಕ್ಷಣ ಪಟ್ಟಾಭಿಷೇಕಕ್ಕೆ ಸಿದ್ಧ ಮಾಡಿಕೊಳ್ಳುತ್ತಾನೆ.

ರಿಚರ್ಡ್ ಎಲಿಜಬೆತಳ ಮಕ್ಕಳಿಗೆ ದಿಗ್ಬಂಧನ ಹಾಕಿಟ್ಟಿದ್ದಾನೆ. ಅವಳು ತನ್ನ ಅತ್ತೆ ಅಂದರೆ ರಿಚರ್ಡನ ತಾಯಿ ಮತ್ತು ಅವನ ಹೆಂಡತಿ ಆ್ಯನರೊಡನೆ ಮಕ್ಕಳನ್ನು ಕಾಣಲು ಪ್ರಯತ್ನಿಸಿ, ವಿಫಲಳಾಗುತ್ತಾಳೆ. ಅದೇ ಹೊತ್ತಿಗೆ ರಿಚರ್ಡನಿಂದ ಪಟ್ಟಾಭಿಷೇಕಕ್ಕೆ ಬರಬೇಕೆಂದು ಆ್ಯನಳಿಗೆ ಕರೆ ಬರುತ್ತದೆ. ಅವಳು ದುಃಖದಿಂದ ಹೊರಡುತ್ತಾಳೆ.

ರಿಚರ್ಡ್ ಈಗ ದೊರೆ—ಮೂರನೆ ರಿಚರ್ಡ್. ಎಲಿಜಬೆತಳ ಮಕ್ಕಳನ್ನು ತೊಡೆದು ಹಾಕುವವರೆಗೆ ಅವನಿಗೆ ಭದ್ರತೆಯಿಲ್ಲ. ಅವರ ಕೊಲೆಗೆ ಏರ್ಪಾಡು ಮಾಡುತ್ತಾನೆ. ಅದನ್ನು ಕೈಗೊಳ್ಳಲು ಹಿಂದೆಗೆದ ಜತೆಗಾರ ಬಕಿಂಗಮ್ ರಿಚರ್ಡನ ಅವಜ್ಞೆಯನ್ನು ಎದುರಿಸಿ, ಹಿಂದೆ ಹೇಸ್ಟಿಂಗ್ಸನಿಗಾದ ಗತಿಯೇ ತನಗೂ ಕಾದಿದೆಯೆಂದು ಊಹಿಸಿ, ದೇಶ ಬಿಟ್ಟು ಬ್ರಿಟನಿಗೆ ಓಡುತ್ತಾನೆ.

ಬ್ರಿಟನಿಯಲ್ಲಿ ಲ್ಯಾಂಕಾಸ್ಟರ್ ಪಕ್ಷದ ಹೆನ್ರಿ ರಿಚ್ಮಂಡ್ ರಿಚರ್ಡನ ವಿರುದ್ಧ ಸೈನ್ಯ ಸೇರಿಸುತ್ತಿದ್ದಾನೆ. ಎಲಿಜಬೆತಳ ಮೊದಲ ಗಂಡನ ಮಗ ಡಾರ್ಸೆಟ್ ಆಗಲೇ ಬ್ರಿಟನಿಗೆ ಓಡಿ ಬಂದು ರಿಚ್ಮಂಡಿಗೆ ನೆರವಿತ್ತಿದ್ದಾನೆ. ಬಕಿಂಗಮ್ ಸಹ ರಿಚ್ಮಂಡನ ಸೈನ್ಯ ಸೇರುತ್ತಾನೆ.

ರಿಚರ್ಡನ ವ್ಯೂಹಗಳ, ಪಾಪಕೃತ್ಯಗಳ ಕಂತೆ ಬೆಳೆಯುತ್ತ ನಡೆದಿದೆ. ಕ್ಲಾರೆನ್ಸನ ಮಗನನ್ನು ಸೆರೆಯಲ್ಲಿಟ್ಟು, ಅವನ ಮಗಳನ್ನು ಯಾವನೋ ಯೋಗ್ಯತೆ ಸಾಲದ ಒಬ್ಬನಿಗೆ ಮದುವೆ ಮಾಡಿಕೊಟ್ಟಿದ್ದಾನೆ. ತನ್ನ ರಾಜತ್ವ ಭದ್ರವಾಗಬೇಕಾದರೆ ಎಲಿಜಬೆತಳೊಡನೆ ಒಪ್ಪಂದ ಅಗತ್ಯವೆಂದು ನಿರ್ಧರಿಸಿ, ಅದಕ್ಕೆ ಅವಳ ಮಗಳನ್ನು — ಅವಳ ಹೆಸರು ಸಹ ಎಲಿಜಬೆತ್ — ಮದುವೆಯಾಗುವುದೇ ಮಾರ್ಗವೆಂದು ಹಂಚಿಕೆ ಹಾಕಿದ್ದಾನೆ. ಈ ದಾರಿಯಲ್ಲಿ ಹೆಂಡತಿ ಆ್ಯನ್ ಅಡ್ಡಗಲ್ಲು. ಅವಳು ಪ್ರಾಣಕಂಟಕ ರೋಗದಿಂದ ನರಳುತ್ತಿದ್ದಾಳೆಂದು ಸುದ್ದಿ ಹುಟ್ಟಿಸಿ, ನಂತರ ಕೊಲ್ಲಿಸಿ, ತಾನಾಗಿಯೇ ಸತ್ತಳೆಂಬಂತೆ ತೋರಿಸುತ್ತಾನೆ. ಆದರೆ ಎಲಿಜಬೆತಳಿಗಾಗಲೇ ರಿಚ್ಮಂಡನೊಡನೆ ಗುಟ್ಟಾಗಿ ಮದುವೆ ಗೊತ್ತಾಗಿದೆ.

ರಿಚ್ಮಂಡನ ಸೈನ್ಯ ರಿಚರ್ಡನ ಮೇಲೆ ನುಗ್ಗಿ ಬರುತ್ತದೆ. ಮೊದಲು ಬಕಿಂಗಮ್ ರಿಚರ್ಡನ ಸೈನ್ಯಕ್ಕೆ ಸೆರೆ ಸಿಕ್ಕಿ, ಆ ಒಂದು ಕಾಲದ ಮಿತ್ರನಿಗೆ ಗಲ್ಲಾಗುತ್ತದೆ. ಮುಂದೆ ಬಾಸ್‌ವರ್ತ್ ಬಳಿ, ಎರಡೂ ಸೈನ್ಯಗಳು ಎದುರಾಗುತ್ತವೆ. ಯುದ್ಧದ ಹಿಂದಿನ ರಾತ್ರಿ ರಿಚರ್ಡನಿಗೆ ದುಃಸ್ವಪ್ನ! ಅವನ ಕೈಯಿಂದ ಕೊಲೆಯಾದವರೆಲ್ಲರ ಪ್ರೇತಗಳು ಅವನನ್ನು ಕನಸಿನಲ್ಲಿ ಮುತ್ತಿ, ಕಾಡಿ, ಬೆದರಿಡಿಸುತ್ತವೆ. ಮಾರನೆ ದಿನದ ಯುದ್ಧದಲ್ಲಿ ರಿಚ್ಮಂಡ್-ರಿಚರ್ಡರಿಗೆ ಕೈ ಕೈ ಕಾಳಗವಾಗಿ ಘೋರಪಾತಕಿ ರಿಚರ್ಡ್ ಸೋತು ಸಾಯುತ್ತಾನೆ. ಸಿಂಹಾಸನ ರಿಚ್ಮಂಡನಿಗೆ ಬರುತ್ತದೆ. ಲ್ಯಾಂಕಾಸ್ಟರ್ – ಯಾರ್ಕರ ಅಂತಿಮ ಸಾಮರಸ್ಯದ ಸಂಕೇತವೆಂಬಂತೆ ಲ್ಯಾಂಕಾಸ್ಟರರ ರಿಚ್ಮಂಡನಿಗೆ ಯಾರ್ಕರ ಎಲಿಜಬೆತಳನ್ನು ಕೊಟ್ಟು ಮದುವೆಯಾಗುತ್ತದೆ.

## 10. ದಿ ಫೇಮಸ್ ಹಿಸ್ಟರಿ ಆಫ್ ದಿ ಲೈಫ್ ಆಫ್ ಕಿಂಗ್ ಹೆನ್ರಿ ದಿ ಏಟ್ತ್

**ರಚನೆ:** 1612. **ಮೊದಲ ಪ್ರಕಟನೆ:** 1623.

**ಆಕರಗಳು:** ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್' ಮತ್ತು ಐದನೆ ಅಂಕದ ಕ್ರ್ಯಾನ್ಮರ್ ಪ್ರಸಂಗಕ್ಕೆ ಜಾನ್ ಫಾಕ್ಸನ 'ದಿ ಬುಕ್ ಆಫ್ ಮಾರ್ಟಿರ್ಸ್'. ಪ್ರಾಯಶಃ ಸ್ಯಾಮ್ಯುಯಲ್ ರೌಲಿಯ 'ವೆನ್ ಯು ಸೀ ಮಿ, ಯು ನೋ ಮಿ' ಎಂಬ, ಎಂಟನೆ ಹೆನ್ರಿಯ ಜೀವನದ ಮೇಲೆ ಬರೆದ ನಾಟಕ ಸಹ ಆಧಾರವಾಗಿರಬಹುದು.

**ನಾಟಕದ ಚಾರಿತ್ರಿಕ ಕಾಲಾವಧಿ ಹಾಗೂ ಘಟನೆಗಳು:** 1520-33. 'ದಿ ಕ್ಲಾತ್ ಆಫ್ ಗೋಲ್ಡ್' ಮೈದಾನದಲ್ಲಿ ಫ್ರೆಂಚ್ ದೊರೆ ಮತ್ತು ಹೆನ್ರಿಯ ನಡುವೆ ಸಂಧಿವಿಗ್ರಹ; ಬಕಿಂಗಮ್‌ನ ಮೇಲೆ ದೋಷಾರೋಪಣೆ; ದೊರೆ ಹೆನ್ರಿ ಮತ್ತು ಆ್ಯನ್ ಬುಲೆನರ ಪ್ರಥಮ ಸಮಾಗಮ; ಪೆಂಬ್ರೋಕಿನ ಮಾರ್ಷನೆಸ್ ಆಗಿ ಆ್ಯನಳ ನೇಮಕ; ಕ್ಯಾಥರೀನ್ ರಾಣಿಯ ಮೇಲೆ ವಿವಾಹವಿಚ್ಛೇದನಕ್ಕೆ ಕಾರ್ಯಾಚರಣೆ; ಉಲ್ಸಿಯ ಪತನ, ಮರಣ; ಕ್ಯಾಥರೀನಳ ಸಾವು; ಹೆನ್ರಿ, ಆ್ಯನರ ವಿವಾಹ; ಯುವರಾಣಿ ಎಲಿಜಬೆತಳ ಜನನ.

**ಕಥೆ:** ಈ ನಾಟಕದ ಕರ್ತೃತ್ವ ಚರ್ಚೆಯ ವಿಷಯವಾಗಿದೆ; ಇದರ ಕಾವ್ಯಶೈಲಿಯಲ್ಲಿ ಪಂಡಿತರು ಒಬ್ಬನದಕ್ಕಿಂತ ಹೆಚ್ಚು ಕವಿಗಳ ಕೈವಾಡ ಕಂಡಿದ್ದಾರೆ; ಷೇಕ್ಸ್‌ಪಿಯರ್ ಅಲ್ಲದೇ ಅವನ ಸಮಕಾಲೀನ ಜಾನ್ ಫ್ಲೆಚರ್ ಕೆಲವು ಭಾಗಗಳನ್ನು ಬರೆದಿರಬೇಕೆಂದು ನಿರ್ಧರಿಸಿದ್ದಾರೆ. ನಾಟಕಕ್ಕಿಂತ ಹೆಚ್ಚಾಗಿ ಎಂಟನೆ ಹೆನ್ರಿಯ ಜೀವನದ ಘಟನಾವಳಿ ಇದು. ಹೆನ್ರಿ, ಕ್ಯಾಥರೀನ್, ಉಲ್ಸಿ ಮುಂತಾದ ಪಾತ್ರಗಳ ಸೌಷ್ಠವತೆ ನಾಟಕಕ್ಕೆ ಕಳೆ ಕೊಟ್ಟಿದೆ. ಮಿತಿಮೀರಿದ ಅಧಿಕಾರ, ಅದರ ದುರುಪಯೋಗ ಪತನದ ದಾರಿಗೆಳೆಯುತ್ತವೆ, ಭಾಗ್ಯದ ಚಿತ್ತ ಚಂಚಲ ಎಂಬುದಕ್ಕೆ ಈ ನಾಟಕ ಉದಾಹರಣೆಯಂತಿದೆ.

ಎಂಟನೆ ಹೆನ್ರಿ ಇಂಗ್ಲಂಡನ್ನು ಆಳುತ್ತಿದ್ದಾನೆ. ಕ್ಯಾಥರೀನ್ ಅವನ ರಾಣಿ. ಅವಳು ಹಿಂದೆ ಹೆನ್ರಿಯ ಅಣ್ಣ ಆರ್ಥರನ ಪತ್ನಿಯಾಗಿದ್ದಳು. ಅವನು ಸತ್ತ ಮೇಲೆ ಹೆನ್ರಿ ಅವಳನ್ನು ಮದುವೆಯಾದ. ಇಪ್ಪತ್ತು ವರ್ಷಗಳ ಕಾಲ ಹೆನ್ರಿಯೊಡನೆ ಸಂಸಾರ ಮಾಡಿ ಅವನ ಕತ್ತಿನಲ್ಲಿ ಹೊಳಪಳಿಯದ ಹಾರದ ಮಣಿಯಂತೆ ಬೆಳಗುತ್ತಿದ್ದಾಳೆ. ಕಾರ್ಡಿನಲ್ ಉಲ್ಸಿ

ಹೆನ್ರಿಯ ಮಂತ್ರಿ. ಅವನು ಕ್ರೈಸ್ತ ಪಾದ್ರಿ, ಬುದ್ಧಿವಂತ, ವಿದ್ವಾಂಸ. ಆದರೆ ದರ್ಪದ ವ್ಯಕ್ತಿ. ದೇಶದ ಪರಮಾಧಿಕಾರ ಅವನ ಕೈಲಿದೆ. ಕೈಯಿಂದ ನೆತ್ತಿಗೂ ಏರಿದೆ. ತಾನು ಯಾವ ದೊರೆಗೆ ಕಡಿಮೆಯೆಂಬಂತೆ ಮೆರೆದಿದ್ದಾನೆ. ಶ್ರೀಮಂತರಲ್ಲಿ ಹಲವರಿಗೆ ಉಲ್ಸಿಯ ಬಗೆ, ಅಧಿಕಾರದಾಹ, ಮೋಹ, ಮಹತ್ವಾಕಾಂಕ್ಷೆ, ದೊರೆಯ ಮೇಲಿನ ಅವನ ಪ್ರಭಾವ ಗಳು ಒಗ್ಗವು. ಅಂಥವರಲ್ಲಿ ಮೂರನೆ ಬಕಿಂಗಮ್ ಒಬ್ಬ. (ಮೂರನೆ ರಿಚರ್ಡನಿಂದ ನೇಣು ಕಂಡ ಎರಡನೆ ಬಕಿಂಗಮ್‌ನ ಮಗ ಇವನು.) ಬಕಿಂಗಮ್, ಉಲ್ಸಿ ಪರಮ ಶತ್ರು ಗಳು. 'ಗೋಲ್ಡ್ ಕ್ಲಾತ್' ಸಂಧಾನದ ಸಂಬಂಧದಲ್ಲಿ ಉಲ್ಸಿ ಫ್ರೆಂಚ್ ದೊರೆಯೊಡನೆ ಒಳಗೊಳಗೇ ಕೈ ಕೂಡಿಸಿ, ರಾಜನ ಗೌರವ, ಹಿತಾಸಕ್ತಿಗಳ ವಿರುದ್ಧ ವರ್ತಿಸಿರುವ ಒಳ ಗುಟ್ಟು ಬಕಿಂಗಮ್‌ನಿಗೆ ತಿಳಿದಿದೆ. ಅವನು ದೊರೆಗೆ ಉಲ್ಸಿಯ ನಿಜರೂಪವನ್ನು ಬಯಲು ಮಾಡಲು ನಿರ್ಧರಿಸುತ್ತಾನೆ. ಅಷ್ಟರಲ್ಲೇ, ಉಲ್ಸಿಯ ಆಜ್ಞೆಯಂತೆ ರಾಜ್ಯದ ಅಧಿಕಾರಿಗಳು ಬಕಿಂಗಮ್‌ನನ್ನೇ ರಾಜದ್ರೋಹದ ಆಪಾದನೆಯ ಮೇಲೆ ಬಂಧಿಸಿ, ಸೆರೆಗೊಯ್ಯುತ್ತಾರೆ. ಈ ಆಪಾದನೆಗೆ ಮೂಲ, ಹಿಂದೆ ಬಕಿಂಗಮ್‌ನ ಕೈಕೆಳಗೆ ಕೆಲಸದಲ್ಲಿದ್ದು ಬಲವಂತದ ನಿವೃತ್ತಿಗೊಳಗಾದ ಒಬ್ಬ ಭ್ರಷ್ಟ ಅಧಿಕಾರಿ ಬಕಿಂಗಮ್‌ನಿಗೆ ದೊರೆಯನ್ನು ಕೊಲ್ಲುವ ಹವಣಿಕೆಯಿತ್ತೆಂದು ಕೊಟ್ಟ ಸಾಕ್ಷ್ಯ. ಉಲ್ಸಿ ಆ ಅಧಿಕಾರಿಗೆ ಲಂಚ ತಿನ್ನಿಸಿ ಸುಳ್ಳು ಸಾಕ್ಷ್ಯ ನೀಡಲು ಮುಂದಾಗಿಸಿದ್ದಾನೆ. ವಿಚಾರಣೆಯಾಗಿ ಆ ನಿಸ್ಪೃಹನಿಗೆ ಗಲ್ಲಿನ ಶಿಕ್ಷೆಯಾಗು ತ್ತದೆ. ಸ್ವತಃ ರಾಣಿ ಕ್ಯಾಥರೀನಳೇ ಅವನ ಪರ ವಾದಿಸಿದರೂ ಪ್ರಯೋಜನವಾಗುವುದಿಲ್ಲ.

ಧರ್ಮಗುರು ಉಲ್ಸಿ ಒಂದು ಕುಡಿತ-ಕುಣಿತದ ಕೂಟ ಸೇರಿಸಿ, ಚೆಲುವೆಯರನ್ನು ಕಲೆ ಹಾಕಿದ್ದಾನೆ. ಅಲ್ಲಿಗೆ ದೊರೆ ಮುಖವಾಡ ಕಟ್ಟಿ, ವೇಷ ಮರಸಿ ಅತಿಥಿಯಾಗಿ ಬರು ತ್ತಾನೆ. ಅಲ್ಲಿ ಸೇರಿದ ಬಿನ್ನಾಣಗಿತ್ತಿಯರಲ್ಲಿ ಆ್ಯನ್ ಬುಲೆನ್ ಎಂಬವಳು ಒಬ್ಬಳು. ಅವಳು ಯುವತಿ, ಬಲು ಚೆಲುವೆ. ದೊರೆ ಅವಳಿಗೆ ಮಾರುಹೋಗುತ್ತಾನೆ. ತನ್ನ ಒಲವಿನ ಗುರುತಾಗಿ ಅವಳಿಗೆ ಪೆಂಬ್ರೋಕಿನ ದೊರೆಸಾನಿಯ ಪಟ್ಟ ಕಟ್ಟುತ್ತಾನೆ.

ಉಲ್ಸಿಗೆ ಕ್ಯಾಥರೀನಳನ್ನು ಕಂಡರೂ ಆಗದು. ದೊರೆಯ ಮೇಲೆ ಅವಳ ಪ್ರಭಾವ ಬಹಳ. ಹಿಂದೆ ಬಕಿಂಗಮ್‌ನ ಪ್ರಸಂಗದಲ್ಲಿ ಅವಳು ತನಗೆ ಎದುರಾಗಿ ಅವನ ವಕೀಲಿ ವಹಿಸಿದ್ದಳು. ಇನ್ನೊಮ್ಮೆ ತಾನು ಹೊರಿಸಿದ್ದ ಆದಾಯದ ಆರನೆ-ಒಂದು ಭಾಗದ ತೆರಿಗೆ ರದ್ದು ಮಾಡಿಸಿದ್ದಲ್ಲದೆ ದೊರೆ ತನಗೇ ಬುದ್ಧಿ ಹೇಳುವಂತೆ ಮಾಡಿದ್ದಳು. ಈಗ ಉಲ್ಸಿ ಹೆನ್ರಿ-ಕ್ಯಾಥರೀನರ ಮದುವೆಯನ್ನು ಮುರಿಯುವ ಪ್ರಯತ್ನ ಮಾಡಿದ್ದಾನೆ. ಅದಕ್ಕೆ ನೆಪ, ಅವಳು ದೊರೆಯ ಅಣ್ಣನ ಹೆಂಡತಿಯಾಗಿದ್ದವಳು. ಈ ಸಂಬಂಧ ಅಕ್ರಮ, ಧರ್ಮಬಾಹಿರ. ಆ್ಯನ್ ಬುಲೆನಳಲ್ಲಿ ದೊರೆಗೆ ಪ್ರೇಮ ಚಿಗುರಿದಂತೆಲ್ಲ ಈ ನೆಪಕ್ಕೂ ಪುಷ್ಟಿ ಸಿಕ್ಕಿದೆ. ಇಪ್ಪತ್ತು ವರ್ಷಗಳ ಸುಖಸಂಸಾರದ ನಂತರ ಈಗ ಆ ವಿವಾಹದ ಧರ್ಮಾಧರ್ಮದ ಪ್ರಶ್ನೆ ಅವನ ಅಂತರಂಗವನ್ನು ಕೊರೆಯಲಾರಂಭಿಸಿದೆ! ಉಲ್ಸಿ ರೋಮಿನಿಂದ ಧರ್ಮಪಂಡಿತರನ್ನು ಕರೆಸಿ, ಸಭೆ ಸೇರಿಸಿ, ವಿವಾಹವಿಚ್ಛೇದನೆಯ ವಿಚಾರಣೆಗೆ ಏರ್ಪಾಡು ಮಾಡುತ್ತಾನೆ. ಅಲ್ಲಿ ಕ್ಯಾಥರೀನ್ ಈ ಹಗರಣವೆಲ್ಲವೂ ಉಲ್ಸಿಯ ಕಿತಾಪತಿಯಿಂದಾದುದೆಂದೂ ಅವನ ಇಲ್ಲವೇ ದೊರೆಯ ತೀರ್ಪಿಗೆ ತಾನು ಬದ್ಧಳಾಗಲು ಸಿದ್ಧಳಿಲ್ಲವೆಂದೂ ಸ್ಪಷ್ಟಪಡಿಸುತ್ತಾಳೆ. ನೇರವಾಗಿ ಪೋಪಿಗೇ ಅರಿಕೆ ಒಪ್ಪಿಸಿ ಅವನಿಂದಲೇ ತೀರ್ಪು ಬೇಡುವುದಾಗಿ ಹೇಳಿ ಹೊರಡುತ್ತಾಳೆ.

ಉಲ್ಸಿ ಹೆನ್ರಿ-ಕ್ಯಾಥರೀನರ ವಿಚ್ಛೇದನೆಗೆ ಪ್ರಯತ್ನಿಸಿದುದಕ್ಕೆ ಇನ್ನೂ ಒಂದು ಕಾರಣವಿದೆ. ಫ್ರಾನ್ಸಿನ ದೊರೆಯ ತಂಗಿ ಅಲೆನ್ಸನ್‌ನ ಡಚೆಸಳಿಗೂ ಹೆನ್ರಿಗೂ ಲಗ್ನ ಹೊಂದಿಸಿ, ಆ ರಾಜಸಂಬಂಧದ ಮೂಲಕ ಫ್ರಾನ್ಸಿನ ದೊರೆಯನ್ನು ಮೆಚ್ಚಿಸಿ, ಒಳಹಾಕಿ ಕೊಳ್ಳಬೇಕೆಂದು ಅವನ ಆಸೆ. ಹೆನ್ರಿಗೆ ಆ್ಯನ್ ಬುಲೆನಳನ್ನು ಮದುವೆಯಾಗುವ ಚಪಲ ವಿದೆಯೆಂದು ಅವನು ಕಾಣ. ಅದು ತಿಳಿದೊಡನೆಯೇ ಪಟ್ಟು ಬದಲಾಯಿಸಿ, ತಾನು ಉರುಳಿಸ ಹೊರಟಿದ್ದ ಕ್ಯಾಥರೀನಳ ಪರವಾಗಿಯೇ ವಕಾಲತ್ತು ವಹಿಸಲು ಗುಟ್ಟಾಗಿ ಮುಂದಾಗುತ್ತಾನೆ. ವಿಚ್ಛೇದನೆಯ ತೀರ್ಪನ್ನು ತಡೆ ಹಿಡಿಯುವಂತೆ ಪೋಪಿಗೆ ಪತ್ರ ಬರೆ ಯುತ್ತಾನೆ. ಆದರೆ ಅವನ ಯೋಗ ಮುಗಿದಿದೆ. ಆ ಪತ್ರ ಹಾಗೂ ಅವನು ಕೂಡಿಸಿ ಇಟ್ಟಿರುವ ಅಪಾರ ಆಸ್ತಿಪಾಸ್ತಿಯ ವಿವರದ ಪಟ್ಟಿ ಕೈತಪ್ಪಿ ದೊರೆಗೆ ತಲಪಿ, ಉಲ್ಸಿಯ ಬಣ್ಣ ಬಯಲಾಗುತ್ತದೆ. ದೊರೆ ಅವನನ್ನು ತತ್‌ಕ್ಷಣ ಅಧಿಕಾರದಿಂದ ಕೆಳಗಿಳಿಸಿ ರಾಜ ದ್ರೋಹದ ಮೇಲೆ ಬಂಧಿಸುತ್ತಾನೆ. ಈಗ ಉಲ್ಸಿ ಪರಿವರ್ತಿತ ವ್ಯಕ್ತಿ. ಅವನಲ್ಲಿ ಪಶ್ಚಾತ್ತಾಪ ಮೂಡಿದೆ. ಹೊರಡುವ ಮುನ್ನ ತನ್ನ ನೆಚ್ಚಿನ ಸೇವಕ ಕ್ರಾಮ್‌ವೆಲ್‌ನ ಬೀಳ್ಕೊಡುಗೆ ಪಡೆಯುತ್ತ ಎದೆ ಕರಗುವ ದನಿ, ಮಾತುಗಳಲ್ಲಿ ದೇವದೂತರುಗಳನ್ನು ಸಹ ಅವನತಿಗೆ ಇಳಿಸಿದ ಮಹತ್ವಾಕಾಂಕ್ಷೆಯ ದುಷ್ಪರಿಣಾಮಗಳನ್ನು ವರ್ಣಿಸಿ ಹೇಳಿ ಅವನ ಸುಖ ಕೋರು ತ್ತಾನೆ. ತನ್ನೆಲ್ಲ ಆಸ್ತಿಯನ್ನೂ ರಾಜನಿಗೆ ಬಿಟ್ಟುಕೊಡುತ್ತಾನೆ. ಮುಂದೆ ಲೀಸ್ಟರನ ಸೆರೆಯಲ್ಲಿ ಕೊರಗಿನಿಂದ ಸಾಯುತ್ತಾನೆ.

ಒಂದು ತಾರೆ ಉರುಳಿದಂತೆ ಮತ್ತೊಂದು ಮೇಲೇರುತ್ತದೆ. ಈಗ ಉಲ್ಸಿಯ ಅಧಿಕಾರ, ಪದವಿಗಳು ಕ್ರ್ಯಾನ್ಮರನದು. ಅವನ ಬೆಂಬಲದಿಂದ ಹೆನ್ರಿ-ಕ್ಯಾಥರೀನರ ಮದುವೆಯು ಮುರಿಗಡೆಯಾಗುತ್ತದೆ. ಹೆನ್ರಿ ತಾನಾಗಲೇ ಗುಟ್ಟಾಗಿ ಗಂಧರ್ವ ವಿವಾಹ ಮಾಡಿಕೊಂಡಿದ್ದ ಆ್ಯನ್‌ಬುಲೆನಳಿಗೆ ರಾಣಿಯ ಪಟ್ಟ ಕಟ್ಟುತ್ತಾನೆ. ಇತ್ತ ಅವಳ ಪಟ್ಟಾಭಿ ಷೇಕವಾಗುತ್ತಿರುವಂತೆ ಅತ್ತ ಕ್ಯಾಥರೀನ್ ರೋಗದಿಂದ ನರಳುತ್ತ, ತನ್ನ ದುರ್ಗತಿಗೆ ಕೊರಗುತ್ತ ಸಾಯುತ್ತಾಳೆ. ಮುಂದೆ ದೊರೆಜನ ಕ್ರ್ಯಾನ್ಮರನ ವಿರುದ್ಧ ಪಿತೂರಿ ಹೂಡಿ ವಿಫಲರಾಗುತ್ತಾರೆ. ಅವನಿಗೆ ಹೆನ್ರಿಯ ಭದ್ರರಕ್ಷಣೆಯಿದೆ.

ಹೆನ್ರಿಗೆ ಆ್ಯನ್ ಬುಲೆನಳಲ್ಲಿ ಹೆಣ್ಣುಮಗುವಾಗುತ್ತದೆ. ಆ ಮಗುವೇ ಮುಂದಿನ ಎಲಿಜಬೆತ್ ರಾಣಿ. ಅದರ ವೈಭವದ ನಾಮಕರಣದೊಡನೆ ನಾಟಕ ಮುಗಿಯುತ್ತದೆ.

# ಹರ್ಷನಾಟಕಗಳು ಮತ್ತು ರುದ್ರನಾಟಕಗಳು

## 1. ಟೈಟಸ್ ಆಂಡ್ರೋನಿಕಸ್

**ರಚನೆ :** 1592-3 ? **ಮೊದಲ ಪ್ರಕಟನೆ:** 1594.

**ಆಕರಗಳು :** ರೋಮನ್ ಸೇನಾಪತಿಯೊಬ್ಬನನ್ನು ಕುರಿತ ಇವರ ಕಾಲ್ಪನಿಕ ಕಥೆ ಷೇಕ್-ಸ್ಪಿಯರ್ ಕಾಲೀನ ಇಂಗ್ಲಂಡ್‌ನಲ್ಲಿ ಪ್ರಚಾರದಲ್ಲಿದ್ದಿರಬಹುದೆಂಬುದಕ್ಕೆ ಆಧಾರಗಳಿವೆ. ಆದರೆ ನಿರ್ದಿಷ್ಟವಾದ ಯಾವ ಮೂಲ ಆಕರಗ್ರಂಥವೂ ಪತ್ತೆಯಾಗಿಲ್ಲ.

**ಕಥೆ :** ಸೆನೆಕನ ನಾಟಕದ ಜಾತಿಗೆ ಸೇರುವ ಈ ಕೃತಿಯೊಂದು ಭಯಾನಕ 'ರಕ್ತ-ನಾಟಕ'. ಪಕ್ಷ-ಪ್ರತಿಪಕ್ಷ, ಅಮಾನುಷ ಪ್ರತೀಕಾರ, ಕಗ್ಗೊಲೆ, ರಕ್ತಪಾತ— ಇವು ಇದರ ಬಂಡವಾಳ. ಇದೇ ಬಗೆಯ ಸಾಮಗ್ರಿಯನ್ನುಳ್ಳ 'ಹ್ಯಾಮ್ಲೆಟ್' ನಂತಹ ದುರಂತ ನಾಟಕಗಳನ್ನು ಸಾಹಿತ್ಯದ ಎತ್ತರಕ್ಕೇರಿಸುವ ಕಲ್ಪನಾರ್ಥಕ ಸಾರ್ಥಕತೆ, ಆಧ್ಯಾತ್ಮಿಕ ಪ್ರಮಾಣಗಳು ಈ ಕೃತಿಗಿಲ್ಲ. ಷೇಕ್ಸ್‌ಪಿಯರನ ನಾಟಕಗಳಲ್ಲೆಲ್ಲಾ ತೀರಾ ಕೀಳು, ಅನನುಭವಿಯ ಅಪಕ್ವ ಕೃತಿಯೆಂದೆನಿಸಿಕೊಂಡಿದೆ. ಇದು ಅವನು ಬರೆದುದೇ ಅಲ್ಲ, ಅವನ ಹೆಸರಿನೊಂದಿಗೆ ಅಂಟಿಕೊಂಡಿದೆ, ಬೇರೆ ಯಾರೋ — ಪ್ರಾಯಶಃ ಪೀಲ್ — ಬರೆದುದನ್ನು ಷೇಕ್ಸ್‌ಪಿಯರ್ ತಿದ್ದಿರಬೇಕು ಎಂಬೆಲ್ಲ ವಾದಗಳಿವೆ. ಈಚಿನ ಸಂಶೋಧಕರು ಕೃತಿಯಲ್ಲಿ ಅನುಮಾನದ ಎಲ್ಲೆ ಮೀರುವಷ್ಟು ಕವಿಯ ಕೈವಾಡ ಕಂಡಿದ್ದಾರೆ.

ರೋಮನರ ವೀರ ಸೇನಾಪತಿ ಟೈಟಸ್ ಆಂಡ್ರೋನಿಕಸ್ ಪಕ್ಕದ ಗಾತ್ ರಾಜ್ಯದ ಮೇಲೆ ಯುದ್ಧ ಮಾಡಿ ಗೆದ್ದು, ಅವರ ರಾಣಿ ಟಾಮೊರಳನ್ನೂ ಅವಳ ಮೂವರು ಮಕ್ಕಳನ್ನೂ ಕೈಸೆರೆ ಹಿಡಿದು ತಂದಿದ್ದಾನೆ. ವಿಜಯದ ಹುಚ್ಚು ಕೆಚ್ಚಿನಲ್ಲಿ ಯುದ್ಧದಲ್ಲಿ ಸತ್ತ ತನ್ನ ಮಕ್ಕಳ ಆತ್ಮಶಾಂತಿಗೆಂದು, ಟಾಮೊರ ಎಷ್ಟೇ ದಮ್ಮಯ್ಯಗುಡ್ಡೆಯಿಟ್ಟರೂ ಕೇಳದೆ ಅವಳ ಮಕ್ಕಳಲ್ಲಿ ಹಿರಿಯನಾದ ಅಲಾರ್ಬಸ್‌ನನ್ನು ಬಲಿ ತೆಗೆದುಕೊಳ್ಳುತ್ತಾನೆ.

ಅದೇ ಹೊತ್ತಿಗೆ ರೋಮನ್ ದೊರೆ ಸತ್ತಿದ್ದು ಸಿಂಹಾಸನ ತೆರವಾಗಿರುತ್ತದೆ. ದೊರೆಯ ಮಕ್ಕಳಾದ ಸಾಟರ್‌ನೈನಸ್ ಮತ್ತು ಬಾಸಿಯಾನಸರು ಅದನ್ನು ಏರಲು ನಾನು ತಾನೆಂದು ಹಕ್ಕು ಸ್ಥಾಪಿಸುತ್ತಾರೆ. ಜನತೆ ಟೈಟಸನ ಪರಾಕ್ರಮ, ವಿಜಯಗಳನ್ನು ಮನ್ನಿಸಿ, ಅವನಿಗೇ ಕಿರೀಟವನ್ನರ್ಪಿಸುತ್ತದೆ. ಆದರೆ ಟೈಟಸ್ ಧರ್ಮಿಷ್ಠ. ದೊರೆಯ ಹಿರಿಯ ಮಗ ಸಾಟರ್‌ನೈನಸ್‌ಗೆ ಅದು ನ್ಯಾಯವಾಗಿ ಸಲ್ಲಬೇಕೆಂದು ಹೇಳಿ ಅವನನ್ನು ಸಿಂಹಾಸನದ ಮೇಲೆ ಕೂರಿಸುತ್ತಾನೆ. ಅವನ ಕೋರಿಕೆಯಂತೆ ತನ್ನ ಮಗಳು ಲವಿನಿಯಾಳನ್ನು ಅವನಿಗೆ ಧಾರೆಯೆರೆದುಕೊಟ್ಟು ಆ ಮೂಲಕ ರಕ್ತಸಂಬಂಧವನ್ನು ಸ್ಥಾಪಿಸಲು ಒಪ್ಪುತ್ತಾನೆ. ಆದರೆ ಲವಿನಿಯಾ ಕಿರಿಯ ಬಾಸಿಯಾನಸ್‌ನ ಪ್ರೀತಿಯ ಸ್ವತ್ತು. ಅವನು ಅವಳನ್ನು ಹಾರಿಸಿಕೊಂಡು ಹೋಗಲು ಪ್ರಯತ್ನಿಸುತ್ತಾನೆ. ದೊರೆಗೆ ಕೊಟ್ಟ ಭಾಷೆಗೆ ತಪ್ಪಬೇಕಾಗಿ ಬಂದ ಕೋಪದಲ್ಲಿ ಟೈಟಸ್ ಪ್ರೇಮಿಗಳನ್ನು ಹಿಡಿದು ತರಲು ಹೋಗುತ್ತಾನೆ. ಅಡ್ಡಬಂದ ಮಗ ಮೂಟಿಯಸ್‌ನನ್ನು ಮುಖನೋಡದೆ ಕಡಿದುಹಾಕುತ್ತಾನೆ.

ಈ ನಡುವೆ ಸಾಟರ್‌ನೈನಸ್‌ಗೆ ಟಾಮೊರಳ ಮೇಲೆ ಕಣ್ಣು. ಆ ವಿಶ್ವಾಸಘಾತಕ ಅವಳನ್ನು ಒಲಿಸಿಕೊಳ್ಳಲು ತನಗೆ ದೊರೆತನವಿತ್ತ ಟೈಟಸನಿಗೇ ದೇಶದ್ರೋಹಿಯ ಪಟ್ಟ ಕಟ್ಟಿ ಅವಮಾನಕ್ಕೀಡುಮಾಡುತ್ತಾನೆ. ಟಾಮೊರ ತನ್ನ ರಾಣಿಯೆಂದು ಘಂಟಾಘೋಷವಾಗಿ ಸಾರುತ್ತಾನೆ. ತನ್ನ ಮಗನನ್ನು ವಧಿಸಿದ ಟೈಟಸನ ಮೇಲೆ ಸೇಡು ತೀರಿಸಿಕೊಳ್ಳಲು ಟಾಮೊರಳಿಗೆ ಇದು ಒಳ್ಳೆಯ ಅವಕಾಶ!

ಏರನ್ ಟಾಮೊರಳ ಕಳ್ಳ ನಲ್ಲ. ಕಗ್ಗಪ್ಪಿನ, ರಕ್ಕಸಮೊಗದ ಆ ಪಿಶಾಚಿಗೆ ಮೂರು ಮಕ್ಕಳ ತಾಯಿಯಾದರೂ ಕಾಮದ ಕಾವಡಗದ ರಾಣಿ ಮಾರುಹೋಗಿದ್ದಾಳೆ. ಒಮ್ಮೆ ಅಡವಿಯ ವಿಹಾರದಲ್ಲಿ ಏರನ್-ಟಾಮೊರರು ನಡೆಸಿರುವ ಕಾಮಕೇಳಿ ಅಲ್ಲಿಗೆ ಅಕಸ್ಮಾತ್ತಾಗಿ ಬಂದ ಬಾಸಿಯಾನಸ್ ಮತ್ತು ಲವಿನಿಯಾರ ಕಣ್ಣಿಗೆ ಬೀಳುತ್ತದೆ. ಎಲ್ಲಿ

ಸುದ್ದಿ ದೊರೆಯ ಕಿವಿಗೆ ಬೀಳುವುದೋ ಎಂದು ಹೆದರಿದ ಟಾಮೊರ ಒಂದು ತಂತ್ರ ಹೂಡುತ್ತಾಳೆ. ಅವರು ತನ್ನನ್ನು ಅವಮಾನಪಡಿಸಿ ಹಿಂಸಿಸುವುದಾಗಿ ಹೆದರಿಸಿದರೆಂದು ಅದೇ ಅಡವಿಗೆ ಬೇಟೆಗೆ ಬಂದಿದ್ದ ತನ್ನ ಮಕ್ಕಳು ಡಿಮೀಟ್ರಿಯಸ್, ಕೈರನರಿಗೆ ದೂರಿಡುತ್ತಾಳೆ. ಅವರು ಇಂತಹ ಅವಕಾಶಕ್ಕೇ ಕಾಯುತ್ತಿದ್ದವರು! ಅವರು ಬಾಸಿಯಾನಸ್‌ನನ್ನು ಕೊಂದು ಹೆಣವನ್ನು ಒಂದು ಹಳ್ಳಕ್ಕೊಗೆದು, ತಾಯಿಯ ಚಿತಾವಣೆಯಿಂದ ಸಾಧ್ವಿ ಲವಿನಿಯಾಳೊಡನೆ ಹಟಸಂಭೋಗಮಾಡಿ ಅವಳ ನಾಲಗೆ ಕೈಗಳನ್ನು ಕತ್ತರಿಸಿ ಹಾಕುತ್ತಾರೆ.

ಈ ಹೊತ್ತಿಗೆ ಏರನ್‌ನ ಕುಹಕಕ್ಕೆ ಸಿಕ್ಕಿದ ಟೈಟಸನ ಮಕ್ಕಳು ಮಾರ್ಟಿಯಸ್ ಮತ್ತು ಕ್ವಿಂಟಸರು ಬಾಸಿಯಾನಸ್‌ನ ಹೆಣವಿದ್ದ ಹಳ್ಳಕ್ಕೆ ತಪ್ಪಿ ಬಿದ್ದು, ಆ ಕೊಲೆಯ ಆರೋಪ ಹೊರಬೇಕಾಗುತ್ತದೆ. ನ್ಯಾಯಾಧಿಪತಿಗಳು ಅವರಿಬ್ಬರನ್ನೂ ತಪ್ಪಿತಸ್ಥರೆಂದು ತೀರ್ಮಾನಿಸಿ ಮರಣದಂಡನೆಗೆ ಗುರಿಮಾಡುತ್ತಾರೆ; ಅವರ ರಕ್ಷಣೆಗೆ ಬಂದ ಟೈಟಸನ ಮಗ ಲೂಸಿಯಸ್‌ನಿಗೆ ಗಡೀಪಾರಾಗುತ್ತದೆ. ಟೈಟಸ್, ಅವನ ತಮ್ಮ ಮಾರ್ಕಸ್, ಇನ್ನೊಬ್ಬ ಮಗ ಲೂಸಿಯಸರಲ್ಲಿ ಯಾರೊಬ್ಬರಾದರೂ ವಿಶ್ವಾಸ ಪ್ರಕಟಣೆಯ ಸಾಕ್ಷಿಯಾಗಿ ತಮ್ಮ ಒಂದು ಕೈ ಕತ್ತರಿಸಿ ಕಳಿಸಿದ್ದಾದರೆ, ದೊರೆ ಮರಣದಂಡನೆಗೆ ಗುರಿಯಾದ ಟೈಟಸನ ಮಕ್ಕಳನ್ನು ಕ್ಷಮಿಸಿ ಜೀವದಾನ ಮಾಡುವನೆಂಬ ಸುಳ್ಳು ಸುದ್ದಿ ತರುತ್ತಾನೆ, ಕುಹಕಿ ಏರನ್. ಮುದುಕ ಟೈಟಸ್ ಹಿಂದೆ ಮುಂದೆ ನೋಡದೆ ಏರನ್‌ನ ಸಹಾಯದಿಂದಲೇ ತನ್ನ ಕೈ ಕತ್ತರಿಸಿ ಕಳಿಸುತ್ತಾನೆ. ಆದರೆ ಎಂತಹ ಅಣಕ! ಕತ್ತರಿಸಿ ಕಳಿಸಿದ ಕೈ ದೊರೆಯಿಂದ ತಿರಸ್ಕೃತವಾಗಿ ಟೈಟಸನಿಗೆ ಹಿಂದಿರುಗಿ ಬರುತ್ತದೆ, ಅದೂ ಮಕ್ಕಳ ತಲೆಗಳ ಸಮೇತ! ಅವನು ಪ್ರತೀಕಾರದ ಪಣ ತೊಟ್ಟು, ದೇಶಾಂತರವಾಸಕ್ಕೆ ಗುರಿಯಾದ ಮಗ ಲೂಸಿಯಸ್‌ನನ್ನು ಸೈನ್ಯ ಕಟ್ಟಿಕೊಂಡು ಬರಲು ಶತ್ರುಗಳಾದ ಗಾತರಲ್ಲಿಗೇ ಅಟ್ಟುತ್ತಾನೆ. ತಾನು ಹುಚ್ಚನಂತೆ ನಟಿಸುತ್ತ ಸೇಡಿಗೆ ಸಮಯ ಕಾಯುತ್ತಾನೆ.

ಈ ನಡುವೆ ಟಾಮೊರಳಿಗೆ ಒಂದು ಮಗುವಾಗುತ್ತದೆ. ಮಿಂಡ ಏರನ್‌ನಿಗೆ ಹುಟ್ಟಿದ ಪಾಪದ ಕೂಸು ಅದು. ಅದರ ಅಣ್ಣಂದಿರು ತಾಯಿಗೆ ಕಳಂಕ ತಪ್ಪಿಸಲೆಂದು ಅದನ್ನು ಕೊಲ್ಲಬಯಸುತ್ತಾರೆ. ಆದರೆ ಘಾತಕ ಏರನ್‌ನ ಎದೆ ಸಹ ಹಸಿ! ಅದರ ಬದಲು ಅದರ ಬಗ್ಗೆ ಸುದ್ದಿ ತಿಳಿದಿದ್ದ ದಾದಿ ಸೂಲಗಿತ್ತಿಯರನ್ನೇ ಕೊಂದು, ಅದನ್ನು ಗುಟ್ಟಾಗಿ ಬೆಳಸುವ ಏರ್ಪಾಡು ಮಾಡುತ್ತಾನೆ.

ಇತ್ತ ನಾಲಿಗೆ ಕೈಗಳನ್ನು ಕಳೆದುಕೊಂಡ ವಿಲಕ್ಷಣವತಿ ಲವಿನಿಯಾ ಸಂಜ್ಞೆಯ ಮೂಲಕ ತಂದೆಗೆ ತನ್ನ ಮಾನಭಂಗ, ಅಂಗಚ್ಛೇದಗಳ ಕರುಣ ಕಥೆ ತಿಳಿಸುತ್ತಾಳೆ.

ಈ ಹೊತ್ತಿಗೆ ಲೂಸಿಯಸ್ ಗಾತ್‌ನಿಂದ ಸೈನ್ಯ ಕಟ್ಟಿಕೊಂಡು ಬಂದು ರೋಮಿನ ಮೇಲೆ ದಾಳಿಯಿಡುತ್ತಾನೆ. ಟಾಮೊರಳಿಗೆ ಸುದ್ದಿ ತಿಳಿಯುತ್ತದೆ. ಲೂಸಿಯಸನ ಜನ-ಪ್ರಿಯತೆ ಹಾಗೂ ಅದರಿಂದ ತಮ್ಮ ಮೇಲಾಗುವ ಪರಿಣಾಮಗಳನ್ನು ಅವಳು ಬಲ್ಲಳು. ಆ ಚದುರೆ ಟೈಟಸನ ಮನೆಯಲ್ಲಿ ದೊರೆಗೂ ಲೂಸಿಯಸ್‌ನಿಗೂ ಸಂಧಾನವೇರ್ಪಡಿಸಿ, ಆ ಮೂಲಕ ಲೂಸಿಯಸ್‌ನನ್ನು ಅವನ ಸೈನ್ಯದಿಂದ ಬೇರ್ಪಡಿಸಲು ಪ್ರಯತ್ನಿಸುತ್ತಾಳೆ. ಅವಳೂ ಅವಳಿಬ್ಬರು ಮಕ್ಕಳೂ ವೇಷ ಮರಸಿ 'ಹುಚ್ಚ' ಟೈಟಸನ ಮನೆಗೆ ಹೋಗಿ ಅವನ ಸೇಡಿನ ಪಣದಲ್ಲಿ ನೆರವಾಗಲು ಬಂದವರಂತೆ ನಟಿಸುತ್ತಾರೆ. ಅವನಿಗೆ ಇವರ



**ಟೈಟಸನ ಕೈ ಕತ್ತರಿಸುತ್ತಿರುವ ಕೇಡಿ ಏರನ್**

"ಕೊಳ್ಳೀ ಕೈಯ . . . ಗಿಡವು ಬಾಡಿದ ಮೇಲೆ ಆದನು ಕೀಳ್ವುದೆ ಲೇಸು." — ಟೈಟಸ್.

ಗುರುತು ಹಿಡಿಯುವುದು ಕಷ್ಟವಾಗದು. ಆದರೂ ಇವರನ್ನು ನಿಜವಾಗಿ ನಂಬಿದಂತೆ ತೋರಿಸಿಕೊಳ್ಳುತ್ತಾನೆ. ಅವನು ನಂಬಿದನೆಂದು ನಂಬಿ ಟಾಮೊರ ಮತ್ತು ಅವಳ ಮಕ್ಕಳು ಮೋಸ ಹೋಗುತ್ತಾರೆ. ಟೈಟಸ್ ಮಗ ಲೂಸಿಯಸ್‌ನನ್ನು ಅಲ್ಲಿಗೆ ಕರೆಸಲು ಒಪ್ಪುತ್ತಾನೆ. ಟಾಮೊರ ಮಕ್ಕಳನ್ನು ಅಲ್ಲೇ ಬಿಟ್ಟು, ಸಾಟರ್‌ನೈನಸ್‌ನನ್ನು ಕರೆದು ತರಲು ಹೋಗುತ್ತಾಳೆ. ಅವರು ಬರುವ ಹೊತ್ತಿಗೆ ಟೈಟಸ್ ಒಂದು 'ವಿಚಿತ್ರ' ಭೋಜನಕ್ಕೆ ಸಿದ್ಧ ಮಾಡಿರುತ್ತಾನೆ. ಮಗಳನ್ನು ಕೆಡಿಸಿ ನಾಲಿಗೆ ಕೈಗಳನ್ನು ಕತ್ತರಿಸಿದ ಡಿಮೀಟ್ರಿಯಸ್, ಕೈರನರ ತಲೆ ಕಡಿಯುತ್ತಾನೆ. ಲವಿನಿಯಾ ಅವರಿಂದ ತೊಟ್ಟಿಕ್ಕಿದ ರಕ್ತ ಕೂಡಿಸುತ್ತಾಳೆ. ಅವರ ಮಾಂಸರಕ್ತದಿಂದ ಸಿದ್ಧಮಾಡಿದ ಕಜ್ಜಾಯ ಟಾಮೊರಳಿಗೆ ಉಣಸಿಗುತ್ತದೆ.

ಘೋರ ಮಾರಣಹೋಮದ ಕೊನೆಯ ಹಂತ. ಮಗಳ ಅಪಮಾನಕ್ಕೆ ಪ್ರತೀಕಾರ ಕೊಂಡ ಆ ಮಾನಮೂರ್ತಿ ಟೈಟಸ್ ಅವಳನ್ನು ಸಾಯಿಸಿ ವಿಮುಕ್ತಿ ನೀಡುತ್ತಾನೆ. ನಂತರ ಟಾಮೊರಳನ್ನು ಕೊಲ್ಲುತ್ತಾನೆ. ಸಾಟರ್‌ನೈನಸ್ ಟೈಟಸನ ಎದೆಗೆ ಚೂರಿ ಇಡುತ್ತಾನೆ. ಲೂಸಿಯಸ್ ಸಾಟರ್‌ನೈನಸ್‌ನ ಮೇಲೆ ಬಿದ್ದು ಸಾಯಿಸಿ, ಜನತೆಗೆ ತನ್ನ ನಿರಪರಾಧಿ ತಂದೆಯ ಘೋರ ಕಥೆಯನ್ನು ವಿವರಿಸುತ್ತಾನೆ. ಜನ ಅವನನ್ನು ದೊರೆಯನ್ನಾಗಿ ಆರಿಸುತ್ತಾರೆ. ಇಷ್ಟೆಲ್ಲಕ್ಕೂ ಕಾರಣನಾದ ಏರನ್‌ನಿಗೆ ಹಿಂಸಾತ್ಮಕ ಮರಣದಂಡನೆಯಾಗುತ್ತದೆ.

## 2. ದಿ ಕಾಮಿಡಿ ಅಫ್ ಎರರ್ಸ್

**ರಚನೆ:** 1593-4.  **ಮೊದಲ ಪ್ರಕಟನೆ:** 1623.

**ಆಕರಗಳು:** ಮುಖ್ಯವಾಗಿ ಲ್ಯಾಟಿನ್ ಹಾಸ್ಯಲೇಖಕ ಪ್ಲಾಟಸ್‌ನ 'ಮೆನೀಕ್ಮಿ' (ಅವಳಿ-ಜವಳಿ) ಎಂಬ ಪ್ರಹಸನ. ಧಣಿ-ನೌಕರರ ಜೋಡಿಯ ಸೃಷ್ಟಿಗೆ ಹಾಗೂ ಹೆಂಡತಿಯೇ ಗಂಡನನ್ನು ಮನೆಯಿಂದ ಹೊರಗಿಡುವ ಮೂರನೆ ಅಂಕದ ಮೊದಲ ದೃಶ್ಯದ ಸನ್ನಿವೇಶಕ್ಕೆ ಅವನದೇ ಇನ್ನೊಂದು ಕೃತಿ 'ಆಂಫಿಟ್ರು' ಪ್ರೇರಣೆ.

**ಕಥೆ:** ಎರಡು ಜತೆ ಅವಳಿ-ಜವಳಿಗಳು ಒಟ್ಟಾದ ಕಾಲ್ಪನಿಕ ಸನ್ನಿವೇಶದಲ್ಲಿ ಜನ ಒಬ್ಬರನ್ನು ಇನ್ನೊಬ್ಬರೆಂದು ಭ್ರಮಿಸಿದಾಗ ಹೊರಹೊಮ್ಮುವ ಹಾಸ್ಯದ ಹುಚ್ಚು ಹೊಳೆ ಈ ನಾಟಕ. ಕಥೆಯ ಕಟ್ಟಡ ಬಲು ತೊಡಕು. ಕವಿ ತುಂಬ ಕುಶಲತೆಯಿಂದ ಅದನ್ನು ನಿರ್ವಹಿಸಿದ್ದಾನೆ. ಇಲ್ಲಿ ಕ್ರಿಯೆ ಪ್ರಧಾನ, ವಿಚಾರ ಗೌಣ. ಕಾವ್ಯ ಸಾಧಾರಣ.

ಎಫಿಸಸ್ ಪಟ್ಟಣಕ್ಕೂ ಸೈರಕ್ಯೂಸ್ ಪಟ್ಟಣಕ್ಕೂ ಬದ್ಧ ವೈರ. ಒಂದು ಪಟ್ಟಣದವರು ದಾರಿ ತಪ್ಪಿ ಇನ್ನೊಂದಕ್ಕೆ ಕಾಲಿಟ್ಟರೆ ದಂಡ, ಇಲ್ಲವೇ ಮರಣದಂಡನೆ. ಸೈರಕ್ಯೂಸ್‌ನ ವೃದ್ಧ ವ್ಯಾಪಾರಿ ಈಜಿಯನ್ ಎಫಿಸಸ್‌ಗೆ ಬಂದವನು ಅಲ್ಲಿ ಸಿಕ್ಕಿ ಬೀಳುತ್ತಾನೆ. ಕಾನೂನಿನ ಪ್ರಕಾರ ಅಲ್ಲಿನ ದೊರೆ ಅವನಿಗೆ ಸಾವಿರ ವರಹಗಳ ದಂಡ ವಿಧಿಸುತ್ತಾನೆ. ಈಜಿಯನ್‌ನಲ್ಲಿ ಅಷ್ಟು ಹಣವಿಲ್ಲ. ಮರಣದಂಡನೆಯನ್ನು ಒಪ್ಪುವ ಮುನ್ನ ತನ್ನ ಕರುಣ ಕಥೆಯನ್ನು ಹೇಳಿಕೊಂಡು, ಎಫಿಸಸ್‌ಗೆ ಬಂದ ಕಾರಣ ತಿಳಿಸುತ್ತಾನೆ. ಕಾಲು ಶತಮಾನದ ಹಿಂದೆ ಈಜಿಯನ್ ದೂರದ ಎಪಿಡಾಮ್ನಮ್ ಪಟ್ಟಣಕ್ಕೆ ಹೋಗಿದ್ದಾಗ ಅಲ್ಲಿ ಅವನ ಹೆಂಡತಿ ಅವಳಿ-ಜವಳಿ ಗಂಡುಮಕ್ಕಳನ್ನು ಹೆರುತ್ತಾಳೆ. ಅದೇ ಗಳಿಗೆಯಲ್ಲಿ ಅಲ್ಲಿನ ಬಡ ಹೆಂಗಸೊಬ್ಬಳು ಸಹ ಅವಳಿ-ಜವಳಿ ಗಂಡುಗಳನ್ನು ಹೆತ್ತಿದ್ದಾಳೆ. ಆ ಬಡ ಅವಳಿ-ಜವಳಿಗಳನ್ನು ಈಜಿಯನ್ ದಂಪತಿಗಳು ಕೊಳ್ಳುತ್ತಾರೆ, ಮುಂದೆ ತಮ್ಮ ಅವಳಿ ಮಕ್ಕಳ ಊಳಿಗಕ್ಕಾಗಲೆಂದು. ಈಜಿಯನ್‌ನ ಇಬ್ಬರ ಮಕ್ಕಳ ಹೆಸರೂ ಆಂಟಿಫೋಲಸ್: ಊಳಿಗದ ಇಬ್ಬರು ಮಕ್ಕಳ ಹೆಸರೂ ಡ್ರೋಮಿಯೊ. ಹೆಸರಿನಂತೆ ರೂಪದಲ್ಲಿ ಸಹ ಒಂದೊಂದು ಜೊತೆ ಅವಳಿ-ಜವಳಿಗಳಿಗೂ ಪರಸ್ಪರ ಸಾಮ್ಯ.

ಎಪಿಡಾಮ್ನಮ್‌ನಲ್ಲಿ ಕೆಲಸ ಮುಗಿಸಿ ಈಜಿಯನ್ ದಂಪತಿಗಳು ಜೋಡಿ ಅವಳಿ-ಜವಳಿಗಳೊಡನೆ ಊರಿಗೆ ಹೊರಡುತ್ತಾರೆ. ಆದರೆ ದುರ್ದೈವದಿಂದ ದಾರಿಯಲ್ಲಿ ಹಡಗು ಒಡೆದು, ಈಜಿಯನ್ ಮತ್ತು ಅವನ ಹೆಂಡತಿ ಬೇರೆಬೇರೆಯಾಗುತ್ತಾರೆ. ಎರಡು ಜೊತೆ

ಅವಳಿ-ಜವಳಿಗಳಲ್ಲಿ ಒಂದು ಜೋಡಿ ಈಜಿಯನ್‌ನ ಸಂಗಡ; ಇನ್ನೊಂದು ಹೆಂಡತಿಯ ಸಂಗಡ. ಹೆಂಡತಿ, ತನ್ನೊಂದು ಮಗು, ಊಳಿಗದ್ದೊಂದು ಮಗು ಮೀನು-ದೋಣಿಯೊಂದರಲ್ಲಿ ಪಾರಾಗಿ ಹೋಗುವುದನ್ನು ಈಜಿಯನ್ ದೂರದಿಂದಲೇ ಕಾಣುತ್ತಾನೆ.

ಹದಿನೆಂಟು ವರ್ಷಗಳು ಉರುಳುತ್ತವೆ. ಹೆಂಡತಿ ಮಕ್ಕಳು ಇನ್ನೂ ಕಾಣಸಿಕ್ಕಿಲ್ಲ. ತನ್ನೊಡನಿದ್ದ ಮಗು ಮತ್ತು ಆಳು ಮಗ ಬೆಳೆದು ದೊಡ್ಡವರಾಗಿದ್ದಾರೆ. ಕಳೆದು ಹೋದ ಸೋದರರನ್ನು ಹುಡುಕಿ ಬರುವೆವೆಂದು ಊರು ಬಿಟ್ಟು ಹೊರಡುತ್ತಾರೆ. ಅವರು ಸಹ ವಾಪಸು ಬರುವುದಿಲ್ಲ. ಅವರನ್ನು ಅರಸಿ ಹೊರಟ ಈಜಿಯನ್ ಊರೂರು ಸುತ್ತಿ ವಿಫಲನಾಗಿ, ಈಗ ಎಫಿಸಸ್‌ನಲ್ಲಿ ಮರಣದಂಡನೆಗೆ ಗುರಿಯಾಗಿದ್ದಾನೆ.

ಈ ದಾರುಣ ಕಥೆಯನ್ನು ಕೇಳಿ ದೊರೆಯ ಎದೆ ಕರಗುತ್ತದೆ. ಆದರೆ ದಂಡವನ್ನು ಅಳಿಸುವಂತಿಲ್ಲ. ಒಂದು ದಿನದ ಗಡು ಕೊಡುತ್ತಾನೆ. ಅಷ್ಟರೊಳಗೆ ಈಜಿಯನ್ ದಂಡದ ಹಣವನ್ನು ಸಂಪಾದಿಸಿ ಕೊಟ್ಟರೆ ಪ್ರಾಣ ಉಳಿದು ಸ್ವಾತಂತ್ರ್ಯ ದೊರೆಯುತ್ತದೆ.

ಈ ನಡುವೆ ಸೈರಕ್ಯೂಸ್‌ನ ಆಂಟಿಫೋಲಸ್ ತನ್ನ ಆಳಿನೊಡನೆ ಎಫಿಸಸ್‌ಗೆ ಬಂದಿದ್ದಾನೆ. ಸೋಜಿಗವೆಂದರೆ, ಐದು ವರ್ಷಗಳಿಂದ ಯಾರನ್ನು ಅರಸುತ್ತಿರುವನೋ ಆ ತನ್ನ ಅಣ್ಣ ಮತ್ತು ಅವನ ಆಳು ಸಹ ಎಫಿಸಸ್‌ನಲ್ಲೇ ನೆಲಸಿದ್ದಾರೆ. ಆ ವಿಷಯ ಇವನಿಗೆ ತಿಳಿಯದು. (ಧಣಿಗಳಿಬ್ಬರ ಹೆಸರೂ ಆಂಟಿಫೋಲಸ್, ಆಳುಗಳದ್ದು ಡ್ರೋಮಿಯೊ ಆಗಿರುವುದರಿಂದ ಪ್ರತ್ಯೇಕತೆಗಾಗಿ ಸೈರಕ್ಯೂಸ್‌ನಿಂದ ಬಂದವರನ್ನು 'ಸೈ-ಆಂಟಿಫೋಲಸ್', 'ಸೈ-ಡ್ರೋಮಿಯೊ' ಎಂದೂ ಎಫಿಸಸ್‌ನಲ್ಲಿ ನೆಲಸಿದವರನ್ನು 'ಎಫಿ-ಆಂಟಿಫೋಲಸ್', 'ಎಫಿ-ಡ್ರೋಮಿಯೊ' ಎಂದೂ ಗುರುತಿಸಲಾಗಿದೆ.) ಎಫಿ-ಆಂಟಿಫೋಲಸ್‌ನದು ವಿರಸದ ದಾಂಪತ್ಯ. ಅವನ ಹೆಂಡತಿ ಏಡ್ರಿಯಾನ ಸಂಶಯಪಿಶಾಚಿ. ಗಂಡ ಸಹ ಅವಕಾಶ ಸಿಕ್ಕಾಗ ಚಂಚಲಚಿತ್ತನೇ! ಆ ದಿನ ಗಂಡ ಎಷ್ಟು ಹೊತ್ತಾದರೂ ಮನೆಗೆ ಹಿಂದಿರುಗಿ ಬಾರದುದನ್ನು ಕಂಡು ಬೇಸತ್ತು, ಅವನನ್ನು ಹುಡುಕಿ ತರಲು ಆಳು ಎಫಿ-ಡ್ರೋಮಿಯೊನನ್ನು ಕಳಿಸುತ್ತಾಳೆ. ಆ ಆಳು ಪೇಟೆಯಲ್ಲಿ ಸೈ-ಆಂಟಿಫೋಲಸ್‌ನನ್ನು ಕಂಡು ಅವನೇ ತನ್ನ ಧಣಿಯೆಂದು ತಪ್ಪು ತಿಳಿದು ಊಟಕ್ಕೆ ಮನೆಗೆ ಬರುವಂತೆ ಒತ್ತಾಯ ಮಾಡುತ್ತಾನೆ. ಎಫಿ-ಡ್ರೋಮಿಯೊ ಪೆಟ್ಟು ತಿಂದು ಹಿಂದಿರುಗಬೇಕಾಗುತ್ತದೆ. ಅವನು ಮೈ ಕೈ ಮೇಲೆಲ್ಲ ಅದರ ಸಾಕ್ಷ್ಯ ಹೊತ್ತು ಯಜಮಾನಿಯ ಬಳಿ ಬಂದು ನಡೆದುದನ್ನು ವಿವರಿಸುತ್ತಾನೆ. ಸಿಟ್ಟಿಗೆದ್ದ ಏಡ್ರಿಯಾನ ತಾನೇ ಗಂಡನ ಕಿವಿ ಹಿಡಿದು ಎಳೆದು ತರುವೆನೆಂದು ಹೊರಡುತ್ತಾಳೆ. ಪೇಟೆಯಲ್ಲಿ ಸೈ-ಆಂಟಿಫೋಲಸ್‌ನ ಭೇಟಿಯಾಗುತ್ತದೆ. ಅವನೇ ತನ್ನ ಗಂಡನೆಂದು ಬಗೆದು ಮನೆಗೆ ನಡೆಯೆನ್ನುತ್ತಾಳೆ! ಸೈ-ಆಂಟಿಫೋಲಸ್ ತಬ್ಬಿಬ್ಬಾಗುತ್ತಾನೆ. ಎಫಿಸಸ್ ಮಾಟಮಂತ್ರಗಳ ಪಟ್ಟಣವೆಂದು ಖಚಿತವಾಗುತ್ತದೆ! ಆದರೂ ನೋಡಿಯೇ ಬಿಡುವುದೆಂದು ತನ್ನ ಆಳಿನೊಡನೆ ಏಡ್ರಿಯಾನಳನ್ನು ಹಿಂಬಾಲಿಸುತ್ತಾನೆ.

ಮನೆ ತಲಪಿ ಏಡ್ರಿಯಾನ ಸೈ-ಡ್ರೋಮಿಯೊನನ್ನು ಬಾಗಿಲ ಬಳಿ ಕಾವಲಿಟ್ಟು, 'ಗಂಡ'ನೊಡನೆ ಉಣಲು ಹೋಗುತ್ತಾಳೆ. ಇದುವರೆಗೆ ರಂಗದಾಚೆಗಿದ್ದ ಎಫಿ-ಆಂಟಿಫೋಲಸ್ ಎಫಿ-ಡ್ರೋಮಿಯೊನೊಡನೆ ಮನೆಗೆ ಹಿಂದಿರುಗುತ್ತಾನೆ. ಜೊತೆಗೆ ಗೆಳೆಯ ಬಾಲ್ತಜಾರ್ ಮತ್ತು ಅಕ್ಕಸಾಲಿಗ ಏಂಜಲೊರನ್ನು ಊಟಕ್ಕೆ ಕರೆ ತಂದಿದ್ದಾನೆ. ಕದ ತಟ್ಟಿದರೆ

ತೆಗೆಯುವವರಿಲ್ಲ. ಬಾಗಿಲ ಆ ಕಡೆ ಸೈ-ಡ್ರೋಮಿಯೊ; ಈ ಕಡೆ ಎಫಿ-ಡ್ರೋಮಿಯೊ. ಒಬ್ಬ ತೆಗೆಯ, ಇನ್ನೊಬ್ಬ ಬಿಡ; ನಡುವೆ ವಿನಿಮಯವಾಗದ ಬೈಗಳಿಲ್ಲ. ಗಲಭೆ ಕೇಳಿ ಎದ್ದು ಬಂದ ಏಡ್ರಿಯಾನಳೇ ಗಂಡನಿಗೆ 'ನೀನೆಲ್ಲಿಯ ಗಂಡ? ಹೊರಡಾಚೆ' ಎನ್ನುತ್ತಾಳೆ. ಅವಳು ಗಂಡನೆಂದುಕೊಂಡವ ಒಳಗೆ ಉಣ್ಣುತ್ತಿದ್ದಾನೆ. ಎಫಿ-ಆಂಟಿಫೋಲಸ್ ಕೋಪದಲ್ಲಿ ಗೆಳೆಯನೊಡನೆ ಗುರುತಿನ ಸೂಳೆಯೊಬ್ಬಳ ಮನೆಗೆ ಹೊರಡುತ್ತಾನೆ. ಹೆಂಡತಿಗೆ ಬುದ್ಧಿ ಕಲಿಸಲು ಅವಳಿಗೆಂದು ಮಾಡಹೇಳಿದ್ದ ಹಾರವನ್ನು ಸೂಳೆಗೇ ಕೊಡಲು ನಿರ್ಧರಿಸಿ, ಅದನ್ನು ಅವಳ ಮನೆಗೆ ತಲಪಿಸುವಂತೆ ಅಕ್ಕಸಾಲಿಗನಿಗೆ ಹೇಳಿಕಳಿಸುತ್ತಾನೆ.

ಏಡ್ರಿಯಾನಳ ತಂಗಿ ಲೂಸಿಯಾನ ಮದುವೆಗೆ ಬೆಳೆದು ನಿಂತ ಚೆಲುವೆ. ಸೈ-ಆಂಟಿಫೋಲಸ್ ಅವಿವಾಹಿತ ಯುವಕ. ಪ್ರೇಮಕ್ಕೆ ಪಕ್ಕಾದ ಹೃದಯ ಅವನದು. 'ಹೆಂಡತಿ'ಯ ಕಣ್ಣು ತಪ್ಪಿದೊಡನೆಯೇ ಪ್ರೇಮಾಲಾಪನೆ ಮಾಡಿ ಲಗ್ನವಾಗೆನ್ನುತ್ತಾನೆ. ಅವಳು 'ಭಾವ'ನ ಮನೆಹಾಳತನಕ್ಕೆ ಛೀಮಾರಿ ಹಾಕುತ್ತಾಳೆ. ಹೊರಗಡೆ ಈ ಪ್ರಣಯ ಪ್ರಸಂಗವಾದರೆ ಒಳಗಡೆ ಮತ್ತೊಂದು. ಮನೆಯ ಅಡಿಗೆಯವಳು ಸೈ-ಡ್ರೋಮಿಯೊನನ್ನು ತನ್ನ ಗೆಣೆಗಾರ ಸಹನೌಕರ ಎಫಿ-ಡ್ರೋಮಿಯೊ ಎಂದು ತಪ್ಪು ತಿಳಿದು ಪ್ರಣಯಚೇಷ್ಟೆಗೆ ಆರಂಭಿಸಿದ್ದಾಳೆ. ಅವಳೋ ಸಾಕ್ಷಾತ್ ಹಿಡಿಂಬಿ! ಭೂಮ್ಯಾಕಾರದ ಮೈ, ಪಾದರಕ್ಷೆಯ ಬಣ್ಣ! ಸೈ-ಡ್ರೋಮಿಯೊ ಅವಳ ಕಾಟ ತಾಳಲಾರದೆ ಹೊರಗೋಡಿ ಬಂದು, ಹತಾಶನಾಗಿ ನಿಂತ ಧಣಿಗೆ ತನ್ನ ಅವಸ್ಥೆಯನ್ನು ಬಣ್ಣಿಸುತ್ತಾನೆ. ಅದೇ ಹೊತ್ತಿಗೆ ಎಫಿ-ಆಂಟಿಫೋಲಸ್‌ನ ಅಪ್ಪಣೆಯಂತೆ ಕಂಠೀಹಾರ ತರಲು ಹೋದ ಏಂಜಲೊ ಅಲ್ಲಿಗೆ ಬಂದು ಸೈ-ಆಂಟಿಫೋಲಸ್‌ನನ್ನು ಕಂಡು ಇವನೇ ಅವನೆಂದು ಬಗೆದು ಹಾರ ಒಪ್ಪಿಸಿ ಹೋಗುತ್ತಾನೆ.

ಏಂಜಲೊ ವ್ಯಾಪಾರಿಯೊಬ್ಬನಿಂದ ಸಾಲ ಪಡೆದಿದ್ದಾನೆ. ಆ ವ್ಯಾಪಾರಿ ಸಾಲದ ಹಣ ವಾಪಸು ಮಾಡೆಂದು ನಿಂತ ಕಾಲ ಮೇಲೆ ಅವನನ್ನು ಪೀಡಿಸುತ್ತಿದ್ದಾನೆ. ತಪ್ಪಿದರೆ 'ಮುಂದಿನ ಕ್ರಮ' ಜರುಗಿಸಲು ನ್ಯಾಯಾಧಿಕಾರಿಯನ್ನೂ ಕರೆತಂದಿದ್ದಾನೆ. ಏಂಜಲೊನ ಬಳಿ ಹಣವಿಲ್ಲ. ಆಂಟಿಫೋಲಸ್‌ನಿಂದ ಹಾರದ ಕಡೆಯ ಹಣ ಬರಬೇಕಾಗಿದೆ. ಅವನಿಂದ ಕೊಡಿಸುವುದಾಗಿ ಹೇಳಿ ಪೇಟೆಗೆ ಬಂದರೆ ಈ ಸಲ ಎದುರಾಗುವವನು ಎಫಿ-ಆಂಟಿಫೋಲಸ್! ಹೇಳಿದ ಹೊತ್ತಿಗೆ ಹಾರ ಬಾರದೇ ಅವನು ವ್ಯಗ್ರನಾಗಿದ್ದಾನೆ. ಏಂಜಲೊ ಹಾರದ ಹಣಕ್ಕೆ ಬೇಡಿಕೆ ಹಾಕಿದರೆ, ಎಫಿ-ಆಂಟಿಫೋಲಸ್ ಮೊದಲು 'ಹಾರ ತಾ' ಎಂದು ಕೈಯೊಡ್ಡುತ್ತಾನೆ. ಇಬ್ಬರಿಗೂ ವಾಗ್ಯುದ್ಧ. ಏಂಜಲೊನ ದೂರೊಪ್ಪಿ ಅಧಿಕಾರಿ ಎಫಿ-ಆಂಟಿಫೋಲಸ್‌ನನ್ನು ಬಂಧಿಸುತ್ತಾನೆ. ಈ ಸಮಯಕ್ಕೆ ಸರಿಯಾಗಿ ಸೈ-ಡ್ರೋಮಿಯೊ ಅಲ್ಲಿಗೆ ಧುಮುಕುತ್ತಾನೆ. ಏಂಜಲೊನಿಗೆ ತೆರಬೇಕಾದ ಹಣವನ್ನು ಹೆಂಡತಿಯಿಂದ ಕೇಳಿ ತರಲು ಅವನನ್ನೇ ಮನೆಗಟ್ಟುತ್ತಾನೆ.

ಹಣ ತಂದ ಸೈ-ಡ್ರೋಮಿಯೊಗೆ ಭೇಟಿಯಾಗುವವನು ಸೈ-ಆಂಟಿಫೋಲಸ್! ಆಳು ಅವನಿಗೆ ಹಣ ಒಪ್ಪಿಸುತ್ತಾನೆ. ಅರ್ಧ ಗಂಟೆಯ ಹಿಂದೆ ಹಾರ ಗಿಟ್ಟಿತು; ಈಗ ಹಣ. ಇದಲ್ಲವೇ ಅದೃಷ್ಟ! ಆದರೆ ಈ ಮೆರೆತ ಬಹಳ ಹೊತ್ತು ಸಾಗದು. ಎಫಿ-ಆಂಟಿಫೋಲಸ್‌ನ ಸೂಳೆ ಸೈ-ಆಂಟಿಫೋಲಸ್‌ನಿಗೆ ಎದುರಾಗುತ್ತಾಳೆ. ಕಂಠೀಹಾರದ ಆಸೆ ತೋರಿಸಿ ಅವಳ ವಜ್ರದುಂಗುರವನ್ನು ಕಸಿದುಕೊಂಡು ಹೋದ ಎಫಿ-ಆಂಟಿಫೋಲಸ್ ಇನ್ನೂ ಹಿಂದಿರು

ಗಿಲ್ಲ. ಸೈ-ಆಂಟಿಫೋಲಸ್‌ನ ಕೊರಳಿನಲ್ಲಿ ಹಾರ ಥಳಥಳಿಸುತ್ತಿರುವುದನ್ನು ಕಂಡು ಅವಳು 'ಉಂಗುರ ವಾಪಸು ಕೊಡು, ಇಲ್ಲವೇ ಹಾರ ತಾ' ಅನ್ನುತ್ತಾಳೆ. ಅವನು ಬೈದಟ್ಟು ತ್ತಾನೆ. ಸೂಳೆ ತನ್ನ ಗೆಣೆಯನಿಗೆ ಹುಚ್ಚೇ ಸರಿ ಎಂದು ತೀರ್ಮಾನಿಸಿ, ಹೋಗಿ ಅವನ ಹೆಂಡತಿಗೆ ಸಮಾಚಾರ ತಿಳಿಸುತ್ತಾಳೆ. ಏಡ್ರಿಯಾನ ಪಿಂಚ್ ಎಂಬವನ ಜತೆಗೂಡಿ ಕೊಂಡು ಓಡೋಡಿ ಬರುತ್ತಾಳೆ. ಪಿಂಚ್ ಮಾಯಮಂತ್ರ ಬಲ್ಲವ; ಭೂತಚೇಷ್ಟೆ ಬಿಡಿಸು ವುದರಲ್ಲಿ ನಿಸ್ಸೀಮ! ಅವನೂ ಅವನ ಸಹಾಯಕರೂ ಎದುರಿಗೆ ಸಿಕ್ಕ ಬಂದಿ ಎಫಿ-ಆಂಟಿ ಫೋಲಸ್ ಮತ್ತು ಎಫಿ-ಡ್ರೋಮಿಯೊರನ್ನು ಹಗ್ಗದಲ್ಲಿ ಕಟ್ಟಿ ಮನೆಗೆ ಎಳೆದೊಯ್ಯುತ್ತಾರೆ.

ಏಡ್ರಿಯಾನ ಹಿಂದುಳಿದು ಗಂಡನ ಬಂಧನದ ಕಾರಣ ವಿಚಾರಿಸುತ್ತಿದ್ದಾಳೆ. ಇನ್ನೊಂದು ಕಡೆಯಿಂದ ಪಟ್ಟಣದ 'ಭೂತಚೇಷ್ಟೆ'ಗಳಿಗೆ ಬೇಸತ್ತ ಸೈ-ಆಂಟಿಫೋಲಸ್ ಮತ್ತು ಸೈ-ಡ್ರೋಮಿಯೊ ಕತ್ತಿ ಹಿರಿದು ಬರುತ್ತಾರೆ. ಅದೇ ಆಗ ಪಿಂಚನ ಪಡೆಯಿಂದ ಕೈಗೆ ಹಗ್ಗ ಬಿಗಿಸಿಕೊಂಡು ಹೋದ ಗಂಡ ಬಿಡುಗಡೆ ಪಡೆದು ಬಂದದ್ದು ಹೇಗೆಂದು ಏಡ್ರಿಯಾನಳಿಗೆ ಆಶ್ಚರ್ಯ, ಭಯ! ಅವಳೂ ಸಂಗಡಿಗರೂ ದಿಕ್ಕಾಪಾಲಾಗಿ ಓಡುತ್ತಾರೆ.

ಸೈ-ಆಂಟಿಫೋಲಸ್ ಮತ್ತು ಅವನ ಆಳು ಇನ್ನೊಂದು ಗಳಿಗೆ ಸಹ ಆ ಪಟ್ಟಣದಲ್ಲಿ ನಿಲ್ಲಲು ಸಿದ್ಧರಿಲ್ಲ. ಹಡಗು ಹತ್ತುವುದೆಂದು ನಿರ್ಧರಿಸಿ, ತಮ್ಮ ಬಿಡಾರದತ್ತ ನಡೆದಿದ್ದಾರೆ. ಎದುರುಗಡೆಯಿಂದ ಏಂಜಲೊ ವ್ಯಾಪಾರಿಯೊಡನೆ ಬರುತ್ತಿದ್ದಾನೆ. ಎರಡು ಗುಂಪಿಗೂ ಮುಖಾಮುಖಿ. ಆಂಟಿಫೋಲಸ್‌ನ ಕತ್ತಿನಲ್ಲಿ ಹಾರವಿದೆ. ಹಾರ ಪಡೆದೂ ಸುಳ್ಳಾಡಿದ್ದು ಏಕೆಂದು ಏಂಜಲೊನ ಸವಾಲು; ಹಾಗೆ ಅಂದದ್ದು ಯಾವಾಗೆಂದು ಸೈ-ಆಂಟಿಫೋಲಸ್‌ನ ಜವಾಬು. ಹೀಗೆ ಬಿರುಸಿನ ವಾದವಿವಾದ ನಡೆದಿರುವಾಗ ಏಡ್ರಿಯಾನ ಅವರಿಗೆ ಎದು ರಾಗಬೇಕೆ! ಏಡ್ರಿಯಾನ ತನ್ನ ಹುಚ್ಚ 'ಗಂಡ'ನನ್ನು ಹಿಡಿಯಿರೆಂದು ಕೂಗಿಕೊಳ್ಳುತ್ತಾಳೆ. ಮತ್ತೊಮ್ಮೆ ಅವಳ ಕೈಗೆ ಸಿಕ್ಕಿ ಹಣ್ಣಾಗಲಿಚ್ಛಿಸದ ಸೈರಕ್ಯೂಸನ ಧಣಿ-ನೌಕರರು ಓಡಿ, ಹತ್ತಿರದ ಕ್ರೈಸ್ತಮಠವೊಂದಕ್ಕೆ ನುಗ್ಗಿ ಅದರ ಒಡತಿಗೆ ಶರಣಾಗುತ್ತಾರೆ. ಏಡ್ರಿಯಾನಳೂ ಮಠಕ್ಕೆ ಬಂದು ತನ್ನ ಹುಚ್ಚ 'ಗಂಡ'ನನ್ನು ತನಗೊಪ್ಪಿಸಬೇಕೆಂದು ಕಾಡುತ್ತಾಳೆ. ಮಠದ ಒಡತಿ ಅವನ ಹುಚ್ಚಿನ ವಿವರವೆಲ್ಲವನ್ನೂ ಕೇಳಿ, ಅದು ಗುಣವಾಗುವವರೆಗೆ ಅವನನ್ನು ಬಿಡಲಾಗುವುದಿಲ್ಲವೆಂದು ಖಡಾಖಂಡಿತವಾಗಿ ಹೇಳುತ್ತಾಳೆ. ಅದೇ ಸಮಯಕ್ಕೆ ಪಟ್ಟಣದ ದೊರೆ ಆ ಕಡೆಯಿಂದ ಬರುತ್ತಿದ್ದಾನೆ. ಹಿಂದಿನ ದಿನ ಸೆರೆಸಿಕ್ಕಿದ ಈಜಿಯನ್‌ಗೆ ದಂಡದ ಹಣ ತುಂಬಿಕೊಡಲಾಗದೆ, ಅವನನ್ನು ಗಲ್ಲಿಗೇರಿಸಲು ಕರೆದೊಯ್ಯುತ್ತಿದ್ದಾರೆ. ಏಡ್ರಿಯಾನ ದೊರೆಗೆ ಅಡ್ಡಹಾಕಿ ಗಂಡನನ್ನು ಬಿಡಿಸಿಕೊಡೆಂದು ಗೋಗರೆಯುತ್ತಾಳೆ. ದೊರೆ ಮಠದ ಒಡತಿಗೆ ಬರಹೇಳುತ್ತಾನೆ. ಆ ಹೊತ್ತಿಗೆ ಇನ್ನೊಂದು ಕಡೆಯಿಂದ ಎಫಿ-ಆಂಟಿಫೋಲಸ್ ತನ್ನ ಆಳಿನೊಡನೆ ಉರಿಗೊಳ್ಳಿ ಹಿಡಿದು ಓಡಿ ಬರುತ್ತಿದ್ದಾನೆ. ಅವರು ಕೈಕಟ್ಟನ್ನು ಕಿತ್ತೊ ಗೆದು ಹುಚ್ಚು ಬಿಡಿಸಲು ಬಂದ ಪಿಂಚ್ ಮಹಾಶಯನ ಗಡ್ಡಕ್ಕೆ ಬೆಂಕಿ ಹೊತ್ತಿಸಿ, ಆಮೇಲೆ ಕೆಸರೆರಚಿ ಆರಿಸಿ ಅವನನ್ನು ಹಣ್ಣುಗಾಯಿ ನೀರುಗಾಯಿ ಮಾಡಿ ಬಂದಿದ್ದಾರೆ.

ಎಫಿ-ಆಂಟಿಫೋಲಸ್ ದೊರೆಯ ಸೇವಕ. ಮಿಂಡನೊಡನೆ ಕಲೆತು ತನ್ನ ಮನೆಗೆ ತನ್ನನ್ನೇ ಸೇರಿಸದ ಹೆಂಡತಿಯನ್ನೂ ಹಾರ ಕೊಡದೆಯೇ ಅದರ ಕ್ರಯ ಬೇಡಿ ಸುಳ್ಳು ಸೆರೆಗೆ ಗುರಿಮಾಡಿದ ಅಕ್ಕಸಾಲಿಗನನ್ನೂ ಶಿಕ್ಷಿಸಬೇಕೆಂದು ದೊರೆಗೆ ದೂರಿಡುತ್ತಾನೆ. ಏಡ್ರಿ



**ವಿಚಾರಣೆಯ ದೃಶ್ಯ : ಮಧ್ಯೆ ದೊರೆ, ಈ ಬದಿ ತನ್ನ ಆಳಿನೊಡನೆ ಎಫಿ-ಆಂಟಿಫೋಲಸ್, ಆ ಬದಿ ಅವನ ಹೆಂಡತಿ ಏಡ್ರಿಯಾನ ಮತ್ತು ಅಕ್ಕಸಾಲಿಗ ಏಂಜಲೊ ನಿಂತಿದ್ದಾರೆ.**

ಯಾನ ಮತ್ತು ಏಂಜಲೊ ತಮ್ಮ ತಮ್ಮ ವಾದವನ್ನು ಸಾಕ್ಷ್ಯಸಮೇತ ಮುಂದಿಡುತ್ತಾರೆ. ಆಂಟಿಫೋಲಸ್ ಒಳಗೇ ಇದ್ದು ಅಕ್ಕನೊಡನೆ ಊಟ ಮಾಡಿದನೆಂದೂ ಅವನನ್ನು ಯಾರೂ ಮನೆಯ ಹೊರಗಿಡಲಿಲ್ಲವೆಂದೂ ಲೂಸಿಯಾನ ಸಾಕ್ಷ್ಯ ನೀಡುತ್ತಾಳೆ. ಆಂಟಿಫೋಲಸ್ ಮೊದಲ ಸಲ ಸಿಕ್ಕಾಗ ಹಾರ ದೊರೆತಿಲ್ಲವೆಂದು ಸುಳ್ಳಾಡಿ, ಮತ್ತೆ ಕಂಡಾಗ ತಾನು ಹಾಗೆ ಹೇಳಿದುದೇ ಇಲ್ಲವೆಂದು ಕ್ರೈಸ್ತಮಠದೊಳಕ್ಕೆ ಓಡಿಹೋದನೆಂದು ಏಂಜಲೊಗೆ ಸಾಲ ಕೊಟ್ಟ ವ್ಯಾಪಾರಿ ಪ್ರಮಾಣಮಾಡುತ್ತಾನೆ. ಈ ಕಡೆ ಮಠ ಹೊಕ್ಕವನು ಈಗ ಆ ಕಡೆಯಿಂದ ಹೇಗೆ ಬಂದನೆಂದು ಎಲ್ಲರಿಗೂ ವಿಸ್ಮಯ! ಆ ಹೊತ್ತಿಗೆ ಮಠದ ಒಡತಿ ಸೈ-ಆಂಟಿಫೋಲಸ್ ಮತ್ತು ಸೈ-ಡ್ರೋಮಿಯೊರೊಡನೆ ಬರುತ್ತಾಳೆ. ತನ್ನ ಕಣ್ಣಿಗೆ ಇಬ್ಬರು ಗಂಡಂದಿರು ಕಾಣುತ್ತಿರುವುದು ಹೇಗೆಂದು ಏಡ್ರಿಯಾನ! ಅವಳಿ-ಜವಳಿಗಳ ಜೋಡಿ ಎದುರುಬದುರಾದಾಗ ಗುಟ್ಟು ಹೊರಬೀಳುತ್ತದೆ. ಮಠದ ಒಡತಿ ಸಹ ಹೊರಗಿನವಳಲ್ಲ; ಕಣ್ಮರೆಯಾಗಿದ್ದ ಈಜಿಯನ್‌ನ ಹೆಂಡತಿ. ಅವಳು ಗಂಡನನ್ನು, ಗಂಡ ಹೆಂಡತಿ-ಮಕ್ಕಳನ್ನೂ ಆಳುಗಳನ್ನೂ ಗುರುತಿಸುತ್ತಾರೆ. ಸಿಕ್ಕು ಹರಿದು, ಗೊಂದಲ ಕೊನೆಮುಟ್ಟುತ್ತದೆ.

## 3. ದಿ ಟೇಮಿಂಗ್ ಅಫ್ ದಿ ಷ್ರೂ

**ರಚನೆ :** 1593-4.    **ಮೊದಲ ಪ್ರಕಟನೆ :** 1623.

**ಆಕರಗಳು :** 'ದಿ ಟೇಮಿಂಗ್ ಅಫ್ ಎ ಷ್ರೂ' ಎಂಬ ಕೆಲ ವರ್ಷಗಳ ಹಿಂದಿನ ಅಜ್ಞಾತ ಕರ್ತೃತ್ವದ ಒಂದು ನಾಟಕ ಇದಕ್ಕೆ ಆಕರವೆಂದು ಬಹುಜನ ಪಂಡಿತರ ಮತ. ಅದು ಆಕರವಲ್ಲ, 'ದಿ ಷ್ರೂ' ಮತ್ತು 'ಎ ಷ್ರೂ'ಗಳು ಒಂದೇ ನಾಟಕದ ಪಾಠಾಂತರಗಳೆಂದು

ಇನ್ನೊಂದು ಅಭಿಪ್ರಾಯ. ಬಿಯಾಂಕಳ ಪ್ರಣಯಪ್ರಸಂಗದ ಸನ್ನಿವೇಶಕ್ಕೆ ಜಾರ್ಜ್ ಗ್ಯಾಸ್ಕೊಯಿನ್ ಆರಿಯೊಸ್ಟೊನ ಇಟಾಲಿಯನ್ ನಾಟಕದಿಂದ ಅನುವಾದಿಸಿದ 'ಸಪೋಸಸ್'ನ ಅಂಥದೇ ಒಂದು ಸನ್ನಿವೇಶ ಪ್ರೇರಣೆಯಿರಬಹುದು. ಎರಡಕ್ಕೂ ಹೋಲಿಕೆಯಿದೆ.

**ಕಥೆ**: ಗಯ್ಯಾಳಿ ಹೆಣ್ಣು, ಅವಳನ್ನು ಪಳಗಿಸುವ ಛಲ ತೊಟ್ಟ ಒಡ್ಡ ಗಂಡು — ಈ ವಿರುದ್ಧ ಪಾತ್ರಗಳ ತಿಕ್ಕಾಟದಿಂದ ಸಿಡಿದ ಕಿಡಿ, ಈ ಹುಚ್ಚಾಟ. ಪ್ರಹಸನದಲ್ಲಿ ಎರಡು ಬಗೆಯ ಪ್ರೇಮವಿಧಾನಗಳ ಪರಿಚಯ ದೊರೆಯುತ್ತದೆ: ಕ್ಯಾಥರೀನ-ಪಿಟೂಕ್ರಿಯೊರ ಒರಟು ಅಬ್ಬರದ್ದೊಂದು; ಬಿಯಾಂಕಳ ಬೆನ್ನು ಹತ್ತಿದವರ ಚತುರ ವ್ಯೂಹ, ತಂತ್ರಗಳದ್ದು ಇನ್ನೊಂದು. ಕವಿಯ ಪ್ರತಿಭೆ ಇಲ್ಲಿ ಸನ್ನಿವೇಶದ ಹೊರ ವಲಯದಿಂದ ಪಾತ್ರಕಲ್ಪನೆ, ಪೋಷಣೆಗಳ ಒಳ ವಲಯದ ಕಡೆಗೆ ಸರಿಯಲಾರಂಭಿಸಿರುವುದನ್ನು ಕಾಣಬಹುದು.

ಕ್ರಿಸ್ಟೊಫರ್ ಸ್ಲೈ ಎಂಬ ಒಬ್ಬ ಕಲಾಯಿಗಾರ ಒಂದು ದಿನ ಚೆನ್ನಾಗಿ ಕುಡಿದು ಪಡಖಾನೆಯಲ್ಲಿ ಪ್ರಜ್ಞೆ ತಪ್ಪಿ ಬಿದ್ದಿದ್ದಾನೆ. ಅವನನ್ನು ಕಂಡು ಊರಿನ ಶ್ರೀಮಂತನೊಬ್ಬನಿಗೆ ಕೊಂಚ ಕುಚೋದ್ಯ ಮಾಡಬೇಕೆನಿಸುತ್ತದೆ. ಸ್ಲೈನನ್ನು ತನ್ನ ಮಹಲಿಗೆ ತಂದು, ಭಾರೀ ಬೆಲೆಯ ಅಂಗಿಬಟ್ಟೆ ತೊಡಿಸಿ, ಸಜ್ಜಾದ ಕೋಣೆಯಲ್ಲಿ ಮಲಗಿಸುತ್ತಾನೆ. ಸ್ಲೈ ಎದ್ದು ಕಣ್ಣುಬಿಟ್ಟಾಗ ಸುತ್ತಮುತ್ತ ಆಳುಕಾಳುಗಳು; ಪಕ್ಕದಲ್ಲಿ ಶುಶ್ರೂಷೆಯಲ್ಲಿ ನಿರತಳಾದ 'ಹೆಂಡತಿ' (ಹೆಣ್ಣಿನ ವೇಷ ತೊಟ್ಟ ಒಬ್ಬ ಹುಡುಗ 'ಅವಳು'); ಎಲ್ಲಿಲ್ಲದ ರಾಜಭೋಗ. ಹದಿನೈದು ವರ್ಷಗಳಿಂದ ಉನ್ಮಾದ ಕಾಡುತ್ತಿದ್ದು, ಈಗ ಬಿಟ್ಟಿದೆಯೆಂದು ಅವರೆಲ್ಲರೂ ಸ್ಲೈನನ್ನು ನಂಬಿಸುತ್ತಾರೆ. ಹುಚ್ಚು ಮರುಕಳಿಸದಿರಬೇಕಾದರೆ ಅವನ ಮನಸ್ಸನ್ನು ಗೆಲುವಾಗಿಡಬೇಡವೆ! ಅದಕ್ಕಾಗಿ ಅವನ ಮುಂದೊಂದು ನಾಟಕ ಆಡಿಸುತ್ತಾರೆ. ಅದೇ 'ದಿ ಟೇಮಿಂಗ್ ಅಫ್ ದಿ ಷ್ರೂ' — ಇದು ನಾಟಕಕ್ಕೆ ನಿಮಿತ್ತ, ನಾಂದಿ.

ಬ್ಯಾಪ್ಟಿಸ್ಟ ಪಾಡ್ವ ನಗರದ ಒಬ್ಬ ಧನಿಕ ವ್ಯಾಪಾರಿ. ಅವನಿಗೆ ಇಬ್ಬರು ಹೆಣ್ಣು ಮಕ್ಕಳು. ಹಿರಿಯವಳು ಕ್ಯಾಥರೀನ; ಕಿರಿಯವಳು ಬಿಯಾಂಕ. ಗುಣಸ್ವಭಾವಗಳಲ್ಲಿ ಆ ಅಕ್ಕತಂಗಿಯರು ಉತ್ತರ ದಕ್ಷಿಣ. ಕ್ಯಾಥರೀನ ಕಾಡಬೆಕ್ಕು: ಹಟಮಾರಿ, ಬಜಾರಿ, ಅವಳ ಕೈ ಮುಂದು, ಬಾಯಿ ಮುಂದು. ಬಿಯಾಂಕ ಅಷ್ಟೂ ಅಷ್ಟು ಮೆದುಕಲಿ; ಹೂವಿನಂತೆ ಹಸನು, ಕೋಮಲ. ಸ್ವಾಭಾವಿಕವಾಗಿ ಬಿಯಾಂಕಳ ಕೈ ಹಿಡಿಯಲು ಎಷ್ಟೋ ಯುವಕ ವರಗಳು ಮುಂದೆ ಬಂದಿದ್ದಾರೆ. ಅವರಲ್ಲಿ ಪ್ರಮುಖರೆಂದರೆ ಒಬ್ಬ ಗ್ರೇಮಿಯೊ, ಇನ್ನೊಬ್ಬ ಹಾರ್ಟೆನ್ಸಿಯೊ. ಆದರೆ ಹಿರಿಯವಳಿಗೆ ಗಂಡು ಸಿಗುವ ತನಕ ಕಿರಿಯವಳ ಮದುವೆಯ ಮಾತೆತ್ತಬೇಡಿರೆಂದು ಬ್ಯಾಪ್ಟಿಸ್ಟ ಖಡಾಖಂಡಿತವಾಗಿ ಅಪ್ಪಣೆ ಮಾಡಿದ್ದಾನೆ. ಕ್ಯಾಥರೀನಳಿಗಾದರೆ ಕೈತುಂಬ ವರದಕ್ಷಿಣೆ ಕೊಡಲೂ ಅವನು ಸಿದ್ಧ. ಅವಳ ಮದುವೆಯಾಗುವವರೆಗೆ ಬಿಯಾಂಕಳನ್ನು ಕಟ್ಟುನಿಟ್ಟಿನಲ್ಲಿಟ್ಟು ಕಾವ್ಯ, ಸಂಗೀತಗಳಲ್ಲಿ ತರಪೇತಿ ಕೊಡಿಸುವುದಾಗಿ ಹೇಳಿ, ಯಾರಾದರೂ ಯೋಗ್ಯ ಉಪಾಧ್ಯಾಯರಿದ್ದರೆ ಗೊತ್ತುಮಾಡಿಕೊಡಿರೆಂದು ಗ್ರೇಮಿಯೊ-ಹಾರ್ಟೆನ್ಸಿಯೊರನ್ನೇ ಕೇಳುತ್ತಾನೆ. ಅದೇ ಆಗ ಪೀಸಾ ನಗರದಿಂದ ಬಂದ ಲೂಸೆಂಷಿಯೊ ಎಂಬ ಶ್ರೀಮಂತ ವಿದ್ಯಾರ್ಥಿ ಈ ವಿದ್ಯಮಾನಗಳೆಲ್ಲವನ್ನೂ ಮರೆಯಿಂದ ನೋಡುತ್ತಾನೆ. ಬಿಯಾಂಕಳನ್ನು ನೋಡಿ ಅವನಲ್ಲಿ ಪ್ರೇಮ ಚಿಗುರುತ್ತದೆ. ಆದರೆ ಅವಳನ್ನು ಕಾಣುವ ಬಗೆ? ಗೆಲ್ಲುವ ಬಗೆ? ಒಂದು



**ಚೆಲುವೆ ಬಿಯಾಂಕಳೊಡನೆ ಮುದಿ ವರ ಗ್ರೇಮಿಯೊ**

ಉಪಾಯ ಹೊಳೆಯುತ್ತದೆ. ಅವಳಿಗೆ ಉಪಾಧ್ಯಾಯರು ಬೇಕೆಂದಲ್ಲವೆ ಅವಳ ತಂದೆ ಹೇಳುತ್ತಿರುವುದು. ತಾನೇ ಆ ಉಪಾಧ್ಯಾಯನಾದರೆ ಸರಿ, ಕೆಲಸ ಕೈಗೂಡಿತು! ಆ ಊರಿಗೆ ಹೊಸಬನಾದ್ದರಿಂದ ಯಾರಿಗೂ ಗುರುತು ಹತ್ತಿ ಪ್ರಮಾದವಾಗುವ ಸಂಭವವೂ ಇಲ್ಲ. ಲೂಸೆಂಷಿಯೊನ ಜತೆಯಲ್ಲಿ ಒಬ್ಬ ಆಳಿದ್ದಾನೆ. ಹೆಸರು ಟ್ರೇನಿಯೊ. ಅವನನ್ನು ಒಪ್ಪಿಸಿ ಅವನೊಡನೆ ವೇಷಾಂತರ ಮಾಡಿಕೊಳ್ಳುತ್ತಾನೆ. ಈಗ ಲೂಸೆಂಷಿಯೊ ಲ್ಯಾಟಿನ್ ಅಧ್ಯಾಪಕ. ಅವನ ಆಳೇ 'ಲೂಸೆಂಷಿಯೊ'. ಆದರೆ ಬ್ಯಾಪ್ಟಿಸ್ಟನಲ್ಲಿಗೆ ಕರೆದೊಯ್ದು ಪರಿಚಯ ಮಾಡಿಕೊಡುವವರು ಯಾರು? ಅದಕ್ಕೆ ಬಿಯಾಂಕಳ ಪ್ರೇಮಿಗಳಲ್ಲೊಬ್ಬನಾದ ಗ್ರೇಮಿಯೊನ ಸಹಾಯ ಸಿಗುತ್ತದೆ. ಈ ಉಪಾಧ್ಯಾಯ ಅವಳಿಗೆ ಪ್ರೇಮಮೀಮಾಂಸೆಯ ಪಾಠ ಹೇಳಿ, ಅವಕಾಶ ಸಿಕ್ಕ ಹಾಗೆಲ್ಲ ತನ್ನ ಪರವಾಗಿ ಮಾತನಾಡಿ ಅವಳನ್ನು ತನಗೆ

ಒಲಿಸಿಕೊಡುವುದೆಂಬ ಕರಾರಿನ ಮೇಲೆ ಗ್ರೇಮಿಯೊ ಅವನನ್ನು ಬ್ಯಾಪ್ಟಿಸ್ಟನಲ್ಲಿಗೆ ಕರೆದೊಯ್ಯುತ್ತಾನೆ.

ಇದೇ ಹೊತ್ತಿಗೆ, ಹಾರ್ಟೆನ್ಸಿಯೊನ ಒಬ್ಬ ಹಳೆಯ ಗೆಳೆಯ ಪಿಟ್ರೂಕಿಯೊ ವೆರೋನದಿಂದ ಪಾಡ್ವಕ್ಕೆ ಭಾಗ್ಯವರಸಿ ಬರುತ್ತಾನೆ. ಹಾರ್ಟೆನ್ಸಿಯೊ ಅವನಿಗೆ ಕ್ಯಾಥರೀನಳ ವಿಷಯ ತಿಳಿಸುತ್ತಾನೆ. ಆ ಚಂಡಿಯ ಕೈ ಹಿಡಿಯಲು ಒಪ್ಪಿದ ಗಂಡಿಗೆ ಕೈ ತುಂಬ ವರದಕ್ಷಿಣೆ ಸಿಗುವುದೆನ್ನುತ್ತಾನೆ. ಪಿಟ್ರೂಕಿಯೊಗೆ ಬೇಕಾದದ್ದೂ ಅದೇ. ಹೆಣ್ಣು ಹೇಗಿದ್ದರೇನು, ಅವಳು ಹೆಂಡತಿಯಾಗಿ, ಹಣ ತರುವುದಿದ್ದರೆ ಅವನು ಮದುವೆಗೆ ಸಿದ್ಧ! ಈ ಉಪಕಾರಕ್ಕೆ ಬದಲಾಗಿ ಹಾರ್ಟೆನ್ಸಿಯೊ ತಾನೊಂದು ಪ್ರತ್ಯುಪಕಾರ ಬೇಡುತ್ತಾನೆ. ಬಿಯಾಂಕಳನ್ನು ಕಾಣಬೇಕಾದರೆ ಅವಳ ಉಪಾಧ್ಯಾಯನಾಗುವುದೊಂದೇ ದಾರಿ ತಾನೆ! ತಾನು ಸಂಗೀತದ ಮೇಷ್ಟರಂತೆ ವೇಷ ಧರಿಸುವುದು, ಪಿಟ್ರೂಕಿಯೊ ಬ್ಯಾಪ್ಟಿಸ್ಟನಿಗೆ ತನ್ನ ಕಡೆಯವನೆಂದು ಪರಿಚಯ ಮಾಡಿಸಿ, ಪಾಠಕ್ಕೆ ಸೇರಿಸುವುದೆಂದು ಮಾತಾಗುತ್ತದೆ.

ಲೂಸೆಂಷಿಯೊನ ವೇಷ ತೊಟ್ಟ ಆಳು ಟ್ರೇನಿಯೊ ಸಹ ಬಿಯಾಂಕಳ ಸಂಪರ್ಕ ಬೆಳಸಲು ಆತುರನಾಗಿದ್ದಾನೆ. ಅವಳನ್ನು ವರಿಸಲು ಬಂದ ಶ್ರೀಮಂತಪುತ್ರನಂತೆ ತೋರಿಸಿಕೊಂಡು ತನ್ನ ಧಣಿಯ ಪರವಾಗಿ ಅವಳನ್ನು ಒಲಿಸುವುದೆಂದು ಅವನ ಹವಣಿಕೆ.

ಪಿಟ್ರೂಕಿಯೊ, ಹಾರ್ಟೆನ್ಸಿಯೊ, ಗ್ರೇಮಿಯೊ, ಲೂಸೆಂಷಿಯೊ, ಟ್ರೇನಿಯೊ — ಈ ಐವರೂ ಒಮ್ಮೆಲೇ ಬ್ಯಾಪ್ಟಿಸ್ಟನ ಮನೆಗೆ ಮುತ್ತಿಗೆ ಹಾಕುತ್ತಾರೆ! ಪರಿಚಯಗಳಾಗುತ್ತವೆ. ಹಾರ್ಟೆನ್ಸಿಯೊ, ಲೂಸೆಂಷಿಯೊರನ್ನು ಬ್ಯಾಪ್ಟಿಸ್ಟ ಪಾಠದ ಮೇಷ್ಟರುಗಳನ್ನಾಗಿ ಒಪ್ಪಿ ಒಳಗೆ ಕಳಿಸಿಕೊಡುತ್ತಾನೆ. ಹೋದ ಕೆಲವೇ ನಿಮಿಷಗಳಲ್ಲಿ ಹಾರ್ಟೆನ್ಸಿಯೊ ವಾಪಸು ಬರುತ್ತಾನೆ: ಕ್ಯಾಥರೀನ ಅವನು ತಂದ ತಂತಿವಾದ್ಯವನ್ನು ಅವನ ತಲೆಗೇ ಕುಕ್ಕಿ ಬೊಬ್ಬೆ ಎಬ್ಬಿಸಿ ಕಳಿಸಿದ್ದಾಳೆ. ಪಿಟ್ರೂಕಿಯೊಗೆ ದೊರೆಯುವ ಅವಳ ಸ್ವಭಾವದ ಪ್ರಥಮ ಪರಿಚಯ ಇದು! ಈ ಸಂಗತಿ ಪಿಟ್ರೂಕಿಯೊನ ಧೃತಿಗೆಡಿಸುವ ಬದಲು ಇದ್ದಿದ್ದೂ ಹುರಿದುಂಬಿಸುತ್ತದೆ. ಅಂಥವಳು ನನಗೆ ಹತ್ತು ಪಟ್ಟು ಹೆಚ್ಚು ಮೆಚ್ಚು ಎನ್ನುತ್ತಾನೆ, ಆ ಗಂಡು! ಸದ್ಯದಲ್ಲೇ ಕ್ಯಾಥರೀನ-ಪಿಟ್ರೂಕಿಯೊರಿಗೆ ಮುಖಾಮುಖಿಯಾಗುತ್ತದೆ. ಆ ಚಂಡಿಗೆ ತಕ್ಕ ಭಂಡ ಇವನು. ಅವಳು ಕಾಡಬೆಕ್ಕಾದರೆ ಇವನು ಕತ್ತೆಕಿರುಬ. ಅವಳು ಸೇರು ಅಳೆದರೆ ಇವನು ಸವಾಸೇರು ತೂಗುತ್ತಾನೆ. ಮಾತಿಗೆ ಮರುಮಾತು, ಕಿರಚಿಗೆ ಕೂಗು, ಪರಚಿಗೆ ಒದೆತ! ಅವಳನ್ನು ಪಳಗಿಸುವ ತಂತ್ರವನ್ನು ಇವನು ಬಲ್ಲ. ದೃಶ್ಯ ಮುಗಿಯುವ ಮೊದಲೇ ಅವಳದು ಮೃದು, ಸಾಧು, ಸುಂದರ ಸ್ವಭಾವವೆಂದೆಲ್ಲ ಬಣ್ಣಿಸಿ, ಸ್ವತಃ ಹುಟ್ಟಿಸಿದ ತಂದೆಗೇ ಭಾವೀ ಅಳಿಯನ ದುರ್ಭಾಗ್ಯವನ್ನು ಕಂಡು ಕನಿಕರವೆನಿಸಿದರೂ, ತಾನೇ ಮುಂದಾಗಿ ಬರುವ ಭಾನುವಾರ ಮದುವೆಯೆಂದು ಘೋಷಿಸಿ ಊರಿಗೆ ಹೊರಡುತ್ತಾನೆ! ಕ್ಯಾಥರೀನ ಜನ್ಮದಲ್ಲೇ ಮೊಟ್ಟಮೊದಲ ಸಲ ನಾಚಿ, ನಿರ್ವಾಕಾಗಿ ಒಳಗೋಡುತ್ತಾಳೆ!

ಈಗ ಬಿಯಾಂಕಳ ಮದುವೆಗಿದ್ದ ಅಡ್ಡಿ ಹರಿಯಿತು. ಅತ್ತ ಒಳಗೆ ಇಬ್ಬರು ಮೇಷ್ಟರ ವೇಷದಲ್ಲಿ ಅವಳನ್ನು ಒಲಿಸುವ ಪ್ರಯತ್ನದಲ್ಲಿದ್ದರೆ ಇತ್ತ ಹೊರಗೆ ಗ್ರೇಮಿಯೊ ಮತ್ತು 'ಶ್ರೀಮಂತಪುತ್ರ' ಟ್ರೇನಿಯೊ ಬ್ಯಾಪ್ಟಿಸ್ಟನನ್ನು ನಿರ್ಧಾರಕ್ಕಾಗಿ ಪೀಡಿಸುತ್ತಿದ್ದಾರೆ. ಕಪ್ಪದ ಇತ್ಯರ್ಥ. ಕೊನೆಗೆ ಯಾರು ಹೆಚ್ಚು ಬಳುವಳಿ ಕೊಡುವರೋ

ಬಿಯಾಂಕ ಅವರ ಪಾಲೆನ್ನುತ್ತಾನೆ ಬ್ಯಾಪ್ಟಿಸ್ಟ. ಗ್ರೇಮಿಯೊ ಚಾಪೆಯ ಕೆಳಗೆ ನುಸುಳಿದರೆ ಟ್ರೇನಿಯೊ ರಂಗೋಲಿಯ ಕೆಳಗೆ ತೂರಬಲ್ಲ! ಅಪ್ಪನಿಗಿಲ್ಲದ ಆಸ್ತಿಪಾಸ್ತಿಯೆಲ್ಲವನ್ನೂ ಪಟ್ಟಿ ಹಾಕಿ ಅವೆಲ್ಲವೂ ಮುಂದೆ ಬಿಯಾಂಕಳದೇ ಎನ್ನುತ್ತಾನೆ. ಅಲ್ಲದೇ ತಾನು ಯುವಕ; ಗ್ರೇಮಿಯೊ ವಯಸ್ಸು ಕಳೆದವನು. ಟ್ರೇನಿಯೊ ತನ್ನ ಅಪ್ಪನನ್ನು ಕರೆಸಿ, ಮದುವೆ, ಬಳುವಳಿಗಳಿಗೆ ಅವನ ಒಪ್ಪಿಗೆ ನೀಡಿಸಬೇಕು, ಇಲ್ಲವೇ ಬಿಯಾಂಕಳ ಮದುವೆ ಗ್ರೇಮಿಯೊನೊಂದಿಗೆ ಎಂದು ತೀರ್ಮಾನವಾಗುತ್ತದೆ. ಈಗ ಟ್ರೇನಿಯೊಗೆ ಸಮಸ್ಯೆ: ಲೂಸೆಂಷಿಯೊನ ತಂದೆಯ ಪಾರ್ಟು ಮಾಡುವವನೊಬ್ಬನನ್ನು ಎಲ್ಲಿ ಹುಡುಕುವುದು!

ಒಳಗೆ ಮೇಷ್ಟರುಗಳ ಪ್ರೇಮಾಲಾಪ ಸಾಗಿದೆ! ಲೂಸೆಂಷಿಯೊ ತನ್ನ ಗುರುತು ಕೊಟ್ಟು ಬಿಯಾಂಕಳ ಒಲವನ್ನು ಗೆದ್ದಿದ್ದಾನೆ. ಹಾರ್ಟೆನ್ಸಿಯೊಗೆ ನಿರಾಶೆ. ಹಿಂದೆ ಒಬ್ಬ ವಿಧವೆ ಅವನ ಬೆನ್ನು ಹತ್ತಿದ್ದಳು. ಲಕ್ಷಣ ಸಾಲದಾದರೂ ಹಣವಂತೆ! ಇವನು ಒಲ್ಲೆನೆಂದಿದ್ದ. ಈಗ ಈ ಹಗರಣಕ್ಕಿಂತ ಅವಳೇ ಮೇಲೆಂದು ಯೋಚಿಸಿ, ಅವಳನ್ನು ಹುಡುಕಿ ಹೊರಡುತ್ತಾನೆ.

ಕ್ಯಾಥರೀನಳ ಮದುವೆಯ ದಿನ ಮುಹೂರ್ತದ ಹೊತ್ತಾದರೂ ಗಂಡೇ ನಾಪತ್ತೆ! ಕೋಪ, ದುಃಖ, ಅವಮಾನಗಳಿಂದ ಕ್ಯಾಥರೀನಳ ಕಣ್ಣಿನ ಕಟ್ಟೆಯೊಡೆದಿದೆ. ಆ ಹೊತ್ತಿಗೆ ಪಿಟ್ರೂಕಿಯೊ ಹಾಜರಾಗುತ್ತಾನೆ. ಆ ವರಮಹಾಶಯನ ರೂಪ ದೇವರಿಗೇ ಪ್ರೀತಿ! ಹಳೆಯ ಹರಕಲ ಅಂಗಿ, ತೇಪೆ ಹಾಕಿದ ಷರಾಯಿ, ಒಂದೊಂದು ಕಾಲಿಗೆ ಒಂದೊಂದು ತೆರನಾದ ಬೂಟು, ತುಕ್ಕು ಹಿಡಿದ ಕತ್ತಿ, ಕುಂಟ ಕುದುರೆ— ಇದು ಮದುವೆಯ ಗಂಡಿನ ಅವತಾರ! ಯಾರು ಏನೇ ಅನ್ನಲಿ, ಬಟ್ಟೆ ಬದಲಿಸಲೊಲ್ಲ. ಅವಳು ಮದುವೆಯಾಗುವುದು ನನ್ನನ್ನೋ, ನನ್ನ ಬಟ್ಟೆಯನ್ನೋ ಎನ್ನುತ್ತಾನೆ. ಮದುವೆಯ ಹೊತ್ತಿನಲ್ಲಿ ಸಹ ವಿಚಿತ್ರ ಆರ್ಭಟ ಅವನದು! ಒಬ್ಬನಿಗೆ ತದಕಿದ, ಇನ್ನೊಬ್ಬನ ಮುಖಕ್ಕೆ ಮದ್ಯವೆರಚಿದ, ಇಡೀ ಚರ್ಚೇ ಮಾರ್ದನಿಸುವಂತೆ ಹೆಂಡತಿಗೆ ಮುತ್ತಿಟ್ಟ — ಹೀಗೆ ಏನೇನೊ! ಅಂಥ ಹುಚ್ಚು ಮದುವೆಯನ್ನೇ ನೋಡಿರಲಿಲ್ಲವೆಂದು ಜನ ಆಡಿಕೊಂಡರು. ನಂತರ ಯಾರು ಎಷ್ಟೇ ಗೋಗರೆದರೂ ಮದುವೆಯ ಔತಣಕ್ಕೆ ನಿಲ್ಲದೆ, ಕ್ಯಾಥರೀನಳನ್ನು ಎತ್ತಿ ಕುದುರೆಯ ಮೇಲೆ ಕೂರಿಸಿಕೊಂಡು, 'ಇವಳು ನನ್ನ ಸ್ವತ್ತು, ಯಾರಾದರೂ ತಂಟೆಗೆ ಬಂದರೆ ಹುಷಾರ್' ಎಂದು ಮುರುಕು ಕತ್ತಿ ಝಳಪಿಸಿ ಹೊರಟು ಬಿಡುತ್ತಾನೆ. ಕ್ಯಾಥರೀನ ಕುಸಿದು ಹೋಗುತ್ತಾಳೆ.

ಕತ್ತಲ ಹೊತ್ತು, ಚಳಿಗಾಳಿಯ ರಾತ್ರಿ, ಕೊರಕಲ ರಸ್ತೆ, ಕುಂಟ ಕುದುರೆ. ಕ್ಯಾಥರೀನ ಕೆಸರಿನಲ್ಲಿ ಕುಕ್ಕಿ ಬೀಳುತ್ತಾಳೆ. ಮೇಲೆತ್ತುವ ಬದಲು, ನೋಡಿಕೊಳ್ಳುವುದು ಹೀಗೆಯೇ ಎಂದು ಕುದುರೆಯಾಳನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ಊರು ಸೇರಿದ ಮೇಲೆ ಅವಳಿಗೆ ಮೈ ಕೈ ತೊಳೆಯಗೊಡದೆ, ಬಟ್ಟೆ ಬದಲಿಸಲು ಬಿಡದೆ, ಊಟಕ್ಕೆ ಇಕ್ಕದೆ ಅವಳ ಯೋಗ್ಯತೆಗೆ ತಕ್ಕ ಅಣಿ ಮಾಡಲಿಲ್ಲವೆಂದು ಆಳುಗಳ ಮೇಲೆ ಕೂಗಿ, ರೇಗಿ, ಹಾರಾಡುತ್ತಾನೆ. ಕೊನೆಗೆ ಮಲಗ ಹೋದರೆ ಅದು ಅವಳಿಗೆ ತಕ್ಕಂತಿಲ್ಲವೆಂದು ಹಾಸಿಗೆಯನ್ನು ಕಿತ್ತೆಸೆದು ರಾತ್ರಿಯೆಲ್ಲಾ ನಿದ್ದೆ ಮಾಡಗೊಡುವುದಿಲ್ಲ. 'ಆಘಾತ ಕಲ್ಪ' ಫಲಿಸುತ್ತದೆ. ಅವರು ಮತ್ತೆ ಪಾಡ್ವಕ್ಕೆ ಬರುವ ಹೊತ್ತಿಗೆ ಕ್ಯಾಥರೀನ ಸಂಪೂರ್ಣವಾಗಿ ಪಳಗಿರುತ್ತಾಳೆ.

ಇತ್ತ ಟ್ರೇನಿಯೊ ತಲೆ ಮಾಸಿದ ಆಗಂತುಕನೊಬ್ಬನನ್ನು ಹಿಡಿದು ಲೂಸೆಂಷಿಯೊನ ಅಪ್ಪ ವಿನ್ಸೆಂಷಿಯೊನ ಪಾತ್ರ ಮಾಡಲು ಒಪ್ಪಿಸುತ್ತಾನೆ; ಅವನಿಂದ ಇಲ್ಲದ ಆಸ್ತಿಯ ಬಗ್ಗೆ ದೊಡ್ಡ ಭಾಷಣ ಬಿಗಿಸುತ್ತಾನೆ. ಬ್ಯಾಪ್ಟಿಸ್ಟ ಮರುಳಾಗಿ ಬಿಯಾಂಕಳನ್ನು ಮದುವೆ ಮಾಡಿಕೊಡಲು ಒಪ್ಪುತ್ತಾನೆ. ಮೂವರೂ ಲೂಸೆಂಷಿಯೊನ ಮನೆಯಲ್ಲಿ ಸೇರಿದ್ದಾರೆ. ಅದೇ ಹೊತ್ತಿಗೆ ಅನಿರೀಕ್ಷಿತವಾಗಿ ಲೂಸೆಂಷಿಯೊನ ನಿಜವಾದ ಅಪ್ಪ ಮಗನನ್ನು ಹುಡುಕಿ ಪಾಡ್ವಕ್ಕೆ ಬಂದು ಬಾಗಿಲು ತಟ್ಟಬೇಕೆ! ಒಳಗೆ ವೇಷದ ಅಪ್ಪ, ಹೊರಗೆ ನಿಜವಾದ ಅಪ್ಪ. ಇಬ್ಬರಿಗೂ ಹಣಾಹಣಿ ಜಗಳ. ಕೊನೆಗೆ ನಿಜವಾದ ವಿನ್ಸೆಂಷಿಯೊನೇ ಮೋಸಗಾರನೆನಿಸಿಕೊಂಡು ಸೆರೆ ಕಾಣುವ ಹೊತ್ತು ಬರುತ್ತದೆ. ಆಗ ಲೂಸೆಂಷಿಯೊ ಓಡಿ ಬಂದು ತಂದೆಯ ಕಾಲಿಗೆ ಬೀಳುತ್ತಾನೆ. ಅವನ ಜೊತೆ ಬಿಯಾಂಕಳೂ ಇದ್ದಾಳೆ. ಅವರಿಬ್ಬರೂ ಈ ಮಧ್ಯೆ ಕದ್ದು ಓಡಿಹೋಗಿ, ಗುಟ್ಟಾಗಿ ಮದುವೆ ಮಾಡಿಕೊಂಡಿದ್ದಾರೆ!

ಲೂಸೆಂಷಿಯೊನ ಮನೆಯಲ್ಲಿ ಅವನು, ಪಿಟ್ರೂಕಿಯೊ, ಹಾರ್ಟೆನ್ಸಿಯೊ ಸೇರಿದ್ದಾರೆ. ಮುಮ್ಮದುವೆಯ ಔತಣದ ವೇಳೆ. ಮೂವರ ಹೆಂಡಿರಲ್ಲಿ ಯಾವಳು ಹೆಚ್ಚು ವಿಧೇಯಳೆಂಬ ಚರ್ಚೆ ಎದ್ದು, ಪಣ ಕಟ್ಟುತ್ತಾರೆ. ಗಂಡ ಹೇಳಿಕಳಿಸಿದೊಡನೆಯೇ ಬಂದು ಅತ್ಯಂತ ವಿಧೇಯಳೆನಿಸಿಕೊಳ್ಳುವವಳು ಬಿಯಾಂಕಳಲ್ಲ, ವಿಧವೆಯಲ್ಲ, 'ಚಂಡಿ' ಕ್ಯಾಥರೀನಳು! ಪತಿಭಕ್ತಿಯ ಬಗ್ಗೆ ಅವಳು ಕೊಡುವ ಉಪದೇಶದೊಂದಿಗೆ ನಾಟಕ ಮುಗಿಯುತ್ತದೆ.

## 4. ದಿ ಟು ಜೆಂಟಲ್‌ಮೆನ್ ಆಫ್ ವೆರೋನ

**ರಚನೆ:** 1594-5. **ಮೊದಲ ಪ್ರಕಟನೆ:** 1623.

**ಆಕರ:** ಅಂಶತಃ, ಜಾರ್ಜ್ ದ ಮಾಂಟ್‌ಮೇಯರನ ಸ್ಪ್ಯಾನಿಷ್ ಕೃತಿ 'ಲ ಡಯಾನಾ ಇನಾಮೊರಾಡ', ಪ್ರಾಯಶಃ ಷೇಕ್‌ಸ್ಪಿಯರನ ಕಾಲದಲ್ಲಿ ಪ್ರಚಲಿತವಿದ್ದ ಯಂಗ್ ಎಂಬವನಿಂದಾದ ಇಂಗ್ಲಿಷ್ ಅನುವಾದ 'ಫೀಲಿಕ್ಸ್ ಅಂಡ್ ಫಿಲಿಯೊಮೆನ'ದ ಮೂಲಕ.

**ಕಥೆ:** ಯೌವನದ ಪ್ರಣಯೋತ್ಸಾಹ, ಅದರ ಏರುತಗ್ಗು, ಸುತ್ತುಬಳಸುಗಳನ್ನು ಕುರಿತ ಲಲಿತ ನಾಟಕ ಇದು. ಅಸಮರ್ಪಕವಾಗಿ, ಅಲ್ಲಲ್ಲಿ ಅಸಹಜವೆನಿಸುವಂತೆ ಬೆಳಸಿದ ಕಥಾವಸ್ತು, ಪುಷ್ಟಿ ಸಾಲದ ಪಾತ್ರಗಳು ಮುಂತಾದ ಕೊರತೆಗಳಿಂದ ಬಳಲಿದರೂ ಒಟ್ಟಿನಲ್ಲಿ ನಾಟಕ ಮನೋಹರವೆನಿಸಿಕೊಂಡಿದೆ. ನಡುನಡುವೆ ಮುದ್ದಾದ ಪದ್ಯವಿದೆ.

ವೆರೋನ ನಗರದಲ್ಲಿ ಇಬ್ಬರು ಯುವಕ ಮಿತ್ರರು. ಹೆಸರು ಪ್ರೊಟ್ಯೂಸ್ ಮತ್ತು ವ್ಯಾಲಂಟೈನ್. ಅವರ ಸ್ನೇಹ ಆತ್ಮೀಯ, ಗಾಢ. ವ್ಯಾಲಂಟೈನನಿಗೆ ಊರು ಬೇಸರವಾಗಿದೆ. ಅವನಿಗೆ ದೇಶ ತಿರುಗಿ ಅನುಭವ ಬೆಳಸಿಕೊಳ್ಳುವ ಬಯಕೆ. ಮಿಲಾನಿಗೆ ಹೊರಡುತ್ತಾನೆ. ಅಲ್ಲಿ ದೊರೆಯ ಆಸ್ಥಾನ ಸೇರಿ, ಕೀರ್ತಿಗೌರವ ಗಳಿಸುವ ಆಲೋಚನೆ ಅವನದು. ಆದರೆ ಪ್ರೊಟ್ಯೂಸ್ ಅವನಂತೆ ಊರು ಬಿಡುವ ಸ್ಥಿತಿಯಲ್ಲಿಲ್ಲ. ಅವನು ಅದೇ ಪಟ್ಟಣದ ಜೂಲಿಯಾ ಎಂಬವಳನ್ನು ಪ್ರೀತಿಸುತ್ತಿದ್ದಾನೆ. ಈಗಿನ್ನೂ ಒಲವು ಬಲಿಯುತ್ತಿದೆ. ಹಠಾತ್ತನೆ ಊರು ಬಿಟ್ಟರೆ ಪ್ರೇಮದ ಪಾಡೇನಾಗಬೇಕು!

ವ್ಯಾಲಂಟೈನ್ ಮಿಲಾನಿಗೆ ಬಂದವನೇ ದೊರೆಯ ಮಗಳಾದ ಸಿಲ್ವಿಯಾಳಲ್ಲಿ

ಮೋಹಿತನಾಗುತ್ತಾನೆ. ಅವಳೂ ಅವನಲ್ಲಿ ಅನುರಕ್ತೆ. ಬಾಯಿ ಬಿಚ್ಚಿ ಆಡದಿದ್ದರೂ ಅದಕ್ಕೆ ನಾನಾ ಬಗೆಯಲ್ಲಿ ಅಭಿವ್ಯಕ್ತಿ ಕೊಡುತ್ತಾಳೆ. ಯಾರಿಗೋ ಕಳಿಸಲು ಬೇಕೆಂಬ ಆಟ ಹೂಡಿ ವ್ಯಾಲಂಟೈನನ್ನು ಪ್ರೇಮಪತ್ರ ಬರೆದುಕೊಡೆನ್ನುತ್ತಾಳೆ. ಅವನು ಬರೆದುದನ್ನು ಅವನಿಗೇ ಹಿಂದಿರುಗಿಸಿ 'ಇವು ನನ್ನ ಬಹುಮಾನ, ಓದಿಕೊ' ಎನ್ನುತ್ತಾಳೆ. ಆದರೆ ದೊರೆ ಅವಳನ್ನು ಥ್ಯೂರಿಯೊ ಎಂಬವನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದಾನೆ. ಥ್ಯೂರಿಯೊ ಮೂರ್ಖ. ಆದರೂ ಅವನ ಶ್ರೀಮಂತಿಕೆ ದೊರೆಯನ್ನು ಸೆಳೆದಿದೆ.

ಇತ್ತ ಪ್ರೊಟ್ಯೂಸನ ತಂದೆಗೆ ಅವನ ಪ್ರೇಮವ್ಯವಹಾರ ತಿಳಿಯದು. ಈ ವಯಸ್ಸಿನಲ್ಲಿ ಪ್ರವಾಸ ಮಾಡದಿದ್ದರೆ ಯೌವನಕ್ಕೆ ಅವಮಾನವೆಂದು ಚುಚ್ಚಿ, ವ್ಯಾಲಂಟೈನನ ಮೇಲ್ಪಂಕ್ತಿ ಯನ್ನನುಸರಿಸಿ ಮಿಲಾನಿಗೆ ಹೋಗಿ ಬಾ ಎಂದು ಒತ್ತಾಯ ಮಾಡಿ ಅಟ್ಟುತ್ತಾನೆ. ಹೋಗುವ ಮುನ್ನ ಪ್ರೊಟ್ಯೂಸ್ ಜೂಲಿಯಾಳನ್ನು ಕಂಡು, ತಮ್ಮ ಪ್ರೇಮ ಶಾಶ್ವತವೆಂದು ಸಾರಿ, ಆ ಸಂಕೇತವಾಗಿ ಉಂಗುರಗಳನ್ನು ವಿನಿಮಯಮಾಡಿಕೊಂಡು ಬೀಳ್ಕೊಳ್ಳುತ್ತಾನೆ.

ಅನಿರೀಕ್ಷಿತವಾಗಿ ಬಂದ ಮಿತ್ರನನ್ನು ಕಂಡು ವ್ಯಾಲಂಟೈನನ ಆನಂದಕ್ಕೆ ಮಿತಿ ಪಾರವಿಲ್ಲ. ಅವನನ್ನು ಸಿಲ್ವಿಯಾಳಿಗೆ ಪರಿಚಯ ಮಾಡಿಕೊಡುತ್ತಾನೆ. ತನ್ನ ಅವಳ ಪ್ರೇಮದ ವಿಷಯ ತಿಳಿಸಿ, ಆ ರಾತ್ರಿ ಅವಳೊಡನೆ ಕದ್ದೋಡಬೇಕೆಂದಿರುವುದನ್ನು ಹೇಳಿ ನೆರವು ಬೇಡುತ್ತಾನೆ. ಸಿಲ್ವಿಯಾಳನ್ನು ಕಂಡು ಪ್ರೊಟ್ಯೂಸನ ಬಗೆ ಕದಡುತ್ತದೆ. ಆ ಉಬ್ಬರದಲ್ಲಿ ವ್ಯಾಲಂಟೈನ್ ಆಪ್ತಮಿತ್ರನೆಂಬುದನ್ನು, ತನ್ನನ್ನು ನೆಚ್ಚಿದ ಬೇರೆ ಪ್ರೇಯಸಿ ಯಿದ್ದಾಳೆಂಬುದನ್ನು ಅವಗಣಿಸಿ ಸ್ನೇಹಪ್ರೇಮಗಳೆರಡಕ್ಕೂ ಒಮ್ಮೆಲೇ ದ್ರೋಹ ಬಗೆ ಯುತ್ತಾನೆ. ಸಿಲ್ವಿಯಾಳನ್ನು ತನಗೇ ದಕ್ಕಿಸಿಕೊಳ್ಳುವ ದುರಾಲೋಚನೆ ಮೂಡುತ್ತದೆ. ಅದಕ್ಕೆ ಉಪಾಯ: ವ್ಯಾಲಂಟೈನನ ಪಲಾಯನತಂತ್ರವನ್ನು ದೊರೆಗೆ ಬಯಲು ಮಾಡು ವುದು. ವಿಷಯ ತಿಳಿದ ದೊರೆ ವ್ಯಾಲಂಟೈನನ್ನು ಹುಡುಕಿ ಬಂದಾಗ ಅವನ ಮೇಲಂಗಿ ಯೊಳಗೆ ನೂಲೇಣಿಯಿದೆ; ಸಿಲ್ವಿಯಾಳಿಗೆ ಬರೆದ ಪಲಾಯನದ ಸೂಚನೆಯಿದೆ. ದೊರೆ ಅವನನ್ನು ಕೂಡಲೇ ಗಡೀಪಾರು ಮಾಡುತ್ತಾನೆ. ದುಃಖದಿಂದ ಕುಗ್ಗಿದ ವ್ಯಾಲಂಟೈನ್ ಮಿಲಾನನ್ನು ಬಿಟ್ಟು ಹೊರಟು, ದಾರಿಯಲ್ಲಿ ಡಕಾಯಿತರ ಕೈಗೆ ಸಿಕ್ಕಿ ಬೀಳುತ್ತಾನೆ. ಅವನಂಥದೇ ಪ್ರೇಮಾಪರಾಧಗಳಿಗೆ ಗುರಿಯಾದ ದೇಶಬಾಹಿರರು ಅವರು. ಆ ಜನ ಈ ಯುವಕನ ವರ್ಚಸ್ಸಿಗೆ ಮೆಚ್ಚಿ ತಮ್ಮ ಮುಖಂಡನನ್ನಾಗಿ ಮಾಡಿಕೊಳ್ಳುತ್ತಾರೆ.

ಸಿಲ್ವಿಯಾಳನ್ನು ಗೆಲ್ಲ ಹೊರಟ ಪ್ರೊಟ್ಯೂಸನಿಗೆ ಒಂದು ಅಡ್ಡಿ ಕಳೆಯಿತು. ಇರುವ ಇನ್ನೊಂದು ಅಡ್ಡಿಯೆಂದರೆ ಥ್ಯೂರಿಯೊ. ಆ ಮೂರ್ಖನೂ ಒಂದು ಅಡ್ಡಿಯೆ!

ಮಗಳನ್ನು ವ್ಯಾಲಂಟೈನಿಂದ ರಕ್ಷಿಸಿದ ಪ್ರೊಟ್ಯೂಸ್ ಈಗ ದೊರೆಗೆ ನೆಚ್ಚು. ಸಿಲ್ವಿಯಾಳ ಮನಸ್ಸು ವ್ಯಾಲಂಟೈನಲ್ಲಿ ಭದ್ರವಾಗಿ ನೆಲೆಯೂರಿವೆಯೆಂದು ದೊರೆ ಬಲ್ಲ. ಈಗ ಅದನ್ನು ಥ್ಯೂರಿಯೊನ ಕಡೆ ತಿರುಗಿಸಬೇಕು. ಇದರ ಸಾಧನೆಯ ದಾರಿಯೆಂದರೆ ಅವಳ ಮುಂದೆ ವ್ಯಾಲಂಟೈನನ್ನು ದುರ್ಗುಣಿಯೆಂದು ಹಳಿದು, ಥ್ಯೂರಿಯೊನನ್ನು ಹೊಗಳಿಸ ಬೇಕು. ಈ ಕೃತ್ಯದಲ್ಲಿ ದೊರೆ ಥ್ಯೂರಿಯೊರಿಬ್ಬರೂ ಪ್ರೊಟ್ಯೂಸನ ನೆರವು ಬೇಡುತ್ತಾರೆ. ಸಿಲ್ವಿಯಾ ತನ್ನಂಥವರಿಂದ ಕಳಂಕಿತಳಾಗದಷ್ಟು ಶುದ್ಧ ಪವಿತ್ರ ಹೃದಯಳೆಂಬುವನ್ನು ಪ್ರೊಟ್ಯೂಸ್ ಬಲ್ಲ. ಆದರೂ ಥ್ಯೂರಿಯೊನ ಒಲವಿಗೆ ನೀರೆರೆವ ನೆಪದಲ್ಲಿ ಸ್ವಾರ್ಥ ಸಾಧಿಸಿ



**ಮೂರ್ಖ ಥ್ಯೂರಿಯೊ ಸಿಲ್ವಿಯಾಳನ್ನು ವರಿಸುವ ಹುರುಪಿನಲ್ಲಿದ್ದಾನೆ. ಎಡಗೊನೆಯಲ್ಲಿರುವವಳು ಪ್ರೊಟ್ಯೂಸನ ಆಳು ಸೆಬಸ್ಟಿಯನ್ ಆಗಿ ಬಂದ ಜೂಲಿಯಾ.**

ಕೊಳ್ಳಲು ಅವಕಾಶ ಮಾಡಿಕೊಳ್ಳುತ್ತಾನೆ. ಅವಳ ಕಿಟಕಿಯ ಬಳಿ ಥ್ಯೂರಿಯೊನ ಕಡೆಯಿಂದ ಪ್ರೇಮಗೀತೆ ಹಾಡಿಸಿ, ಸಿಲ್ವಿಯಾ ಕಾಣಿಸಿಕೊಂಡಾಗ ತನ್ನ ಒಲವನ್ನು ಮುಂದೊಡ್ಡುತ್ತಾನೆ. ಇವನನ್ನರಿತ ಸೂಕ್ಷ್ಮಬುದ್ಧಿಯ ಸಿಲ್ವಿಯಾ 'ಸುಳ್ಳ, ಮೋಸಗಾರ' ಎಂದೆಲ್ಲ ಬೈಯುತ್ತಾಳೆ. ಇದೇ ಸಮಯಕ್ಕೆ ಪ್ರೊಟ್ಯೂಸನ ಪ್ರೇಯಸಿ ಜೂಲಿಯಾ ವಿರಹ ತಾಳಲಾರದೆ ವೆರೋನದಿಂದ ಮಿಲಾನಿಗೆ ಬಂದು ಅಲ್ಲೇ ನಿಂತು ನೋಡುತ್ತಿದ್ದಾಳೆ. ತೊಟ್ಟ ವೇಷ ಗಂಡಾಳಿನದು. ಪ್ರಿಯತಮನ ವರ್ತನೆಯಿಂದ ಅವಳಿಗೆ ಬಹಳ ದುಃಖವಾಗುತ್ತದೆ.

ಮಾರನೆ ದಿನ ಜೂಲಿಯಾ ಸೆಬಸ್ಟಿಯನ್ ಎಂಬ ಹೆಸರಿನಿಂದ ಪ್ರೊಟ್ಯೂಸನ ಆಳಾಗಿ ಕೆಲಸಕ್ಕೆ ಸೇರುತ್ತಾಳೆ. ಅವಳಿಗೆ ಸಿಗುವ ಮೊದಲ ದೌತ್ಯ ಸಿಲ್ವಿಯಾಳನ್ನು ಕಂಡು ಅವನ ಉಂಗುರವನ್ನು ಉಡುಗೊರೆಯಾಗಿ ಕೊಟ್ಟು ಬರುವುದು. ವ್ಯಂಗ್ಯವೆಂದರೆ ಆ ಉಂಗುರ ಜೂಲಿಯಾಳದೆ! ಹಿಂದೆ ವೆರೋನ ಬಿಟ್ಟು ಹೊರಡುವಾಗ ಒಲವಿನ ಗುರುತಾಗಿ ಅವನ ಬೆರಳಿಗೆ ತೊಡಿಸಿದ್ದುದು. ಸಿಲ್ವಿಯಾ ಉಡುಗೊರೆಯನ್ನು ಒಪ್ಪದೆ 'ಆಳು ಸೆಬಸ್ಟಿಯನ್' ನಿಗೇ ಅದನ್ನು ಬಹುಮಾನವಾಗಿ ಕೊಟ್ಟುಬಿಡುತ್ತಾಳೆ.

ಸಿಲ್ವಿಯಾಳ ನೆಚ್ಚಿನವರಲ್ಲಿ ಸರ್ ಎಗ್ಲಮರ್ ಎಂಬವನೊಬ್ಬ. ಆತ ಪ್ರೇಮತತ್ವದ ಬದ್ಧ ಆರಾಧಕ. ಹಿಂದೆ ಅವನು ಒಬ್ಬಳನ್ನು ಪ್ರೇಮಿಸಿದ್ದ; ಅವಳು ಅಕಾಲಮರಣಕ್ಕೆ ತುತ್ತಾಗಿ ಸತ್ತಳು. ಅಂದಿನಿಂದ ಪ್ರೇಮಿಗಳಿಗೆ ಅವನ ಸೇವೆ, ಸಹಾಯ ಮೀಸಲು. ಅವನ ನೆರವಿನಿಂದ ಸಿಲ್ವಿಯಾ ಮಿಲಾನಿನಿಂದ ತಲೆ ತಪ್ಪಿಸಿಕೊಂಡು ನಲ್ಲನನ್ನು ಕೂಡಲು ಹೋಗುತ್ತಾಳೆ. ಪ್ರೊಟ್ಯೂಸ್ ಸೆಬಸ್ಟಿಯನನೊಂದಿಗೆ ಅವಳನ್ನು ಬೆನ್ನಟ್ಟುತ್ತಾನೆ.

ಸಿಲ್ವಿಯಾ ದಾರಿಯಲ್ಲಿ ಡಕಾಯಿತರ ಕೈಗೆ ಸಿಕ್ಕಿಬೀಳುತ್ತಾಳೆ. ಪ್ರೊಟ್ಯೂಸ್ ಅವಳನ್ನು ರಕ್ಷಿಸಿ, ಆ ಉಪಕಾರದ ಅವಕಾಶ ಪಡೆದು ತನಗೆ ಒಲಿಯೆನ್ನುತ್ತಾನೆ. ಅವಳು ಒಪ್ಪಳು. ಅವನು ಇನ್ನೇನು ಅವಳ ಮೇಲೆ ಬಲಾತ್ಕಾರ ಮಾಡಬೇಕು, ಆ ಹೊತ್ತಿಗೆ ವ್ಯಾಲಂಟೈನ್ ಅಲ್ಲಿ ಕಾಣಿಸಿಕೊಂಡು ಪ್ರೊಟ್ಯೂಸನನ್ನು ಮಿತ್ರದ್ರೋಹಕ್ಕಾಗಿ ನಿಂದಿಸುತ್ತಾನೆ. ತಪ್ಪಿನ ಅರಿವಾಗಿ ಪ್ರೊಟ್ಯೂಸ್ ಕ್ಷಮೆ ಬೇಡುತ್ತಾನೆ. ವ್ಯಾಲಂಟೈನ್ ಕ್ಷಮಿಸಿದ್ದೇ ಅಲ್ಲದೆ ಸಿಲ್ವಿಯಾಳನ್ನು ಅವನಿಗೇ ಬಿಟ್ಟುಕೊಡಲು ಮುಂದಾಗುತ್ತಾನೆ. ಅಂಥ ಅತಿರೇಕದ ಔದಾರ್ಯ ಅವನದು! ಇದು ಆಳಿನ ವೇಷದ ಜೂಲಿಯಾಳಿಗೆ ಘಾತಕ ಸಂಗತಿ. ಅವಳು ಮೂರ್ಛೆ ಹೋಗುತ್ತಾಳೆ. ಎದ್ದ ಮೇಲೆ ಸಿಲ್ವಿಯಾಳಿಗೆ ಪ್ರೊಟ್ಯೂಸ್ ಕಳಿಸಿದ್ದ ಉಂಗುರವನ್ನು ಹಿಂದಿರುಗಿಸುವ ನೆಪದಲ್ಲಿ, ಅವನು ತನಗೆ ಕೊಟ್ಟಿದ್ದ ಉಂಗುರವನ್ನು ಕೈಲಿಟ್ಟು ತನ್ನ ಗುರುತು ತಿಳಿಸುತ್ತಾಳೆ. ಪ್ರೊಟ್ಯೂಸನಿಗೆ ಅವಳನ್ನು ಕಂಡು ಪ್ರೇಮ ಮರುಕಳಿಸುತ್ತದೆ. ಅವಳು ಅವನನ್ನು ಕ್ಷಮಿಸಿ, ಮತ್ತೆ ತನ್ನ ಒಲವಿನ ತೆಕ್ಕೆಗೆ ಕರೆದುಕೊಳ್ಳುತ್ತಾಳೆ.

ದೊರೆ ಮತ್ತು ಥ್ಯೂರಿಯೊರು ಸಹ ಸಿಲ್ವಿಯಾಳನ್ನು ಹುಡುಕುತ್ತ ಆ ಕಾಡಿಗೆ ಬಂದು, ಡಕಾಯಿತರ ಕೈಗೆ ಸಿಕ್ಕಿಬೀಳುತ್ತಾರೆ. ಅವರನ್ನು ವ್ಯಾಲಂಟೈನನ ಮುಂದೆ ಹಾಜರು ಪಡಿಸಲಾಗುತ್ತದೆ. ಸಿಲ್ವಿಯಾಳನ್ನು ಕಂಡೊಡನೆ ಥ್ಯೂರಿಯೊ ಅವಳ ಮೇಲೆ ಹಕ್ಕು ಸ್ಥಾಪಿಸುತ್ತಾನೆ. ವ್ಯಾಲಂಟೈನ್ ಅವನನ್ನು ಎದುರಿಸಿದಾಗ, ಆ ಗಂಡು ಒಲ್ಲದ ಹೆಣ್ಣಿಗಾಗಿ ಜೀವ ತೊರೆಯುವ ಮೂರ್ಖ ನಾನಲ್ಲ ಎಂದು ಹಿಂಜರಿಯುತ್ತಾನೆ. ದೊರೆ ಅವನ ಹೇಡಿತನಕ್ಕೆ ಶಪಿಸಿ, ಸಿಲ್ವಿಯಾಳನ್ನು ವ್ಯಾಲಂಟೈನನಿಗೆ ಕೊಟ್ಟು ಲಗ್ನ ಮಾಡುತ್ತಾನೆ.

ಪ್ರೊಟ್ಯೂಸನ ಆಳು ಲಾನ್ಸ್ ತನ್ನ ನಾಯಿ 'ಕ್ರ್ಯಾಬ್'ನೊಂದಿಗೆ ನಾಟಕಕ್ಕೆ ನಗೆ ಒದಗಿಸುತ್ತಾನೆ (ಪುಟ 229).

## 5. ಲವ್ಸ್ ಲೇಬರ್ಸ್ ಲಾಸ್ಟ್

**ರಚನೆ:** 1594-5. **ಮೊದಲ ಪ್ರಕಟನೆ:** 1598.

ಕವಿಯ ಸ್ವತಂತ್ರ ಕೃತಿ ಇದು. ಹಾಗೆ ಆಕರವಿಲ್ಲದೆ ಬರೆದ ಮೂರರಲ್ಲಿ ಇದೊಂದು. ಇಲ್ಲಿನ ಬಿರೂನ್, ಲಾಂಗವಿಲ್ ಮತ್ತು ದುಮೇನರು ಅಂದಿನ ಜೀವಂತ ವ್ಯಕ್ತಿಗಳು. ಹಲವು ಸಮಸಾಮಯಿಕ ಸಂಗತಿಗಳ ಪ್ರಸ್ತಾಪ ಬರುವುದು ಈ ನಾಟಕದ ಒಂದು ವಿಶೇಷ.

**ಕಥೆ:** ಇದು ಒಂದು ಯುವೋತ್ಸಾಹದಿಂದ ಕೂಡಿದ ರಮ್ಯಪ್ರೇಮದ ನಾಟಕ. ಕಥೆಯ ಕಟ್ಟಡ ಶಿಥಿಲ, ಪಾತ್ರಪೋಷಣೆ ದುರ್ಬಲ, ಕಾವ್ಯಶೈಲಿ ಪ್ರಾಸ,ಶ್ಲೇಷೆಗಳಿಂದ ಪರಿಪ್ಲುತವಾದ ಅತಿರೇಕ. ಆದರೂ 'ಆಪೆರಾ' ಮಾದರಿಯ ಒಂದು ವಿಶಿಷ್ಟ ಗೀತಗುಣ ಈ ಕೊರತೆಗಳೆಲ್ಲವನ್ನೂ ಮರಸಿ, ನಾಟಕಕ್ಕೆ ಕನಸಿನ ಕಳೆಕೊಟ್ಟು ಬೆಳಗಿದೆ.

ನವಾರ್ ಫ್ರಾನ್ಸಿನ ಸಮೀಪದ ಪುಟ್ಟ ರಾಜ್ಯ. ಫರ್ಡಿನೆಂಡ್ ಅಲ್ಲಿನ ದೊರೆ. ಬಿರೂನ್, ಲಾಂಗವಿಲ್ ಮತ್ತು ದುಮೇನ್ ಅವನ ಆಪ್ತರು. ಒಮ್ಮೆ ದೊರೆ ಈ ಆಪ್ತರ ಜತೆಗೂಡಿ ರಾಜಾಸ್ಥಾನವನ್ನು ಜೀವನಕಲೆಯ ಪರಿಷತ್ತನ್ನಾಗಿ ಪರಿವರ್ತಿಸುವ ಶಪಥ ತೊಡುತ್ತಾನೆ. ಅದರ ಪ್ರಕಾರ ಮೂರು ವರ್ಷಗಳ ಕಾಲ ಎಲ್ಲರೂ ಅಧ್ಯಯನದಲ್ಲಿ ತೊಡಗಬೇಕು. ಆ

ಅವಧಿಯಲ್ಲಿ ಊಟನಿದ್ದೆಗಳನ್ನು ಕಡಿಮೆಮಾಡಿ, ಹೆಂಗಸರೊಡನೆ ಮಾತು ಸಹ ಆಡದಷ್ಟು ಕಟ್ಟುಪಾಡಿನಲ್ಲಿರಬೇಕೆಂದು ನೇಮ. ಬಿರೂನ್ ಮಾನವ ಸ್ವಭಾವವನ್ನು, ಅದರ ಅವಶ್ಯಕತೆಗಳ ಒತ್ತಾಯವನ್ನು ಬಲ್ಲಾತ. ಮೂರು ವರ್ಷಗಳಲ್ಲಿ ಮೂರು ಸಾವಿರ ಸಲ ಕಟ್ಟು ಮುರಿಯಬೇಕಾಗಬಹುದೆಂದು ಅವನಿಗೆ ಭಯ! ಆದರೂ ಎಲ್ಲರೂ ನೇಮಕ್ಕೆ ಒಪ್ಪುತ್ತಾರೆ.

ದೊರೆಗೆ ಬೇಕಾದವರಲ್ಲಿ ಆರ್ಮಾಡೊ ಎಂಬವನು ಒಬ್ಬ. ಅವನು ಸ್ಪೇನಿನವನು, ಹಿಂದೆ ಸೈನಿಕನಾಗಿದ್ದನಂತೆ, ಮೋಜಿನ ಮನುಷ್ಯ, ಬಲು ಬಡಾಯಿಯ ಬಾಯಿ. ಅವನ ಮಾತಿನ ಬೆಡಗಿಗೆ ದೊರೆ ಮರುಳಾಗಿದ್ದಾನೆ. ನೇಮದ ಅವಧಿಯಲ್ಲಿ ಮನೋರಂಜನೆಯ ಅಗತ್ಯ ಬಿದ್ದರೆ ಅವನ ಹರಟೆ ಕೇಳುವುದೆಂದುಕೊಳ್ಳುತ್ತಾರೆ, ದೊರೆ ಮತ್ತು ದೊರೆಜನ.

ಇನ್ನೂ ನೇಮ ಆಚರಣೆಗೆ ಬರುವುದಕ್ಕಿಲ್ಲ, ಅದನ್ನು ಮುರಿದ ಒಂದು ಪ್ರಸಂಗ ದೊರೆಗೆ ವರದಿಯಾಗುತ್ತದೆ. ದೊರೆಯ ಊಳಿಗದವನಾದ ಕಾಸ್ಟರ್ಡ್ ಜಾಕ್‌ನೆಟ ಎಂಬ ಹಳ್ಳಿಯ ಹೆಣ್ಣಿನೊಂದಿಗೆ ಸಂಗ ಬೆಳಸಿದ್ದಾನೆ. ಇದನ್ನು ಪತ್ತೆ ಹಚ್ಚಿ ದೊರೆಗೆ ಸುದ್ದಿ ತಿಳಿಸುವವನು ಆರ್ಮಾಡೊ. ಕಾಸ್ಟರ್ಡನಿಗೆ ಒಂದು ವಾರ ಕಾಲ ಆರ್ಮಾಡೊನ ಕೈಸೆರೆಯಲ್ಲಿದ್ದು ಹೊಟ್ಟು ನೀರಿನ ಮೇಲೆ ಕಾಲಹಾಕಬೇಕೆಂಬ ಶಿಕ್ಷೆಯಾಗುತ್ತದೆ.

ದೊರೆ, ದೊರೆಜನರ ಸತ್ವಪರೀಕ್ಷೆಗೋ ಎಂಬಂತೆ, ಅವರು ನೇಮಕ್ಕೆ ತೊಡಗುವ ಹೊತ್ತಿಗೆ ಫ್ರಾನ್ಸಿನ ರಾಜಕುಮಾರಿ ರಾಜಕಾರ್ಯದ ಮೇಲೆ ನವಾರಿಗೆ ಬರುತ್ತಾಳೆ. ಅವಳೊಡನೆ ರಾಸಲೈನ್, ಮರಿಯಾ, ಕ್ಯಾಥರೀನ್ ಎಂಬ ಮೂವರು ಸಖಿಯರಿದ್ದಾರೆ. ಎಲ್ಲರೂ ಚೆಲುವೆಯರು, ಮದುವೆಗೆ ಹದನಾದ ವಯಸ್ಸು. ದೊರೆಗೆ ಈಗ ಪೀಕಲಾಟ! ರಾಜಕುಮಾರಿ ರಾಜದೂತಿಯಾಗಿ ಬಂದಿರುವುದರಿಂದ ಅವಳನ್ನು ನೋಡದೆ ಇರುವಂತಿಲ್ಲ. ನೋಡಿ, ಮಾತಾಡಿ, ಜತೆಗಿದ್ದರೆ ವ್ರತಭಂಗ! ಅರಮನೆಯ ಬದಲು, ಹೆಬ್ಬಾಗಿಲಾಚೆ ಉದ್ಯಾನದಲ್ಲಿ ಗುಡಾರ ಹಾಕಿಸಿ ಅವರಿಗೆ ಅಲ್ಲಿ ಬಿಡಾರ ಮಾಡಿಕೊಡುತ್ತಾನೆ. ರಾಜ-ಕಾರ್ಯದ ಮೇಲೆ ದೊರೆ ರಾಜಕುಮಾರಿಯನ್ನು ಆಗಾಗ ನೋಡಬೇಕಾಗಿ ಬರುತ್ತದೆ. ನೋಡಿದಷ್ಟೂ ಅವಳಿಗೆ ಮಾರುಹೋಗುತ್ತಾನೆ. ಅವನಂತೆಯೇ ಅವನ ಆಪ್ತರಲ್ಲಿ ಒಬ್ಬೊಬ್ಬನೂ ರಾಜಕುಮಾರಿಯ ಬಳಗದ ಒಬ್ಬೊಬ್ಬಳಲ್ಲಿ ಮೋಹಿತನಾಗುತ್ತಾನೆ: ಬಿರೂನ್ ರಾಸಲೈನಳಲ್ಲಿ, ಲಾಂಗವಿಲ್ ಮರಿಯಾಳಲ್ಲಿ, ದುಮೇನ್ ಕ್ಯಾಥರೀನಳಲ್ಲಿ!

ಜಾಕ್‌ನೆಟಳನ್ನು ಕೂಡಿದ್ದನೆಂದು ಕಾಸ್ಟರ್ಡನಿಗೆ ಶಿಕ್ಷೆಕೊಡಿಸಿದ ಆರ್ಮಾಡೊ ಸ್ವತಃ ತಾನೇ ಆ ಅಪರಾಧದ ಸವಿ ಬಯಸದೇ ಇಲ್ಲ. ಅವನೂ ಪ್ರೇಮಿಯೇ, ಅದೂ ಜಾಕ್‌ನೆಟಳಲ್ಲೇ! ಅವನ ಬೇನೆ ಅವಳನ್ನು ಕುರಿತು ಕಾವ್ಯ ಬರೆಯುವಷ್ಟರವರೆಗೂ ಹೋಗಿದೆ. ಒಂದು ಪ್ರೇಮಪತ್ರ ಬರೆದು ಅದನ್ನು ಕಾಸ್ಟರ್ಡನ ಮುಖಾಂತರವೇ ಜಾಕ್‌ನೆಟಳಿಗೆ ಕಳಿಸುತ್ತಾನೆ. ಆ ಸೇವೆ ಮಾಡಲು ಒಪ್ಪಿದ್ದಕ್ಕೆ ಕಾಸ್ಟರ್ಡನಿಗೆ ಸಿಗುವ ಪ್ರತಿಫಲವೆಂದರೆ ವಾರದ ಸೆರೆಯಿಂದ ವಿಮುಕ್ತಿ. ಕಾಸ್ಟರ್ಡ್ ಪತ್ರ ಕೊಂಡುಹೊರಟಿರುವಾಗ ಅಕಸ್ಮಾತ್ತಾಗಿ ಬಿರೂನನ ಭೇಟಿಯಾಗುತ್ತದೆ. ಅವನೂ ಕಾಸ್ಟರ್ಡನ ಕೈಯಲ್ಲಿ ಒಂದು ಲಕೋಟೆಯಿಟ್ಟು ಅದನ್ನು ರಾಸಲೈನಳಿಗೆ ತಲಪಿಸಲು ಹೇಳುತ್ತಾನೆ. ಕಾಸ್ಟರ್ಡ್ ನಿರಕ್ಷರ ಕುಕ್ಷಿ. ಆ ಬೆಪ್ಪನ ಕೈಯಲ್ಲಿ ಪತ್ರಗಳೆರಡೂ ಅದಲುಬದಲಾಗುತ್ತವೆ. ಪರಿಣಾಮವಾಗಿ ರಾಸಲೈನಳಿಗೆ ಸಿಗುವುದು ಆರ್ಮಾಡೊ ಜಾಕ್‌ನೆಟಳಿಗೆ ಬರೆದ ಪ್ರೇಮಗಾಥ! ಅದರ ವಾಗಾಡಂಬರ,



**ಫ್ರಾನ್ಸಿನ ರಾಜಕುಮಾರಿ ಮತ್ತು ನವಾರಿನ ದೊರೆ ಫರ್ಡಿನೆಂಡ್**

ಅಲಂಕಾರಗಳು ರಾಸಲೈನ್ ಮತ್ತು ಅವಳ ಸಂಗಾತಿಗಳಿಗೆ ಮನೋರಂಜನೆ ಕೊಡುತ್ತವೆ.

ಜಾಕ್‌ನೆಟಳಿಗೂ ಓದುಬರೆಹ ಬಾರದು. ಕಾಸ್ಟರ್ಡ್ ತಪ್ಪಿ ತಂದುಕೊಟ್ಟ ಬಿರೂನನ ಲಕೋಟಿಯನ್ನು ಊರಿನ ಉಪಾಧ್ಯಾಯ ಹಾಲಫರ್ನೀಸ್‌ನಲ್ಲಿಗೆ ಕೊಂಡು ಹೋಗಿ ಓದಿ ಹೇಳೆನ್ನುತ್ತಾಳೆ. ಅದರಲ್ಲಿ ಪ್ರೇಮಸಂಬಂಧವಾದ ಒಂದು ಸಾನೆಟ್ ಇದೆ. ಹಾಲಫರ್ನೀಸ್ ಪಂಡಿತವಕ್ಕಿ! ತನ್ನ ವಿದ್ವತ್ತಿನ ಪ್ರದರ್ಶನ ಮಾಡುವುದೆಂದರೆ ಅವನಿಗೆ ಬಲು ಆಸೆ. ಅದನ್ನು ಓದಿ ವಿಶ್ಲೇಷಿಸಿ ಜಿಜ್ಞಾಸೆ ನಡಸಿ, ಅದು ದೊರೆಜನರಲ್ಲೊಬ್ಬನ ವಿಳಾಸಕ್ಕಿರುವುದರಿಂದ ಹೋಗಿ ದೊರೆಗೆ ತಲಪಿಸೆಂದು ಜಾಕ್‌ನೆಟಳನ್ನು ಕಳಿಸುತ್ತಾನೆ.

ಇತ್ತ ದೊರೆಗೂ ಅವನ ಆಪ್ತರಿಗೂ ಪ್ರೇಮದ ಗುಂಗು ತಲೆಗೆ ಹೊಕ್ಕು, ಕಣ್ಣು ತೇಲುತ್ತಿದೆ. ಎಲ್ಲರೂ ಸಂಭಾವಿತರೇ! ಯಾರಿಗೂ ತಾವು ಪಾಲಿಸಲು ಒಪ್ಪಿದ್ದ ನೇಮದ ಪರಿವೆಯಿಲ್ಲ. ಅವರೆಲ್ಲರೂ ಗುಟ್ಟಾಗಿ ತಮ್ಮ ತಮ್ಮ ಪ್ರಿಯತಮೆಯರ ಮೇಲೆ ಸಾನೆಟ್ ಬರೆಯಲು ತೊಡಗಿದ್ದಾರೆ. ದೊರೆ ಕವಿತೆ ಕಟ್ಟುತ್ತಿರುವುದು ಬಿರೂನನ ಕಣ್ಣಿಗೆ ಬೀಳುತ್ತದೆ. ಅದೇ ರೀತಿ ಲಾಂಗವಿಲ್ ಬರೆದು ಗುನುಗುತ್ತಿರುವುದು ಬೇರೆ ಬೇರೆ ಅವಿತು ನೋಡುತ್ತಿರುವ ದೊರೆ, ಬಿರೂನರಿಗೆ ಕಾಣಿಸುತ್ತದೆ. ಹಾಗೆಯೇ ದುಮೇನ್ ಕಬ್ಬ ಹೊಸೆಯುತ್ತಿರುವುದನ್ನು ಉಳಿದ ಮೂವರೂ ನೋಡುತ್ತಾರೆ. ಲಾಂಗವಿಲ್ ಮರಸಿನಿಂದ ಹೊರಬಂದು ದುಮೇನನ್ನು ಅವನ ಆತ್ಮವಂಚನೆಗೆ ಖಂಡಿಸುತ್ತಾನೆ. ದೊರೆ ಕಾಣಿಸಿಕೊಂಡು ಅವರಿಬ್ಬರನ್ನೂ ಅದೇ ಕಾರಣಕ್ಕೆ ಧಿಕ್ಕರಿಸುತ್ತಾನೆ. ಸಮಯ ಕಾಯುತ್ತಿದ್ದ ಬಿರೂನ್ ಹೊರಬಿದ್ದು ತಾನು ಮಹಾ ಸಭ್ಯನೆಂಬಂತೆ ಉಳಿದ ಮೂವರನ್ನೂ ಕಪಟಿಗಳೆಂದು ಟೀಕಿಸುತ್ತಾನೆ. ಇದೇ

ಸಮಯಕ್ಕೆ ಜಾಕ್‌ನೆಟ ಕೈಯಲ್ಲಿ ಬಿರೂನ್ ರಾಸಲೈನಳಿಗೆ ಕಳಿಸಿದ್ದ ಕವಿತೆಯ ಸಾಕ್ಷ್ಯ ಹಿಡಿದು ಅಲ್ಲಿ ಹಾಜರಾಗಬೇಕೆ! ಅವನ ಗುಟ್ಟೂ ಬಯಲಾಗುತ್ತದೆ. ಯೌವನದ ಬಿಸಿ ರಕ್ತಕ್ಕೆ ಮುಪ್ಪಿನ ನೇಮಗಳು ಒಗ್ಗವೆಂದು ಖಚಿತವಾಗಿ ನಾಲ್ವರೂ 'ಸ್ತ್ರೀಯೇ ಸರ್ವಸ್ವ, ಪ್ರಪಂಚಪೋಷಕವಾದ ಸಾಹಿತ್ಯ, ಕಲೆ, ಪರಿಷತ್ತುಗಳೆಲ್ಲ ಅವಳಲ್ಲೇ ಇವೆ' ಎಂಬ ತೀರ್ಮಾನಕ್ಕೆ ಬರುತ್ತಾರೆ! ನಾಟಕ, ಕುಣಿತಗಳಿಂದ ತಮ್ಮ ತಮ್ಮ ನಲ್ಲೆಯರನ್ನು ಬಹಿರಂಗ ವಾಗಿ ಪ್ರೀತಿಸಿ ಒಲಿಸಿಕೊಳ್ಳುವ ಯೋಜನೆ ಹಾಕುತ್ತಾರೆ. ಮೊದಲು ಉಡುಗೊರೆಗಳನ್ನು ಕಳಿಸಿಕೊಟ್ಟು, ನಂತರ ರಷ್ಯನರಂತೆ ವೇಷ ಮರಸಿ ಅವರನ್ನು ಹೋಗಿ ಕಾಣುವ ಸಂಚು ಹೂಡುತ್ತಾರೆ. ಈ ಸುದ್ದಿ ತಿಳಿದ ಚದುರೆಯರು ಮೊಗವಾಡ ಕಟ್ಟಿಕೊಂಡು ಅವರನ್ನು ಬರಮಾಡಿಕೊಳ್ಳುತ್ತಾರೆ. ದೊರೆಜನಕ್ಕೆ ಹುಡುಗಿಯರಲ್ಲಿ ಯಾರು ಯಾರೆಂದು ಗುರುತು ಹತ್ತದು! ಒಬ್ಬೊಬ್ಬನೂ ತನ್ನವಳಲ್ಲದ ಬೇರೆಯವಳೊಡನೆ ಕೂಡಿ, ಪ್ರೇಮ ತೋಡಿ ಕೊಳ್ಳುತ್ತಾನೆ! ಆ ಸರಸಗಾತಿಯರದು ಚುರುಕಿನ ನಾಲಿಗೆ. ಮಾತಿಗೆ ಮರುಮಾತಾಡಿ ದೊರೆಜನರನ್ನು ಸೋಲಿಸಿ, ಗೇಲಿಮಾಡಿ ಅಟ್ಟುತ್ತಾರೆ. ದೊರೆಜನ ವೇಷ ಕಳಚಿ ಮತ್ತೆ ಅಲ್ಲಿಗೆ ಬಂದಾಗ ತಮ್ಮ ಬೆಪ್ಪು ತಿಳಿದು ಅವರು ಪೆಚ್ಚಾಗುತ್ತಾರೆ.

ದೊರೆ ರಾಜಕುಮಾರಿಯನ್ನು ನೋಡ ಹೋಗಲಿರುವನೆಂದು ತಿಳಿದ ಆರ್ಮಾಡೊ ಅವರಿಗಾಗಿ 'ನವಮಹಾರತ್ನಗಳು' ಎಂಬ ದೃಶ್ಯಾವಳಿಯ ಪ್ರದರ್ಶನಕ್ಕೆ ಸಿದ್ಧತೆ ಮಾಡಿದ್ದಾನೆ; ಹಾಲಫರ್ನೀಸ್, ಕಾಸ್ಟರ್ಡ್, ಊರ ಪಾದ್ರಿ ನಥಾನಿಯಲ್ ಮೊದಲಾದವರು ಅದರ ಪಾತ್ರವರ್ಗ: ಒಬ್ಬ ಹೆಕ್ಟರ್, ಇನ್ನೊಬ್ಬ ಪಾಂಪೆ, ಮತ್ತೊಬ್ಬ ಹರ್ಕ್ಯುಲೀಸ್, ಇತ್ಯಾದಿ. ಗಂಭೀರವೆಂದು ಉದ್ದೇಶಿಸಿದ ಪ್ರದರ್ಶನ ಹುಚ್ಚಾಟವಾಗಿ ನಗೆಗೀಡಾಗುತ್ತದೆ.

ಇದೇ ಹೊತ್ತಿಗೆ, ಯೌವನ, ಪ್ರಣಯಗಳ ಚೆಲ್ಲಾಟದ ಈ ಸ್ವಪ್ನಪ್ರಪಂಚ ಅಶಾಶ್ವತ ವೆಂದು ತೋರಿಸಲೋ ಎಂಬಂತೆ, ಅದನ್ನು ಕ್ರೂರ ವಾಸ್ತವ ಜಗತ್ತಿಗೆ ಇಳಿಸುವ ಒಂದು ಸುದ್ದಿ ಬರುತ್ತದೆ. ರಾಜಕುಮಾರಿಯ ತಂದೆ ಹಠಾತ್ತನೆ ಸತ್ತಿದ್ದಾನೆ. ಅವಳು ಸಖಿಯ ರೊಡನೆ ಹೊರಟು ನಿಲ್ಲುತ್ತಾಳೆ. ರಾಜಕುಮಾರಿ ಮತ್ತು ಅವಳ ಸಖಿಯರು ತನ್ನನ್ನೂ ದೊರೆಜನರನ್ನೂ ವರಿಸಲೊಪ್ಪಬೇಕೆಂದು ದೊರೆ ಫರ್ಡಿನೆಂಡ್ ಕೇಳಿಕೊಳ್ಳುತ್ತಾನೆ. ಆದರೆ ಮೊದಲು ಅವರ ವ್ರತಭಂಗಕ್ಕೆ ಪ್ರಾಯಶ್ಚಿತ್ತವಾಗಬೇಕು. ಒಂದು ವರ್ಷ, ಮತ್ತೆ ಮೇಲೊಂದು ದಿನದವರೆಗೆ ಅವರ ಪ್ರೇಮ ಹಾಗೆಯೇ ಉತ್ಕಟವಾಗಿ ಉಳಿದರೆ ಆಗ ತಮ್ಮ ಇಚ್ಛೆ ತಿಳಿಸುವುದಾಗಿ ಹೇಳಿ, ರಾಣಿಯ ಪರಿವಾರದವರು ದೊರೆಜನರ ಆಶಾಭಂಗಮಾಡಿ ಬೀಳ್ಕೊಡುತ್ತಾರೆ. ಆರ್ಮಾಡೊನ ನಾಟಕ ಮಂಡಳಿ ವಸಂತ-ಶಿಶಿರಗಳನ್ನು ಕುರಿತು ಮಂಗಳ ಹಾಡಿ ಮುಗಿಸುತ್ತಾರೆ (ಪುಟ 179).

## 6. ರೋಮಿಯೊ ಅಂಡ್ ಜೂಲಿಯೆಟ್

**ರಚನೆ:** 1595-6. **ಮೊದಲ ಪ್ರಕಟನೆ:** 1597.

**ಆಕರಗಳು**: ಇಟಾಲಿಯನ್ ಕಾದಂಬರಿಗಾರರಾದ ಮಸೂಚಿಯೊ, ಬ್ಯಾಂಡೆಲೊ ಮೊದಲು ಈ ಕಥೆ ಬರೆದರು; ಬ್ಯಾಂಡೆಲೊನ ಕೃತಿಯನ್ನು ಬೆಲ್‌ಫಾರ್, ಪಿಯರ್ ಬೊಆಸ್ತ್ರಿಮೊ

ಫ್ರೆಂಚಿಗೆ ಅನುವಾದಿಸಿದರು. ಇವನ್ನು ಅವಲಂಬಿಸಿ ಆರ್ಥರ್‌ಬ್ರೂಕ್ ಇಂಗ್ಲಿಷ್‌ನಲ್ಲಿ 'ದಿ ಟ್ರ್ಯಾಜಿಕಲ್ ಹಿಸ್ಟರಿ ಆಫ್ ರೋಮಿಯಸ್ ಅಂಡ್ ಜೂಲಿಯೆಟ್' ಎಂಬ ಕವಿತೆ ಬರೆದ; ವಿಲಿಯಂ ಪೇಂಟರ್ ತನ್ನ 'ಪ್ಯಾಲೆಸ್ ಆಫ್ ಪ್ಲೆಷರ್'ನಲ್ಲಿ ಕಥೆ ಹೇಳಿದ. ಬಹುತರ ಆರ್ಥರನ ಕವಿತೆ ಷೇಕ್‌ಸ್ಪಿಯರನ ನಾಟಕಕ್ಕೆ ಆಧಾರವಾಗಿದೆ.

**ಕಥೆ:** ಪರಿಚಯವೇ ಬೇಡದಷ್ಟು ಸುಪ್ರಸಿದ್ಧವಾದ ಕೃತಿ ಇದು. ಇಲ್ಲಿ ಪರಿಸರದ ಪೆಟ್ಟಿಗೆ ಸಿಕ್ಕಿ ದುರಂತವಾಗುವ ಉದಾತ್ತ ರಮ್ಯಪ್ರೇಮದ ಮರ್ಮಸ್ಪರ್ಶಿಯಾದ ಚಿತ್ರಣ ವಿದೆ. ಕವಿಯದು ಈಗ ಪಳಗಿದ ಕೈ. ಎಂತಲೇ ಇಲ್ಲಿನ ಕಾವ್ಯ ಮಧುರ, ಸುಂದರ. ಪಾತ್ರಗಳೂ ಮೈದುಂಬಿ ಬಂದಿವೆ.

ವೆರೋನ ನಗರದಲ್ಲಿ ಎರಡು ಗಣ್ಯ ಮನೆತನಗಳು—ಒಂದು ಮಾಂಟೆಗೂರದು, ಇನ್ನೊಂದು ಕ್ಯಾಪ್ಯುಲೆಟರದು. ಇವರ ನಡುವೆ ಎಂದೆಂದೂ ತೀರದ ಹಳೆಯ ಹಗೆತನ. ಒಂದು ಮನೆಯವರು ಇನ್ನೊಂದು ಮನೆಯವರಿಗೆ ಎದುರಾದರೆ ಕಾಲುಕೆರೆದು ಜಗಳಕ್ಕಿಳಿ ಯುತ್ತಾರೆ, ಹಾದಿಬೀದಿಗಳಲ್ಲೇ ಹೊಡೆದಾಟವಾಗಿ ತಲೆಗಳು ಉರುಳುತ್ತವೆ. ಇದನ್ನು ನೋಡಿ ಬೇಸತ್ತ ದೇಶದ ಅರಸು ಹಾಗೆ ಕಚ್ಚಾಡಿದವರಿಗೆ ಮರಣದಂಡನೆ ಸಾರಿದ್ದಾನೆ.

ರೋಮಿಯೊ ಮಾಂಟೆಗೂರ ಹಿರಿ ಮಗ, ಸುಕುಮಾರ, ಸಭ್ಯ. ಅವನಿಗೆ ರಾಸಲೈನ್ ಎಂಬ ಚೆಲುವೆಯಲ್ಲಿ ಮೋಹ. ಅವಳು ಒಲಿಯಳು. ಆ ಭ್ರಮಣೆಯಲ್ಲಿ ನಿಲ್ಲ, ಕೂರ; ಅರಿವು ಮರೆತು ಅಲೆದಾಡುತ್ತಿದ್ದಾನೆ. ಮಿತ್ರ ಬೆನ್ವೋಲಿಯೊಗೆ ಇದು ತಿಳಿಯುತ್ತದೆ. ಅವನ ದೃಷ್ಟಿಯಲ್ಲಿ ರಾಸಲೈನ್ ಅಷ್ಟೇನೂ ಸುಂದರಿಯಲ್ಲ. ಕಣ್ಣಿಗೆ ಸ್ವಾತಂತ್ರ್ಯ ಕೊಟ್ಟು ನಾಲ್ಕಾರು ಚೆಲುವೆಯರತ್ತ ದೃಷ್ಟಿ ಹರಿಸು, ಆಗ ನೀನು ಹಂಸವೆಂದು ಕೊಂಡದ್ದು ಕಾಗೆಯೆಂದು ನಿನಗೇ ತಿಳಿದು ಹುಚ್ಚು ಬಿಡುತ್ತದೆ ಎಂದು ಉಪದೇಶ ನೀಡು ತ್ತಾನೆ. ಅದೇ ಸಮಯಕ್ಕೆ ಕ್ಯಾಪ್ಯುಲೆಟರ ಮನೆಯಲ್ಲಿ ಒಂದು ನೃತ್ಯಗೋಷ್ಠಿ ಏರ್ಪಾ ಡಾಗಿದೆ. ಬೆನ್ವೋಲಿಯೊ ಸೂಚಿಸಿದ ಹೋಲಿಕೆಯ ಮದ್ದಿನ ಪ್ರಯೋಗಕ್ಕೆ ಸುಯೋಗ. ಅದಕ್ಕಲ್ಲವಾದರೂ ರಾಸಲೈನಳನ್ನು ನೋಡುವ ಅವಕಾಶ ದೊರೆಯುವುದೆಂದುಕೊಂಡು ರೋಮಿಯೊ ನೃತ್ಯಗೋಷ್ಠಿಗೆ ಹೋಗಲು ಒಪ್ಪುತ್ತಾನೆ. ಆದರೆ ಅಲ್ಲಿ ಶತ್ರುಗಳಾದ ಈ ಮಾಂಟೆಗೂರಿಗೆ ಪ್ರವೇಶವಿಲ್ಲ. ಮುಖ ಮರೆಸಿ ಹೋಗುವುದೆಂದು ನಿಶ್ಚಯಿಸುತ್ತಾರೆ.

ದೀವಟಿಗೆಗಳ ಬೆಳಕಿನಲ್ಲಿ ನೃತ್ಯಗೋಷ್ಠಿ ನೆರೆದಿದೆ. ರೋಮಿಯೊ ಸಹ ತನ್ನ ಗೆಳೆಯ ರೊಡನೆ ಅಲ್ಲಿದ್ದಾನೆ. ಕ್ಯಾಪ್ಯುಲೆಟರ ಟೈಬಾಲ್ಟ್ ಮೊಗವಾಡ ಧರಿಸಿದ ರೋಮಿಯೊನನ್ನು ಅವನ ಧ್ವನಿಯಿಂದಲೇ ಮಾಂಟೆಗೂ ಸಂತತಿಯವನೆಂದು ಗುರುತಿಸಿ, ಅವನು ತಮ್ಮ ಸಂತೋಷವನ್ನು ಅಣಕ ಮಾಡಬಂದವನೆಂದು ಬಗೆದು ಮೈಮೇಲೆ ಬೀಳಹೋಗುತ್ತಾನೆ. ಆದರೆ ಕ್ಯಾಪ್ಯುಲೆಟರ ಯಜಮಾನ ಅವನನ್ನು ತಡೆದು ಬಂದವರೆಲ್ಲರೂ ಅತಿಥಿಗಳೇ, ಸಂತೋಷ ಸಮಾರಂಭ ಕಾಳಗವಾಗಿ ಕೊನೆಗೊಳ್ಳುವುದು ಬೇಡವೆಂದು ಬುದ್ಧಿ ಹೇಳು ತ್ತಾನೆ. ಟೈಬಾಲ್ಟ್ ಕೆಚ್ಚಿನ ಆಳು. ಈ ಅತಿಕ್ರಮಣದ ಪ್ರತೀಕಾರಕ್ಕೆ ಸಮಯ ಕಾಯು ವುದೆಂದುಕೊಂಡು ಸುಮ್ಮನಾಗುತ್ತಾನೆ.

ನೃತ್ಯದ ನಡುವೆ ಒಬ್ಬ ಅಪ್ರತಿಮ ಸುಂದರಿ ರೋಮಿಯೊನ ಕಣ್ಣಿಗೆ ಬೀಳುತ್ತಾಳೆ. ಅವಳು ಕ್ಯಾಪ್ಯುಲೆಟನ ಮಗಳಾದ ಜೂಲಿಯೆಟ್. ಆ ಕ್ಷಣ ಪರಸ್ಪರ ಪ್ರೇಮಾಂಕುರ

ವಾಗುತ್ತದೆ. ಇಬ್ಬರೂ ಕೂಡಿ ಮಾತಾಡಿ ನೃತ್ಯವಾಡುತ್ತಾರೆ. ರೋಮಿಯೊಗೆ ರಾಸ-ಲೈನಳಲ್ಲಿದ್ದ ಮೋಹ ಅಳಿಯುತ್ತದೆ. ನಂತರ ವಿಚಾರಿಸಿ ನೋಡಿದಾಗ ಒಬ್ಬರು ಇನ್ನೊಬ್ಬರ ಶತ್ರುಗಳ ಮಕ್ಕಳೆಂದು ತಿಳಿದು ಇಬ್ಬರಿಗೂ ದುಃಖವಾಗುತ್ತದೆ.

ರೋಮಿಯೊಗೆ ಪ್ರೇಮವೇದನೆ ತಾಳಲಾಗುವುದಿಲ್ಲ. ಗೆಳೆಯರಿಂದ ಕಳಚಿಕೊಂಡು ಕ್ಯಾಪ್ಯುಲೆಟರ ಮನೆಯ ಹೊರತೋಟದಲ್ಲಿ, ಜೂಲಿಯೆಟಳ ಕೋಣೆಯ ಕಿಟಕಿಯಡಿ ಸುಳಿದಾಡುತ್ತಾನೆ. ಬೆಳುದಿಂಗಳ ರಾತ್ರಿ. ಜೂಲಿಯೆಟ್ ಮೇಲುಕಿಟಕಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅವಳೂ ಅವನ ಸ್ಥಿತಿಯಲ್ಲಿಯೇ ಇದ್ದಾಳೆ. ತಾರೆಗಳಿಗೆ ಸಂಬೋಧಿಸಿ ರೋಮಿಯೊನಲ್ಲಿ ತನಗುಕ್ಕಿದ ಅತೀವ ಪ್ರೇಮಕ್ಕೆ ನುಡಿಗೊಡುತ್ತಾಳೆ. ರೋಮಿಯೊಗೆ ಧೈರ್ಯ ಬಂದು ತನ್ನ ಇರವನ್ನು ತಿಳಿಸಿಕೊಡುತ್ತಾನೆ. ಇಬ್ಬರೂ ತಮ್ಮ ಎದೆಬಯಕೆಗಳನ್ನು ಹೊರಗೆಡವುತ್ತಾರೆ. ಇಬ್ಬರ ನಡುವೆ ಉತ್ಕಟ ಪ್ರೇಮಸಂವಾದ ನಡೆಯುತ್ತದೆ. ಪರಿಣಾಮ ಏನೇ ಆಗಲಿ, ಮಾರನೆ ದಿನ ಗುಟ್ಟಾಗಿ ಮದುವೆಯಾಗುವುದೆಂದು ನಿರ್ಧರಿಸಿ, ಬೀಳ್ಕೊಡುತ್ತಾರೆ. ರೋಮಿಯೊಗೆ ಫ್ರೈಯರ್ ಲಾರೆನ್ಸ್ ಎಂಬ ಪಾದ್ರಿಯ ಬೆಂಬಲವಿದೆ. ಸಲಹೆ, ಸಹಾಯಗಳಲ್ಲಿ ಅವನ ಕೈ ಸದಾ ಮುಂದು. ಹಾಗೆಯೇ ಜೂಲಿಯೆಟ್‌ಳಿಗೆ ಎಳೆತನದಿಂದ ಎತ್ತಿ ಆಡಿಸಿ ಬೆಳಸಿದ ಪರಿಚಾರಿಕೆಯ ರಕ್ಷೆಯಿದೆ. ಇವರ ನೆರವಿನಿಂದ ಮರುದಿನ ರೋಮಿಯೊ ಜೂಲಿಯೆಟರು ಲಾರೆನ್ಸನ ಮನೆಯಲ್ಲಿ ಗುಟ್ಟಾಗಿ ಸೇರುತ್ತಾರೆ. ಆ ಹಿತೈಷಿ ಅವರ ಮದುವೆ ಮಾಡಿಸುತ್ತಾನೆ.

ರೋಮಿಯೊ ಮದುವೆ ಮುಗಿಸಿ ಬರುವಾಗ ದಾರಿಯಲ್ಲಿ ಕ್ಯಾಪ್ಯುಲೆಟರ ಟೈಬಾಲ್ಟ್ ತನ್ನ ಗೆಳೆಯ ಮರ್ಕ್ಯೂಷಿಯೊ, ಬೆನ್ವೋಲಿಯೊರೊಡನೆ ಕಚ್ಚಾಡುತ್ತಿರುವುದು ಕಾಣುತ್ತದೆ. ಟೈಬಾಲ್ಟ್ ರೋಮಿಯೊನನ್ನೇ ಅರಸುತ್ತಿದ್ದಾನೆ. ನೃತ್ಯಗೋಷ್ಠಿಯಲ್ಲಿ ಅತಿಕ್ರಮಣ ಮಾಡಿ ಬಂದುದಕ್ಕೆ ಸೇಡು ತೀರಿಸಿಕೊಳ್ಳಲು ಅವನ ಕೈಕಡಿಯುತ್ತಿದೆ. ಕೆಣಕಿ ಮಾತಾಡುತ್ತಾನೆ. ಅವನಿಗೆ ತಿಳಿಯದಾದರೂ ಈಗ ಅವನು ರೋಮಿಯೊನ ಭಾವ, ರಕ್ತಬಂಧು. ರೋಮಿಯೊ ಅವನ ಚುಚ್ಚುನುಡಿಗಳಿಗೆ ಲಕ್ಷ್ಯ ಕೊಡುವುದಿಲ್ಲ. ರೋಮಿಯೊನ ವರ್ತನೆಯಲ್ಲಿ ಈ ಮಾರ್ಪಾಡೇಕೆಂದು ಮರ್ಕ್ಯೂಷಿಯೊ ಕಾಣ. ಅವನಿಗೆ ರೇಗಿ ಟೈಬಾಲ್ಟನನ್ನು ಎದುರಿಸುತ್ತಾನೆ. ಇಬ್ಬರಿಗೂ ಹೋರಾಟ ನಡೆದು, ರೋಮಿಯೊ ಬಿಡಿಸ ಹೋದರೂ ಪ್ರಯೋಜನವಾಗದೆ, ಮರ್ಕ್ಯೂಷಿಯೊ ಟೈಬಾಲ್ಟನ ಕತ್ತಿಯ ಪೆಟ್ಟಿಗೆ ಜೀವ ತೆರುತ್ತಾನೆ. ಆಪ್ತಮಿತ್ರನ ಸಾವು ರೋಮಿಯೊನನ್ನು ಕಲಕುತ್ತದೆ. ಟೈಬಾಲ್ಟನೊಡನೆ ಕಾದು, ಅವನನ್ನು ಇರಿದು ಕೊಂದು, ಜನ ನೆರೆಯುವ ಮೊದಲೇ ಓಡಿ ಹೋಗಿ ಲಾರೆನ್ಸನ ಮನೆಯಲ್ಲಿ ಅವಿತುಕೊಳ್ಳುತ್ತಾನೆ. ಟೈಬಾಲ್ಟನ ಕೊಲೆಗೆ ಅವನಿಗೆ ಸಿಗುವ ಶಿಕ್ಷೆ ದೇಶಾಂತರವಾಸ.

ಸುದ್ದಿ ಕೇಳಿದ ಜೂಲಿಯೆಟ್‌ಳಿಗೆ ಬಹು ದುಃಖವಾಗುತ್ತದೆ. ಇತ್ತ ಬಂಧು; ಅತ್ತ ಪ್ರಿಯತಮ, ಮೂರೇ ಗಂಟೆಗಳವನಾದರೂ ಗಂಡ. ಕೊನೆಗೆ ಅವಳ ಭಾವನೆ ಓಲುವುದು ರೋಮಿಯೊನ ಕಡೆಗೇ. ಅವನಿಗೆ ಗುರುತಿನ ಉಂಗುರ ಕಳಿಸಿ ಆ ರಾತ್ರಿ ಬರಬೇಕೆಂದು ಕರೆ ಕಳಿಸುತ್ತಾಳೆ. ರೋಮಿಯೊ ನೂಲೇಣಿಯಿಂದ ಅವಳ ಕೋಣೆಗೆ ಹತ್ತಿ, ಆ ರಾತ್ರಿ ಅವಳೊಡನೆ ಕಳೆದು, ನಸುಕಿನಲ್ಲಿ ಮಾಂಟ್ಯುಕ್ಕೆ ಹೊರಡುತ್ತಾನೆ.

ಜೂಲಿಯೆಟಳನ್ನು ವಿರಹ ಕೊರೆಯುತ್ತಿದೆ. ಅವಳ ತಂದೆ ತಾಯಿಯರಿಗೆ ರೋಮಿಯೊ

ಜೊತೆ ಅವಳು ಮಾಡಿಕೊಂಡ ಲಗ್ನದ ವಿಷಯ ತಿಳಿಯದು. ಬಂಧು ಟೈಬಾಲ್ಟನ ಸಾವಿಗೆ ಶೋಕಿಸುತ್ತಿದ್ದಾಳೆಂದು ಅವರ ಊಹೆ. ಅವರಿಗೆ ಮೊದಲಿನಿಂದಲೂ ಜೂಲಿಯೆಟ್‌ಳನ್ನು ದೊರೆಯ ಸಮೀಪಬಂಧುಗಳಲ್ಲೊಬ್ಬನಾದ ಪ್ಯಾರಿಸ್‌ನಿಗೆ ಕೊಟ್ಟು ಮದುವೆ ಮಾಡ ಬೇಕೆಂದು ಆಲೋಚನೆ. ಈಗಲೇ ಲಗ್ನ ಕೂಡಿಸಿದ್ದಾದರೆ ಅವಳ ಮನಸ್ಸು ಆ ಕಡೆ ಹರಿದು ದುಃಖದ ಭಾರ ಕಡಿಮೆಯಾಗಬಹುದೆಂದು ಅವರ ತರ್ಕ! ಜೂಲಿಯೆಟ್ ಒಲ್ಲಳು. ಅವರು ಒತ್ತಾಯ ಮಾಡುತ್ತಾರೆ. ಅವಳ ಎದೆಬೆಂಕಿ ಇದ್ದಿದ್ದೂ ಹೊತ್ತಿ ಉರಿಯುತ್ತದೆ. ದಾರಿ ತೋರದೆ ದಿಕ್ಕೆಟ್ಟು ಫ್ರೈಯರ್ ಲಾರೆನ್ಸ್‌ನಲ್ಲಿಗೆ ಓಡಿಬರುತ್ತಾಳೆ. ಆ ಪಾದ್ರಿ ವನಸ್ಪತಿ ಶಾಸ್ತ್ರವನ್ನೂ ಬಲ್ಲ. ಅವನ ಬಳಿ ಸಮ್ಮೋಹನ ಶಕ್ತಿಯನ್ನುಳ್ಳ ಒಂದು ಬಗೆಯ ವಿಚಿತ್ರ ವಾದ ಮದ್ದಿದೆ. ಸೇವಿಸಿದವರು ಅದರ ಶಕ್ತಿ ಅಳಿಯುವವರೆಗೆ ಬದುಕಿಯೂ ಸತ್ತಂತೆ ಕಾಣುತ್ತಾರೆ. ಜೂಲಿಯೆಟಳನ್ನು ಅವಳಿಗೊದಗಿದ ಸಂಕಷ್ಟದಿಂದ ಪಾರಾಗಿಸಲು ಲಾರೆನ್ಸ್ ಒಂದು ಸಲಹೆ ಕೊಡುತ್ತಾನೆ: 'ಜೂಲಿಯೆಟ್ ಮದುವೆಗೆ ಒಪ್ಪಿ ತಾನು ಕೊಡುವ ಮದ್ದನ್ನು ಸೇವಿಸುವುದು. ಸತ್ತಳೆಂದು ಬಗೆದು ಅವಳ ಜನ ಅಲ್ಲಿನ ಸಮಾಧಿಕ್ರಮದಂತೆ ಮನೆತನದ ಹೂಳ್ಮನೆಯಲ್ಲಿ ಅವಳ ಶವವನ್ನು ಮಲಗಿಸಿ ಬರುತ್ತಾರೆ. ಮದ್ದಿನ ಸಮ್ಮೋಹನ ಶಕ್ತಿ ಮುಗಿದು ಅವಳಿಗೆ ಪ್ರಜ್ಞೆ ಬರುವ ಹೊತ್ತಿಗೆ ಲಾರೆನ್ಸ್ ರೋಮಿಯೊಗೆ ಸುದ್ದಿ ಕಳಿಸಿ ಅವನನ್ನು ಕರೆಸಿರುತ್ತಾನೆ. ಅವನು ಜೂಲಿಯೆಟಳನ್ನು ಕರೆದೊಯ್ಯುತ್ತಾನೆ.'

ಪ್ಯಾರಿಸ್‌ನ ಕೈಹಿಡಿಯುವ ಬದಲು ಸಾಯಲು ಸಹ ಸಿದ್ಧಳಾಗಿರುವ ಜೂಲಿಯೆಟ ಳಿಗೆ ಲಾರೆನ್ಸ್‌ನ 'ತಾತ್ಕಾಲಿಕ ಮರಣ'ದ ಸಲಹೆಯಿಂದ ಅಂಜಿಕೆಯಾಗದು. ಧೈರ್ಯದಿಂದ ಒಪ್ಪುತ್ತಾಳೆ. ಆದರೆ ಇವರು ಬಯಸಿದ್ದೊಂದು, ದೈವ ಬಗೆಯುವುದೇ ಮತ್ತೊಂದು: ಈ ಸಂಚನ್ನು ತಿಳಿಸಿ ಲಾರೆನ್ಸ್ ಬರೆದ ಪತ್ರ ರೋಮಿಯೊಗೆ ತಲಪುವುದೇ ಇಲ್ಲ! ಜೂಲಿ-ಯೆಟ್ ಸತ್ತ ಸುದ್ದಿ ಮಾತ್ರ ಅವನಿಗೆ ಬೇರೊಂದು ಕಡೆಯಿಂದ ತಿಳಿಯುತ್ತದೆ. ಅವನ ಪ್ರೇಮದ ಉಜ್ವಲತೆ ಜೂಲಿಯೆಟಳದಕ್ಕೆ ಕಿಂಚಿತ್ತೂ ಕಡಿಮೆಯಿಲ್ಲ. ಅವಳೊಡನೆ ಅವನೂ ಸಾಯಲು ಸಿದ್ಧ. ಹತಾಶನಾಗಿ ಹೊಟ್ಟೆಗಿಲ್ಲದ ವೈದ್ಯನೊಬ್ಬನಿಗೆ ಹಣದ ಆಸೆ ತೋರಿಸಿ ಅವನಿಂದ ಘೋರ ವಿಷ ಸಂಪಾದಿಸಿ ವೆರೋನಕ್ಕೆ ಬರುತ್ತಾನೆ. ಜೂಲಿಯೆಟಳ ಶವದರ್ಶನಕ್ಕೆಂದು ಹೂಳ್ಮನೆಯ ಬಾಗಿಲು ತೆಗೆಯುತ್ತಿರುವಾಗ ಜೂಲಿಯೆಟಳ ಕೈ ಹಿಡಿಯ ಬೇಕಾಗಿದ್ದ ಪ್ಯಾರಿಸ್ ಅಲ್ಲಿ ಕಾಣಿಸಿಕೊಳ್ಳುತ್ತಾನೆ. ಜೂಲಿಯೆಟಳಲ್ಲಿ ಅವನಿಗೂ ತನ್ನದೇ ವಿಶಿಷ್ಟ ಪ್ರೇಮವಿದೆ. ಅವನು ಅಲ್ಲಿ ಸಮಾಧಿಗೆ ಹೂವಿಡಲು ಬಂದಿದ್ದಾನೆ. ರೋಮಿಯೊ ಜೂಲಿಯೆಟಳ ಪ್ರೇಮಿಯೆಂಬುದನ್ನು ಪ್ಯಾರಿಸ್ ಕಾಣ. ಅವಳು ವೈರಿ ಕ್ಯಾಪ್ಯುಲೆಟನ ಮಗಳಾದ ಕಾರಣ ಅವಳ ಶವಕ್ಕೆ ಅವಮಾನ ಮಾಡಿ ಹಗೆ ತೀರಿಸಿಕೊಳ್ಳಲು ಬಂದಿ ದ್ದಾನೆಂದು ಬಗೆದು ಪ್ಯಾರಿಸ್ ಎದುರುಬೀಳುತ್ತಾನೆ. ಇಬ್ಬರಿಗೂ ಹೋರಾಟವಾಗುತ್ತದೆ. ರೋಮಿಯೊ ಪ್ಯಾರಿಸ್‌ನನ್ನು ಕೊಲ್ಲುತ್ತಾನೆ. ಕೊಂದ ಮೇಲೆ ಅವನಾರೆಂದು ಗುರುತು ಹತ್ತುತ್ತದೆ. ಸಾಯುವಮುನ್ನ ಪ್ಯಾರಿಸ್‌ನದೊಂದು ಎದೆಯಾಸೆ: ತನ್ನ ಶವ ಜೂಲಿಯೆಟಳ ಶವದ ಪಕ್ಕದಲ್ಲೊರಗಬೇಕು. ದುರ್ದೈವ ತನ್ನ ಗ್ರಂಥದಲ್ಲಿ ರೋಮಿಯೊನ ಹೆಸರಿನ ಜೊತೆಗೆ ಪ್ಯಾರಿಸ್‌ನದನ್ನೂ ಬರೆದಿದೆಯಲ್ಲವೆ! ಆ ಎಳೆಯನ ದುರ್ಗತಿಗೆ ಮರುಕ ಹುಟ್ಟಿ ರೋಮಿಯೊ ಅವನ ಕೊನೆಯ ಕೋರಿಕೆಯನ್ನು ನೆರವೇರಿಸುತ್ತಾನೆ. ನಂತರ ವಿಷ ಕುಡಿದು

ತಾನೂ ಜೂಲಿಯೆಟಳ ಶವದ ಬಳಿ ಜೀವ ನೀಗುತ್ತಾನೆ. ಇದಾದ ಸ್ವಲ್ಪ ಹೊತ್ತಿನಲ್ಲೇ ಫ್ರೈಯರ್ ಲಾರೆನ್ಸ್ ಹೂಳ್ಮನೆಗೆ ಬರುತ್ತಾನೆ. ಆ ಕ್ಷಣಕ್ಕೆ ಸರಿಯಾಗಿ ಜೂಲಿಯೆಟ್ ಸಮ್ಮೋಹನ ದ್ರವ್ಯದ ಶಕ್ತಿ ಮುಗಿದು ಕಣ್ದೆರೆಯುತ್ತಾಳೆ. ಆದರೆ ಕಾಲ ಮಿಂಚಿದೆ. ಪಕ್ಕದಲ್ಲಿ ರೋಮಿಯೊ ಸತ್ತು ಬಿದ್ದಿದ್ದಾನೆ, ಹತ್ತಿರದಲ್ಲೇ ವಿಷಪಾತ್ರೆಯಿದೆ. ಜೂಲಿಯೆಟ್ ಅವನ ಚೂರಿಯಿಂದಲೇ ಎದೆಯಿರಿದುಕೊಂಡು ತಾನೂ ಸಾಯುತ್ತಾಳೆ. ಮಾಂಟೆಗೂ-ಕ್ಯಾಪ್ಯುಲೆಟರ ಹಿರಿಯರು ತಮ್ಮ ವೈರದ ಕಾರಣದಿಂದಾಗಿ ಆತ್ಮಾರ್ಪಣೆ ಮಾಡಿಕೊಳ್ಳಬೇಕಾಗಿ ಬಂದ ಆ ದುರಂತ ಪ್ರೇಮಿಗಳ ಶವಗಳ ಸಮ್ಮುಖದಲ್ಲಿ ಹಗೆ ತೊರೆದು ಒಂದಾಗುತ್ತಾರೆ.

## 7. ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್

**ರಚನೆ:** 1595-6. **ಮೊದಲ ಪ್ರಕಟನೆ :** 1600.

**ಆಕರಗಳು :** ಇದು ಯಾವದೋ ವಿವಾಹ ಸಮಾರಂಭದಲ್ಲಿ ಆಡಲು ಬರೆದ ನಾಟಕವೆಂದು ಪಂಡಿತರ ಊಹೆ. ಥೀಸ್ಯೂಸ್-ಹಿಪಾಲಿಟರ ಸೃಷ್ಟಿಗೆ ಪ್ಲೂಟಾರ್ಕನ 'ಲೈಫ್ ಆಫ್ ಥೀಸ್ಯೂಸ್' ಮತ್ತು ಚಾಸರನ 'ನೈಟ್ಸ್ ಟೇಲ್'; ಪಿರಮಸ್-ಥಿಸ್ಬೆ 'ಪ್ರಸಂಗ'ಕ್ಕೆ ಹಾಗೂ 'ಟೈಟೇನಿಯ' ಎಂಬ ಹೆಸರಿಗೆ ಆವಿಡನ 'ಮೆಟಾಮಾರ್ಫಸಿಸ್'; ಪಕ್‌ನ ಮತ್ತು ಕತ್ತೆ-ತಲೆಯ ಕಲ್ಪನೆಗೆ ರೆಜಿನಾಲ್ಡ್ ಸ್ಕಾಟನ 'ಡಿಸ್ಕವರಿ ಆಫ್ ವಿಚ್‌ಕ್ರಾಫ್ಟ್'; ಓಬೆರಾನನ ಪಾತ್ರಕ್ಕೆ ರಾಬರ್ಟ್ ಗ್ರೀನನ 'ಜೇಮ್ಸ್ ದಿ ಫೋರ್ತ್' — ಹೀಗೆ ಹಲವಾರು ಕಡೆಯಿಂದ ಸಾಮಗ್ರಿ ಕೂಡಿಸಿದ್ದರೂ ಒಟ್ಟಿನ ಕಲ್ಪನೆ, ಅದರ ಸ್ವಪ್ನಬಂಧ ಷೇಕ್‌ಸ್ಪಿಯರನವೇ.

**ಕಥೆ:** ಕವಿಯ ಮಹಾ ಹರ್ಷಕಗಳಲ್ಲಿ ಇದು ಒಂದು. ಓಬೆರಾನನ ಯಕ್ಷಲೋಕ, ಥೀಸ್ಯೂಸನ ಶ್ರೀಮಂತ ಪ್ರಪಂಚ, ಬಾಟಮನ ಸಾಮಾನ್ಯ ಜಗತ್ತು — ಹೀಗೆ ಕೃತಿ ಮೂರು ಹಾಸಿನ ಮಿಂಚುಬಟ್ಟೆ; ನೆಯ್ದಿರುವುದು ಅಚ್ಚ ಕಾವ್ಯದ ಮಗ್ಗದಲ್ಲಿ. ಜೊತೆಗೆ ಹೆಸರಿಗೆ ತಕ್ಕಂತೆ ವಸಂತದ ಉಲ್ಲಾಸ, ಸ್ವಪ್ನದ ಮಾಧುರ್ಯಗಳೂ ಕೂಡಿ ನಾಟಕದ ಶೋಭೆ ಹೆಚ್ಚಿದೆ. ಕಟ್ಟುಕತೆಯಾದರೂ ಹಿನ್ನೆಲೆ ಇಂಗ್ಲಂಡಿನ ಹೂಹಕ್ಕಿಗಳ ಹಳ್ಳಿಗಾಡಿನದು.

ಅಮೆಜಾನರ ರಾಣಿ ಹಿಪಾಲಿಟಳನ್ನು ಪರಾಕ್ರಮದಿಂದ ಗೆದ್ದು ತಂದು ಅವಳಿಗೊಲಿದ ಅಥೆನ್ಸಿನ ದೊರೆ ಥೀಸ್ಯೂಸ್ ಬರುವ ಪೂರ್ಣಿಮೆಯ ರಾತ್ರಿ ಅವಳನ್ನು ಲಗ್ನವಾಗುವುದೆಂದು ನಿಶ್ಚಯಿಸಿ ಆ ಸಂಭ್ರಮದಲ್ಲಿದ್ದಾನೆ. ಆ ಪ್ರೇಮಿಯ ಮುಂದೆ ಒಂದು ಪ್ರೇಮವ್ಯವಹಾರ ತೀರ್ಪಿಗೆ ಬರುತ್ತದೆ: ಈಜ್ಯೂಸ್ ಎಂಬೊಬ್ಬ ಪ್ರಜೆ ತನ್ನ ಮಗಳು ಹರ್ಮಿಯಾಳ ಮೇಲೆ ದೂರು ತಂದಿದ್ದಾನೆ: ಅವಳೂ ಲೈಸ್ಯಾಂಡರ್ ಎಂಬ ಯುವಕನೂ ಒಬ್ಬರಿಗೊಬ್ಬರು ಒಲಿದಿದ್ದಾರೆ. ಆದರೆ ಈಜ್ಯೂಸನಿಗೆ ಈ ಜೋಡಿ ಸರಿಬೀಳದು. ಅವನು ಮಗಳನ್ನು ಡಿಮೀಟ್ರಿಯಸ್ ಎಂಬ ಇನ್ನೊಬ್ಬ ತರುಣನಿಗೆ ಕೊಟ್ಟು ಮದುವೆ ಮಾಡಬೇಕೆಂದಿದ್ದಾನೆ. ಡಿಮೀಟ್ರಿಯಸನೂ ಆ ಕಪ್ಪುಗೂದಲ, ಪುಟ್ಟಮಾಟದ ಚೆಲುವೆಗೆ ಮಾರುಹೋಗಿದ್ದಾನೆ. ಮಗಳ ಮದುವೆ ತಂದೆಯ ಇಚ್ಛೆಯಂತಾಗಬೇಕೆಂದು ಈಜ್ಯೂಸನ ವಾದ. ಅದಕ್ಕೆ ದೇಶದ ಕಾಯಿದೆಯ ಬೆಂಬಲವೂ ಇದೆ. ಅದನ್ನು ಮುರಿಯ ಹೊರಟ ಹುಡುಗಿಯರು ಮರಣಪರ್ಯಂತ ಒಂಟಿಯಾಗಿ ಬಾಳು ಕಳೆಯಬೇಕು, ಇಲ್ಲವೇ ಸಾವಪ್ಪ

ಬೇಕು. ಆದರೆ ಹರ್ಮಿಯಾ ಮೊಂಡಿ. ಕಾಯಿದೆ ಹೇಗೇ ಹೇಳಲಿ, ಅಪ್ಪ ಏನೇ ಹರಟಲಿ ಅವಳಿಗೆ ಲೈಸ್ಯಾಂಡರನೇ ಬೇಕು. ದೊರೆ ನಾಲ್ಕು ದಿನದ ಗಡು ಕೊಟ್ಟು ತನ್ನ ಮದುವೆ ನಡೆಯಲಿರುವ ಪೂರ್ಣಿಮೆಯ ರಾತ್ರಿಯೊಳಗೆ ನಿರ್ಧಾರ ತಿಳಿಸುವಂತೆ ಆಜ್ಞೆ ಮಾಡುತ್ತಾನೆ. ಈ ಕುತ್ತದಿಂದ ಪಾರಾಗಲು ಅಥೆನ್ಸ್ ಬಿಟ್ಟು ಓಡಿಹೋಗುವುದೊಂದೇ ದಾರಿಯೆಂದು ಲೈಸ್ಯಾಂಡರ್-ಹರ್ಮಿಯಾ ನಿಶ್ಚಯಿಸುತ್ತಾರೆ. ಅದಕ್ಕಾಗಿ ಮರು ದಿನ ರಾತ್ರಿ ಊರಾಚೆಯ ಬನದಲ್ಲಿ ಗುಟ್ಟಾಗಿ ಸೇರುವುದೆಂದು ಗೊತ್ತುಮಾಡುತ್ತಾರೆ.

ಲೈಸ್ಯಾಂಡರ್ – ಹರ್ಮಿಯಾ – ಡಿಮೀಟ್ರಿಯಸ್ — ಇವರ ಒಲವಿನ ಎಳೆದಾಟದ ಮುಮ್ಮೂಲೆಯನ್ನು ಹಿಗ್ಗಿಸಿ ಚಚ್ಚೌಕವನ್ನಾಗಿ ಮಾಡುವವಳು ಹೆಲಿನಾ. ಅವಳೂ ಚೆಲುವೆಯೇ: ಕೆಂಗೂದಲ ಕನ್ನೆ, ತೆಳ್ಳಗೆ ಎತ್ತರಕ್ಕಿದ್ದಾಳೆ. ಹಿಂದೊಮ್ಮೆ ಅವಳೂ ಡಿಮೀಟ್ರಿಯಸನೂ ಪರಸ್ಪರ ಪ್ರೇಮಿಸುತ್ತಿದ್ದರು. ಆದರೆ ಡಿಮೀಟ್ರಿಯಸನ ಆಸಕ್ತಿ ಹರ್ಮಿಯಾಳ ಕಡೆ ಹರಿದಾಗಿನಿಂದ ಹೆಲಿನಾ ಅವನಿಗೆ ಬೇಡವಾಗಿದ್ದಾಳೆ. ಆ ಹತಾಶಳ ಅಸೂಯೆ ಕುದಿಯುತ್ತಿದೆ. ಲೈಸ್ಯಾಂಡರನೊಡನೆ ತಾನು ಊರು ಬಿಟ್ಟು ಹೋಗಲಿರುವ ಗುಟ್ಟನ್ನು ಹರ್ಮಿಯಾ ಹೆಲಿನಾಳಿಗೆ ತಿಳಿಸುತ್ತಾಳೆ — ಇದ್ದ ಅಡ್ಡಿ ಕಳೆಯಿತು, ಇನ್ನು ಡಿಮೀಟ್ರಿಯಸ್ ತನ್ನವನಾಗುವನೆಂದು ಅವಳ ನೊಂದೆದೆಗೆ ಸಂತವಣೆ ಸಿಗಲೆಂದು. ಆದರೆ ಹೆಲಿನಾ ಅದನ್ನು ಡಿಮೀಟ್ರಿಯಸನಿಗೆ ಬಯಲುಮಾಡುತ್ತಾಳೆ. ಅವನು ಹರ್ಮಿಯಾಳ ಬೆನ್ನು ಹತ್ತಿ ಹೋಗುವನೆಂದು ಅವಳು ಬಲ್ಲಳು. ಆಗ ತಾನೂ ಅವನ ಹಿಂದೆ ಹಿಂದೆ ಅಲೆದು, ನೋವನ್ನು ಇಮ್ಮಡಿಸಿಕೊಂಡು ಅದು ಕೊಡುವ ವಕ್ರಸುಖ ಸವಿಯುವುದು ಅವಳ ಉದ್ದೇಶ!

ದೊರೆ ಥೀಸ್ಯೂಸನ ಮದುವೆಯ ಸುದ್ದಿ ಕೇಳಿ ಅಥೆನ್ಸಿನ ಜನಕ್ಕೆ ಹೇಳತೀರದ ಉತ್ಸಾಹ, ಸಂಭ್ರಮ. ಬಡಗಿ, ದರ್ಜಿ ಮುಂತಾದ ಕೈಗೆಲಸದ ಹುಂಬರು ಕೆಲವರು ರಾಜದಂಪತಿಗಳ ಮನೋರಂಜನೆಗಾಗಿ ಒಂದು ನಾಟಕ ಸಿದ್ಧ ಮಾಡುತ್ತಿದ್ದಾರೆ. 'ಅತ್ಯಂತ ಶೋಕಪ್ರದ ಹರ್ಷಕ' ಅದು, ಪಿರಮಸ್-ಥಿಸ್ಬೆಯರ ಕ್ರೂರ ಮರಣವನ್ನು ಕುರಿತದ್ದು! ಪಾಪ ಆ ಜನ ಇದುವರೆಗೆ ಬುದ್ಧಿ ಬಳಲಿಸಿದವರೇ ಅಲ್ಲ; ಈಗ ಈ ನಾಟಕ ತಲೆತಿನ್ನುತ್ತಿದೆ! ಅವರಲ್ಲಿ ತುಂಬ ಹುರುಪಿನವನೆಂದರೆ ಬಾಟಮ್. ಎಲ್ಲ ಪಾತ್ರಗಳನ್ನೂ ತಾನೊಬ್ಬನೇ ನಿರ್ವಹಿಸಲು ಸಿದ್ಧ. ಅವನನ್ನು ಹಿಡಿದಿಡುವುದು ಮಹಾಪ್ರಯಾಸ. ಲೈಸ್ಯಾಂಡರ್-ಹರ್ಮಿಯಾ ಸೇರಲಿದ್ದ ಬನದಲ್ಲೇ ಅವರೂ ನಾಟಕದ ಅಭ್ಯಾಸಕ್ಕೆ ಸೇರಿದ್ದಾರೆ.

ಅದೇ ಬನದಲ್ಲಿ ಥೀಸ್ಯೂಸ್ – ಹಿಪಾಲಿಟರನ್ನು ಅವರ ವಿವಾಹದ ಸುಮುಹೂರ್ತದಂದು ಹರಸಲು ಒಂದು ಯಕ್ಷಗಣವೂ ಬಂದಿಳಿದಿದೆ. ಓಬೆರಾನ್ ಅವರ ರಾಜ; ರಾಣಿ, ಟೈಟೇನಿಯ. ಈ ಯಕ್ಷರಾಜರಾಣಿಯರ ನಡುವೆ ಒಂದು ಸಾಕುಮಗುವಿನ ಬಗ್ಗೆ ತಿಸರ ವೆದ್ದಿದೆ. ಆ ಮಗು ತನಗೆ ಬೇಕೆಂದು ಅವನು; ಕೊಡೆನೆಂದು ಇವಳು. ಟೈಟೇನಿಯ ಓಬೆರಾನನಿಗೇ ಎದುರುಬಿದ್ದಿದ್ದಾಳೆ. ಅವಳಿಗೆ ಬುದ್ಧಿ ಕಲಿಸುವ ದಾರಿ ನೋಡುತ್ತಿದ್ದಾನೆ ಅವನು.

ಓಬೆರಾನನಿಗೆ ಒಬ್ಬ ಬಂಟ. ಹೆಸರು ರಾಬಿನ್, ಮುದ್ದಿಗೆ ಕರೆಯುವುದು ಪಕ್. ಯಕ್ಷ-ಮಾನುಷರ ನಡುವಿನ ಸೇತುವೆ ಇವನು. ತುಂಬ ತುಂಟ. ತನ್ನ ದಣಿಯನ್ನು ನಗಿಸಿ ಗೆಲುವಾಗಿರಿಸಲು ಯಾವ ಚೇಷ್ಟೆಗಾದರೂ ಸಿದ್ಧ. ಓಬೆರಾನ್ ಪಕ್‌ನಿಗೆ ಒಂದು ಮಂತ್ರಪುಷ್ಪದ ಗುರುತು ಹೇಳಿ ಅದನ್ನು ಹುಡುಕಿ ತರಲು ಕಳಿಸುತ್ತಾನೆ. ಮಲಗಿದವರ

ಕಣ್ಣಿಗೆ ಅವರ ರಸ ಹಿಂಡಿದರೆ ಅವರು ಎಚ್ಚರಗೊಂಡಾಗ ಯಾರು ಮೊದಲು ಕಣ್ಣಿಗೆ ಬೀಳುವರೋ ಅವರಲ್ಲಿ ಮೋಹಿತರಾಗುತ್ತಾರೆ— ಇದು ಆ ಪುಷ್ಪದ ವೈಶಿಷ್ಟ್ಯ! ಟೈಟೇನಿಯಳ ಮೇಲೆ ಅದನ್ನು ಪ್ರಯೋಗಿಸಿ ಅವಳು ಆ ಬನದ ಮೃಗವೊಂದಕ್ಕೆ ಒಲಿಯುವಂತೆ ಮಾಡಿ, ಆ ಮೂಲಕ ಅವಳಿಗೆ ಬುದ್ಧಿ ಕಲಿಸುವುದೆಂದು ಓಬೆರಾನನ ತಂತ್ರ. ಪಕ್ ಹೂ ತರಲು ಹೋದಾಗ ಹರ್ಮಿಯಾಳನ್ನು ಅರಸಿ ಬಂದ ಡಿಮೀಟ್ರಿಯಸ್, ಅವನನ್ನು ಹಿಂಬಾಲಿಸಿದ ಹೆಲಿನಾರು ಓಬೆರಾನನ ಕಣ್ಣಿಗೆ ಬೀಳುತ್ತಾರೆ. ತನ್ನನ್ನು ಬೆನ್ನಟ್ಟಿ ಕಾಡಬೇಡವೆಂದು ಡಿಮೀಟ್ರಿಯಸ್ ಹೆಲಿನಾಳನ್ನು ಅಟ್ಟಿಕೊಂಡು, ಅವಳ ಕಣ್ಣು ತಪ್ಪಿಸಿ ಮರೆಯಾಗುತ್ತಾನೆ. ಅವಳ ದುಸ್ಥಿತಿಯನ್ನು ಕಂಡು ಓಬೆರಾನನಿಗೆ ಮರುಕವಾಗುತ್ತದೆ. ಒಲ್ಲದ ನಲ್ಲನೊಡನೆ ಅವಳನ್ನು ಒಂದುಗೂಡಿಸುವುದೆಂದುಕೊಂಡು ಪಕ್ ಹೂವಿನೊಡನೆ ಹಿಂದಿರುಗಿದಾಗ ಅವನಿಗೆ ಡಿಮೀಟ್ರಿಯಸ್ ತೊಟ್ಟ ಅಥೆನ್ಸಿನ ಪೋಷಾಕಿನ ಗುರುತು ಹೇಳಿ, ಅವನ ಕಣ್ಣಿಗೆ ಪುಷ್ಪರಸದ ಮಂತ್ರಾಂಜನ ಹಾಕಿ ಬರುವಂತೆ ಆದೇಶಿಸುತ್ತಾನೆ. ಆದರೆ ಹುಡುಕಿ ಹೊರಟಾಗ ಪಕ್‌ನ ಕಣ್ಣಿಗೆ ಬೀಳುವವರು ಮೊದಲೇ ಆ ಬನಕ್ಕೆ ಬಂದು ದಾರಿ ತಪ್ಪಿ, ಬಳಲಿ ನಿದ್ದೆಹೋಗುತ್ತಿರುವ ಲೈಸ್ಯಾಂಡರ್, ಹರ್ಮಿಯಾ. ಲೈಸ್ಯಾಂಡರ್ ಸಹ ಅಥೆನ್ಸಿನ ಪೋಷಾಕನ್ನೇ ತೊಟ್ಟವ. ಸರಿ, ದಣಿ ಹೇಳಿದವನು ಇವನೆಯೇ ಎಂದು ಪಕ್ ಅವನ ಕಣ್ಣಿಗೇ ಮಂತ್ರಾಂಜನವಿಟ್ಟ; ಗೊಂದಲ ಶುರುವಾಯಿತು! ಲೈಸ್ಯಾಂಡರ್ ಕಣ್ತೆರೆವ ಹೊತ್ತಿಗೆ ಸರಿಯಾಗಿ ಡಿಮೀಟ್ರಿಯಸನನ್ನು ಹಿಂಬಾಲಿಸಿ ಹೊರಟ ಹೆಲಿನಾ ಎದುರಿಗಿದ್ದಾಳೆ. ಈಗ ಲೈಸ್ಯಾಂಡರ್ ಮಂತ್ರಬದ್ಧ. ಅವಳಲ್ಲಿ ಉತ್ಕಟ ಮೋಹವುಕ್ಕುತ್ತದೆ. ಅವಳ ಹಿಂದೆ ಹಿಂದೆ ಹೋಗುತ್ತಾನೆ. ಅವನು ಕುಚೋದ್ಯ ಮಾಡುತ್ತಿರುವನೆಂದು ಹೆಲಿನಾ ಬಗೆಯುತ್ತಾಳೆ. ಸ್ವಲ್ಪ ಹೊತ್ತಿನ ಮೇಲೆ ಹರ್ಮಿಯಾ ಎದ್ದು ಲೈಸ್ಯಾಂಡರ್ ಹತ್ತಿರವಿಲ್ಲದಿರುವುದನ್ನು ನೋಡಿ, ಅವನನ್ನು ಅರಸಿ ಹೊರಡುತ್ತಾಳೆ. ಈಗ ಹರ್ಮಿಯಾಳ ಬೆನ್ನ ಹಿಂದೆ ಡಿಮೀಟ್ರಿಯಸ್: ಡಿಮೀಟ್ರಿಯಸನ ಹಿಂದೆ ಹೆಲಿನಾ; ಹೆಲಿನಾಳ ಹಿಂದೆ ಲೈಸ್ಯಾಂಡರ್; ಲೈಸ್ಯಾಂಡರನ ಹಿಂದೆ ಹರ್ಮಿಯಾ— ಮರುಳರ ಇರುವೆಸಾಲು!

ಇತ್ತ ಓಬೆರಾನ್ ತಾನು ಯೋಜಿಸಿದ್ದಂತೆ ಪಕ್ ತಂದ ಪುಷ್ಪವನ್ನು ಮಲಗಿ ನಿದ್ರಿಸುತ್ತಿರುವ ಟೈಟೇನಿಯಳ ಕಣ್ಣಿಗೆ ಹಿಂಡಿ, 'ಎದ್ದು ಕಣ್ತೆರೆದಾಗ ನಿನ್ನ ಮುಂದೊಂದು ಹೀನ ಪಶುವಿದ್ದು ನೀನು ಅದನ್ನು ಮೋಹಿಸುವಂತಾಗಲಿ' ಎಂದು ಶಾಪ ಹಾಕುತ್ತಾನೆ.

ಪಕ್ ಬನದಲ್ಲಿ ಕುಣಿದಲೆಯುತ್ತ ಬಂದಾಗ ಹುಂಬರ ಗುಂಪು ನಾಟಕದ ಅಭ್ಯಾಸದಲ್ಲಿ ತಲ್ಲೀನವಾಗಿರುವುದು ಕಾಣಿಸುತ್ತದೆ. ಪಕ್‌ನ ಚೇಷ್ಟೆಗೆ ಹೇಳಿ ಮಾಡಿಸಿದಂತಹ ಅವಕಾಶ! ಪಿರಮಸ್ ಪಾತ್ರದ ಬಾಟಮ್ ಇನ್ನೇನು ರಂಗಪ್ರವೇಶ ಮಾಡಬೇಕು, ಪಕ್ ಅವನ ತಲೆಗೆ ಒಂದು ಕತ್ತೆಯ ತಲೆ ತೊಡಿಸಿ ಮಂತ್ರ ಹಾಕುತ್ತಾನೆ. ಈಗ ಬಾಟಮ್ ಅರೆ ಕತ್ತೆ, ಅರೆ ಮನುಷ್ಯ! ಆ ವಿಚಿತ್ರಮೃಗವನ್ನು ನೋಡಿ ಹೆದರಿದ ಅವನ ಜತೆಗಾರರು ಆ ಸ್ಥಳಕ್ಕೆ ದೆವ್ವ ಬಡಿದಿದೆಯೆನ್ನುತ್ತಾ ಕಾಲಿಗೆ ಬುದ್ಧಿ ಹೇಳುತ್ತಾರೆ. ಬಾಟಮ್ ಏನೂ ಆಗದವನಂತೆ ಜೋರಾಗಿ 'ಹಾಡುತ್ತ' ಓಡಾಡುತ್ತಾನೆ. ಆ ಗಾರ್ದಭಸ್ವರ ಟೈಟೇನಿಯಳನ್ನು ಎಚ್ಚರಿಸುತ್ತದೆ. ಆ ಮಂತ್ರಗ್ರಸ್ತೆ ಅವನ ಧ್ವನಿರೂಪಗಳಿಗೆ ಮಾರು ಹೋಗುತ್ತಾಳೆ.

ಪಕ್ ದಣಿಯ ತಂತ್ರ ಫಲಿಸಿದ ಸುದ್ದಿಯನ್ನು ಅವನಿಗೆ ತಿಳಿಸಿ ಸಂತೋಷಗೊಳಿಸು

ತ್ತಿದ್ದಾನೆ. ಆ ಸಮಯಕ್ಕೆ ಅವರ ಮುಂದೆ ಹರ್ಮಿಯಾ ಡಿಮೀಟ್ರಿಯಸರು ಕಾಣಿಸಿಕೊಳ್ಳುತ್ತಾರೆ. ತನ್ನ ಒಲವಿನ ಕರೆಗೆ ಓಗೊಡೆಂದು ಡಿಮೀಟ್ರಿಯಸ್ ಹರ್ಮಿಯಾಳಿಗೆ ಗೋಗರೆದಿದ್ದಾನೆ. ಲೈಸ್ಯಾಂಡರ್ ಇನ್ನೂ ಕಾಣಸಿಗದ ಕಾರಣ ತನ್ನನ್ನು ಗೆಲ್ಲುವ ಆಸೆಗೆ ಡಿಮೀಟ್ರಿಯಸನೇ ಅವನನ್ನು ಕೊಂದಿರಬೇಕೆಂದು ಅವಳು ಆಪಾದಿಸಿ, ಅವನಿಂದ ಓಡಿ ಹೋಗುತ್ತಾಳೆ. ಡಿಮೀಟ್ರಿಯಸ್ ಆಲಿತದ ಬಳಲಿಕೆ ತಾಳಲಾರದೆ ನಿದ್ದೆ ಹೋಗುತ್ತಾನೆ.

ಒಬ್ಬನ ಬದಲು ಇನ್ನೊಬ್ಬನ ಕಣ್ಣಿಗೆ ಅಂಜನ ಹಚ್ಚಿದ ಪಕ್‌ನ ಕೈತಪ್ಪು ಆಗ ಬೆಳಕಿಗೆ ಬರುತ್ತದೆ. ಅದನ್ನು ಸರಿಪಡಿಸುವುದು ಓಬೆರಾನನ ಕರ್ತವ್ಯ. ಹೆಲಿನಾಳನ್ನು ಕರೆತರಲು ಪಕ್‌ನನ್ನು ಅಟ್ಟಿ, ಈ ಸಲ ಅದೇ ತಪ್ಪಾಗದಿರಲೆಂದು ಡಿಮೀಟ್ರಿಯಸನ ಕಣ್ಣಿಗೆ ತಾನೇ ಪುಷ್ಪರಸ ಹಿಂಡಿ ಕಾಯುತ್ತಾನೆ. ಡಿಮೀಟ್ರಿಯಸ್ ಕಣ್ಣು ಬಿಡುವ ಹೊತ್ತಿಗೆ ಹೆಲಿನಾ ಅಲ್ಲಿ ಹಾಜರಾಗುತ್ತಾಳೆ. ಅವಳನ್ನು ತೊರೆದಿದ್ದ ನಲ್ಲ ಮತ್ತೆ ಅವಳಿಗೆ ಒಲಿಯುತ್ತಾನೆ. ಆದರೆ ಅವಳ ಬೆನ್ನ ಹಿಂದೆಯೇ ಲೈಸ್ಯಾಂಡರ್. ಪಕ್‌ನ ತಪ್ಪಿನಿಂದಾಗಿ ಅವನೂ ಅವಳಿಗೊಲಿದವನೇ ಅಲ್ಲವೆ! ಇಬ್ಬರು ನಲ್ಲರೂ ಅವಳನ್ನು ಒಲಿಸಿಕೊಳ್ಳಲು ನಾಸು ತಾನೆಂದು ಹಾರಾಡುತ್ತಾರೆ — ಹಿಂದೊಮ್ಮೆ ಮರುವಿನಲ್ಲಿ ಹರ್ಮಿಯಾಳಿಗೆ ಮಾಡಿದ್ದಂತೆ! ಯಾರೂ ಒಲಿಯದೆ ಹತಾಶಳಾಗಿದ್ದವಳಿಗೆ ಈಗ ಎರಡೂ ಕಡೆಯಿಂದ ಒಲುಮೆಯ ಸುಗ್ಗಿ. ದಿಗ್ಭ್ರಮೆ. ಇದು ಕುಚೋದ್ಯವೇ ಎಂದು ಅವಳ ಭಾವನೆ. ಈ ಹೊತ್ತಿಗೆ ಲೈಸ್ಯಾಂಡರನನ್ನು ಅರಸಿ ಹರ್ಮಿಯಾಳೂ ಅಲ್ಲೇ ಬರಬೇಕೆ! ತನಗೊಲಿದವರನ್ನು ತನ್ನಿಂದ ಸೆಳೆದುಕೊಂಡಳೆಂದು ಹೆಲಿನಾಳೊಡನೆ ಜಗಳಕ್ಕಿಳಿಯುತ್ತಾಳೆ, ಆ ತಾಟಕಿ. ಇಬ್ಬರ ನಡುವೆ ಒಂದು ಪುಟ್ಟ ಯುದ್ಧವೇ ಆಗುತ್ತದೆ. ಲೈಸ್ಯಾಂಡರ್, ಡಿಮೀಟ್ರಿಯಸ್ ಎಷ್ಟೇ ಪ್ರಯತ್ನಿಸಿದರೂ ಸಂಧಾನವಾಗದು. ಆಗ ಓಬೆರಾನ್ ಮಧ್ಯೆ ಪ್ರವೇಶಿಸಿ ಅವರೆಲ್ಲರಿಗೂ ಮಂಕು ಕವಿಸಿ ಮಲಗಿಸುತ್ತಾನೆ. ಲೈಸ್ಯಾಂಡರನನ್ನು ಮಂತ್ರದ ಕಟ್ಟಿನಿಂದ ಬಿಡುಗಡೆ ಮಾಡುತ್ತಾನೆ. ಮತ್ತೆ ಎದ್ದಾಗ ಆ ನಾಲ್ವರ ನಡುವೆ ಎಲ್ಲವೂ ನೇರ: ಡಿಮೀಟ್ರಿಯಸ್ ಹೆಲಿನಾಳಿಗೆ, ಹರ್ಮಿಯಾ ಲೈಸ್ಯಾಂಡರನಿಗೆ.

ಇತ್ತ ಅಪ್ಸರಸಿ ಟೈಟೇನಿಯ ಕತ್ತೆ-ತಲೆಯ ಬಾಟಮನ ತೋಳ್ತೆಕ್ಕೆಯಲ್ಲಿ ಮಲಗಿ ಸ್ವರ್ಗಸುಖ ಕಾಣುತ್ತಿದ್ದಾಳೆ. ಹೀಗೆ ಮರುಳು ಮುಸುಕಿದವಳನ್ನು ನಿದ್ದೆಯಿಂದ ಎಬ್ಬಿಸಿ ಅವಳು ಕೊಡಲು ನಿರಾಕರಿಸಿದ್ದ ಮಗುವನ್ನು ಓಬೆರಾನ್ ವಶಪಡಿಸಿಕೊಳ್ಳುತ್ತಾನೆ. ಅವಳ ಗರ್ವ ಮುರಿದಷ್ಟಾಯಿತು. ಈಗ ಓಬೆರಾನನಿಗೆ ಅವಳಲ್ಲಿ ಕನಿಕರ ಹುಟ್ಟುತ್ತದೆ. ಅವಳಿಗೂ ಭ್ರಮನಿರಸನ ಮಾಡುತ್ತಾನೆ. ಅಂತೆಯೇ ಬಾಟಮ್ ಎಚ್ಚೆತ್ತಾಗ ಕತ್ತೆ-ತಲೆ ಹೋಗಿ ಅವನದೇ ತಲೆ ಬಂದಿರುತ್ತದೆ. ಆ ಹುಂಬ ಅದೆಲ್ಲವೂ 'ಕಣ್ಣು ಕೇಳದ, ಕಿವಿ ಕಾಣದ' ಅದ್ಭುತ ಸ್ವಪ್ನವೆಂದುಕೊಂಡು ಗೆಳೆಯರಿಗೆ ಅದರ ವರದಿ ಮಾಡುತ್ತಾನೆ.

ಥೀಸ್ಯೂಸನ ಲಗ್ನಮುಹೂರ್ತದಲ್ಲೇ ಲೈಸ್ಯಾಂಡರ್ ಹರ್ಮಿಯಾ, ಡಿಮೀಟ್ರಿಯಸ್ ಹೆಲಿನಾರ ಮದುವೆಯೂ ನಡೆಯುತ್ತವೆ. ಹುಂಬರು ಪಿರಮಸ್-ಥಿಸ್ಬೆಯ 'ಅತ್ಯಂತ ಶೋಕಪ್ರದ ವಿನೋದ'ವನ್ನು ಆಡಿ ತೋರಿಸುತ್ತಾರೆ (ಪುಟ 200). ನಲ್ಲನಲ್ಲೆಯರು ಮಲಗಲು ಹೊರಟ ಮೇಲೆ ಓಬೆರಾನ್-ಟೈಟೇನಿಯರು ತಮ್ಮ ಯಕ್ಷಗಣವೊಂದಿಗೆ ಅಲ್ಲಿಗೆ ಬಂದು ದಂಪತಿಗಳೆಲ್ಲರನ್ನೂ ಹಾಡಿ ಹರಸುತ್ತಾರೆ (ಪುಟ 202). ಪಕ್ ಮಂಗಳ ಹೇಳುತ್ತಾನೆ.

## 8. ದಿ ಮರ್ಚೆಂಟ್ ಆಫ್ ವೆನಿಸ್

**ರಚನೆ**: 1596-7. **ಮೊದಲ ಪ್ರಕಟನೆ**: 1600.

**ಆಕರಗಳು**: ಸಾಲಪತ್ರದ ಪ್ರಸಂಗಕ್ಕೆ ಜಿಯೊನ್ನಿ ಫಿಯೊರೆಂತೀನೊನ ಇಟಾಲಿಯನ್ ಕೃತಿ 'ಇಲ್ ಪೆಕೊರನೆ'; ಕರಂಡಗಳದ್ದಕ್ಕೆ ರಿಚರ್ಡ್ ರಾಬಿನ್‌ಸನ್ ಇಂಗ್ಲಿಷಿನಲ್ಲಿ ಪ್ರಸರ್ ರಚಿಸಿದ 'ಜೆಸ್ಟಾ ರೋಮಾನೊರುಮ್' ಎಂಬ ನೀತಿಗ್ರಂಥದ 66ನೆ ಕಥೆ. ಷೈಲಾಕನ ಮಗಳ ಪಾತ್ರಕ್ಕೆ ಮಾರ್ಲೊನ 'ದಿ ಜ್ಯೂ ಆಫ್ ಮಾಲ್ಟ' ಸ್ಫೂರ್ತಿ ಕೊಟ್ಟಿರಬಹುದು.

**ಕಥೆ**: ಒಂದು ಕಡೆ ಜೀವವನ್ನು ಒತ್ತೆಯಿಡಲೂ ಹಿಂಜರಿಯದ ಆದರ್ಶ ಗೆಳೆತನ. ಇನ್ನೊಂದು ಕಡೆ ಜೀವಕ್ಕೆ ಕಂಟಕವಾಗಲೂ ಹೇಸದ ದುಷ್ಟ ಹಗೆತನ – ಇವುಗಳ ಇದಿರ್ಮುಗದ ಚಿತ್ರಣವೇ ಈ ಜನಪ್ರಿಯ, ರಮ್ಯ ಹರ್ಷನಾಟಕದ ಗುರಿ. ಹಲವು ಅವಾಸ್ತವಾಂಶ ಗಳಿದ್ದರೂ ನಾಟಕವ ಅಚ್ಚುಕಟ್ಟಾದ ಕಟ್ಟಡ. ಸೊಗಸಾದ ಕವಿತೆ, ಷೈಲಾಕ್, ಪೋರ್ಶಿಯಾ ರಂತಹ ಕಡೆದು ಕಂಡರಿಸಿದ ಪಾತ್ರಗಳು ಅವನ್ನು ಮರಸುತ್ತವೆ.

ಆಂಟೋನಿಯೊ ವೆನಿಸ್ ನಗರದ ಗಣ್ಯ ವ್ಯಾಪಾರಿ. ಆತ ಧನಿಕ. ಅವನ ಸ್ಥಿತಿಗತಿಗಳು ಶ್ರೀಮಂತವಿರುವಂತೆ ಹೃದಯವೂ ಶ್ರೀಮಂತವೇ. ಬೇಡಿ ಬಂದವರಿಗೆ ಎಂದೂ ಇಲ್ಲವೆಂದವ ನಲ್ಲ. ಅವನಿಗೆ ಬಸಾನಿಯೊ ಎಂಬ ಒಬ್ಬ ಗೆಳೆಯ. ಅವನು ತರುಣ, ಸುಂದರ, ಬಲು 'ಜೈನಿ'ಯ ಆಸಾಮಿ. ಎಷ್ಟಿದ್ದರೂ ಕಳೆದು ಮತ್ತೆ ಇಲ್ಲವೆಂದು ಗೋಳಾಡುವ ಜಾತಿ! ಆಂಟೋನಿಯೊನಿಂದ ಹಿಂದೆ ಹಲವಾರು ಸಲ ಸಾಲ, ಸಹಾಯ ಪಡೆದಿದ್ದಾನೆ.

ದೂರದ ಬೆಲ್ಮಾಂಟ್ ನಗರದಲ್ಲಿ ಪೋರ್ಶಿಯಾ ಎಂಬೊಬ್ಬಳು ಸುಂದರ ಕನ್ಯೆ ಯಿದ್ದಾಳೆ. ಸಾಯುವ ಮುನ್ನ ತಂದೆ ಅವಳಿಗೆ ತುಂಬ ಆಸ್ತಿಪಾಸ್ತಿಯನ್ನು ಬಿಟ್ಟಿದ್ದಾನೆ. ಜೊತೆಗೆ ಉಯಿಲಿನಲ್ಲಿ ಮಗಳ ಮದುವೆಗೆ ಒಂದು ವಿಚಿತ್ರ ಕ್ರಮ ಸೂಚಿಸಿ ಹೋಗಿದ್ದಾನೆ. ಚಿನ್ನ, ಬೆಳ್ಳಿ, ಸೀಸಗಳಿಂದ ಮಾಡಿದ ಮೂರು ಕರಂಡಗಳನ್ನು ಮಾಡಿಸಿ, ಒಂದರಲ್ಲಿ ಅವಳ ಚಿತ್ರವಿಟ್ಟು, ವರಿಸಲು ಬಂದವರಲ್ಲಿ ಯಾವನು ಆ ಕರಂಡವನ್ನು ಆರಿಸುತ್ತಾನೋ ಅವನಿಗೆ ಅವಳ ಕೈಹಿಡಿಯುವ ಹಕ್ಕೆಂದು ಸಾರಿದ್ದಾನೆ! ಬಸಾನಿಯೊಗೆ ಇಂಥ ಸಾಹಸ ಗಳೆಂದರೆ ಪ್ರೀತಿ. ತಾನೂ ಏಕೆ ಒಂದು ಕೈ ನೋಡಿ ಬರಬಾರದೆಂಬ ಚಪಲವಾಗುತ್ತದೆ. ಗೆದ್ದರೆ ಹೆಣ್ಣು, ಹಣ ಎರಡೂ ಸಿಗುತ್ತವೆ. ಆದರೆ ಬೆಲ್ಮಾಂಟಿಗೆ ಹೋಗಿ ಬರಲು ಮೂರು ಸಾವಿರ ಡಕೆಟ್‌ಗಳಷ್ಟು ಖರ್ಚಿದೆ. ಅದು ಅಪಾರ ಹಣ. ಎಲ್ಲಿಂದ ತರುವುದು? ಸರಿ, ಆಂಟೋನಿಯೊನ ಬಳಿಗೇ ಬಂದು ಸಾಲಕ್ಕೆ ಕೈಯೊಡ್ಡುತ್ತಾನೆ. ಆಂಟೋನಿಯೊನಲ್ಲಿ ಈಗ ಅಷ್ಟು ಹಣವಿಲ್ಲ. ತನ್ನೆಲ್ಲವನ್ನೂ ವ್ಯಾಪಾರದ ಮೇಲೆ ತೊಡಗಿಸಿ, ಸರಕು ಕೊಂಡು ತರಲು ವಿದೇಶಕ್ಕೆ ಹೋಗಿರುವ ತನ್ನ ಹಡಗುಗಳ ವಾಪಸಾತಿಗೆ ಕಾದು ಕುಳಿತಿದ್ದಾನೆ. ಹಣ ಬೇಕಾದರೆ ಸಾಲವೊಂದೇ ಮಾರ್ಗ. ಆದರೆ ಬಡಿ ಕೊಟ್ಟು ಸಾಲ ತರುವುದು ಅವನ ತತ್ವಕ್ಕೆ ವಿರೋಧ. ತಾನು ಸಾಲ ಕೊಡುವಾಗಲೂ ಬಡ್ಡಿ ಬೇಡುವವನಲ್ಲ. ಆದರೆ ಮಿತ್ರನ ದರದಿನ ಮುಂದೆ ತತ್ತ್ವವೆ? ಅದೇ ಊರಿನ ಷೈಲಾಕ್ ಎಂಬ ಸಾಹುಕಾರನಲ್ಲಿಗೆ ಹೋಗಿ ಮೂರು ತಿಂಗಳ ವಾಯಿದೆಯ ಮೇಲೆ ಹಣವನ್ನು ಕೈಗಡವಾಗಿ ಕೇಳುತ್ತಾನೆ. ಷೈಲಾಕ್ ಯೆಹೂದಿ. ಯೆಹೂದಿಗಳನ್ನು ಹೀನವಾಗಿ ಕಾಣುವ ಕ್ರೈಸ್ತರೆಂದರೆ ಅವನಿಗೆ ಉರಿ. ಜೊತೆಗೆ ಹಿಂದೆ ಕೆಲವು ಸಂದರ್ಭಗಳಲ್ಲಿ ಆಂಟೋನಿಯೊ ಅವನನ್ನು ಅವಮಾನ,

ನಷ್ಟಗಳಿಗೆ ಗುರಿಪಡಿಸಿದ್ದು, ಅದರಿಂದ ಹುಟ್ಟಿದ ವೈಯಕ್ತಿಕ ದ್ವೇಷವೂ ಒಳಗೇ ಕೊರೆದು ಷೈಲಾಕನ ಮನಸ್ಸನ್ನು ಹಾಳುಗೆಡಿಸಿದೆ. ಈಗ ಹಗೆ ತೀರಿಸಿಕೊಳ್ಳಲು ಆ ಕೃಪಣನಿಗೆ ಸದವಕಾಶ. ಹಣ ಕೊಡಲು ಸಂತೋಷದಿಂದ ಒಪ್ಪುತ್ತಾನೆ, ಅದೂ ಬಡ್ಡಿಯೇ ಇಲ್ಲದೆ! ಆದರೆ ಒಂದು ಸಣ್ಣ ಷರತ್ತು : ಮಾಯಿದೆ ಮುಗಿವುದರೊಳಗೆ ಹಣ ವಾಪಸು ಬರದಿದ್ದರೆ ಆಂಟೋನಿಯೊ ತನ್ನ ದೇಹದಲ್ಲಿನ ಷೈಲಾಕ್ ಬೇಡಿದ ಭಾಗದಿಂದ ಒಂದು ಪೌಂಡು ತೂಕ ಮಾಂಸ ಕತ್ತರಿಸಿ ಕೊಡಬೇಕು. ಷೈಲಾಕ್ ಈ ಅಮಾನುಷ ಷರತ್ತನ್ನೂ ವಿನೋದಕ್ಕಾಗಿಯೆಂಬಂತೆ ಮುಂದಿಡುತ್ತಾನೆ. ಆಂಟೋನಿಯೊಗೆ ಅಂಥ ದಂಡ ತೆರುವ ಅಗತ್ಯ ಎಂದೆಂದೂ ಬಾರದೆಂದು ದೃಢ ನಂಬಿಕೆ. ಏಕೆಂದರೆ ತಿಂಗಳೊಪ್ಪತ್ತಿನಲ್ಲಿ ಅವನ ಹಡಗುಗಳು ವಾಪಸಾಗಲಿವೆ. ಷರತ್ತಿಗೆ ಒಪ್ಪಿ ಸಾಲಪತ್ರಕ್ಕೆ ಸಹಿ ಹಾಕುತ್ತಾನೆ.

ಬಸಾನಿಯೊನ ಕೈಗೆ ಹಣ ಬಂತು. ಅವನು ಬೆಲ್ಮಾಂಟಿಗೆ ಹೊರಡುವ ಮುನ್ನ ಒಂದು ಬೀಳ್ಕೊಡುಗೆಯ ಔತಣ ಕೊಡುತ್ತಾನೆ. ಅದಕ್ಕೆ ಷೈಲಾಕನೂ ಒಬ್ಬ ಆಮಂತ್ರಿತ ಅತಿಥಿ.

ಷೈಲಾಕನಿಗೆ ಒಬ್ಬ ಹರೆಯದ ಮಗಳು. ಹೆಸರು ಜೆಸಿಕಾ. ಷೈಲಾಕ್ ತನ್ನ ಒಡವೆ ಕಾಸುಗಳಂತೆಯೇ ಅವಳನ್ನೂ ಜೋಪಾನವಾಗಿ ಕಾಪಾಡಿ, ಕಟ್ಟುನಿಟ್ಟಿನಲ್ಲಿ ಬೆಳಸಿದ್ದಾನೆ. ಆದರೆ ಅವಳ ದಾರಿ ಬೇರೆ. ಆ ಯೆಹೂದಿ ಹೆಣ್ಣು ಬದುಕಿನ ಬಂಡುಣಿ. ತಂದೆಯ ಮನೆ ಸೆರೆಯೆನ್ನಿಸಿದೆ. ಬಸಾನಿಯೊನ ಮಿತ್ರರಲ್ಲೊಬ್ಬನಾದ ಲೊರೆನ್ಸೊ ಎಂಬ ಕ್ರೈಸ್ತ ತರುಣನನ್ನು ಪ್ರೀತಿಸುತ್ತಿದ್ದಾಳೆ. ಕದ್ದು ಓಡಿಹೋಗಿ ಗುಟ್ಟಾಗಿ ಮದುವೆ ಮಾಡಿಕೊಳ್ಳುವ ಹಂಚಿಕೆ ಅವರದು. ಸಮಯ ಕಾಯುತ್ತಿದ್ದಾರೆ. ಬಸಾನಿಯೊನ ಔತಣ ತಕ್ಕ ಅವಕಾಶ ಒದಗಿಸುತ್ತದೆ. ಷೈಲಾಕ್ ಮಗಳನ್ನು ಮನೆಯ ಕಾವಲಿಗಿಟ್ಟು, ಎಚ್ಚರಿಕೆ ಹೇಳಿ ಊಟಕ್ಕೆ ಹೊರಡುತ್ತಾನೆ. ಅಪ್ಪ ಕಣ್ಮರೆಯಾದೊಡನೆಯೇ ಜೆಸಿಕಾ ಅವನ ಖಜಾನೆಯನ್ನು ದೋಚಿ ಲೊರೆನ್ಸೊನೊಂದಿಗೆ ಕದ್ದು ಓಡಿಹೋಗುತ್ತಾಳೆ. ಅವರು ಹೊರಟದ್ದೂ ಬೆಲ್ಮಾಂಟಿಗೇ; ಈ ಪಲಾಯನಕ್ಕೆ ಆಂಟೋನಿಯೊನ ಸಂಗಡದವರ ಕುಮ್ಮಕ್ಕಿಲ್ಲದೇ ಇಲ್ಲ. ಪಲಾಯನದ ಸುದ್ದಿ ಕೇಳಿದ ಷೈಲಾಕನಿಗೆ ಹುಚ್ಚು ಹಿಡಿಯುವುದೊಂದು ಬಾಕಿ! ಮಗಳು ಮನೆ ಹಾಳು ಮಾಡಿ ಹೋದಳೆಂದು ಅರಚುತ್ತ, ಗೋಳಿಡುತ್ತ ಹಾದಿಬೀದಿ ತುಳಿಯುತ್ತಾನೆ. ಇದು ಆಂಟೋನಿಯೊನ ತಂತ್ರವೇ ಎಂದು ಅವನಿಗೆ ಖಾತರಿ. ಹಳೆಯ ದ್ವೇಷ ಕಿಚ್ಚೆದ್ದು ಉರಿಯುತ್ತದೆ, ಮನಸ್ಸು ಸೇಡಿಗೆ ಹಾತೊರೆಯುತ್ತದೆ. ಮಗಳನ್ನು ಹುಡುಕಿ ತರಲು ಟುಬಲ್ ಎಂಬೊಬ್ಬ ಆಪ್ತನನ್ನು ಕಳಿಸುತ್ತಾನೆ. ಟುಬಲ್ ಊರೂರು ಅಲೆದರೂ ಜೆಸಿಕಾ ಕಾಣ ಸಿಗುವುದಿಲ್ಲ. ಆದರೆ ಎಲ್ಲೆಲ್ಲೂ ಅವಳು ಧಾರಾಳವಾಗಿ ಹಣ ಚೆಲ್ಲುತ್ತಿದ್ದಳೆಂಬುದೊಂದೇ ಗುಲ್ಲು. ಇದನ್ನು ಕೇಳಿ ಷೈಲಾಕನ ಎದೆಯೊಡೆದರೂ ಟುಬಲ್ ತಂದ ಇನ್ನೊಂದು ವಾರ್ತೆ ದುಃಖದ ನಡುವೆ ಸಂತೋಷ ಕೊಡುತ್ತದೆ — ವ್ಯಾಪಾರಕ್ಕೆ ಹೋಗಿದ್ದ ಆಂಟೋನಿಯೊನ ಹಡಗುಗಳು ನೀರುಪಾಲಾಗಿವೆ; ಈಗ ಅವನು ನಿರ್ಗತಿಕ! ಷೈಲಾಕನ ಪ್ರತೀಕಾರಕ್ಕೆ ದಾರಿ ಸಿಕ್ಕಿತು; ಒಂದು ಪೌಂಡು ಮಾಂಸದ ವಿನೋದದ ಷರತ್ತು ಈಗ ಉಪಯೋಗಕ್ಕೆ ಬಂದಂತಾಯಿತು. ಸಾಲಪತ್ರ ಮುಂದೊಡ್ಡಿ ವಿಚಾರಣೆಗೆ ಒತ್ತಾಯ ಮಾಡುತ್ತಾನೆ.

ಇತ್ತ ಬೆಲ್ಮಾಂಟಿನಲ್ಲಿ ಪೋರ್ಶಿಯಾ ವರಪರೀಕ್ಷೆ ನಡಸುತ್ತಿದ್ದಾಳೆ. ದೊಡ್ಡ ದೊಡ್ಡ ರಾಜಕುಮಾರರೇ ಅದೃಷ್ಟ ಸಾಲದೆ ನಿರಾಶರಾಗಿ ಹಿಂದಿರುಗಿದ್ದಾರೆ. ಒಬ್ಬ ಚಿನ್ನದ



**ಗೆಳೆಯ ಟುಬಲ್ ಷೈಲಾಕನಿಗೆ ಹಣ ಕದ್ದು ಓಡಿಹೋದ ಅವನ ಮಗಳ ಸುದ್ದಿ ತಂದಿದ್ದಾನೆ.**
"ನಾ ಕೇಳಿದ್ದು, ಷೈಲಾಕ್, ಜೆಸಿಕಾ ಜಿನೋವದಲ್ಲಿ ಒಂದು ರಾತ್ರಿ ನಾಲ್ಕಿಪ್ಪತ್ತು ಡಕೆಟ್‌ಗಳನ್ನು ದುಂದುವೆಚ್ಚ ಮಾಡಿದಳಂತೆ..." — ಟುಬಲ್.

ಕರಂಡದ ಮೇಲಿನ ಮರುಳುಮಾತಿಗೆ ಮೋಸಬಿದ್ದು ಅವನ್ನು ಆರಿಸಿದ; ಅದರಲ್ಲಿ ಅವನಿಗೆ ಸಿಕ್ಕಿದುದು ಒಂದು ಮಾನುಷ ರುಂಡ, 'ಹೊಳೆವುದೆಲ್ಲವೂ ಹೊನ್ನಲ್ಲ'ವೆಂಬ ಬುದ್ಧಿವಾದ! ಇನ್ನೊಬ್ಬ ಬೆಳ್ಳಿಯದನ್ನು ಆರಿಸಿ, ಒಳಗಿನ ನಕಲಿಯ ಚಿತ್ರವನ್ನು ಬಹುಮಾನವಾಗಿ ಪಡೆದ! ಆ ಹೊತ್ತಿಗೆ ಬಸಾನಿಯೊ ಅಲ್ಲಿ ಬಂದಿಳಿಯುತ್ತಾನೆ. ಅವನನ್ನು ಕಂಡು ಪೋರ್ಷಿಯಾ ಮಾರುಹೋಗುತ್ತಾಳೆ. ಸರಿಯಾದ ಕರಂಡವನ್ನು ಆರಿಸಿ ಅವನು ತನ್ನ ಕೈಹಿಡಿಯುವಂತಾಗಬಾರದೇ ಎಂದು ಆಶಿಸುತ್ತಾಳೆ. ಅವರ ದೈವ 'ಅಸ್ತು' ಅನ್ನುತ್ತದೆ. ಬಸಾನಿಯೊ ದುರಾಸೆಪಡದೆ ಸೀಸದ ಕರಂಡಕ್ಕೆ ಕೈಹಾಕುತ್ತಾನೆ. ಅದರಲ್ಲೇ ಪೋರ್ಷಿಯಾಳ ಚಿತ್ರವಿದೆ. ಅವಳು ಬಸಾನಿಯೊನ ಬೆರಳಿಗೆ ಉಂಗುರ ತೊಡಿಸಿ, ಎಂದೆಂದೂ ಅದನ್ನು ಕಳೆದುಕೊಳ್ಳಬಾರದೆಂದು ಕೋರಿ ಅವನನ್ನು ಗಂಡನನ್ನಾಗಿ ಒಪ್ಪುತ್ತಾಳೆ. ಇದೇ ಹೊತ್ತಿಗೆ ಲೊರೆನ್ಸೊ-ಜೆಸಿಕಾರು ಅಲ್ಲಿಗೆ ಬರುತ್ತಾರೆ. ಆಂಟೋನಿಯೊ ಅವರನ್ನು ಬಸಾನಿಯೊನ ರಕ್ಷಣೆಗೆ ಕಳಿಸಿಕೊಟ್ಟಿದ್ದಾನೆ. ಜೊತೆಗೆ ಒಂದು ಪತ್ರ, ಅದರಲ್ಲಿ ಅವರೆಲ್ಲರ ಸಂತೋಷವನ್ನು ಮೊಟಕುಗೊಳಿಸುವ ಆಂಟೋನಿಯೊನಿಗೊದಗಿದ ದುರ್ಭಾಗ್ಯದ ಸುದ್ದಿಯಿದೆ.

ತನ್ನ ಆಪ್ತಮಿತ್ರನಿಗೆ ಈ ದುರ್ಗತಿ ಒದಗಲು ತಾನೇ ಕಾರಣನೆಂದು ಬಸಾನಿಯೊಗೆ ಹೇಳತೀರದ ದುಃಖ, ಪಶ್ಚಾತ್ತಾಪ. ಪೋರ್ಷಿಯಾ ಹಿನ್ನೆಲೆಯೆಲ್ಲವನ್ನೂ ಕೇಳಿ ತಿಳಿದುಕೊಳ್ಳುತ್ತಾಳೆ. ಅವಳದು ಕರುಣೆಯೇ ಮೈವೆತ್ತಿ ಆದ ಹೃದಯ. ಚಿಟಿಕೆಯಲ್ಲಿ ಮದುವೆ ಮುಗಿಸಿ, ಸಾಲದ ಇಪ್ಪತ್ತು ಪಟ್ಟು ಕೊಡಬೇಕಾದರೂ ಸರಿಯೇ ಆಂಟೋನಿಯೊನನ್ನು ಉಳಿಸಿ ಬಾರೆಂದು ಬಸಾನಿಯೊನನ್ನು ಹಣದೊಡನೆ ವೆನಿಸಿಗೆ ಕಳಿಸಿಕೊಡುತ್ತಾಳೆ. ಅವನು

ಹೊರಟ ಮೇಲೆ ಆ ಚತುರೆ ಸುಮ್ಮನೆ ಕೂಡದೆ, ಗುಟ್ಟಾಗಿ ವಕೀಲನ ವೇಷ ತೊಟ್ಟು ವೆನಿಸಿಗೆ ಬರುತ್ತಾಳೆ. ಅವಳು ನ್ಯಾಯಾಸ್ಥಾನಕ್ಕೆ ಬರುವ ವೇಳೆಗಾಗಲೇ ವೆನಿಸಿನ ದೊರೆಯ ಮುಂದೆ ವಿಚಾರಣೆ ಮೊದಲಾಗಿದೆ. ಷೈಲಾಕ್ ಹಣ ಬೇಡ, ಆಂಟೋನಿಯೊನ ಎದೆಯ ಭಾಗದಿಂದ ಒಂದು ಪೌಂಡು ಮಾಂಸ ದೊರೆತೇ ತೀರಬೇಕೆಂದು ಮೊಂಡು ಹಿಡಿದು ಕುಳಿತಿದ್ದಾನೆ. ದೊರೆ ಏನು ತೀರ್ಪು ಕೊಡುವುದೆಂದು ತೋಚದೆ ಪೇಚಿಗೆ ಸಿಕ್ಕಿರುವಾಗ ಪೋರ್ಷಿಯಾ ಆ ದಿನ ಅಲ್ಲಿ ವಕಾಲತ್ತು ವಹಿಸಬೇಕಾಗಿದ್ದ ಡಾ|| ಬೆಲಾರಿಯೊ ಎಂಬ ನ್ಯಾಯಪಂಡಿತನ ಶಿಫಾರಸು ಪತ್ರ ಹಿಡಿದು ಹಾಜರಾಗುತ್ತಾಳೆ. ತಾನು ಖುದ್ದಾಗಿ ಬರಲಾಗದ ಕಾರಣ ಈ 'ಪ್ರತಿಭಾವಂತ ವಕೀಲ'ನನ್ನು ಕಳಿಸಿರುವುದಾಗಿ ಅವನು ಬರೆದಿದ್ದಾನೆ.

ಪೋರ್ಷಿಯಾ ವಿಚಾರಣೆಗೆ ಆರಂಭಿಸುತ್ತಾಳೆ. ಹೌದು, ಆಂಟೋನಿಯೊ ಸಾಲ ಪಡೆದದ್ದುಂಟು, ವಾಯಿದೆ ಮುಗಿದಿದೆ, ಷರತ್ತಿನ ಪ್ರಕಾರ ಅವನು ಒಂದು ಪೌಂಡು ಮಾಂಸ ತೆರಬೇಕು, ನಿಜ. ಆದರೆ ಮಾನವ ವ್ಯವಹಾರದಲ್ಲಿ ಕರುಣೆಯೆಂಬುದೂ ಒಂದಿದೆಯಲ್ಲವೆ? ಅದು ಮಳೆಗರೆದರೆ ಕೊಟ್ಟವ, ಕೊಂಡವರಿಬ್ಬರೂ ಪುನೀತರಾಗುವುದಿಲ್ಲವೆ? ಪೋರ್ಷಿಯಾಳ ಈ ವಿವೇಕ ಯೆಹೂದಿಯ ಕಲ್ಲೆದೆಯನ್ನು ಕರಗಿಸದು. ಹಾಗಾದರೆ ನ್ಯಾಯ ನೆರವೇರಲಿ ಎನ್ನುತ್ತಾಳೆ ಅವಳು. ಷೈಲಾಕನ ಆನಂದಕ್ಕೆ ಪಾರವೇ ಇಲ್ಲ. ಅವಳನ್ನು ನ್ಯಾಯ ನೀಡಲು ಪುನರವತಾರವೆತ್ತಿ ಬಂದ ಡೇನಿಯಲ್ ಎಂದು ಕೊಂಡಾಡುತ್ತಾನೆ. ಚಾಕು ತಕ್ಕಡಿಗಳನ್ನು ತೂಗಿಸುತ್ತ ಅವನು ಇನ್ನೇನು ಆಂಟೋನಿಯೊನ ಎದೆಗೆ ಕೈ ಹಾಕಬೇಕು, ಆಗ ಪೋರ್ಷಿಯಾ ತಡೆದು ಹೇಳುತ್ತಾಳೆ: 'ಕರಾರಿನಂತೆ ಮಾಂಸವಷ್ಟೇ ನಿನ್ನ ಪಾಲು, ರಕ್ತವಲ್ಲ! ಒಂದು ಹನಿ ನೆತ್ತರೂ ತೊಟ್ಟಿಕ್ಕಕೂಡದು. ಅಲ್ಲದೇ ತೂಕ ಸರಿಯಾಗಿ ಒಂದು ಪೌಂಡಿರಬೇಕು; ಗುಲಗಂಜಿ ಹೆಚ್ಚಿಲ್ಲ, ಕಡಿಮೆಯಿಲ್ಲ. ತಪ್ಪಿದರೆ ಕಾನೂನಿನ ಪ್ರಕಾರ ನಿನ್ನ ಆಸ್ತಿಯೆಲ್ಲವೂ ದೇಶಕ್ಕೆ ಮುಟ್ಟುಗೋಲು, ನೆನಪಿರಲಿ'.

ಷೈಲಾಕ್ ಸೋತ. ಅವನ ಜಟ್ಟಿಪಟ್ಟು ಅವನನ್ನೇ ಕೆಡವಿ ಕೆಳಗುರುಳಿಸಿತು! 'ಹಾಗಾದರೆ ಹಣವೇ ಇರಲಿ; ಅಸಲಿನ ಮೂರು ಪಟ್ಟಾದರೆ ಸಾಕು' ಎನ್ನುತ್ತಾನೆ. ಆದರೆ ಪೋರ್ಷಿಯಾ 'ಪೌಂಡು ಮಾಂಸ'ದ ಹೊರತು ಬೇರೇನನ್ನೂ, ಬರಿಯ ಅಸಲನ್ನು ಸಹ, ಕೊಡಿಸಲು ಸಿದ್ಧಳಿಲ್ಲ. ಅಷ್ಟೇ ಅಲ್ಲ, ದೇಶದ ಕಾನೂನಿನ ಪ್ರಕಾರ ವೆನಿಸ್ಸಿನವನೊಬ್ಬನ ಪ್ರಾಣಕ್ಕೆ ಗಂಡಾಂತರ ತರಲು ಪ್ರಯತ್ನಿಸಿದ ವಿದೇಶೀಯನಿಗೆ ಮರಣದಂಡನೆ, ಅವನ ಆಸ್ತಿಯಲ್ಲಿ ಅರ್ಧ ದೇಶದ ಸ್ವತ್ತು, ಉಳಿದರ್ಧ ನೊಂದವನಿಗೆ ಎಂಬ ನಿಯಮವಿದೆ. ಪೋರ್ಷಿಯಾ ಅದರ ನೆನಪು ಮಾಡಿಕೊಡುತ್ತಾಳೆ. ಆದರೆ ದೊರೆ ಕರುಣೆ ತೋರಿ ಷೈಲಾಕನಿಗೆ ಜೀವದಾನ ಮಾಡುತ್ತಾನೆ. ಆಂಟೋನಿಯೊ ತನ್ನ ಪಾಲಿಗೆ ಬರಲಿದ್ದ ಅರ್ಧವನ್ನೂ ಜೆಸಿಕಾ-ಲೊರೆನ್ಸೊರಿಗೆಂದು ಸಾರಿ, ಷೈಲಾಕ್ ಕ್ರೈಸ್ತನಾಗಲು ಒಪ್ಪಿ, ತನ್ನ ನಂತರ ತನ್ನೆಲ್ಲವನ್ನೂ ಅವರಿಗೆ ಬಿಟ್ಟುಕೊಡಲು ಸಮ್ಮತಿಸಿದರೆ ಆಸ್ತಿಯ ಉಳಿದರ್ಧವನ್ನು ಅವನೇ ಅನುಭವಿಸಲೆಂದು ಆಶಿಸುತ್ತಾನೆ. ಅಂತೆಯೇ ತೀರ್ಪಾಗುತ್ತದೆ.

ತನ್ನ ಸೇವೆಗೆ ಪ್ರತಿಫಲವಾಗಿ ಪೋರ್ಷಿಯಾ ಬಸಾನಿಯೊನ ಬೆರಳಿನಲ್ಲಿದ್ದ ಉಂಗುರವನ್ನು ಬಯಸುತ್ತಾಳೆ. ಅದು ತಾನೇ ಕೊಟ್ಟಿದ್ದ ಮದುವೆಯುಂಗುರ. ಬಸಾನಿಯೊ ತನ್ನ ಇಚ್ಛೆ ಮೀರಿ ಅದನ್ನು ಕೊಡುತ್ತಾನೆ. ಅವನು ಬೆಲ್ಮಾಂಟಿಗೆ ಹಿಂದಿರುಗುವ ಮೊದಲೇ

ಪೋರ್ಷಿಯಾ ಅಲ್ಲಿದ್ದಾಳೆ. ಏನೂ ತಿಳಿಯದವಳಂತೆ ನಟಿಸಿ, ಗಂಡನ ಕೈಬೆರಳಿನಲ್ಲಿ ತನ್ನ ಉಂಗುರವಿಲ್ಲದುದನ್ನು ಕಂಡು ಮುನಿಸಿಕೊಳ್ಳುತ್ತಾಳೆ! ಕೊನೆಗೆ ವಕೀಲನೊಬ್ಬ ನಿಂದ ತನಗೆ ದೊರೆಯಿತೆಂದು ಹೇಳಿ ಅದನ್ನು ತೆಗೆದು ತೋರಿಸುತ್ತಾಳೆ. ಆಂಟೋನಿಯೊನ ಪ್ರಾಣ ಉಳಿಸಿದ 'ಪ್ರತಿಭಾವಂತ ವಕೀಲ' ಅವಳೆಯೇ ಎಂಬುದು ಆಗ ಬಯಲಾಗುತ್ತದೆ.

ಆಂಟೋನಿಯೊನ ಹಡಗು ಮುಳುಗಿದ ಸುದ್ದಿ ಸುಳ್ಳಾಗಿ ಅವನ ಭಾಗ್ಯ ಮತ್ತೆ ತೆರೆಯುತ್ತದೆ. ಷೈಲಾಕನ ಹೊರತು ಉಳಿದವರೆಲ್ಲರೂ ಸುಖ ಕಾಣುತ್ತಾರೆ.

## 9. ಮಚ್ ಅ್ಯಡೂ ಅಬೌಟ್ ನಥಿಂಗ್

**ರಚನೆ:** 1598-9. **ಮೊದಲ ಪ್ರಕಟನೆ:** 1600.

**ಆಕರಗಳು:** ಮುಖ್ಯಸೂತ್ರವಾದ ಕ್ಲಾಡಿಯೊ-ಹೀರೊರ ಪ್ರಸಂಗಕ್ಕೆ ಎರಡು ಇಟಾಲಿಯನ್ ಕೃತಿಗಳು ಆಕರ: ಒಂದು, ಬ್ಯಾಂಡೆಲೊನ ಒಂದು ಕಥೆ, ಬೆಲ್‌ಫಾರ್ ತನ್ನ 'ಇಸ್ತ್ವಾರ್ ತ್ರಾಜಿಕ್'ನಲ್ಲಿ ಮಾಡಿದ ಫ್ರೆಂಚ್ ಅನುವಾದದ ಮೂಲಕ; ಇನ್ನೊಂದು ಆರಿಯೊಸ್ಟೊನ 'ಆರ್ಲ್ಯಾಂಡೊ ಫ್ಯೂರಿಯೊಸೊ', ಜಾನ್ ಹ್ಯಾರಿಂಗ್‌ಟನನ ಇಂಗ್ಲಿಷ್ ಅನುವಾದದ ಮೂಲಕ. ನಾಟಕಕ್ಕೆ ಸ್ವಾರಸ್ಯ ತುಂಬುವ ಬೀಯಟ್ರಿಸ್-ಬೆನಿಡಿಕ್, ಡಾಗ್‌ಬೆರಿ-ವರ್ಜೀಸರ ಜೋಡಿಗಳು ಕವಿಯ ಸ್ವಂತ ಪ್ರತಿಭೆಯಿಂದ ಅವತರಿಸಿ ಬಂದವು.

**ಕಥೆ:** ಸಾಮಾಜಿಕ ನಡವಳಿಕೆಗೆ ಕನ್ನಡಿ ಹಿಡಿಯುವ, 'ಕಾಮಿಡಿ ಅಫ್ ಮ್ಯಾನರ್ಸ್' ಜಾತಿಯ ಹರ್ಷನಾಟಕ ಇದು. ಕಿಂವದಂತಿ — 'ಯಾರೋ ಅಂದರು' — ಪ್ರಬಲವಾದ ಅಸ್ತ್ರ; ಅದರಿಂದ ಉದ್ಧಾರ, ನಾಶ ಎರಡೂ ಸಾಧ್ಯ. ಎರಡರ ನಿದರ್ಶನವೂ ಇಲ್ಲಿದೆ. ಸರಸ ಸಂಭಾಷಣೆ ಹಾಗೂ ಉತ್ತಮ ಗದ್ಯ, ಪದ್ಯ ಭಾಗಗಳಿಂದ ಕೂಡಿ ನಾಟಕ ಮನೋಹರವಾಗಿದೆ. ಬೆನಿಡಿಕ್-ಬೀಯಟ್ರಿಸ್‌ರದು ಅದ್ಭುತ ಜೊತೆ. ಅದನ್ನು ಕಲ್ಪಿಸಿ, ಕ್ಲಾಡಿಯೊ ಹೀರೊರ ನಟ್ಟೆಳೆಯೊಡನೆ ಗಂಟು ಕಾಣದಂತೆ ಕೂಡಿಸಿರುವುದು ಕವಿಪ್ರತಿಭೆಗೆ ಸಾಕ್ಷಿ.

ಡಾನ್ ಪೀಡ್ರೊ ಆರಗಾನನ ರಾಜಕುಮಾರ. ಡಾನ್ ಜಾನ್ ಅವನ ಮಲತಮ್ಮ, ತಂದೆಯ ಹಾದರಕ್ಕೆ ಹುಟ್ಟಿದವನು. ತಮ್ಮ ಅಣ್ಣನ ಮೇಲೆ ಬಂಡಾಯವೇಳುತ್ತಾನೆ. ಅಣ್ಣ ಕ್ಲಾಡಿಯೊ ಬೆನಿಡಿಕ್ ಎಂಬಿಬ್ಬರು ಯುವಕ ಸಾಹಸಿಗಳ ಸಹಾಯದಿಂದ ಅವನ ಕೊಂಬು ಮುರಿದು, ದಾರಿಗೆ ತರುತ್ತಾನೆ. ಆ ನಂತರ ಎಲ್ಲರೂ ಮೆಸೀನ ಪಟ್ಟಣಕ್ಕೆ ಅಲ್ಲಿನ ರಾಜ್ಯಪಾಲ ಲಿಯೊನಾಟೊನ ಅತಿಥಿಗಳಾಗಿ ಬರುತ್ತಾರೆ. ಕ್ಲಾಡಿಯೊ, ಬೆನಿಡಿಕ್‌ರು ಲಿಯೊನಾಟೊನ ಆಸ್ಥಾನಕ್ಕೆ ಮೊದಲಿನಿಂದಲೂ ಪರಿಚಿತರೇ. ಈಗ ಜಾನ್‌ನನ್ನು ಸೋಲಿಸಿದ ಮೇಲಂತೂ ಅವರ ಬಗ್ಗೆ ಎಲ್ಲರಿಗೂ ಉತ್ಸಾಹ.

ಲಿಯೊನಾಟೊನ ಮನೆಯಲ್ಲಿ ಇಬ್ಬರು ಹುಡುಗಿಯರು: ಒಬ್ಬಳು ಅವನ ಮಗಳು ಹೀರೊ, ಇನ್ನೊಬ್ಬಳು ಅಣ್ಣನ ಮಗಳು ಬೀಯಟ್ರಿಸ್. ಹೀರೊ ಸೌಮ್ಯೆ, ಸುಂದರಿ. ಮೆಸೀನಕ್ಕೆ ಬಂದೊಡನೆಯೇ ಕ್ಲಾಡಿಯೊ ಅವಳಲ್ಲಿ ಮೋಹಗೊಳ್ಳುತ್ತಾನೆ. ಆದರೆ ಆ ಯುದ್ಧವೀರ ಪ್ರೇಮದ ಕಣದಲ್ಲಿ ಎಂದೂ ಕಾದಿದವನಲ್ಲ! ಮುನ್ನುಗ್ಗುವ ಧೈರ್ಯ ಸಾಲದು. ಇದು ಪೀಡ್ರೊಗೆ ಗೊತ್ತಾಗುತ್ತದೆ. ಕ್ಲಾಡಿಯೊಗೆ ಸಹಾಯ ಮಾಡಲು ಅವನಿಗೆ ಉತ್ಸಾ



**ಹೀರೊ, ಅವಳ ಹೆಣ್ಣಾಳು ಅರ್ಸೂಲಲರು ಬೆನಿಡಿಕ್ ಬೀಯಟ್ರಿಸ್‌ಳನ್ನು ಪ್ರೇಮಿಸಿದ್ದಾನೆಂದು ಮಾತಾಡಿಕೊಳ್ಳುತ್ತಿರುವುದನ್ನು ಆ ಹೆಣ್ಣು ಕದ್ದು ಕೇಳುತ್ತಾಳೆ.**

ಕತೆ. ಆ ರಾತ್ರಿ ಮರಸು-ಕುಣಿತದಲ್ಲಿ ತಾನೇ ಕ್ಲಾಡಿಯೊ ಎಂಬಂತೆ ತೋರ್ಪಡಿಸಿಕೊಂಡು ಅವನ ಪರವಾಗಿ ಪ್ರೇಮಾಲಾಪ ಮಾಡಿ ಹೀರೊಳನ್ನು ಅವನಿಗೆ ಒಲಿಸಿಕೊಡುವ ಹೊಣೆ ಹೊರುತ್ತಾನೆ. ಇದರ ಸುಳಿವು ಡಾನ್ ಜಾನ್‌ಸಿಗೆ ತಿಳಿಯುತ್ತದೆ. ಜಾನ್ ಪೆಟ್ಟು ತಿಂದ ಹಾವು. ಅವನದು ಮೇಲೆ ನಗೆ; ಒಳಗೆ ತಣ್ಣನೆಯ ಬಿಸಿ ಹಗೆ. ಅಣ್ಣ ಪೀಡ್ರೊಗೆ ನೆರವಾಗಿ ತನ್ನನ್ನು ಉರುಳಿಸಿ ಅದರ ಪೂರ್ಣ ಕೀರ್ತಿ ಪಡೆದ ಕ್ಲಾಡಿಯೊನನ್ನು ಕಂಡರೆ ಉರಿ. ಸೇಡಿಗೆ ಸಮಯ ಕಾಯುತ್ತ ಕುಳಿತವನಿಗೆ ಈಗ ಅನುಕೂಲವಾದ ಸಂದರ್ಭ ಒದಗಿದೆ. ಕೆಡಕಿನ ಆಟ ಹೂಡುತ್ತಾನೆ. ಇದರಲ್ಲಿ ಅವನ ಇಬ್ಬರು ಬಂಟರು — ಬೊರಾಕಿಯೊ ಮತ್ತು ಕಾನ್ರೇಡ್ — ಅವನಿಗೆ ಬೆಂಬಲಿಗರಾಗಿದ್ದಾರೆ.

ಮರಸು-ಕುಣಿತ ನಡೆದಿರುವಾಗ ಜಾನ್ ಕ್ಲಾಡಿಯೊನ ಬಳಿಗೆ ಬಂದು ಪೀಡ್ರೊ ಹೀರೊಳಿಗೆ ಒಲಿದಿದ್ದಾನೆಂದು ಅವನ ಕಿವಿಯಲ್ಲಿ ಸುಳ್ಳೂದುತ್ತಾನೆ. ಆ ಬೆಪ್ಪ ಕ್ಷಣ ಕಾಲ ಅದನ್ನು ನಿಜವೆಂದೇ ನಂಬಿ ಹತಾಶನಾಗುತ್ತಾನೆ. ಅಷ್ಟರಲ್ಲಿಯೇ ಪೀಡ್ರೊ ತನ್ನ ಪ್ರಯತ್ನ ಯಶಸ್ವಿಯಾಗಿ ಕ್ಲಾಡಿಯೊನೊಡನೆ ಲಗ್ನ ಬೆಳಸಲು ಹೀರೊ ಹಾಗೂ ಅವಳ ತಂದೆ ಲಿಯೊನಾಟೊರನ್ನು ಒಪ್ಪಿಸಿರುವ ಸುದ್ದಿ ತರುತ್ತಾನೆ. ಮದುವೆ ಮುಂದಿನ ವಾರಕ್ಕೆ ನಿಶ್ಚಿತವಾಗುತ್ತದೆ. ಜಾನನ ಕುತಂತ್ರಕ್ಕೆ ಸೋಲಾಗುತ್ತದೆ.

ಬೆನಿಡಿಕ್-ಬೀಯಟ್ರಿಸರದು ಮೋಜಿನ ಜೋಡಿ. ಅವರು ಪಾದರಸದ ಎರಡು ಸಜೀವ ಕಣಗಳು. ತಮ್ಮೊಳಗೆ ಪರಸ್ಪರ ಯಾವ ಭಾವನೆಯಿದೆಯೆಂದು ಅವರಿಗೇ ತಿಳಿಯದು; ಮೇಲೆ ಸದಾ ಕಚ್ಚಾಡುತ್ತಿರುತ್ತಾರೆ. ಅವರು ಬಾಯಿ ಬಿಟ್ಟರೆ ಮಿಂಚು, ಗುಡುಗು, ಜಡಿಮಳೆ; ಮಾತಿಗೆ ಮಾತು ತಾಗಿದರೆ ಹಾರುವುದು ಚತುರೋಕ್ತಿಯ ಕಿಡಿ. ಬೆನಿಡಿಕ್‌ನಿಗೆ ತಾನು ವಿವಾಹದ್ವೇಷಿಯೆಂದು ತೋರಿಸಿಕೊಳ್ಳಲು ಹೆಮ್ಮೆ. ಮದನನ ಹೂಬಿಲ್ಲು ಅವನ ಮುಂದೆ ನಿಶ್ಚೇಷ್ಟ; ಅದರ ಕಮಾನನ್ನು ಕತ್ತರಿಸಿ ಎಸೆದಿದ್ದಾನಂತೆ! ಹಾಗೆಯೇ ಪುರುಷ

ಮ್ಮೇಷಿ ಬೀಯಟ್ರಿಸ್‌ಳಿಗೆ ತನ್ನ ಕನ್ನೆತನದಲ್ಲಿ ಮಮತೆ. ಇಬ್ಬರೂ ತಮಗೆ ತಾವೇ ಮೋಸ ಹೋಗಿದ್ದಾರೆ. ಒಂದು ಲಗ್ನ ಕೂಡಿಸಿಗೆದ್ದ ಪೀಡ್ರೊಗೆ ಬೆನಿಡಿಕ್-ಬೀಯಟ್ರಿಸರನ್ನೂ ಒಂದಾಗಿಸುವ ಆಸೆ. ಆದರೆ ಹೇಗೆ? ಲಿಯೊನಾಟೊ, ಕ್ಲಾಡಿಯೊ, ಹೀರೊರ ನೆರವಿನಿಂದ ಒಂದು ಉಪಾಯ ಹೂಡುತ್ತಾನೆ: 'ಬೀಯಟ್ರಿಸ್ ಒಳಗೇ ಬೆನಿಡಿಕ್‌ನನ್ನು ಗಾಢವಾಗಿ ಪ್ರೇಮಿಸಿದ್ದಾಳೆ, ತಿಳಿಸಿದರೆ ಎಲ್ಲಿ ಆ ಕಲ್ಲೆದೆಯ ಗಂಡು ತನ್ನ ಮುಖ ಮುರಿದು ಅಭಿಮಾನಭಂಗ ಮಾಡುವನೋ ಎಂದು ಹೆದರಿ ಅದಕ್ಕೆ ಬಹಿರಂಗ ಅಭಿವ್ಯಕ್ತಿ ಕೊಡದೆ ಒಳಗೇ ಕೊರಗುತ್ತಿದ್ದಾಳೆ' ಎಂದು ಅವನ ಕಿವಿಗೆ ಬೀಳುವಂತೆ ಸುದ್ದಿ ಹಬ್ಬಿಸುವುದು. ಹಾಗೆಯೇ ಇತ್ತ ಬೆನಿಡಿಕ್ ಬೀಯಟ್ರಿಸ್‌ಳಿಗೆ ಒಲಿದಿದ್ದರೂ ಹೊರಗೆ ತೋರ್ಗೊಡದೆ ಒದ್ದಾಡುತ್ತಿದ್ದಾನೆಂದು ಅವಳಿಗೆ ಕೇಳುವಂತೆ ಗುಸಗುಸ ಪಿಸಪಿಸ ಆಡುವುದು. ಸದುದ್ದೇಶಪೂರಿತವಾದ ಈ ಯುಕ್ತಿ ಆ ಇಬ್ಬರು ಜಂಬದ ಕೋಳಿಗಳ ಭಾವನೆಗಳನ್ನೂ ಕೆಣಕಿ, ಕೆಲಸಕ್ಕೆ ತೊಡಗುತ್ತದೆ.

ಅಣ್ಣ ಪೀಡ್ರೊ ಹೀಗೆ ದೂರದೂರವಿದ್ದವರನ್ನು ಕೂಡಿಸ ಹೊರಟರೆ ಆ ಕಡೆ ತಮ್ಮ ಜಾನ್ ಅದೇ ರೀತಿಯ ಸುಳ್ಳುಸುದ್ದಿಯ ಇನ್ನೊಂದು ಅಸ್ತ್ರ ಹೂಡಿ ಕ್ಲಾಡಿಯೊ-ಹೀರೊರ ಜೋಡಿಯನ್ನು ಒಡೆಯುವ ಪ್ರಯತ್ನದಲ್ಲಿದ್ದಾನೆ. ಹೀರೊ ದಾರಿಗೆಟ್ಟ ಹೆಣ್ಣೆಂದು ಕ್ಲಾಡಿಯೊಗೆ ಸಾಧಿಸಿ ತೋರಿಸುವುದೇ ಆ ಅಸ್ತ್ರ. ಅದರ ಕರ್ತೃ ಬೊರಾಕಿಯೊ. ಅದಕ್ಕೆ ಜಾನ್‌ನಿಂದ ಅವನಿಗೆ ಸಿಗಲಿರುವ ಪ್ರತಿಫಲ ಒಂದು ಸಾವಿರ ಡಕೆಟ್‌ಗಳು. ಹೀರೊಳಿಗೆ ಮಾರ್ಗರಿಟ್ ಎಂಬ ಹೆಣ್ಣಾಳಿದ್ದಾಳೆ. ಅವಳೂ ಬೊರಾಕಿಯೊ ಪ್ರೇಮಿಗಳು. ಮದುವೆಯ ಹಿಂದಿನ ರಾತ್ರಿ ಮಾರ್ಗರಿಟ್‌ಳಿಗೆ ಹೀರೊಳ ಉಡಿಗೆ ತೊಡಿಸಿ ಅವಳ ಮಲಗುವ ಕೋಣೆಯ ಕಿಟಕಿಯಲ್ಲಿ ನಿಲ್ಲಿಸಿ ಬೊರಾಕಿಯೊನನ್ನು ಬೀಳ್ಕೊಡುತ್ತಿರುವಂತೆ ದೃಶ್ಯ ಕಟ್ಟುವುದು. ಅದೇ ಹೊತ್ತಿಗೆ ಜಾನ್ ಕ್ಲಾಡಿಯೊನನ್ನು ಕರೆ ತಂದು ಅದನ್ನು ತೋರಿಸಿದರೆ ಆ ಬೆಪ್ಪ ಅವಳು ಹೀರೊಳೇ, ಕೂಡಿದ್ದ ತನ್ನ ಕಳ್ಳ ನಲ್ಲನನ್ನು ಬೀಳ್ಕೊಡುತ್ತಿದ್ದಾಳೆಂದು ನಂಬಿ ಮೋಸಹೋಗುತ್ತಾನೆ, ಮದುವೆ ಮುರಿಯುತ್ತದೆ — ಹೀಗಿದೆ ಅವರ ಕುಯುಕ್ತಿ.

ಬೊರಾಕಿಯೊನ ದಾಳ ಬಯಸಿದಂತೆಯೇ ಉರುಳುತ್ತದೆ. ಕ್ಲಾಡಿಯೊ ಹಾಗೂ ಅವನ ಜತೆಗಿರುವ ಪೀಡ್ರೊ 'ಹೀರೊ'ಳ ದುರಾಚಾರದ ಪ್ರಮಾಣವನ್ನು ಕಣ್ಣಾರೆ ಕಾಣುತ್ತಾರೆ. ಆದರೆ ಆ ಕ್ಷಣ ತೆಪ್ಪಸಿದ್ದು, ಮಾರನೆಯ ದಿನ ಮುಹೂರ್ತದ ಹೊತ್ತಿನಲ್ಲಿ ನೆರೆದವರೆದುರಿಗೆ ಕ್ಲಾಡಿಯೊ ತಾನು ಹಿಂದಿನ ರಾತ್ರಿ ಕಂಡದ್ದನ್ನು ವರ್ಣಿಸಿ ಹೀರೊಳನ್ನು ಜಾರೆಯೆಂದು ಧಿಕ್ಕರಿಸಿ ಪೀಡ್ರೊನೊಡನೆ ಹೊರಟುಹೋಗುತ್ತಾನೆ. ಆ ಮುಗ್ಧೆ ಆಘಾತ ತಡೆಯಲಾರದೆ ಮೂರ್ಛೆ ಹೋಗುತ್ತಾಳೆ. ತಂದೆ ಲಿಯೊನಾಟೊ ವಿಶ್ವಾಸ-ಸಂಶಯಗಳ ನಡುವೆ ಹೊಯ್ದಾಡುತ್ತ ವಿಚಾರಣೆ ನಡಸಿ ನಿಜಸಂಗತಿಯನ್ನು ಹೊರತೆಗೆಯುವ ಪಣ ತೊಡುತ್ತಾನೆ. ಸದ್ಯಕ್ಕೆ ಹೀರೊಳನ್ನು ಬಚ್ಚಿಟ್ಟು ಅವಳು ಸತ್ತಳೆಂದು ಸುದ್ದಿ ಹರಡುತ್ತಾನೆ.

ಯಾರು ಎಷ್ಟೇ ನಂಬಲಿ, ಬೀಯಟ್ರಿಸ್ ಮಾತ್ರ ತನ್ನ ಸೋದರಿ ದುರಾಚಾರಿಯೆಂದು ಒಪ್ಪಲು ಸಿದ್ಧಳಿಲ್ಲ. ಅವಳಿಗಾದ ಅನ್ಯಾಯವನ್ನು ಸರಿಪಡಿಸಲು ಹೊರಟಾಗ ಬೀಯಟ್ರಿಸ್‌ಳಿಗೆ ತನ್ನಂತೆಯೇ ಆತಂಕಭರಿತನಾದ ಬೆನಿಡಿಕ್‌ನ ಒತ್ತಾಸೆ ಸಿಗುತ್ತದೆ. ಪೀಡ್ರೊನ ಕುಚೇಷ್ಟೆಯಿಂದ ಮಾನಸಿಕವಾಗಿ ಹತ್ತಿರವಾಗಿದ್ದವರು ಅವರು. ಈಗಂತೂ ಒಂದೇ ಸಾಮಾನ್ಯ ವ್ಯಥೆ ಅವರಿಬ್ಬರನ್ನೂ ಇದ್ದಿದ್ದೂ ಸನಿಹಕ್ಕೆ ತಂದು ಒಂದಾಗಿಸುತ್ತದೆ.



**ಹೀರೊಳ ದುರಂತದ ನೆರಳಿನಲ್ಲಿ ಒಂದಾದ ಬೆನಿಡಿಕ್ ಮತ್ತು ಬೀಯಟ್ರಿಸ್**

ಸೊಕ್ಕು, ಸೋಗುಗಳ ಮುಖವಾಡ ಕಳಚಿ ಎಸೆದು, ಪರಸ್ಪರ ಪ್ರೀತಿ ತೋಡಿಕೊಳ್ಳುತ್ತಾರೆ. ತನ್ನ ಮೇಲಿನ ಪ್ರೀತಿ ನಿಜವಾದರೆ ಕ್ಲಾಡಿಯೊನನ್ನು ಕೊಂದು ಪ್ರತೀಕಾರ ತೀರಿಸಿಕೊಡೆನ್ನುತ್ತಾಳೆ ಬೀಯಟ್ರಿಸ್. ಬೆನಿಡಿಕ್ ಅವಳಿಗಾಗಿ ಮಿತ್ರಹತ್ಯೆಗೂ ಸಿದ್ಧ!

ಈ ನಡುವೆ ಇನ್ನೊಂದು ತಮಾಷೆ ನಡೆದಿದೆ. ಹಿಂದಿನ ರಾತ್ರಿ ಬೊರಾಕಿಯೊ ಚೆನ್ನಾಗಿ ಕುಡಿದು ಆ ಮತ್ತಿನಲ್ಲಿ ತನಗೆ ದೊರೆತ ಸಾವಿರ ಡಕೆಟ್ ಬಹುಮಾನದ ಗುಟ್ಟನ್ನು ಕಾನ್ರೇಡನಿಗೆ ತಿಳಿಸುತ್ತಿರುವುದು ಊರ ಕಾವಲಿನವರ ಕಿವಿಗೆ ಬೀಳುತ್ತದೆ. ಅವರು ಇದು ಯಾವದೋ ಕಳ್ಳತನದ ವ್ಯವಹಾರವಿರಬೇಕೆಂಬ ಅನುಮಾನದ ಮೇಲೆ ಇಬ್ಬರನ್ನೂ ಬಂಧಿಸಿ, ಪೋಲಿಸ್ ಅಧಿಕಾರಿ ಡಾಗ್‌ಬೆರಿ ಮತ್ತು ಅವನ ಸಹಾಯಕ ವರ್ಜೀಸರಿಗೆ

ಒಪ್ಪಿಸುತ್ತಾರೆ. ಅವರೆಲ್ಲರೂ ಗಾಂಪಣ್ಣಗಳೇ! ಜೊತೆಗೆ ಡಾಗ್‌ಬೆರಿ ಡೌಲಿನ ಮನುಷ್ಯ ಬೇರೆ. ತಪ್ಪೋ ಸೆಪ್ಪೋ ಅವನು ಆಡಿದ ಪದ ದೊಡ್ಡದಿರಬೇಕು; ನುಡಿಯಂತೆ ನಡೆಯಲ್ಲೂ ಡಂಭದ ಠೀವಿಯೇ! ಆ ಬೆಳಿಗ್ಗೆ ಲಿಯೊನಾಟೊ ಮದುವೆಯ ಗಡಿಬಿಡಿಯಲ್ಲಿರುವಾಗ ಹೀಗೆ ಇಬ್ಬರು ಸೆರೆ ಸಿಕ್ಕಿದ್ದಾರೆಂದು ಅವರು ಸುದ್ದಿ ತರುತ್ತಾರೆ. ಅವನಿಗೆ ಹೊತ್ತಿಲ್ಲ; ನೀವೇ ವಿಚಾರಣೆ ನಡಸಿರೆನ್ನುತ್ತಾನೆ. ಮೂರ್ಖರಾದರೂ ಅವರು ತಮ್ಮದೇ ರೀತಿಯಲ್ಲಿ ಪತ್ತೆ ತರದೂದು ನಡಸಿ, ಸತ್ಯಸಂಗತಿಯನ್ನು ಹೊರಗೆಡವುತ್ತಾರೆ.

ಕ್ಲಾಡಿಯೊ ಈಗ ಶೋಕತಪ್ತ. ತಾನು ಮೋಸ ಹೋದದ್ದಿರಲಿ, ತನ್ನಿಂದಾಗಿ ಒಬ್ಬ ನಿರಪರಾಧಿ ಕನ್ಯೆ ದೂಷಿತಳಾಗಿ, ದುಃಖ ಅವಮಾನಗಳನ್ನು ಎದುರಿಸಲಾರದೇ ಪ್ರಾಣ ತೆತ್ತಿದ್ದಾಳೆ. ಹೋಗಿ ಲಿಯೊನಾಟೊನ ಕ್ಷಮೆ ಬೇಡುತ್ತಾನೆ. ಪ್ರಾಯಶ್ಚಿತ್ತವಾಗಿ ಹೀರೋಳ ಸಮಾಧಿಯ ಮುಂದೆ ಗೌರವ ಸಲ್ಲಿಸಿ, ಎಲ್ಲ ತರದಲ್ಲೂ ಅವಳಿಗೆ ತದ್ವತ್ತಾಗಿರುವ ತನ್ನ ಅಣ್ಣನ ಮಗಳನ್ನು ಅವಳ ಮುಖವನ್ನೂ ನೋಡದೆ ಮದುವೆಯಾಗಲು ಒಪ್ಪಿದರೆ ಮಾತ್ರ ಕ್ಷಮೆಯೆಂದು ಷರತ್ತು ಹಾಕುತ್ತಾನೆ ಲಿಯೊನಾಟೊ. ಕ್ಲಾಡಿಯೊ ಒಪ್ಪುತ್ತಾನೆ. ಮಾರನೆ ದಿನ ಮದುವೆ ನಡೆಯುತ್ತದೆ. ಹೊಸ ಹೆಣ್ಣು ಮುಖಕ್ಕೆ ಮುಸುಕು ಹೊದ್ದಿದ್ದಾಳೆ. ಮದುವೆಯ ನಂತರ ಮುಸುಕು ತೆಗೆದರೆ ಅವಳು ಭೂಗತಳಾಗಿದ್ದ ಹೀರೋಳೇ! ಅವರೊಡನೆ ಬೆನಿಡಿಕ್-ಬೀಯಟ್ರಿಸರ ವಿವಾಹವೂ ನೆರವೇರುತ್ತದೆ. ತನ್ನ ತಂತ್ರ ಸಾಧಿಸಿ ಓಡಿ ಹೋಗಿದ್ದ ಡಾನ್ ಜಾನ್ ಸಿಕ್ಕಿ ಬಿದ್ದು ವಿಚಾರಣೆಗೆ ಗುರಿಯಾಗುತ್ತಾನೆ. ದುರಂತವಾಗಬೇಕಿದ್ದ ನಾಟಕ ದಾರಿ ತಿರುವಿ ಸುಖದಲ್ಲಿ ಕೊನೆಗೊಳ್ಳುತ್ತದೆ.

## 10. ದಿ ಮೆರಿ ವೈವ್ಸ್ ಅಫ್ ವಿಂಡ್ಸರ್

**ರಚನೆ** 1598-9 ? **ಮೊದಲ ಪ್ರಕಟನೆ:** 1602.

**ಆಕರ:** ಇದಕ್ಕೆ ಸಾದೃಶ್ಯಗಳು ಹಲವಾರು ದೊರೆತರೂ ಬೆರಳಿಟ್ಟು ಗುರುತಿಸಬಹುದಾದ ಯಾವೊಂದು ಆಕರವೂ ಇಲ್ಲ. ಕಂಡಂತೆಯೇ ಇದು ಕವಿಯ ಸ್ವಂತ ಸೃಷ್ಟಿ. ಸಂಶಯ ಗ್ರಸ್ತನಾದ ಗಂಡ, ವಿನೋದಪ್ರಿಯಳಾದ ಹೆಂಡತಿ, ಸಿಕ್ಕಿಬಿದ್ದಾಗ ಅವಳ ಸೆರಗ ಮರೆಯಲ್ಲಿ ಅವಿತುಕೊಳ್ಳುವ ಹೇಡಿ ಮಿಂಡ — ಈ ಜನಪ್ರಿಯ ಹಾಸ್ಯತಂತ್ರಗಳು ಇಂಗ್ಲಿಷ್ ಮತ್ತು ಇಟಾಲಿಯನ್ ನವೋದಯ ಸಾಹಿತ್ಯದಲ್ಲಿ ಇದ್ದಂತಹವೇ. ತಂತ್ರಿ ಹೊಸೆದ ಹಗ್ಗ ಅವನ ಕುತ್ತಿಗೆಗೇ ಉರುಳಾಗುವ ಸನ್ನಿವೇಶಕ್ಕೆ ಪ್ಲಾಟಸ್ ಹಾಗೂ ಇಟಾಲಿಯನ್ ಹರ್ಷ ನಾಟಕಗಳು ಸ್ಫೂರ್ತಿ ಕೊಟ್ಟಿರಬಹುದು.

**ಕಥೆ:** 'ಹೆನ್ರಿ ದಿ ಫೋರ್ತ್' ನಾಟಕದಲ್ಲಿ ರಸಿಕಹೃದಯವನ್ನು ರಂಜಿಸಿ ಸೂರೆಗೊಂಡ ಹಾಸ್ಯವೀರ ಫಾಲ್‌ಸ್ಟಾಫನನ್ನು ಎಲಿಜಬೆತ್ ರಾಣಿ ಮತ್ತೆ, ಅದೂ ಪ್ರೇಮಿಯ ಪಾತ್ರದಲ್ಲಿ, ನೋಡಬಯಸಿದಳಂತೆ. ಕವಿ ಅವಸರದಲ್ಲಿ ಅಟ್ಟಿದ, ಈ ಹುಚ್ಚಾಟ ಪಾಕವಿಳಿಯಿತು. ಮೂಲದೇವರಿನೊಡನೆ ಹೋಲಿಸಿದಾಗ ಇಲ್ಲಿನ ಫಾಲ್‌ಸ್ಟಾಫ್ ಬಲು ಬಡಕಲ ಮೂರ್ತಿ. ಶಿಥಿಲ ಸಂವಿಧಾನ, ದುರ್ಬಲ ಪಾತ್ರಗಳ ನಡುವೆ ಹೇಗೋ ತೂಗಿ ನಡೆದು ನಾಟಕವನ್ನು ಉಳಿಸಿದ್ದಾನೆ. ವಾತಾವರಣ ಹಾಗೂ ಪಾತ್ರಗಳಲ್ಲಿ ಇಂಗ್ಲಂಡಿನ ಹಳ್ಳಿಗಾಡಿನ ಕಂಪಿದೆ.

ಸರ್ ಜಾನ್ ಫಾಲ್‌ಸ್ಟಾಫ್ ಇಂಗ್ಲಂಡಿನ ವಿಂಡ್ಸರ್ ಹಳ್ಳಿಯಲ್ಲಿ ಸಾಮಾಜಿಕ ಪರಿಸರದಲ್ಲಿ ಪುನರವತಾರವೆತ್ತಿ ಬಂದಿದ್ದಾನೆ. ಅವನೊಡನೆ ನಿಮ್, ಬಾರ್ಡೊಲ್ಫ್, ಪಿಸ್ಟಲರ ಪಟಾಲಂ ಇದ್ದೇ ಇದೆ. ಮಿಸ್ಟ್ರೆಸ್ ಕ್ವಿಕ್ಲಿಯೂ ಇದ್ದಾಳೆ. ಹಳ್ಳಿಯ ನ್ಯಾಯಾಧೀಶ ಷ್ಯಾಲೊ ಸಹ ಇದ್ದಾನೆ. ಸರಿ, ಫಾಲ್‌ಸ್ಟಾಫ್ ಇದ್ದಲ್ಲಿ ಚತುರೋಕ್ತಿ, ಕುಚೋದ್ಯ, ಹಾಸ್ಯ. ಹುಚ್ಚಾಟಕ್ಕೆ ಇನ್ನೇನು ಬೇಕು?

ಫಾಲ್‌ಸ್ಟಾಫ್ ಮತ್ತು ಅವನ ಸಂಗಡಿಗರು ಷ್ಯಾಲೊ ಹಾಗೂ ಅವನ ಪೆಪ್ಪ ಬಂಧು ಸ್ಲೆಂಡರನಿಗೆ ಕೊಡುತ್ತಿರುವ ಕಿರುಕುಳ ಒಂದೊಂದಲ್ಲ. ಇವತ್ತು ಅವರ ಕೆಲಸದಾಳುಗಳನ್ನು ಹೊಡೆದರು, ನಾಳೆ ಮನೆಯ ಬೀಗ ಮುರಿದರು, ನಾಡಿದ್ದು ಸಾಕುಜಿಂಕೆಯನ್ನು ಕೊಂದರು, ಹೀಗೆ ದಿನಕ್ಕೊಂದು ಕಾಟ ಇದ್ದದ್ದೇ. ಪೇಜ್ ಊರಿನ ಶ್ರೀಮಂತರಲ್ಲೊಬ್ಬ. ಒಮ್ಮೆ ತನ್ನ ಮನೆಯ ಮುಂದೆ ಷ್ಯಾಲೊ ಮತ್ತು ಫಾಲ್‌ಸ್ಟಾಫನ ಗುಂಪಿನವರು ಕಚ್ಚಾಡುತ್ತಿರುವುದನ್ನು ಕಂಡು, 'ಆದ ಅನ್ಯಾಯಗಳೆಲ್ಲವನ್ನೂ ಕುಡಿದು ಮರೆಯುವಿರಂತೆ, ಬನ್ನಿ' ಎಂದು ಅವನು ಅವರನ್ನು ಪಾನೋತ್ಸವಕ್ಕೆ ಆಮಂತ್ರಿಸುತ್ತಾನೆ. ಆ ಕೂಟದಲ್ಲಿ ಫಾಲ್‌ಸ್ಟಾಫನಿಗೆ ಪೇಜನ ಹಾಗೂ ಊರಿನ ಇನ್ನೊಬ್ಬ ಶ್ರೀಮಂತ ಫೋರ್ಡನ ಪತ್ನಿಯರ ಭೇಟಿಯಾಗುತ್ತದೆ. ಫಾಲ್‌ಸ್ಟಾಫ್ ಕಚ್ಚೆಹರಕ. ಮೈ ಮುಪ್ಪಿನಿಂದ ಜೀರ್ಣವಾಗಿದ್ದರೂ ತನ್ನಲ್ಲಿನ್ನೂ ಸ್ತ್ರೀಸಮ್ಮೋಹನ ಶಕ್ತಿಯಿದೆಯೆಂದು ನಂಬಿ ನಡೆದಿದ್ದಾನೆ. ಪೇಜ್ ಮತ್ತು ಫೋರ್ಡನ ಹೆಂಡತಿಯರು ಪತಿವ್ರತೆಯರಾದರೂ ತುಂಬ ಸರಸಗಾತಿಯರು. ಆ ಸತಿಯರ ಹಾವಭಾವಗಳನ್ನು ಅವರು ತನ್ನ ರೂಪಿಗೆ ಮರುಳಾಗಿ ಕೊಟ್ಟ ಆಮಂತ್ರಣದ ಸೂಚನೆಯೆಂದು ಫಾಲ್‌ಸ್ಟಾಫ್ ತಪ್ಪು ತಿಳಿಯುತ್ತಾನೆ! ಅವನ ಪ್ರಕಾರ ಆ ಹಾವಭಾವಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದಾದರೆ 'ಫಾಲ್‌ಸ್ಟಾಫ್, ನಾವು ನಿನ್ನವರು' ಎಂದಂತೆ! ಅವನ ಎರಡು ಕಣ್ಣುಗಳಲ್ಲಿ ಒಂದು ಅವರ ಬೆಡಗಿನ ಮೇಲಾದರೆ ಇನ್ನೊಂದು ಅವರ ಹತೋಟಿಯಲ್ಲಿರುವ ಗಂಡಂದಿರ ಖಜಾನೆಯ ಮೇಲೆ! ಮನೆಗೆ ಹಿಂದಿರುಗಿದೊಡನೆಯೇ ಒಂದು ಪ್ರೇಮಪತ್ರ ಬರೆದು ಅದರ ನಕಲು ಮಾಡಿ ಒಂದನ್ನು ಪೇಜನ ಹೆಂಡತಿಗೂ ಇನ್ನೊಂದನ್ನು ಫೋರ್ಡನ ಹೆಂಡತಿಗೂ ತಲುಪಿಸಿ ಬರುವಂತೆ ನಿಮ್, ಪಿಸ್ಟಲರಿಗೆ ಹೇಳುತ್ತಾನೆ. ಅವರು ಅವನ ತಲೆಹಿಡುಕರಾಗಲು ಒಪ್ಪರು. ಫಾಲ್‌ಸ್ಟಾಫ್ ಅವರನ್ನು ಕೆಲಸದಿಂದ ಒದ್ದೋಡಿಸಿ, ಪತ್ರಗಳನ್ನು ತನ್ನ ಆಳು ರಾಬಿನನ ಮುಖಾಂತರ ಕಳಿಸಿಕೊಡುತ್ತಾನೆ.

ಪೇಜ್ ಮತ್ತು ಫೋರ್ಡರ ಹೆಂಡತಿಯರ ವಿನೋದಕ್ಕೆ ಒಳ್ಳೆಯ ಗ್ರಾಸ ಸಿಕ್ಕಿತು! ಅವರು ತಮಗೆ ಬಂದ ಕಾಗದಗಳನ್ನು ಒಬ್ಬರಿಗೊಬ್ಬರು ತೋರಿಸಿ, ಫಾಲ್‌ಸ್ಟಾಫನಿಗೆ ಬುದ್ಧಿ ಕಲಿಸುವ ದಾರಿ ಹುಡುಕುತ್ತಾರೆ. ಮಿಸ್ಟ್ರೆಸ್ ಕ್ವಿಕ್ಲಿ ಹಳ್ಳಿಯ ಹೆಸರಾಂತ ಮಧ್ಯವರ್ತಿ, ಫಾಲ್‌ಸ್ಟಾಫನಿಗೆ ಬೇಕಾದವಳು. ಅವಳ ಮೂಲಕ ಫಾಲ್‌ಸ್ಟಾಫನ ಬಯಕೆಗೆ ತಮ್ಮ ಒಪ್ಪಿಗೆಯಿದೆಯೆಂಬಂತೆ ಉತ್ತೇಜನಕರವಾದ ಉತ್ತರ ಕಳಿಸುತ್ತಾರೆ. ಫೋರ್ಡನ ಹೆಂಡತಿ ಆ ರಾತ್ರಿ ಗಂಡ ಮನೆಯಲ್ಲಿಲ್ಲದ ಹೊತ್ತಿನಲ್ಲಿ ಬಂದು ಕಾಣಬೇಕೆಂನು ನೇರವಾಗಿ ಆಮಂತ್ರಣವನ್ನೇ ಕಳಿಸಿದ್ದಾಳೆ. ಪೇಜನ ಹೆಂಡತಿ ಹೆಚ್ಚು ಪರಿಚಯ ಬೆಳಸಿಕೊಳ್ಳುವ ಉತ್ಸಾಹ ತೋರಿ, ಆಳಿನ ಕೈಯಲ್ಲಿ ಆಗಾಗ್ಗೆ ಸಂದೇಶ ಕಳಿಸುತ್ತಿರಬೇಕೆಂದು ಕೋರಿದ್ದಾಳೆ. ಫಾಲ್‌ಸ್ಟಾಫ್ ಹಿರಿಹಿರಿ ಹಿಗ್ಗಿ, ಇಟ್ಟ ಹೆಜ್ಜೆಯನ್ನು ಮುಂದರಿಸುತ್ತಾನೆ.

ಈ ನಡುವೆ ಫಾಲ್‌ಸ್ಟಾಫನ ವರ್ತನೆಯನ್ನು ಕಂಡು ರೇಗಿದ ಸಿಮ್, ಪಿಸ್ಟಲರು ಗುರುವಿಗೇ ತಿರುಮಂತ್ರ ಕಲಿಸ ಹೊರಡುತ್ತಾರೆ; ಪೇಜ್ ಮತ್ತು ಫೋರ್ಡ್‌ರಿಗೆ ಫಾಲ್‌ಸ್ಟಾಫ್ ಅವರ ಹೆಂಡತಿಯರ ಬೆನ್ನಟ್ಟಿರುವ ಗುಟ್ಟನ್ನು ರಟ್ಟುಮಾಡುತ್ತಾರೆ. ಪೇಜ್ ಸರಸಪ್ರಿಯ, ನಕ್ಕು ಸುಮ್ಮನಾಗುತ್ತಾನೆ. ಆದರೆ ಫೋರ್ಡ್ ಸಂಶಯಪಿಶಾಚಿ. ಅವನಿಗೆ ಸುದ್ದಿಯ ಆಳ ಹುಡುಕಿ ನೋಡುವವರೆಗೆ ಸಮಾಧಾನವಿಲ್ಲ. ವೇಷ ಮರಸಿಕೊಂಡು 'ಮಾಸ್ಟರ್ ಬ್ರೂಕ್' ಎಂಬ ಹೆಸರಿನಿಂದ ಫಾಲ್‌ಸ್ಟಾಫನ ಪರಿಚಯ ಬೆಳಸಿಕೊಳ್ಳುತ್ತಾನೆ. ಫೋರ್ಡನ ಹೆಂಡತಿಗೆ ತಾನು ಮರುಳಾಗಿರುವುದಾಗಿ ಹೇಳಿ, ಹಣದ ಆಸೆ ತೋರಿಸಿ ಫಾಲ್‌ಸ್ಟಾಫ್ ಅವಳನ್ನು ತನಗೆ ಒಲಿಸಿಕೊಡಬೇಕೆಂದು ಬೇಡುತ್ತಾನೆ! ಫಾಲ್‌ಸ್ಟಾಫ್ ಒಪ್ಪಿ ಆ ರಾತ್ರಿ ತಾನು ಅವಳನ್ನು ನೋಡಲಿರುವ ರಹಸ್ಯವನ್ನು ಬಯಲುಮಾಡುತ್ತಾನೆ.

ಆ ರಾತ್ರಿ ಗೊತ್ತಾದ ಹೊತ್ತಿಗೆ ಫಾಲ್‌ಸ್ಟಾಫ್ ಫೋರ್ಡನ ಹೆಂಡತಿಯನ್ನು ಭೇಟಿ ಮಾಡಿ ರಂಗುರಂಗಿನ ಮಾತಿನಿಂದ ಅವಳನ್ನು ರಮಿಸಲು ಆರಂಭಿಸಿದ್ದಾನೆ. ಅವಳು ಪೇಜನ ಹೆಂಡತಿಯ ನೆರವಿನಿಂದ ಅವನ ಮುಖಕ್ಕೆ ಮಸಿ ಬಳಿಯಲು ಮೊದಲೇ ಏರ್ಪಾಡು ಮಾಡಿಟ್ಟಿದ್ದಾಳೆ! ಒಳಗೆ ಫಾಲ್‌ಸ್ಟಾಫನ ಪ್ರೇಮಸಲ್ಲಾಪ ನಡೆದಿರುವಾಗ ಪೇಜನ ಹೆಂಡತಿ ಹಠಾತ್ತನೆ ಅಲ್ಲಿಗೆ ಬರುತ್ತಾಳೆ. ಫಾಲ್‌ಸ್ಟಾಫ್ ಅವಳಿಗೂ ಒಲಿದವನಲ್ಲವೆ! ಅವಳ ಕೈಗೆ ಸಿಕ್ಕಿ ಬೀಳಲಿಚ್ಛಿಸದೆ, ಹೋಗಿ ಪರದೆಯ ಹಿಂದೆ ಅವಿತುಕೊಳ್ಳುತ್ತಾನೆ. ಆದರೆ ಅವಳು ತಂದಿರುವ ಒಂದು ಸುದ್ದಿ ಅವಳ ಬರವಿಗಿಂತಲೂ ಹೆಚ್ಚು ಗಂಡಾಂತರಕಾರಿ: ಫೋರ್ಡ್ ಹೆಂಡತಿಯ ನಡತೆಯನ್ನು ಸಂಶಯಿಸಿ ಹಳ್ಳಿಯ ಗಣ್ಯರೆಲ್ಲರನ್ನೂ ಕಟ್ಟಿಕೊಂಡು ಅಲ್ಲಿಗೆ ಬರುತ್ತಿರುವನೆಂದು ಅವಳು ತಿಳಿಸುತ್ತಾಳೆ. ಫಾಲ್‌ಸ್ಟಾಫನ ಮರ್ಯಾದೆ ಮಣ್ಣು ಪಾಲಾಗುವ ಹೊತ್ತು ಬಂದಿದೆ. ಅಭಿಮಾನ ತೊರೆದು ಪರದೆಯ ಮರೆಯಿಂದ ಹೊರ ಬರುತ್ತಾನೆ. ಆ ಚದುರೆಯರು ಕೊಳೆಬಟ್ಟೆಯ ದೊಡ್ಡ ಗೂಡೆಯೊಂದರಲ್ಲಿ ಆ ಧಡಿಯ ನನ್ನು ಕೂರಿಸಿ, ಮೇಲೆ ಮತ್ತಷ್ಟು ಮೈಲಿಗೆ ಹೇರಿ ಅಗಸನ ಮನೆಗೆಂಬಂತೆ ಸಾಗಹಾಕು ತ್ತಾರೆ. ಆಳುಗಳು ಅದೇ ಹೊತ್ತಿಗೆ ಅಲ್ಲಿಗೆ ಬಂದ ಫೋರ್ಡನ ಮುಂದೆಯೇ ಅವನಿಗೆ ಪತ್ತೆ ಸಿಗದಂತೆ ಆ ಕೊಳೆಗೂಡೆಯನ್ನು ಕೊಂಡೊಯ್ಯುತ್ತಾರೆ. ಅದನ್ನು ಒಗೆದು ಬರಲು ಜಾಗ ಸಹ ಮೊದಲೇ ನಿಶ್ಚಿತವಾಗಿದೆ: ಥೇಮ್ಸ್ ನದಿಯ ಹತ್ತಿರದ ಒಂದು ಕೊಚ್ಚೆಯ ಗುಂಡಿ! ಫೋರ್ಡ್ ಫಾಲ್‌ಸ್ಟಾಫನಿಗಾಗಿ ಮನೆಯನ್ನೆಲ್ಲಾ ತಲಾಷೆ ಮಾಡಿ, ಅವನು ಸಿಗದುದಕ್ಕೆ ಪೆಚ್ಚಾಗಿ ಜತೆಯವರಿಂದ ನಗೆಗೀಡಾಗುತ್ತಾನೆ.

ಫಾಲ್‌ಸ್ಟಾಫನ ಅವಸ್ಥೆ ದೇವರಿಗೇ ಪ್ರೀತಿ! ಗೂಡೆಯಲ್ಲಿ ಕೊಳೆಬಟ್ಟೆಯ ಗಬ್ಬು ನಾತ, ಉಸಿರಡಚು, ಫೋರ್ಡನ ಕೈಗೆ ಸಿಕ್ಕಿ ಬೀಳಬಹುದೆಂಬ ಭಯ; ನಂತರ ಕೊಚ್ಚೆ ಗುಂಡಿಯಲ್ಲಿ ಮುಳುಗಿ ಮೈಯೆಲ್ಲಾ ರಾಡಿ! ಅಂತೂ ಹೇಗೋ ಸತ್ತೆನೊ ಕೆಟ್ಟೆನೊ ಎಂದು ಬದುಕಿ ಬರುತ್ತಾನೆ. ಆದರೆ ಒಂದರ ಹಿಂದೆಯೇ ಇನ್ನೊಂದು ಬೇಸ್ತು ಕಾದಿದೆ. ಮರು ದಿನ ಮುಂಜಾನೆ ಫೋರ್ಡನ ಹೆಂಡತಿ ಕಳೆದ ರಾತ್ರಿಯ ಪ್ರಸಂಗಕ್ಕೆ ವಿಷಾದ ಸೂಚಿಸಿ, ಮತ್ತೆ ಆಗಲೇ ಬಂದು ಹೋಗುವಂತೆ ಕ್ವಿಕ್ಲಿಯ ಮುಖಾಂತರ ಕರೆ ಕಳಿಸಿದ್ದಾಳೆ! ಫಾಲ್‌ಸ್ಟಾಫ್ ಹೋಗದೆ ಉಂಟೆ? ಆದರೆ ಅವನ ಗ್ರಹಗತಿ ಅನುಕೂಲವಾಗಿಲ್ಲ. ಕ್ವಿಕ್ಲಿಯ ಹಿಂದೆಯೇ 'ಮಾಸ್ಟರ್ ಬ್ರೂಕ್' (ಫೋರ್ಡ್) ಬರುತ್ತಾನೆ. ಫೋರ್ಡನ ಹೆಂಡತಿಯನ್ನು ಅವನಿಗೆ



**ಪೇಜನ ಮತ್ತು ಫೋರ್ಡನ ಹೆಂಡತಿಯರ ಒಲವಿನ ಇಕ್ಕಟ್ಟಿನಲ್ಲಿ ಫಾಲ್‌ಸ್ಟಾಫ್**

ಒಲಿಸಿಕೊಡಲು ತಾನು ಒಪ್ಪಿದ್ದ ರಾಯಭಾರ ಸಾಂಗವಾಗಿ ನಡೆದಿದೆಯೆಂದು ಹೇಳಿ ಫಾಲ್‌ಸ್ಟಾಫ್ ಅವನನ್ನು ಮೆಚ್ಚಿಸಬೇಕು. ಸರಿ, ಗೂಡೆಯಲ್ಲಿ ಅವಿತು ಹೋದುದರಿಂದ ಮೊದಲು ಮಾಡಿ ರಾತ್ರಿಯ ಸಾಹಸಗಳೆಲ್ಲವನ್ನೂ ಅತಿರಂಜಿತವಾಗಿ ವರ್ಣಿಸಿ, ಅವನ ಅಸೂಯೆಯನ್ನು ಇದ್ದಿದ್ದೂ ಕೆರಳಿಸಿ, ಮತ್ತೆ ಕಾಣಲಿರುವ ಗುಟ್ಟನ್ನೂ ಬಿಟ್ಟುಕೊಡುತ್ತಾನೆ.

ಎರಡನೆಯ ಭೇಟಿಯಂದೂ ಮತ್ತೆ ಮೊದಲನೆಯದರ ಪುನರಾವರ್ತನೆಯೇ! ಫಾಲ್‌ಸ್ಟಾಫ್ ಫೋರ್ಡನ ಹೆಂಡತಿಯೊಡನೆ ಕೂಡಿರುವಾಗ ಪೇಜನ ಹೆಂಡತಿ ಪ್ರವೇಶಿಸಿ ಫೋರ್ಡ್ ಬರುತ್ತಿರುವ ಸುದ್ದಿಯನ್ನು ಕೊಡುತ್ತಾಳೆ, ಅವನಿಗೆ ಕಳೆದ ಸಲದ ಗೂಡೆಯ ಗುಟ್ಟು ಸಹ ತಿಳಿದಿದೆಯೆನ್ನುತ್ತಾಳೆ. ಪಲಾಯನಕ್ಕೆ ಈ ಬಾರಿ ಬೇರೆ ಏನಾದರೂ ತಂತ್ರ ಹುಡುಕಬೇಕು. ಫೋರ್ಡನ ಮನೆಯ ಹೆಣ್ಣಾಳಿಗೆ ಒಬ್ಬ ಮುದಿ ಅತ್ತೆಯಿದ್ದಾಳೆ. ಗಾತ್ರಾಕಾರಗಳಲ್ಲಿ ಫಾಲ್‌ಸ್ಟಾಫನಂತೆಯೇ ದಡೂತಿ! ಆ ಸರಸಗಾತಿಯರು ಫಾಲ್‌ಸ್ಟಾಫನಿಗೆ ಅವಳ ಲಂಗ ತೊಡಿಸಿ ಹೊರಹಾಕುತ್ತಾರೆ. ಫೋರ್ಡನಿಗೆ ಆ ಮುದುಕಿಯ ತಲೆ ಕಂಡರಾಗದು. ಅವಳು ಮಾಟಗಾತಿಯೆಂದು ಅವನ ಮತ. ಫಾಲ್‌ಸ್ಟಾಫ್ ಅವಳ ವೇಷ ತೊಟ್ಟು ಬಾಗಿಲ ಬಳಿ ಎದುರಾದಾಗ ಫೋರ್ಡ್ 'ಅವಳಿಗೆ' ಎರಡು ಬಿಗಿದು ಕಳಿಸುತ್ತಾನೆ! ಫಾಲ್‌ಸ್ಟಾಫನಿಗಾಗಿ ಮನೆಯ ಮೂಲೆಮೂಲೆಯನ್ನೂ ಹುಡುಕಿ ಈ ಸಲವೂ ನಗೆಪಾಟಲಾಗುತ್ತಾನೆ. ಆಗ ಆ ಹೆಂಡಂದಿರು ತಮ್ಮ ಗಂಡಂದಿರಿಗೆ ನಡೆದುದೆಲ್ಲವನ್ನೂ ಸಾದ್ಯಂತವಾಗಿ ವರದಿ ಮಾಡುತ್ತಾರೆ. ಫೋರ್ಡನ ಸಂಶಯ ಕಳೆಯುತ್ತದೆ. ಎಲ್ಲರೂ ಸೇರಿ ಫಾಲ್‌ಸ್ಟಾಫನಿಗೆ ಅಂತಿಮ ಶಾಸ್ತಿ ಮಾಡುವ ಉಪಾಯ ಹುಡುಕುತ್ತಾರೆ — ಸಾರಂಗದಂತೆ ದೊಡ್ಡ ಕೊಂಬುಳ್ಳ ಹರ್ನ್ ಎಂಬ ಬೇಟೆಗಾರ ವಿಂಡ್ಸರನ ವನದಲ್ಲಿ ಜೀಡು ಬಿಟ್ಟಿರುವನೆಂದು

ಒಂದು ನಂಬಿಕೆ. ಪ್ರೇಮಮಿಲನಕ್ಕೆ ಮನೆಗಿಂತ ಅಡವಿ ವಾಸಿಯಲ್ಲವೆ! ಫಾಲ್‌ಸ್ಟಾಫ್ ರಾತ್ರಿ ಹರ್ನ್‌ನಂತೆ ವೇಷ ತೊಟ್ಟು ಆ ವನಕ್ಕೆ ಬರುವಂತೆ ಪೇಜನ ಮತ್ತು ಫೋರ್ಡನ ಹೆಂಡತಿಯರು ಅವನನ್ನು ಪುಸಲಾಯಿಸುವುದು. ಅವರು ಹಾಗೆ ಕೂಡಿದಾಗ ಇತರರು ಕಿನ್ನರ ಕಿಂಪುರುಷರಂತೆ ವೇಷ ಮರಸಿ ಬಂದು ಫಾಲ್‌ಸ್ಟಾಫನಿಗೆ ಚಿತ್ರಹಿಂಸೆ ಮಾಡುವುದು.

ಈ ನಡುವೆ ವಿಂಡ್ಸರ್‌ನಲ್ಲಿ ಇನ್ನೊಂದು ಉಪನಾಟಕ ನಡೆದಿದೆ. ಪೇಜ್ ದಂಪತಿಗಳಿಗೆ ಆ್ಯನ್ ಎಂಬ ಮಗಳಿದ್ದಾಳೆ. ಆ 'ಊರಿಗೊಬ್ಬ ಪದ್ಮಾವತಿ'ಯ ಕೈ ಹಿಡಿಯಲು ಮುಂದಾಗದ ಗಂಡೇ ಇಲ್ಲ. ಅವರಲ್ಲಿ ಬೆಪ್ಪುತಕ್ಕಡಿ ಸ್ಲೆಂಡರ್ ಒಬ್ಬ. ಷ್ಯಾಲೊ ಹಾಗೂ ವೇಲ್ಸಿನ ಪಾದ್ರಿ ಸರ್ ಹ್ಯೂ ಇವಾನ್ಸ್ ಅವನಿಗೆ ಷಾಗಿರ್ದು; ಹುಡುಗಿಯ ತಂದೆ ಪೇಜನಿಗೂ ಅವನು ಮೆಚ್ಚು. ಇನ್ನೊಬ್ಬ, ಫ್ರಾನ್ಸಿನ ವೈದ್ಯ ಡಾ|| ಕಯಸ್. ಮಹಾ ಜಗಳಗಂಟ; ಪೇವರ ತಾಳ್ಮೆ, ಇಂಗ್ಲಿಷ್ ಭಾಷೆಗಳೆರಡನ್ನೂ ಕೊಂದ ಕೀರ್ತಿ ಅವನದು. ಪೇಜನ ಹೆಂಡತಿಯ ಒತ್ತಾಸೆ ಅವನ ಕಡೆ. ಮೂರನೆಯವನು ಫೆಂಟನ್. ಅವನದು ಪ್ರೇಮಿಯ ಕಣ್ಣು, ಪ್ರೇಮಿಯ ಹೃದಯ. ಅವನ ವ್ಯಕ್ತಿತ್ವದಲ್ಲಿ ವಸಂತದ ಸೌರಭವಿದೆ. ಆ್ಯನ್ ಒಲಿದಿರುವುದು ಅವನಿಗೆ. ತನ್ನ ಪ್ರೇಮ, ಪ್ರಯತ್ನಗಳಷ್ಟೇ ಅವನ ಆಸರೆ. ಇವರೆಲ್ಲರೂ ಮಿಸ್ಟ್ರೆಸ್ ಕ್ವಿಕ್ಲಿಯನ್ನು ಆಶ್ರಯಿಸಿದ್ದಾರೆ. ಆ ಮನೆಮನೆಯ ಚೀಲಿ ತಾನು ಆ್ಯನಳ ಮನಸ್ಸನ್ನು ಚೆನ್ನಾಗಿ ಬಲ್ಲೆನೆನ್ನುತ್ತ ಎಲ್ಲರಿಗೂ ಆಸೆ ತೋರಿಸಿ ಯಾರಿಗೂ ಹೆಚ್ಚು ಪ್ರೋತ್ಸಾಹ ಕೊಡದೆ ಸ್ವಾರ್ಥ ಸಾಧಿಸಿಕೊಳ್ಳುತ್ತಿದ್ದಾಳೆ. ಫಾಲ್‌ಸ್ಟಾಫನಿಗೆ ಬುದ್ಧಿ ಕಲಿಸಲು ವೇಷ ಮರಸಿ ವಿಂಡ್ಸರ್ ವನದಲ್ಲಿ ಸೇರುವುದೆಂದುಕೊಂಡ ರಾತ್ರಿಯೇ ಆ್ಯನಳ ಪ್ರೇಮಿಗಳಲ್ಲಿ ಒಬ್ಬೊಬ್ಬನೂ ತನ್ನ ಬೆಂಬಲಿಗರ ನೆರವಿನಿಂದ ಅವಳನ್ನು ಹಾರಿಸಿಕೊಂಡು ಹೋಗಿ ಮದುವೆಯಾಗುವುದೆಂದು ಸಂಚು ಹೂಡುತ್ತಾನೆ.

ಆ ರಾತ್ರಿ ಎಲ್ಲವೂ ನಿಶ್ಚಯಿಸಿದಂತೆಯೇ ನಡೆಯುತ್ತದೆ. ಫಾಲ್‌ಸ್ಟಾಫ್ ಕೊಂಬಿನ ಮುಖವಾಡ ತೊಟ್ಟು ಹರ್ನ್‌ನ ವೇಷದಲ್ಲಿ ವಿಂಡ್ಸರನ ವನಕ್ಕೆ ಬಂದಿದ್ದಾನೆ. ಪೇಜನ ಮತ್ತು ಫೋರ್ಡನ ಪತ್ನಿಯರು ಅವನನ್ನು ಕೂಡುತ್ತಾರೆ. ಅವನಿಗೆ ಸ್ವರ್ಗ ಮೂರೇ ಗೇಣು! ಆ ಹೊತ್ತಿಗೆ ಸರಿಯಾಗಿ ಗದ್ದಲ ಕೇಳಿಬರುತ್ತದೆ. ಗರತಿಯರಿಬ್ಬರೂ ಹೆದರಿದಂತೆ ಮಾಡಿ ಓಡಿ ಹೋಗುತ್ತಾರೆ. ಕಿನ್ನರಕಿಂಪುರುಷರ ವೇಷ ಧರಿಸಿದ ಊರ ಜನರ ತಂಡ ದೀವಟಿಗೆಗಳನ್ನು ಹಿಡಿದು ನುಗ್ಗಿ ಬಂದು, ಫಾಲ್‌ಸ್ಟಾಫನನ್ನು ಸುತ್ತುಗಟ್ಟಿ, ಚಿವುಟಿ, ಬರೆ ಹಾಕಿ ಹಣ್ಣುಗಾಯಿ ನೀರುಗಾಯಿ ಮಾಡುತ್ತಾರೆ. ಅದೇ ಅವನ ಕೊನೆ. ಪೇಜ್ ಮತ್ತು ಫೋರ್ಡರಿಗೆ ಕೊಂಬು ತೊಡಿಸಹೋದವನು (ಮಿಂಡನ ಬೆನ್ನಟ್ಟಿದ ಹೆಂಡತಿಯನ್ನುಳ್ಳವನ ಸಂಕೇತ ಇದು: cuckold) ತಾನೇ ಕೊಂಬು ತೊಟ್ಟು ನಗೆಗೇಡಿಯಾಗುತ್ತಾನೆ!

ಈ ಗದ್ದಲಗೊಂದಲಗಳ ನಡುವೆ ಹಂಚಿಕೆಯಂತೆ ಆ್ಯನಳ ಮೂವರು ಪ್ರೇಮಿಗಳೂ ಉಟ್ಟ ಬಟ್ಟೆಯ ಬಣ್ಣದ ಗುರುತಿನ ಮೇಲೆ ಒಬ್ಬೊಬ್ಬ 'ಕಿನ್ನರಿ'ಯನ್ನು ಅಪಹರಿಸಿಕೊಂಡು ಹೋಗುತ್ತಾರೆ. ತಮಗೆ ಸಿಕ್ಕಿದವಳು ಆ್ಯನಳೇ ಎಂದು ಸ್ಲೆಂಡರ್ ಮತ್ತು ಡಾ|| ಕಯಸ್ ಬಗೆದಿದ್ದಾರೆ. ಆದರೆ ಸದ್ಯದಲ್ಲೇ ಅವರ ಬಣ್ಣ ಬಯಲಾಗುತ್ತದೆ: ಅವರಿಗೆ ಸಿಕ್ಕಿದವರು ಹೆಣ್ಣುವೇಷದಲ್ಲಿರುವ ಗಂಡುಹುಡುಗರು! ಆ್ಯನ್ ಅವರಿಬ್ಬರಿಗೂ ಮಂಕು ಬೂದಿ ಎರಚಿ, ತಾನೊಲಿದ ಫೆಂಟನ್‌ನನ್ನು ಮದುವೆಯಾಗಿ ಬರುತ್ತಾಳೆ.

## 11. ಜೂಲಿಯಸ್ ಸೀಸರ್

**ರಚನೆ:** 1599-1600. **ಮೊದಲ ಪ್ರಕಟನೆ:** 1623.

**ಆಕರ:** ರೋಮನ್ ಚರಿತ್ರಕಾರ ಪ್ಲೂಟಾರ್ಕನ 'ಪ್ಯಾರಲಲ್ ಲೈವ್ಸ್'ನಲ್ಲಿ ದೊರೆಯುವ ಸೀಸರ್, ಬ್ರೂಟಸ್, ಆ್ಯಂಟನಿ ಅವರ ಜೀವನಚರಿತ್ರೆಗಳು, ಸರ್ ಥಾಮಸ್ ನಾರ್ತನ ಇಂಗ್ಲಿಷ್ ಅನುವಾದದ ಮುಖಾಂತರ.

**ಕಥೆ:** ರೋಮಿನ ಚರಿತ್ರೆಯ ಆಧಾರದ ಮೇಲೆ ಕವಿ ಬರೆದ ಮೂರು ರುದ್ರನಾಟಕಗಳಲ್ಲಿ ಇದು ಮೊದಲನೆಯದು. ಬಂಧ ಹಾಗೂ ಪಾತ್ರರಚನೆಗೆ ಪ್ರಸಿದ್ಧವಾಗಿದೆ. ಕಾವ್ಯವೂ ಸೊಗಸೇ. ಬ್ರೂಟಸನ ಉನ್ನತ ಆದರ್ಶ, ಅದರ ಪ್ರಚೋದನೆಯಿಂದ ದೇಶಹಿತಕ್ಕಾಗಿ ಅವನು ನಡಸಿದ ಸೀಸರನ ಕೊಲೆ, ಆ ಕೊಲೆ ಕೊಟ್ಟ ಫಲ — ಇವು ನಾಟಕದ ವಸ್ತು. ಮನುಷ್ಯನ ಬುದ್ಧಿ ದೊಂಬಿಯಲ್ಲಿ ಹೇಗೆ ವರ್ತಿಸುವುದೆಂಬುದರ ಒಂದು ಪರಿಣಾಮಕಾರಿಯಾದ ಚಿತ್ರಣವೂ ಇಲ್ಲಿ ದೊರೆಯುತ್ತದೆ. ಅದನ್ನು ಹಿಡಿದು ಎತ್ತಂದರೆ ಅತ್ತ ತಿರುಗಿಸಿ ಆಡಿಸುವ ಆ್ಯಂಟನಿಯ ಸೂಕ್ಷ್ಮ, ಚತುರ ವಾಗ್ಮಿತೆ ಜಗತ್ತಿನ ಸಾಹಿತ್ಯದಲ್ಲೇ ಅನುಪಮ.

ಕ್ರಿಸ್ತಪೂರ್ವ 44. ನಾಲ್ಕು ವರ್ಷಗಳ ಹಿಂದೆ ಪಾಂಪೆಯನ್ನು ಸೋಲಿಸಿ ಕೊಂದು ಮೇಲೇರಿದ ರೋಮಿನ ಸೇನಾಪತಿ ಜೂಲಿಯಸ್ ಸೀಸರ್ ಈಗ ದಂಗೆಯೆದ್ದ ಅವನ ಮಕ್ಕಳನ್ನೂ ಸದೆಬಡಿದು ಬಂದಿದ್ದಾನೆ. ಜನಸಾಮಾನ್ಯರಿಗೆ ಅವನು ನಾಯಕಮಣಿ, ಸಾಕ್ಷಾತ್ ದೇವರು. ಅವನ ವಿಜಯ ಅವರಿಗೆ ಸಂಭ್ರಮದ ಸಂಗತಿ. ಆದರೆ ರೋಮಿನ ಶಾಸಕರಲ್ಲಿ ಹಲವರಿಗೆ ಸೀಸರನ ಉಚ್ಛ್ರಾಯ ಹಿಡಿಸದು. ಅವರಲ್ಲಿ ಕ್ಯಾಷಿಯಸ್ ಮುಖ್ಯ. ಅವನಿಗೆ ಸೀಸರನ ಏಳಿಗೆಯನ್ನು ಕಂಡು ಒಳಗೊಳಗೇ ಕರುಬು. ಜೊತೆಗೆ ಸ್ವಭಾವದಿಂದ ಗರ್ವಿಷ್ಠನಾದ ಸೀಸರನಲ್ಲಿ ಪಾಂಪೆಯ ಪತನಾನಂತರ ಅಹಂಕಾರ ಹೆಚ್ಚಿದ್ದು ಅವನೆಲ್ಲಿ ನಿರಂಕುಶಪ್ರಭುವಾಗಿ ಬಿಡುವನೋ ಎಂಬ ಸ್ವಾಭಾವಿಕವಾದ ಭಯವೂ ಸೇರಿದೆ. ಕಾಸ್ಕ, ಸಿನ್ನ ಮುಂತಾದವರೊಡನೆ ಅವನು ಸೀಸರನ ಅಧಃಪತನಕ್ಕೆ ಗುಟ್ಟಾಗಿ ಪಿತೂರಿ ನಡಸಿದ್ದಾನೆ. ಬ್ರೂಟಸ್ ರೋಮಿನ ಒಬ್ಬ ಗಣ್ಯಶಾಸಕ. ಆತ ಮಹಾ ಆದರ್ಶವಾದಿ, 'ಮನುಷ್ಯನೆಂದರೆ ಇವನಯ್ಯ!' ಎನ್ನುವಷ್ಟರಮಟ್ಟಿನ ಗುಣಶ್ರೇಷ್ಠ, ಜನರಿಗೆ ಅಚ್ಚುಮೆಚ್ಚು. ಕ್ಯಾಷಿಯಸನ ಸಂಚು ಹಣ್ಣಾಗಿ ಅದು ಜನಮಾನ್ಯವಾಗಬೇಕಾದರೆ ಅವನು ಅದಕ್ಕೆ ಬ್ರೂಟಸನ ಒಲವು, ಬೆಂಬಲಗಳನ್ನು ದೊರಕಿಸಿಕೊಳ್ಳಬೇಕು.

ರೋಮಿನಲ್ಲಿ ವರ್ಷಕ್ಕೊಮ್ಮೆ ಫಲದೇವತೆ ಲೂಪರ್ಕಸನ ಉತ್ಸವ ನಡೆಯುವ ಪರಿಪಾಟವಿದೆ. ಈ ಸಲದ ಉತ್ಸವದಲ್ಲಿ ಸೀಸರನ ಮೆರವಣಿಗೆ ಹೊರಟಿರುವಾಗ ಒಬ್ಬ ಕಣಿಗಾರ ಅಡ್ಡ ಬಂದು ಅವನಿಗೆ ಮುಂಬರುವ 'ಮಾರ್ಚ್ ಹದಿನೈದರ ಬಗ್ಗೆ ಜೋಕೆ' ಎಂದು ಮುನ್ನೆಚ್ಚರಿಕೆ ಕೊಡುತ್ತಾನೆ. ಸೀಸರ್ ನಕ್ಕು ಅವನನ್ನು ಕನಸಿಗನೆಂದು ಅವಗಣಿಸುತ್ತಾನೆ. ಅದೇ ಹೊತ್ತಿಗೆ ಅಲ್ಲೊಂದು ಸಣ್ಣ ನಾಟಕ ನಡೆಯುತ್ತದೆ. ಸೀಸರನ ನೆಚ್ಚಿನವರಲ್ಲೊಬ್ಬನಾದ ಮಾರ್ಕ್ ಆ್ಯಂಟನಿ ಅವನಿಗೆ ಮೂರು ಬಾರಿ ಕಿರೀಟ ಒಪ್ಪಿಸಲು ಮುಂದಾಗುತ್ತಾನೆ. ಸೀಸರ್ ಕೊಳ್ಳಲೊಪ್ಪದೆ ಮೂರು ಬಾರಿಯೂ ಅದನ್ನು ನಿರಾಕರಿಸುತ್ತಾನೆ. ನೆರವಿ ಚಪ್ಪಾಳೆ ತಟ್ಟಿ ಅವನ ವರ್ತನೆಗೆ ಪ್ರಶಂಸೆ ಸೂಚಿಸುತ್ತದೆ. ಇದು ತಾನು ದೊರೆಯಾಗುವ ಬಗ್ಗೆ ಜನರ ಇಂಗಿತನೆಂತೆಂದು ತಿಳಿಯಲು ಸೀಸರ್ ಹೂಡಿಸಿದ ಆಟ ಅಷ್ಟೆ!

ಬ್ರೂಟಸನೊಬ್ಬನೇ ಈ ಉತ್ಸವದಲ್ಲಿ ಭಾಗವಹಿಸದೆ ದೂರ ಉಳಿದಿದ್ದಾನೆ. ಅವನಿಗೆ ಸೀಸರನ ಬಗ್ಗೆ ಗಾಢವಾದ ಒಲವಿದೆ. ನಿಜ. ಆದರೆ ದಿನೇ ದಿನೇ ಬೆಳೆಯುತ್ತಿರುವ ಅವನ ಮಹತ್ವಾಕಾಂಕ್ಷೆ, ಜನ ಅವನಿಗೆ ಪಟ್ಟ ಕಟ್ಟಿ ನಿರಂಕುಶಪ್ರಭುತ್ವಕ್ಕೆ ಎಡೆ ಮಾಡಿಕೊಡಬಹುವೆಂಬ ಸಂಶಯ ಬ್ರೂಟಸನನ್ನು ಚಿಂತಾಕುಲನನ್ನಾಗಿ ಮಾಡಿವೆ. ಕ್ಯಾಷಿಯಸ್ ಇಂತಹ ಸಮಯವನ್ನೇ ಸಾಧಿಸಿ ಅವನ ಬಳಿಸಾರಿ ಭಾವನೆಗಳನ್ನು ಕೆಣಕುತ್ತಾನೆ (ಪುಟ 204). ಸೀಸರನ ಹಿರಿಮೆಯನ್ನು ಅಲ್ಲಗಳೆದು, ಕಲಾಸಸನಂತೆ ಅವನು ಬೆಳೆದು ನಿಂತು ತಾವು ಅವನ ಕಾಲ ನಡುವೆ ಕೀಳರಾಗಿ ಓಡಾಡಬೇಕಾಗಿ ಬಂದ ದುರವಸ್ಥೆಯನ್ನು ನೆನಪು ಮಾಡಿಕೊಡುತ್ತಾನೆ. ನಿನಗಿಲ್ಲದ ಯಾವ ಅರ್ಹತೆ ಅವನಿಗಿದೆಯೆಂದು ಸವಾಲು ಹಾಕುತ್ತಾನೆ. ಬ್ರೂಟಸ್ ಘನವಂತ, ರೋಮಿನ ಹಿತಗೌರವಗಳಿಗಾಗಿ ಅವನು ಏನನ್ನು ಮಾಡಲೂ ಸಿದ್ಧ. ಕ್ಯಾಷಿಯಸನ ಪ್ರಚೋದನೆ ಅವನನ್ನು ವಿಚಾರಪರನನ್ನಾಗಿ ಮಾಡುತ್ತದೆ. ಮತ್ತೆ ಸೇರಿ ಮಾತು ಮುಂದುವರಿಸುವುದೆಂದು ಗೊತ್ತುಮಾಡುತ್ತಾರೆ.

ಕ್ಯಾಷಿಯಸ್ ಬ್ರೂಟಸನನ್ನು ಮುಪ್ಪಾಗ ಗೆದ್ದದ್ದಾಗಿದೆ; ಇನ್ನು ಮರುಭೇಟಿಯಂದು ಪೂರ್ಣವಾಗಿ ತನ್ನ ಕಡೆ ಒಲಿಸಿಕೊಳ್ಳಲು ಅಣಿಮಾಡಿಕೊಳ್ಳುತ್ತಾನೆ. ರೋಮಿನ ಜನತೆ ತಮ್ಮ ವಿಮುಕ್ತಿಗಾಗಿ ಬ್ರೂಟಸನನ್ನು ನೆಚ್ಚಿದೆಯೆಂದು ತೋರಿಸುವ ಗುಪ್ತಪತ್ರಗಳನ್ನು ಬರೆಸಿ, ಆ ರಾತ್ರಿ ಬ್ರೂಟಸನ ಕೋಣೆಯಲ್ಲಿ ಹಾಕಿಸುತ್ತಾನೆ. ಈ ನಡುವೆ ಪ್ರಕೃತಿಯಲ್ಲಿ ಕಂಡು ಕೇಳದ ಭಯಂಕರ ವೈಲಕ್ಷಣ್ಯಗಳು ಮೇಳೈಸಿವೆ. ಆಕಾಶದಿಂದ ರಕ್ತದ ಮಳೆ ಸುರಿದಿದೆ, ಬಿರುಗಾಳಿ ಬೆಂಕಿಯುಗುಳುತ್ತ ಬೀಸಿದೆ, ಗೂಬೆ ಹಗಲ ಹೊತ್ತೇ ಕಿರಿಚಿದೆ. ಇವು ಬರಲಿರುವ ಯಾವದೋ ಮಹಾ ವಿಪ್ಲವದ ಮುಂಗುರುತುಗಳೆಂದು ಜನ ಹೆದರಿದ್ದಾರೆ.

ಮಾರ್ಚ್ ಹದಿನೈದರ ಹಿಂದಿನ ರಾತ್ರಿ. ಬೆಳಕು ಹರಿಯುವ ಮುನ್ನ ಸಂಚುಗಾರರೆಲ್ಲರೂ ಬ್ರೂಟಸನ ಮನೆಯಲ್ಲಿ ಸೇರುತ್ತಾರೆ. ಇಡೀ ರಾತ್ರಿ ಅವನಿಗೆ ನಿದ್ದೆ ಹತ್ತಿಲ್ಲ. ರೋಮಿನದೇ ಚಿಂತೆ. ಹಿಂದೆ ತನ್ನ ಪೂರ್ವಿಕರು ಟಾರ್ಕ್ವಿನ್ ರೋಮಿನ ರಾಜನೆಂದುಕೊಂಡಾಗ ಅವನನ್ನು ಹೊಡೆದಟ್ಟಿ ರೋಮನ್ನು ಕಾದಿದ್ದರು. ಈಗ ಅಂಥದೇ ಇನ್ನೊಂದು ಸನ್ನಿವೇಶ; ತನ್ನ ಸರದಿ, ತನ್ನ ಪಾತ್ರ. ಈ ಘನತೆಯ ಅರಿವೇ ಅವನ ದೌರ್ಬಲ್ಯವಾಗಿ ಸೀಸರನ ಹತ್ಯೆಯ ಸಂಚಿಗೆ ಅವನನ್ನು ಒಪ್ಪಿಸುತ್ತದೆ. ಆದರೆ ಅಲ್ಲಿ ಸಹ ಅವನಿಗೆ ತನ್ನದೇ ಆದರ್ಶ. ಅವನು ಕಸಾಯಿ ಅಂಗಡಿಯ ಕಟುಕನಲ್ಲ, ದೇವಮಂದಿರದ ಬಲಿಗಾರ. ಸೀಸರನನ್ನು ಬೇಟೆನಾಯಿಗಿಕ್ಕುವ ಮಿಗದಂತೆ ಕಡಿಯಬಾರದು, ದೇವಭೋಜ್ಯವಾಗುವಂತೆ ಕಡೆಯಬೇಕು. ಮಾರ್ಕ್ ಆ್ಯಂಟನಿಯನ್ನೂ ಕೊಲ್ಲಬೇಕೆನ್ನುವ ಕ್ಯಾಷಿಯಸನ ಸೂಚನೆಗೆ ಅವನು ಒಪ್ಪ.

ಅತ್ತ ಸೀಸರನ ಮನೆಯಲ್ಲಿ ಅದೇ ರಾತ್ರಿ ಪತ್ನಿ ಕ್ಯಾಲ್ಪರ್ನಿಯಳಿಗೆ ದುಸ್ವಪ್ನ : ಗಂಡನ ವಿಗ್ರಹ ಹತ್ತು ಹೋಳಾಗಿ ಒಡೆದು ನೆತ್ತರ ಕಾಲುವೆ ಹರಿದಂತೆ, ರೋಮನರು ಜಿಮ್ಮುತ್ತ ಬಂದು ಅದರಲ್ಲಿ ಕೈ ತೊಳೆದಂತೆ! ಸೀಸರ್ ಆ ದಿನ ಹೊರಹೋಗಬಾರದೆಂದು ಬೆಳಗಾಗ ಕ್ಯಾಲ್ಪರ್ನಿಯ ಗೋಗರೆಯುತ್ತಾಳೆ. ಊರ ಪೂಜಾರಿಗಳು ಸಹ ಅದೇ ಭವಿಷ್ಯ ಕಳಿಸಿದ್ದಾರೆ. ಸೀಸರ್ ಒಂದು ಕ್ಷಣ ಹಾಗೆಯೇ ಆಗಲೆನ್ನುತ್ತಾನೆ. ಆದರೆ ಅಷ್ಟರಲ್ಲೇ ಅವನನ್ನು ಶಾಸನಸಭೆಗೆ ಕರೆದೊಯ್ಯಲು ಬಂದ ಡೀಷ್ಯಸ್ ಬ್ರೂಟಸ್ ಆ ಕನಸಿಗೆ ಬೇರೆಯೇ

ಒಂದು ಅರ್ಥ ಕಲ್ಪಿಸುತ್ತಾನೆ. ಅದು ಸೀಸರನ ರಕ್ತದಿಂದ ರೋಮ್ ಹೊಸ ಜೀವ ಪಡೆಯು ಲಿರುವ ಸಂಕೇತವೆನ್ನುತ್ತಾನೆ. ಆ ದಿನ ಶಾಸಕರು ಸೀಸರನಿಗೆ ಕಿರೀಟವಿಟ್ಟು ಸರ್ವಾಧಿ ಕಾರಿಯ ಪಟ್ಟ ಕಟ್ಟಲಿರುವರೆಂದೂ ಸೀಸರ್ ಬಾರದೆ ಉಳಿದರೆ ಅವರ ಮನಸ್ಸು ಬದಲಾಗ ಬಹುದೆಂದೂ ಹೇಳುತ್ತಾನೆ. ವಿಧಿಯ ಕೈ ಮೇಲಾಗುತ್ತದೆ. ಸೀಸರ್ ನಿರ್ಧಾರ ಬದಲಿಸಿ ಹೊರಟು ನಿಲ್ಲುತ್ತಾನೆ. ಅವನನ್ನು ಕರೆದೊಯ್ಯಲು ಉಳಿದ ಸಂಚುಗಾರರೂ ಬರುತ್ತಾರೆ.

ಆರ್ಟೆಮಿಡೋರಸ್ ಎಂಬಾತನಿಗೆ ಸಂಚಿನ ಗುಟ್ಟು ತಿಳಿದಿದೆ. ಆದರ ಒಕ್ಕಣೆ ಬರೆದು ದಾರಿಯಲ್ಲಿ ಸೀಸರನ ಕೈಗಿಡುತ್ತಾನೆ. ಸೀಸರನಿಗೆ ಅದನ್ನು ಓದಲು ಹೊತ್ತಿಲ್ಲ, ಅದು ಓದುವ ಸ್ಥಳವಲ್ಲ. ಆ ಪತ್ರ ಅವನ ಕೈಯಲ್ಲೇ ಉಳಿಯುತ್ತದೆ.

ಪ್ರಾಯಶಃ ಸೀಸರನನ್ನು ಯಾರಾದರೂ ಉಳಿಸಬಹುದಾದರೆ ಅವನು ಮಾರ್ಕ್ ಆ್ಯಂಟನಿ. ಇದನ್ನು ಬಲ್ಲ ಸಂಚುಗಾರರು ತಮ್ಮಲ್ಲೊಬ್ಬನು ಅವನನ್ನು ಬೇರೊಂದೆಡೆಗೆ ಕರೆದೊಯ್ಯುವಂತೆ ಏರ್ಪಡಿಸಿದ್ದಾರೆ. ಕೊಲೆಗೆ ನೆಪ? ಅದನ್ನೂ ಯೋಚಿಸಿಯಾಗಿದೆ. ಪಬ್ಲಿಯಸ್ ಸಿಂಬರ್ ಎಂಬವನನ್ನು ಸೀಸರ್ ಗಡೀಪಾರು ಮಾಡಿದ್ದಾನೆ. ಅವನ ತಮ್ಮ ಅಣ್ಣನ ಪರವಾಗಿ ಕ್ಷಮಾಯಾಚನೆ ಬೇಡಿ ಮನವಿ ಸಲ್ಲಿಸುತ್ತಾನೆ. ಸೀಸರ್ ನಿರ್ಧಾರ ಬದಲಿಸುವುದು ಸಾಧ್ಯವಿಲ್ಲವೆಂದು ಕಟುವಾಗಿ ನುಡಿಯುತ್ತಾನೆ. ಬ್ರೂಟಸ್ ಆದಿಯಾಗಿ ಸಂಚುಗಾರರೆಲ್ಲರೂ ಅಪರಾಧಿಗೆ ಕ್ಷಮೆ ದೊರೆಯಲೆಂದು ಬೇಡುತ್ತಾರೆ. ಅವರ ಪ್ರಯತ್ನ ಆಲಿಂಪಸ್ ಪರ್ವತವನ್ನೆತ್ತಿದಂತೆ! ಆಗ ಕಾಸ್ಕ ಬಾಯಿನ ಬದಲು ಕೈ ಮಾತಾಡಲೆನ್ನುತ್ತ ಸೀಸರನ ಎದೆಗೆ ಇರಿಯುತ್ತಾನೆ. ಉಳಿದವರೂ ಒಂದೊಂದು ಏಟು ಹಾಕುತ್ತಾರೆ. ಕೊನೆಯ ಏಟು ಬ್ರೂಟಸನದು. ಸೀಸರ್ ಆ ಆಪ್ತಮಿತ್ರನಿಂದ ಅದನ್ನು ನಿರೀಕ್ಷಿಸಿರಲಿಲ್ಲ. 'ಏನು ನೀನುವೇ ಬ್ರೂಟಸ್? ಹಾಗಾದರೆ ಸೀಸರ್ ಉರುಳಲಿ' ಎನ್ನುತ್ತ ಕುಸಿದು ಬಿದ್ದು ಪ್ರಾಣ ಬಿಡುತ್ತಾನೆ, ಅದೂ ತಾನು ಕೊಂದಿದ್ದ ಪಾಂಪೆಯ ವಿಗ್ರಹದಡಿಯಲ್ಲೇ! ಎಂತಹ ಅಣಕ!

ಸೀಸರನ ಕೊಲೆಯ ನಂತರ ಆ್ಯಂಟನಿ ಹೊರಬಂದು ಸಂಚುಗಾರರಿಗೆ ಅಧೀನ ನಾದಂತೆ ನಟಿಸಿ, ಅವರನ್ನು ಒಲಿಸಿಕೊಳ್ಳುತ್ತಾನೆ. ಸೀಸರನ ಶವಸಂಸ್ಕಾರದಲ್ಲಿ ತನಗೂ ಮಾತನಾಡಿ ಅವನ ಸ್ಮೃತಿಗೆ ಗೌರವ ಸಲ್ಲಿಸುವ ಅವಕಾಶ ಕೊಡಿರೆಂದು ಬೇಡುತ್ತಾನೆ. ಕ್ಯಾಷಿಯಸ್ ವಾಸ್ತವವಾದಿ. ಅದರಿಂದ ಹೇಗೋ ಏನೋ ಎಂಬ ಅಂಜಿಕೆ ಅವನದು. ಆದರೆ ಬ್ರೂಟಸ್ ಸಮದರ್ಶಿ, ಒಪ್ಪಿ ಅದಕ್ಕೆ ಅನುವು ಮಾಡಿಕೊಡುತ್ತಾನೆ.

ಮೊದಲು ಬ್ರೂಟಸನ ವಕ್ತವ್ಯ. ಸೀಸರನ ಬಗ್ಗೆ ತನಗಿದ್ದ ಪ್ರೀತಿಗೌರವಗಳನ್ನು ಎತ್ತಿ ಆಡಿ, ಅವನಿಗಿಂತ ಮೇಲಾಗಿ ತಾನು ರೋಮನ್ನು ಪ್ರೀತಿಸಿದ ಕಾರಣ ಅವನನ್ನು ಕೊಲ್ಲ ಬೇಕಾಯಿತೆನ್ನುತ್ತಾನೆ. ಜನ ಅವನ ಕೃತ್ಯವನ್ನು ಮೆಚ್ಚಿ ಜಯಘೋಷ ಮಾಡುತ್ತಾರೆ. ತನ್ನ ನಂತರ ಮಾತಾಡಲಿರುವ ಆ್ಯಂಟನಿಗೂ ಕಿವಿಗೊಡಬೇಕೆಂದು ಹೇಳಿ ಬ್ರೂಟಸ್ ಹೊರಡುತ್ತಾನೆ. ಆ್ಯಂಟನಿ ತಾನು ಒರಟನೆಂದುಕೊಂಡರೂ ಸೂಕ್ಷ್ಮ, ವ್ಯಂಗ್ಯಗಳನ್ನು ಬೆರಸಿ ಮಾತನಾಡುತ್ತಾನೆ. ಅತ್ಯಂತ ಚತುರತೆಯಿಂದ ಸೀಸರ್ ಮಹತ್ವಾಕಾಂಕ್ಷಿ ಯಾಗಿರಲಿಲ್ಲವೆಂದು ಸಾಧಿಸುತ್ತಾನೆ. ಅವನು ಜನತಾಪ್ರೇಮಿಯಾಗಿದ್ದನೆಂದು ತೋರಿಸಿ ಜನರನ್ನು ಕೊಲೆಗಾರರ ವಿರುದ್ಧ ಎತ್ತಿ ಕಟ್ಟುತ್ತಾನೆ. ದೊಂಬಿ ಅವನ ಮಾತಿನ ಗಾರುಡಿಗೆ ಮರುಳಾಗಿ ದಂಗೆಯೆದ್ದು, ಕೊಲೆಗಾರರ ಮನೆಮಠಗಳಿಗೆ ಬೆಂಕಿಯಿಡುತ್ತದೆ (ಪುಟ 210).

ಆ್ಯಂಟನಿ ಸೀಸರನ ಬಂಧು ಆಕ್ಟೇವಿಯಸ್ ಮತ್ತು ಲೆಪಿಡಸರೊಡನೆ ಕೈಕೂಡಿಸಿ ರೋಮಿನ ಆಡಳಿತ ವಹಿಸಿಕೊಳ್ಳುತ್ತಾನೆ. ಬ್ರೂಟಸ್, ಕ್ಯಾಷಿಯಸರು ತಮ್ಮ ಸೈನ್ಯದೊಡನೆ ಓಡಿಹೋಗಿ ರೋಮಿನಾಚೆಯ ಸಾರ್ಡಿನ್‌ನಲ್ಲಿ ಬೀಡುಬಿಟ್ಟಿದ್ದಾರೆ. ಅಲ್ಲಿಂದ ಆ್ಯಂಟನಿಯ ಗುಂಪಿನ ವಿರುದ್ಧ ಕದನ ಹೂಡಿ ರೋಮಿನ ಬಿಡುಗಡೆ ಮಾಡುವುದು ಬ್ರೂಟಸನ ಉದ್ದೇಶ. ಆದರೆ ದುರ್ದೈವ ಅವನನ್ನು ಕಾಡಿದೆ. ನೆಚ್ಚಿದ ಕಡೆಯಿಂದ ನೆರವು ಒದಗದು. ಸೈನ್ಯ ತಪ್ಪುಹಾದಿಗಿಳಿಯುತ್ತದೆ. ಸ್ವತಃ ಕ್ಯಾಷಿಯಸನೇ ಅಪ್ರಾಮಾಣಿಕನಾದ ಸಂಶಯ ಬಂದು ಇಬ್ಬರ ನಡುವೆ ಮನಸ್ತಾಪ ಹುಟ್ಟುತ್ತದೆ. ಇವೆಲ್ಲಕ್ಕಿಂತ ದೊಡ್ಡ ಪೆಟ್ಟೆಂದರೆ ಒಲವಿನ ಮಡದಿ ಪೋರ್ಷಿಯಾ ಅವನ ಚಿಂತೆಯಲ್ಲಿ ಆತ್ಮಹತ್ಯೆ ಮಾಡಿಕೊಂಡ ಸುದ್ದಿ ಬರುತ್ತದೆ. ಅವರ ನೆರಳಿನಲ್ಲಿ ಕ್ಯಾಷಿಯಸ್ ಬ್ರೂಟಸ್ ವಿರಸ ತೊರೆದು ಹೇಗೋ ಒಂದಾಗುತ್ತಾರೆ. ಆದರೆ ಅವರ ಕದನತಂತ್ರ ತಪ್ಪುತ್ತದೆ. ಸಾರ್ಡಿನನ ಗುಡ್ಡಗಾಡಿನ ಆಸರೆ ತೊರೆದು ಫಿಲಿಪ್ಪಿಯ ಬಯಲಿನಲ್ಲಿ ಕದನ ಹೂಡುವುದೆಂದು ಬ್ರೂಟಸ್. ಕ್ಯಾಷಿಯಸ್ ಉತ್ತಮ ಸೇನಾನಿ. ಆ ಸಲಹೆ ಸೂಕ್ತವಲ್ಲವೆಂದು ಬಲ್ಲ. ಆದರೂ ಮತ್ತೆ ಭಿನ್ನಾಭಿಪ್ರಾಯ ಬೇಡವೆಂದು ಅದಕ್ಕೆ ಒಪ್ಪುತ್ತಾನೆ. ಕದನದ ಹಿಂದಿನ ರಾತ್ರಿ ಬ್ರೂಟಸನಿಗೆ ಸೀಸರನ ಪ್ರೇತ ಕಾಣಿಸಿಕೊಂಡು ಮತ್ತೆ ಫಿಲಿಪ್ಪಿಯಲ್ಲಿ ನೋಡುವುದಾಗಿ ಹೇಳಿ ಹೋಗುತ್ತದೆ.

ಫಿಲಿಪ್ಪಿಯ ಬಯಲಿನಲ್ಲಿ ಆಕ್ಟೇವಿಯಸನ ಎದುರು ಬ್ರೂಟಸನ ಪಡೆ, ಆ್ಯಂಟನಿಯ ಎದುರು ಕ್ಯಾಷಿಯಸನ ಪಡೆ. ಮೊದಲ ಹಂತದಲ್ಲಿ ಬ್ರೂಟಸನಿಗೆ ಗೆಲುವಾಗುತ್ತದೆ. ಕ್ಯಾಷಿಯಸನಿಗೆ ಅದರ ಸುದ್ದಿ ಕೊಡಲು ಹೋದ ಬ್ರೂಟಸನ ಸೈನಿಕರು ಅವನನ್ನು ಸುತ್ತುಗಟ್ಟಿದ್ದ ಆ್ಯಂಟನಿಯ ಪಡೆಯನ್ನು ಮುರಿದು ಜಯಘೋಷ ಮಾಡುತ್ತ ಒಳನುಗ್ಗುತ್ತಾರೆ. ಕ್ಯಾಷಿಯಸ್ ಶತ್ರುಗಳೇ ಹತ್ತಿರಾದರೆಂದು ತಪ್ಪು ಬಗೆದು ಸೀಸರನ ಕೊಲೆಗೆ ಪ್ರತೀಕಾರವೆಂಬಂತೆ ಅವನನ್ನು ಇರಿದ ಕತ್ತಿಯಿಂದಲೇ ವೀರಹತ್ಯೆ ಮಾಡಿಕೊಂಡು ಸಾಯುತ್ತಾನೆ.

ಬ್ರೂಟಸನಲ್ಲಿ ಒಂದಿಷ್ಟೂ ಹುರುಪುಳಿದಿಲ್ಲ. ಸಂಜೆಯ ಹೊತ್ತಿಗೆ ಅವನ ಸೈನಿಕರಲ್ಲಿ ಸತ್ತವರೆಷ್ಟೊ, ಸೆರೆಯಾದವರೆಷ್ಟೊ. ಸೋಲು ಸಿದ್ಧವೆಂಬುದನ್ನು ಸಾರಲೆಂಬಂತೆ ಸೀಸರಿನ ಪ್ರೇತ ಮತ್ತೊಮ್ಮೆ ಮುಖ ತೋರಿಸಿ ಹೋಗುತ್ತದೆ. ಆಳಿನ ಕೈಯಲ್ಲಿ ಕತ್ತಿ ಹಿಡಿಸಿ ಅದರ ಮೇಲೆ ನುಗ್ಗಿ ಕ್ಯಾಷಿಯಸ್‌ನಂತೆ ತಾನೂ ವೀರಮರಣ ಕಾಣುತ್ತಾನೆ. ಸಾಯುವ ಮುನ್ನ ಅವನು ಆಡುವ ಕೊನೆಯ ಮಾತಿದು : 'ನಿನ್ನನ್ನು ಕೊಂದಾಗ ಈಗಿರುವ ಇಚ್ಛೆಯಲ್ಲಿ ಅರ್ಧದಷ್ಟೂ ಇರಲಿಲ್ಲ, ಸೀಸರ್'.

## 12. ಆ್ಯಸ್ ಯು ಲೈಕ್ ಇಟ್

**ರಚನೆ :** 1599-1600. **ಮೊದಲ ಪ್ರಕಟನೆ :** 1623.

**ಆಕರ:** ಚಾಸರನದಲ್ಲವಾದರೂ ಅವನ ಹೆಸರಿಗೆ ಅಂಟಿಕೊಂಡಿರುವ 'ದಿ ಟೇಲ್ ಆಫ್ ಗ್ಯಾಮೆಲಿನ್' ಕಾವ್ಯದ ಆಧಾರದ ಮೇಲೆ ಥಾಮಸ್ ಲಾಡ್ಜ್ ಬರೆದ 'ರೊಸಲಿಂಡ್ — ಯೂಫುಯೆಸ್ ಗೋಲ್ಡನ್ ಲಿಗಸಿ' ಎಂಬ ರಮ್ಯಕೃತಿ. ನಾಟಕಕ್ಕೆ ತಿಲಕವಿಡುವ ಜೇಕ್ವಿಸ್, ಟಚ್‌ಸ್ಟನ್ ಮುಂತಾದ ಹಲವು ಪಾತ್ರಗಳು ಷೇಕ್ಸ್‌ಪಿಯರನ ಸ್ವಂತ ಕಲ್ಪನೆ.

**ಕಥೆ**: ಗ್ರಾಮಜೀವನದ ಉಚ್ಚತೆಯನ್ನು ಅದರ ಹಸುರು ಹಿನ್ನೆಲೆಯಲ್ಲಿಯೇ ಎತ್ತಿ ಹಿಡಿಯುವ ಈ ಕೃತಿ ಮಾತಾಯ ಪ್ರಕೃತಿಗೆ ಕವಿ ಸಲ್ಲಿಸಿದ ಸಂಭಾವನೆಯಂತಿದೆ. ಇದರ ನೈಸಿರಿಯಲ್ಲಿ ಹಳ್ಳಿಗಾಡಿನ ಹರಹಿದೆ, ಹಸನಿದೆ. ಬಳಸಿದ ಮಾಧ್ಯಮ ಬಹುವಾಗಿ ಗದ್ಯ—ಹೃದ್ಯವಾದ ಗದ್ಯ. ರೊಸಲಿಂಡ್ ನಾಟಕದ ಜೀವಾಳ. ಆ ಜಾಣೆ ಷೇಕ್ಸ್‌ಪಿಯರನ ಹರ್ಷನಾಟಕಗಳ ನಾಯಿಕೆಯರಲ್ಲಿ ಮೊದಲ ಸ್ಥಾನವನ್ನು 'ಟ್ವೆಲ್ಫ್ತ್ ನೈಟ್'ನ ವಯೋಲಳೊಂದಿಗೆ ಸಮಭಾಗಿಯಾಗಿ ಹಂಚಿಕೊಂಡಿದ್ದಾಳೆ. ಇತರ ಪಾತ್ರಗಳಲ್ಲಿ ಕಚ್ಚಿಸಿಂದಲೂ ಕಹಿ ಹಿಂಡಬಲ್ಲ ನಿರಾಶಾವಾದಿ ಜೇಕ್ವಿಸ್ ಮುಖ್ಯ. ನಾಟಕದ ಕಥೆ ಅಲ್ಪ, ಅಬದ್ಧ ಸಹ.

ಫ್ರಾನ್ಸ್‌ನಲ್ಲಿ ಒಂದು ಪ್ರಾಂತ, ಅದಕ್ಕೆ ಫ್ರೆಡ್‌ರಿಕ್ ಎಂಬ ದೊರೆ. ಫ್ರೆಡ್‌ರಿಕ್‌ನಿಗೆ ಸಿಂಹಾಸನ ನ್ಯಾಯಬದ್ಧವಾಗಿ ಬಂದದ್ದಲ್ಲ. ಹಿಂದೆ ಅವನ ಅಣ್ಣ 'ಹಿರಿಯ ದೊರೆ' ಅದನ್ನು ಆಳುತ್ತಿದ್ದ. ತಮ್ಮ ಫ್ರೆಡ್‌ರಿಕ್ ಒರಟ, ಅಸೂಯಾಪರ. ಸಾಧುಸ್ವಭಾವದ ಅಣ್ಣನನ್ನು ಕೃತ್ರಿಮದಿಂದ ಪದಚ್ಯುತಗೊಳಿಸಿ ತಾನು ಗದ್ದುಗೆಯೇರಿ ಕುಳಿತಿದ್ದಾನೆ. ದೇಶಭ್ರಷ್ಟನಾದ 'ಹಿರಿಯ ದೊರೆ' ತನ್ನ ನೆಚ್ಚಿನ ಆಸ್ಥಾನಿಕರಲ್ಲಿ ಕೆಲವರನ್ನು ಕೂಡಿಕೊಂಡು ಆರ್ಡೆನ್ ಬನಕ್ಕೆ ಹೋಗಿ ನೆಲಸಿದ್ದಾನೆ. ನಿಸರ್ಗದುಡಿಯ ಆ ಶಾಂತ, ಸರಳ ಜೀವನದಲ್ಲೇ ಅವನ ಸುಖದ ಬುತ್ತಿ ಕಟ್ಟಿದೆ.

'ಹಿರಿಯ ದೊರೆ'ಗೆ ರೊಸಲಿಂಡ್, ಫ್ರೆಡ್‌ರಿಕ್‌ಗೆ ಸೀಲಿಯಾ ಎಂಬ ಹೆಣ್ಣುಮಕ್ಕಳು. ಫ್ರೆಡ್‌ರಿಕ್ ಅಣ್ಣನನ್ನು ಕಾಡಿಗೆ ಅಟ್ಟಿದರೂ ರೊಸಲಿಂಡಳನ್ನು ಅರಮನೆಯಲ್ಲೇ ಉಳಿಸಿಕೊಂಡಿದ್ದಾನೆ, ಮಗಳಿಗೆ ಜೊತೆ ತಪ್ಪದಿರಲೆಂದು. ರೊಸಲಿಂಡ್, ಸೀಲಿಯಾ ಜೂನೊ ದೇವಿಯ ಹಂಸಯುಗಳಗಳಂತೆ ಎರಡೊಂದಾದವರು. ಅವರದು ಹಾಲುಸಕ್ಕರೆಯ ನಂಟು.

'ಹಿರಿಯ ದೊರೆ' ಆಳುತ್ತಿದ್ದಾಗ ಅವನಿಗೆ ಸರ್ ರೋಲಂಡ್ ಎಂಬ ಆಪ್ತಮಿತ್ರನಿದ್ದ. ಅವನಿಗೆ ಆಲಿವರ್, ಆರ್ಲ್ಯಾಂಡೊ ಎಂಬಿಬ್ಬರು ಮಕ್ಕಳು. ಅಪ್ಪ ಕಿರಿಯವನಾದ ಆರ್ಲ್ಯಾಂಡೊನನ್ನು ಹಿರಿಯ ಆಲಿವರನ ವಶಕ್ಕೆ ಒಪ್ಪಿಸಿ, ಅವನಿಗೆ ಒಳ್ಳೆಯ ವಿದ್ಯಾಭ್ಯಾಸ ಕೊಡಿಸೆಂದು ಹೇಳಿ ಉಯಿಲಿನಲ್ಲಿ ಹಣ ಬಿಟ್ಟು ಸತ್ತಿದ್ದ. ಆದರೆ ಆಲಿವರ್ ದುಷ್ಟ, ಸ್ವಾರ್ಥಿ. ತಮ್ಮನಿಗೆ ನಾಗರಿಕಯೋಗ್ಯವಾದ ಯಾವ ಶಿಕ್ಷಣವನ್ನೂ ಕೊಡಿಸದೆ ಅಲಕ್ಷ್ಯ ಮಾಡಿದ್ದಾನೆ. ಓದುಬರೆಹ ಬಾರದಿದ್ದರೂ ಆರ್ಲ್ಯಾಂಡೊ ಘನವಂತ, ರೂಪಗುಣಗಳಲ್ಲಿ ಚೆಲುವ. ಮೇಲಾಗಿ ಧೀರ. ವಯಸ್ಸಿಗೆ ಬಂದ ಮೇಲೆ, ಓದಿಸಿ ನಾಗರಿಕನನ್ನಾಗಿ ಮಾಡು ಇಲ್ಲವೇ ಪಾಲಿನ ಆಸ್ತಿ ಕೊಟ್ಟುಬಿಡು ಎಂದು ಅಣ್ಣನಿಗೆ ಎದುರುಬೀಳುತ್ತಾನೆ.

ಫ್ರೆಡ್‌ರಿಕ್‌ನ ಆಸ್ಥಾನದಲ್ಲಿ ಚಾರ್ಲ್ಸ್ ಎಂಬೊಬ್ಬ ಜಟ್ಟಿ. ಇಡೀ ಫ್ರಾನ್ಸಿನಲ್ಲೇ ಅವನೊಡನೆ ಗುದ್ದಾಡಿ ಗೆದ್ದ ಎದೆಗಾರನಿರಲಿಲ್ಲ. 'ದಮ್ಮಿದ್ದರೆ ಬಂದು ಒಂದು ಕೈ ನೋಡಿ!' ಎಂಬುದು ವೀರ, ಬಲಿಷ್ಠರೆಂದುಕೊಂಡವರಿಗೆ ಅವನು ಹಾಕಿದ್ದ ಖಾಯಂ ಸವಾಲು. ಆರ್ಲ್ಯಾಂಡೊ ಆ ಸವಾಲಿಗೆ ಒಪ್ಪುತ್ತಾನೆ. ಇದು ಆಲಿವರನಿಗೆ ತನ್ನ ತುತ್ತಿನಲ್ಲಿನ ಕಲ್ಲಾಗಿದ್ದ ತಮ್ಮನನ್ನು ತೊಡೆದು ಹಾಕಲು ಅನಾಯಾಸವಾಗಿ ಒದಗಿದ ಸದವಕಾಶ. ಅವನೂ ಚಾರ್ಲ್ಸ್ ಪರಿಚಿತರು. ಕುಸ್ತಿಯ ಹೆಸರಿನಲ್ಲಿ ತಮ್ಮನ ಕೊಲೆಗೆ ಏರ್ಪಾಡು ಮಾಡುತ್ತಾನೆ

ಗೊತ್ತಾದಂತೆ ಕುಸ್ತಿಯ ಪಂದ್ಯ ನಡೆಯುತ್ತದೆ. ಆರ್ಲ್ಯಾಂಡೊ-ಚಾರ್ಲ್ಸ್‌ರದು ಇರುವೆ-ಆನೆಗಳ ಸಾಟಿ. ಆದರೆ ಛಲದ ಮುಂದೆ ಶಕ್ತಿಯೆ! ಆರ್ಲ್ಯಾಂಡೊ ಮಿಂಚಿನ

ವೇಗದಲ್ಲಿ ಜಟ್ಟಿಯನ್ನು ಹೊಡೆದುರುಳಿಸಿ ಅಪೂರ್ವ ವಿಕ್ರಮ ಸ್ಥಾಪಿಸುತ್ತಾನೆ. ಎಲ್ಲರ ಬಾಯಿಯಲ್ಲೂ ಅವನ ಸಾಹಸದ ಮಾತೇ! ದೊರೆ ಫ್ರೆಡ್‌ರಿಕನೂ ಅಭಿನಂದಿಸಲು ಬರುತ್ತಾನೆ. ಆದರೆ ಆ ಯುವಕವೀರ 'ಹಿರಿಯ ದೊರೆ'ಯ ಆಪ್ತನ ಮಗನೆಂದು ತಿಳಿದಾಗ ಫ್ರೆಡ್‌ರಿಕ್‌ನ ಹರ್ಷ ಬೇಸರಕ್ಕೆ, ಪುರಸ್ಕಾರ ತಿರಸ್ಕಾರಕ್ಕೆ ತಿರುಗುತ್ತದೆ. ರೊಸಲಿಂಡಳಿಗೆ ಹಾಗಲ್ಲ. ಕುಸ್ತಿಗೆ ಮೊದಲೇ ಅವಳು ಆರ್ಲ್ಯಾಂಡೊನನ್ನು ಕಂಡು ಮಾತನಾಡುವ ಅವಕಾಶ ಒದಗಿತ್ತು. ಆ ಭೇಟಿಯಲ್ಲಿ ಕಣ್ಣು ತಾಗಿದೊಡನೆಯೇ ಅವರು ಪರಸ್ಪರ ಮರುಳಾಗಿದ್ದರು. ಈಗ ತನ್ನ ಎದೆಬಯಕೆಯನ್ನು ಕೆರಳಿಸಿದ ಆ ದಿಟ್ಟ ಗಂಡು ತಂದೆಯ ಕೆಳೆಯ ಮಗನೆಂದು ತಿಳಿದಾಗ ಅವಳ ಸಂತೋಷಕ್ಕೆ ಎಣೆಯೇ ಇಲ್ಲ. ತನ್ನ ಭಾವನೆಗಳ ಸಂಕೇತವಾಗಿ ಕತ್ತಿನ ಹಾರವನ್ನು ಕಳಚಿ ಕೊಟ್ಟುಬಿಡುತ್ತಾಳೆ. ಈ ಸಮಾಚಾರ ದೊರೆಗೆ ತಿಳಿದಾಗ ಅವನ ರೋಷ ಉಕ್ಕುತ್ತದೆ. ರೊಸಲಿಂಡ್ ಆ ಕೂಡಲೇ ದೇಶ ಬಿಟ್ಟು ಹೋಗಬೇಕೆಂದು ಆಜ್ಞೆ ಮಾಡುತ್ತಾನೆ. ಅವಳನ್ನು ಬಿಟ್ಟು ಸೀಲಿಯಾ ಒಬ್ಬಳೇ ಹೇಗಿದ್ದಾಳು? ತಾನೂ ಹೊರಡುವ ಹಟನಿಶ್ಚಯ ತೊಡುತ್ತಾಳೆ. 'ಹಿರಿಯ ದೊರೆ' ಆರ್ಡೆನ್ ಬನದಲ್ಲಿರುವನೆಂದು ಅವರು ಕೇಳಿ ಬಲ್ಲರು. ಹೋಗಿ ಅವನನ್ನು ಕೂಡುವುದೆಂದುಕೊಳ್ಳುತ್ತಾರೆ. ಬೆಂಗಾವಲಿಗೆ ಗಂಡು ದಿಕ್ಕಿಲ್ಲದೇ ಇಬ್ಬರು ಹುಡುಗಿಯರೇ ಕಾಡುಮೇಡನ್ನು ಅಲೆಯುವುದಾದರೂ ಎಂತು? ಒಂದು ಉಪಾಯ ಮಾಡುತ್ತಾರೆ. ರೊಸಲಿಂಡ್ ಗಂಡುಡಿಗೆ ತೊಟ್ಟು 'ಗ್ಯಾನಿಮೀಡ್' ಎಂದು ಹೆಸರಿಟ್ಟುಕೊಂಡು ಕುರುಬರ ಹುಡುಗನಂತೆ ತೋರಿಸಿಕೊಳ್ಳುತ್ತಾಳೆ. ಸೀಲಿಯಾ ಅವನ ತಂಗಿ 'ಏಲಿಯೀನಾ' ಆಗುತ್ತಾಳೆ. ಈ ಕುರುಬತಿಯರಿಗೆ ಆಸ್ಥಾನದ ನಕಲಿ ಟಚ್‌ಸ್ಟನ್ ದಾರಿಜೊತೆಯಾಗುತ್ತಾನೆ. ಮೂವರೂ ಹೊರಡುತ್ತಾರೆ.

ಆರ್ಡೆನ್ ಬನದ ಗಡಿ ತಲಪುವ ಹೊತ್ತಿಗೆ ಅವರಿಗೆ ದಾರಿ ನಡೆನಡೆದು ಹೆಜ್ಜೆ ಮುಂದಿಡಲಾಗದಷ್ಟು ದಣಿವಾಗಿದೆ. ಜೊತೆಗೆ ಹಸಿವು, ನೀರಡಿಕೆಗಳು ಬೇರೆ ಬಾಧಿಸಿವೆ. 'ಹಿರಿಯ ದೊರೆ'ಯನ್ನು ಹುಡುಕುವ ಆಸೆ ತೊರೆದು ಪ್ರಯಾಣವನ್ನು ಅಲ್ಲಿಗೇ ಮುಗಿಸುವುದೆಂದು ನಿಶ್ಚಯಿಸುತ್ತಾರೆ. ಹತ್ತಿರದಲ್ಲೇ ಮಾರಾಟಕ್ಕಿದ್ದ ಒಂದು ಹಟ್ಟಿ, ಕುರಿಮಂದೆ, ಹುಲ್ಲುಬನ್ನಿಗಳನ್ನು ಕೊಂಡು ಅಲ್ಲೇ ಬೀಡು ಬಿಟ್ಟು ಕುರುಬ ಬಾಳ್ವೆ ನಡಸಲಾರಂಭಿಸುತ್ತಾರೆ.

ಅತ್ತ ಆರ್ಲ್ಯಾಂಡೊಗೆ ಅದೇ ಗತಿ ಕಾದಿದೆ. ಕುಸ್ತಿಯಲ್ಲಿ ತಮ್ಮನ ಸಾವು ಖಂಡಿತವೆಂದುಕೊಂಡು ನಲಿದಿದ್ದ ಆಲಿವರನಿಗೆ ಈಗ ಅವನ ಗೆಲುವಿನ ಸುದ್ದಿ ಕೇಳಿ ಹೊಟ್ಟೆಯಲ್ಲಿ ಹುಳಿ ಹಿಂಡಿದಂತಾಗಿದೆ. ಅವನನ್ನು ಹೇಗಾದರೂ ಕೊಂದೇ ತೀರುವ ಛಲ ತೊಡುತ್ತಾನೆ. ರಾತ್ರಿ ಮಲಗಿರುವಾಗ ತಮ್ಮನ ಕೋಣೆಗೆ ಬೆಂಕಿ ಹಚ್ಚಿ ಜೀವಂತ ಸುಡುವುದು ಅವನ ವ್ಯೂಹ. ಈ ವಿಷಯ ಮನೆಯ ಮುದಿಯಾಳು ಆಡಮ್‌ನಿಂದ ಆರ್ಲ್ಯಾಂಡೊಗೆ ತಿಳಿಯುತ್ತದೆ. ಅವನು ಆ ಕ್ಷಣ ದೇಶ ಬಿಟ್ಟು ಹೋಗುವ ನಿಶ್ಚಯ ಮಾಡುತ್ತಾನೆ. ತುಳಿದ ದಾರಿ ಅವನನ್ನೂ ಆರ್ಡೆನ್ ಬನಕ್ಕೇ ಕರೆದೊಯ್ಯುತ್ತದೆ. ಅಲ್ಲಿ ಅವನಿಗೆ 'ಹಿರಿಯ ದೊರೆ'ಯ ಭೇಟಿಯಾಗುತ್ತದೆ. ಕೃತ್ರಿಮ ನಾಗರಿಕತೆಯಿಂದ ದೂರವಾಗಿ ತಾಯಿ ಪ್ರಕೃತಿಯ ಮಡಿಲಿನಲ್ಲಿ ಸದ್ಭಾವ, ಸಂತೃಪ್ತಿಗಳನ್ನೇ ಜೀವನಧರ್ಮಗಳನ್ನಾಗಿ ಮಾಡಿಕೊಂಡು ಹಾಡು, ಹರಟೆ, ಬೇಟೆಗಳಲ್ಲಿ 'ಹಿರಿಯ ದೊರೆ' ಜೇಕ್ವಿಸ್, ಏಮಿಯನ್ಸ್ ಮುಂತಾದ ಆಸ್ಥಾನಿಕರೊಡನೆ ಕಾಲ ಕಳೆಯುತ್ತಿದ್ದಾನೆ (ಪುಟ 177). ಆರ್ಲ್ಯಾಂಡೊ ಅವರಲ್ಲೊಬ್ಬನಾಗುತ್ತಾನೆ.

ಆರ್ಡೆನ್ನಿನ ಹಸುರು ತಣ್ಪಿನ ವಾತಾವರಣದಲ್ಲಿ ಆರ್ಲ್ಯಾಂಡೊನ ಮನಸ್ಸಿಗೆ ನೆಮ್ಮದಿ ದೊರೆತು ರೊಸಲಿಂಡಳ ನೆನಪುಕ್ಕಿ ಒಲವಾಗಿ ಹರಿಯುತ್ತದೆ. ಅವಳು ಅದೇ ಬನದಲ್ಲಿ ವಾಸಿಸುತ್ತಿರುವಳೆಂದು ಅವನು ಕಾಣ. ಅವಳ ಮೇಲೆ ಬಗೆಬಗೆಯ ಕವಿತೆ ಕಟ್ಟಿ ಗಿಡ ಮರಗಳಿಗೆ ತೂಗು ಹಾಕುತ್ತಾನೆ, ತೊಗಟೆಗಳ ಮೇಲೆಲ್ಲ ಅವಳ ಹೆಸರು ಕೆತ್ತುತ್ತಾನೆ. ಅವು ರೊಸಲಿಂಡಳ ಕಣ್ಣಿಗೂ ಬಿದ್ದು ಯಾರವೆಂದು ಹೊಳೆಯದಿದ್ದರೂ ಅವಳ ಎದೆ ಉಬ್ಬುತ್ತದೆ. ಕೊನೆಗೊಮ್ಮೆ ಆಕಸ್ಮಿಕವಾಗಿ ಅವರ ಭೇಟಿಯಾಗುತ್ತದೆ. ಆರ್ಲ್ಯಾಂಡೊ ಗಂಡುವೇಷದಲ್ಲಿರುವ ಅವಳನ್ನು ಗುರುತಿಸಲಾರ. ಎಷ್ಟೇ ಇಚ್ಛೆಯಾದರೂ ಅವಳು ತನ್ನ ಸ್ವಾಭಾವಿಕ ರೂಪದಲ್ಲಿ ತೋರಿಸಿಕೊಳ್ಳುವಂತಿಲ್ಲ. ಹಾಗೆಯೇ ಮಾತು ಬಂದು ಪ್ರೇಮಕಾವ್ಯ ಕೊರೆದು ಬನದ ಗಿಡಮರಗಳನ್ನು ಹಾಳುಗೆಡಿಸುತ್ತಿರುವ ಹುಚ್ಚು ಪ್ರೇಮಿಯ ವಿಷಯವೆತ್ತುತ್ತಾಳೆ ರೊಸಲಿಂಡ್. ಆರ್ಲ್ಯಾಂಡೊ ಅದು ತಾನೇ ಎಂದು ಒಪ್ಪಿಕೊಳ್ಳುತ್ತಾನೆ. ಅವಳು ಆ ಹುಚ್ಚು ಬಿಡಿಸಲು ತನ್ನಲ್ಲೊಂದು ಚಿಕಿತ್ಸೆಯಿದೆಯೆನ್ನುತ್ತಾಳೆ. ಆರ್ಲ್ಯಾಂಡೊಗೆ ತನ್ನ ಹುಚ್ಚು ಬಿಡಬೇಕೆಂದೇನಿಲ್ಲ, ಬದಲು ಅದರಿಂದ ಅವನಿಗೆ ಸುಖವೇ. ಆದರೂ ಗೆಳೆಯ 'ಗ್ಯಾನಿಮೀಡ'ನನ್ನು ಮೆಚ್ಚಿಸಲೆಂದು ಹ್ಞೂ ಅನ್ನುತ್ತಾನೆ. ಆರ್ಲ್ಯಾಂಡೊ ಆ 'ಗೆಳೆಯ'ನನ್ನೇ ಪ್ರಿಯತಮೆ ರೊಸಲಿಂಡ್ ಎಂದು ಭಾವಿಸಿ ಪ್ರೀತಿ ತೋಡಿಕೊಳ್ಳಬೇಕಂತೆ—ಇದೇ ರೊಸಲಿಂಡ್ ಹೇಳುವ ಚಿಕಿತ್ಸೆ! ಮೊದಲ ಸಮಾಗಮದಲ್ಲೇ ಆರ್ಲ್ಯಾಂಡೊ ಹೊತ್ತು ಮೀರಿ ಬಂದನೆಂದು ರೊಸಲಿಂಡ್ ತರಾಟೆಗೆ ತೆಗೆದುಕೊಳ್ಳುತ್ತಾಳೆ. ಪ್ರಿಯತಮೆಯರಂತೆಯೇ ಒಂದು ಕಣ್ಣಿನಿಂದ ಅಟ್ಟಿಕೊಂಡು, ಇನ್ನೊಂದರಿಂದ ಎದೆಗೆಳೆದುಕೊಳ್ಳುತ್ತಾಳೆ. ಮತ್ತೆ ಮುಂದಿನ ಸಮಾಗಮ ಎರಡು ಗಂಟೆಗೆ.

ಈ ನಡುವೆ ಫ್ರಾನ್ಸಿನ ರಾಜಾಸ್ಥಾನದಲ್ಲಿ ರೊಸಲಿಂಡಳೊಡನೆ ಮಗಳು ಸೀಲಿಯಾ ತಲೆ ತಪ್ಪಿಸಿಕೊಂಡು ಹೋದುದಕ್ಕೆ ದೊರೆ ಫ್ರೆಡ್‌ರಿಕ್ ಉರಿದೆದ್ದಿದ್ದಾನೆ. ಇದೇ ಹೊತ್ತಿಗೆ ಆರ್ಲ್ಯಾಂಡೊ ಸಹ ಕಣ್ಮರೆಯಾದುದು ಸಂಶಯಕ್ಕೆ ಆಸ್ಪದವಿತ್ತಿದೆ. ಅವನ ಅಣ್ಣ ಆಲಿವರನನ್ನು ಕರೆಸಿ ನಿನ್ನ ತಮ್ಮ ಎಲ್ಲಿದ್ದರೂ ಹುಡುಕಿ ತಾ, ಇಲ್ಲವೇ ನಿನಗೂ ಗಡೀಪಾರು ಎಂದು ಕಟ್ಟಪ್ಪಣೆ ಮಾಡುತ್ತಾನೆ. ಆಲಿವರ್ ಹೆದರಿ, ತಮ್ಮನನ್ನು ಹುಡುಕುತ್ತಾ ಆರ್ಡೆನ್ ಬನಕ್ಕೇ ಬರುತ್ತಾನೆ. ದಾರಿಯ ದಣಿವು ಕಳೆಯಲೆಂದು ಮರದ ಕೆಳಗೆ ಮಲಗಿ ನಿದ್ರಿಸುತ್ತಿರುವಾಗ ಸಿಂಹವೊಂದು ಅವನ ಮೇಲೆ ಹಾರಲು ಹತ್ತಿರದ ಪೊದರಿನಲ್ಲಿ ಹೊಂಚು ಹಾಕುತ್ತಿದೆ. ಅದೇ ಹೊತ್ತಿಗೆ 'ಗ್ಯಾನಿಮೀಡ'ನೊಡನೆ ಎರಡನೆಯ ಸಮಾಗಮಕ್ಕೆಂದು ಆ ದಾರಿಯಲ್ಲಿ ಹೊರಟ ಆರ್ಲ್ಯಾಂಡೊನ ಕಣ್ಣಿಗೆ ಆ ದೃಶ್ಯ ಬೀಳುತ್ತದೆ. ಅಪಾಯಕ್ಕೆ ತುತ್ತಾದವನು ತನ್ನ ಕ್ರೂರಿ ಅಣ್ಣನೆಂದೂ ತಿಳಿಯುತ್ತದೆ. ಆರ್ಲ್ಯಾಂಡೊ ಅವನಿಂದಾದ ಅನ್ಯಾಯಗಳೆಲ್ಲವನ್ನೂ ಮರೆತು ಸಿಂಹವನ್ನೆದುರಿಸಿ ಕೊಲ್ಲುತ್ತಾನೆ. ತಮ್ಮನ ಉಪಕಾರ ಅಣ್ಣನಲ್ಲಿ ಪಶ್ಚಾತ್ತಾಪ ಮೂಡಿಸುತ್ತದೆ. ಆರ್ಲ್ಯಾಂಡೊ ಅಣ್ಣನನ್ನು ಕ್ಷಮಿಸುತ್ತಾನೆ. ಹೋರಾಟದಲ್ಲಿ ಅವನಿಗೆ ಗಾಯವಾಗಿದೆ, ಹೊತ್ತಿಗೆ ಸರಿಯಾಗಿ 'ಗ್ಯಾನಿಮೀಡ'ನನ್ನು ಹೋಗಿ ನೋಡಲಾರ. ತನ್ನ ಬದಲು ಅಣ್ಣನನ್ನೇ ಕಳಿಸಿಕೊಟ್ಟು ನಡೆದುದನ್ನು ವಿವರಿಸುವಂತೆ ಹೇಳುತ್ತಾನೆ. ಇದನ್ನು ಕೇಳಿದ 'ಗ್ಯಾನಿಮೀಡ್' ಮೂರ್ಛೆ ಹೋಗುತ್ತಾನೆ. ಅವರ ಪ್ರೇಮ ಅಷ್ಟು ಗಾಢ!

ಇದೇ ಸಂದರ್ಭದಲ್ಲಿ ಆಲಿವರನಿಗೆ ಸೀಲಿಯಾಳ ಭೇಟಿಯಾಗುತ್ತದೆ. ಇಬ್ಬರೂ ಪರಸ್ಪರ ಮೋಹಿಸುತ್ತಾರೆ. ಮರು ದಿನವೇ ಮದುವೆಯಾಗುವುದೆಂದೂ ಗೊತ್ತುಮಾಡುತ್ತಾರೆ. ಇದನ್ನು ಕೇಳಿ ಆರ್ಲ್ಯಾಂಡೊಗೆ ತನ್ನ ರೊಸಲಿಂಡ್ ಜೊತೆಯಲ್ಲಿದ್ದಿದ್ದರೆ ತಾನೂ ಹಾಗೆಯೇ ಸುಖಿಯಾಗಬಹುದಿತ್ತೆಂಬ ಆಸೆ ಚಿಗುರುತ್ತದೆ. ಅದನ್ನು 'ಗ್ಯಾನಿಮೀಡ್'ನೊಂದಿಗೆ ತೋಡಿಕೊಳ್ಳುತ್ತಾನೆ. 'ಗ್ಯಾನಿಮೀಡ್' ಬರಿಯ ಚಿಕಿತ್ಸೆಗಳನ್ನೇ ಏಕೆ, ಮಾಯಮಂತ್ರಗಳನ್ನೂ ಬಲ್ಲವ! ಆಲಿವರ್-ಸೀಲಿಯಾರ ಮದುವೆಯ ಹೊತ್ತಿಗೆ ರೊಸಲಿಂಡಳನ್ನು ಕರೆತಂದು ಕಣ್ಣ ಮುಂದೆ ನಿಲ್ಲಿಸುವುದಾಗಿ ಮಾತುಕೊಡುತ್ತಾನೆ.

ಈ ನಡುವೆ ಆರ್ಡೆನ್‌ನಲ್ಲಿ ಇನ್ನೂ ಒಂದೆರಡು ಪ್ರೇಮಪ್ರಸಂಗಗಳು ಕೂಡಿ ಬಂದಿವೆ. ಅಲ್ಲಿಯ ಹಸುರಿನ ಮಹಿಮೆ ಅಂಥದು! 'ಗ್ಯಾನಿಮೀಡ್' 'ಏಲಿಯೀನಾ'ರ ಸೇವೆಯಲ್ಲಿರುವ ಕುರುಬ ಹೈದ ಸಿಲ್ವಿಯುಸ್‌ನಿಗೆ ಕುರುಬರ ಹೆಣ್ಣು ಫೀಬಿಯ ಮೇಲೆ ಅಗಾಧ ಪ್ರೇಮ. ಆದರೆ ಫೀಬಿ ಅವನನ್ನೊಲ್ಲಳು, ಅವಳು ಒಲಿದಿರುವುದು 'ಗ್ಯಾನಿಮೀಡ್'ನಿಗೆ! ತನ್ನ ಬಗ್ಗೆ ಅಭಿಪ್ರಾಯ ಬದಲಿಸುವ ಪ್ರಸಂಗ ಬಂದರೆ ಸಿಲ್ವಿಯುಸ್‌ನನ್ನು ಮದುವೆಯಾಗುವುದಾಗಿ 'ಗ್ಯಾನಿಮೀಡ್' ಫೀಬಿಯಿಂದ ಮಾತು ಪಡೆದಿದ್ದಾನೆ. ಈ ಎಲ್ಲ ರಮ್ಯಪ್ರೇಮವನ್ನು ಕುಚೋದ್ಯ ಮಾಡುವ ಪಟ್ಟಣಕಲಿ ಟಚ್‌ಸ್ಟನ್ ಸಹ ಆಡ್ರಿ ಎಂಬ ಆ ಬನದ ಬೇದಿವೆಣ್ಣಿಗೆ ಮರುಳಾಗಿ, ಅವಳನ್ನು ಮದುವೆಯಾಗುವ ದಾರಿ ನೋಡುತ್ತಿದ್ದಾನೆ.

ಮರು ದಿನ 'ಹಿರಿಯ ದೊರೆ'ಯ ಸಮ್ಮುಖದಲ್ಲಿ ರೊಸಲಿಂಡ್ ವೇಷ ಕಳಚಿ ತಾನೇ ತಾನಾಗಿ ಕಾಣಿಸಿಕೊಂಡು ಎಲ್ಲರಿಗೂ ಆಶ್ಚರ್ಯ ಆನಂದಗಳನ್ನುಂಟುಮಾಡುತ್ತಾಳೆ. ಆರ್ಲ್ಯಾಂಡೊ-ರೊಸಲಿಂಡ್, ಆಲಿವರ್-ಸೀಲಿಯಾ, ಸಿಲ್ವಿಯಸ್-ಫೀಬಿ, ಟಚ್‌ಸ್ಟನ್-ಆಡ್ರಿ — ಒಮ್ಮೆಲೇ ಹಲವು ಮದುವೆಗಳ ಸಂತೆ; ಪೌರೋಹಿತ್ಯ 'ಹಿರಿಯ ದೊರೆ'ಯದು!

'ಹಿರಿಯ ದೊರೆ'ಯ ಮೇಲೆ ಕ್ರೋಧ ಕೆರಳಿ ಅವನನ್ನು ಕೊಲ್ಲಲೆಂದು ಸೈನ್ಯಸಮೇತನಾಗಿ ಬಂದ ಫ್ರೆಡ್‌ರಿಕ್‌ನಿಗೆ ಆರ್ಡೆನ್ನಿನ ಒಬ್ಬ ಸಾಧುವಿನ ಪ್ರಭಾವದಿಂದ ಹೃದಯ ಪರಿವರ್ತನೆಯಾಗಿ ಇತರರ ಆನಂದದಲ್ಲಿ ಅವನೂ ಪಾಲ್ಗೊಂಡು ಅದನ್ನು ಇಮ್ಮಡಿಸುತ್ತಾನೆ.

## 13. ಟ್ವೆಲ್ಫ್ತ್ ನೈಟ್; ಆರ್, ವಾಟ್ ಯು ವಿಲ್

**ರಚನೆ:** 1599-1600. **ಮೊದಲ ಪ್ರಕಟನೆ:** 1623.

**ಆಕರ:** ಅಲಿವಿಯಾ-ಆರ್ಸಿನೊ, ವಯೋಲ-ಸಿಬಸ್ಟಿಯನ್ನರ ಕಥಾವಸ್ತು ಹಲವು ಹಂತಗಳಲ್ಲಿ ಇಳಿದುಬಂದದ್ದು: ಇಟಲಿಯ ಸಿಯನ್ನಾದಲ್ಲಿ ಪ್ರಚಾರದಲ್ಲಿದ್ದ 'ಲಿಂಗನಾತ್ತಿ' ಎಂಬ ಹಾಸ್ಯನಾಟಕವನ್ನು ಅವಲಂಬಿಸಿ ಬ್ಯಾಂಡೆಲೊ ಕಥೆ ರಚಿಸಿದ; ಬೆಲ್‌ಫಾರ್ ಅದನ್ನು ಫ್ರೆಂಚಿಗೆ ರೂಪಾಂತರಿಸಿದ; ಬಾರ್ನಬೆ ರಿಚ್ ತನ್ನ 'ಫೇರ್‌ವೆಲ್ ಟು ಮಿಲಿಟರಿ ಪ್ರೊಫೆಷನ್'ನಲ್ಲಿ 'ಅಪಲೊನಿಯಸ್ ಅಂಡ್ ಸಿಲ್ಲ' ಎಂಬ ಹೆಸರಿನಲ್ಲಿ ಇಂಗ್ಲಿಷಿಗೆ ತಂದ; ಅದರ ಆಧಾರದ ಮೇಲೆ ಷೇಕ್ಸ್‌ಪಿಯರ್ ಈ ನಾಟಕ ರಚಿಸಿದ. ನಾಟಕದ ಸ್ವಾರಸ್ಯವಿರುವುದು ಅದರ ಉಪಕಥೆ ಹಾಗೂ ಅಲ್ಲಿನ ಪಾತ್ರಗಳಲ್ಲಿ. ಅವು ಕವಿಯ ಸ್ವಕಪೋಲಕಲ್ಪಿತ.

**ಕಥೆ:** ಇದು ಷೇಕ್ಸ್‌ಪಿಯರನ ಶ್ರೇಷ್ಠ ಹರ್ಷಕಗಳಲ್ಲೊಂದು. ಮೊದಲ ಕೆಲವು

ನಾಟಕಗಳಲ್ಲಿಯಂತೆ ಇಲ್ಲಿಯೂ ಒಬ್ಬನನ್ನು ಇನ್ನೊಬ್ಬನೆಂದುಕೊಂಡ ತಪ್ಪು ಗುರುತಿನಿಂದ ಉಂಟಾಗುವ ಗೊಂದಲದ ಸನ್ನಿವೇಶ ಆಧಾರ. ವಯೋಲ-ಆರ್ಸಿನೊ-ಆಲಿವಿಯಾರ ಮುಖ್ಯಕಥೆಯಲ್ಲಿ ಮಧುರ ಪ್ರೇಮದಿಂದ ಉದ್ಭವಿಸಿದ ರಮ್ಯಭಾವ, ಮ್ಯಾಲ್ವೋಲಿಯೊ-ಟೋಬಿ-ಮರಿಯಾ ಅವರುಗಳ ಉಪಕಥೆಯಲ್ಲಿ ನಿಚ್ಚಳವಾದ ಹಾಸ್ಯ ಪ್ರಧಾನಾಂಶಗಳು. ಕವಿಯ ಕೌಶಲ ಇವೆರಡನ್ನೂ ಬಿರುಕು ಕಾಣದಂತೆ ಎರಕ ಹೊಯ್ದಿದೆ. ಮ್ಯಾಲ್ವೋಲಿಯೊನ ಪಾತ್ರ ಕವಿ ತನ್ನ ಕಾಲದ ಮಡಿವಂತಿಕೆಯನ್ನು ಕುರಿತು ಮಾಡಿದ ವಿಡಂಬನೆ ಇರಬಹುದು. ಹಿಂದಿನ ನಾಟಕದ ರೊಸಲಿಂಡ್‌ಳಂತೆ ವಯೋಲಳದೂ ಕವಿಯ ರಮ್ಯ ನಾಯಿಕೆಯರಲ್ಲಿ ಉನ್ನತ ಸ್ಥಾನ. ಅವಳು ಹೂಬಿಸಿಲಾದರೆ ಇವಳು ಬೆಳುದಿಂಗಳು.

ಮೆಸಲೀನದ ಶ್ರೀಮಂತಪುತ್ರಿ ವಯೋಲ ಮತ್ತು ಅವಳ ಅವಳಿ ಸೋದರ ಸಿಬಸ್ಟಿಯನ್ ದೇಶಪರ್ಯಟನೆಗೆಂದು ಹೊರಟಿರುವಾಗ ದಾರಿಯಲ್ಲಿ ಹಡಗೊಡೆದು ಸಿಬಸ್ಟಿಯನ್ ನಾಪತ್ತೆಯಾಗುತ್ತಾನೆ. ವಯೋಲ ಒಬ್ಬಳೇ ದೋಣಿ ಹತ್ತಿ ಹತ್ತಿರದ ಇಲ್ಲೀರಿಯಾ ದೇಶದ ದಂಡೆ ಮುಟ್ಟುತ್ತಾಳೆ. ಆ ಕಂಡುಕೇಳದ ದೇಶದಲ್ಲಿ ಹುಡುಗಿಯೊಬ್ಬಳೇ ಏಕಾಕಿಯಾಗಿ ತನ್ನ ದೈವವನ್ನು ಎದುರಿಸಬೇಕಾಗುತ್ತದೆ. ಪುರುಷವೇಷ ತೊಟ್ಟು 'ಸಿಸೇರಿಯೊ' ಎಂಬ ಹೆಸರಿನಿಂದ ಅಲ್ಲಿನ ದೊರೆ ಆರ್ಸಿನೊನ ಆಸ್ಥಾನದಲ್ಲಿ ಗಂಡಾಳಾಗಿ ಕೆಲಸಕ್ಕೆ ಸೇರುತ್ತಾಳೆ.

ದೊರೆ ಆರ್ಸಿನೊ ಅವಿವಾಹಿತ, ಅತ್ಯಂತ ಭಾವನಾಪ್ರಿಯ. ಆ ನಗರದ ಆಲಿವಿಯಾ ಎಂಬ ಶ್ರೀಮಂತ ಕನ್ಯೆಯಲ್ಲಿ ಮೋಹಗೊಂಡಿದ್ದಾನೆ. ಆಲಿವಿಯಾ ಸುಂದರಿ, ಸಂಪನ್ನೆ. ಆದರೆ ಆಗ ತಾನೆ ಅವಳ ತಮ್ಮ ಸತ್ತಿದ್ದು ತುಂಬ ದುಃಖದಲ್ಲಿದ್ದಾಳೆ. ಅವಳೂ ಭಾವನಾಪ್ರಿಯಳೆ! ಸೋದರವಿಯೋಗವನ್ನು ಅತಿಯಾಗಿ ಹಚ್ಚಿಕೊಂಡು ಆ ಮಾನಸಿಕ ಸ್ಥಿತಿಯಲ್ಲಿ ಎಲ್ಲವನ್ನೂ ಕಡೆಗಾಣಿಸಿದ್ದಾಳೆ; ದೊರೆಯ ಒಲವನ್ನೂ ಒಲ್ಲಳು. ಪರಿಣಾಮವಾಗಿ ದೊರೆ ಭಗ್ನಪ್ರೇಮಿ. ಅವನಿಗೆ ಸದಾ ಪ್ರೇಮದ್ದೇ ಆಲಾಪನೆ, ಆಲಿವಿಯಾಳದೇ ಚಿಂತನೆ. ಅವನನ್ನು ಸಂತೈಸುವುದು ಆಳು 'ಸಿಸೇರಿಯೊ'ನ ಕಸುಬು. ದೊರೆ ಆಳಿಗೆ ಆಲಿವಿಯಾಳನ್ನು ಹೋಗಿ ನೋಡಿ ತನ್ನ ಪರವಾಗಿ ಪ್ರೇಮಯಾಚನೆ ಮುಂದುವರಿಸುವ ನಿಯೋಗ ವಹಿಸುತ್ತಾನೆ. ಆದರೆ ಆಳಿನ ಮನಸ್ಸನ್ನು ದೊರೆ ಏನು ಬಲ್ಲ? ಆಳಾಗಿ ಬಂದ ವಯೋಲ ದೊರೆಗೇ ಮಾರುಹೋಗಿದ್ದಾಳೆ! ತೊಟ್ಟ ಗಂಡುವೇಷ ಬಯಕೆಯ ಹಾದಿಯಲ್ಲಿ ಮುನ್ನಡೆಯಲು ಅಡ್ಡಿ ಮಾಡಿದೆ. ಶಿಲಾವಿಗ್ರಹದ ತಾಳ್ಮೆ ತೊಟ್ಟು ಕಾಲಹಾಕುತ್ತಾಳೆ. ಕೊರಗು ಮೊಗ್ಗಿನೊಳಗಿನ ಹುಳುವಿನಂತೆ ಅವಳ ಹೂಗೆನ್ನೆಗಳನ್ನು ಕೊರೆದು ತಿನ್ನುತ್ತಿದೆ.

ದೊರೆಯ ಪ್ರೇಮದೌತ್ಯವನ್ನು ಹೊತ್ತು ತಂದ 'ಸಿಸೇರಿಯೊ'ನನ್ನು ಕಂಡೊಡನೆ ಆಲಿವಿಯಾ 'ಅವನಲ್ಲೇ' ಅನುರಕ್ತಳಾಗುತ್ತಾಳೆ! ದೊರೆ ಬೇಡವಾದರೂ ದೊರೆಯ ಆಳು ಬೇಕಾಗುತ್ತಾನೆ. ಉಂಗುರದ ಉಡುಗೊರೆ ಹೋರಿಸಿ, ಮತ್ತೆ ಮತ್ತೆ ಬರಲು ಕರೆ ಕೊಟ್ಟು ತನ್ನ ಭಾವನೆಗಳಿಗೆ ಬಹಿರಂಗ ಅಭಿವ್ಯಕ್ತಿ ಕೊಡುತ್ತಾಳೆ. 'ಸಿಸೇರಿಯೊ' ವೇಷದ ವಯೋಲಳಿಗೆ ಇದರ ಮರ್ಮ ಅರ್ಥವಾಗದೇ ಇಲ್ಲ. ಆದರೆ ಅವಳು ಏನು ತಾನೆ ಮಾಡಬಲ್ಲಳು!

ಆಲಿವಿಯಾಳ ಗೃಹಕೃತ್ಯ ಯಾವ ದೊರೆಯದಕ್ಕೂ ಕಡಿಮೆಯಿಲ್ಲ. ಹಲವು ಬಗೆಯ ಮೂಷಕಗಳು ಅಲ್ಲಿ ಬಿಲಮಾಡಿ ದಾಳಿ ನಡಸಿವೆ. ಅವರಲ್ಲಿ ಅವಳ ಚಿಕ್ಕಪ್ಪ ಸರ್ ಟೋಬಿ ಬೆಲ್ಚ್ ಒಬ್ಬ: ಉಡಾಳ, ಕೈಯಲ್ಲಿ ಬಿಡಿಗಾಸಿಲ್ಲ. ಸದಾ ಕುಡಿದು, ದಾಂದಲೆ ಹಾಕುತ್ತ

ಕಾಲ ತಳ್ಳುತ್ತಿದ್ದಾನೆ. ತಾನೊಬ್ಬನೇ ಸಾಲದೆಂಬಂತೆ ತನ್ನ ಹಳೆಯ ಗೆಳೆಯ ಸರ್ ಆ್ಯಂಡ್ರೂ ಏಗ್ಯುಚೀಕನನ್ನೂ ಕರಸಿದ್ದಾನೆ. ಸರ್ ಏಗ್ಯುಚೀಕ್ ಹಣವಂತ ಮುಟ್ಠಾಳ. ಅಲಿವಿಯಾಳನ್ನು ಕಂಡು ಅವನ ಬಾಯಿ ಚಪ್ಪರಿಸಿದೆ. ಅವಳೊಡನೆ ಮದುವೆ ಕೂಡಿಸಿ ಕೊಡುವ ಆಸೆ ತೋರಿಸಿ, ಟೋಬಿ ಏಗ್ಯುಚೀಕನಿಂದ ಹಣ ಕಿತ್ತು, ಅವನನ್ನು ಹೀರಿ ಹಿಪ್ಪೆ ಕಾಯಿ ಮಾಡುತ್ತಿದ್ದಾನೆ. ಇವರಿಗೆ ಕುಡಿತದಲ್ಲಿ ಜೊತೆ ಕೊಟ್ಟು ಹಾಡು, ಹಾಸ್ಯಗಳಿಂದ ತಣಿಸುವವನು ಅಲಿವಿಯಾಳ ನಕಲಿ ಫೆಸ್ಟ್. ಬೇಕಾದಾಗ ಊಟ, ತಿಂಡಿ, ಮದ್ಯಗಳನ್ನು ಪೂರೈಸಿ ತೃಪ್ತಿ ಪಡಿಸುವುದು ಹೆಣ್ಣಾಳು ಮರಿಯಾಳ ಕೆಲಸ. ಆಳಾದರೂ ಸ್ವಭಾವದಿಂದ ಆ ಮರಿಗುಬ್ಬಿ ಸರಸಗಾತಿ. ಅವಳಿಗೆ ಟೋಬಿಯೆಂದರೆ ಎದೆಯುಬ್ಬು!

ಇವರೆಲ್ಲರೂ ಒಂದು ಒಟ್ಟಾದರೆ ಮನೆವಾರ್ತೆಯ ಮ್ಯಾಲ್ವೋಲಿಯೊ ಒಬ್ಬನೇ ಇನ್ನೊಂದು ಕಡೆ, ಮತ್ತೊಂದು ಬಗೆ. ಅವನು ಸ್ವಪ್ರೀತ, ದುರಭಿಮಾನಿ. ಆ ಸೋಗಿನ ಕತ್ತೆ ನಡೆದಾಡಿದರೆ ಶ್ರೀಮದ್ಗಾಂಭೀರ್ಯ ತುಳುಕಾಡುತ್ತದೆ. ಮನೆಯೊಡತಿ ತನ್ನನ್ನು ಮೋಹಿಸಿದ್ದಾಳೆಂದು ನಂಬಿ, ಮುಂದೊಮ್ಮೆ ಅವಳ ಕೈಹಿಡಿದು 'ಕೌಂಟ್' ಎನ್ನಿಸಿ ಕೊಳ್ಳುವ ಕನಸು ಕಾಣುತ್ತಿದ್ದಾನೆ. ಆ ಮಡಿವಂತನಿಗೆ ಟೋಬಿಯ ಗುಂಪಿನವರ ಸರಸ ಚೆಲ್ಲಾಟಗಳು ಒಗ್ಗವು. ಎಲ್ಲರ ಮೇಲೂ ದಬ್ಬಾಳಿಕೆ ನಡಸುತ್ತ ಓಡಾಡುತ್ತಾನೆ. ಅವನ ವರ್ತನೆಯನ್ನು ನೋಡಿ ರೇಗಿದ ತುಂಟಿ ಮರಿಯಾ ಜೊತೆಯವರ ನೆರವಿನಿಂದ ಒಂದು ಕುಚೇಷ್ಟೆ ಮಾಡುತ್ತಾಳೆ. ಒಡತಿ ತನ್ನನ್ನು ಪ್ರೀತಿಸುತ್ತಿದ್ದಾಳೆಂಬ ಮ್ಯಾಲ್ವೋಲಿಯೊನ ಭ್ರಮೆಯನ್ನು ಅವಳು ಬಲ್ಲಳು. ಒಡತಿ ಬರೆದಂತೆ ಒಂದು ಪ್ರೇಮಪತ್ರ ಸೃಷ್ಟಿಸಿ ಅದು ಅವನ ಕೈಗೆ ಸಿಗುವಂತೆ ಮಾಡುತ್ತಾಳೆ. ಅದರಲ್ಲಿ ಅಡ್ಡಪಟ್ಟಿಯ ಉದ್ದನೆಯ ಹಳದಿ ಕಾಲಚೀಲಗಳನ್ನು ತೊಟ್ಟು ಸದಾ ನಸುನಗೆ ಬೀರುತ್ತ ಓಡಾಡಿ ತನಗೆ ಹರ್ಷ ತರುವಂತೆ ಆದೇಶವಿದೆ. ಇವೆಲ್ಲವೂ ಒಡತಿಗೆ ಒಗ್ಗದ ವಿಷಯಗಳು! ಆದರೆ ಬೆಪ್ಪ ಮ್ಯಾಲ್ವೋಲಿಯೊ ಆ ಸುಳ್ಳುಕಾಗದವನ್ನು ನಿಜವೆಂದೇ ನಂಬಿ ಹಿಗ್ಗಿ, ಅದನ್ನು ಅಕ್ಷರಶಃ ಪಾಲಿಸುತ್ತಾನೆ. ಅವನು ಈಚೀಚೆಗೆ ಏನೋ ಒಂದು ಬಗೆಯಾಗಿದ್ದಾನೆಂದು ಮರಿಯಾ ಮೊದಲೇ ಒಡತಿಗೆ ಸುಳಿವು ಕೊಟ್ಟು ಅವಳ ಮನಸ್ಸನ್ನು ಹದಗೊಳಿಸಿಟ್ಟಿದ್ದಾಳೆ. ಅಲಿವಿಯಾ ಅವನ ವಿಚಿತ್ರ ವೇಷವರ್ತನೆಗಳನ್ನು ಕಂಡೊಡನೆಯೇ ಅದು 'ನಡು ಬೇಸಗೆಯ ಹುಚ್ಚೆಂದು' ತೀರ್ಮಾನಿಸಿ ಅವನ ಮೇಲೆ ಒಂದು ಕಣ್ಣಿಡುವಂತೆ ಟೋಬಿ, ಮರಿಯಾರಿಗೆ ಹೇಳುತ್ತಾಳೆ. ಅವರು ಬಯಸುತ್ತಿದ್ದುದೂ ಅದನ್ನೇ! ಸರಿ, ಅವರು ಮ್ಯಾಲ್ವೋಲಿಯೊನನ್ನು ಕತ್ತಲಕೋಣೆಗೆ ತಳ್ಳಿ ದೆವ್ವ ಬಿಡಿಸಿದಂತೆ ಹುಚ್ಚು ಬಿಡಿಸಲು ಹೊರಡುತ್ತಾರೆ!

ಇತ್ತ ತಾನು ಬಯಸಿದ ಅಲಿವಿಯಾಳ ಪ್ರೇಮಕಟಾಕ್ಷ ದೊರೆಗೂ ದೊರಕದೆ ದೊರೆಯ ಆಳಿನ ಮೇಲೆ ಬಿದ್ದಿರುವುದನ್ನು ಏಗ್ಯುಚೀಕ್ ಗಮನಿಸದೆ ಇಲ್ಲ. ಆಸೆ ತೊರೆದು, ಬಂದ ದಾರಿ ಹಿಡಿದು ಊರಿಗೆ ಹಿಂದಿರುಗುವ ಯೋಚನೆ ಮಾಡುತ್ತಾನೆ. ಅವನು ಹೋದರೆ ಟೋಬಿಯ ಗತಿ? ಬೇಕುಬೇಕಾದಾಗ ಹಣ ಒದಗಿಸುವರಾರು? ಟೋಬಿ ಏಗ್ಯುಚೀಕನ ಆಸೆಯ ಕುಡಿಯನ್ನು ಬಾಡದೆ ಉಳಿಸಲು 'ಸಿಸೇರಿಯೊ'ನೊಡನೆ ಕತ್ತಿ ಕಾಳಗ ಮಾಡಿ ಗೆದ್ದರೆ ಒಂದೇ ಏಟಿಗೆ ಗೌರವ ಹಾಗೂ ಅಲಿವಿಯಾಳ ಕೃಪಾದೃಷ್ಟಿಗಳನ್ನು ಗೆಲ್ಲಬಹುದೆಂದು ಸಲಹೆ ನೀಡಿ ಅವನನ್ನು ಪ್ರಚೋದಿಸುತ್ತಾನೆ. ಅತ್ತ 'ಸಿಸೇರಿಯೊ'ಗೂ

ಕಾಳಗವನ್ನೆದುರಿಸುವಂತೆ ಚಿತಾವಣೆ ಮಾಡುತ್ತಾನೆ. ಇಬ್ಬರೂ ಭೂಪರೇ! ವಯೋಲ ಹಿಂದೆಂದೂ ಕತ್ತಿ ಕಂಡವಳೇ ಅಲ್ಲ; ಏಗ್ಯುಚೀಕನಿಗೆ ಅದು ಭೂಷಣದ ವಸ್ತು! ನಡು ನಡುಗುತ್ತಲೇ ಇಬ್ಬರೂ ಕತ್ತಿ ಹಿಡಿದು ಒಬ್ಬರನ್ನೊಬ್ಬರು ಎದುರಿಸುತ್ತಾರೆ.

ಈ ನಡುವೆ ಆಂಟೋನಿಯೊ ಎಂಬ ನೌಕಾಪತಿ ನೀರುಪಾಲಾಗಿದ್ದ ವಯೋಲಳ ಸೋದರ ಸಿಬಸ್ಟಿಯನ್‌ನನ್ನು ರಕ್ಷಿಸಿ ಇಲ್ಲೀರಿಯಾಗೆ ಕರೆತಂದಿದ್ದಾನೆ. ಇಬ್ಬರ ನಡುವೆ ಗಾಢ ಸ್ನೇಹ ಬೆಳೆದಿದೆ. ಆಂಟೋನಿಯೊಗೂ ಡೊರೆ ಆರ್ಸಿನೊಗೂ ಹಳೆಯ ವೈರ.




ಆಂಟೋನಿಯೊ

ಆಂಟೋನಿಯೊ ಇಲ್ಲೀರಿಯಾದ ಹಾದಿಬೀದಿಗಳಲ್ಲಿ ರಾಜಾರೋಷವಾಗಿ ಓಡಾಡುವಂತಿಲ್ಲ; ಸಿಕ್ಕಿಬಿದ್ದರೆ ಕೈಸೆರೆ. ತನ್ನ ಹಣದ ಚೀಲವನ್ನು ಸಿಬಸ್ಟಿಯನ್‌ಗೆ ಕೊಟ್ಟು ಊರು ತಿರುಗಿ ಬರಲು ಕಳಿಸಿ, ತಾನು ಅಲ್ಲಲ್ಲೇ ಕದ್ದು ಸುಳಿದಾಡುತ್ತಿದ್ದಾನೆ. ಆಗ ದೂರದಲ್ಲಿ ಏಗ್ಯುಚೀಕ್ 'ಸಿಸೇರಿಯೊ'ರು ನಡಸಿರುವ ಕತ್ತಿಕಾಳಗ ಕಾಣಿಸುತ್ತದೆ. ಅವಳಿ-ಹುಟ್ಟಿನಿಂದಾಗಿ 'ಸಿಸೇರಿಯೊ' ಥೇಟ್ ಸಿಬಸ್ಟಿಯನ್‌ನಂತೆಯೇ ಕಾಣುತ್ತಿದ್ದಾನೆ. ಆಂಟೋನಿಯೊ ತನ್ನ ಮಿತ್ರನೇ ತೊಂದರೆಗೆ ಸಿಕ್ಕಿಬಿದ್ದಿದ್ದಾನೆಂದು ಬಗೆದು ಅವನ ರಕ್ಷಣೆಗೆ ನುಗ್ಗುತ್ತಾನೆ. ಅಷ್ಟರಲ್ಲೇ ಅಲ್ಲಿಗೆ ಬಂದ ದೊರೆಯ ಅಧಿಕಾರಿಗಳು ಅವನನ್ನು ಗುರುತಿಸಿ ಬಂಧಿಸುತ್ತಾರೆ. ಆಂಟೋನಿಯೊ ಅವರನ್ನು ಹಿಂಬಾಲಿಸುವ ಮುನ್ನ ಹಣದ ಚೀಲ ವಾಪಸು ಮಾಡೆಂದು ಗೆಳೆಯನನ್ನು ಕೇಳುತ್ತಾನೆ. 'ಸಿಸೇರಿಯೊ' ತಬ್ಬಿಬ್ಬಾದರೆ ಆಶ್ಚರ್ಯವೇನಿದೆ! ಅವನು ನನಗೆ ಯಾರೂ ಯಾವ ಹಣದ ಚೀಲವನ್ನೂ ಕೊಟ್ಟಿರಲಿಲ್ಲವೆನ್ನುತ್ತಾನೆ. ಆಂಟೋನಿಯೊ ಮಿತ್ರನ ವಿಶ್ವಾಸಘಾತಕತೆಗೆ ಶಪಿಸುತ್ತ ಅಧಿಕಾರಿಗಳೊಡನೆ ಹೋಗುತ್ತಾನೆ.

ಇತ್ತ ಸಿಬಸ್ಟಿಯನ್ ಊರು ಸುತ್ತುತ್ತ ನಡೆದಿರುವಾಗ ಏಗ್ಯುಚೀಕ್ ಎದುರಾಗಿ, ಅವನನ್ನೇ 'ಸಿಸೇರಿಯೊ' ಎಂದುಕೊಂಡು ಅರ್ಧಕ್ಕೆ ನಿಂತಿದ್ದ ಕಾಳಗವನ್ನು ಮುಂಬರಿಸಲು

ಕತ್ತಿ ಹಿರಿಯುತ್ತಾನೆ. ಸಿಬಸ್ಟಿಯನ್‌ಗೆ ಅಚ್ಚರಿ, ಆದರೆ ಅವನೇನು ಪುಕ್ಕಲನೆ? ಕತ್ತಿಗೆ ಕತ್ತಿ ತಿರುವುತ್ತಾನೆ. ಅದನ್ನು ನಿರೀಕ್ಷಿಸದ ಏಗ್ಯುಚೀಕನಿಗೂ ಅವನ ನೆರವಿಗೆ ಬಂದ ಟೋಬಿಗೂ ಗಾಯವಾಗುತ್ತದೆ! ಒಂದು ಅಚ್ಚರಿಯಿಂದ ಸುಧಾರಿಸಿಕೊಳ್ಳುವ ಮೊದಲೇ ಅದಕ್ಕೂ ಹೆಚ್ಚಿನ ಇನ್ನೊಂದು ಅಚ್ಚರಿ ಸಿಬಸ್ಟಿಯನ್‌ಗೆ ಕಾದಿದೆ. ಒಬ್ಬ ಸುಂದರ ತರುಣಿ ಎದುರಾಗಿ ಅವನನ್ನು ಮನೆಗೆ ಕರೆದೊಯ್ದು ಸತ್ಕರಿಸುತ್ತಾಳೆ, ಪ್ರೀತಿ ಮಾಡುತ್ತಾಳೆ. ಅವಳು ಅಲಿವಿಯಾ. 'ಪ್ರಿಯ'ನಿಂದ ಹಿಂದಿನಂತೆ ನಿರಾಕರಣೆ ಬಾರದು. ಶುಭಸ್ಯ ಶೀಘ್ರಂ, ಕೂಡಲೇ ಪಾದ್ರಿಗೆ ಹೇಳಿಕಳಿಸಿ ಮದುವೆಯ ಶಾಸ್ತ್ರ ಮುಗಿಸುತ್ತಾಳೆ.

ಆಳಿನ ಮುಖಾಂತರ ಮಾಡಿಸಿದ ಪ್ರೇಮಯಾಚನೆ ನಿಷ್ಫಲವಾಯಿತೆಂದು ದೊರೆ ತಾನೇ ಖುದ್ದಾಗಿ ಅಲಿವಿಯಾಳ ಮನೆಗೆ ಹೊರಟಿದ್ದಾನೆ. ಜೊತೆಯಲ್ಲಿ 'ಸಿಸೇರಿಯೊ'ನೂ ಇದ್ದಾನೆ. ಅಧಿಕಾರಿಗಳು ಆಂಟೋನಿಯೊನನ್ನು ಅದೇ ದಾರಿಯಲ್ಲಿ ಕರೆದೊಯ್ಯುತ್ತಿದ್ದಾರೆ. ದೊರೆಗೂ ಅವನಿಗೂ ಹಳೆಯ ಹಗೆಯ ಬಗ್ಗೆ ಮಾತಾಗುತ್ತದೆ. ಆಂಟೋನಿಯೊ ಇಲ್ಲೀರಿಯಾಗೆ ಬಂದ ಹಿನ್ನೆಲೆಯನ್ನು ವಿವರಿಸಿ, ದೊರೆಯ ಜೊತೆಗಿರುವ 'ಸಿಸೇರಿಯೊ'ನನ್ನು ಹಣದ ಚೀಲ ಕೊಂಡು ಹಿಂದಿರುಗಿಸದ ವಂಚಕನೆಂದು ಕರೆಯುತ್ತಾನೆ. ಅದೇ ಹೊತ್ತಿಗೆ ಅಲಿವಿಯಾ ಎದುರಾಗಿ 'ಸಿಸೇರಿಯೊ'ನನ್ನು ಪತಿಯೆಂದು ಸಂಬೋಧಿಸುತ್ತಾಳೆ. ಇದು ಹೇಗೆ? ತನ್ನ ಪರವಾಗಿ ಅಲಿವಿಯಾಳನ್ನು ಒಲಿಸಿ ಬರಲು ಹೋಗುತ್ತಿದ್ದ ಆಳೇ ಅವಳನ್ನು ದಕ್ಕಿಹಾಕಿಕೊಂಡನೆ? ದೊರೆಗೆ ಕೋಪ. 'ಸಿಸೇರಿಯೊ' ಅಲ್ಲಗಳೆದರೆ ನಂಬುವವರಾರು? ಅಲಿವಿಯಾ ಮದುವೆ ಮಾಡಿಸಿದ ಪಾದ್ರಿಯನ್ನೇ ಕರೆಸಿ ಸಾಕ್ಷ್ಯ ಕೊಡಿಸುತ್ತಾಳೆ. ಇಷ್ಟೆಲ್ಲ ಗೊಂದಲ ಸಾಲದೆಂಬಂತೆ ಟೋಬಿ ಏಗ್ಯುಚೀಕರು ಧಾವಿಸಿ ಬಂದು 'ಸಿಸೇರಿಯೊ' ಕತ್ತಿ ಬೀಸಿ ತಮಗೆ ಗಾಯಗೊಳಿಸಿದನೆಂದು ಆರೋಪ ಹೊರಿಸುತ್ತಾರೆ. ಒಬ್ಬನ ಮೈ ರಕ್ತ ಕಾರಿದೆ, ಇನ್ನೊಬ್ಬನ ತಲೆ ಒಡೆದು ಬಿರುಕಾಗಿದೆ. ಪಾಪ, 'ಸಿಸೇರಿಯೊ'ನದು ಎಂತಹ ದುರವಸ್ಥೆ!

ಆದರೆ ಆ ಹೊತ್ತಿಗೆ ಸಿಬಸ್ಟಿಯನ್ ಅಲ್ಲಿ ಹಾಜರಾಗುತ್ತಾನೆ. ಎದುರುಬದುರಾದ 'ಸಿಸೇರಿಯೊ', ಸಿಬಸ್ಟಿಯನ್ನರ ತಾದ್ರೂಪ್ಯವನ್ನು ಕಂಡು ಎಲ್ಲರಿಗೂ ಅಚ್ಚರಿ. ಆಗ 'ಸಿಸೇರಿಯೊ'ನ ವೇಷ ಕಳಚಿ ವಯೋಲ ತನ್ನ ನಿಜರೂಪವನ್ನು ಹೊರಗೆಡವುತ್ತಾಳೆ. ನಡೆದುದೆಲ್ಲವನ್ನೂ ವಿವರಿಸುತ್ತಾಳೆ. ದೊರೆ ಅವಳಿಗೇ ಮಾರುಹೋಗುತ್ತಾನೆ. ಅವರ ಮದುವೆಯಾಗುತ್ತದೆ. ಮರಿಯಾಳ ಜಾಣ್ಮೆಗೆ ಮರುಳಾಗಿದ್ದ ಟೋಬಿ ಅವಳ ಕೈಹಿಡಿಯುತ್ತಾನೆ. ಮ್ಯಾಲ್ವೋಲಿಯೊನ ಬಿಡುಗಡೆಯಾಗುತ್ತದೆ. ಇತರರ ಸುಖದಲ್ಲಿ ತನ್ನ ಅಸುಖವನ್ನು ಹೆಚ್ಚಿಸಿಕೊಳ್ಳುವ ಅವನೊಬ್ಬನ ಹೊರತು ಉಳಿದೆಲ್ಲರನ್ನೂ ಹರ್ಷ ಹರಸುತ್ತದೆ.

## 14. ಹ್ಯಾಮ್ಲೆಟ್, ಪ್ರಿನ್ಸ್ ಅಫ್ ಡೆನ್ಮಾರ್ಕ್

**ರಚನೆ:** 1600-1. **ಮೊದಲ ಪ್ರಕಟನೆ:** 1603.

**ಆಕರಗಳು:** ಡೇನಿಷ್ ಕವಿ ಸ್ಯಾಕ್ಸೊ ಗ್ರ್ಯಮಾಟಿಕಸ್ ಲ್ಯಾಟಿನ್‌ನಲ್ಲಿ ರಚಿಸಿದ 'ಜೆಸ್ತಾ ಡೇನಿಕಮ್' ಎಂಬ ಡೆನ್ಮಾರ್ಕ್ ರಾಜಕುಲಚರಿತ್ರೆಯಲ್ಲಿನ ಹ್ಯಾಮ್ಲೆಟನ ಕಥೆಯನ್ನು ಬೆಲ್‌ಫಾರ್ ತನ್ನ 'ಇಸ್ತ್ವಾರ್ ತ್ರಾಜಿಕ್'ನಲ್ಲಿ ಫ್ರೆಂಚಿಗೆ ತಂದುಕೊಂಡ. ಆ ಪಾಠ

ಮುಖ್ಯ ಆಕರ. ಈ ನಾಟಕರಚನೆಗೆ ಕೆಲ ವರ್ಷಗಳ ಹಿಂದೆ ರಂಗ ಕಂಡಿದ್ದ, ಪ್ರಾಯಶಃ ಥಾಮಸ್ ಕಿಡ್ ಬರೆದ ಇದೇ ಹೆಸರಿನ ಇನ್ನೊಂದು ನಾಟಕವೂ ಆಕರವಾಗಿದ್ದಿರಬಹುದು.

**ಕಥೆ:** ಕವಿಯ ಕೃತಿಗಳಲ್ಲೆಲ್ಲಾ ಅತಿ ಮೆಚ್ಚಿನ ನಾಟಕ ಹಾಗೂ ಪಾತ್ರ ಯಾವುದೆಂದು ಎಣಿಕೆಗೆ ಹಾಕಿದರೆ ಬಹುಮತದ ಪಟ್ಟ ಹ್ಯಾಮ್ಲೆಟ್‌ಗೆ. ತಂದೆಯ ಕೊಲೆ, ತಾಯಿಯ ಹಾದರಗಳು ಸೇಡಿಗೆ ಅವಕಾಶ ಒದಗಿಸಿ, ಅತಿಮಾನುಷಶಕ್ತಿಯೊಂದು ಅದಕ್ಕೆ ಪ್ರಚೋದನೆ ಕೊಟ್ಟಾಗ ಸೂಕ್ಷ್ಮ, ಚಿಂತನಪರ, ಅನಿಶ್ಚಿತ ಮನಸ್ಸಿನ ತರುಣನೊಬ್ಬನು ಆ ಸನ್ನಿವೇಶಕ್ಕೆ ಯಾವ ಪ್ರತಿಕ್ರಿಯೆ ನೀಡಬಹುದೆಂಬುದು ಈ ನಾಟಕ. ಹ್ಯಾಮ್ಲೆಟನ ಪಾತ್ರ, ಅವನ ಚಿಂತನಶೀಲತೆ, ಆಂತರಿಕ ಘರ್ಷಣೆ, ನ್ಯಾಯಾನ್ಯಾಯವಿವೇಚನೆ, ವ್ಯಾಕುಲಲೋಲತೆ, ಆತ್ಮದಂಡನೆ — ಇವೆಲ್ಲವೂ ಆಧುನಿಕ ಮನೋಧರ್ಮದ ಹದಕ್ಕೆ ಹೊಂದಿಕೊಂಡ ರುಚಿಗಳು. ಎಂತಲೇ ಈ ಕಾಲಕ್ಕೆ ನಾಟಕ ಇನ್ನೂ ಪ್ರಿಯ! 'ಹ್ಯಾಮ್ಲೆಟ್' ತನ್ನ ಕಾವ್ಯ-ಸಂಪನ್ನತೆ ಹಾಗೂ ಪಾತ್ರಗೌರವಗಳಿಂದಾಗಿ ಜಗತ್ತಿನ ಮಹಾಕೃತಿಗಳಲ್ಲೊಂದಾಗಿದೆ.

ಡೆನ್ಮಾರ್ಕಿನ ದೊರೆಮಗ ಹ್ಯಾಮ್ಲೆಟ್ ವಿಟೆನ್‌ಬರ್ಗ್‌ನಲ್ಲಿ ವಿದ್ಯಾಭ್ಯಾಸ ನಡಸಿರುವಾಗ ಅವನ ತಂದೆ ಹಿರಿಯ ದೊರೆ ಹಠಾತ್ತನೆ ಹಾವು ಕಡಿದು ತೀರಿಕೊಂಡನೆಂಬ ಸುದ್ದಿ ಬರುತ್ತದೆ; ಊರಿಗೆ ಹೊರಟು ಬರುತ್ತಾನೆ. ತಂದೆಯ ಮರಣವೊಂದೇ ಸಾಲದೆಂಬಂತೆ ಅದರ ಹಿಂದೆಯೇ ಮನಸ್ಸನ್ನು ಕಲಕಿ ಕಸವಿಸಿಗೊಳಿಸುವ ಇನ್ನೂ ಒಂದೆರಡು ಸಂಗತಿಗಳು ನಡೆಯುತ್ತವೆ: ಕಣ್ಣೀರು ಬತ್ತುವ ಮೊದಲೇ ತಾಯಿ ಗರ್ಟ್ರೂಡ್ ಸಲ್ಲದ ಆತುರತೆಯಿಂದ ಚಿಕ್ಕಪ್ಪ ಕ್ಲಾಡಿಯಸ್‌ನನ್ನು ಮದುವೆಯಾಗುತ್ತಾಳೆ; ಆ ದುರುಳ ನ್ಯಾಯಸಮ್ಮತವಾಗಿ ಹ್ಯಾಮ್ಲೆಟನಿಗೆ ಬರಬೇಕಾದ ಸಿಂಹಾಸನವನ್ನು ತಾನೇ ಏರಿ ಕೂರುತ್ತಾನೆ. ಹ್ಯಾಮ್ಲೆಟ್ ತರುಣ, ಭಾವನಾಲೋಲ. ಈ ಎಲ್ಲ ಆಘಾತಗಳು ಅವನ ಸೂಕ್ಷ್ಮ ಮನಸ್ಸಿನ ಮೇಲೆ ಆಳವಾದ ಪರಿಣಾಮ ಮಾಡಿ ಮೊದಲೇ ವ್ಯಾಕುಲಸ್ವಭಾವದವನಾದ ಅವನನ್ನು ಇದ್ದಿದ್ದೂ ವ್ಯಥೆಗೀಡುಮಾಡುತ್ತವೆ. ಕನಸಿನಲ್ಲಿ ಸಹ ಕಲ್ಪಿಸಿಕೊಳ್ಳಲಾಗದ ತಾಯಿಯ ಚಂಚಲ ವರ್ತನೆ ಇಡೀ ಸ್ತ್ರೀಕುಲದ ಬಗ್ಗೆಯೇ ದ್ವೇಷ ಕೆರಳಿಸುತ್ತದೆ. ಬದುಕು ಬೇಡವಾಗುತ್ತದೆ.

ಇದೇ ಸಮಯಕ್ಕೆ ಎದೆ ಝಲ್ಲೆನ್ನಿಸುವ ಒಂದು ವಿಚಿತ್ರ ಘಟನೆ ವರದಿಯಾಗುತ್ತದೆ. ಸತ್ತ ದೊರೆಯ ಪ್ರೇತ ನಡುರಾತ್ರಿ ಕೋಟೆಗೋಡೆಯ ಮೇಲೆ ಮತ್ತೆ ಮತ್ತೆ ಕಾಣಿಸಿಕೊಂಡು ಮರೆಯಾಗುತ್ತಿದೆ. ಅದನ್ನು ಕಂಡ ಹ್ಯಾಮ್ಲೆಟನ ಆಪ್ತಮಿತ್ರ ಹೊರೇಷಿಯೊ ಅದರ ಸುದ್ದಿ ತರುತ್ತಾನೆ. ಹ್ಯಾಮ್ಲೆಟ್ ಆ ರಾತ್ರಿ ತಾನೇ ಹೋಗಿ ನೋಡಿದಾಗ ಪ್ರೇತ ಕೈಮಾಡಿ ಕರೆಯುತ್ತದೆ; ಅವನು ಹಿಂಬಾಲಿಸುತ್ತಾನೆ. ಪ್ರೇತ ಒಂದು ಘೋರವಾದ ರಹಸ್ಯವನ್ನು ಬಯಲುಮಾಡುತ್ತದೆ — ತನಗಾದುದು ಸ್ವಾಭಾವಿಕವಾದ ಸಾವಲ್ಲ; ಹೇಯವಾದ ಕೊಲೆ. ಕೊಂದವನು ತಮ್ಮ ಕ್ಲಾಡಿಯಸ್‌ನೇ; ಅವರಲ್ಲಿ ರಾಣಿ ಗರ್ಟ್ರೂಡಳೂ ಷರೀಕು! ಅವಳ ಮೇಲಿನ ಬಯಕೆಗೆ, ದೊರೆತನದ ಆಸೆಗೆ ಕ್ಲಾಡಿಯಸ್ ಆ ಪಾಪಕ್ಕಿಳಿದ. ಪ್ರೇತ ಮುಂದುವರಿದು ಕೊಲೆಯಾದ ರೀತಿಯನ್ನು ವಿವರಿಸಿ, ತಂದೆಯ ಮೇಲಿನ ಪ್ರೀತಿಗೆ ಸೇಡು ತೀರಿಸಿಕೊ ಎಂದು ಹೇಳಿ ಮಾಯವಾಗುತ್ತದೆ. ಹ್ಯಾಮ್ಲೆಟನದು ಮೊದಲೇ ಗಾಯಗೊಂಡ ಮನಸ್ಸು, ಈಗ ಮೇಲೆ ಈ ಬರೆ! ಸುದ್ದಿಯನ್ನು ಗುಟ್ಟಾಗಿಟ್ಟು ಮುಂದಿನ ಕ್ರಮ ಯೋಚಿಸುತ್ತಾನೆ. ಅವನು ಹೇಡಿಯಲ್ಲ. ಆದರೆ ಅಳೆದು ಸುರಿದು, ನ್ಯಾಯಾನ್ಯಾಯ

ಗಳನ್ನು ವಿವೇಚಿಸುತ್ತ ಅದರಲ್ಲೇ ಕಾಲ ದೂಡುವುದು ಅವನ ಪ್ರಕೃತಿ. ಸೇಡಿನ ಹೆಸರಿನಲ್ಲಿ ಹೋಗಿ ಥಟ್ಟನೆ ಕ್ಲಾಡಿಯಸ್‌ನನ್ನು ಕೊಲ್ಲಲಾರ. ತನ್ನೊಳಗೇ ಹಂಚಿಕೆ ಹಾಕಿಕೊಳ್ಳುತ್ತಾನೆ. ಅದರ ಮೊದಲ ಹೆಜ್ಜೆಯಾಗಿ ಮತಿಭ್ರಮಣೆಯಾದವನಂತೆ ನಟಿಸುತ್ತಾನೆ.

ಪೊಲೋನಿಯಸ್ ಅರಮನೆಯ ಗೃಹಮಹತ್ತರ. ಅವನು ವಾಚಾಳಿ, ಮೂರ್ಖ. ಕರೆಯದ ಕಡೆ ಮುನ್ನುಗ್ಗುವುದು ಅವನ ವೈಶಿಷ್ಟ್ಯ. ಲಾರ್ಟಿಸ್ ಅವನ ಮಗ, ಆಫೀಲಿಯಾ ಮಗಳು. ಆಫೀಲಿಯಾ ಚೆಲುವೆ, ಮುಗ್ಧೆ. ಹ್ಯಾಮ್ಲೆಟನಿಗೆ ಅವಳಲ್ಲಿ ತುಂಬ ಪ್ರೀತಿ. ಅವಳಿಗೆ ಅಪ್ಪಅಣ್ಣಂದಿರು ದೊರೆಮಗನಲ್ಲಿ ಸಲುಗೆ ಸಾಧುವಲ್ಲ, ಅವನಿಗೆ ಬೇಕೆಂದರೂ ಬೇಕಾದವರನ್ನು ಮದುವೆಯಾಗುವ ಸ್ವಾತಂತ್ರ್ಯವಿಲ್ಲವೆಂದು ಬೋಧಿಸಿ ಅವಳು ಅವನನ್ನು ನೋಡದಂತೆ ದಿಗ್ಬಂಧನ ಹಾಕಿದ್ದಾರೆ. ಅವಳಿಗೆ ಸಹ ತಂದೆಯ ಮಾತೆಂದರೆ ವೇದವಾಕ್ಯ, ಶಿರಸಾವಹಿಸಿ ಹ್ಯಾಮ್ಲೆಟನಿಂದ ದೂರವಿದ್ದಾಳೆ. ಈ ಸ್ಥಿತಿಯಲ್ಲಿ ಹ್ಯಾಮ್ಲೆಟ್ ಒಮ್ಮೆ ಅವಳ ಕೋಣೆಗೆ ಬಂದು, ಅವಳ ಮುಖವನ್ನು ದೀರ್ಘಕಾಲ ದಿಟ್ಟಿಸಿ ನೋಡಿ, ತಾನು ಹುಚ್ಚನೆಂಬ ಅಭಿಪ್ರಾಯ ಕೊಟ್ಟು ಹೋಗುತ್ತಾನೆ. ಪೊಲೋನಿಯಸ್‌ಗೆ ಇದು ಗೊತ್ತಾದಾಗ ಭಗ್ನ ಪ್ರೇಮವೇ ಈ ಹುಚ್ಚಿಗೆ ಕಾರಣವೆಂದು ನಿಶ್ಚಯಿಸಿ, ಅವನು ಅದನ್ನು ಕ್ಲಾಡಿಯಸ್ ಗಟ್ರೂರ್ಡರಿಗೆ ವರದಿ ಮಾಡುತ್ತಾನೆ. ಹ್ಯಾಮ್ಲೆಟ್-ಆಫೀಲಿಯಾರ ಭೇಟಿ ಏರ್ಪಡಿಸಿ ತನ್ನ ತರ್ಕ ಸರಿಯೆಂದು ಸಾಧಿಸಿ ತೋರಿಸಲು ಮುಂದಾಗುತ್ತಾನೆ.

ಹ್ಯಾಮ್ಲೆಟ್ ಒಬ್ಬನೇ ಅರಮನೆಯ ಕೋಣೆಯಲ್ಲಿ ಚಿಂತಾಮಗ್ನನಾಗಿದ್ದಾನೆ; ಕ್ಲಾಡಿಯಸ್, ಪೊಲೋನಿಯಸರು ಕದ್ದು ನೋಡುತ್ತಿದ್ದಾರೆ. ಹ್ಯಾಮ್ಲೆಟನ ಮನಸ್ಸು ಆತ್ಮಹತ್ಯೆಯ ಕಡೆ ತಿರುಗಿ, ಜೀವನ-ಮರಣಗಳ ಚರ್ಚೆ ನಡಸಿದೆ. ಸತ್ತರೆ ಬದುಕಿನ ಭಾರ ಕಳೆಯುತ್ತದೆ, ನಿಜ. ಆದರೆ ಸಾವಿನಾಚೆಯನ್ನು ಕಂಡವರಾರು? ಅಲ್ಲಾದರೂ ಸುಖ ಶಾಂತಿ ಖಂಡಿತವೆಂದು ಯಾವ ನೆಚ್ಚಿಕೆ? ಹ್ಯಾಮ್ಲೆಟ್ ಈ ಗುಂಗಿನಲ್ಲಿರುವಾಗ ಆಫೀಲಿಯಾ ಎದುರಾಗುತ್ತಾಳೆ. ಅವಳನ್ನು ಕಂಡು ಅವನ ಸ್ತ್ರೀದ್ವೇಷ ಉದ್ರೇಕಗೊಳ್ಳುತ್ತದೆ. ಹೆಂಗಸರ ಪ್ರಾಮಾಣಿಕತೆಯನ್ನು ಪ್ರಶ್ನಿಸಿ ಮಾರ್ಮಿಕವಾಗಿ ಮಾತಾಡುತ್ತಾನೆ (ಪುಟ 225). ಅದನ್ನು ಕದ್ದು ಕೇಳಿದ ಕ್ಲಾಡಿಯಸ್‌ನಿಗೆ ಅವನದು ಹುಚ್ಚಲ್ಲವೆಂದು ಖಚಿತವಾಗುತ್ತದೆ. ಅವನು ಅದರ ಧಾಟಿಯಲ್ಲಿ ಗಂಡಾಂತರಕಾರಿಯಾದ ಯಾವದೋ ಸಂಚಿನ ಗೂಢಾರ್ಥವನ್ನು ಕಂಡು ಹೆದರಿ, ಹ್ಯಾಮ್ಲೆಟನನ್ನು ಇಂಗ್ಲಂಡಿಗೆ ಕಳಿಸುವ ಹಂಚಿಕೆ ಮಾಡುತ್ತಾನೆ.

ಈ ನಡುವೆ ಊರಿಗೊಂದು ನಾಟಕಮಂಡಳಿ ಬಂದಿದೆ. ಹ್ಯಾಮ್ಲೆಟನಿಗೆ ನಾಟಕವೆಂದರೆ ಖಯಾಲಿ; ಅವರನ್ನು ಬರಮಾಡಿಕೊಳ್ಳುತ್ತಾನೆ. ಅವರಲ್ಲೊಬ್ಬನಿಗೆ ಹಿಂದೆ ಅವನ ಬಾಯಿಂದ ಕೇಳಿದ್ದ ನಾಟಕವೊಂದರ ಸಂಭಾಷಣೆಯನ್ನು ಆಡಿ ತೋರಿಸಲು ಹೇಳುತ್ತಾನೆ. ಒಬ್ಬ ರಾಣಿ ತನ್ನ ಗಂಡನ ಸಾವಿಗೆ ಗೋಳಿಡುವ ಸನ್ನಿವೇಶ ಅದು. ಕಣ್ಣಲ್ಲಿ ಧಾರಾಕಾರವಾಗಿ ನೀರು ಹರಿಸಿ ಆ ಪಾತ್ರಧಾರಿ ಆಡಿ ತೋರಿಸುವ ನಾಟಕಖಂಡ ಹ್ಯಾಮ್ಲೆಟನ ಬಗೆ ಕದಡುತ್ತದೆ. ಇಲ್ಲದ ರಾಣಿಯ ಹಳಿಯ ಕಟ್ಟುಕತೆಯೊಂದನ್ನು ಆಡಿ ತೋರಿಸುವಾಗಲೇ ಆ ನಟ ಅಷ್ಟೊಂದು ಭಾವನೆ ಪ್ರಕಟಿಸಬಲ್ಲ; ತಾನೋ ತಂದೆಯ ಕೊಲೆಯಾಗಿ, ತಾಯಿ ಹಾದರಕ್ಕಿಳಿದು, ಕೊಲೆಗಾರ ಯಾರೆಂದು ತಿಳಿದೂ ಭಾವನೆಗಳೇ ಇಲ್ಲದವನಂತೆ ಸುಮ್ಮನೆ ಕುಳಿತಿದ್ದಾನೆ — ಈ ನಿಷ್ಕ್ರಿಯತೆಯನ್ನು ನೆನೆದಾಗ ಹ್ಯಾಮ್ಲೆಟನಿಗೆ ತನ್ನ ಮೇಲೆಯೇ

ಹೇಸಿಗೆ ಬರುತ್ತದೆ. ಮನಸ್ಸು ಮತ್ತೆ ಸಿದ್ಧಾಂತ, ಕ್ರಿಯಾಸಾಧನೆಗಳತ್ತ ಒಲಿಯುತ್ತದೆ. ಆದರೆ ಕ್ಲಾಡಿಯಸ್‌ನೇ ಕೊಲೆಗಾರನೆಂಬುದಕ್ಕೆ ಏನು ಪ್ರಮಾಣ, ಯಾರು ಸಾಕ್ಷಿ? ಯಾವನೋ ದುಷ್ಟಶಕ್ತಿಯೊಂದು ತಂದೆಯ ಪ್ರೇತದಂತೆ ನಟಿಸಿ, ತನ್ನನ್ನು ಪಾಪಕ್ಕೆಳೆಯುತ್ತಿರಬಾರದೇಕೆ? ಪ್ರಮಾಣ ಕಾಣಲು ಒಂದು ಉಪಾಯ ಹೊಳೆಯುತ್ತದೆ. ಹೇಗೂ ಆಟದವರು ಬಂದಿದ್ದಾರೆ. ತಂದೆಯ ಕೊಲೆಯ ಸನ್ನಿವೇಶವನ್ನು ಅವರಿಂದ ನಾಟಕ ಕಟ್ಟಿ ಆಡಿಸಿ, ಅದಕ್ಕೆ ಕ್ಲಾಡಿಯಸ್‌ನ ಪ್ರತಿಕ್ರಿಯೆ ಏನೆಂದು ಏಕೆ ನೋಡಬಾರದು?

ಮರು ರಾತ್ರಿ ನಾಟಕ ನಡೆಯುತ್ತದೆ. ಅದು ಕ್ಲಾಡಿಯಸ್‌ನ ಪಾಪಗಳ ಪ್ರತಿಚಿತ್ರ. ಅಲ್ಲಿನ ಕೊಲೆಯ ಘಟನೆಯನ್ನು ನೋಡಿ ಕ್ಲಾಡಿಯಸ್‌ನ ಅಂತರಂಗ ಕದಡುತ್ತದೆ. ಕತ್ತಲ ಮನೆಯಲ್ಲಿ 'ಬೆಳಕು, ಬೆಳಕು' ಎಂದು ಕೂಗುತ್ತ ಅರ್ಧಕ್ಕೇ ಹೊರಟು ಹೋಗುತ್ತಾನೆ. ಹ್ಯಾಮ್ಲೆಟ್ ಬಯಸಿದ ಪ್ರಮಾಣ ಸಿಕ್ಕಿತು, ಇನ್ನು ಸೇಡು ತೀರಿಸುವುದೊಂದು ಬಾಕಿ!

ನಾಟಕ ಮುಗಿದ ಮೇಲೆ ಗಟ್ರೂಡ್ ಮಗನನ್ನು ಕಂಡು ಮಾತನಾಡುವುದೆಂದು ಮೊದಲೇ ಏರ್ಪಾಡಾಗಿದೆ. ಅವಳ ಕೋಣೆಗೆ ಹೋಗುವಾಗ ಕ್ಲಾಡಿಯಸ್ ಒಬ್ಬನೇ ಪ್ರಾರ್ಥನೆಯಲ್ಲಿ ತೊಡಗಿರುವುದನ್ನು ಹ್ಯಾಮ್ಲೆಟ್ ನೋಡುತ್ತಾನೆ. ಕೊಲ್ಲುವುದಿದ್ದರೆ ಇದಕ್ಕಿಂತ ಅವಕಾಶವಿಲ್ಲ. ಆದರೆ ಹ್ಯಾಮ್ಲೆಟನ ಮನಸ್ಸು ಆ ಬಗೆಯ ರಕ್ತಪ್ರತೀಕಾರಕ್ಕೆ ಒಪ್ಪದು, ಅದೂ ಕ್ಲಾಡಿಯಸ್ ಪ್ರಾರ್ಥನಾಮಗ್ನನಾಗಿ, ದೇವಸನ್ನಿಧಿಯಲ್ಲಿರುವಾಗ!

ಗಟ್ರೂಡ್ ಮಗನಿಗಾಗಿ ಕಾದಿದ್ದಾಳೆ. ಆತ್ಮೀಯವಾಗಿ ಮಾತನಾಡಿ ಅವನ ಬಗೆ ತಿಳಿಯುವುದು ಅವಳ ಉದ್ದೇಶ. ಈ ಭೇಟಿ ಸಹ ಪೊಲೋನಿಯಸನ ಉಪದ್ವ್ಯಾಪದಿಂದ ಸಂಭವಿಸಿರುವುದೇ! ಅವರ ಮಾತನ್ನು ಕದ್ದು ಕೇಳಿ ದೊರೆಗೆ ವರದಿ ಮಾಡಲು ಅವನು ಪರದೆಯ ಹಿಂದೆ ಸಿದ್ಧನಾಗಿ ನಿಂತಿದ್ದಾನೆ. ತಾಯಿ ಮಕ್ಕಳ ಮುಖಾಮುಖಿಯಾಗುತ್ತದೆ. ಚಿಕ್ಕಪ್ಪನ ಬಗೆಗೆ ಮಗನ ಈಚೀಚಿನ ವರ್ತನೆ ಸರಿಯಲ್ಲವೆಂದು ತಾಯಿ ಖಂಡಿಸುತ್ತಾಳೆ. ಅವನು ಎದುರುಬೀಳುತ್ತಾನೆ. ರಾಣಿಗೆ ಮಗನ ಒರಟುತನವನ್ನು ನೋಡಿ ತನ್ನನ್ನು ಅವನು ಎಲ್ಲಿ ಕೊಲ್ಲುವನೋ ಎಂಬ ಭಯ; ಕಿರಿಚಿಕೊಳ್ಳುತ್ತಾಳೆ. ಪರದೆಯ ಹಿಂದಿನಿಂದಲೇ ಪೊಲೋನಿಯಸನೂ ಅವಳ ಪರವಾಗಿ ಸಹಾಯ ಬೇಡಿ ಕೂಗಿಕೊಳ್ಳುತ್ತಾನೆ. ಅವನು ಪೊಲೋನಿಯಸ್ ಎಂದು ಹ್ಯಾಮ್ಲೆಟ್ ಕಾಣ. ಕ್ಲಾಡಿಯಸ್‌ನೇದುಕೊಂಡು ಕತ್ತಿ ಹಿರಿದು ಇರಿಯುತ್ತಾನೆ. ಪೊಲೋನಿಯಸ್ ಸತ್ತುಬೀಳುತ್ತಾನೆ. ಹ್ಯಾಮ್ಲೆಟನ ತರ್ಕ ತಪ್ಪುತ್ತದೆ.

ಎದುರಿಗಿರುವವಳು ತಾಯಿಯೆಂಬುದನ್ನು ಮರೆತು ಹ್ಯಾಮ್ಲೆಟ್ ಅವಳ ಪಾಪಗಳನ್ನು ಮುಖಕ್ಕೇ ಎತ್ತಿ ಆಡಿ, ಜನ್ಮ ಜಾಲಾಡುತ್ತಾನೆ. ಅವನ ಮಾತಿನ ಚೂರಿಪೆಟ್ಟಿಗೆ ಅವಳ ಅಂತರಾತ್ಮ ನುಲಿದು ವಿಲಿವಿಲಿ ಒದ್ದಾಡುತ್ತದೆ. ಹ್ಯಾಮ್ಲೆಟನ ಸೇಡು ತಾಯಿಯ ಮೇಲಲ್ಲವೆಂದು ಪ್ರೇತ ಹಿಂದೆಯೇ ಹೇಳಿತ್ತು. ಅವನು ಮಾತು ಮೀರಿದನೇನೋ ಎಂಬಂತೆ ಅದು ಮತ್ತೆ ಕಾಣಿಸಿಕೊಂಡು ಅವನ ಗುರಿಯನ್ನು ನೆನಪು ಮಾಡಿಕೊಟ್ಟು ಹೋಗುತ್ತದೆ.

ಪೊಲೋನಿಯಸನ ಸಾವಿನ ಸುದ್ದಿ ಕ್ಲಾಡಿಯಸ್‌ನನ್ನು ಕದಡುತ್ತದೆ. ಹ್ಯಾಮ್ಲೆಟ್ ಡೆನ್ಮಾರ್ಕಿನಲ್ಲೇ ಉಳಿದರೆ ಒಂದಲ್ಲ ಒಂದು ದಿನ ತನ್ನನ್ನೂ ಆಹುತಿ ತೆಗೆದುಕೊಳ್ಳದೇ ಬಿಡ. ತಕ್ಷಣ ಹಂಚಿಕೆಯಂತೆ ಅವನನ್ನು ಇಂಗ್ಲಂಡಿಗೆ ಸಾಗಹಾಕುತ್ತಾನೆ; ಅಷ್ಟೇ ಅಲ್ಲ, ಅವನ ಕತೆ ಅಲ್ಲೇ ಮುಗಿದು ಮತ್ತೆ ಡೆನ್ಮಾರ್ಕಿನ ಮುಖ ನೋಡದಂತೆ ಹವಣಿಸುತ್ತಾನೆ. ಜೊತೆಗೇ

ಪೊಲೋನಿಯಸ್ ಸತ್ತ ಸಂದರ್ಭವನ್ನು ಅಡಗಿಸಿಡುತ್ತಾನೆ. ಅದು ಹೊರಬಿದ್ದರೆ ಅದರ ಬೆನ್ನಿಗೇ ತನ್ನ ದುಷ್ಕೃತ್ಯಗಳೂ ಬಯಲಾಗದೆ ಇರವು!

ಅಫೀಲಿಯಾ ಮರ್ದೈವಿ. ತಾನೊಲಿದವನಿಂದ ದೂರವುಳಿದ ವ್ಯಥೆ, ಅವನ ಮತಿ ಭ್ರಮಣೆ, ಮೇಲಾಗಿ ಈಗ ತಂದೆಯ ಸಾವು — ಈ ಎಲ್ಲ ಆಘಾತ ತಡೆಯಲಾರದೆ ಅವಳಿಗೆ ಹುಚ್ಚು ಹಿಡಿಯುತ್ತದೆ. ಶೋಕಸ್ವರವೆತ್ತಿ ಹಾಡುತ್ತ, ಹೂ ಕೂಡಿಸಿ ಮಾಲೆ ಕಟ್ಟಿ ತಂದೆಯ ಸಮಾಧಿಯ ಮೇಲೆಂಬಂತೆ ಅವನ್ನು ಅಲ್ಲಲ್ಲಿ ಅರ್ಪಿಸುತ್ತ ಕಾಡುಮೇಡು ಸುತ್ತುತ್ತಾಳೆ.

ಪ್ಯಾರಿಸ್‌ನಲ್ಲಿದ್ದ ಪೊಲೋನಿಯಸನ ಮಗ ಲಾರ್ಟಿಸ್ ತಂದೆ ಸತ್ತ ಸುದ್ದಿ ಕೇಳಿ ಓಡಿಬರುತ್ತಾನೆ. ಸಾವನ್ನು ಮುತ್ತಿದ ರಹಸ್ಯ, ಅದರ ಪರಿಣಾಮವಾಗಿ ತಂಗಿಗೆ ಹಿಡಿದ ಹುಚ್ಚು ಅವನನ್ನು ಕ್ರುದ್ಧನನ್ನಾಗಿ ಮಾಡಿವೆ. ಕ್ಲಾಡಿಯಸ್‌ನನ್ನು ಎದುರಿಸಿ ಸಮಜಾಯಿಷಿ ಕೇಳುತ್ತಾನೆ. ಕ್ಲಾಡಿಯಸ್ ಚತುರ. ಅದಕ್ಕೆ ಹ್ಯಾಮ್ಲೆಟನೇ ಕಾರಣನೆಂದು ಚುಚ್ಚಿ ಕೊಟ್ಟು ಅವರಿಬ್ಬರ ನಡುವೆ ಹಗೆ ಬಿತ್ತುತ್ತಾನೆ. ಇದೇ ಹೊತ್ತಿಗೆ ತಾನು ಕೂಡಲೇ ಊರಿಗೆ ಹಿಂದಿರುಗಲಿರುವುದಾಗಿ ಹ್ಯಾಮ್ಲೆಟ್‌ನಿಂದ ಪತ್ರ ಬರುತ್ತದೆ. ಇಂಗ್ಲೆಂಡ್ ತಲಪಿ ದೊಡನೆ ತನ್ನ ಕೊಲೆಯಾಗುವಂತೆ ಕ್ಲಾಡಿಯಸ್ ಹೂಡಿದ್ದ ಕುಟಿಲ ತಂತ್ರವನ್ನು ಅವನು ಅಷ್ಟೇ ಚತುರತೆಯಿಂದ ಕೆಡಿಸಿ, ಕೊಲೆಯ ಕತ್ತಿಯಲಗು ತನ್ನ ಬದಲು ತನ್ನನ್ನು ಕೊಲ್ಲಿಸಲು ಕರೆದೊಯ್ದಿದ್ದ ಸಂಚುಗಾರರ ಮೇಲೆಯೇ ಬೀಳುವಂತೆ ಮಾಡಿ ಬರುತ್ತಿದ್ದಾನೆ! ಅವನು ವಾಪಸಾಗಲು ಇನ್ನೂ ಒಂದು ಪ್ರಚೋದನೆಯಿದೆ: ನಾರ್ವೆಯ ದೊರೆಮಗ ಫಾರ್ಟಿನ್‌ಬ್ರಾಸ್ ಜೀವದ ಹಂಗು ತೊರೆದು ಪೊಲೆಂಡಿನ ಮೇಲೆ ಸೈನ್ಯ ನುಗ್ಗಿಸಿದ್ದಾನೆ — ವಿವಾದದ ಸಂಗತಿ ಮೊಟ್ಟೆಚಿಪ್ಪಿನಗಲದ ಭೂಮಿ; ಆದರೆ ಪ್ರಶ್ನೆ ಆತ್ಮಗೌರವದ್ದು! ಇದು ಹ್ಯಾಮ್ಲೆಟನನ್ನು ಮತ್ತೊಮ್ಮೆ ವಿಚಾರಪರನನ್ನಾಗಿ ಮಾಡಿದೆ. ಆ ಬಗೆಯ ಗೌರವಪ್ರಜ್ಞೆ ತನಗೇಕಿಲ್ಲ! ತಂದೆಯ ಕೊಲೆ, ತಾಯಿಯ ಹಾದರಗಳೂ ತನ್ನನ್ನು ಕ್ರಿಯಾನಿಷ್ಠನನ್ನಾಗಿ ಮಾಡಲೊಲ್ಲವೇಕೆ? ಹ್ಯಾಮ್ಲೆಟನ ಮನಸ್ಸು ಸೇಡಿಗೆ ಹಾತೊರೆದು ಊರ ಕಡೆ ತಿರುಗಿದೆ.

ಕ್ಲಾಡಿಯಸ್‌ನ ಒಂದು ತಂತ್ರ ಕೆಟ್ಟಿತು. ಅವನ ಕುಟಿಲ ಬುದ್ಧಿ ಥಟ್ಟನೆ ಬೇರೆ ಒಂದನ್ನು ಹುಡುಕುತ್ತದೆ. ಹ್ಯಾಮ್ಲೆಟ್‌ಗೆ ಕತ್ತಿವರಸೆ ಪ್ರಿಯ. ಲಾರ್ಟಿಸ್ ಸ್ನೇಹದಲ್ಲಿ ಅವನನ್ನು ಕತ್ತಿಯಾಟಕ್ಕೆ ಆಮಂತ್ರಿಸಿ, ಆಟದ ನಿಯಮಕ್ಕೆ ವಿರುದ್ಧವಾಗಿ ಬಿಚ್ಚುಮೊನೆಯಿಂದ ತಿವಿದು ಕೊಲ್ಲಲೆಂದು ಸೂಚಿಸುತ್ತಾನೆ. ಲಾರ್ಟಿಸ್ ಒಪ್ಪಿದ್ದೇ ಅಲ್ಲದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತಾನೆ. ಕತ್ತಿಮೊನೆಗೆ ವಿಷ ಬಳಿದು ಗೀರಿ ಗಾಯಗೊಳಿಸಿದರಾಯಿತು, ಹ್ಯಾಮ್ಲೆಟ್ ಸಾಯುವುದು ಖಂಡಿತ! ಒಮ್ಮೆ ಪೆಚ್ಚು ತಿಂದ ಕ್ಲಾಡಿಯಸ್ ಮತ್ತೊಮ್ಮೆ ಹಾಗಾಗದಿರಲೆಂದು ಪಾನಕ್ಕೆ ವಿಷ ಬೆರಸಿ, ಆಟದ ನಡುವೆ ಹ್ಯಾಮ್ಲೆಟ್‌ಗೆ ಅದನ್ನು ಕುಡಿಯಗೊಡುವುದೆಂದು ಯೋಚಿಸುತ್ತಾನೆ. ಈಗ ತಂತ್ರ ಭದ್ರ!

ಈ ಮಧ್ಯೆ ಹೂವರಸಿ ಹೊರಟ ಹುಚ್ಚಿ ಅಫೀಲಿಯಾ ನೀರಲ್ಲಿ ಜಾರಿ ಬಿದ್ದು ಸಾಯುತ್ತಾಳೆ. ಹ್ಯಾಮ್ಲೆಟ್ ಊರ ಗಡಿಯ ಸ್ಮಶಾನ ಹಾಯುತ್ತಿರುವಾಗ ಸಂಸ್ಕಾರಕ್ಕೆ ಬಂದ ಅವಳ ಶವ ಎದುರಾಗುತ್ತದೆ. ಲಾರ್ಟಿಸ್ ಈ ಎಲ್ಲ ದುರಂತಕ್ಕೆ ಹ್ಯಾಮ್ಲೆಟನೇ ಕಾರಣನೆಂದು ಕಿಡಿನುಡಿದಾಗ ಅವಳ ಶವದ ಮುಂದೆಯೇ ಇಬ್ಬರಿಗೂ ಮಾರಾಮಾರಿಯಾಗುತ್ತದೆ. ಅವಳ ಬಗ್ಗೆ ಹ್ಯಾಮ್ಲೆಟನ ಪ್ರೀತಿ ನಲವತ್ತು ಸಾವಿರ ಅಣ್ಣಂದಿರ ಪ್ರೀತಿಗೂ ಮಿಗಿಲು!

ಕತ್ತಿಪಂದ್ಯಕ್ಕೆ ಕರೆ ಬಂದೊಡನೆಯೇ ಹ್ಯಾಮ್ಲೆಟ್ ಒಪ್ಪುತ್ತಾನೆ. ಲಾರ್ಟಿಸನ ಮೇಲೆ ಅವನಿಗೆ ಒಂದಿನಿತೂ ಹಗೆಯಿಲ್ಲ; ಬದಲು ತನ್ನಂತೆಯೇ ವಿಯೋಗತಪ್ತನಾದ ಅವನ ಬಗ್ಗೆ ಅನುಕಂಪವೇ. ಗೊತ್ತಾದ ದಿನ ಇಬ್ಬರೂ ಪಂದ್ಯಕ್ಕೆ ಸೇರುತ್ತಾರೆ. ಕ್ಲಾಡಿಯಸ್ ಮದ್ಯಕ್ಕೆ ವಿಷ ಬೆರಸಿ ಸಿದ್ಧಮಾಡಿಟ್ಟಿದ್ದಾನೆ. ಲಾರ್ಟಿಸನ ಕತ್ತಿಮೊನೆಗೆ ನಂಜು ಸವರಿದೆ. ಮೊದಲೆರಡು ಸುತ್ತುಗಳಲ್ಲಿ ಹ್ಯಾಮ್ಲೆಟನದೇ ಮೇಲುಗೈ. ಗರ್ಟ್ರೂಡ್ ಸಂತೋಷಗೊಂಡು ಮಗನ ಯಶಸ್ಸಿಗೆ ಮದ್ಯಪಾನ ಮಾಡಲೆಂದು ಕೈ ಚಾಚುತ್ತಾಳೆ; ಸಿಗುವುದು ವಿಷ! ಕ್ಲಾಡಿಯಸ್ ತಡೆಯುವ ಮೊದಲೇ ಅದು ಅವಳ ಹೊಟ್ಟೆ ಸೇರುತ್ತದೆ. ಪಂದ್ಯ ಗಂಭೀರರೂಪ ತಾಳುತ್ತದೆ. ಲಾರ್ಟಿಸ್ ಸೇಡು ಕಾರಿ ಕಾದುತ್ತ ನಂಜುಗತ್ತಿಯಿಂದ ಹ್ಯಾಮ್ಲೆಟನಿಗೆ ಗಾಯಗೊಳಿಸುತ್ತಾನೆ. ಆಟದ ಭರದಲ್ಲಿ ಇಬ್ಬರ ಕತ್ತಿಗಳೂ ಅದಲು ಬದಲಾಗಿ ನಂಜುಗತ್ತಿ ಹ್ಯಾಮ್ಲೆಟನ ಕೈಯಿಗೆ ಬರುತ್ತದೆ. ಮುಂದಿನ ಸುತ್ತಿನಲ್ಲಿ ಅದು ಲಾರ್ಟಿಸನ ಎದೆ ಕಾಣುತ್ತದೆ. ಅದೇ ಹೊತ್ತಿಗೆ ಗರ್ಟ್ರೂಡಳಿಗೆ ಬವಳಿ ಬರುತ್ತದೆ. ಎದುರಿನ ರಕ್ತ ಕೇಳಿಯನ್ನು ನೋಡಲಾರದೆ ಹಾಗಾಗಿದೆಯೆಂದು ಕ್ಲಾಡಿಯಸ್ ಸತ್ಯ ಮರೆಮಾಚಲು ಯತ್ನಿಸುತ್ತಾನೆ. ಆದರೆ ಅವಳು ವಿಷಸೇವನೆಯಾಗಿದೆಯೆಂದು ಮಣಮಣಿಸುತ್ತಾಳೆ. ಸಾವಿನ ಸಮ್ಮುಖದಲ್ಲಿ ಲಾರ್ಟಿಸನ ಕಣ್ಣು ತೆರೆಯುತ್ತದೆ. ಕ್ಲಾಡಿಯಸ್‌ನ ತಂತ್ರವನ್ನು ಹ್ಯಾಮ್ಲೆಟನಿಗೆ ಬಯಲು ಮಾಡಿ ಅದಕ್ಕೆ ಅವನು, ತಾನು, ರಾಣಿ ಮೂವರೂ ಬಲಿಯಾಗಲಿರುವುದನ್ನು ತಿಳಿಸುತ್ತಾನೆ. ಇನ್ನು ಹೊತ್ತಿಲ್ಲ, ಹೆಚ್ಚೆಂದರೆ ಅರೆಗಳಿಗೆ. ಹ್ಯಾಮ್ಲೆಟನ ಅನಿಶ್ಚಿತತೆ, ನಿಷ್ಕ್ರಿಯತೆಗಳು ಮಾಯವಾಗುತ್ತವೆ. ಹಾರಿ ಬಂದು, ಕ್ಲಾಡಿಯಸ್‌ನ ಮೈಮೇಲೆ ಬಿದ್ದು ನಂಜುಗತ್ತಿಯಿಂದಲೇ ಅವನ ಎದೆಯಿರಿಯುತ್ತಾನೆ; ಮೇಲೆ ಬಟ್ಟಲಲ್ಲಿ ಮಿಕ್ಕಿದ್ದ ವಿಷವನ್ನು ಅವನ ಗಂಟಲಿಗೆ ಸುರಿಯುತ್ತಾನೆ. ಪ್ರೇತಕ್ಕೆ ಕೊಟ್ಟಿದ್ದ ಸೇಡಿನ ಭಾಷೆ ಕೊನೆಗೂ ತೀರುತ್ತದೆ. ಸಾವಿನ ತೆಕ್ಕೆಯಲ್ಲಿ ಹ್ಯಾಮ್ಲೆಟ್ ಲಾರ್ಟಿಸರು ಪರಸ್ಪರ ಕ್ಷಮೆ ಕೋರಿ, ಕೆಳೆ ಸಾರಿ ಕಣ್ಣು ಮುಚ್ಚುತ್ತಾರೆ.

## 15. ಟ್ರಾಯ್‌ಲಸ್ ಅಂಡ್ ಕ್ರೆಸಿಡ

**ರಚನೆ:** 1601-2. **ಮೊದಲ ಪ್ರಕಟನೆ** 1609.

**ಆಕರಗಳು:** ಟ್ರಾಯ್‌ಲಸ್, ಕ್ರೆಸಿಡರ ಪ್ರೇಮಕಥಾನಕಕ್ಕೆ ಮುಖ್ಯವಾಗಿ ಚಾಸರನ ಕಥನ-ಕವನವಾದ 'ಟ್ರಾಯ್‌ಲಸ್ ಅಂಡ್ ಕ್ರಿಸೀಡ್'. ಟ್ರೋಜನ್ ಯುದ್ಧದ ಹಿನ್ನೆಲೆಗೆ ಹೋಮರನ ಕೃತಿಯಲ್ಲದೆ ಜಾನ್ ಲಿಡ್‌ಗೇಟನ 'ಸೀಜ್ ಅಫ್ ಟ್ರಾಯ್' ಮತ್ತು ವಿಲಿಯಂ ಕ್ಯಾಕ್ಸ್‌ಟನ್‌ನ 'ರಿಕುಯೆಲ್ ಅಫ್ ದಿ ಹಿಸ್ಟರೀಸ್ ಅಫ್ ಟ್ರಾಯ್'.

**ಕಥೆ:** ಹಲವು ಯಕ್ಷಪ್ರಶ್ನೆಗಳನ್ನೊಡ್ಡಿರುವ ನಾಟಕ ಇದು — ಪೂರ್ಣವಾಗಿ ಷೇಕ್‌ಸ್ಪಿಯರನೇ ಬರೆದುದೆ? ಜಾತಿ ಯಾವುದು? ರುದ್ರವೆ, ಹರ್ಷವೆ, ಮಿಶ್ರವೆ? ಗುರಿ ಏನು? ವಿಡಂಬನೆಯೆ? ಇತ್ಯಾದಿ. ಒಟ್ಟಿನಲ್ಲಿ ಕೃತಿ ಅಪೂರ್ಣ, ಅಪರಿಪೂರ್ಣ. ಹೋಮರನ ವೀರರು ಇಲ್ಲಿ ಹುಲುಮನುಜರಂತೆ ನಡೆದುಕೊಳ್ಳುತ್ತಾರೆ. ನಡುನಡುವೆ ಕಾವ್ಯ, ಮಾತು ಚೆನ್ನ. ನಂಜಿನ ನಾಲಿಗೆ, ಮೊನಚುಮಾತುಗಳ ಥರ್ಸೈಟೀಸನ ಪಾತ್ರ ಗಮನಾರ್ಹ.

ಟ್ರೋಜನ್ ಮಹಾಯುದ್ಧ ನಡೆದಿದೆ. ಈ ಕಡೆ ಗ್ರೀಕರು, ಆ ಕಡೆ ಟ್ರೋಜನರು. ಕಾದಾಟಕ್ಕೆ ಕೊನೆಯಿಲ್ಲ. ಅದರ ಏಳನೆ ವರ್ಷದಲ್ಲೊಮ್ಮೆ ಯುದ್ಧ ವಿರಾಮವಾದಾಗ...

ಟ್ರಾಯ್‌ನ ದೊರೆ ಪ್ರೈಯಾಮನ ಕಿರಿಯ ಮಗ ಟ್ರಾಯ್‌ಲಸ್ ಕ್ರೆಸಿಡ ಎಂಬ ಟ್ರೋಜನ್ ಹುಡುಗಿಗೆ ಮರುಳಾಗಿದ್ದಾನೆ. ಕ್ರೆಸಿಡ ಪರಮ ಸುಂದರಿ. 'ಅವಳ ಕಣ್ಣು, ಕೆನ್ನೆ, ತುಟಿ, ಅಷ್ಟೇಕೆ ಕಾಲು ಸಹ ಚೆಲುವು ನುಡಿದಿದೆ. ಅಂಗಅಂಗಗಳ ಸಂದುಸಂದುಗಳಿಂದ ಬಿನ್ನಾಣ ಹಣಿಕು ಹಾಕಿದೆ.' ಟ್ರೋಜನರನ್ನು ತೊರೆದು ಶತ್ರುಪಕ್ಷ ಸೇರಿದ ಯಾಜಕ ಕ್ಯಾಲ್ಚಸನ ಮಗಳು ಅವಳು. ಈಗ ಚಿಕ್ಕಪ್ಪ ಪ್ಯಾಂಡರಸನ ಆಶ್ರಯದಲ್ಲಿ ಬೆಳೆದಿದ್ದಾಳೆ. ಅವಳಿಗೂ ಟ್ರಾಯ್‌ಲಸ್‌ನಲ್ಲಿ ಮೋಹ. ಆದರೆ ತಾನು ಸುಲಭಲಭ್ಯವಲ್ಲವೆಂದು ತೋರಿಸಲೆಂಬಂತೆ ಉದಾಸೀನದ ಸೋಗು ತಾಳಿದ್ದಾಳೆ. ಟ್ರಾಯ್‌ಲಸ್ ಪ್ಯಾಂಡರಸ್‌ನಿಗೆ ತನ್ನ ಎದೆಬಯಕೆಯನ್ನು ಬಯಲುಮಾಡಿ, ಕ್ರೆಸಿಡಳೊಡನೆ ಜತೆಗೂಡಿಸೆಂದು ಕೋರುತ್ತಾನೆ. ಪ್ಯಾಂಡರಸ್‌ನಿಗೆ ನೀತಿನಿಯಮಗಳ ಕಟ್ಟಿಲ್ಲ, ಮಧ್ಯವರ್ತಿಯಾಗಲು ಒಪ್ಪುತ್ತಾನೆ.

ಆ ಕಡೆ ಗ್ರೀಕ್ ಶಿಬಿರದಲ್ಲಿ ನಾಯಕರ ನಡುವೆ ಒಡಕು ತಲೆಯಿಟ್ಟು, ಟ್ರೋಜನರನ್ನು ಸದೆಬಡಿಯುವ ಅವರ ಸಾಹಸ ವ್ಯರ್ಥವಾಗಿದೆ. ಟ್ರೋಜನ್ ಯುದ್ಧದ ಮೂಲವೆಂದರೆ ಟ್ರಾಯ್‌ಲಸನ ಅಣ್ಣ ಪ್ಯಾರಿಸ್ ಗ್ರೀಕರ ಮೆನಿಲಾಸನ ಹೆಂಡತಿ ಹೆಲೆನಳನ್ನು ಹಾರಿಸಿ ತಂದುದು. ಯುದ್ಧ ಕಾದು ಕಾದು ಬೇಸತ್ತ ಗ್ರೀಕರು ಟ್ರೋಜನರು ಅವಳನ್ನು ವಾಪಸು ಮಾಡಿ ತಪ್ಪುದಂಡ ತೆರಲು ಒಪ್ಪಿದರೆ ಶಾಂತಿ ಮಾಡಿಕೊಳ್ಳುವುದಾಗಿ ಷರತ್ತು ಕಳಿಸುತ್ತಾರೆ. ಇದು ಪ್ರೈಯಾಮ್ ಮತ್ತು ಅವನ ಮಕ್ಕಳ ನಡುವೆ ಚರ್ಚೆಗೆ ಬಂದಾಗ ಹಿರಿಮಗ ಹೆಕ್ಟರ್ ಷರತ್ತಿಗೆ ಒಪ್ಪೋಣವೆನ್ನುತ್ತಾನೆ; ಅವನ ದೃಷ್ಟಿಯಲ್ಲಿ ಹೆಲೆನ್ ಇಷ್ಟೆಲ್ಲ ಶ್ರಮಸಾಹಸಗಳಿಗೆ ಅರ್ಹಳಲ್ಲ. ಆದರೆ ತಮ್ಮಂದಿರು ರಸಿಕರು; ಜೀವ ಹೋದರೂ ಅವರಿಗೆ ಹೆಲೆನ್ ಉಳಿಯಬೇಕು. ಈ ಯುದ್ಧದಿಂದ ಮನೆ ಮಸಣವಾಗುವುದೆಂದು ಅಕ್ಕ ಕ್ಯಾಸಂಡ್ರ ನುಡಿಯುವ ಘೋರ ಪ್ರವಾದ ಅವರಿಗೆ ಕೇಳದು; ಸಂಧಿವಿಗ್ರಹವನ್ನು ತಳ್ಳಿಹಾಕಿ, ಕಾದಾಟದಲ್ಲಿಯೇ ಕೀರ್ತಿ ಅರಸುವುದೆಂಬ ತೀರ್ಮಾನಕ್ಕೆ ಬರುತ್ತಾರೆ. ಈ ಮೊದಲೇ ವೀರಾಗ್ರಣಿ ಹೆಕ್ಟರ್ ತನ್ನೊಡನೆ ಕೈಕಾಳಗಕ್ಕೆ ಯಾರು ಬರುವಿರೆಂದು ಗ್ರೀಕರನ್ನು ಕೆಣಕಿ ಸವಾಲು ಕಳಿಸಿದ್ದಾನೆ. ಗ್ರೀಕರಲ್ಲಿ ಅವನಿಗೆ ಆ್ಯಕಿಲೀಸ್ ಒಬ್ಬನೇ ಸರಿಸಾಟಿ. ಆ್ಯಕಿಲೀಸ್ ವೀರಯೋಧ. ಆದರೆ ದುರಭಿಮಾನಿ. ಹಿಂದೆಂದಿನದೋ ಕೀರ್ತಿಸಾಹಸಗಳ ಮೆಲುಕಿನಲ್ಲಿ ಸದ್ಯದ ಕರ್ತವ್ಯವನ್ನು ಮರೆತು, ಜತೆಯವರ ಪ್ರಯತ್ನಗಳನ್ನು ಕರುಬುತ್ತ, ಅಣಕ ಮಾಡುತ್ತ ಕಾಲ ತಳ್ಳುತ್ತಿದ್ದಾನೆ. ಅವರು ಕಾಣಬಂದರೆ ಮೈ ಸರಿಯಿಲ್ಲವೆಂಬ ನೆಪ ಹೇಳಿ ಮುಖ ನೋಡದೆಯೇ ಹಿಂದಕ್ಕೆ ಕಳಿಸುವಷ್ಟು ಗರ್ವ ಅವನದು. ಗ್ರೀಕ್ ನಾಯಕರು ಅವನಿಗೆ ಬುದ್ಧಿ ಕಲಿಸಲೆಂದು ಹೆಕ್ಟರನ ಸವಾಲನ್ನೆದುರಿಸಲು ಅವನ ಬದಲು ಹುಂಬ ಏಜಾಕ್ಸ್‌ನನ್ನು ಆರಿಸುತ್ತಾರೆ.

ತಲೆಹಿಡಕ ಪ್ಯಾಂಡರಸನ ಪ್ರಯತ್ನ ಫಲಿಸುತ್ತದೆ. ಟ್ರಾಯ್‌ಲಸ್, ಕ್ರೆಸಿಡ ಗುಟ್ಟಾಗಿ ಕೂಡುತ್ತಾರೆ, ರಮಿಸುತ್ತಾರೆ, ಒಬ್ಬರಿಗೊಬ್ಬರು ಚಿರಕಾಲ ನಿಷ್ಠೆಯಿಂದಿರುವುದಾಗಿ ಮಾತು ಕೊಡುತ್ತಾರೆ. ಟ್ರಾಯ್‌ಲಸ್‌ನಿಗೆ ಅದು ಸಾಧ್ಯ. ಅವನ ಚಿತ್ತ ಧ್ರುವನಕ್ಷತ್ರದಂತೆ ಅಚಲ, ಸ್ಥಿರ. ಆದರೆ ಕ್ರೆಸಿಡ? ಅವಳು ಹೆಣ್ಣು! ರಾತ್ರಿ ರಮಿಸಿ ಮುಂಜಾನೆ ಎದ್ದಾಗ ಅವರ ವಚನಬದ್ಧತೆಗೆ ಒಡ್ಡಿದ ಪರೀಕ್ಷೆಯೆಂಬಂತೆ ಬಾಗಿಲಾಚೆ ವಿಯೋಗ ಕಾಯುತ್ತಿದೆ.

ಟ್ರೋಜನರ ಆಂಟಿನಾರ್ ಎಂಬ ಯೋಧ ಗ್ರೀಕರಿಗೆ ಕೈಸೆರೆ ಸಿಕ್ಕಿದ್ದಾನೆ. ಅವನನ್ನು ಬಿಟ್ಟುಕೊಟ್ಟು ತನ್ನ ಮಗಳನ್ನು ಕರಸಿಕೊಳ್ಳಬೇಕೆಂದು ಕ್ರೆಸಿಡಳ ಅಪ್ಪ ಕ್ಯಾಲ್ಚಸ್ ಗ್ರೀಕ್ ನಾಯಕರಿಗೆ ಒತ್ತಾಯ ಹಾಕಿ ಒಪ್ಪಿಸಿದ್ದಾನೆ. ಟ್ರೋಜನರು ತಮ್ಮ ದೊರೆಮಗ ಟ್ರಾಯ್‌ಲಸ್ ಕ್ರೆಸಿಡಳಿಗೆ ಒಲಿದು ಅವಳೊಡನೆ ಕಳ್ಳ ಸಂಬಂಧವಿರಿಸಿಕೊಂಡಿರುವುದನ್ನು ಕಂಡೂ ವಿನಿಮಯಕ್ಕೆ ಒಪ್ಪಿದ್ದಾರೆ. ಗ್ರೀಕ್ ಸೇನಾನಿ ಡಯೋಮೀಡೀಸ್ ಆಂಟಿನಾರ್‌ನನ್ನು ಟ್ರೋಜನರಿಗೆ ಒಪ್ಪಿಸಿ ಕ್ರೆಸಿಡಳನ್ನು ಕರೆದೊಯ್ಯಲು ಬರುತ್ತಾನೆ. ಟ್ರಾಯ್‌ಲಸ್ ಕ್ರೆಸಿಡ ಅಗಲದೆ ವಿಧಿಯಿಲ್ಲ. ಟ್ರಾಯ್‌ಲಸ್ ತನ್ನ ಪ್ರೇಮದ ಅಂಕಿತವಾಗಿ ಕ್ರೆಸಿಡಳ ನಲ್ದೋಳಿಗೆ ಒಂದು ಬಂದಿ ತೊಡಿಸುತ್ತಾನೆ. ಗ್ರೀಕರ ಕಾವಲಾಳುಗಳನ್ನು ಒಳಹಾಕಿಕೊಂಡು ಆಗಾಗ್ಗೆ ಬಂದು ನೋಡುವ ಭರವಸೆ ಕೊಡುತ್ತಾನೆ. ಡಯೋಮೀಡೀಸ್ ನೀಚ. ಟ್ರಾಯ್‌ಲಸನ ಕಣ್ಣಮುಂದೆಯೇ ಕ್ರೆಸಿಡಳನ್ನು ಕೊಂಡಾಡಿ ಅವಳನ್ನು ಒಲಿಸಿಕೊಳ್ಳುವ ದಾರಿ ನೋಡುತ್ತಾನೆ. ಕ್ರೆಸಿಡಳಿನ್ನೂ ಟ್ರೋಜನ್ ಗಡಿ ದಾಟಿ ಗ್ರೀಕ್ ನೆಲ ತುಳಿಯುವುದಕ್ಕಿಲ್ಲ ಅವಳಲ್ಲಿ ಚಂಚಲತೆ ಮೊಳೆಯುತ್ತದೆ. ಟ್ರಾಯ್‌ಲಸನಿಗಿತ್ತಿದ್ದ ನಿಷ್ಠೆಯ ಭಾಷೆ ಮರೆಯುತ್ತದೆ. ಅವಳ ಚೆಲುವಿಗೆ ಮಾರುಹೋದ ಗ್ರೀಕ್ ವೀರರ ಒಂದು ತಂಡ ಅವಳನ್ನು ಮುತ್ತಿ ಮೈಮೇಲೆ ಬಿದ್ದು ಮುತ್ತಿನ ಮಳೆಗರೆದರೆ ಆ ಹೆಣ್ಣು ಒಲ್ಲೆನೆನ್ನಳು!

ಅಹಂಕಾರಕ್ಕೆ ಉದಾಸೀನವೇ ಮದ್ದು. ಗ್ರೀಕ್ ಸೇನಾನಿಗಳು ಬೇಕೆಂದೇ ಆ್ಯಕಿಲೀಸ್‌ನನ್ನು ಕಡೆಗಣಿಸಿ ತಾತ್ಸಾರದಿಂದ ಕಾಣಲು ಆರಂಭಿಸುತ್ತಾರೆ. ಒಮ್ಮೆ ಅವನ ದರ್ಶನಮಾತ್ರದಿಂದಲೇ ತಮ್ಮ ಬದುಕು ಪಾವನವಾಯಿತೆಂದು ತಿಳಿಯುತ್ತಿದ್ದವರು ಸಹ ಈಗ ಅವನಾಗಿಯೇ ಎದುರಾದರೂ ಮಾತಾಡಿಸಲೊಲ್ಲರು. ಆ್ಯಕಿಲೀಸ್ ಹೀಗೇಕೆಂದು ಯೂಲಿಸಿಸ್‌ನನ್ನು ಪ್ರಶ್ನಿಸಿದಾಗ ಅವನು ಕಾಲದ ಕಣ್ಣಿನಲ್ಲಿ ನಿನ್ನೆಯೆಂಬುದು ಹಳಸು, ಕೀರ್ತಿ ಬೆಳಗಿ ಮಿನುಗುವುದು ದಿನದಿನದ ಸಾಹಸಸಾಧನೆಗಳಿಂದ ಎಂದು ನುಡಿದು, ಮಲಗಿದ ಆ್ಯಕಿಲೀಸ್‌ನನ್ನು ಎಚ್ಚರಿಸಿ ವಿಚಾರಪರನನ್ನಾಗಿ ಮಾಡುತ್ತಾನೆ (ಪುಟ 222). ಹೆಕ್ಟರ್ ಸದ್ಯದಲ್ಲಿಯೇ ಗ್ರೀಕ್‌ರೊಡನೆ ಕೈಕಾಳಗಕ್ಕೆ ಬರಲಿದ್ದಾನೆ. ಆ್ಯಕಿಲೀಸ್‌ನಿಗೆ ತನ್ನ ಆ ಸಾಟಿಯನ್ನು ರಣರಂಗದಾಚೆ ಕಂಡು, ಕಣ್ಣು ತಣಿಸಿಕೊಳ್ಳುವ ಆಸೆ. ಕಾಳಗದ ನಂತರ ಔತಣವೇರ್ಪಡಿಸಿ ಅವನನ್ನು ಆಮಂತ್ರಿಸುವ ಸಿದ್ಧತೆ ಮಾಡುತ್ತಾನೆ.

ಹೆಕ್ಟರ್ ಗ್ರೀಕ್ ಶಿಬಿರಕ್ಕೆ ಬರುತ್ತಾನೆ. ಜೊತೆಗೆ ಟ್ರಾಯ್‌ಲಸನೂ ಇದ್ದಾನೆ; ಈ ನೆಪದಲ್ಲಿ ಕ್ರೆಸಿಡಳನ್ನು ಕಾಣುವುದು ಅವನ ಹಂಚಿಕೆ. ಗೊತ್ತಾದಂತೆ ಹೆಕ್ಟರ್-ಏಜಾಕ್ಸ್ ಕಾಳಗಕ್ಕಿಳಿಯುತ್ತಾರೆ; ಆದರೆ ಮುಂದುವರಿಸಲು ಮನ ಒಪ್ಪದು. ಅವರು ರಕ್ತಸಂಬಂಧಿಗಳು; ಏಜಾಕ್ಸ್ ಹೆಕ್ಟರನ ಅತ್ತೆಯ ಮಗ. ಅರ್ಧಕ್ಕೇ ಹೋರಾಟ ನಿಲ್ಲಿಸಿ ಗೆಳೆಯರಂತೆ ನಡೆದುಕೊಳ್ಳುತ್ತಾರೆ. ಹೆಕ್ಟರನಿಗೆ ಆ್ಯಕಿಲೀಸನ ಪರಿಚಯವಾಗುತ್ತದೆ. ಅವರು ಎದುರುಬದುರಾದ ಎರಡು ಹುಲಿಗಳು! ಮೊದಲ ನೋಟದಲ್ಲೇ ಕಣ್ಣಕಾಳಗಕ್ಕೆ ತೊಡಗುತ್ತಾರೆ. ಆ್ಯಕಿಲೀಸ್ ಅಷ್ಟಕ್ಕೆ ಸುಮ್ಮನಾಗದೆ ಮೂದಲಿಸಿ ಮಾತಾಡುತ್ತಾನೆ. ಹೆಕ್ಟರ್ ಕೆರಳಿ ಆ ಮಾತಿಗೆ ಉತ್ತರ ಕೈಯಿಂದ ಎನ್ನುತ್ತಾನೆ. ಆ ರಾತ್ರಿಯ ಸ್ನೇಹಸಮಾಗಮ ಮುಗಿಸಿ, ಮರುದಿನ ಯುದ್ಧರಂಗದಲ್ಲಿ ಒಬ್ಬರನ್ನೊಬ್ಬರು ಎದುರಿಸುವುದೆಂದು ಗೊತ್ತುಮಾಡುತ್ತಾರೆ!

ಔತಣದ ನಂತರ ಟ್ರಾಯ್‌ಲಸ್ ಕ್ರೆಸಿಡಳನ್ನು ಕಾಣುವ ಹಂಬಲದಿಂದ ಯೂಲಿ

ಸಿಸ್‌ನ ನೆರವು ಪಡೆದು ಅವಳ ಅಪ್ಪ ಕ್ಯಾಲ್ಕಸನ ಶಿಬಿರದ ಕಡೆ ನಡೆಯುತ್ತಾನೆ. ಅಲ್ಲಿ ಅವನಿಗೆ ಕಾಣುವುದು ಎದೆಯಿರಿಯುವ ಅಸಹ್ಯ ದೃಶ್ಯ. ಅವನು ತನ್ನವಳೆಂದುಕೊಂಡ ಕ್ರೆಸಿಡ ಕೊಟ್ಟ ವಚನ ತಪ್ಪಿ ಕಾಮುಕಿಯಂತೆ ಡಯೋಮೀಡೀಸ್‌ನೊಡನೆ ಕೇಳಿಗೆ ತೊಡಗಿದ್ದಾಳೆ. ತನ್ನೊಲವಿನ ಕುರುಹಾಗಿ ಟ್ರಾಯ್‌ಲಸ್ ಕೊಟ್ಟಿದ್ದ ತೋಳ್ತೊಡಿಗೆಯನ್ನು ಹೊಸ ನಲ್ಲನಿಗೆ ದಾನ ಮಾಡಿದ್ದಾಳೆ. ಈ ಘಟನೆ ಟ್ರಾಯ್‌ಲಸ್‌ನನ್ನು ಚುಚ್ಚಿ ಕೆರಳಿಸುತ್ತದೆ.

ಮರುದಿನ ಟ್ರಾಯ್‌ಲಸನೂ ಕಾಳಗಕ್ಕೆ ಇಳಿದು ಡಯೋಮೀಡೀಸ್‌ನನ್ನು ಅರಸಿ ಅವನೊಡನೆ ಹೋರುತ್ತಾನೆ. ಆದರೆ ಅದೊಂದು ನಿಷ್ಫಲ ಘರ್ಷಣೆಯಾಗಿ ಪರಿಣಮಿಸುತ್ತದೆ.

ಹಿಂದಿನ ರಾತ್ರಿ ಅಷ್ಟೆಲ್ಲ ಹಾರಾಡಿದ ಆ್ಯಕಿಲೀಸ್ ಆ ದಿನ ಕಣಕ್ಕಿಳಿಯಲೊಲ್ಲ. ಅವನಿಗೆ ಹೆಕ್ಟರಿನ ಸೋದರಿಯಾದ ಪಾಲಿಕ್ಸೆನಳಲ್ಲಿ ಪ್ರೇಮ. ಹೆಕ್ಟರನ ತಂದೆತಾಯಿಗಳು ತಮ್ಮ ಮಗಳು ಬೇಕೆನ್ನುವುದಾದರೆ ಟ್ರೋಜನರ ವಿರುದ್ಧ ಕಾದಕೂಡದೆಂದು ಪತ್ರ ಕಳಿಸಿ ಅವನನ್ನು ಸ್ವಜನದ್ರೋಹಿಯನ್ನಾಗಿ ಮಾಡಿದ್ದಾರೆ. ಆ್ಯಕಿಲೀಸ್ ಕಾಣಸಿಗದೆ ಹೆಕ್ಟರ್ ಅವನ ನೆಚ್ಚಿನ ಜತೆಗಾರನಾದ ಪೆಟ್ರೋಕ್ಲಸ್‌ನೊಡನೆ ಕಾದು ಕೊಲ್ಲುತ್ತಾನೆ. ಸುದ್ದಿ ತಿಳಿದಾಗ ಆ್ಯಕಿಲೀಸನ ಕಿಚ್ಚು ಕೆರಳುತ್ತದೆ. ಆದರೆ ಅವನು ಹೆಕ್ಟರನನ್ನು ಎದುರಿಸುವಂತಿಲ್ಲ; ತನ್ನ ಹೊರತು ಅವನೊಡನೆ ಕಾದಬಲ್ಲವರು ಇನ್ನೊಬ್ಬರಿಲ್ಲ! ಆ ವೀರರ ವೀರ ಹೇಡಿಯಂತೆ ಹೆಕ್ಟರನ ಕೊಲೆಗೆ ಹವಣಿಸುತ್ತಾನೆ. ಕಾಳಗದ ನಂತರ ಹೆಕ್ಟರ್ ನಿರಾಯುಧನಾಗಿ ದಣಿವಾರಿಸಿಕೊಳ್ಳುತ್ತಿರುವಾಗ ಕಾದಾಳುಗಳನ್ನು ಬಿಟ್ಟು ಅವನನ್ನು ಕೊಲ್ಲಿಸುತ್ತಾನೆ. ನಂತರ ಕುದುರೆಯ ಬಾಲಕ್ಕೆ ಅವನ ಶವ ಕಟ್ಟಿಸಿ, ಊರ ಸುತ್ತ ಎಳಸಿ ತೃಪ್ತಿ ಪಡುತ್ತಾನೆ.

## 16. ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್

**ರಚನೆ :** 1602-3 ? **ಮೊದಲ ಪ್ರಕಟನೆ :** 1623.

**ಆಕರ :** ಇಟಲಿಯ ಜಿಯೊನ್ನಿ ಬೋಕಾಚಿಯೊನ 'ಡಿಕಾಮೆರಾನ್' ಕಥಾಶತಕದಲ್ಲಿನ 'ಗಿಗ್ಲಿಯೆತ್ತ ದಿ ನೆರ್ಬೊನ' ಎಂಬ ಕಥೆ, ವಿಲಿಯಂ ಪೇಂಟರ್ ತನ್ನ 'ಪ್ಯಾಲೆಸ್ ಆಫ್ ಪ್ಲೆಷರ್'ನಲ್ಲಿ ಮಾಡಿದ ಅನುವಾದದ ಮೂಲಕ.

**ಕಥೆ:** ಒಲ್ಲೆನೆಂಬ ಗಂಡು, ಒಲಿಸಿಕೊಳ್ಳದೆ ಬಿಡೆನೆಂಬ ಹೆಣ್ಣು — ಈ ಎರಡು ಕಠಿಣ ಸಂಕಲ್ಪಗಳ ನಡುವಿನ ಘರ್ಷಣೆ ಮೈವೆತ್ತಿ ಇಲ್ಲಿ ನಾಟಕವಾಗಿದೆ. ಒಬ್ಬಳ ಬದಲು ಇನ್ನೊಬ್ಬಳು ಗಂಡಿಗೆ ಗುರುತು ಕೊಡದಂತೆ ರತಿಗೂಡಿದಳೆಂಬ ಕಥಾಶಿಖರ ಅಸಹಜ. ನಾಟಕಕ್ಕೆ ಸೊಗಸಿತ್ತಿರುವುದು ಫಾಲ್‌ಸ್ಟಾಫನ್ನು ನೆನಪಿಗೆ ತರುವ ಪರೊಲೆಸ್‌ನ ಪಾತ್ರ. ಹೆಲಿನಾ ಹಾಗೂ ಮುದಿ ದೊರೆಸಾನಿಯ ಪಾತ್ರಗಳೂ ವಿಮರ್ಶಕರ ಪ್ರಶಂಸೆ ಪಡೆದಿವೆ.

ರೂಸಿಲಾನ್ ಫ್ರಾನ್ಸಿನ ಒಂದು ಆಶ್ರಿತ ಪ್ರದೇಶ. ಅದರ ದೊರೆ ತೀರಿದ್ದು, ಒಡೆತನ ಮುದಿ ದೊರೆಸಾನಿಯ ಕೈಯಲ್ಲಿದೆ. ಅವಳಿಗೆ ಒಬ್ಬನೇ ಒಬ್ಬ ಮಗ, ಬರ್ಟ್ರಾಮ್. ಅವನು ವಯಸ್ಸಿಗೆ ಬಂದೊಡನೆಯೇ, ಬಂದು ತನ್ನ ಸೇವೆಗೆ ಸೇರಬೇಕೆಂದು ಫ್ರಾನ್ಸಿನ ರಾಜನಿಂದ ಅಪ್ಪಣೆ ಬರುತ್ತದೆ. ಬರ್ಟ್ರಾಮ್ ದೊರೆಗೆ ಅಧೀನ; ಇಷ್ಟವಿಲ್ಲದಿದ್ದರೂ ಮುದಿ ತಾಯಿಯನ್ನು ಹಿಂದೆ ಬಿಟ್ಟು ಪ್ಯಾರಿಸಿನ ದಾರಿ ಹಿಡಿಯುತ್ತಾನೆ. ಅವನಿಗೆ ಪರೊಲೆಸ್ ಎಂಬ

ಗೆಳೆಯ : ಶುದ್ಧ ಅಯೋಗ್ಯ; ಬರ್ಟ್ರಾಮನ ಮೇಲೆ ಬದನಿಕೆಯಂತೆ ಬೆಳೆದು, ಬಾಲಂಗಚ್ಚಿಯಂತೆ ಹಿಂದೆ ಹಿಂದೆ ಓಡಾಡಿಕೊಂಡಿದ್ದಾನೆ. ಅವನೂ ಮಿತ್ರನೊಂದಿಗೆ ಹೊರಡುತ್ತಾನೆ.

ಈ ಅಗಲಿಕೆಯ ದುಃಖ ಕೇವಲ ಬರ್ಟ್ರಾಮನ ತಾಯಿಯೊಬ್ಬಳಿಗೇ ಅಲ್ಲ, ಅವಳ ಮನೆಯಲ್ಲಿ ಕೈಯಾಳಾಗಿ ಕೆಲಸಮಾಡುತ್ತ ಬೆಳೆಯುತ್ತಿರುವ ಹೆಲಿನಾಳಿಗೆ ಸಹ. ಹೆಲಿನಾ ಸುಂದರಿ, ಸುಸಂಸ್ಕೃತೆ; ಒಬ್ಬ ಸುಪ್ರಸಿದ್ಧ ವೈದ್ಯನ ಮಗಳು ಅವಳು. ಆದರೆ ವಿಧಿ ಅವಳನ್ನು ಅನಾಥೆಯನ್ನಾಗಿ ಮಾಡಿ ದೊರೆಸಾನಿಯ ವಶಕ್ಕೆ ಒಪ್ಪಿಸಿದೆ. ಅವಳೂ ಬರ್ಟ್ರಾಮ್ ಚಿಕ್ಕಂದಿನಿಂದ ಒಟ್ಟಿಗೆ ಒಂದೆಡೆ ಬೆಳೆದವರು. ಬರ್ಟ್ರಾಮ್ ಎಂದರೆ ಅವಳಿಗೆ ತುಂಬ ಪ್ರೀತಿ. ವಯಸ್ಸು ಬೆಳೆದು, ವಯಸ್ಸಿಗೆ ತಕ್ಕಂತೆ ಮನಸ್ಸು ದೋರೆಯಾದಂತೆಲ್ಲ, ಆ ಪ್ರೀತಿ ಪ್ರೇಮವಾಗಿ, ಎದೆಯೊಳಗೆ ಕನಸು ರೇಶಿಮೆಯ ಬಲೆ ಹೆಣೆದಿದೆ. ಆದರೆ ತಾನು ಅನಾಥೆ, ಅಂತಸ್ತಿನಲ್ಲಿ ಕೀಳಾದವಳು; ಬರ್ಟ್ರಾಮ್ ತನ್ನನ್ನು ಹೇಗೆ ತಾನೆ ಒಪ್ಪಿಯಾನೆಂದು ಅಳುಕಿ ತನ್ನ ಭಾವನೆಗಳನ್ನು ಯಾರಿಗೂ ಬಿಟ್ಟುಕೊಡದೆ ಸುಮ್ಮನಿದ್ದಾಳೆ. ಆದರೆ ಈಗ ಅವನ ಅಗಲಿಕೆ ಆ ಎದೆಗುಟ್ಟನ್ನು ಅವಳ ಮುಖದ ಮೇಲೆ ವ್ಯಥೆಯಾಗಿ ಬರೆದಿದೆ. ದೊರೆಸಾನಿಗೆ ಸುಳಿವು ಹತ್ತುತ್ತದೆ. ಅವಳಿಗೆ ಹೆಲಿನಾ ಎಂದರೆ ಮಗಳನ್ನು ಕಂಡಷ್ಟೇ ವಿಶ್ವಾಸ. ಹತ್ತಿರ ಕರೆದು, ಪ್ರೀತಿಯಿಂದ ಮಾತನಾಡಿ, ಹೆಲಿನಾಳ ಇಂಗಿತವನ್ನು ಕೆದಕಿ ತಿಳಿಯುತ್ತಾಳೆ; ಹೆಲಿನಾ ಮಗನಿಗೆ ತಕ್ಕ ಜೋಡಿಯೆಂದು ನಂಬಿ, ಅವಳ ಇಷ್ಟಸಾಧನೆಗೆ ಪೂರ್ಣ ಬೆಂಬಲ ಕೊಡುತ್ತಾಳೆ.

ಬರ್ಟ್ರಾಮನನ್ನು ಕೂಡಲು ಹೆಲಿನಾ ಒಂದು ಉಪಾಯ ಯೋಚಿಸಿದ್ದಾಳೆ. ಫ್ರಾನ್ಸಿನ ದೊರೆ ಭೀಕರ ರೋಗವೊಂದರಿಂದ ನರಳುತ್ತಿದ್ದಾನೆ. ದೇಶದ ಸಮರ್ಥ ವೈದ್ಯರು ತಮಗೆ ತಿಳಿದ ಎಲ್ಲ ಔಷಧಪಥ್ಯಗಳನ್ನೂ ಪ್ರಯೋಗಿಸಿ ವಿಫಲರಾಗಿ ಅದು ಗುಣವಾಗದ ಕಾಹಿಲೆಯೆಂದು ಕೈಬಿಟ್ಟಿದ್ದಾರೆ. ಹೆಲಿನಾಳಲ್ಲಿ ತನ್ನ ತಂದೆಯಿಂದ ಕಲಿತ ಕೆಲವು ಗುಟ್ಟುಮದ್ದುಗಳಿವೆ. ಅವುಗಳಲ್ಲೊಂದು ದೊರೆಗೆ ರಾಮಬಾಣವಾಗಬಲ್ಲುದೆಂದು ಅವಳಿಗೆ ಖಾತರಿ. ಆ ನೆಪದಲ್ಲಿ ಪ್ಯಾರಿಸಿನ ರಾಜಾಸ್ಥಾನಕ್ಕೆ ಹೋಗಿ ಬರ್ಟ್ರಾಮನನ್ನು ಕೂಡುವುದು ಅವಳ ಹಂಚಿಕೆ. ದೊರೆಸಾನಿ ಇದನ್ನು ಕೇಳಿ ಮೆಚ್ಚಿ ಹೆಲಿನಾಳನ್ನು ಪ್ಯಾರಿಸಿಗೆ ಕಳಿಸಿಕೊಡುತ್ತಾಳೆ.

ಬಯಸಿದ್ದನ್ನು ಬೇಡಿ ಪಡೆಯುವ ಛಲ ಹೆಲಿನಾಳದು. ಪ್ಯಾರಿಸಿಗೆ ಬಂದು ದೊರೆಯನ್ನು ಕಾಣುತ್ತಾಳೆ. ಮದ್ದಿನಿಂದ ಗುಣ ಕಾಣದಿದ್ದರೆ ತನ್ನ ತಲೆ ಪಣವಾಗಲಿ, ಗುಣ ದೊರೆತರೆ ಸಂಭಾವನೆಯಾಗಿ ಆಸ್ಥಾನದ ಅವಿವಾಹಿತರಲ್ಲಿ ತಾನು ಬಯಸಿದವನೊಡನೆ ದೊರೆ ಲಗ್ನ ಮಾಡಿಸಬೇಕು ಎಂದು ಕರಾರು ಹಾಕುತ್ತಾಳೆ. ದೊರೆ ಒಪ್ಪುತ್ತಾನೆ. ಎರಡೇ ದಿನ, ಕಾಹಿಲೆ ಮಾಯವಾಗುತ್ತದೆ. ಮಾತಿನಂತೆ ಸ್ವಯಂವರ ನಡೆಯುತ್ತದೆ. ಕಂಡಂತೆಯೇ ಹೆಲಿನಾ ಬರ್ಟ್ರಾಮನನ್ನು ಗಂಡನನ್ನಾಗಿ ಆರಿಸುತ್ತಾಳೆ. ಆದರೆ ಅವನಿಗೆ ಅವಳಲ್ಲಿ ಇನಿತೂ ಪ್ರೀತಿಯಿಲ್ಲ; ಜೊತೆಗೆ ಅವಳದು ಕೀಳಂತಸ್ತು. ಮದುವೆಗೆ ವಿರೋಧಿಸುತ್ತಾನೆ. ದೊರೆ ಕೊಟ್ಟ ಮಾತನ್ನು ಉಳಿಸಿಕೊಳ್ಳಬೇಕಾಗಿದೆ; ಹಟ ಹಿಡಿಯುತ್ತಾನೆ. ಬರ್ಟ್ರಾಮ್ ರಾಜಾಜ್ಞೆಗೆ ಕಟ್ಟುಬಿದ್ದು ಹೆಲಿನಾಳ ಕೈ ಹಿಡಿಯಲು ಒಪ್ಪಲೇ ಬೇಕಾಗುತ್ತದೆ.

ಮದುವೆಯೇನೋ ಆಗುತ್ತದೆ. ಆದರೆ ಬರ್ಟ್ರಾಮ್ ಕೂಡಲೇ ಆ ಒಲ್ಲದ ನಂಟಿನಿಂದ ಬಿಡಿಸಿಕೊಳ್ಳುವ ದಾರಿ ಹುಡುಕುತ್ತಾನೆ. ಜೊತೆಗೆ 'ಮದುವೆಯಾದವನ ಬಾಳು ಹಾಳು' ಎಂದು ಚೇಲ ಪರೋಲೆಸ್‌ನ ಪಿತೂರಿ ಬೇರೆ! ತುರ್ತುಕೆಲಸದ ಮೇಲೆ ದೂರದೇಶ ಹೋಗ



**ಹೆಲಿನಾ ಮುದಿ ದೊರೆಸಾನಿಗೆ ತಾನು ಅವಳ ಮಗ ಬರ್ಟ್ರಾಮನಿಗೆ ಒಲಿದಿರುವ ಎದೆಗುಟ್ಟನ್ನು ಬಯಲುಮಾಡುತ್ತಿದ್ದಾಳೆ.**

ಬೇಕಾಗಿರುವುದಾಗಿ ಹೇಳಿ ಹೆಲಿನಾಳನ್ನು ಊರಿಗೆ ವಾಪಸು ಕಳಿಸಿಬಿಡುತ್ತಾನೆ. ತಾನು ಫ್ಲಾರೆನ್ಸಿನ ಆಸ್ಥಾನ ಸೇರಿ, ಅದರ ಪರ ಯುದ್ಧ ಕಾದಲು ಹೋಗುತ್ತಾನೆ.

ಊರು ತಲಪಿದ ಕೂಡಲೇ ಹೆಲಿನಾಳಿಗೆ ಬರ್ಟ್ರಾಮನಿಂದ ಒಂದು ಪತ್ರ ಬರುತ್ತದೆ: 'ನಿನ್ನ ಕೈಬೆರಳಲ್ಲಿ ನನ್ನ ಉಂಗುರ, ಒಡಲಿನಲ್ಲಿ ನನ್ನ ಮಗು — ಇವು ಇದ್ದ ದಿನ ನನ್ನನ್ನು ಗಂಡನೆಂದು ಕರೆ' ಎಂದು ಅವನು ಅದರಲ್ಲಿ ಚುಚ್ಚಿ ನುಡಿದಿದ್ದಾನೆ.

ಹೆಲಿನಾಳ ದುಃಖ ಸಹನಾತೀತ. ಬರ್ಟ್ರಾಮ್ ತನ್ನಿಂದಾಗಿ ಅಸುಖಿಯಾದುದಷ್ಟೇ ಅಲ್ಲದೆ ತಾಯ್ನಾಡನ್ನೂ ತೊರೆದು ಹೋಗಿದ್ದಾನೆ. ಅವಳ ಮನಸ್ಸು ಸಾವಿನ ಕಡೆ ಎಳೆಯುತ್ತದೆ. ಹೇಳದೆ ಕೇಳದೆ ಮನೆ ಬಿಟ್ಟು ತೀರ್ಥಯಾತ್ರೆಗೆ ಹೊರಡುತ್ತಾಳೆ. ಕೆಲ ದಿನಗಳಲ್ಲೇ ತಾನು ತೀರಿಕೊಂಡ ಸುದ್ದಿ ಹುಟ್ಟಿಸಿ, ದೊರೆಸಾನಿಯ ಕಿವಿಗೆ ಮುಟ್ಟಿಸುತ್ತಾಳೆ.

ಇತ್ತ ಬರ್ಟ್ರಾಮ್ ಯುದ್ಧದಲ್ಲಿ ಅಪ್ರತಿಮ ಜಯಗಳಿಸಿ ಫ್ಲಾರೆನ್ಸಿಗೆ ಹಿಂದಿರುಗಿದ್ದಾನೆ. ಆ ನಗರದಲ್ಲಿ ಒಬ್ಬ ಬಡ ವಿಧವೆ; ಅವಳಿಗೆ ಡಯಾನ ಎಂಬ ಚೆಲುವೆ ಮಗಳು. ಪರೊಲಿಸ್‌ನ ಕುಪ್ರಯತ್ನದಿಂದ ಬರ್ಟ್ರಾಮ್ ಡಯಾನಳ ಗುರುತು ಮಾಡಿಕೊಂಡು ಸಂಗ ಬೆಳೆಸಿರುವುದಷ್ಟೇ ಅಲ್ಲದೆ ಅವಳೊಡನೆ ರತಿಗೂಡಲು ಕಾತರನಾಗಿದ್ದಾನೆ. ಅವನು ಹಿಂದೆ ಲಗ್ನವಾಗಿದ್ದು ಹೆಂಡತಿಯ ಕೈ ಬಿಟ್ಟಿರುವ ವಿಷಯ, ಈಗಿನ ಅವನ ಇಂಗಿತಗಳನ್ನು ಡಯಾನಳ ತಾಯಿ ಬಲ್ಲಳು. ಮಗಳ ಶೀಲವನ್ನು ಎಚ್ಚರದಿಂದ ಕಾಯುತ್ತಿದ್ದಾಳೆ. ಇದೇ ಹೊತ್ತಿಗೆ ಯಾತ್ರಾರ್ಥಿಯಾಗಿ ಹೊರಟ ಹೆಲಿನಾ ಫ್ಲಾರೆನ್ಸ್ ತಲಪಿ, ಆಕಸ್ಮಿಕವೆಂಬಂತೆ ಆ ಬಡ ವಿಧವೆಯ ಮನೆಯಲ್ಲೇ ಅತಿಥಿಯಾಗಿ ತಂಗುತ್ತಾಳೆ. ಆ ದಿನ ಸೈನ್ಯದ ಮೆರವಣಿಗೆ ಹೊರಟಿದೆ; ಅದರಲ್ಲಿ ಬರ್ಟ್ರಾಮನೂ ಇದ್ದಾನೆ. ಸ್ವಾಭಾವಿಕವಾಗಿ ಮಾತು ಅವನ

ಕಡೆ ಹರಿಯುತ್ತದೆ. ತನ್ನ ಮಗಳ ಮೇಲೆ ಅವನು ಕಾಕದೃಷ್ಟಿ ಬೀರಿರುವುದನ್ನು ವಿಧವೆ ಹೆಲಿನಾಳಿಗೆ ಹೇಳುತ್ತಾಳೆ. ಹೆಲಿನಾ ತಾನೇ ಅವನ ಹೆಂಡತಿಯೆಂಬುದನ್ನು ಹೊರಗೆಡವಿ, ಅವನು 'ನಿನ್ನ ಬೆರಳಲ್ಲಿ ನನ್ನ ಉಂಗುರ, ಒಡಲಲ್ಲಿ ನನ್ನ ಕೂಸು — ಇವು ಇದ್ದ ದಿನ ನಾನು ನಿನ್ನ ಗಂಡ' ಎಂದು ಆಡಿ ಹೋದ ವಕ್ರೋಕ್ತಿಯನ್ನು ವಿಧವೆಗೆ ತಿಳಿಸುತ್ತಾಳೆ. ಬಟ್ರಾಮ್ ಈಗ ಡಯಾನಳಲ್ಲಿ ಆಸಕ್ತಿ ವಹಿಸಿರುವ ಸನ್ನಿವೇಶ ಅವಳ ಪಾಲಿಗೆ ವರ! ಅವಳದು ಉಕ್ಕಿನ ಸಂಕಲ್ಪ. ಹಿಂದೆ ಬಟ್ರಾಮನನ್ನು ಮದುವೆಯಾಗಲು ಮಾಡಿದಂತೆ ಈಗ ಅವನನ್ನು ತನ್ನವನನ್ನಾಗಿಸಿಕೊಳ್ಳಲು ಯಾವ ಅಡ್ಡ ದಾರಿಯನ್ನೂ ಹಿಡಿಯಲೂ ಅವಳು ಸಿದ್ಧ! ವಿಧವೆಗೆ ಹಣದ ಆಸೆ ತೋರಿಸಿ ಇಬ್ಬರಿಗೂ ಒಳಿತಾಗುವ ಒಂದು ಚತುರತಂತ್ರ ಹೂಡುತ್ತಾಳೆ — ಡಯಾನ ಬಟ್ರಾಮನಿಗೆ ಉತ್ತೇಜನ ಕೊಟ್ಟು ಅವನ ಉಂಗುರ ಕಸಿದು ತನಗೆ ಕೊಡುವುದು, ಅಲ್ಲದೆ ರಾತ್ರಿ ಅವನನ್ನು ಸುರತಕ್ಕೆ ಕರೆದು ಅವನಿಗೆ ಗುರುತು ಹತ್ತದಂತೆ ಡಯಾನಳ ಬದಲು ತಾನು ಅವನನ್ನು ಕೂಡುವುದು. ತಂತ್ರ ಯಶಸ್ವಿಯಾಗಿ ಫಲಿಸುತ್ತದೆ. ಡಯಾನ ಬಟ್ರಾಮನಿಂದ ಉಂಗುರ ಕಸಿದದ್ದೇ ಅಲ್ಲದೆ ಮುಂದೊಮ್ಮೆ ಅವನ ಹೆಂಡತಿಯೇನಾದರೂ ತೀರಿಕೊಂಡರೆ ತನ್ನನ್ನೇ ಮದುವೆಯಾಗುವುದಾಗಿ ವಚನ ಪಡೆಯುತ್ತಾಳೆ! ಆ ರಾತ್ರಿ ಡಯಾನಳ ಬದಲು ಹೆಲಿನಾ ಅವನನ್ನು ಕೂಡಿ, ಅವನ ಬೆರಳಿಗೆ ಫ್ರಾನ್ಸಿನ ದೊರೆಯಿಂದ ತನಗೆ ಉಡುಗೊರೆಯಾಗಿ ದೊರೆತಿದ್ದ ಮುದ್ರೆಯುಂಗುರವನ್ನು ತೊಡಿಸುತ್ತಾಳೆ. ಕೀಟಲೆ ತನ್ನ ಕೆಲಸ ಮಾಡುತ್ತದೆ!

ಈ ಸಮಯಕ್ಕೆ ಬಟ್ರಾಮನಿಗೆ ತಾಯಿಯಿಂದ ಒಂದು ಪತ್ರ ಬರುತ್ತದೆ. ಅದರಲ್ಲಿ ಅವನ ಹೆಂಡತಿ ತೀರಿಕೊಂಡ ವಿಷಯವನ್ನು ತಿಳಿಸಿ ಇನ್ನಾದರೂ ಮನೆಗೆ ಮರಳಬೇಕೆಂದು ಮುದುಕಿ ಕೋರಿದ್ದಾಳೆ. ಅಂತೆಯೇ ಬಟ್ರಾಮ್ ಊರಿಗೆ ಹೊರಟು ಬರುತ್ತಾನೆ. ಅವನು ಊರು ತಲಪಿದ ಕೆಲ ದಿನಗಳಲ್ಲೇ ಫ್ರಾನ್ಸಿನ ರಾಜ ರೂಸಿಲಾನಿಗೆ ಭೇಟಿ ಕೊಡುತ್ತಾನೆ. ಬಟ್ರಾಮನನ್ನು ಕ್ಷಮಿಸಿ ಮತ್ತೆ ತನ್ನ ಕೃಪಾಪಾತ್ರಕ್ಕೆ ಕರೆದುಕೊಂಡು, ಅವನಿಗೆ ತನ್ನ ಆಸ್ಥಾನಿಕರಲ್ಲೊಬ್ಬನ ಮಗಳೊಡನೆ ಲಗ್ನ ಹೊಂದಿಸಲು ಮುಂದಾಗುತ್ತಾನೆ. ಮಾತುಕತೆಯ ನಡುವೆ ಬಟ್ರಾಮನ ಕೈಬೆರಳಲ್ಲಿ ತನ್ನ ಮುದ್ರೆಯುಂಗುರವಿರುವುದು ದೊರೆಯ ಕಣ್ಣಿಗೆ ಬೀಳುತ್ತದೆ. ಅದು ತಾನು ಹೆಲಿನಾಳಿಗೆ ಕೊಟ್ಟಿದ್ದ ಉಂಗುರ: ಬಟ್ರಾಮನ ಕೈಬೆರಳಿಗೆ ಹೇಗೆ ಬಂತು? ಹೆಲಿನಾಳ ಬಗೆಗೆ ಬಟ್ರಾಮನಿಗಿದ್ದ ಅರುಚಿಯನ್ನು ದೊರೆ ಬಲ್ಲ. ಅವಳು ಸತ್ತಿರುವ ಸಂದರ್ಭ ಗೂಢ. ಅಂದ ಮೇಲೆ ಬಟ್ರಾಮನೇ ಅವಳನ್ನು ಕೊಂದು ಉಂಗುರವನ್ನು ಅಪಹರಿಸಿರಬಾರದೇಕೆ? ಬಟ್ರಾಮ್ ದೊರೆಗೆ ಏನೆಂದು ವಿವರಣೆ ಕೊಟ್ಟಾನು? ಆ ಹೊತ್ತಿಗೆ ಡಯಾನ ದೊರೆಯ ಮುಂದೆ ಕಾಣಿಸಿಕೊಂಡು, ಬಟ್ರಾಮ್ ಕೊಟ್ಟಿದ್ದ ವಾಗ್ದಾನದ ವಿಷಯ ತಿಳಿಸಿ 'ಈಗ ಅವನ ಹೆಂಡತಿ ಸತ್ತಿದ್ದಾಳಲ್ಲ, ಕೊಟ್ಟ ಮಾತಿನಂತೆ ನನ್ನನ್ನು ಮದುವೆಯಾಗಲಿ' ಎಂದು ಬೇಡಿಕೆ ಹಾಕುತ್ತಾಳೆ. ಬಟ್ರಾಮನಿಗೆ ಪ್ರಾಣಸಂಕಟ! ಡಯಾನಳ ಹಿಂದೆಯೇ ಅವಳ ತಾಯಿ ಹೆಲಿನಾಳನ್ನು ನಡಸಿಕೊಂಡು ಕರೆತರುತ್ತಾಳೆ. ಎಲ್ಲರಿಗೂ ಸಂತೋಷ, ಆಶ್ಚರ್ಯ. ಹೆಲಿನಾ ಈಗ ಗರ್ಭಿಣಿ! ಬಟ್ರಾಮನ ಉಂಗುರ ಅವಳ ಬೆರಳಲ್ಲಿದೆ. ಅವನು ಕೊಂಕಿಗೆ ಆಡಿದ ಮಾತು ಹೆಲಿನಾಳ ಪಾಲಿಗೆ ಕರಾರಾಗಿ ಅದೂ ತೀರಿದಂತಾಗಿದೆ. ಬಟ್ರಾಮ್ ಹೆಲಿನಾಳ ಪ್ರೀತಿ ಶ್ರದ್ಧೆಗಳಿಗೆ



ಬರ್ಟ್ರ್ರಾಮ್ ಮತ್ತು ಬಾಯಿಬಡಿಕ ಪರೊಲೆಸ್

ಮೆಚ್ಚಿ, ಅವಳನ್ನು ಹೆಂಡತಿಯನ್ನಾಗಿ ಒಪ್ಪಿ ಎಂದೆಂದಿಗೂ ಪ್ರೀತಿಸುವುದಾಗಿ ಮಾತುಕೊಡುತ್ತಾನೆ. ಈಗ ಅವನ ಮೇಲೆ ಪರೊಲೆಸ್‌ನ ಶನಿಪ್ರಭಾವ ಸಹ ಇಲ್ಲ. ಫ್ಲಾರೆನ್ಸಿನಲ್ಲೇ ಅವನ ಸುಳ್ಳುಗಾರಿಕೆ, ಹೇಡಿತನಗಳು ಬಯಲಾಗಿ ಬರ್ಟ್ರ್ರಾಮ್ ಅವನಿಂದ ದೂರವಾಗಿದ್ದಾನೆ. ಮುಗಿವು ಮಂಗಳವಾದರೆ ಎಲ್ಲವೂ ಮಂಗಳವೇ!

## 17. ಅಥೆಲ್ಲೊ, ದಿ ಮೂರ್ ಅಫ್ ವೆನಿಸ್

**ರಚನೆ:** 1602-3. **ಮೊದಲ ಪ್ರಕಟನೆ:** 1622.

**ಆಕರ:** ಇಟಾಲಿಯನ್ ಕಾದಂಬರಿಗಾರ ಚಿಂತೀಯೊನ 'ಎಕತೊಮಿತಿ' ಸಂಗ್ರಹದಲ್ಲಿನ ಒಂದು ಕಥೆ. ಯಾವ ಸಮಕಾಲೀನ ಭಾಷಾಂತರವೂ ಪತ್ತೆಯಾಗಿಲ್ಲದ ಕಾರಣ ಷೇಕ್‌-ಸ್ಪಿಯರ್ ಅದನ್ನು ಮೂಲದಲ್ಲಿಯೇ ಓದಿ ಆಕರ ಮಾಡಿಕೊಂಡನೆಂದು ಪಂಡಿತರ ಊಹೆ. ಚೌಕಟ್ಟಿನ ಹೊರತು ಉಳಿದೆಲ್ಲ ವಿವರಗಳಲ್ಲಿ ನಾಟಕ ಮೂಲದಿಂದ ಭಿನ್ನವಾಗಿದೆ. ಡೆಸ್ಡಿಮೋನಳದರ ವಿನಹ ಉಳಿದ ಪಾತ್ರಗಳ ನಾಮಕರಣ ಸಹ ಷೇಕ್‌ಸ್ಪಿಯರನದೆ.

**ಕಥೆ:** ಕವಿಯ ನಾಲ್ಕು ಮಹಾರುದ್ರನಾಟಕಗಳಲ್ಲಿ ಇದು ಒಂದು. ಅಥೆಲ್ಲೊ, ಇಯಾಗೊರ ಪಾತ್ರಗಳು ಇದರ ಮಹತ್ಸಾಧನೆ. ಮಾನವನ ಷಡ್ರಿಪುಗಳಲ್ಲಿ ಒಂದೆನಿಸಿದ

ಮಾತ್ಸರ್ಯದ ವಿಷಬೀಜಕ್ಕೆ ಎದೆಯೊಡ್ಡಿದಾಗ ಎಂತಹ ಪತನವಾಗುವುದೆಂಬುದಕ್ಕೆ ಅಥೆಲ್ಲೊ ನಿದರ್ಶನ. ಅದನ್ನು ನಾಟಿ ಬೆಳಸುವ ಇಯಾಗೊ ಸೈತಾನ; ಮನುಷ್ಯವೇಷ ತಳೆದ ಕೇಡು ಮಾರಿ. ಉತ್ಕೃಷ್ಟ ಕಾವ್ಯ, ರಚನಾಕೌಶಲ, ಬಂಧ, ಹಾಗೂ ನಾಟಕಗುಣ ಇವಕ್ಕೂ ಕೃತಿ ಹೆಸರಾಗಿದೆ. ಹೆಣ್ಣು, ಗಂಡು, ಪ್ರೀತಿ, ಸಂಶಯಗಳಿರುವವರೆಗೆ ನಾಟಕಕ್ಕೆ ಚ್ಯುತಿಯಿಲ್ಲ.

ಆಫ್ರಿಕದ ಕರಿಯ ಮೂರ್ ಜನಾಂಗಕ್ಕೆ ಸೇರಿದ ಅಥೆಲ್ಲೊ ವೆನಿಸಿನ ಸೈನ್ಯ ಸೇರಿ ಶೂರಸೈನಿಕನೆಂದು ಹೆಸರು ಗಳಿಸಿದ್ದಾನೆ. ವೆನಿಸಿನ ದೊರೆ ಆ ಗಣ್ಯನ ದಂಡನೈಪುಣ್ಯಕ್ಕೆ ಮೆಚ್ಚಿ ಸೇನಾಪತಿಯ ಪಟ್ಟ ಕೊಟ್ಟು ಗೌರವಿಸುತ್ತಾನೆ. ಅಥೆಲ್ಲೊನ ಕೈ ಕೆಳಗೆ ಕ್ಯಾಷಿಯೊ, ಇಯಾಗೊ ಎಂಬಿಬ್ಬರು ಅಧಿಕಾರಿಗಳು. ಅಥೆಲ್ಲೊ ಕ್ಯಾಷಿಯೊಗೆ ಬಡತಿ ಕೊಟ್ಟು ತನ್ನ ಸಹಾಧಿಕಾರಿಯನ್ನಾಗಿ ನೇಮಿಸಿಕೊಳ್ಳುತ್ತಾನೆ. ಇಯಾಗೊ ಆ ಪದವಿಯ ಮೇಲೆ ಕಣ್ಣಿಟ್ಟು ಅದು ತನ್ನ ಪಾಲಿಗೆ ಬರುವುದೆಂದು ಆಸೆಗೊಂಡಿದ್ದವನು; ಸ್ವಾಭಾವಿಕವಾಗಿ ಅವನ ಮತ್ಸರ ಕೆರಳುತ್ತದೆ. ಹೊರಗೆ ತಾನು ಮಹಾ ಸಭ್ಯ, ಪ್ರಾಮಾಣಿಕ ಎಂದು ತೋರಿಸಿಕೊಂಡಿದ್ದರೂ ಒಳಗೆ ಅವನೊಂದು ಘೋರ ಪಿಶಾಚ. ಕಾರಣವೇ ಇಲ್ಲದೆ ಕೇವಲ ಕೇಡಿಗಾಗಿಯೇ ಕೇಡು ಬಗೆದು ಅದರಲ್ಲಿ ಸವಿಗಾಣುವುದು ಅವನ ಸ್ವಭಾವ. ಆ ಕೇಡಿಗತನ ಭಾವನೋದ್ವೇಗದಿಂದ ಹುಟ್ಟಿದ ದೌರ್ಬಲ್ಯವಲ್ಲ; ಬುದ್ಧಿಜನ್ಯವಾದ ದುಷ್ಟಗುಣ. ಈಗ ಮೇಲೆ ಅಲ್ಪ ಪ್ರಚೋದನೆಯೂ ಸೇರಿ ತನಗೆ ಪದವಿ ನೀಡದ ಅಥೆಲ್ಲೊನ ಹಾಗೂ ಅದನ್ನು ಗಿಟ್ಟಿಸಿಕೊಂಡ ಕ್ಯಾಷಿಯೊನ ಮೇಲೆ ಒಮ್ಮೆಲೇ ಹಗೆಯ ಬಲೆ ಹೆಣೆಯುತ್ತದೆ, ಅವನೊಳಗಿನ ಕೇಡಿನ ಜೇಡ.

ವೆನಿಸಿನಲ್ಲಿ ಬ್ರಬಾರ್ಷಿಯೊ ಎಂಬೊಬ್ಬ ಶ್ರೀಮಂತ ಶಾಸಕ. ಡೆಸ್ಡೆಮೋನ ಅವನ ಮಗಳು. ಅವಳು ಸುಂದರಿ, ಸುಗುಣೆ. ಬ್ರಬಾರ್ಷಿಯೊ ಆಗಾಗ್ಗೆ ಅಥೆಲ್ಲೊನನ್ನು ಮನೆಗೆ ಕರೆದು ಸತ್ಕರಿಸಿ, ಅವನ ವೀರ ಪರಾಕ್ರಮಗಳ ಕಥೆಗಳನ್ನು ಹೇಳಿಸಿ ಕೇಳುತ್ತಿದ್ದ. ಆ ಕೂಟಗಳಲ್ಲಿ ಡೆಸ್ಡೆಮೋನಳೂ ಭಾಗವಹಿಸುತ್ತಿದ್ದಳು. ಬರುಬರುತ್ತ ಅವಳು ಅಥೆಲ್ಲೊನ ಘನತೆ, ಸಾಹಸಪ್ರವೃತ್ತಿಗಳಿಗೆ ಮಾರುಹೋಗಿ ಅವನು ಕರಿಯನಾದರೂ ನಡುವಯಸ್ಸಿನವನಾದರೂ ಅವನನ್ನು ಪ್ರೀತಿಸತೊಡಗಿದಳು. ಅಥೆಲ್ಲೊ ಸಹ ಡೆಸ್ಡೆಮೋನ ತನ್ನಲ್ಲಿ ತೋರುತ್ತಿದ್ದ ಆಸಕ್ತಿ, ಅನುಕಂಪಗಳಿಗೆ ಕರಗಿ ಅವಳಿಗೆ ಒಲಿದು ಮದುವೆಯಾಗೆಂದ. ಬ್ರಬಾರ್ಷಿಯೊ ಕರಿಯ ಮೂರನೊಬ್ಬನನ್ನು ಅವನೆಷ್ಟೇ ಖ್ಯಾತವೀರನಾದರೂ ಅಳಿಯನನ್ನಾಗಿ ಒಪ್ಪನೆಂದು ಇಬ್ಬರೂ ಬಲ್ಲರು. ಗುಟ್ಟಾಗಿ ಗಂಧರ್ವವಿವಾಹ ಮಾಡಿಕೊಂಡರು.

ಈ ಗುಟ್ಟು ಇಯಾಗೊಗೆ ತಿಳಿದಿದ್ದು ಅದು ಅವನ ಕೋವಿಯ ಮೊದಲ ಗುಂಡಾಗುತ್ತದೆ. ಡೆಸ್ಡೆಮೋನಳನ್ನು ಕೈಹಿಡಿವ ಆಸೆ ಹೊತ್ತು ಅವಳ ಬೆನ್ನು ಹತ್ತಿ ನಿರಾಶರಾಗಿದ್ದವರಲ್ಲಿ ರೊಡೆರಿಗೊ ಎಂಬ ಶ್ರೀಮಂತ ಯುವಕ ಒಬ್ಬ. ಇಯಾಗೊ ಆ ಹೆಡ್ಡನನ್ನು ಕೈಗೊಂಬೆಯಾಗಿಸಿ ಎತ್ತಿಕಟ್ಟುತ್ತಾನೆ. ಒಂದು ನಡುರಾತ್ರಿ ಅವನನ್ನು ಮುಂದುಮಾಡಿಕೊಂಡು ಬ್ರಬಾರ್ಷಿಯೊನ ಮನೆಯ ಮುಂದೆ ಗದ್ದಲ ಹಾಕಿ, ಅಥೆಲ್ಲೊ ಅವನ ಮಗಳನ್ನು ಹಾರಿಸಿಕೊಂಡು ಹೋಗಿರುವನೆಂದು ಊರಿಗೆ ಊರೇ ತಿಳಿಯುವಂತೆ ಸಾರಿಸುತ್ತಾನೆ. ಮಗಳು ತಾನಾಗಿ ಅಥೆಲ್ಲೊನ ಹಿಂದೆ ಹೋಗಿರಲಾರಳೆಂದು ತಂದೆಯ ವಿಶ್ವಾಸ. ಅವನು ಮದ್ದು ಮಂತ್ರಗಳಿಂದ ಮಗಳನ್ನು ಸೆಳೆದುಕೊಂಡಿದ್ದಾನೆಂದು ದೊರೆಗೆ ದೂರೊಯ್ಯುತ್ತಾನೆ. ವಿಚಾರಣೆಯಾಗುತ್ತದೆ. ಅಥೆಲ್ಲೊ ಗೌರವಸ್ಥ. ಡೆಸ್ಡೆಮೋನಳನ್ನೇ ಕರಸಿ ಕೇಳಿ ಎನ್ನು

ತ್ತಾನೆ. ಡೆಸ್ಡೆಮೋನ ತಾನಾಗಿಯೇ ಅವನನ್ನು ಪ್ರೀತಿಸಿ ಲಗ್ನವಾಗಿರುವುದಾಗಿ ಹೇಳಿಕೆ ಕೊಡುತ್ತಾಳೆ. ಬ್ರಬಾನ್ಷಿಯೊ ವಿಧಿಯಿಲ್ಲದೆ ಮದುವೆಯನ್ನು ಒಪ್ಪಬೇಕಾಗುತ್ತದೆ.

ಇದೇ ಸಮಯಕ್ಕೆ ತುರ್ಕಿ ವೆನಿಸಿಗೆ ಸೇರಿದ ಸೈಪ್ರಸ್ ದ್ವೀಪಕ್ಕೆ ಮುತ್ತಿಗೆ ಹಾಕಿದೆ. ಅದರ ರಕ್ಷಣೆಗೆ ದೊರೆ ಅಥೆಲ್ಲೊನನ್ನೇ ಕಳಿಸುತ್ತಾನೆ. ಡೆಸ್ಡೆಮೋನ ತಾನೂ ಗಂಡನೊಂದಿಗೆ ಹೋಗುವುದಾಗಿ ಗೋಗರೆದು ದೊರೆಯ ಒಪ್ಪಿಗೆ ಪಡೆಯುತ್ತಾಳೆ. ಇಯಾಗೊ ಧಣಿಯ ವಿರುದ್ಧ ಕತ್ತಿ ಕಟ್ಟಿದ್ದರೂ ಅವನಿಗೆ ಇವನಲ್ಲಿ ಅಗಾಧ ವಿಶ್ವಾಸ. ತಾನು ಕ್ಯಾಷಿಯೊ ನೊಡನೆ ಮುಂದಾಗಿ ಹೊರಟು, ಡೆಸ್ಡೆಮೋನಳನ್ನು ಹಿಂದಿನಿಂದ ಕರೆತರುವ ಭಾರವನ್ನು ಇಯಾಗೊಗೇ ಒಪ್ಪಿಸುತ್ತಾನೆ; ಆ ನೀಚನ ರೊಟ್ಟಿ ಜಾರಿ ತುಪ್ಪಕ್ಕೆ ಬೀಳುತ್ತದೆ.

ಅಥೆಲ್ಲೊ-ಡೆಸ್ಡೆಮೋನರ ಕೂಡಿಕೆ ಒಡೆಯುವ ಬದಲು ಈಗ ಬ್ರಬಾನ್ಷಿಯೊನ ಸಮ್ಮತಿಯಿಂದ ಇದ್ದಿದ್ದೂ ಭದ್ರವಾದುದು ರೊಡೆರಿಗೊಗೆ ನಿರುತ್ಸಾಹ. ಆದರೆ ಇಯಾಗೊ ಅವನಿಗೆ ಡೆಸ್ಡೆಮೋನಳ ಆಸೆ ಬಿಡಬೇಡವೆಂದು ಹುರಿದುಂಬಿಸುತ್ತಾನೆ. ಅವಳು ಬೇಗನೆ ಮುದಿ ಮೂರ್‌ನನ್ನು ಬಿಟ್ಟು ಜಾತಿವಯಸ್ಸುಗಳಲ್ಲಿ ಅನುರೂಪನಾದೊಬ್ಬನನ್ನು ಅರಸು ವಳೆಂದೂ ಜೇಬಿಗೆ ಹಣ ತುಂಬಿಸಿ ತನ್ನನ್ನು ಹಿಂಬಾಲಿಸಿದರೆ ಕೆಲಸ ಕೈಗೂಡುವುದೆಂದೂ ಉಬ್ಬಿಸುತ್ತಾನೆ. ರೊಡೆರಿಗೊ ಇದ್ದ ಹೊಲಗದ್ದೆ ಮಾರಿ ಇಯಾಗೊನ ಬೆನ್ನು ಹತ್ತುತ್ತಾನೆ!

ಈಗ ಇಯಾಗೊನ ತಲೆತಿನ್ನುತ್ತಿರುವ ಪ್ರಶ್ನೆ ಒಂದೆ — ಹೇಗೆ? ಕ್ಯಾಷಿಯೊನನ್ನು ಪದವಿಯಿಂದ ಕೆಳ ಕೆಡವುವುದು ಹೇಗೆ? ಅಥೆಲ್ಲೊನ ಮೇಲೆ ಹಗೆ ತೀರಿಸುವುದು ಹೇಗೆ? ಅವನ ನೀಚಬುದ್ಧಿ ಒಂದು ಕುಟಿಲ ತಂತ್ರವನ್ನು ಯೋಜಿಸುತ್ತದೆ: ಕ್ಯಾಷಿಯೊ ಯುವಕ, ಚೆಲುವ. ಗೌರವಸ್ಥನಾದರೂ ಹೆಂಗಸರ ವಿಷಯದಲ್ಲಿ ಸಂಶಯಕ್ಕೆ ಆಸ್ಪದ ಕೊಡುವ ಹೊರ ಮಿಂಚುಳ್ಳವನು. ಅಥೆಲ್ಲೊ ಎಲ್ಲರನ್ನೂ, ಅಂತೆಯೇ ಏನನ್ನೂ ಸುಲಭವಾಗಿ ನಂಬಿ ಕೆಡುವ ವಿವೇಕಹೀನ. ಕ್ಯಾಷಿಯೊ-ಡೆಸ್ಡೆಮೋನ ಗುಟ್ಟಾಗಿ ಸಂಬಂಧವಿಟ್ಟುಕೊಂಡಿದ್ದಾರೆಂದು ಹುಟ್ಟಿಸಿ ಮೂರ್‌ನ ಕಿವಿಯಲ್ಲಿ ಊದಿದರೆ ಸಾಕು, ಇಬ್ಬರೂ ಒಟ್ಟಿಗೆ ಕೆಳಗುರುಳುತ್ತಾರೆ!

ಅಥೆಲ್ಲೊ ಮತ್ತಿತರರು ಸೈಪ್ರಸ್ ತಲಪಿದಾಗ ಅವರಿಗೆ ಇದಿರಾಗುವುದು ಕದನವಲ್ಲ, ಅನಿರೀಕ್ಷಿತ ಜಯ. ಭಯಂಕರ ಬಿರುಗಾಳಿಯೆದ್ದು ಅದರ ಹೊಡೆತಕ್ಕೆ ತುರ್ಕಿಯ ಹಡಗು-ಪಡೆ ಚೂರುಚೂರಾಗಿ ಶತ್ರುಸೈನ್ಯ ಹೇಳಹೆಸರಿಲ್ಲದಂತೆ ಮುಳುಗಿಹೋಗಿದೆ. ಅಥೆಲ್ಲೊ ವಿಜಯದ ಉತ್ಸವಾಚರಣೆ ಘೋಷಿಸಿ ಸೈನ್ಯದ ಸಂಭ್ರಮ ಮರ್ಯಾದೆಯ ಎಲ್ಲೆ ಮೀರದಂತೆ ನೋಡಿಕೊಳ್ಳಲು ಕ್ಯಾಷಿಯೊನನ್ನು ನೇಮಿಸುತ್ತಾನೆ. ಇಯಾಗೊ ಕಾದಿದ್ದುದು ಈ ಅವ ಕಾಶಕ್ಕೇ! ಕ್ಯಾಷಿಯೊನ ದೌರ್ಬಲ್ಯಗಳಲ್ಲಿ ಮದ್ಯವೂ ಒಂದು. ಬೇಡಬೇಡವೆಂದರೂ ಬಿಡದೆ ಇಯಾಗೊ ಕಾರ್ಯತತ್ಪರನಾದ ಅವನಿಗೆ ಮದ್ಯ ಹೊಯ್ಯುತ್ತಾನೆ. ಕುಡಿತದ ಅಮಲಿನಲ್ಲಿ ಇರುವಾಗ ರೊಡೆರಿಗೊ ಅವನೊಡನೆ ಕಾಲುಕೆರೆದು ಜಗಳ ತೆಗೆಯುವುದೆಂದು ಮೊದಲೇ ವ್ಯವಸ್ಥೆಯಾಗಿದೆ. ಅಂತೆಯೇ ಜಗಳ ಹತ್ತುತ್ತದೆ. ಇಯಾಗೊ ಸೈನ್ಯದ ಇನ್ನೂ ಕೆಲವು ಅಧಿಕಾರಿಗಳನ್ನು ಅದರಲ್ಲಿ ಸಿಕ್ಕಿಸಿ, ತಾನು ದಂಗೆಯೆದ್ದಿದೆಯೆಂದು ಬೊಬ್ಬೆಯಿಡುತ್ತಾನೆ. ಗದ್ದಲ ಕೇಳಿ ಅಥೆಲ್ಲೊ ಓಡಿಬರುತ್ತಾನೆ, ವಿಚಾರಣೆ ಮಾಡುತ್ತಾನೆ. ಅವನು ಕರ್ತವ್ಯಪರ, ನ್ಯಾಯನಿಷ್ಠುರ. ತಕ್ಷಣ ಕ್ಯಾಷಿಯೊನನ್ನು ಮೇಲುಹುದ್ದೆಯಿಂದ ಕೆಳಗಿಳಿಸುತ್ತಾನೆ.

ಕ್ಯಾಷಿಯೊ ಮರ್ಯಾದೆಯೇ ಪ್ರಾಣವೆಂದು ಬಗೆದವನು; ಅಪಮಾನ ಸಹಿಸಲಾರದೆ

ಗೋಳಿಡುತ್ತಾನೆ. ಇಯಾಗೊ ಅವನ ದುರವಸ್ಥೆಗೆ ಸಹಾನುಭೂತಿ ತೋರುವವನಂತೆ ನಟಿಸಿ, ಡೆಸ್ಡಿಮೋನಳ ಮುಖಾಂತರ ಅಥೆಲ್ಲೊಗೆ ಒಂದು ಮಾತು ಹೇಳಿಸಿದ್ದಾದರೆ ಕಳೆದು ಹೋದ ಕೆಲಸ ಮತ್ತೆ ಸಿಗುವುದು ಖಂಡಿತವೆಂದು ಆಸೆ ತೋರಿಸಿ ಜೋನೊಡ್ಡುತ್ತಾನೆ. ಕ್ಯಾಷಿಯೊ ಒಪ್ಪಿ ಮರು ಬೆಳಗ್ಗೆ ಡೆಸ್ಡಿಮೋನಳನ್ನು ಕಂಡು ಅರಿಕೆ ಮಾಡಿಕೊಳ್ಳುತ್ತಿರುವ ಹೊತ್ತಿಗೆ ಸರಿಯಾಗಿ ಇಯಾಗೊ ಅಥೆಲ್ಲೊನೊಡನೆ ಅಲ್ಲಿದ್ದಾನೆ. ಕ್ಯಾಷಿಯೊಗೆ ಅಥೆಲ್ಲೊನ ಕಣ್ಣಿಗೆ ಬೀಳುವ ಇಚ್ಛೆಯಿಲ್ಲ. ಡೆಸ್ಡಿಮೋನಳನ್ನು ಅವಸರದಲ್ಲಿ ಬೀಳ್ಕೊಂಡು ಹೊರಟು ಹೋಗುತ್ತಾನೆ. ಈ ಸಂದರ್ಭ ಇಯಾಗೊನ ತಂತ್ರಕ್ಕೆ ಅನುವಾಗುತ್ತದೆ. ಆ ತಂತ್ರಿ 'ಈ ವರ್ತನೆ ನನಗೆ ಸರಿಕಾಣದು!' ಎಂದು ಅರ್ಥಗರ್ಭಿತವಾಗಿ ಹೇಳಿ ಮತ್ಸರದ ಮೊದಲ ಬೀಜ ಬಿತ್ತುತ್ತಾನೆ. ಡೆಸ್ಡಿಮೋನ ಕ್ಯಾಷಿಯೊನ ಪರವಾಗಿ ಗೋಗರೆಯುತ್ತಾಳೆ. ಅವನನ್ನು ಕ್ಷಮಿಸುವುದು ಅಥೆಲ್ಲೊಗೆ ತತ್ವವಿರುದ್ಧವಾದರೂ ಡೆಸ್ಡಿಮೋನಳ ಪ್ರೀತಿಗಾಗಿ ಆಗಲೆನ್ನು ತ್ತಾನೆ. ಅವಳು ಹೋದೊಡನೆಯೇ ಪಾತಕಿ ಇಯಾಗೊ ಚತುರತೆಯಿಂದ ಡೆಸ್ಡಿಮೋನಳ ಶೀಲದ ಬಗ್ಗೆ, ಕ್ಯಾಷಿಯೊನ ವಿಶ್ವಸನೀಯತೆಯ ಬಗ್ಗೆ, ಅವರಿಬ್ಬರ ಸಂಬಂಧದ ಬಗ್ಗೆ ಸೂಚ್ಯವಾಗಿ ಆಡಿ, ಸಂಶಯ ಹುಟ್ಟಿಸಿ, ಮಜಲುಮಜಲಾಗಿ ಅಥೆಲ್ಲೊನ ಎದೆಗೆ ವಿಷ ತುಂಬುತ್ತಾನೆ. ಅಥೆಲ್ಲೊ ಘನವಂತ. ಆದರೆ ಅವನದು ಹಸಿಯೆದೆ. ಸತ್ಯಾಸತ್ಯತೆಯನ್ನು ಪರೀಕ್ಷಿಸದೆ ಚಾಡಿಮಾತನ್ನು ನಂಬಿ, ಉಬ್ಬಸಬಟ್ಟು, ಹುಚ್ಚಾಗುವುದು ಅವನ ದೌರ್ಬಲ್ಯ. ಆ ದಿನ ಇಯಾಗೊ ಅವನಿಂದ ಬೀಳ್ಕೊಳ್ಳುವಾಗ ದೇವರಂತಿದ್ದ ಆ ಮನುಷ್ಯ ದೆವ್ವವಾಗಿ ದ್ದಾನೆ. ಸಂಶಯ ಪಿಶಾಚ, ಮತ್ಸರ ಪಿಶಾಚಗಳು ಅವನನ್ನು ಹಿಡಿದು ಕೆರಳಿಸಿ ಕುಣಿಸುತ್ತಿವೆ.

ದಣಿಗೆ ತನ್ನ ಮಾತನ್ನು ನಂಬಿಸಿ ತೋರಿಸಲು ಇಯಾಗೊಗೆ ಏನಾದರೂ ಸುಳ್ಳು ಸಾಕ್ಷಿ ಪ್ರಮಾಣಗಳನ್ನು ಸೃಷ್ಟಿಸುವ ಅಗತ್ಯವಿದೆ. ಅವನ ಕಣ್ಣು ಡೆಸ್ಡಿಮೋನಳ ಕೈಚೌಕದ ಮೇಲೆ. ಅದು ಅಥೆಲ್ಲೊ ಹೆಂಡತಿಗೆ ಕೊಟ್ಟಿದ್ದ ಮೊದಲ ಉಡುಗೊರೆ, ಪ್ರೇಮದ ಅಭಿಜ್ಞಾನ. ಇಮಿಲಿಯಾ ಡೆಸ್ಡಿಮೋನಳ ನೆಚ್ಚಿನ ಆಳು. ಅವಳು ಇಯಾಗೊನ ಹೆಂಡತಿ; ಇಯಾಗೊ ಆ ಚೌಕವನ್ನು ಹೇಗಾದರೂ ಸಂಪಾದಿಸಿ ತನಗೆ ತಂದುಕೊಡುವಂತೆ ಹೆಂಡತಿಯನ್ನು ಕಾಡಿ ದ್ದಾನೆ. ಇದೇ ಹೊತ್ತಿಗೊಮ್ಮೆ ಡೆಸ್ಡಿಮೋನ ಗಂಡನನ್ನು ನೋಡಬಂದಾಗ ಆ ಚೌಕ ಕೆಳ ಬಿದ್ದು ಅಕಸ್ಮಾತ್ತಾಗಿ ಇಮಿಲಿಯಾಳಿಗೆ ಸಿಗುತ್ತದೆ. ಆಗ ಅಲ್ಲಿಗೆ ಬಂದ ಇಯಾಗೊ ಅದನ್ನು ಹಾರಿಸಿ, ಯಾರಿಗೂ ಅದರ ವಿಷಯ ಬಾಯಿಬಿಡಕೂಡದೆಂದು ವಿಧಿಸಿ ಹೋಗುತ್ತಾನೆ.

ಇಯಾಗೊನ ಕೈಯಲ್ಲಿ ಆ ಕೈಚೌಕ ಮಾರಣಾಸ್ತ್ರವಾಗುತ್ತದೆ. ಅವನು ಅದನ್ನು ಕ್ಯಾಷಿಯೊನ ಕೋಣೆಯಲ್ಲಿ ಎಸೆಯುವುದೆಂದು ನಿಶ್ಚಯಿಸಿ, ಆ ಮೊದಲೇ ತಾನು ಅದನ್ನು ಅವನ ಬಳಿ ನೋಡಿದುದಾಗಿ ಅಥೆಲ್ಲೊಗೆ ವರದಿಮಾಡಿ ಅವನೊಳಗಿನ ಭೂತವನ್ನು ಬಡಿ ದೆಬ್ಬಿಸುತ್ತಾನೆ. ಅಥೆಲ್ಲೊ ಡೆಸ್ಡಿಮೋನಳನ್ನು ಕೈಚೌಕದ ಬಗ್ಗೆ ವಿಚಾರಿಸಿ ಅದು ಮಂತ್ರ-ಖಚಿತವೆಂದು, ಕಳೆದಿದ್ದರೆ ಕೊಟ್ಟವನ ಪ್ರೀತಿಯೂ ಕಳೆದು ಹೋಗುವುದೆಂದು ಭಯಾನಕವಾಗಿ ನುಡಿದು ಅದನ್ನು ತರಹೇಳಿದಾಗ, ಪಾಪ, ಅವಳು ಅಸಹಾಯಳು. ಕಳೆದಿದೆ ಯೆಂದು ಗೊತ್ತಿದ್ದೂ ಇದೆಯೆಂದು ಸುಳ್ಳಾಡುತ್ತಾಳೆ. ಅಥೆಲ್ಲೊ ಒತ್ತಾಯ ಮಾಡಿದಾಗ ಚೌಕದ ವಿಷಯವನ್ನು ಮರೆಸಲು ಕ್ಯಾಷಿಯೊನ ಕ್ಷಮಾದಾನದ ಮಾತೆತ್ತಿ ಅಥೆಲ್ಲೊನನ್ನು ಇದ್ದಿದ್ದೂ ರೊಚ್ಚಿಗೆಬ್ಬಿಸುತ್ತಾಳೆ.

ತಂತ್ರಕ್ಕೆ ತಂತ್ರ ಕೂಡಿಸಿ ಕೇಡಿನ ಕಟ್ಟಡವನ್ನೆತ್ತರಿಸಿ ಅವಕ್ಕೆ ರಕ್ತಕಳಶ ಹೊದಿಸುವವರೆಗೆ ಇಯಾಗೊನ ತೃಷೆ ಆರದು. ಬಿಯಾಂಕ ಕ್ಯಾಷಿಯೊ ಇಟ್ಟ ಹೆಣ್ಣು. ಅವನು ಅವಳನ್ನು ಕುರಿತು ಲಾಘವವಾಗಿ ಮಾತಾಡುವಂತೆ ಪ್ರಚೋದಿಸಿ, ಆ ಮಾತು ಡೆಸ್ಡಿಮೋನಳ ಬಗ್ಗೆ ಆಡಿದ್ದೆಂಬಂತೆ ಅಥೆಲ್ಲೊನನ್ನು ನಂಬಿಸುತ್ತಾನೆ, ಇಯಾಗೊ. ಅವನ ಕಪಟದಿಂದಾಗಿ ಡೆಸ್ಡಿಮೋನಳ ಚೌಕ ಕ್ಯಾಷಿಯೊನ ಕೈಗೆ ಬಂದಿದೆ. ಅದು ಯಾರದೆಂದು ಅವನು ಕಾಣ; ಬಿಯಾಂಕಳಿಗೆ ಕೊಟ್ಟು ಅದರ ಕಸೂತಿಯನ್ನು ನಕಲು ಮಾಡಿಕೊಡೆನ್ನುತ್ತಾನೆ. ಅವಳು ಅದು ಯಾವ ಸವತಿಯದೋ ಎಂದು ಕೇಳಿ ಮುಖಕ್ಕೆಸೆದು ಹೋಗುತ್ತಾಳೆ. ಇಯಾಗೊ ಆ ದೃಶ್ಯವನ್ನು ಅಥೆಲ್ಲೊಗೆ ತೋರಿಸಿ, ಡೆಸ್ಡಿಮೋನಳ ಉಡುಗೊರೆ ಕ್ಯಾಷಿಯೊಗೆ ಬೀದಿವೆಣ್ಣಿಗೆ ಕೊಡುವಷ್ಟು ಅಗ್ಗವಾಯಿತೆಂದು ಬಣ್ಣ ಕಟ್ಟುತ್ತಾನೆ!

ಈ ಎಲ್ಲ ಪ್ರಮಾಣಗಳಿಂದ ಅಥೆಲ್ಲೊನ ಮನೋರೋಗ ಉಲ್ಬಣಕ್ಕೇರಿ ಒಮ್ಮೆ ಅವನಿಗೆ ಸನ್ನಿಯೂ ಬಡಿಯುತ್ತದೆ. ಹೃದಯ ಕಲ್ಲಾಗುತ್ತದೆ. ಸೇಡಿಗೆ ಹಾತೊರೆದು ಡೆಸ್ಡಿಮೋನಳನ್ನು ಕೊಲ್ಲಲು ನಿರ್ಧರಿಸುತ್ತಾನೆ. ವಿಧಾನ? ಇಯಾಗೊನೇ ಅದನ್ನೂ ಸೂಚಿಸುತ್ತಾನೆ. ಅವಳು ಹಾಸಿಗೆಯನ್ನು ಹಾಳುಗೆಡಸಿದವಳಲ್ಲವೆ? ಅಲ್ಲೇ ಅವಳ ಕೊಲೆಯಾದರೆ ಅದಕ್ಕೊಂದು ಔಚಿತ್ಯ ಬರುತ್ತದೆ. ಅಥೆಲ್ಲೊ ಒಪ್ಪುತ್ತಾನೆ. ಇನ್ನು ಕ್ಯಾಷಿಯೊ. ಅವನ ಗತಿಯೂ ಇತ್ಯರ್ಥವಾಗಿ ಇಯಾಗೊನೇ ಅವನನ್ನು ಕೊಲ್ಲುವುದೆಂದು ಮಾತಾಗಿದೆ.

ಈ ನಡುವೆ ರೊಡೆರಿಗೊ ಇಯಾಗೊಗೆ ತುತ್ತಿನ ಕಲ್ಲಾಗಿದ್ದಾನೆ. ಡೆಸ್ಡಿಮೋನಳನ್ನು ಗೆಲ್ಲುವ ಅವನ ಬಯಕೆ ಈಡೇರಿಲ್ಲ. ಅವಳಿಗೆ ಕೊಡುವ ನೆಪ ಹೂಡಿ ಇಯಾಗೊ ಅವನಿಂದ ಒಂದರ ಮೇಲೊಂದರಂತೆ ಒಡವೆಯ ಉಡುಗೊರೆಗಳನ್ನು ಹಿರಿದು ಅವನನ್ನು ಬರಿದು ಮಾಡಿದ್ದಾನೆ. ತಾಳಿ ತಾಳಿ ಬೇಸತ್ತ ರೊಡೆರಿಗೊ ತಾನೇ ಖುದ್ದಾಗಿ ಹೋಗಿ ಡೆಸ್ಡಿಮೋನ ಳೊಡನೆ ಮಾತಾಡಿ ಬರಲು ಹವಣಿಸುತ್ತಿದ್ದಾನೆ. ಹಾಗೆ ಮಾಡಿದ್ದಾದರೆ ಇಯಾಗೊನ ಕಪಟ ಬಯಲಾಗದೆ ಇರದು. ಈ ಅನಾಹುತದಿಂದ ಪಾರಾಗಲು ಇಯಾಗೊ ಒಂದೇ ಏಟಿಗೆ ಕ್ಯಾಷಿಯೊ ರೊಡೆರಿಗೊರಿಬ್ಬರನ್ನೂ ಮುಗಿಸಿ ದಾರಿ ತೆರವುಮಾಡಿಕೊಳ್ಳುವ ಒಂದು ತಂತ್ರ ಹೂಡುತ್ತಾನೆ. ಒಂದು ಕತ್ತಲ ರಾತ್ರಿ ಇಯಾಗೊ ಮತ್ತು ರೊಡೆರಿಗೊ ಕ್ಯಾಷಿಯೊನನ್ನು ಅಡ್ಡಗಟ್ಟಿ ಮೇಲೆಬೀಳುತ್ತಾರೆ. ಹಂಚಿಕೆಯಂತೆ ರೊಡೆರಿಗೊ ಕ್ಯಾಷಿಯೊನನ್ನು ತಿವಿಯುತ್ತಾನೆ. ಆದರೆ ಕ್ಯಾಷಿಯೊ ತೊಟ್ಟದ್ದು ಉಕ್ಕಿನ ಕವಚ; ಗುರಿ ಸರಿಯುತ್ತದೆ. ತಕ್ಷಣ ಕ್ಯಾಷಿಯೊ ಎಚ್ಚರಗೊಂಡು ರೊಡೆರಿಗೊನನ್ನು ಎದುರಿಸಿ ಗಾಯಗೊಳಿಸುತ್ತಾನೆ. ತಂತ್ರ ತಪ್ಪುವ ಮೊದಲೇ ಇಯಾಗೊ ಕ್ಯಾಷಿಯೊನನ್ನು ಹಿಂದಿನಿಂದ ಇರಿದು ಕತ್ತಲಲ್ಲಿ ಮರೆಯಾಗುತ್ತಾನೆ. ಮತ್ತೆ ಅವನು ಕಾಣಿಸಿಕೊಳ್ಳುವುದು ಸಿಪಾಯಿಗಳು ಬಂದ ನಂತರವೆ, ಆದೇ ಆಗ ಅಲ್ಲಿ ಬಂದವನಂತೆ! ಕ್ಯಾಷಿಯೊ ಸತ್ತಿರುವನೆಂದು ನಂಬಿ ಅವನನ್ನು ಕೊಂದವನ ಮೇಲೆ ಸೇಡು ತೀರಿಸಿಕೊಳ್ಳುವವನಂತೆ ನಟಿಸಿ, ಹತ್ತಿರ ಗಾಯಗೊಂಡು ನರಳುತ್ತ ಬಿದ್ದಿದ್ದ ರೊಡೆರಿಗೊನನ್ನು ಅವನು ಯಾವನೋ ಧೂರ್ತನೆಂಬಂತೆ ಕೊಲ್ಲುತ್ತಾನೆ.

ಅತ್ತ ಡೆಸ್ಡಿಮೋನ ಶಯ್ಯಾಗೃಹದಲ್ಲಿ ಮಲಗಿ ನಿದ್ರಿಸುತ್ತಿದ್ದಾಳೆ. ಅಥೆಲ್ಲೊ ಕೊಲೆಗೆ ಸಿದ್ಧನಾಗಿ ಬರುತ್ತಾನೆ. ಆದರೆ ಆ ಚೆಲುವಿನ ಸಿರಿಯನ್ನು ಕಂಡೊಡನೆಯೇ ಅವನ ಪ್ರೇಮ ಉಕ್ಕಿ ಹುಚ್ಚುಹೊಳೆಯಾಗಿ ಹರಿಯುತ್ತದೆ. ಮನಸ್ಸು ಇತ್ತ ಪ್ರೀತಿ, ಅತ್ತ ದ್ವೇಷಗಳ

ನಡುವೆ ಹೊಯ್ದಾಡುತ್ತದೆ. ಅತಿಯಾಗಿ, ಆದರೆ ಅವಿವೇಕದಿಂದ ಪ್ರೀತಿಸಿದವನು ಅವನು. ಕೊಲ್ಲಬಂದವನು ಚುಂಬಿಸುತ್ತಾನೆ, ಮತ್ತೆ ಮತ್ತೆ ಚುಂಬಿಸುತ್ತಾನೆ. ಡೆಸ್ಡಿಮೋನಳಿಗೆ ಎಚ್ಚರವಾಗುತ್ತದೆ. ಅಥೆಲ್ಲೊ ಅವಳನ್ನು ಹಾದರಗಿತ್ತಿಯೆಂದು ದೂರಿ ಸಾಯುವ ಮುನ್ನ ತಪ್ಪೊಪ್ಪಿಕೊಳ್ಳೆನ್ನುತ್ತಾನೆ. ಆ ಮುಗ್ಧೆ ಯಾವ ಪಾಪ ಮಾಡಿದ್ದಳೆಂದು ತಪ್ಪೊಪ್ಪಬೇಕು? ಕೊನೆಯ ಪ್ರಾರ್ಥನೆಗೂ ಅವಕಾಶ ಕೊಡದೆ ಅಥೆಲ್ಲೊ ಅವಳ ಕತ್ತುಹಿಸುಕುತ್ತಾನೆ.

ಅದೇ ಹೊತ್ತಿಗೆ ಇಮಿಲಿಯಾ ಹೊರಗೆ ನಡೆದ ದುರಂತದ ಸುದ್ದಿ ತಿಳಿಸಲು ಅಲ್ಲಿಗೆ ಓಡಿಬರುತ್ತಾಳೆ. ಮರಣೋನ್ಮುಖಳಾದ ಡೆಸ್ಡಿಮೋನ ತನ್ನ ತಪ್ಪು ಕೊಲೆಯಾಗಿದೆಯೆಂದು ಗೊರಗೊರಿಸುತ್ತಿದ್ದಾಳೆ. ಇಮಿಲಿಯಾ ಗಾಬರಿಗೊಂಡು ಆ ದುಷ್ಕೃತ್ಯಕ್ಕೆ ಕಾರಣರಾರೆಂದು ವಿಚಾರಿಸಿದಾಗ ಡೆಸ್ಡಿಮೋನ ಕೊಡುವ ಉತ್ತರ 'ನಾನೇ! ನಾನೇ!'. ಅವಳು ದೇವರ ಮಗಳು. ಸಲ್ಲದ ಪಾಪ ಹೊರಿಸಿ ತನ್ನ ಕೊಲೆಗೈದ ಗಂಡನ ಮೇಲೆ ಇನ್ನೂ ಪ್ರೀತಿಯೇ! ಇಮಿಲಿಯಾ ಕೂಗಿಕೊಳ್ಳುತ್ತಾಳೆ. ಅಧಿಕಾರಿಗಳು, ಅವರೊಡನೆ ಇಯಾಗೊ ಬರುತ್ತಾರೆ.

ಅಥೆಲ್ಲೊ ಕೊಲೆಗಾರ ತಾನೇ ಎಂದು ತಪ್ಪೊಪ್ಪಿ, ಕೊಲೆಗೆ ಡೆಸ್ಡಿಮೋನಳ ಹಾದರ ಕಾರಣ, ಹಾದರಕ್ಕೆ ಕೈಚೌಕವೇ ಪ್ರಮಾಣ ಎಂದಾಗ ಗುಟ್ಟು ಹೊರಬೀಳುತ್ತದೆ. ಆ ಚೌಕ ಇಯಾಗೊಗೆ ಹೋಗಿದ್ದುದು ಇಮಿಲಿಯಾಳ ಕೈಯಿಂದಲೇ. ಅವಳಿಗೆ ಗಂಡನ ಕಿಡಿಗೇಡಿತನದ ಅರಿವಾಗುತ್ತದೆ. ಗಂಡನನ್ನು ಲೆಕ್ಕಿಸದೆ, ಅವನ ಬೆದರಿಕೆಗೆ ಸೊಪ್ಪು ಹಾಕದೆ ಸತ್ಯ ಹೇಳುತ್ತಾಳೆ. ಇಯಾಗೊ ಅವಳ ಬಾಯಿ ಮುಚ್ಚಿಸಲು ಸಾಧ್ಯವಾಗದೆ ಅವಳನ್ನು ಕೊಂದು ಓಡಿಹೋಗುತ್ತಾನೆ. ಇಮಿಲಿಯಾ ನೆಚ್ಚಿನ ಜೀವ. ಯಜಮಾನಿಯ ದುರಂತಕ್ಕೆ ತಪಿಸುತ್ತ ಅವಳ ಶವದ ಬಳಿ ಸಾವಿನಲ್ಲೂ ಆಳಾಗಿ ಪ್ರಾಣಬಿಡುತ್ತಾಳೆ.

ಈಗ ಅಥೆಲ್ಲೊಗೆ ಆವಿಷ್ಕಾರವಾಗಿದೆ. ಅವನ ಪಶ್ಚಾತ್ತಾಪ ಎಲ್ಲೆ ಕಾಣದು. ತನ್ನ ದೇಹಾತ್ಮಗಳನ್ನು ಪಿಶಾಚಕ್ಕೆ ಮಾರಿಕೊಂಡು, ಪತಿವ್ರತೆಯ ಮೇಲೆ ಪಾಪ ಹೊರಿಸಿ ಕೊಂದುದಕ್ಕೆ ವಿಷಾದಪಡುತ್ತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸತ್ತ ಡೆಸ್ಡಿಮೋನಳನ್ನು ಚುಂಬಿಸುತ್ತ, ಅವಳ ಶವದ ಮೇಲೆ ಬಿದ್ದು ಪ್ರಾಣಬಿಡುತ್ತಾನೆ.

ಇಯಾಗೊ ಸಿಕ್ಕುಬೀಳುತ್ತಾನೆ. ಈಗ ಅಥೆಲ್ಲೊನ ಪದವಿಗೇರಿದ ಕ್ಯಾಷಿಯೊ ಆ ಘಾತಕನನ್ನು ಹಿಂಸಾತ್ಮಕ ಮರಣಕ್ಕೆ ಗುರಿಮಾಡುತ್ತಾನೆ.

## 18. ಮೆಷರ್ ಫರ್ ಮೆಷರ್

**ರಚನೆ:** 1603-4. **ಮೊದಲ ಪ್ರಕಟನೆ:** 1623.

**ಆಕರ:** 'ಅಥೆಲ್ಲೊ'ದಂತೆ ಇದಕ್ಕೂ ಚಿಂತೀಯೊನ 'ಎಕತೊಮಿತಿ'ಯ ಒಂದು ಕಥೆ ಆಕರ, ಜಾರ್ಜ್ ವೆಟ್‌ಸ್ಟನ್‌ನ 'ಪ್ರೊಮೋಸ್ ಅಂಡ್ ಕ್ಯಾಸಂಡ್ರ' ಎಂಬ ನಾಟಕದ ಮುಖಾಂತರ.

**ಕಥೆ:** ಶೀಲದ ಮಹತ್ವವೆಷ್ಟು? ಕಾಯಿದೆಯಿಂದ ಅದರ ಪುನಃಸಂಸ್ಥಾಪನೆ ಸಮಾಜದಲ್ಲಿ ಸಾಧುವೆ? ಸಾಧ್ಯವೆ? — ಇವು ನಾಟಕದಲ್ಲಿ ಚರ್ಚಿತವಾದ ವಿಷಯಗಳು. 'ಟ್ರಾಯ್‌ಲಸ್,' 'ಆಲ್ಸ್ ವೆಲ್'ಗಳಂತೆ ಇಲ್ಲಿಯೂ ಕವಿಯ ಉದ್ದೇಶ, ತತ್ತ್ವದೃಷ್ಟಿಗಳು ಸ್ಪಷ್ಟವಾಗಿರದೆ ನಾಟಕ ಸಮಸ್ಯಾತ್ಮಕವಾಗಿದೆ. ಆ ಎರಡರಂತೆ ಇದನ್ನೂ 'ಕಪ್ಪು' 'ಕಹಿ'

ಎಂದೆಲ್ಲ ಕರೆಯುವುದು ವಾಡಿಕೆ. ಕವಿಯ ಉಚ್ಛ್ರಾಯಕಾಲದಲ್ಲಿ ರಚಿತವಾಗಿದ್ದು ನಾಟಕದ ಭಾಷೆ, ಕಾವ್ಯ, ರಚನೆ, ಪಾತ್ರಪೋಷಣೆಗಳು ಶ್ರೇಷ್ಠವಾಗಿವೆ.

ವಿನ್ಸೆಂಷಿಯೊ ವಿಯೆನ್ನಾದ ದೊರೆ. ಆತ ಸ್ವಭಾವದಿಂದ ಸಹೃದಯಿ, ದಯಾಮಯಿ. ಅವನು ಕಾಯಿದೆಗಳನ್ನು ಕಟ್ಟುನಿಟ್ಟಾಗಿ ಚಲಾಯಿಸಲಾರದೆ ಹೋದ ಕಾರಣ, ಜನರಲ್ಲಿ ರಾಜಕೀಯ ಅರಾಜಕತೆ, ನೈತಿಕ ಸ್ವೇಚ್ಛೆಗಳು ತಾಂಡವವಾಡುತ್ತಿವೆ. ಈ ದುಸ್ಥಿತಿಗೆ ತನ್ನ ಸಡಿಲತೆಯೇ ಕಾರಣವೆಂದು ಅರಿತ ದೊರೆ ಆಡಳಿತದಲ್ಲಿ ಬಿಗಿ ಬರಬೇಕಾದರೆ ರಾಜ್ಯಸೂತ್ರ ವನ್ನು ಕೆಲ ಕಾಲ ಬೇರಾರಿಗಾದರೂ ವಹಿಸುವುದು ವಾಸಿಯೆಂದು ನಿರ್ಧರಿಸುತ್ತಾನೆ.

ವಿಯೆನ್ನಾದ ಏಂಜಲೊ ಎಂಬ ಹಿರಿಯ ಅಧಿಕಾರಿ ತಾನು ಬಲು ನಿರ್ದಾಕ್ಷಿಣ್ಯದ ವ್ಯಕ್ತಿಯೆಂದು ತೋರಿಸಿಕೊಂಡಿದ್ದಾನೆ. ಅವನು ದೊಡ್ಡ ವಿರಾಗಿ; ಇಂದ್ರಿಯ ಚಾಂಚಲ್ಯ ಚಾಪಲ್ಯಗಳ ಮುಳ್ಳು ಅವನನ್ನು ಕುಟುಕದು; ನಿರಾಹಾರ, ಅಧ್ಯಯನ, ತತ್ವಜ್ಞಾನ ಗಳಲ್ಲಿ ತೊಡಗಿ ಆ ಮುಳ್ಳಿನ ಮೊನೆಯನ್ನು ಮುರಿದು ಮೊಂಡುಮಾಡಿದ್ದಾನೆಂದು ಎಲ್ಲೆಲ್ಲೂ ಪ್ರತೀತಿ. ತನ್ನ ಸ್ಥಾನದಲ್ಲಿ ನಿಂತು ನೈತಿಕ ಸುಧಾರಣೆಗಳನ್ನು ಜಾರಿಗೆ ತರಲು ಅವನಿಗಿಂತ ಅರ್ಹರಾದವರೇ ಇಲ್ಲವೆಂದು ದೊರೆಯ ನಂಬಿಕೆ. ಅವನಿಗೆ ಆಡಳಿತ ವಹಿಸುತ್ತಾನೆ; ಸಹಾಯಕ್ಕೆ ಎಸ್ಕಲಸ್ ಎಂಬ ಇನ್ನೊಬ್ಬ ಅಧಿಕಾರಿಯನ್ನು ನೇಮಿಸುತ್ತಾನೆ. ಏಂಜಲೊನ ಆಳಿಕೆ ಹೇಗೆ ನಡೆವುದೆಂದು ನೋಡಲು ದೊರೆ ತಾನು ದೂರದ ಪೋಲಂಡಿಗೆ ಹೋದಂತೆ ಘೋಷಿಸಿ, ರಾಜ್ಯದಲ್ಲೇ ಪಾದ್ರಿಯ ವೇಷ ತೊಟ್ಟು ತಲೆ ಮರಸಿಕೊಂಡಿರುತ್ತಾನೆ.

ವಿಯೆನ್ನಾದ ಒಂದು ಹಳೆಯ ಕಾಯಿದೆಯ ಪ್ರಕಾರ ವ್ಯಭಿಚಾರ ಘೋರ ಅಪರಾಧ; ಅದಕ್ಕೆ ಮರಣದಂಡನೆಯೇ ಯೋಗ್ಯ ಶಿಕ್ಷೆ. ಏಂಜಲೊ ಅಧಿಕಾರ ವಹಿಸಿಕೊಂಡೊಡನೆಯೇ ಅದನ್ನು ಮತ್ತೆ ಜಾರಿಗೆ ತರುತ್ತಾನೆ. ಅದರ ಕತ್ತಿಪೆಟ್ಟಿಗೆ ಮೊದಲ ಬಲಿಯಾಗುವವನು ಕ್ಲಾಡಿಯೊ ಎಂಬ ಯುವಕ. ಕ್ಲಾಡಿಯೊ ಮತ್ತು ಜೂಲಿಯೆಟ್ ಎಂಬ ಯುವತಿ ಪರಸ್ಪರ ಪ್ರೀತಿಸಿದ್ದಾರೆ. ಮದುವೆಯಾಗುವುದಾಗಿ ಮಾತಾಗಿದೆ. ಆದರೆ ಬಳುವಳಿಗೆ ಸಂಬಂಧಿಸಿದ ಯಾವದೋ ಒಂದು ಅಡ್ಡಿ ಅವರಿಗೆ ಕಾಲ್ತೊಡಕಾಗಿ ಇನ್ನೂ ಮುಹೂರ್ತ ಕೂಡಿಬಂದಿಲ್ಲ. ಅದಕ್ಕೆ ಮುಂಚೆಯೇ ಜೂಲಿಯೆಟ್ ಬಸಿರಾಗಿದ್ದಾಳೆ. ಕ್ಲಾಡಿಯೊನನ್ನು ವ್ಯಭಿಚಾರದ ಅಪರಾಧಕ್ಕೆ ನಿದರ್ಶನವನ್ನಾಗಿ ಮಾಡಿತೋರಿಸುವ ಉತ್ಸಾಹ ಏಂಜಲೊನದು. ಮರಣ-ದಂಡನೆ ಸಾರಿ, ಅದಕ್ಕೆ ಪೀಠಿಕೆಯಾಗಿ ಊರ ಬೀದಿಗಳಲ್ಲಿ ಅವನ ಮೆರವಣಿಗೆ ಹೊರಡಿಸಿ ಅವಮಾನ ಪಡಿಸಿ ಸೆರೆಗೆ ತಳ್ಳಿಸುತ್ತಾನೆ.

ಇಸಬೆಲಾ ಕ್ಲಾಡಿಯೊನ ತಂಗಿ. ಅವಳು ಸುಂದರಿ, ಸುಶೀಲೆ. ಜೀವನದಲ್ಲಿ ವಿರಕ್ತಿ ಹುಟ್ಟಿ ಕ್ರೈಸ್ತ ಮಠ ಸೇರಿ ಅದೇ ದಿನ ಸನ್ಯಾಸದೀಕ್ಷೆ ಪಡೆಯುವವಳಿದ್ದಾಳೆ. ತನ್ನ ಪರ ವಾಗಿ ಅವಳು ಏಂಜಲೊಗೆ ಪ್ರಾರ್ಥನೆ ಸಲ್ಲಿಸಿದರೆ ಜೀವದಾನ ದೊರೆಯಬಹುದೆಂದು ಕ್ಲಾಡಿಯೊಗೆ ಆಸೆಸುತ್ತದೆ. ಲೂಷಿಯೊ ಎಂಬ ಗೆಳೆಯನ ಮುಖಾಂತರ ಇಸಬೆಲಾಳಿಗೆ ತನ್ನ ಮನಸ್ಸು ತಿಳಿಸುತ್ತಾನೆ. ಇಸಬೆಲಾ ಒಪ್ಪಿ ಏಂಜಲೊನನ್ನು ಕಂಡು ಅಣ್ಣನ ಪರವಾಗಿ ಕ್ಷಮಾಯಾಚನೆ ಮಾಡುತ್ತಾಳೆ. ಆದರೆ ಮೊದಲ ಭೇಟಿಯಲ್ಲಿ ಅಷ್ಟಾಗಿ ಪ್ರಯೋಜನ ದೊರೆಯದು. ಅಲ್ಲಿಯವರೆಗೆ ಸಚ್ಚರಿತನಾಗಿದ್ದು ದೈನಂದಿನ ವ್ಯವಹಾರದಲ್ಲಿ ಆ ಗುಣವನ್ನೇ ಅತಿರೇಕಕ್ಕೆ ಒಯ್ದಿದ್ದ ಏಂಜಲೊನನ್ನು ಇಸಬೆಲಾಳ ಸ್ತ್ರೀತ್ವ, ಸೌಂದರ್ಯಗಳು ಕೆಣಕುತ್ತವೆ.



**ಇಸಬೆಲಾ ಅಣ್ಣನ ಪ್ರಾಣ ಉಳಿಸೆಂದು ಏಂಜಲೊಗೆ ಮೊರೆಯಿಟ್ಟದ್ದಾಳೆ.**

ಎರಡನೆ ಭೇಟಿಯ ಹೊತ್ತಿಗೆ ಅವನು ಪೂರ್ಣ ವಿವಶನಾಗಿದ್ದಾನೆ, ಕಾಮ ಅವನನ್ನು ಕೈಗೊಂಬೆ ಮಾಡಿ ಕುಣಿಸಿದೆ. ತನ್ನ ಬಯಕೆಗೆ ಮಣಿಯಲು ಒಪ್ಪಿದರೆ ಮಾತ್ರ ಕ್ಲಾಡಿಯೊಗೆ ಕ್ಷಮೆಯೆನ್ನುತ್ತಾನೆ. ಅವನ ತಕ್ಕಡಿಯಲ್ಲಿ ಅಣ್ಣನ ಪ್ರಾಣಕ್ಕೆ ತಂಗಿಯ ಶೀಲ ಸರಿಬೆಲೆ. ಅವಳು ಒಪ್ಪಳೋ ಕ್ಲಾಡಿಯೊಗೆ ಮರಣ ಖಂಡಿತ.

ಇಸಬೆಲಾ ಹೆದರಿ ಹಿಮ್ಮೆಟ್ಟುತ್ತಾಳೆ. ಹೋಗಿ ಸೆರೆಯಲ್ಲಿರುವ ಅಣ್ಣನನ್ನು ಕಂಡು ಏಂಜಲೊನ ಅಮಾನುಷ ಷರತ್ತನ್ನು ತಿಳಿಸುತ್ತಾಳೆ. ಮೊದಮೊದಲು ಕ್ಲಾಡಿಯೊಗೂ ಜುಗುಪ್ಸೆ: ತಂಗಿಯ ಶೀಲಸ್ವಭಾವವನ್ನು ಕೊಂಡಾಡುತ್ತಾನೆ. ಆದರೆ ಮರುಗಳಿಗೆ ತನಗೆ ಕಾದಿರುವ ಶಿಕ್ಷೆಯನ್ನು ನೆನಸಿಕೊಂಡಾಗ, ಗಲ್ಲುಮರದ ಭೀಕರ ದೃಶ್ಯ ಕಣ್ಣಿಗೆ ಕಟ್ಟಿ ಭಯ ಹುಟ್ಟುತ್ತದೆ. ಆ ಒತ್ತರದಲ್ಲಿ ಅಣ್ಣನೇ ತಂಗಿಗೆ ವ್ಯಭಿಚಾರದ ಪಾಪ ಕ್ಷಮ್ಯವೆಂದು ನೀತಿ-ಬೋಧೆ ಮಾಡುತ್ತಾನೆ; ಏಂಜಲೊನನ್ನು ತೃಪ್ತಿ ಪಡಿಸಿ ತನ್ನ ಪ್ರಾಣ ಉಳಿಸೆಂದು ಗೋಗರೆಯುತ್ತಾನೆ. ಇಸಬೆಲಾ ಅಣ್ಣನ ಹೇಡಿತನಕ್ಕೆ ಛೀಮಾರಿ ಹಾಕುತ್ತಾಳೆ.

ಇದೇ ಹೊತ್ತಿಗೆ ಧರ್ಮೋಪದೇಶದ ನೆಪದಲ್ಲಿ ಸೆರೆಮನೆಗೆ ಬಂದ ಪಾದ್ರಿಯ ವೇಷದ ದೊರೆ ವಿನ್ಸೆಂಷಿಯೊ ಅಣ್ಣತಂಗಿಯರ ಸಂವಾದವನ್ನು ಕದ್ದು ಕೇಳುತ್ತಾನೆ. ಏಂಜಲೊನ ಪರೀಕ್ಷೆಗೆ ಹೊರಟ ಅವನಿಗೆ ತನ್ನದೇ ಬೇರೆ ಯೋಜನೆಯಿದೆ. ಶೀಲವನ್ನು ಮಾರಿಕೊಳ್ಳದೆಯೂ ಕ್ಲಾಡಿಯೊನನ್ನು ಬದುಕಿಸುವುದು ಸಾಧ್ಯವೆಂದು ಇಸಬೆಲಾಳಿಗೆ ಸೂಚಿಸುತ್ತಾನೆ.

ವಿಯೆನ್ನಾದಲ್ಲಿ ಮರಿಯಾನಾ ಎಂಬ ಹುಡುಗಿಯಿದ್ದಾಳೆ. ಹಿಂದೊಮ್ಮೆ ಏಂಜಲೊನೊಂದಿಗೆ ಅವಳ ಮದುವೆ ನಿಶ್ಚಿತವಾಗಿತ್ತು. ಆದರೆ ದುರದೃಷ್ಟವಶಾತ್ ಬಳುವಳಿಯೊಡನೆ ಬರುತ್ತಿದ್ದ ಅವಳ ಅಣ್ಣ ನೀರುಪಾಲಾದ. ಬಳುವಳಿ ಸಿಗಲಿಲ್ಲವೆಂಬ ಕ್ಷುಲ್ಲಕ ಕಾರಣಕ್ಕಾಗಿ ಏಂಜಲೊ ಅವಳನ್ನು ಮದುವೆಯಾಗದೆ ಕೈಬಿಟ್ಟದ್ದಷ್ಟೇ ಅಲ್ಲದೆ ದುಶ್ಶೀಲೆಯೆಂದು ದೂರಿ ಅವಳ ನಡತೆಗೆ ಮಸಿ ಬಳಿದಿದ್ದ. ಅಂದಿನಿಂದ ಮರಿಯಾನಾ ದುಃಖವುಣ್ಣುತ್ತಿದ್ದಾಳೆ (ಪುಟ 181). ಈಗ ಇಸಬೆಲಾ ಏಂಜಲೊನ ಕರೆಗೆ ಒಪ್ಪಿದಂತೆ ಮಾಡಿ, ತನ್ನ ಬದಲು ಮರಿಯಾನಾಳನ್ನು ಅವನೊಡನೆ ಕತ್ತಲ ರಾತ್ರಿಯಲ್ಲಿ ಗುರುತು ಹತ್ತದಂತೆ ನೆರೆಯಲು ಕಳಿಸಬೇಕೆಂದು 'ಪಾದ್ರಿ' ಸೂಚಿಸುತ್ತಾನೆ. ಅದರಿಂದ ದೊರೆಯುವ ಫಲ ಅನೇಕ. ಏಂಜಲೊನ ಚಟ ತೀರಿ ಕ್ಲಾಡಿಯೊನ ಪ್ರಾಣ ಉಳಿಯುತ್ತದೆ; ಮರಿಯಾನಾಳಿಗೆ ಏಂಜಲೊನ ಮೇಲೆ ಕ್ರಮ ಕೈಗೊಂಡು ಮದುವೆಗೆ ಒಪ್ಪಿಸಲು ಅವಕಾಶವಾಗುತ್ತದೆ. ಇಸಬೆಲಾಳ ಶೀಲಕ್ಕೂ ಭಂಗಬರದು!

ಇಸಬೆಲಾ ಒಪ್ಪುತ್ತಾಳೆ. ಎಲ್ಲವೂ 'ಪಾದ್ರಿ'ಯ ಹಂಚಿಕೆಯಂತೆಯೇ ನಡೆಯುತ್ತದೆ. ಜತೆಗಿರುವವಳು ಇಸಬೆಲಾಳೆಂದೇ ನಂಬಿ ಏಂಜಲೊ ಮರಿಯಾನಾಳನ್ನು ಕೂಡುತ್ತಾನೆ. ಆದರೆ ಒಮ್ಮೆ ತೀಟೆ ತೀರಿದ ಬಳಿಕ ಅವನು ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಿಲ್ಲ. ಮುಂದೆ ಕ್ಲಾಡಿಯೊ ತನ್ನ ಕೃತ್ಯವನ್ನು ಬಯಲಿಗೆಳೆಯಬಹುದೆಂದು ಹೆದರಿ, ತಕ್ಷಣ ಅವನ ತಲೆಕಡಿದು ತಂದು ತೋರಿಸಬೇಕೆಂದು ವಿಧಿಸುತ್ತಾನೆ. 'ಪಾದ್ರಿ' ಗಟ್ಟಿಗ. ಸೆರೆಯ ಅಧಿಕಾರಿಯನ್ನು ಒಳಹಾಕಿಕೊಂಡು ಕ್ಲಾಡಿಯೊನನ್ನು ಮರಸಿನಲ್ಲಿರಿಸಿ ಆ ದಿನ ಸ್ವಾಭಾವಿಕವಾಗಿ ಸತ್ತಿದ್ದ ಇನ್ನೊಬ್ಬ ಖೈದಿಯ ತಲೆಯನ್ನು ಅದು ಕ್ಲಾಡಿಯೊನದೆಂಬಂತೆ ಏಂಜಲೊಗೆ ಕಳಿಸಿಕೊಡುತ್ತಾನೆ. ಜೊತೆಗೇ ಅಣ್ಣನಿಗೆ ಗಲ್ಲಾಯಿತೆಂದು ಇಸಬೆಲಾಳನ್ನು ನಂಬಿಸಿ, ಏಂಜಲೊನ ದುರಾಚಾರಕ್ಕೆ ಅವನ ಮೇಲೆ ಬಹಿರಂಗವಾಗಿ ಆರೋಪ ತರುವಂತೆ ಅವಳನ್ನೂ ಮರಿಯಾನಾಳನ್ನೂ ಪ್ರಚೋದಿಸುತ್ತಾನೆ. ಅದರ ವಿಚಾರಣೆಗೆ ತಾನೇ ಹಾಜರಿರಲು ನಿಶ್ಚಯಿಸಿ, ಕೂಡಲೇ ಊರಿಗೆ ಹಿಂದಿರುಗುತ್ತಿರುವುದಾಗಿ ಏಂಜಲೊಗೆ ಪತ್ರ ಕಳಿಸುತ್ತಾನೆ.

ಮಾರನೆ ದಿನ ದೊರೆಯನ್ನು ಎದುರುಗೊಳ್ಳಲು ಊರಿಗೆ ಊರೇ ನಗರದ್ವಾರದಲ್ಲಿ ನೆರೆದಿದೆ. ಇಸಬೆಲಾ, ಮರಿಯಾನಾರೂ ಅಲ್ಲಿ ಹಾಜರಿದ್ದಾರೆ. ಏಂಜಲೊ ಅಣ್ಣನ ಪ್ರಾಣಕ್ಕೆ ವಿನಿಮಯವಾಗಿ ತನ್ನ ಕನ್ನೆತನವನ್ನು ಕೆಡಿಸಿ, ಆಮೇಲೆ ಮಾತುಳಿಸಿಕೊಳ್ಳದೆ ಅವನನ್ನು ಕೊಲ್ಲಿಸಿದನೆಂದು ಇಸಬೆಲಾಳೂ, ಮದುವೆಯಾಗುವೆನೆಂದು ನಂಬಿಸಿ ಮಾತು ಮುರಿದನೆಂದು ಮರಿಯಾನಾಳೂ ದೊರೆಗೆ ದೂರಿಡುತ್ತಾರೆ. ದೊರೆ ಏಂಜಲೊನಲ್ಲಿ ತುಂಬ ವಿಶ್ವಾಸವಿರುವವನಂತೆ ನಟಿಸಿ, ಹುಡುಗಿಯರ ಆರೋಪಗಳನ್ನು ನಂಬದೆ ಅವರ ಮೇಲೆಯೇ ಕೋಪಿಸಿಕೊಂಡಂತೆ ತೋರಿಸಿಕೊಳ್ಳುತ್ತಾನೆ. ಅವರನ್ನು ಎತ್ತಿಕಟ್ಟಿದವನು ಒಬ್ಬ 'ಪಾದ್ರಿ'ಯೆಂಬುದನ್ನೂ ಜೇಕೆಂದೇ ಕೆದಕಿ ಹೊರಹಾಕುತ್ತಾನೆ. 'ಪಾದ್ರಿ'ಗೆ ಕರೆ ಕಳಿಸಿ, ವಿಚಾರಣೆಯ ಭಾರವನ್ನು ಏಂಜಲೊಗೇ ವಹಿಸಿ ತಾನು ಮತ್ತೆ ಬರುವುದಾಗಿ ಹೇಳಿ ಹೋಗುತ್ತಾನೆ.

ಸ್ವಲ್ಪ ಹೊತ್ತಿನಲ್ಲಿಯೇ ದೊರೆ ಮತ್ತೆ 'ಪಾದ್ರಿ'ಯ ವೇಷ ಧರಿಸಿ ಇಸಬೆಲಾ ಮರಿಯಾನಾರ ಪರ ಸಾಕ್ಷ್ಯ ಕೊಡಲು ಅಲ್ಲಿ ಹಾಜರಾಗುತ್ತಾನೆ. ಕ್ಲಾಡಿಯೊನ ಗೆಳೆಯ ಲೂಷಿಯೊನೂ ಅಲ್ಲೇ ಗುಂಪಿನಲ್ಲಿದ್ದಾನೆ. ಅವನು ಲಂಪಟ, ಸುಳ್ಳ, ಸಮಯಸಾಧಕ. ಹಿಂದೆ ಸೆರೆಮನೆಯಲ್ಲಿ 'ಪಾದ್ರಿ'ಯ ಮುಂದೆ ದೊರೆ ಲುಚ್ಚನೆಂದು ಮೂದಲಿಸುತ್ತಿದ್ದವನು ಈಗ 'ಪಾದ್ರಿ'ಯೇ ದೊರೆಯ ನಿಂದೆ ಮಾಡಿದ್ದನೆಂದು ಸುಳ್ಳು ಬೊಗಳಿ, ಅವನ ಮೇಲೆ ಕೈ ಮಾಡಹೋದಾಗ ಆಕಸ್ಮಿಕವಾಗಿ 'ಪಾದ್ರಿ'ಯ ವೇಷ ಕಳಚುತ್ತದೆ. ದೊರೆ ಪಾದ್ರಿಯಂತೆ ತಲೆ ಮರಸಿಕೊಂಡಿದ್ದನೆಂದು ತಿಳಿದು ಎಲ್ಲರಿಗೂ ಅಚ್ಚರಿ. ಏಂಜಲೊನಂತೂ ದಿಙ್ಮೂಢ. ಬೇರೆ ಮಾತಿಲ್ಲದೆ ತನ್ನ ತಪ್ಪೊಪ್ಪಿಕೊಂಡು ಮರಣದಂಡನೆಗೆ ತಲೆ ಕೊಡಲು ಮುಂದಾಗುತ್ತಾನೆ. ಆದರೆ ದೊರೆಯ ರೀತಿ ಬೇರೆ! ಮೊದಲು ಅವನಿಗೂ ಮರಿಯಾನಾಳಿಗೂ ಲಗ್ನ ಮಾಡಿಸಿ ಅವಳಿಗೆ ನ್ಯಾಯ ದೊರಕಿಸುತ್ತಾನೆ. ನಂತರ 'ಕ್ಲಾಡಿಯೊನ ತಲೆಗೆ ತಲೆದಂಡ' ಬೇಡಿ ಏಂಜಲೊಗೆ ಮರಣದಂಡನೆಯಾಗಲೆನ್ನುತ್ತಾನೆ. ಅದೇ ತಾನೇ ಅವನ ಕೈ ಹಿಡಿದಿದ್ದ ಮರಿಯಾನಾ ಗಂಡನ ಜೀವದಾನ ಬೇಡುತ್ತಾಳೆ. ಸಾಧ್ವಿ ಇಸಬೆಲಾಳೂ ಅವಳ ಪರವಾಗಿ ಗೋಗರೆಯುತ್ತಾಳೆ. ಆಗ ದೊರೆ ಕ್ಲಾಡಿಯೊ ಜೀವಂತನಾಗಿರುವ ವಿಷಯವನ್ನು ಬಹಿರಂಗ ಪಡಿಸಿ, ಏಂಜಲೊಗೆ ಕ್ಷಮಾದಾನ ಮಾಡುತ್ತಾನೆ. ಕ್ಲಾಡಿಯೊ-ಜೂಲಿಯೆಟರ ಲಗ್ನ ಮಾಡಿಸಿ, ತಾನು ಇಸಬೆಲಾಳ ಕೈ ಬೇಡಿ ಅವಳನ್ನು ಮದುವೆಗೆ ಒಪ್ಪಿಸುತ್ತಾನೆ. ದೊರೆಯನ್ನು ಕೆಣಕಿದ್ದ ಪೋಕರಿ ಲೂಷಿಯೊ ಒಬ್ಬನಿಗೆ ಮಾತ್ರ ಸೆರೆಯಾಗುತ್ತದೆ.

## 19. ಟೈಮನ್ ಆಫ್ ಅಥೆನ್ಸ್

**ರಚನೆ:** 1604-5. **ಮೊದಲ ಪ್ರಕಟನೆ:** 1623.

**ಆಕರಗಳು:** ಪ್ಲೂಟಾರ್ಕನ 'ಲೈಫ್ ಆಫ್ ಆಂಟೋನಿಯಸ್' ಮತ್ತು 'ಲೈಫ್ ಆಫ್ ಅಲ್ಸಿ-ಬೈಡೀಸ್'; ವಿಲಿಯಂ ಪೇಂಟರನ 'ಪ್ಯಾಲೆಸ್ ಆಫ್ ಪ್ಲೆಷರ್'; ಲೂಸಿಯನ್‌ನ 'ಟೈಮನ್ ಆರ್ ದಿ ಮಿಸಂತ್ರೋಪ್' ಎಂಬ ಸಂಭಾಷಣೆ.

**ಕಥೆ:** ಇದು ಒಂದು ಅಪೂರ್ಣ ಕೃತಿ. ಇನ್ನೊಬ್ಬ ನಾಟಕಕಾರ ಬರೆದುದನ್ನು ಷೇಕ್ಸ್ಪಿಯರನೋ, ಷೇಕ್ಸ್ಪಿಯರನದನ್ನು ಅವನೋ ಪರಿಷ್ಕರಿಸಿರಬೇಕೆಂದು ಪಂಡಿತರ ನಂಬಿಕೆ; ಆ 'ಇನ್ನೊಬ್ಬ' ಜಾರ್ಜ್ ವಿಲ್ಕಿನ್ಸ್ ಎಂದೂ ಊಹೆ. ಮುಂದಿನ 'ಕಿಂಗ್ ಲಿಯರ್' ನಂತೆ ಇಲ್ಲಿಯೂ ನಾಟಕದ ವಸ್ತು ಮಾನವ ಕೃತಘ್ನತೆ ಹಾಗೂ ವ್ಯಕ್ತಿಯ ಮೇಲೆ ಅದರಿಂದಾಗುವ ದುರಂತ ಪರಿಣಾಮ. ಒಟ್ಟಿನಲ್ಲಿ ನಾಟಕ ಷೇಕ್ಸ್ಪಿಯರನ ಪ್ರಕೃತಿಗೆ ಒಗ್ಗದ ಕಟುವಾದ ವಿಡಂಬನೆ. ಪಾತ್ರಕಲ್ಪನೆ ಅಸಹಜ; ಅವುಗಳಲ್ಲಿ ಎರಡೇ ಜಾತಿ — ಹಾಲುಬಿಳುಪು ಇಲ್ಲವೇ ಕಡುಗಪ್ಪು, ಸದ್ಗುಣಿಗಳು ಇಲ್ಲವೇ ದುರ್ಗುಣಿಗಳು! ನಾಟಕದ ತುಂಬ ಉದ್ಧರಣಯೋಗ್ಯವಾದ ಮಾತುಗಳಿದ್ದು ಕೃತಿಗೆ ಕಳೆಕಟ್ಟಿದೆ.

ಟೈಮನ್ ಅಥೆನ್ಸಿನ ಒಬ್ಬ ಗಣ್ಯ ಶ್ರೀಮಂತ; ಮೇಲಾಗಿ ದಾನಶೂರ. ಧನದೇವ ಪ್ಲೂಟಸನೇ ಅವನ ಮನೆ ನಡಸಿದ್ದಾನೆಂದು ಜನರ ನಂಬಿಕೆ. ಅವನದು ಮನೆಯಲ್ಲ, ಛತ್ರ. ಕವಿಗಳೇನು, ಕಲೆಗಾರರೇನು, ವಣಿಕರೇನು, ರಾಜಕಾರಣಿಗಳೇನು — ಅಲ್ಲಿ ಬಂದು,

ಉಂಡು, ಕೊಂಡು, ಕೊಂಡಾಡಿ ಹೋಗದ ಜನರೇ ಇಲ್ಲ. ಒಬ್ಬ ಗೆಳೆಯ ಸಾಲ ತೀರಿಸದ ತಪ್ಪಿಗೆ ಸೆರೆಮನೆ ಸೇರಿದರೆ ಟೈಮನ್ ಅವನ ದಂಡ ತೆತ್ತು ಬಿಡುಗಡೆ ಕೊಡಿಸಿದ್ದೇ ಅಲ್ಲದೆ, ಮತ್ತೆ ಸುಸ್ಥಿತಿಗೆ ಬರುವವರೆಗೂ ಅವನ ವೆಚ್ಚಕ್ಕೆ ಹಣ ಕೊಡಲು ಮುಂದಾಗುತ್ತಾನೆ. ಇನ್ನೊಬ್ಬ ನಿನ್ನ ಆಳು ನನ್ನ ಮಗಳನ್ನು ಪ್ರೀತಿಸಿದ್ದಾನೆಂದರೆ 'ಮದುವೆ ಹೂಡಿಸು, ನೀನು ಕೊಡುವ ಬಳುವಳಿಯ ಬೆಲೆಯಷ್ಟೇ ನನ್ನಿಂದ ಕಾಣಿಕೆ ತೊಗೊ' ಎನ್ನುತ್ತಾನೆ ಟೈಮನ್. ಯಾರಾದರೂ ಉಡುಗೊರೆ ಕೊಡಲು ಹೋದರೆ, ಅವರಿಗೆ ಸಿಗುವುದು ಅದರ ಏಳುಪಟ್ಟು ಬೆಲೆ. ಅವನ ಸುತ್ತಲೂ 'ಜೀಯ,ಹಸಾದ' ಎನ್ನುವ ಹೊಗಳುಭಟ್ಟರೇ ತುಂಬಿದ್ದಾರೆ.

ಟೈಮನನ ಬಳಗದಲ್ಲಿ ಇಂತಹ ಜನರಲ್ಲದೆ ಕೆಲವು ಹಿತೈಷಿಗಳೂ ಇದ್ದಾರೆ. ಅವರಲ್ಲಿ ಸಿಡುಕುಮೋರೆಯ ಖಂಡಿತವಾದಿ ಅಪೆಮ್ಯಾಂಟಸ್ ಒಬ್ಬ; ಟೈಮನನ ಮನೆವಾರ್ತೆ ಫ್ಲೇವಿಯಸ್ ಇನ್ನೊಬ್ಬ. ಅಪೆಮ್ಯಾಂಟಸ್ ಮುಖಮೋರೆ ನೋಡದೆ ಭಟ್ಟಂಗಿಗಳನ್ನು ಹೀಯಾಳಿಸಿ, ಅವರ ಬಗ್ಗೆ ಟೈಮನನನ್ನು ಎಚ್ಚರಿಸುತ್ತಾನೆ. ಫ್ಲೇವಿಯಸ್‌ನಿಗೆ ದಿನೇ ದಿನೇ ದಣಿಯ ದುಂದುತನದಿಂದ ಬೊಕ್ಕಸ ಕರಗಿ ಸಾಲ ಬೆಳೆಯುತ್ತಿರುವುದನ್ನು ಕಂಡು ಚಿಂತೆ; ಹೀಗೇ ಮುಂದುವರಿದರೆ ನಾಶ ಅನಿವಾರ್ಯವೆಂದು ಭಯ. ಆದರೆ ಅವರ ಬುದ್ಧಿಮಾತು ಟೈಮನನ ಕಿವಿಗೆ ಹೊಗದು. ಕೊಡುಗೈಸುಖದ ಸವಿ ಅವನ ನೆತ್ತಿಗೇರಿ, ಕುರುಡು ತಂದಿದೆ.

ಟೈಮನನ ಸ್ಥಿತಿ ಹಾಳುಗೆಡಲು ಬಹಳ ದಿನ ಹಿಡಿಯುವುದಿಲ್ಲ. ಅವನ ಮಿತಿಮೀರಿದ ಔದಾರ್ಯವನ್ನು ಕಂಡು ಮುಂದೆ ಹೇಗೋ ಏನೋ ಎಂದು ಹೆದರಿದ ಸಾಲಿಗರು ಸಾಲದ ಹಣ ವಾಪಸು ಮಾಡೆಂದು ಬೇಡಿಕೆ ಹಾಕುತ್ತಾರೆ. ಮನೆಯ ಮುಂದೆ ಆ ಸಾಹುಕಾರರ ಆಳುಗಳ ಸಂತೆ ನೆರೆಯುತ್ತದೆ. ಟೈಮನ್ ಫ್ಲೇವಿಯಸನನ್ನು ಕರೆದು ಅವರ ಹಣ ಕೊಟ್ಟು ಕಳಿಸೆಂದಾಗ ಬೊಕ್ಕಸ ಬರಿದಾಗಿರುವುದೇ ಅಲ್ಲದೇ ಹೊಲಗದ್ದೆಗಳು ಎಂದೋ ಅಡವಾಗಿಯೊ ಮಾರಾಟವಾಗಿಯೊ ಹೋದ ವಸ್ತುಸ್ಥಿತಿಯ ಅರಿವಾಗುತ್ತದೆ. ಆಪ್ತಮಿತ್ರರನ್ನು ಪರೀಕ್ಷಿಸಿ ಅವರಿಗೆ ಕೊಡುಗೈಸುಖವುಣಿಸಲು ಇದೊಂದು ಒಳ್ಳೆಯ ಅವಕಾಶವೆಂದುಕೊಳ್ಳುತ್ತಾನೆ ಟೈಮನ್! ಅವರಿಂದ ಸಾಲ ಬೇಡಿ ತರಲು ಆಳುಗಳನ್ನು ಅಟ್ಟುತ್ತಾನೆ. ಫ್ಲೇವಿಯಸ್ ತಾನಾಗಲೇ ಅವರಲ್ಲಿ ಸಾಲಕ್ಕೆ ಪ್ರಯತ್ನಿಸಿ ವಿಫಲನಾಗಿರುವೆನೆಂದರೆ ಟೈಮನನಿಗೆ ನೆಚ್ಚಿಕೆಯಿಲ್ಲ. ಊಟದಲ್ಲಿ ಜತೆಯಾದವರು ಹಸಿವಿನಲ್ಲಿ ದೂರವಾಗರೆಂದು ಆ ಮೂರ್ಖನ ನಂಬಿಕೆ.

ಆಪ್ತಮಿತ್ರರಲ್ಲಿ ಒಬ್ಬ 'ಇದು ಕಷ್ಟದ ಕಾಲ, ಟೈಮನನ ಸ್ನೇಹವಷ್ಟೇ ಸಾಲಕ್ಕೆ ಭದ್ರತೆಯಾಗದು' ಎನ್ನುತ್ತ ಆಳಿಗೆ ಲಂಚದ ಆಸೆ ತೋರಿಸಿ ತಾನು ಸಿಗಲಿಲ್ಲವೆಂದು ಹೇಳಲು ಕೇಳಿಕೊಳ್ಳುತ್ತಾನೆ. ಆ ವರ್ತನೆ ಆಳಿಗೂ ಅಸಹ್ಯ ತರುತ್ತದೆ. ಇನ್ನೊಬ್ಬ 'ನನಗೇ ಹಣದ ಆಗತ್ಯವಿತ್ತು, ಟೈಮನನನ್ನೇ ಕೇಳಬೇಕೆಂದಿದ್ದೆ' ಎನ್ನುತ್ತಾನೆ. ಇಬ್ಬರು ನಿರಾಕರಿಸಿದರೆಂದು ಕೇಳಿದ ಮೂರನೆಯವನು ಅವರಿಗಿಂತ ಮೊದಲು ತನ್ನ ಬಳಿ ಬಾರದುದಕ್ಕೆ ನೊಂದಂತೆ ತೋರ್ಪಡಿಸಿಕೊಂಡು, ಅದನ್ನೇ ನೆಪಮಾಡಿ ತಾನೂ ಕೈ ಅಲ್ಲಾಡಿಸುತ್ತಾನೆ!

ಆಪ್ತಮಿತ್ರರ ಈ ಕೃತಘ್ನತೆ ಟೈಮನನ ಕಣ್ಣು ತೆರಸುತ್ತದೆ. ತನ್ನನ್ನು ಚೀಪಿ ಚಪ್ಪೆ ಮಾಡಿದ ಆ ಜನರ ಮೇಲೆ ಅಸಹ್ಯ, ಕೋಪ, ದ್ವೇಷಗಳು ಹುಟ್ಟುತ್ತವೆ. ಅವರಿಗೆ ಬುದ್ಧಿ ಕಲಿಸಲೆಂದು ಟೈಮನ್ ಒಂದು ವಿಶೇಷ ಔತಣವೇರ್ಪಡಿಸಿ ಅವರೆಲ್ಲರನ್ನೂ ಆಮಂತ್ರಿಸುತ್ತಾನೆ. ಆ ಮರ್ಯಾದೆ ಕೆಟ್ಟ ಜನ ನಗುನಗುತ್ತಲೇ ಓಡಿಬರುತ್ತಾರೆ. ಅವನ ಸಮಯಕ್ಕೆ

ಹಣ ಒದಗಿಸಲಾಗದುದಕ್ಕೆ ಬಾಯಿತುಂಬ ಕ್ಷಮಾಪಣೆ ಕೇಳಿಕೊಳ್ಳುತ್ತಾರೆ. ಅವರ ನಾಲಿಗೆ ಔತಣದ ಅಡಿಗೆಯನ್ನು ನೆನೆದು ಜೊಲ್ಲು ಸುರಿಸಿದೆ. ಸಂಭ್ರಮದಿಂದ ಊಟಕ್ಕೆ ಕುಳಿತು ಮುಂದಿಟ್ಟ ತಣಿಗೆಗಳ ಮುಚ್ಚಳವೆತ್ತಿದಾಗ ಅವರಿಗೆ ಉಣಸಿಗುವುದು ಕಲ್ಲು, ಬಿಸಿನೀರು! ಅಷ್ಟೇ ಸಾಲದೆಂಬಂತೆ ಟೈಮನ್ ಅವರ ಮುಖಕ್ಕೆ ನೀರೆರಚಿ ಬೈದಟ್ಟುತ್ತಾನೆ.

ವೀರಯೋಧ ಅಲ್ಸಿಬೈಡೀಸ್ ಅಥೆನ್ಸಿನ ಪ್ರಮುಖ ನಾಗರಿಕರಲ್ಲೊಬ್ಬ. ಅವನು ಟೈಮನನ ಸಾಚಾ ಸ್ನೇಹಿತ. ಟೈಮನನಂತೆಯೇ ಅವನನ್ನೂ ಇನ್ನೊಂದು ಬಗೆಯ ಕೃತಘ್ನತೆ ಕಾಡುತ್ತದೆ. ಅವನ ಒಬ್ಬ ಸಹಯೋಧನಿಗೆ ಕೊಲೆಯ ಅಪರಾಧದ ಮೇಲೆ ಮರಣದಂಡನೆಯಾಗಿದೆ. ಅಲ್ಸಿಬೈಡೀಸ್ ಅದು ಆತ್ಮರಕ್ಷಣೆಗೆ ಕಾದಿದಾಗ ಉಂಟಾದ ಸಾವೆಂದೂ ಕೊಲೆಯಲ್ಲವೆಂದೂ ಗೆಳೆಯನ ಪರವಾಗಿ ವಾದಿಸಿ ಮರಣದಂಡನೆಯನ್ನು ತೊಡೆದುಹಾಕಬೇಕೆನ್ನುತ್ತಾನೆ. ಶಾಸಕರು ಒಪ್ಪರು. ಅಲ್ಸಿಬೈಡೀಸ್ ಮೊಂಡುಹಿಡಿಯುತ್ತಾನೆ. ಶಾಸಕರಿಗೆ ರೇಗಿ ಅಲ್ಸಿಬೈಡೀಸನಿಗೇ ಗಡೀಪಾರಿನ ಶಿಕ್ಷೆ ವಿಧಿಸುತ್ತಾರೆ. ದೇಶ ಬಿಟ್ಟು ಹೋಗದಿದ್ದರೆ ಅವನಿಗೂ ಮರಣದಂಡನೆ ಸಿದ್ಧ! ಅಲ್ಸಿಬೈಡೀಸ್ ಅವರ ಕೃತಘ್ನತೆಗೆ ಶಪಿಸುತ್ತ, ಸೈನ್ಯ ಕಟ್ಟಿ ತಂದು ಅಥೆನ್ಸಿನ ಮೇಲೆ ಬೀಳುವುದಾಗಿ ಹೇಳಿ ಹೋಗುತ್ತಾನೆ.

ಮಿತ್ರರ ಕೃತಘ್ನತೆ ಟೈಮನನ ಎದೆಯಲ್ಲಿ ಕಹಿ ಕದಡಿ ಅವನನ್ನು ಘೋರ ಮನುಷ್ಯ-ದ್ವೇಷಿಯನ್ನಾಗಿ ಮಾಡಿದೆ. ಇಡೀ ಮಾನವಕುಲವನ್ನೇ ಶಪಿಸುತ್ತ ಹೋಗಿ ಕಡಲದಂಡೆಯ ಒಂದು ಗವಿ ಸೇರಿಕೊಳ್ಳುತ್ತಾನೆ. ಈಗ ಯಾವ ಹುಚ್ಚನೂ ಅನನಿಗೆ ಸರಿಗಟ್ಟಲಾರ; ಅವನು ಬಾಯಿ ತೆರೆದರೆ ಹೊರಬರುವುದು ಕಹಿ, ಉರಿ, ವಿಷ! ಅವನ ಕೆಳೆಯೆಂದರೆ ಗವಿಯ ಏಕಾಂತ, ಆಹಾರ ಗೆಡ್ಡೆಗೆಣಸು. ಒಂದು ದಿನ ಗೆಣಸಿಗಾಗಿ ನೆಲ ಅಗೆಯುತ್ತಿರುವಾಗ ಅವನಿಗೆ ಚಿನ್ನದ ದೊಡ್ಡ ರಾಶಿಯೇ ಸಿಗುತ್ತದೆ. ಚಿನ್ನ ಜಗತ್ತಿನ ಪಾಪಮೂಲ; ಅದನ್ನು ಹೊತ್ತುದಕ್ಕೆ ಟೈಮನ್ ನೆಲತಾಯಿಗೇ ಶಾಪವಿಕ್ಕುತ್ತಾನೆ. ಅದೇ ಹೊತ್ತಿಗೆ ಅಥೆನ್ಸಿನ ಮೇಲೆ ದಂಡೆತ್ತಿ ಹೊರಟ ಅಲ್ಸಿಬೈಡೀಸ್ ಆ ದಾರಿಯಲ್ಲಿ ಬರುತ್ತಾನೆ. ಟೈಮನ್ ಅವನನ್ನೂ ಅವನ ಹೆಂಡಿರನ್ನೂ ಬಾಯಿತುಂಬ ಬಯ್ಯುತ್ತಾನೆ. ಆದರೆ ಅಲ್ಸಿಬೈಡೀಸನಿಗೆ ಟೈಮನನಲ್ಲಿ ಅನುಕಂಪ. ನಿರ್ಮಲಚಿತ್ತದಿಂದ ಮಾತಾಡಿ, ತನ್ನ ಸೈನ್ಯದ ವೆಚ್ಚಕ್ಕೆ ಕೊರತೆಯಾದರೂ ಟೈಮನನಿಗೆ ಸ್ವಲ್ಪ ಹಣ ಕೊಡಲು ಮುಂದಾಗುತ್ತಾನೆ; ಟೈಮನನಲ್ಲಿ ನಿಧಿಯಿದೆಯೆಂದು ಅವನು ಕಾಣ. ಅಲ್ಸಿಬೈಡೀಸ್ ಅಥೆನ್ಸಿನ ವಿರುದ್ಧ ದಂಡೆತ್ತಿ ಹೊರಟವನೆಂದು ತಿಳಿದಾಗಲಂತೂ ಟೈಮನನಿಗೆ ಪೈಶಾಚಿಕ ಸಂತೋಷ. ಬಯ್ಯುಬಯ್ಯುತ್ತಲೇ ಅವನಿಗೆ ಕೈತುಂಬ ಚಿನ್ನ ಕೊಟ್ಟು ಅಥೆನ್ಸನ್ನು ಮಣ್ಣುಮಾಡಿಬಾರೆಂದು ಕಳಿಸುತ್ತಾನೆ.

ಅಪೆಮ್ಯಾಂಟಸ್ ಬರುತ್ತಾನೆ, ಈ ಅತಿರೇಕವೇಕೆಂದು ನಿಂದಿಸುತ್ತಾನೆ. ಮೊನಚು ಮಾತಿಗೆ ಹೆಸರಾದ ಅವನಿಗೆ ಈಗ ಟೈಮನ್ ಸರಿದೊರೆ. ಮುಳ್ಳು ಮುಳ್ಳಿಗೆ ಚುಚ್ಚುತ್ತದೆ!

ಟೈಮನನಲ್ಲಿ ಚಿನ್ನವಿರುವ ಸಂಗತಿ ಒಂದು ಕಳ್ಳರ ಪಡೆಗೆ ಗೊತ್ತಾಗುತ್ತದೆ. ಅವರು ಅವನನ್ನು ಸುಲಿಯಲು ಬರುತ್ತಾರೆ. ಟೈಮನ್ ಅವರನ್ನು ಬೈದರೂ ಅವರ ವೃತ್ತಿಯನ್ನು ಹೊಗಳಿ, ಹೋಗಿ ಅಥೆನ್ಸಿನ ಕೊಳ್ಳೆ ಹೊಡೆಯುವಂತೆ ಹೇಳಿ ಅವರಿಗೆ ಚಿನ್ನ ಕೊಡುತ್ತಾನೆ. ಅವನ ಮಾತಿನ ನಂಜಿಗೆ ಹೇಸಿದ ಆ ಕಳ್ಳರು ದುರ್ಮಾರ್ಗ ತೊರೆದು ಸಭ್ಯರಾಗುತ್ತಾರೆ.

ಒಂದೆ ಮನೆವಾರ್ತೆಯಾಗಿದ್ದ ಫ್ಲೇವಿಯಸ್ ಬರುತ್ತಾನೆ. ಅವನಿಗೂ ಮೊದ

ಮೊದಲು ಬಯ್ಗುಳಿನ ಸ್ವಾಗತವೇ; ಆದರೆ ಬೀಳ್ಕೊಡುವಾಗ ಅವನಿಗೂ ಬೊಗಸೆಬೊಗಸೆ ಚಿನ್ನದ ಉಡುಗೊರೆ ಸಿಗುತ್ತವೆ. ಆದರೆ ಒಂದು ಕರಾರಿನ ಮೇಲೆ— ಫ್ಲೇವಿಯಸ್ ತನ್ನ ಉದಾರಬುದ್ಧಿ ತೊರೆದು ಮಾನವದ್ವೇಷಿಯಾಗಬೇಕು!

ಅಥೆನ್ಸಿನ ಶಾಸಕರು ಟೈಮನನಲ್ಲಿಗೆ ನಿಯೋಗ ಬಂದು ಊರಿಗೆ ಹಿಂದಿರುಗುವಂತೆ ಕೋರುತ್ತಾರೆ. ಅವನ ಬೆಂಬಲ ದೊರೆತರೆ ಅಲ್ಸಿಬೈಡೀಸನನ್ನು ಎದುರಿಸುವುದು ಸುಲಭ ವೆಂದು ಅವರ ನಂಬಿಕೆ. ಟೈಮನನಿಗೆ ಹಿಂದಿಲ್ಲದ ಭಾಗ್ಯಗಳೆಲ್ಲವನ್ನೂ ನೀಡಿ ಅವನಿಗೆ ಸೇನಾ ಪತಿಯ ಪಟ್ಟ ಕೊಡಲೂ ಅವರು ಮುಂದಾಗುತ್ತಾರೆ. ಆದರೆ ಈಗ ಟೈಮನನನ್ನು ಯಾವ ವಿಲೋಭನೆಯೂ ಮರುಳುಮಾಡದು; ಶಾಸಕರು ನಿರಾಶರಾಗಿ ಹಿಂದಿರುಗುತ್ತಾರೆ.

ಅಲ್ಸಿಬೈಡೀಸ್ ಅಥೆನ್ಸಿಗೆ ಮುತ್ತಿಗೆ ಹಾಕುತ್ತಾನೆ. ಶಾಸಕರು ನಗರವನ್ನು ಉಳಿಸೆಂದು ಗೋಗರೆಯುತ್ತಾರೆ. ತನಗೂ ಟೈಮನನಿಗೂ ದ್ರೋಹ ಬಗೆದವರನ್ನು ಶಿಕ್ಷೆಗೆ ಗುರಿಮಾಡಲು ಅವರು ಸಮ್ಮತಿಸುವುದಾದರೆ ಅಲ್ಸಿಬೈಡೀಸ್ ಕದನ ನಿಲ್ಲಿಸಲು ಸಿದ್ಧ. ಶಾಸಕರು ಒಪ್ಪುತ್ತಾರೆ. ಆದರೆ ಅದೇ ಹೊತ್ತಿಗೆ ಟೈಮನ್ ಸತ್ತನೆಂಬ ಸುದ್ದಿ ಬರುತ್ತದೆ. ಆ ವಾರ್ತೆ ತಂದವನು ಟೈಮನ್ ಸಾಯುವ ಮೊದಲು ತನ್ನ ಸಮಾಧಿಗೆಂದು ಬರೆದಿಟ್ಟು ಹೋದ ಅಂತ್ಯಲಿಪಿಯನ್ನು ಅಲ್ಸಿಬೈಡೀಸನಿಗೆ ಕೊಡುತ್ತಾನೆ. ಅದರಲ್ಲಿ ಸಹ ಟೈಮನ್ ಮಾನವ ದ್ವೇಷವನ್ನು ಸಾರಿ, ತನ್ನ ಸಮಾಧಿಯ ಬಳಿ ಯಾರೂ ಕಾಲಿಡಕೂಡದೆಂದು ಆಶಿಸಿದ್ದಾನೆ!

## 20. ಕಿಂಗ್ ಲಿಯರ್

**ರಚನೆ:** 1605-6. **ಮೊದಲ ಪ್ರಕಟನೆ:** 1608.

**ಆಕರಗಳು:** ಕರ್ತೃ ಯಾರೆಂದು ಸೂಚಿತವಾಗದ ಇದೇ ಹೆಸರಿನ ಒಂದು ಹಿಂದಿನ ನಾಟಕ; ಚಾರಿತ್ರಕ ನಾಟಕಗಳಿಗೆ ಆಕರ ಒದಗಿಸಿದ ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್'; 'ದಿ ಮಿರರ್ ಫರ್ ಮ್ಯಾಜಿಸ್ಟ್ರೇಟ್ಸ್' ಎಂಬ ದುರಂತ ಕಥೆಗಳ ಸಂಕಲನ; ಎಡ್ಮಂಡ್ ಸ್ಪೆನ್ಸರನ 'ಫೇರಿ ಕ್ವೀನ್'; ಹಾಗೂ ಗ್ಲಾಸ್ಟರನ ಉಪಕಥೆಗೆ ಫಿಲಿಪ್ ಸಿಡ್ನಿಯ 'ಆರ್ಕೇಡಿಯಾ' ಕಾವ್ಯ.

**ಕಥೆ:** ಕವಿಯ ನಾಲ್ಕು ಮಹಾರುದ್ರ ನಾಟಕಗಳಲ್ಲಿ ಒಂದಾದ ಇದು ಪ್ರಚಂಡ ಕೃತಿ; ಇದರ ಬಗೆ ಉಗ್ರ, ಘೋರ, ರುದ್ರಾತಿರುದ್ರ. ಮನುಷ್ಯನ ಬರ್ಬರ ಪ್ರವೃತ್ತಿಗಳ ಜೊತೆಗೆ ಇಲ್ಲಿ ಪ್ರಕೃತಿಯ ಮೂಲತತ್ವಗಳೂ ಹುಚ್ಚೆದ್ದು ಕುಣಿದು ಹಾಳು ಸುರಿಸುತ್ತವೆ. ಗ್ರೀಕ್ ರುದ್ರನಾಟಕಗಳಂತೆ ಈ ಕೃತಿ ತೀವ್ರ ಭಯ, ಕರುಣೆಗಳನ್ನು ಉಕ್ಕಿಸಿ, ಅವುಗಳಿಂದ ಎದೆ ತೊಳೆದು ಭಾವನೆಯನ್ನು ಶುದ್ಧ ಮಾಡುತ್ತದೆ. ಅವಿವೇಕಿ ತಂದೆ, ಕೃತಘ್ನ ಮಕ್ಕಳು — ಈ ಸಂಘರ್ಷಣೆಯಿಂದ ಹುಟ್ಟುವ ದುರಂತತೆ ನಾಟಕದ ವಸ್ತು. ಅದರಲ್ಲಿ ಬೆಂದೂ ಭಸ್ಮವಾಗದೆ ತಲೆಯೆತ್ತಿ ನಿಲ್ಲುವ ಲಿಯರ್ ಮಾನವನ ಅಜೇಯ ಆತ್ಮಶಕ್ತಿಗೆ ಪ್ರತೀಕ. ನಾಟಕದಲ್ಲಿ ಐಕ್ಯತೆಯಿಲ್ಲ, ಉದ್ದೇಶ ಅಸ್ಪಷ್ಟ, ಅಚ್ಚು ರಂಗಕ್ಕೆ ಹೊಂದುಕೊಂಡುದಲ್ಲ— ಎಂಬೆಲ್ಲ ಟೀಕೆಗಳಿದ್ದರೂ ಈ ಅಪ್ರತಿಮ ಕಾವ್ಯನಾಟಕ ಜಾಗತಿಕ ಸಾಹಿತ್ಯದ ಒಂದು ಅದ್ಭುತ ಸಾಧನೆಯೆಂದು ಪ್ರಶಸ್ತಿ ಪಡೆದಿದೆ.

ಇಂಗ್ಲಂಡಿನ ದೊರೆ ಲಿಯರಿಗೆ ಮೂವರು ಹೆಣ್ಣುಮಕ್ಕಳು. ಹಿರಿಯವಳು ಗಾನೆರಿಲ್,

ಆಲ್ಬನಿಯ ಡ್ಯೂಕನ ಹೆಂಡತಿ; ನಡುವಿನವಳು ರೀಗನ್, ಕಾರ್ನವಾಲನ ಡ್ಯೂಕ್ ಅವಳ ಗಂಡ; ಕಿರಿಯವಳು ಕಾರ್ಡೀಲಿಯಾ, ಅವಳಿಗಿನ್ನೂ ಮದುವೆಯಿಲ್ಲ, ಬರ್ಗಂಡಿ, ಫ್ರಾನ್ಸ್‌ಗಳ ದೊರೆಗಳು ಅವಳ ಕೈಹಿಡಿಯಲು ಉತ್ಸುಕರಾಗಿ ಮುಂದೆ ಬಂದಿದ್ದಾರೆ.

ದೀರ್ಘಕಾಲದ ಆಳಿಕೆಯ ನಂತರ, ಲಿಯರ್ ದೊರೆ ರಾಜ್ಯವನ್ನು ಹೆಣ್ಣುಮಕ್ಕಳಿಗೆ ಹಂಚಿಕೊಟ್ಟು, ತಾನು ದೊರೆತನದಿಂದ ನಿವೃತ್ತನಾಗುವುದೆಂದು ನಿಶ್ಚಯಿಸುತ್ತಾನೆ. ಎಂಬತ್ತರ ಗಡಿದಾಟಿದ ಅವನು ವಯಸ್ಸಿನೆಂದೆಷ್ಟೋ ಸ್ವಭಾವದಿಂದಲೂ ಅಷ್ಟೇ ತಿಳಿಗೇಡಿ. ಒಳಿತು-ಕೆಡಕುಗಳನ್ನು ವಿಚಾರ ಮಾಡದೆ ದುಡುಕುವುದು ಅವನ ದೌರ್ಬಲ್ಯ. ಕೈಯಲ್ಲಿ ನಕ್ಷೆ ಹಿಡಿದು ಮಕ್ಕಳು ತನ್ನ ಬಗೆಗೆ ಎಷ್ಟರಮಟ್ಟಿನ ಪ್ರೀತಿಪ್ರದರ್ಶನ ಮಾಡುವರೊ ಅದಕ್ಕೆ ತಕ್ಕಂತೆ ಪಾಲು ಹಂಚಿಕೊಡುವುದಾಗಿ ಘೋಷಿಸುತ್ತಾನೆ. ಗಾನೆರಿಲ್ ರೀಗನ್ ಹೆಣ್ಣುನರಿಗಳು. ಇಡೀ ಸ್ತ್ರೀಜಾತಿಗೇ ಕಳಂಕ ತರುವಂತಹ ಗುಣಸ್ವಭಾವ ಅವರದು. ತಂದೆಯ ಮೇಲೆ ಪ್ರೀತಿಯಿಲ್ಲವಾದರೂ ಸ್ವಾರ್ಥಸಾಧನೆಗಾಗಿ ತಮ್ಮದು ಪ್ರೀತಿಯ ಪರಮಾವಧಿಯೆಂಬಂತೆ ನಟಿಸುತ್ತಾರೆ. ಹಿರಿಯ ಗಾನೆರಿಲ್ ತನ್ನ ಕಣ್ಣು, ಸ್ವಾತಂತ್ರ್ಯ, ಸ್ವಾಸ್ಥ್ಯ, ಅಷ್ಟೇಕೆ ಪ್ರಾಣಕ್ಕೂ ಮಿಗಿಲಾಗಿ ಪ್ರೀತಿಸಿದ್ದೇನೆನ್ನುತ್ತಾಳೆ. ರೀಗನ್ ಮಾತಿನಲ್ಲಿ ಅಕ್ಕನಿಗಿಂತ ಚತುರೆ. ಬದುಕಿನಲ್ಲಿ ಉಳಿದೆಲ್ಲದರ ಬಗೆಗೆ ಅಪ್ರಿಯತೆ ಬೆಳೆಯುವಷ್ಟು ತನ್ನ ಪ್ರೀತಿ ಹಿರಿದೆನ್ನುತ್ತಾಳೆ. ಈ ಕಪಟ ಪ್ರಶಂಸೆಯ ಮೇಲುಮುಸುಕನ್ನು ಸುಲಿದು ಒಳಗಿನ ಸತ್ಯ ಕಾಣುವ ಶಕ್ತಿಯಿಲ್ಲದ ಮೂರ್ಖ ಲಿಯರ್ ಅವರಿಬ್ಬರಿಗೂ ಅವರವರ ಪ್ರೀತಿಗೆ ತಕ್ಕಂತೆ ಪಾಲು ಕೊಡುತ್ತಾನೆ. ಇನ್ನು ಕಿರಿಯ ಕಾರ್ಡೀಲಿಯಾಳ ಸರದಿ. ಅವಳು ಮುಗ್ಧೆ, ಸತ್ಯವಂತೆ. ಆಸ್ತಿಯ ಆಸೆಗಾಗಿ ಎಂದೂ ಪ್ರೀತಿಯನ್ನು ಉತ್ಪ್ರೇಕ್ಷಿಸಿ, ಅದೇ ತನ್ನ ಸರ್ವಸ್ವವೆಂದು ಹೊಗಳಲಾರಳು. ಅವಳು ಹೆಚ್ಚು ಮಾತಿನವಳೂ ಅಲ್ಲ; ಬೆಣ್ಣೆಮಾತಂತೂ ಅವಳಿಂದ ದೂರ. 'ಅಕ್ಕಂದಿರದಕ್ಕಿಂತ ಹೆಚ್ಚಿನ ಪಾಲು ಪಡೆಯಲು ನೀನೇನು ಹೇಳುವೆ?' ಎಂದು ದೊರೆ ಕೇಳಿದಾಗ ಅವಳು 'ಒಬ್ಬ ಮಗಳು ಕರ್ತವ್ಯದಲ್ಲಿ ತಂದೆಯನ್ನು ಎಷ್ಟು ಪ್ರೀತಿಸಬಹುದೋ ಅಷ್ಟೇ ನನ್ನ ಪ್ರೀತಿ; ಹೆಚ್ಚೂ ಇಲ್ಲ, ಕಡಿಮೆಯೂ ಇಲ್ಲ' ಎನ್ನುತ್ತಾಳೆ.

ಲಿಯರಿಗೆ ತನ್ನ ಮಕ್ಕಳಲ್ಲೆಲ್ಲ ಕಿರಿಯ ಕಾರ್ಡೀಲಿಯಾಳೇ ಹೆಚ್ಚು ಪ್ರಿಯ. ತನ್ನ ವೃದ್ಧಾಪ್ಯವನ್ನು ಅವಳ ಸಂಗಶುಶ್ರೂಷೆಗಳಲ್ಲಿ ಕಳೆಯುವ ಪ್ರತೀಕ್ಷೆಯಲ್ಲಿದ್ದವನು ಅವನು. ಕಾರ್ಡೀಲಿಯಾಳ ಉತ್ತರದ ಹಿಂದಿರುವ ನಿಷ್ಠೆ ಸರಳತೆಗಳ ಆಳ ಅವನ ಮೂರ್ಖಬುದ್ಧಿಗೆ ಸಿಲಕದು. ಪ್ರೀತಿಯ ಬಹುಳತೆಯನ್ನೇ ಕೊರತೆಯೆಂದು ಬಗೆದು ರೇಗಿ ರೋಷಾವಿಷ್ಟನಾಗಿ, ಅವಳ ಪಾಲನ್ನೂ ಅಕ್ಕಂದಿರಿಗೆ ಹಂಚಿ, ಅವಳನ್ನು ನಿರ್ಗತಿಕಳನ್ನಾಗಿ ಮಾಡುತ್ತಾನೆ.

ಲಿಯರನ ಆಸ್ಥಾನಿಕರಲ್ಲೊಬ್ಬನಾದ ಕೆಂಟ್ ಬಲು ನಿಷ್ಠಾವಂತ, ಅಷ್ಟೇ ನಿಷ್ಠುರವಾದಿ. ದೊರೆಯ ಅವಿವೇಕವನ್ನು ಖಂಡಿಸಿ, ಕಾರ್ಡೀಲಿಯಾಳ ಪರವಾಗಿ ವಾದ ಹೂಡುತ್ತಾನೆ. ಲಿಯರನ ರೋಷ ಅವನ ಮೇಲೆಯೂ ತಿರುಗುತ್ತದೆ. ಲಿಯರ್ ಅವನಿಗೆ ಆರು ದಿನಗಳ ಗಡು ಕೊಟ್ಟು ಅಷ್ಟರಲ್ಲಿ ದೇಶಬಿಟ್ಟು ಹೋಗಬೇಕೆಂದು ವಿಧಿಸುತ್ತಾನೆ.

ಕಾರ್ಡೀಲಿಯಾ ಈಗ ನಿರ್ಗತಿಕಳೆಂದು ತಿಳಿದೊಡನೆಯೇ ಅವಳ ಕೈ ಹಿಡಿಯಲು ಉತ್ಸುಕರಾಗಿದ್ದವರಲ್ಲಿ ಒಬ್ಬನಾದ ಬರ್ಗಂಡಿಯ ದೊರೆ ಹಿಮ್ಮೆಟ್ಟುತ್ತಾನೆ. ಆದರೆ ಫ್ರಾನ್ಸಿನ ದೊರೆ ಅವಳ ಸದ್ಗುಣಗಳಿಗಾಗಿ ಮೋಹಿಸಿದವನು. ಅವಳ ದುಸ್ಥಿತಿಯನ್ನು ಲೆಕ್ಕಿಸದೆ

ಮದುವೆಯಾಗುತ್ತಾನೆ. ಪಾಪ, ಆ ಮದುಮಕ್ಕಳನ್ನು ಆಶೀರ್ವದಿಸಿ ಕಳಿಸಿಕೊಡುವಷ್ಟೂ ಸೌಜನ್ಯ ತೋರುವುದಿಲ್ಲ ಲಿಯರ್. ಇಷ್ಟಾದರೂ ಕಾರ್ಡೀಲಿಯಾಳ ಹೃದಯ ಅವನಿಗಾಗಿ ಮಿಡಿಯುವುದನ್ನು ಬಿಡದು; ಹೊರಡುವ ಮುನ್ನ, ತಂದೆಯನ್ನು ಚೆನ್ನಾಗಿ ನೋಡಿಕೊಳ್ಳಿ ರೆಂದು ಅಕ್ಕಂದಿರಿಗೆ ಗೋಗರೆದು ಅವರಿಂದ ಮುಖ ಮುರಿಸಿಕೊಳ್ಳುತ್ತಾಳೆ.

ಗಾನೆರಿಲ್, ರೀಗನ್ ಈಗ ಇಡೀ ಬ್ರಿಟನ್ನಿನ ದಣಿಗಳು. ತಂದೆಯ ಮಾನಸಿಕ ಸ್ಥಿತಿಯನ್ನು ಚೆನ್ನಾಗಿ ಬಲ್ಲ ಅವರು ಅವನ ಮನಸ್ಸು ಮತ್ತೆ ಬದಲಾದರೂ ತಮ್ಮ ಭಾಗ್ಯ ಬದಲಾಗದಿರುವಂತೆ ಪಟ್ಟಭದ್ರಮಾಡಿಕೊಳ್ಳಲು ಸಂಚು ಹೂಡುತ್ತಾರೆ.

ಇದೇ ಹೊತ್ತಿಗೆ ಬ್ರಿಟನ್ನಿನ ಇನ್ನೊಂದು ಕಡೆ ಇದೇ ಬಗೆಯ ಇನ್ನೊಂದು ಹುಚ್ಚು ತನ ನಡೆದು ದುರಂತದ ಸಸಿ ಮೊಳೆದಿದೆ. ಲಿಯರ್, ಕೆಂಟರಿಗೆ ಆಪ್ತನಾದ ಗ್ಲಾಸ್ಟರನ ಅರ್ಲ್‌ನಿಗೆ ಇಬ್ಬರು ಮಕ್ಕಳು: ಒಬ್ಬ ಎಡ್ಗರ್ — ತಂದೆಯ ಧರ್ಮಸಂತಾನ, ನಾಳೆ ಅರ್ಲ್ ಪಟ್ಟ ಪಡೆಯಲಿರುವ ನಿಜವಾದ ವಾರಸು. ಇನ್ನೊಬ್ಬ ಎಡ್ಮಂಡ್ — ಗ್ಲಾಸ್ಟರನಿಗೆ ಊಳಿಗದ ಹೆಣ್ಣಾಳಿನಲ್ಲಿ ಹುಟ್ಟಿದ ಜಾರಜ. ಎಡ್ಮಂಡ್ ಮಹಾ ಕೇಡಿ. ಹೊರಗೆ ಎಡ್ಗರನ ಬಗ್ಗೆ ಅತೀವ ಪ್ರೀತಿವಿಶ್ವಾಸಗಳಿರುವಂತೆ ನಟಿಸಿದರೂ ಒಳಗೆ ದ್ವೇಷ ಕಾರಿ ಅವನ ಪತನಕ್ಕೆ ಸಂಚು ಹೂಡುತ್ತಾನೆ. ಅವನನ್ನು ಮುಗಿಸಿದ್ದಾದರೆ ಅರ್ಲ್ ಪಟ್ಟ ತನ್ನ ಬುಟ್ಟಿಗೆ! ತಂದೆ ಮಕ್ಕಳಲ್ಲಿ ದ್ವೇಷ ಬಿತ್ತಿ, ಇತ್ತ ಗ್ಲಾಸ್ಟರ್ ಎಡ್ಗರನ ಹೆಸರೆತ್ತಿದರೆ ಉರಿದುಬೀಳುವಂತೆ, ಅತ್ತ ಎಡ್ಗರ್ ತಂದೆಗೆ ಹೆದರಿ ತಲೆಮರಸಿಕೊಂಡು ಓಡಿಹೋಗುವಂತೆ ಮಾಡುತ್ತಾನೆ.

ಈಗ ಲಿಯರ್ ಹೆಸರಿನಿಂದಷ್ಟೇ ದೊರೆ. ಅವನಿಗೆ ತನ್ನದಾಗಿ ಅಂಗೈ ಅಗಲ ಭೂಮಿ ಸಹ ಇಲ್ಲ. ತಾನುಳಿಸಿಕೊಂಡ ನೂರು ಮಂದಿ ಆಸ್ಥಾನಿಕರೊಡನೆ ಒಂದು ತಿಂಗಳು ಗಾನೆರಿಲ್‌ಳೊಡನೆ, ಇನ್ನೊಂದು ತಿಂಗಳು ರೀಗನ್‌ಳೊಡನೆ ಕಳೆಯುವುದು ಅವನ ಆಲೋ ಚನೆ. ಅದರಂತೆ ಗಾನೆರಿಲಳ ಮನೆಯಲ್ಲಿರುವಾಗ ಒಬ್ಬ ರೈತ ಲಿಯರನ ಆಶ್ರಯ ಬೇಡಿ ಅವನ ಜತೆಗಿರಲು ಅಪ್ಪಣೆ ಪಡೆಯುತ್ತಾನೆ. ಆ 'ರೈತ' ಹಿಂದೆ ಕಾರ್ಡೀಲಿಯಾಳ ಪರ ವಾದಿಸಿ ಗಡೀಪಾರಾಗಿದ್ದ ಕೆಂಟ್. ಲಿಯರನಿಗೆ ಕಾದಿರುವ ರುದ್ರ ದುರಂತವನ್ನು ಮುಂದಾಗಿ ಊಹಿಸಿ ದಣಿಯ ಬೆಂಗಾವಲಿಗಿರಲು ವೇಷ ಮರಸಿ ಬಂದಿದ್ದಾನೆ, ಆ ನೆಚ್ಚಿನ ಸೇವಕ!

ಗಾನೆರಿಲಳ ಮನೆ ಸೇರಿದ ಕೆಲವೇ ದಿನಗಳಲ್ಲಿ ಲಿಯರನ ಅವಿವೇಕದಿಂದ ಹುಟ್ಟಿದ ದುರಂತದ ಸುಳಿ ಅವನ ಕೊರಳನ್ನು ಸುತ್ತಿ ಬಿಗಿಯಲು ಶುರುಮಾಡುತ್ತದೆ. ಅವಳ ಆದೇಶ ದಂತೆ ಊಳಿಗದ ಜನ ಲಿಯರನನ್ನೂ ಅವನ ಆಸ್ಥಾನಿಕರನ್ನೂ ನಿಕೃಷ್ಟವಾಗಿ ಕಾಣಲು ಆರಂಭಿಸುತ್ತಾರೆ. ಕೊನೆಗೊಮ್ಮೆ ಗಾನೆರಿಲ್ ತಂದೆಯನ್ನು ಎದುರಿಸಿ, ಅವನ ಹಾಗೂ ಅವನ ಸಹಜನರ ವರ್ತನೆಗೆ ಅಸಹ್ಯ ಸೂಚಿಸಿ 'ನಿನಗೆ ನೂರು ಆಸ್ಥಾನಿಕರೇಕೆ? ಐವತ್ತಾ ದರೆ ಸಾಲದೆ?' ಎನ್ನುತ್ತಾಳೆ. ಹುಟ್ಟಿಸಿ, ಬೆಳಸಿ, ಅರ್ಧರಾಜ್ಯ ಕೊಟ್ಟ ತಂದೆಗೆ ಇದು ಮಗಳ ಕೃತಜ್ಞತೆ! ಲಿಯರ್ ಸಿಡಿದೆದ್ದು 'ನೀನು ಮಗಳಲ್ಲ. ಯಾವಳೋ ಹಾದರಕ್ಕೆ ಹುಟ್ಟಿದವಳು' ಎಂದು ಬಯ್ಯುತ್ತ ತನಗೆ ಇನ್ನೂ ಒಬ್ಬ ಮಗಳಿದ್ದಾಳೆಂದು ತಕ್ಷಣ ಕುದುರೆ ಯೇರಿ ರೀಗನಳಲ್ಲಿಗೆ ಹೊರಡುತ್ತಾನೆ. ಆ ಹೊತ್ತಿನಲ್ಲಿ ಅವನ ಮನಸ್ಸು ನೆನೆಯುವುದು ಕಾರ್ಡೀಲಿಯಾಳನ್ನು, ಅವಳ ನಿಶ್ಚಲಪ್ರೇಮವನ್ನು, ಅವಳಿಗೆ ತನ್ನಿಂದಾದ ಅನ್ಯಾಯವನ್ನು!

ತಂದೆ ಬರುವನೆಂದು ಮುಂದಾಗಿ ಸುದ್ದಿ ತಿಳಿದೂ ರೀಗನ್ ಗಂಡ ಕಾರ್ನವಾಲನೊಡನೆ

ಗ್ಲಾಸ್ಟರನನ್ನು ಕಾಣಲು ಅವನ ಊರಿಗೆ ಹೋಗಿದ್ದಾಳೆ. ಲಿಯರ್ ಅಲ್ಲಿಗೇ ಬರುತ್ತಾನೆ. ಅವನು ಬಂದಿರುವನೆಂದು ತಿಳಿದೂ ಮಗಳು ಅಳಿಯ ಅವನನ್ನು ಎದುರುಗೊಳ್ಳರು. ಪ್ರಯಾಣದ ಆಯಾಸ ಕಳೆಯುವವರೆಗೆ ತಾಳೆನ್ನುತ್ತಾರೆ. ಲಿಯರಸಿಗೆ ದುಃಖ, ಕೋಪ. ಕಷ್ಟದಿಂದ ಶಾಂತಿ ತಂದುಕೊಂಡು, ಬುದ್ಧಿಯನ್ನು ಸ್ಥಿಮಿತದಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಕೊನೆಗೆ ರೀಗನ್ ಬಂದುಕಾಣುವ ಕೃಪೆ ಮಾಡುತ್ತಾಳೆ. ಲಿಯರ್ ತನಗೆ ಗಾನೆರಿಲ್ ಉಣಬಡಸಿದ ಅವಮಾನ, ಕೃತಘ್ನತೆಗಳನ್ನು ಅವಳಿಗೆ ಬಣ್ಣಿಸುತ್ತಾನೆ. ಆದರೆ ಅವಳು ಅಕ್ಕನ ಪಕ್ಷವನ್ನೇ ಹಿಡಿದು ಮಾತನಾಡುತ್ತಾಳೆ. ತಂದೆಯೇ ತಪ್ಪು ಮಾಡಿದವನೆಂಬಂತೆ 'ಹೋಗಿ ಅಕ್ಕನ ಕ್ಷಮಾಪಣೆ ಕೇಳಿಕೊ' ಎಂದು ಬುದ್ಧಿವಾದ ಹೇಳುತ್ತಾಳೆ. ಆ ಸಮಯಕ್ಕೆ ಗಾನೆರಿಲಳೂ ಅಲ್ಲಿಗೇ ಬರುತ್ತಾಳೆ. ಅಕ್ಕತಂಗಿಯರು ಒಂದಾಗಿ ತಂದೆಗೆ ಇದ್ದಿದ್ದೂ ಅವಮಾನ ಮಾಡುತ್ತಾರೆ. 'ಅವಳಾದರೋ ಐವತ್ತು ಆಸ್ಥಾನಿಕರನ್ನು ಕೊಡಲೊಪ್ಪಿದಳು; ನಾನಾಗಿದ್ದರೆ ಇಪ್ಪತ್ತೈದನ್ನೇ' ಎನ್ನುತ್ತಾಳೆ ರೀಗನ್. ಕೊನೆಕೊನೆಗೆ ಆಸ್ಥಾನಿಕರು ಏಕೆ ಬೇಕು ಎನ್ನುವವರೆಗೂ ಮಾತು ಹೋಗುತ್ತದೆ. ಲಿಯರಿಗೆ ದುಃಖಾಘಾತಗಳನ್ನು ತಡೆಯಲಾಗುವುದಿಲ್ಲ. ಎದೆಯು ಕಟ್ಟೆ ಒಡೆದು ರೋಷ ಹುಚ್ಚುಹೊಳೆಯಾಗಿ ಹರಿಯುತ್ತದೆ. ಒತ್ತಿ ಬರುತ್ತಿರುವ ಕಣ್ಣೀರನ್ನು ಕಷ್ಟದಿಂದ ತಡೆಹಿಡಿಯುತ್ತಾನೆ. ಅವನಿಗೆ ಇನ್ನೊಂದು ನಿಮಿಷವೂ ಅಲ್ಲಿ ನಿಲ್ಲುವುದು ಸಾಧ್ಯವಿಲ್ಲ; ಆದರೆ ಹೋಗಲು ತನ್ನದಾದ ಒಂದು ಎಡೆಯಿಲ್ಲ! ಒಳಗೆ ನಡೆದಿರುವ ಈ ಅಮಾನುಷ, ಅಸ್ವಾಭಾವಿಕ ಘಟನೆಯ ಪ್ರತಿಬಿಂಬವೊ ಇಲ್ಲವೇ ಪ್ರತಿಭಟನೆಯೊ ಎಂಬಂತೆ ಹೊರಗೆ ಪ್ರಕೃತಿ ಅಸ್ತವ್ಯಸ್ತವಾಗಿದೆ: ನಡುರಾತ್ರಿ, ಗಾಢಾಂಧಕಾರ, ಭಯಂಕರ ಬಿರುಗಾಳಿ, ಗುಡುಗು, ಮಿಂಚು, ಮಳೆ, ರುದ್ರ ಪ್ರಳಯ! ಆದರೂ ಎಂಬತ್ತು ದಾಟಿದ ಆ ಹಣ್ಣುಹಣ್ಣು ಮುದುಕ ಹಿಂದೆಮುಂದೆ ನೋಡದೆ ಕುದುರೆ ಹತ್ತಿ ಹೊರಡುತ್ತಾನೆ. ಈ ದುರ್ಧರ ಸ್ಥಿತಿಯಲ್ಲಿಯೂ ನೆಚ್ಚಿನ ಸಂಗಾತಿಗಳಾದ ಕೆಂಟ್ ಮತ್ತು ಉದ್ದಕ್ಕೂ ತನ್ನ ಜಾಣ್ಣುಡಿಗಳಿಂದ ದೊರೆಯನ್ನು ತಣಿಸಿ ಕಣ್ಣು ತೆರಸುತ್ತ ಬಂದಿರುವ 'ಬೆಪ್ಪ'ರು ಅವನಿಗೆ ಜೊತೆಕೊಟ್ಟಿದ್ದಾರೆ. ಅವರೆಲ್ಲರೂ ಆ ಬಿರುಮಳೆಯಲ್ಲೇ ಒಂದು ಪಾಳ್ಬಯಲನ್ನು ತಲಪುತ್ತಾರೆ. ಅಲ್ಲಿ ಲಿಯರ್ ಚಂಡಮಾರುತವನ್ನು ಎದುರಿಸಿ ನಿಂತು ಮನುಷ್ಯ ಪ್ರಕೃತಿಗಳೆರಡರ ಮೇಲೆಯೂ ಶಾಪ ಕಾರುತ್ತಾನೆ. ಬುದ್ಧಿಯ ಕುದುರೆ ಪ್ರಜ್ಞೆಯ ಎಲ್ಲೆ ಹರಿದು ಉನ್ಮಾದಕ್ಕೆ ಓಡುತ್ತದೆ. ಆ ಪಾಳ್ಬಯಲಿನಲ್ಲಿ ಒಂದು ಸಣ್ಣ ಗುಡಿಸಲು. ಅದರ ಆಶ್ರಯ ಪಡೆಯಹೋದರೆ ಒಳಗೆ ಕಾಡುಮೃಗದಂತೆ ಕಾಣುವ ಒಬ್ಬ ಹುಚ್ಚನಿದ್ದಾನೆ. ಅವನ ಮಾತು ಲಿಯರಿಗೆ ತತ್ವಪ್ರಾಯವಾಗಿ ತೋರುತ್ತದೆ. 'ನೀನು ನನ್ನ ದಾರ್ಶನಿಕ'ನೆಂದು ಅವನಿಗೆ ಅಂಟಿಕೊಳ್ಳುತ್ತಾನೆ. ಆ ಹುಚ್ಚ, ಅಣ್ಣ ಎಡ್ಮಂಡನ ಕುತಂತ್ರಕ್ಕೆ ಬಲಿಯಾಗಿ ತಲೆ ಮರಸಿಕೊಂಡಿರುವ ಎಡ್ಗರ್!

ಅತ್ತ ಗ್ಲಾಸ್ಟರನ ಅರಮನೆಯಲ್ಲಿ ಮಿಂಚಿನ ವೇಗದಲ್ಲಿ ಘಟನೆಗಳು ನಡೆದಿವೆ. ಅಕ್ಕತಂಗಿಯರು ತಂದೆಯನ್ನು ಕೊಲ್ಲಿಸುವ ತಂತ್ರ ಹೂಡಿದ್ದಾರೆ. ಅವರ ಗಂಡಂದಿರ ನಡುವೆ ವಿರಸ ತಲೆಯಿಟ್ಟಿದೆ. ಮಾವ ಲಿಯರನಿಗಾದ ಅನ್ಯಾಯವನ್ನು ತಿಳಿದ ಫ್ರಾನ್ಸಿನ ದೊರೆ ಇಂಗ್ಲಂಡಿನ ಮೇಲೆ ದಂಡೆತ್ತಿ ಹೊರಟು ಡೋವರಿಗೆ ಬಂದು ಬೀಡುಬಿಟ್ಟಿದ್ದಾನೆ. ಈ ಎಲ್ಲ ರಹಸ್ಯಗಳನ್ನು ಅರಿತ ಸ್ವಾಮಿಭಕ್ತ ಗ್ಲಾಸ್ಟರ್ ಲಿಯರಿಗೆ ಸುಳುವು ಕೊಟ್ಟು ಅವನನ್ನು

ಡೋವರಿನಲ್ಲಿ ಕಾರ್ಡೀಲಿಯಾಳ ರಕ್ಷಣೆ ಪಡೆಯಲು ಒಪ್ಪಿಸುವ ಉದ್ದೇಶದಿಂದ ಗುಟ್ಟಾಗಿ ಪಾಳ್ಪಯಲಿಗೆ ಬರುತ್ತಾನೆ. ಹೊರಡುವ ಮುಂಚೆ ಮಗ ಎಡ್ಮಂಡನಿಗೆ ತನ್ನ ಇಂಗಿತವನ್ನು ತಿಳಿಸಿದ್ದಾನೆ. ಆದರೆ ಎಡ್ಮಂಡ್ ನೀಚ, ಕೃತ್ರಿಮಿ. ತಂದೆಯ ಗದ್ದುಗೆಯ ಮೇಲೆ ಕಣ್ಣಿಟ್ಟ ಅವನು ಅದರ ಹಕ್ಕುದಾರನಾದ ಎಡ್ಗರನನ್ನು ಎಂದೋ ಹೆದರಿಸಿ ಓಡಿಸಿದ್ದಾಗಿದೆ. ಈಗ ತಂದೆಯನ್ನೂ ತೊಡೆದುಹಾಕಿದರೆ ಗದ್ದುಗೆ ತನ್ನ ಪಾಲೇ ಎಂದು ಅವನ ದುರಾಲೋಚನೆ. ಕಾರ್ನವಾಲನೊಡನೆ ಕೈಗೂಡಿಸಿ ತಂದೆಯ ಗುಟ್ಟನ್ನು ಬಯಲುಮಾಡುತ್ತಾನೆ.

ಗ್ಲಾಸ್ಟರ್ ಲಿಯರನನ್ನು ಕಂಡು ಹಿಮ್ಮರಳುವ ಹೊತ್ತಿಗೆ ಘೋರ ದುರಂತ ಅವನಿಗೆ ಕಾಯುತ್ತಿದೆ. ಅವನ ಅತಿಥಿಗಳಾಗಿ ಬಂದ ರೀಗನ್ ಕಾರ್ನವಾಲರು ಅವನನ್ನು ಅವನ ಅರಮನೆಯಲ್ಲೇ ಬಂಧಿಸಿ ರಾಜದ್ರೋಹದ ಮೇಲೆ ವಿಚಾರಣೆ ನಡಸುತ್ತಾರೆ. ಗ್ಲಾಸ್ಟರ್ ಲಿಯರನ ಹಿತರಕ್ಷಕನಾದ ಫ್ರಾನ್ಸಿನ ದೊರೆಯ ಪರ ಎಂದು ತೋರಿಸಿಕೊಳ್ಳಲು ಹಿಂಜರಿಯುವುದಿಲ್ಲ. ಕಾರ್ನವಾಲ್ ದುಷ್ಟ, ಬರ್ಬರ ಪಶು. ಗ್ಲಾಸ್ಟರನ ಎರಡು ಕಣ್ಣುಗಳನ್ನೂ ಕಿತ್ತು, ನೆಲಕ್ಕೆಸೆದು ಕಾಲಿಂದ ಉಜ್ಜಿಹಾಕುತ್ತಾನೆ. ಈ ಘೋರ, ಅಮಾನುಷ ದೃಶ್ಯವನ್ನು ಸಹಿಸಲಾರದ ಕಾರ್ನವಾಲನ ಆಳೊಬ್ಬನು ದಣಿಯೆಂದು ಲೆಕ್ಕಿಸದೆ ಕತ್ತಿ ಹಿರಿದು ಅವನನ್ನು ಗಾಯಗೊಳಿಸುತ್ತಾನೆ. ಇದನ್ನು ನೋಡಿದ ರೀಗನ್ ಹಿಂದಿನಿಂದ ಬಂದು ಆ ಆಳನ್ನು ಕೊಲ್ಲುತ್ತಾಳೆ. ಕುರುಡ ಗ್ಲಾಸ್ಟರ್ ಕಣ್ಣಿನಿಂದ ರಕ್ತ ಸುರಿಸುತ್ತ ಎಡ್ಮಂಡನ ಸಹಾಯ ಬೇಡಿ ಕೂಗಿ ಕರೆದಾಗ ಅವನೇ ಈ ಎಲ್ಲ ದುರಂತದ ಹೇತುವೆಂದು ತಿಳಿಯುತ್ತದೆ. ಗ್ಲಾಸ್ಟರನ ಎದೆಯೊಡೆಯುತ್ತದೆ. ಆ ದುಃಖದಲ್ಲಿ ಎಡ್ಗರನ ನೆನಪಾಗುತ್ತದೆ; ಎಡ್ಮಂಡನ ಮಾತಿಗೆ ಕಿವಿಗೊಟ್ಟು ಅವನನ್ನು ದೂರಮಾಡಿದುದಕ್ಕೆ ವ್ಯಥೆಯಾಗುತ್ತದೆ. ಅರಮನೆಯಿಂದ ಹೊರ ಬಿದ್ದು ದಾರಿ ತಡವುತ್ತ ನಡೆದಾಗ ಅವನಿಗೆ ಎಡ್ಗರನೇ ಎದುರಾಗುತ್ತಾನೆ. ಎಡ್ಗರ್ ತಾನು ಮಗನೆಂದು ಬಿಟ್ಟುಕೊಡದೆ ಆ ಭಾಗ್ಯಹೀನನ ಕತ್ತಲೆಯಲ್ಲಿ ಬೆಳಕಾಗಿ ಜೊತೆ ನಿಲ್ಲುತ್ತಾನೆ.

ಆಳಿನ ಕತ್ತಿಪೆಟ್ಟಿಗೆ ಬಲಿಯಾದ ಕಾರ್ನವಾಲ್ ಪ್ರಾಣ ಬಿಡುತ್ತಾನೆ. ಎಡ್ಮಂಡನ ಕೃತ್ರಿಮತೆ ಅವನಿಗೆ ತಂದೆಯ ಅರ್ಲ್ ಪಟ್ಟ ದೊರಕಿಸಿ ಕೊಡುತ್ತದೆ. ಅವನದು ಹೆಣ್ಣಿನ ಹೃದಯವನ್ನು ಕೆಣಕಬಲ್ಲ ಲಂಪಟ ಕಳೆ. ರೀಗನ್ ಗಾನೆರಿಲರಿಬ್ಬರೂ ಅವನನ್ನು ಕದ್ದು ಮೋಹಿಸಿದ್ದಾರೆ. ಗಂಡ ಸತ್ತ ರೀಗನ್ ಈಗ ಸ್ವೇಚ್ಛಾನುವರ್ತಿ. ಎಡ್ಮಂಡನನ್ನು ಒಲಿಸಿ ಕೊಳ್ಳಲು ಅವನನ್ನು ತನ್ನ ಸೇನಾಪತಿಯನ್ನಾಗಿ ನೇಮಿಸುತ್ತಾಳೆ. ತನ್ನ ಕೈ ತಪ್ಪಿಸಿ ತಂಗಿ ಎಲ್ಲಿ ಎಡ್ಮಂಡನನ್ನು ಗಿಟ್ಟಿಸಿಕೊಳ್ಳುವಳೊ ಎಂದು ಗಾನೆರಿಲಳಿಗೆ ಕರುಬು! 'ನನ್ನ ಗಂಡನನ್ನು ಕೊಂದು ದಾರಿ ತೆರವು ಮಾಡುವುದಾದರೆ ನಾನೇ ನಿನ್ನನ್ನು ಮದುವೆಯಾಗುವೆ' ಎಂದು ಎಡ್ಮಂಡನಿಗೆ ಆಳಿನ ಮೂಲಕ ಚೀಟಿ ಕಳಿಸುತ್ತಾಳೆ. ಆ ಆಳಿನ ಕೈಯಲ್ಲೇ ಎಡ್ಮಂಡನಿಗೆ ಕೊಡಲೆಂದು ರೀಗನಳೂ ಒಂದು ಪ್ರೇಮಪತ್ರವಿಟ್ಟಿದ್ದಾಳೆ! ಆಳು ದಾರಿಯಲ್ಲಿ ಗ್ಲಾಸ್ಟರನಿಗೆ ಎದುರಾಗಿ ಅವನನ್ನು ಕೊಲ್ಲ ಹೋಗಿ, ಎಡ್ಗರನಿಂದ ಹತನಾಗುತ್ತಾನೆ. ಎಡ್ಗರ್ ಎರಡೂ ಪತ್ರಗಳನ್ನು ಓದಿ, ಗಾನೆರಿಲಳ ಗಂಡ ಆಲ್ಬನಿಗೆ ತಲಪಿಸುತ್ತಾನೆ.

ಮುಂದೆ ಗ್ಲಾಸ್ಟರನಿಗೆ ಆವರೆಗೆ ದಾರಿ-ಬೆಳಕಾಗಿ ತನಗೆ ಜೊತೆಕೊಟ್ಟವನು ತನ್ನಿಂದ ಅನ್ಯಾಯಕ್ಕೆ ಗುರಿಯಾಗಿದ್ದ ಹೊಟ್ಟೆಯ ಮಗನೇ ಎಂಬುದು ತಿಳಿದಾಗ ಆನಂದ, ಪಶ್ಚಾತ್ತಾಪಗಳ ಅತಿರೇಕ ತಡೆಯಲಾರದೆ ಅವನು ಎದೆಯೊಡೆದು ಸಾಯುತ್ತಾನೆ.

ಈ ನಡುವೆ ಕೆಂಟ್ ಲಿಯರನನ್ನು ಡೋವರಿಗೆ ಕರೆತಂದಿದ್ದಾನೆ. ಆದರೆ ಅವನ ಮಾನಸಿಕ ಸ್ಥಿತಿ ತಲೆಗೆ ಹುಲ್ಲುಸೊಪ್ಪು ಕಟ್ಟಿಕೊಂಡು ಕಾಡಿನಲ್ಲಿ ಕಿರಚುತ್ತ ಅಲೆದಾಡುವ ಮಟ್ಟಿಗೆ ಹದಗೆಟ್ಟಿದೆ. ಕಾರ್ಡೀಲಿಯಾ ಪ್ರೀತಿಯಿಂದ ತಂದೆಯ ಶುಶ್ರೂಷೆ ಮಾಡುತ್ತಾಳೆ. ಲಿಯರಿಗೆ ಹುಚ್ಚು ತಿಳಿದು, ಅರಿವು ಮರಳುತ್ತದೆ; ಮಗಳ ಪ್ರೀತಿಯ ಸಾನ್ನಿಧ್ಯದಲ್ಲಿ ಮನಸ್ಸು ಅಪೂರ್ವ ಶಾಂತಿ ಆನಂದಗಳನ್ನು ಅನುಭವಿಸುತ್ತದೆ. ಆದರೆ ಆ ದಿವ್ಯಸುಖ ಕ್ಷಣಕಾಲ ಮಾತ್ರ. ಯುದ್ಧದಲ್ಲಿ ಇಂಗ್ಲಂಡಿನ ಕೈಮೇಲಾಗಿ ಫ್ರಾನ್ಸಿಗೆ ಸೋಲಾಗುತ್ತದೆ. ಲಿಯರ್ ಕಾರ್ಡೀಲಿಯಾ ಎಡ್ಮಂಡನಿಗೆ ಕೈಸೆರೆ ಸಿಗುತ್ತಾರೆ. ಗಾನೆರಿಲಳ ಗಂಡ ಆಲ್ಬನಿ ಇಂಗ್ಲಂಡಿನ ದಂಡಾಧಿಪತಿ. ಅವನು ತನ್ನ ಬಳಗದ ಇತರರಂತೆ ದುಷ್ಟನಲ್ಲ. ಎಂದಿನಿಂದಲೂ ಅವನು ಹೆಂಡತಿ ನಾದಿನಿಯರ ಮುಂದೆ ಲಿಯರನ ಪರವಾಗಿ ವಾದಿಸುತ್ತ ಬಂದಿದ್ದವನು. ಈಗ ಅವನ ಮುಂದೆ ಲಿಯರ್, ಕಾರ್ಡೀಲಿಯಾರನ್ನು ವಿಚಾರಣೆಗೆ ತಂದರೆ ಅವರಿಗೆ ಮರುಕ ದೊರೆಯುವುದು ಖಂಡಿತವೆಂದು ಬಲ್ಲ ಎಡ್ಮಂಡ್ ಗಾನೆರಿಲಳ ಪ್ರೇರಣೆಯಿಂದ ಕಾರ್ಡೀ ಲಿಯಾಳನ್ನು ನೇಣುಹಾಕಿ ಕೊಂದು ಅವಳೇ ಆತ್ಮಹತ್ಯೆ ಮಾಡಿಕೊಂಡಂತೆ ಕಾಣಿಸ ಬೇಕೆಂದು ಆಜ್ಞೆ ಮಾಡುತ್ತಾನೆ. ಆದರೆ ಜೊತೆಗೇ ಅವನಿಗೆ ಅರಿವಿಲ್ಲದೆಯೇ ಅವನ ಕತೆಯೂ ಮುಗಿಯುತ್ತ ಬಂದಿದೆ. ಎಡ್ಗರನಿಂದ ದೊರೆತ ಗಾನೆರಿಲ್ ರೀಗನರ ಪ್ರೇಮಪತ್ರಗಳಿಂದ ಆಲ್ಬನಿಗೆ ಎಡ್ಮಂಡನ ಗುಟ್ಟು ಬಯಲಾಗಿದೆ. ಯುದ್ಧಾನಂತರ ವಿಜಯಪಕ್ಷದವರೆಲ್ಲರೂ ನೆರೆದಾಗ ದೊಡ್ಡ ಹಗರಣವೇ ಆಗುತ್ತದೆ. ಅಕ್ಕತಂಗಿಯರು ನಾಚಿಕೆ ಬಿಟ್ಟು ಎಡ್ಮಂಡ ನಿಗಾಗಿ ಕಚ್ಚಾಡುತ್ತಾರೆ. ರೀಗನ್ ಎಡ್ಮಂಡನನ್ನು ಮದುವೆಯಾಗುವುದಾಗಿ ಸಾರುತ್ತಾಳೆ. ಹೀಗಾಗಬಹುದೆಂದು ಶಂಕಿಸಿದ್ದ ಅಕ್ಕ ಗಾನೆರಿಲ್ ಅವಳಿಗೆ ವಿಷ ತಿನ್ನಿಸಿದ್ದಾಳೆ. ಆಲ್ಬನಿ ಎಡ್ಮಂಡನ ಮೇಲೆ ದ್ರೋಹದ ಆಪಾದನೆ ತರುತ್ತಾನೆ. ಮೊದಲೇ ಗೊತ್ತಾದಂತೆ ಅವನ ಪಾಪಗಳನ್ನು ರುಜುವಾತು ಮಾಡಲು ಎಡ್ಗರ್ ಹಾಜರಾಗುತ್ತಾನೆ. ಇಬ್ಬರಿಗೂ ಮಲ್ಲ ಯುದ್ಧವಾಗಿ ಎಡ್ಮಂಡ್ ಪೆಟ್ಟು ತಿಂದು ಸೋತು ಸಾಯುತ್ತಾನೆ. ಹತಾಶಳಾದ ಗಾನೆರಿಲ್ ಒಳಹೋಗಿ ಎದೆಯಿರಿದುಕೊಳ್ಳುತ್ತಾಳೆ. ರೀಗನ್ ವಿಷ ಹತ್ತಿ ಸಾಯುತ್ತಾಳೆ.

ಮುಂದಿನದು ಘೋರ ದೃಶ್ಯ. ಲಿಯರ್ ಎರಡು ಕೈಗಳಲ್ಲೂ ಕಾರ್ಡೀಲಿಯಾಳ ಮೃತಶರೀರವನ್ನು ಎತ್ತಿಕೊಂಡು ಆಲ್ಬನಿಯ ಮುಂದೆ ಕಾಣಿಸಿಕೊಳ್ಳುತ್ತಾನೆ. ಈಗ ಅವನ ದುಃಖದ ಪಾತ್ರೆ ಕಣ್ಣೀರಿನಿಂದ ತುಂಬಿ ತುಳುಕಿದೆ. ನೆಚ್ಚಿನ ಕಾರ್ಡೀಲಿಯಾ ಸತ್ತಿದ್ದಾಳೆ. ಎಷ್ಟೇ ಅಳಲಿ, ಎಷ್ಟೇ ಪ್ರೀತಿಸಲಿ ಅವಳು ಮತ್ತೆ ಬದುಕಿ ಬರುವಂತಿಲ್ಲ. ಲಿಯರ್ ದುಃಖ ತಡೆಯಲಾರದೆ ಕುಸಿದು ಬಿದ್ದು ಅವಳ ಹೆಣದ ಮೇಲೆ ಪ್ರಾಣ ಬಿಡುತ್ತಾನೆ.

ರಾಜ್ಯ ಆಲ್ಬನಿ ಮತ್ತು ಎಡ್ಗರರ ವಶಕ್ಕೆ ಬರುತ್ತದೆ.

## 21. ಮೆಕ್‌ಬೆತ್

**ರಚನೆ:** 1605-6 ? **ಮೊದಲ ಪ್ರಕಟನೆ:** 1623.

**ಆಕರ:** ಚಾರಿತ್ರಕ ನಾಟಕಗಳಿಗೆ ಆಕರವಿತ್ತ ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್'.

**ಕಥೆ:** ಕವಿಯ ನಾಲ್ಕು ಮಹಾ ರುದ್ರನಾಟಕಗಳಲ್ಲಿ ಒಂದಾದ ಈ ಕೃತಿ ಶ್ರೇಷ್ಠ ನಾಟಕ

ವೆಂಬಷ್ಟೇ ಉತ್ಕೃಷ್ಟ ಕಾವ್ಯವೆಂದು, ಮಾನವ ಸ್ವಭಾವದ ಸೂಕ್ಷ್ಮ ಅಧ್ಯಯನವೆಂದು ಹಿರಿದಾಗಿ ಮೆರೆದಿದೆ. ಜೊತೆಗೆ ಒತ್ತಾಗಿ ಹೆಣೆದ ಇದರ ಬಂಧ ಸುಸ್ಪಷ್ಟ, ಪಾತ್ರಕಲ್ಪನೆ ಮನೋವಿಶ್ಲೇಷಣಾತ್ಮಕ, ಒಟ್ಟಿನ ಪರಿಣಾಮ ನೇರ ಹಾಗೂ ಪ್ರಭಾವಕಾರಿ. ಮಹತ್ವಾಕಾಂಕ್ಷೆಯೊಂದು ದೌರ್ಬಲ್ಯ, ಅದನ್ನು ಸಾಧಿಸ ಹೊರಟವನಿಗೆ ವಿನಾಶ ಖಂಡಿತವೆಂದು ತೋರಿಸುವುದು ನಾಟಕದ ಉದ್ದೇಶ. ಅವರ ಸ್ವಭಾವವೇ ಬದುಕಿನ ದುರ್ವಿಧಿಯಾಗಿ, ಅದರ ಸುಳಿಯಲ್ಲಿ ಸಿಕ್ಕುಬಿದ್ದು ಸಂಕಲ್ಪ-ಅಂತರಾತ್ಮ, ಪಾಪ-ಪ್ರಾಯಶ್ಚಿತ್ತಗಳ ಹೆದ್ದೆರೆಗಳೊಡನೆ ಹೋರಾಡುತ್ತ ತೊಳಲುವ ಮೆಕ್‌ಬೆತ್ ದಂಪತಿಗಳ ಸೃಷ್ಟಿ ಕವಿಯ ಅದ್ಭುತ ಸಾಧನೆ. ನಾಟಕ ಗಾತ್ರದಲ್ಲಿ ತೀರಾ ಚಿಕ್ಕದು, ಬರೆದದ್ದು ಒಂದನೆ ಜೇಮ್ಸ್‌ನ ಗೌರವಾರ್ಥವಾಗಿ.

ಸ್ಕಾಟ್‌ಲಂಡಿನ ಗ್ಲೇಮಿಸ್ ಪ್ರಾಂತದ ಪಾಳೆಯಗಾರನಾದ ಮೆಕ್‌ಬೆತ್ ಒಬ್ಬ ವೀರ ಸೇನಾನಿ. ರಾಜ್ಯದ ದೊರೆ ಡಂಕನನ ಸಮೀಪಬಂಧು ಅವನು. ಒಮ್ಮೆ ದೇಶದ ಕೆಲವು ಪಾಳೆಯಗಾರರು ನೆರೆಯ ನಾರ್ವೆಯ ದೊರೆಯೊಡನೆ ಕೈಗೂಡಿಸಿ ಪ್ರಭುತ್ವದ ವಿರುದ್ಧ ದಂಗೆಯೆದ್ದಾಗ ಮೆಕ್‌ಬೆತ್ ಅವರ ಮೇಲೆ ಸೈನ್ಯ ಕೊಂಡುಹೋಗಿ ದಂಗೆಯ ಹುಟ್ಟಡಗಿಸಿ, ವಿಜಯ ಸಂಪಾದಿಸುತ್ತಾನೆ. ಈ ಸಾಹಸದಲ್ಲಿ ಸಹಸೇನಾನಿ ಬ್ಯಾಂಕೊ ಅವನಿಗೆ ಜೊತೆ.

ಒಮ್ಮೆಲೇ ಹೊಲಸು ಸೊಗಸುಗಳೆರಡೂ ಒಮ್ಮೈಯಾದಂತಿದ್ದ ವಿಕಟವಿಚಿತ್ರವಾದ ದಿನ ಅದು. ಬಿರುಗಾಳಿ ಬೀಸಿದೆ; ಸಿಡಿಲು ಸೀಳಿದೆ. ಮೆಕ್‌ಬೆತ್ ಮತ್ತು ಬ್ಯಾಂಕೊ ಕದನದಿಂದ ಹಿಂದಿರುಗುತ್ತಿರುವಾಗ ದಾರಿಯಲ್ಲಿ ಒಂದು ಪಾಳ್ಬಯಲು ಅಡ್ಡವಾಗುತ್ತದೆ. ಅಲ್ಲಿ ಅವರ ಬರವಿಗಾಗಿಯೇ ಹೊಂಚುಕಾಯುತ್ತಿದ್ದ ಮೂವರು ಮಾಟಗಾತಿಯರು ಥಟ್ಟನೆ ಎದುರಾಗುತ್ತಾರೆ. ಅವರದು ದಿಗಿಲು ಬಡಿಸುವ ಅಮಾನುಷ ರೂಪ — ಮೊಂಡುಗೈ, ಸುಕ್ಕು ಮೈ, ಹೆಣ್ಣಿನ ಮುಖ, ಗಂಡಿನ ಗಡ್ಡ, ವಿಕಾರವಾದ ವೇಷಭೂಷಣ! ಮೂವರೂ ಮೆಕ್‌ಬೆತ್‌ನಿಗೆ ವಂದಿಸುತ್ತಾರೆ. ಮೊದಲನೆಯವಳು ಅವನಿಗೆ ಸಂದಿರುವ ಗ್ಲೇಮಿಸ್‌ನ ಪಾಳೆಯಪಟ್ಟದ ಹೆಸರಿನಲ್ಲಿ ಜಯಕಾರ ಕೂಗುತ್ತಾಳೆ. ಎರಡನೆಯವಳು ಅವನದಲ್ಲದ ಕಾಡರ್ ಪಟ್ಟದ ಹೆಸರು ಹಿಡಿದು ಹರಸುತ್ತಾಳೆ. ಮೂರನೆಯವಳು ಸ್ಕಾಟ್‌ಲಂಡಿನ ಭಾವೀ ಪ್ರಭುವಿಗೆ ಜಯವಾಗಲೆನ್ನುತ್ತಾಳೆ. ಮೆಕ್‌ಬೆತ್ ಕೇಳಿ ಬೆಚ್ಚಿ, ಮೈಮರೆಯುತ್ತಾನೆ. ಬ್ಯಾಂಕೊ ತನಗೇನು ಪ್ರವಾದವೆಂದು ಕೇಳಿದಾಗ ಮಾಟಗಾತಿಯರು ಗೂಢ ಬೆರಸಿ ಮಾತನಾಡುತ್ತಾರೆ — 'ಮೆಕ್‌ಬೆತ್‌ನಿಗಿಂತ ಕೀಳು, ಆದರೂ ಮೇಲು!' 'ಅವನಷ್ಟು ಸುಖಿಯಲ್ಲ, ಆದರೂ ಹೆಚ್ಚು ಸುಖಿ!' 'ಸ್ವತಃ ದೊರೆಯಾಗದಿದ್ದರೂ ದೊರೆಗಳ ತಂದೆ!'

ಮೆಕ್‌ಬೆತ್‌ನಿಗೆ ಮಾಟಗಾತಿಯರನ್ನು ಇನ್ನಷ್ಟು ಕೆದಕಿ ಕೇಳುವ ಕುತೂಹಲ. ಆದರೆ ಆ ನೆಲದ ಗುಳ್ಳೆಗಳು ಕಾಣಿಸಿಕೊಂಡಷ್ಟೇ ಬೇಗ ಕಣ್ಮರೆಯಾಗುತ್ತಾರೆ. ಅವನು ಈ ವಿಚಿತ್ರ ಅನುಭವದಿಂದ ಚೇತರಿಸಿಕೊಳ್ಳುತ್ತಿರುವಂತೆಯೇ ಅರಮನೆಯ ಹರಿಕಾರರು ಎದುರಾಗಿ, ಕಾಡರನ ಪಾಳೆಯಗಾರ ದಂಗೆಯಲ್ಲಿ ಪಾಲ್ಗೊಂಡಿದ್ದ ಕಾರಣ ಡಂಕನ್ ದೊರೆ ಆವನಿಗೆ ಮರಣದಂಡನೆ ವಿಧಿಸಿ, ಮೆಕ್‌ಬೆತ್‌ನಿಗೆ ಆ ಪಟ್ಟ ಕೊಟ್ಟಿರುವ ಸುದ್ದಿ ತಿಳಿಸುತ್ತಾರೆ. ಮೆಕ್‌ಬೆತ್ ಅವಾಕ್ಕಾಗಿ ನಿಲ್ಲುತ್ತಾನೆ. ಮಾಟಗಾತಿಯರು ಹೇಳಿ ಹೋದ ಕಣಿಗಳಲ್ಲಿ ಒಂದು ತತ್‌ಕ್ಷಣ ನಿಜವಾಗಿದೆ! ಅಂದಮೇಲೆ ತಾನು ದೊರೆಯಾಗಲಿರುವೆನೆಂಬ ಇನ್ನೊಂದೂ ನಿಜವಾಗಬೇಕಲ್ಲವೆ? ಆದರೆ ಹೇಗೆ? ದೊರೆ ಬದುಕಿದ್ದಾನೆ, ಅವನ ನಂತರ

ಪಟ್ಟಕ್ಕೇರಲು ಇಬ್ಬರು ಮಕ್ಕಳು, ಮ್ಯಾಲ್ಕಂ ಮತ್ತು ಡಾನಲ್‌ಬೇನ್, ಕಾದುನಿಂತಿದ್ದಾರೆ. ಮೆಕ್‌ಬೆತ್ ಧೀರ, ಘನವಂತ, ರಾಜನಿಷ್ಠ. ಆದರೆ ಅವನದು ಒಂದೇ ದೌರ್ಬಲ್ಯ— ಸ್ವಭಾವದಿಂದ ಅವನು ಮಹತ್ವಾಕಾಂಕ್ಷಿ. ಮೊದಲ ಕಣಿಯ ಪೂರೈಕೆ ಅವನ ಆಳಕ್ಕಿಳಿದು ಆ ದೌರ್ಬಲ್ಯದ ಸುಪ್ತಭೂತವನ್ನು ಬಡಿದೆಬ್ಬಿಸುತ್ತದೆ. ಯಾವದೋ ದುರಾಲೋಚನೆಯೊಂದು ಮನಸ್ಸಿನಲ್ಲಿ ಸುಳಿದು ಭಯಭೀತನನ್ನಾಗಿಸುತ್ತದೆ. ಬ್ಯಾಂಕೊ ಮೆಕ್‌ಬೆತ್‌ನನ್ನು ಬಲ್ಲವ. ಅವನ ಮುಂದೆಯೂ ಮಾಟಗಾತಿಯರು ಕಾಂಚನಮೃಗವನ್ನು ಕುಣಿಸಿ ಹೋಗಿದ್ದಾರೆ. ಆದರೆ ಅದನ್ನು ಬೆನ್ನಟ್ಟುವಷ್ಟು ಮರುಳ ಅವನಲ್ಲ. ಆ ಕತ್ತಲ ದೂತರು ಕೊಟ್ಟಂತೆ ಮಾಡಿ ಮಾನವನನ್ನು ಪಾಪಕ್ಕೆಳೆಯುವರೆಂದು ಮೆಕ್‌ಬೆತ್‌ನನ್ನು ಎಚ್ಚರಿಸುತ್ತಾನೆ.

ಮೆಕ್‌ಬೆತ್, ಬ್ಯಾಂಕೊ ರಾಜಧಾನಿ ತಲಪುತ್ತಾರೆ, ದೊರೆ ಡಂಕನ್ ಮೆಕ್‌ಬೆತ್‌ನನ್ನು ವಿಶ್ವಾಸ ಕೃತಜ್ಞತೆಗಳಿಂದ ಬರಮಾಡಿಕೊಳ್ಳುತ್ತಾನೆ. ತನ್ನ ಭಾವನೆಯ ಪ್ರತೀಕವಾಗಿ ಮೆಕ್‌ಬೆತನ ಇನ್ವರ್ನೆಸ್ ದುರ್ಗಕ್ಕೆ ಭೇಟಿಕೊಟ್ಟು ಅವನ ಆತಿಥ್ಯ ಸ್ವೀಕರಿಸಲು ಮುಂದಾಗುತ್ತಾನೆ. ವಿಜಯಾನಂತರದ ಆ ಸಂಭ್ರಮದಲ್ಲಿಯೇ ದೊರೆ ತನ್ನ ನಂತರ ಪಟ್ಟಕ್ಕೆ ಹಿರಿಮಗ ಮ್ಯಾಲ್ಕಂನನ್ನು ಉತ್ತರಾಧಿಕಾರಿಯನ್ನಾಗಿ ನೇಮಿಸಿರುವುದಾಗಿ ಘೋಷಿಸುತ್ತಾನೆ. ಇದನ್ನು ಕೇಳಿ ಮೆಕ್‌ಬೆತನ ಎದೆಯಲ್ಲಿ ಮಹತ್ವಾಕಾಂಕ್ಷೆ ಹೆಡೆಯಾಡುತ್ತದೆ. ಮ್ಯಾಲ್ಕಂ ತನ್ನ ದಾರಿಯ ಹೊಸ ಅಡ್ಡಗಲ್ಲು, ಅದನ್ನು ಎಡವಬೇಕು ಇಲ್ಲವೇ ದಾಟಬೇಕು! ಸ್ವತಃ ಅವನೇ ಎದುರಿಸಲು ಹೇಸುವಂತಹ ಕರಾಳ ಯೋಚನೆಗಳು ಮೆಕ್‌ಬೆತ್‌ನನ್ನು ಬಾಧಿಸುತ್ತವೆ.

ಅತ್ತ ಇನ್ವರ್ನೆಸ್ ದುರ್ಗದಲ್ಲಿ ಮೆಕ್‌ಬೆತನ ಹೆಂಡತಿ ವಿಚಾರಮಗ್ನಳಾಗಿದ್ದಾಳೆ. ಗಂಡನ ಪತ್ರದಿಂದ ನಡೆದ ಘಟನೆಗಳ ಸುದ್ದಿ ತಿಳಿದಿದೆ. ಗಂಡ ಮಹತ್ವಾಕಾಂಕ್ಷಿಯಾದರೂ ಅವನ ಮನಸ್ಸಿನ ಮಾಟ ಕವಿಯದು, ಭಾವಜೀವಿಯದು. ಅವನ ಸ್ವಭಾವದಲ್ಲಿ ಕರುಣೆಯ ಹಾಲು ತುಂಬಿದೆ. ಬಯಸಿದುದನ್ನು ಸಾಧಿಸಲು ಅದು ಎಂದೂ ತಾನಾಗಿಯೇ ಅಡ್ಡದಾರಿ ತುಳಿಯದು; ಬಯಸುವುದನ್ನೂ ಬಿಡದು. ಪಾಪ ಫಲಿಸಲು ಅಂತರಾತ್ಮ ಅಡ್ಡಿ. ಇದನ್ನು ಚೆನ್ನಾಗಿ ಅರಿತ ಮೆಕ್‌ಬೆತನ ಹೆಂಡತಿ ದೈವವೇ ಅವನನ್ನು ದೊರೆ ಮಾಡಹೊರಟಿರುವ ಈ ಸಂದರ್ಭದಲ್ಲಿ ತನ್ನ ಪಾತ್ರವೇನೆಂಬುದನ್ನು ನಿರ್ಧರಿಸುತ್ತಾಳೆ: ಗಂಡ ಬಂದೊಡನೆಯೇ ಸತ್ವ ತುಂಬಿ, ಬಲವಂತದಿಂದ ಅವನನ್ನು ಕಾರ್ಯೋನ್ಮುಖನನ್ನಾಗಿ ಮಾಡುವುದೇ ಆ ನಿರ್ಧಾರ. ಇದೇ ಹೊತ್ತಿಗೆ ದೊರೆ ಡಂಕನನೇ ಆ ರಾತ್ರಿ ಅವರ ಅತಿಥಿಯಾಗಿ ದುರ್ಗಕ್ಕೆ ಬರಲಿರುವ ಸುದ್ದಿ ಬಂದು, ಅವಳ ನಿರ್ಧಾರಕ್ಕೆ ಉಕ್ಕಿನ ಗಡಸು ಕೊಡುತ್ತದೆ. ಅವರ ಇಚ್ಛೆಯನ್ನು ಈಡೇರಿಸಲು ದೈವವೇ ಹೊಂದಿಸಿಕೊಟ್ಟ ಸದವಕಾಶ ಅದು! ಮೆಕ್‌ಬೆತನ ಹೆಂಡತಿ ಈಗ ರಕ್ಕಸಿ. ದೊರೆಯನ್ನು ಕೊಂದು ಮುಗಿಸುವ ದೃಢನಿಶ್ಚಯಮಾಡುತ್ತಾಳೆ. ಭೂತ,ಕತ್ತಲುಗಳ ಆವಾಹನೆ ಮಾಡಿ ತನ್ನ ಕೃತ್ಯಕ್ಕೆ ಅನುವಾಗಿರೆಂದು ಬೇಡಿಕೊಳ್ಳುತ್ತಾಳೆ. ಹಿಂದೆಯೇ ಮೆಕ್‌ಬೆತ್ ಬರುತ್ತಾನೆ. ಗಂಡಹೆಂಡತಿ ಪರಸ್ಪರ ಕಂಡೊಡನೆಯೇ ಬೇರೆ ಮಾತೇ ಇಲ್ಲ. ಇಬ್ಬರ ಮನಸ್ಸಿನಲ್ಲೂ ಒಂದೇ ಯೋಚನೆ. ಹೆಂಡತಿ ಗಂಡನನ್ನು ಹುರಿದುಂಬಿಸಿ,'ಆ ಮಹಾಕಾರ್ಯ ನಿರ್ವಹಣೆಯು' ಚಿಂತೆ ತನಗಿರಲೆನ್ನುತ್ತಾಳೆ!

ಆ ರಾತ್ರಿ ಡಂಕನ್ ಪರಿವಾರಸಮೇತನಾಗಿ ಇನ್ವರ್ನೆಸ್ ದುರ್ಗಕ್ಕೆ ಬರುತ್ತಾನೆ. ಗಂಡಹೆಂಡತಿ ಸಂಭ್ರಮದ ಸ್ವಾಗತವಿತ್ತು ಉಪಚರಿಸುತ್ತಾರೆ. ಮೆಕ್‌ಬೆತನ ಮನಸ್ಸು

ಕೊಲೆಯ ಸಲಹೆಗೆ ಸುಲಭವಾಗಿ ಒಡಂಬಡದು. ಡಂಕನ್ ಗುಣಸಿಧಿ, ದಯಾಮಯಿ. ತಾನೆಂದರೆ ಅವನಿಗೆ ತುಂಬ ಪ್ರೀತ್ಯಾದರ, ಈಗಿನ್ನೂ ತನಗೆ ಗೌರವಪದ ಕರುಣಿಸಿ ಮನ್ನಣೆಯಿತ್ತಿದ್ದಾನೆ. ತಾನು ಅವನ ಬಂಧು, ಪ್ರಜೆ. ಮೇಲಾಗಿ ಈಗ ಅವನು ತನ್ನ ಅತಿಥಿಶ್ರೇಷ್ಠ. ಯಾರಾದರೂ ಅವನ ಕೊಲೆ ಮಾಡಬಂದರೆ ತಾನು ತಡೆಯಬೇಕು, ಅದು ಧರ್ಮ. ಬದಲು ತಾನೇ ಕೊಲೆಗೆ ಕತ್ತಿ ಹಿರಿಯುವುದೆ? ಮೆಕ್‌ಬೆತನ ಮನಸ್ಸು ತೊಯ್ದಾಡುತ್ತದೆ. ಹೆಂಡತಿ ಗಟ್ಟಿಗಿತ್ತಿ. ಆ ರಣವೀರನನ್ನು ಹೇಡಿಯೆಂದು ಕೆಣಕಿ, ತನ್ನ ಮೇಲಿನ ಅವನ ಪ್ರೀತಿ ಅವನ ಮನೋನಿರ್ಧಾರದಷ್ಟೇ ಅನಿಶ್ಚಿತವೆಂದು ಚುಚ್ಚಿ ಹಲವು ತಂತ್ರಗಳಿಂದ ಅವನನ್ನು ಕೊಲೆಗೆ ಒಪ್ಪಿಸುತ್ತಾಳೆ. ನಡುರಾತ್ರಿ ಎಲ್ಲರೂ ನಿದ್ದೆಹೋದ ಮೇಲೆ ಗಂಡಹೆಂಡತಿ ಪಾಪ ಕೃತ್ಯಕ್ಕೆ ಸಿದ್ಧರಾಗುತ್ತಾರೆ. ಹೆಂಡತಿ ಎಲ್ಲವನ್ನೂ ಸಜ್ಜುಗೊಳಿಸಿದ್ದಾಳೆ. ಕಾವಲಾಳುಗಳಿಗೆ ಮದ್ದಿಕ್ಕಿ ಪ್ರಜ್ಞೆ ತಪ್ಪಿಸಿದ್ದಾಗಿದೆ. ಅವರ ಕಠಾರಿಗಳು ಮೆಕ್‌ಬೆತ್‌ನಿಗಾಗಿ ಕಾಯುತ್ತಿವೆ. ಕೊನೆಗಳಿಗೆಯಲ್ಲಿ ಗಂಡ ಅಧೈರ್ಯಪಟ್ಟರೆ ಏನು ಗತಿಯೆಂದು ಒಮ್ಮೆ ತಾನೇ ಕೊಲ್ಲುವ ನಿಶ್ಚಯಮಾಡಿ, ಡಂಕನನ ಕೋಣೆಗೆ ಹೋಗಿ, ಮಲಗಿ ನಿದ್ರಿಸಿದ ಅವನ ಮುಖದಲ್ಲಿ ತನ್ನ ತಂದೆಯ ಚಹರೆಯನ್ನೇ ಕಂಡಂತಾಗಿ ಬೆಚ್ಚಿ ಹಿಂದಿರುಗಿದ್ದಾಳೆ. ಕೊಲೆಗೆ ಮುನ್ನ ಸಹ ಮೆಕ್‌ಬೆತನಿಗೆ ಅಳುಕು. ಕಣ್ಣಮುಂದೆ ಕಠಾರಿಯೊಂದು ಕಾಣಿಸಿಕೊಂಡು, ತನ್ನೆಡೆಗೇ ಹಿಡಿ ಮಾಡಿ ಬಂದಂತೆ ಭಾಸವಾಗುತ್ತದೆ. ಕೊನೆಗೂ ಧೈರ್ಯಮಾಡಿ ಕೊಂದುಬರುತ್ತಾನೆ. ಕೊಲ್ಲುವಾಗ ಇಲ್ಲದ ಸಪ್ಪಳಗಳನ್ನು ಕಲ್ಪಿಸಿ ಕಿರಿಚಿದ್ದಾನೆ. ಆ ಗೊಂದಲದಲ್ಲಿ ರಕ್ತ ಮೆತ್ತಿದ ಕಠಾರಿಗಳನ್ನೂ ಜೊತೆಗೇ ತಂದಿದ್ದಾನೆ. ಮತ್ತೆ ಹೋಗಿ ಅವನ್ನು ಇಟ್ಟು ಬರುವ ಧೈರ್ಯವಿಲ್ಲ. ಹೆಂಡತಿ ಅದನ್ನು ಮಾಡಬೇಕಾಗುತ್ತದೆ. ಆ ನಂತರ ಇಬ್ಬರೂ ಕೊಲೆಯ ಕೈ ತೊಳೆಯಲು ಹೋಗುತ್ತಾರೆ. ಅದಕ್ಕೆ ಸ್ವಲ್ಪ ನೀರಾದರೆ ಸಾಕೆಂದು ಅವರ ಭ್ರಮೆ!

ಮುಂಜಾನೆ, ಕೊಲೆಯಾದ ಕೊಂಚ ಹೊತ್ತಿನಲ್ಲಿಯೇ, ಆಸ್ಥಾನಿಕರಲ್ಲೊಬ್ಬನಾದ ಮೆಕ್‌ಡಫ್ ದೊರೆಯನ್ನು ಕಾಣಲು ಬರುತ್ತಾನೆ. ಅವನು ದೊರೆಯ ಕೋಣೆಗೆ ಕಾಲಿಟ್ಟಾಗ ಸುದ್ದಿ ಬಯಲಾಗುತ್ತದೆ. ಈಗ ಮೆಕ್‌ಬೆತ್ ಮಾರ್ಪಟ್ಟ ಮನುಷ್ಯ! ಎಷ್ಟೇ ದೂರವಿರಲಿ, ದುರ್ಗಮವಿರಲಿ, ದಾರಿ ಪೂರಾ ನಡದೇ ತೀರಬೇಕು: ತನ್ನ ಪಾಪದಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಬೇಕು. 'ಸುದ್ದಿ ತಿಳಿದಾಗ' ತೀವ್ರ ದುಃಖಕೋಪಗಳನ್ನು ನಟಿಸುತ್ತ, ಹೋಗಿ ಕಾವಲಾಳುಗಳನ್ನು ಕೊಂದು ಕೊಲೆಯ ತಪ್ಪನ್ನು ಅವರ ಮೇಲೆಯೇ ಹೊರಿಸುತ್ತಾನೆ. ತಮಗೂ ತಂದೆಯ ದುರ್ಗತಿಯೊದಗಬಹುದೆಂದು ಹೆದರಿದ ಮ್ಯಾಲ್ಕಂ, ಡಾನಲ್‌ಬೇನರು ಹೇಳದೆ ಕೇಳದೆ ಸ್ಕಾಟ್‌ಲಂಡ್ ಬಿಟ್ಟು ಓಡಿಹೋಗುತ್ತಾರೆ. ಈ ಪಲಾಯನದಿಂದ ಅವರೇ ಕೊಲೆಗೆ ಕಾರಣರಿರಬಹುದೆಂಬ ಅನುಮಾನವೂ ಬರುತ್ತದೆ. ಸಿಂಹಾಸನದ ಮುಂದಿನ ಹಕ್ಕುದಾರ ಮೆಕ್‌ಬೆತನೇ. ದಾರಿ ತೆರವಾಗಿದೆ. ಮೆಕ್‌ಬೆತ್ ದೊರೆಯಾಗುತ್ತಾನೆ! ಮಾಟಗಾತಿಯರ ಇನ್ನೊಂದು ಕಣಿಯೂ ನಿಜವಾದಂತಾಗುತ್ತದೆ.

ಬಯಸಿದಂತೆ ಮೆಕ್‌ಬೆತ್ ದೊರೆಯಾದ; ಆದರೂ ನೆಮ್ಮದಿ ಮಾತ್ರ ದೊರೆಯಲಿಲ್ಲ. ಈಗ ಅವನ ಮನಸ್ಸೊಂದು ಚೇಳಿನ ಗೂಡು; ನೂರು ಯಾತನೆಗಳು ಅಲ್ಲಿ ಕೂಡಿ ಕುಟುಕುತ್ತಿವೆ. ಅಪರಾಧದ ಅರಿವು ಕಾಡಿದೆ. ಏನೋ ಶಂಕೆ, ಯಾವದೋ ಭಯ ಅವನ ನಿದ್ರೆಯನ್ನು ಹಾಳುಗೆಡಿಸಿದೆ. ಶಾಂತಿ ದೊರೆಯುವುದೆಂದು ದೊರೆಯನ್ನು ಕೊಂದರೆ, ಅದು

ದೊರೆತದ್ದು ತನಗಲ್ಲ, ಸತ್ತವನಿಗೆ! ಆ ಕೊಲೆ ಹಾವನ್ನು ಕೊಲ್ಲಹೊರಟು ಗಾಯಗೊಳಿಸಿ ಬಿಟ್ಟಂತಾಗಿದೆ. ಅದು ಯಾವಾಗ ಅರಸಿ ಬಂದು ಸೇಡು ತೀರಿಸಿಕೊಳ್ಳುವುದೊ ಎಂಬ ಭೀತಿ ತಲೆ ತಿನ್ನುತ್ತಿದೆ. ಈಗ ಮೆಕ್‌ಬೆತನ ಕಣ್ಣು ಬ್ಯಾಂಕೊ ಮತ್ತು ಅವನ ಮಗ ಫ್ಲಿಯನ್ಸರ ಮೇಲೆ. ಮುಂದೆ ದೊರೆತನ ಮಾಡುವವರು ಬ್ಯಾಂಕೊನ ಸಂತತಿಯಿಂದಲ್ಲವೆ ಕಣಿ ನುಡಿದಿದ್ದುದು! ಅಂದಮೇಲೆ ತಾನು ಸಾಹಸಪಟ್ಟು ದೊರೆಯ ಕೊಲೆಮಾಡಿ ಕಿರೀಟ ಪಡೆದದ್ದು ಅವನ ಸಂತತಿಯ ತಲೆಗೆ ತೊಡಿಸಲೆಂದೆ? ಮೆಕ್‌ಬೆತ್ ಹೆಂಡತಿಗೂ ಸುಳಿವು ಕೊಡದೆ ಬ್ಯಾಂಕೊ ಮತ್ತು ಫ್ಲಿಯನ್ಸರನ್ನೂ ತನ್ನ ದಾರಿಯಿಂದ ತೊಡೆದು ಹಾಕುವ ತಂತ್ರ ಹೂಡುತ್ತಾನೆ. ಆ ರಾತ್ರಿ ಭೋಜನಕೂಟವೇರ್ಪಡಿಸಿ, ಅವರಿಬ್ಬರನ್ನೂ ಆಮಂತ್ರಿಸಿ, ಬರುವ ದಾರಿಯಲ್ಲಿ ಅವರ ತಲೆ ಕಡಿಯಲು ಕೊಲೆಗಡಿಕರನ್ನು ಗೊತ್ತುಮಾಡುತ್ತಾನೆ. ಭೋಜನಕ್ಕೆ ನೆರೆದ ವೇಳೆ ಕೊಲೆಗಾರರು ಸುದ್ದಿ ತರುತ್ತಾರೆ— ಬ್ಯಾಂಕೊನ ಕೊಲೆಯಾಯಿತು. ಆದರೆ ಅವನ ಮಗ ಫ್ಲಿಯನ್ಸ್? ಕೈತಪ್ಪಿಸಿ ಓಡಿದ್ದಾನೆ! ಹುಚ್ಚ ಮಾನವ ದೈವಕ್ಕೇ ಮೋಸ ಬಗೆದು ಗೆಲ್ಲುವೆನೆಂದರೆ ಆದೀತೆ? ಭೋಜನ ಪ್ರಾರಂಭವಾಗುತ್ತದೆ. ಮೆಕ್‌ಬೆತನ ಅಂತರಾತ್ಮ ಪಾಪದ ಹೊರೆಯಿಂದ ಇದ್ದಿದ್ದೂ ಭಾರವಾಗಿದೆ. ಸಿಂಹಾಸನದ ಮೇಲೆ ಕೂಡಹೋದರೆ ಅಲ್ಲಿ ಬ್ಯಾಂಕೊನ ಪ್ರೇತ ಬಂದು ಕುಳಿತು ನೆತ್ತರ ಕುರುಳುಗಳನ್ನು ಕೊಡವುತ್ತ ದಿಟ್ಟಿಸಿ ನೋಡಿದಂತೆ ಭಾಸವಾಗುತ್ತದೆ! ಒಂದು ಸಲವಲ್ಲ, ಮತ್ತೆ ಮತ್ತೆ. ಮೆಕ್‌ಬೆತ್ ಹುಚ್ಚನಂತೆ ಒದರುತ್ತಾನೆ. ಆಸ್ಥಾನಿಕರು ದಿಗ್ಭ್ರಾಂತರಾಗುತ್ತಾರೆ. ಮೆಕ್‌ಬೆತನ ಹೆಂಡತಿಯಲ್ಲಿ ಇನ್ನೂ ಸ್ವಲ್ಪ ಸ್ಥೈರ್ಯ ಉಳಿದಿದೆ. ಈ ಬಗೆಯ ಭ್ರಮೆ ಗಂಡಸಿಗೆ ಚಿಕ್ಕಂದಿನಿಂದ ಇರುವ ರೋಗವೆಂದು ಚತುರತೆಯಿಂದ ಸತ್ಯವನ್ನು ಮರೆಮಾಚಲು ಪ್ರಯತ್ನಿಸುತ್ತಾಳೆ. ಆದರೆ ಪರಿಸ್ಥಿತಿ ಕೈಮೀರಿದಾಗ ಭೋಜನಕೂಟವನ್ನು ಅರ್ಧಕ್ಕೇ ನಿಲ್ಲಿಸಿ, ಅತಿಥಿಗಳನ್ನು ಕಳಿಸಿಬಿಡುತ್ತಾಳೆ. ಮೆಕ್‌ಬೆತ್ ರಕ್ತ ರಕ್ತದ ಪ್ರತೀಕಾರಕ್ಕೆ ಹಾತೊರೆದಿದೆಯೆಂದು ಗೊಣಗುತ್ತಾನೆ!

ಮೆಕ್‌ಬೆತ್ ಪಾಪದ ಕಾಲುವೆಯಲ್ಲಿ ರಕ್ತದ ಕೆಸರು ತುಳಿದು ಬಹುದೂರ ನಡೆದು ಬಂದಿದ್ದಾನೆ. ಈಗ ಅಲ್ಲಿಂದ ಕಾಲ್ತೆಗೆದು ವಾಪಸಾಗುವುದು ಮುನ್ನಡೆದು ಆಚೆಯ ದಡ ತಲಪುವಷ್ಟೇ ಪ್ರಯಾಸದ ಕೆಲಸ. ಆದದ್ದಾಗಲಿ, ಕೊನೆಮುಟ್ಟ ನೋಡಿಯೇ ಬಿಡೋಣವೆಂಬ ಅನಿರ್ವಾಹತೆ ಅವನನ್ನು ಕಣ್ಣು ಕಟ್ಟಿ ಎಳೆಯುತ್ತಿದೆ. ಮಾಟಗಾತಿಯರನ್ನು ಕಂಡು ತನಗೆ ಏನು ಭವಿಷ್ಯ ಕಾದಿದೆಯೆಂದು ಕೇಳಿ ಬರಲು ಪಾಳ್ಪಯಲಿಗೆ ಬರುತ್ತಾನೆ. ಅವರೋ ಕಡಾಯಿಯಲ್ಲಿ ಭಯಂಕರ ಮಂತ್ರಪಾಕವನ್ನು ಕುದಿಸಿ ಅವನ ಬರವಿಗಾಗಿಯೇ ಎದುರುನೋಡುತ್ತ ಕಾಯುತ್ತಿದ್ದಾರೆ. ಅವರ ಅಪ್ಪಣೆಯಂತೆ ಕಡಾಯಿಯಿಂದ ಒಂದರ ಹಿಂದೊಂದರಂತೆ ನೆರಳುಗಳೆದ್ದು ಅವನು ಬಾಯಿಬಿಟ್ಟು ಕೇಳುವ ಅಗತ್ಯವೂ ಇಲ್ಲದೆಯೇ ಅವನೊಳಗಿನ ಪ್ರಶ್ನೆಗಳನ್ನರಿತು ಉತ್ತರಿಸುತ್ತವೆ. ಒಂದು — 'ಮೆಕ್‌ಬೆತ್, ಮೆಕ್‌ಡಫನ ಬಗ್ಗೆ ಎಚ್ಚರಿಕೆಯಿಂದಿರು!' ಇನ್ನೊಂದು — 'ಹೆಣ್ಣಿನ ಹೊಟ್ಟೆಯಿಂದ ಹುಟ್ಟಿ ಬಂದ ಯಾವನೂ ನಿನಗೆ ಘಾಸಿಮಾಡಲಾರ!' ಮತ್ತೊಂದು — 'ಬರ್ನಮನ ಹೆಗ್ಗಾಡೇ ಡನ್ಸಿನೇನ್ ದುರ್ಗದತ್ತ ನಡೆದುಬರುವವರೆಗೆ ನೀನು ಅಜೇಯ!' ಇನ್ನೂ ಒಂದು ಗುಪ್ತಪ್ರಶ್ನೆ ಮೆಕ್‌ಬೆತನ ಮನಸ್ಸನ್ನು ಕೊರೆಯುತ್ತಿದೆ. ಮುಂದೆ ಬ್ಯಾಂಕೊನ ಸಂತತಿಯ ಆಳಿಕೆಗೆ

ಸಂಬಂಧಿಸಿದುದು ಅದು. ಬೇಡವೆಂದರೂ ಬಿಡದೆ ಹಟಮಾಡಿ ಕೇಳುತ್ತಾನೆ. ದೃಶ್ಯ ರೂಪದಲ್ಲಿ ಉತ್ತರ ಸಿಗುತ್ತದೆ. ಸಾಲಾಗಿ ಎಂಟು ಜನ ರಾಜರ ತಲೆಗಳು ಕಾಣಿಸಿಕೊಂಡು ಮರೆಯಾಗುತ್ತವೆ. ಕೊನೆಯದರ ಕೈಯಲ್ಲಿ ಒಂದು ಕನ್ನಡಿ, ಅದರಲ್ಲಿ ಅದೆಷ್ಟೋ ಅಂಥದೇ ತಲೆಗಳ ಪ್ರತಿಬಿಂಬಗಳು. ಅವೆಲ್ಲದರ ಮುಖಗಳಲ್ಲೂ ಬ್ಯಾಂಕೊನ ಹೋಲಿಕೆಯೇ! ಕೊಟ್ಟಕೊನೆಗೆ ಬ್ಯಾಂಕೊನ ಪ್ರೇತ ಬಂದು ನಗುತ್ತ ತನ್ನ ಸಂತತಿಯ ಕಡೆ ಬೊಟ್ಟು ಮಾಡಿ ತೋರಿಸುತ್ತದೆ! ಉತ್ತರಗಳು ಒಂದೊಂದೂ ಸ್ಪಷ್ಟ, ಆದರೆ ಒಂದಕ್ಕೊಂದು ಜೋಡಿಸಿ ನೋಡಿದಾಗ ಗುಂಬ, ದ್ವಂದ್ವ! ಮೆಕ್‌ಬೆತನಿಗೆ ಮಾಟಗಾತಿಯರ ಬಗ್ಗೆಯೇ ಅವರು ನಂಬಿಸಿ ಅಡ್ಡದಾರಿಗೆಳೆಯುವವರೆಂದು ದ್ವೇಷ ಹುಟ್ಟುತ್ತದೆ. ಕಣಿ ನುಡಿದಂತೆ ತಾನು ಅಜೇಯನೇ ಆಗಿದ್ದಲ್ಲಿ ಮೆಕ್‌ಡಫನ ಬಗ್ಗೆ ಎಚ್ಚರಿಕೆಯಿಂದಿರುವ ಅಗತ್ಯವೆಲ್ಲಿದೆ? ಆದರೂ ಮೆಕ್‌ಬೆತ್ ಭಯಶಂಕೆಗಳಿಗೆ ತಿಲಮಾತ್ರವೂ ಆಸ್ಪದ ಕೊಡಲು ಸಿದ್ಧನಿಲ್ಲ. ಮೆಕ್‌ಡಫ್‌ನನ್ನು ಕೊಲ್ಲಿಸುವುದೆಂದು ಯೋಚಿಸುತ್ತ ಬರುತ್ತಿರುವಂತೆಯೇ ಅವನು ಹೆಂಡತಿಮಕ್ಕಳನ್ನು ತೊರೆದು ಒಬ್ಬನೇ ಇಂಗ್ಲಂಡಿಗೆ ಪಲಾಯನ ಮಾಡಿದನೆಂಬ ವಾರ್ತೆ ಬರುತ್ತದೆ! ಇದರಿಂದ ಮೆಕ್‌ಬೆತನ ವಿಕೃತ ವ್ಯಕ್ತಿತ್ವ ಇದ್ದಿದ್ದೂ ವಕ್ರವಾಗುತ್ತದೆ. ಇನ್ನು ಮುಂದೆ ಪೂರ್ವಾಪರ ವಿಚಾರಕ್ಕೆ ತಲೆ ಹಾಕದೆ ಯೋಚನೆ ಬಂದೊಡನೆಯೇ ಅದನ್ನು ಕಾರ್ಯಗತ ಮಾಡುವುದೆಂದು ನಿಶ್ಚಯಿಸುತ್ತಾನೆ. ಹಿಂದೆ ಪಾಪಭೀರುವಾಗಿದ್ದವನು ಈಗ ನಿಷ್ಕರುಣಿ, ಕ್ರೂರಿ, ಹಿಂಸ್ರ ಪಶು. ಇದಕ್ಕೆ ಮೊದಲ ಆಹುತಿ ಮೆಕ್‌ಡಫನ ಹೆಂಡತಿ ಮತ್ತು ಹಸುಳೆಮಕ್ಕಳು; ಮೆಕ್‌ಬೆತ್ ಕೊಲೆಗಡಿಕರನ್ನು ಬಿಟ್ಟು ಆ ನಿರ್ದೋಷಿಗಳ ತಲೆಕಡಿಸುತ್ತಾನೆ. ಅವನ ಹತ್ಯಾಕಾಂಡಕ್ಕೆ ಸಿಕ್ಕು ಸ್ಕಾಟ್‌ಲಂಡ್ ಸ್ಮಶಾನಸದೃಶವಾಗುತ್ತದೆ!

ಡಂಕನನ ಕೊಲೆಯ ನಂತರ ಸ್ಕಾಟ್‌ಲಂಡಿನಿಂದ ಪಲಾಯನ ಮಾಡಿದ ಅವನ ಮಗ ಮ್ಯಾಲ್ಕಂ ಇಂಗ್ಲಂಡಿನಲ್ಲಿ ಬೀಡುಬಿಟ್ಟು ಅಲ್ಲಿನ ದೊರೆಯ ಆಶ್ರಯ ಪಡೆದಿದ್ದಾನೆ. ಅವನ ನೆರವಿನಿಂದ ಸೈನ್ಯಕಟ್ಟಿ ತಂದು, ಮೆಕ್‌ಬೆತನನ್ನು ಸೋಲಿಸಿ ಆ ಹಿಂಸಕನ ಕ್ರೂರ ಮುಷ್ಟಿಯಿಂದ ತಾಯ್ನಾಡನ್ನು ಬಿಡುಗಡೆ ಮಾಡುವುದು ಅವನ ಹವಣಿಕೆ. ಊರು ಬಿಟ್ಟೋಡಿದ ಮೆಕ್‌ಡಫ್ ಸಹ ಇಂಗ್ಲಂಡಿಗೇ ಬಂದು ಮ್ಯಾಲ್ಕಂನಿಗೆ ಜತೆಯಾಗುತ್ತಾನೆ. ಅವರು ಯುದ್ಧಸನ್ನದ್ಧರಾಗುತ್ತಿರುವಂತೆಯೇ ಮೆಕ್‌ಬೆತ್ ತನ್ನ ಹೆಂಡತಿಮಕ್ಕಳ ಕಗ್ಗೊಲೆ ಮಾಡಿಸಿದನೆಂಬ ಸುದ್ದಿ ಬಂದು ಮೆಕ್‌ಡಫನ ಸಂಕಲ್ಪಕ್ಕೆ ಛಲ ಕೊಡುತ್ತದೆ.

ಅತ್ತ ಮೆಕ್‌ಬೆತನ ಹೆಂಡತಿ ಮೊದಲಿನಂತಿಲ್ಲ. ಅವಳಿಗೆ ತೀವ್ರ ಮನೋರೋಗ ಹತ್ತಿದೆ. ಹಿಂದೆ ಹೆಣ್ಣುತನವನ್ನು ತೊರೆದು ಗಂಡಾಗಿ, ಗಂಡನಿಗಿಲ್ಲದ ಮನೋದಾರ್ಢ್ಯವನ್ನು ಮೆರೆದಿದ್ದಳು. ಆಗ ಅವಳು ಕೆಳಕ್ಕೆ ಅದುಮಿದ್ದ ಅಂತರಾತ್ಮ ಈಗ ಮತ್ತೆ ಒತ್ತರಿಸಿ ಮೇಲೆದ್ದು ಆ ಮನೋದಾರ್ಢ್ಯವನ್ನು ಚೂರುಚೂರುಮಾಡಿದೆ. ತಾನು ಪ್ರೇರಿಸಿದ ಒಂದು ಕೊಲೆ ಹಲ ಕೊಲೆಗಳಿಗೆ ಎಡೆ ಕೊಟ್ಟು, ಅವುಗಳ ನೆನಪು ಭೀತಿಯಾಗಿ, ಭೀತಿ ಭೂತವಾಗಿ ಅವಳನ್ನು ಮುತ್ತಿ ಕಾಡಿದೆ. ಅಪರಾಧದ ಅರಿವು, ಪಾಪದ ಪ್ರಜ್ಞೆ ಕಿತ್ತು ತಿನ್ನುತ್ತಿವೆ. ನಿದ್ರೆಯಲ್ಲಿ ಕನವರಿಸಿ ಓಡಾಡುತ್ತಾಳೆ; ಡಂಕನನ ಕೊಲೆಯ ರಾತ್ರಿ ರಕ್ತದ ಕೈ ತೊಳೆಯಲು ಸ್ವಲ್ಪ ನೀರಾದರೆ ಸಾಕೆಂದುಕೊಂಡವಳು ಈಗ ಎಷ್ಟು ತೊಳೆದರೂ ಕೈ ಮೇಲಿನ ರಕ್ತದ ಕಲೆ ಹೋಗದೆನ್ನುತ್ತ, ಸದಾ ಉಜ್ಜಿ ಉಜ್ಜಿ ಕೈತೊಳೆಯುತ್ತಿರುತ್ತಾಳೆ; ಅರೇಬಿಯಾದ

ಎಲ್ಲ ಸುಗಂಧದ್ರವ್ಯಗಳೂ ಆ ಕೈಗೆ ಮತ್ತೆ ಕಂಪಿಡಲಾರವೆನ್ನುತ್ತ ಬಡಬಡಿಸುತ್ತಾಳೆ! ಕೊನೆಗೆ ಅವಳಿಗೆ ಆತ್ಮಹತ್ಯೆಯೇ ಗತಿ!

ಮೆಕ್‌ಬೆತ್ ಡನ್ಸಿನೇನ್ ಕೋಟೆಯ ಕೋಣೆಯಲ್ಲಿ ನುಗ್ಗಿಬರುತ್ತಿರುವ ಇಂಗ್ಲಿಷ್ ಸೈನ್ಯದ ವರದಿಗಳನ್ನು ಎದುರಿಸುತ್ತ ಕುಳಿತಿರುವಾಗ ಹೆಂಡತಿ ತೀರಿಕೊಂಡಳೆಂಬ ಸುದ್ದಿ ತಿಳಿಯುತ್ತದೆ. ಅದು ಅವನ ಮೇಲೆ ಯಾವ ಪರಿಣಾಮವನ್ನೂ ಮಾಡದು! ಅವನಲ್ಲಿ ಭೀತಿ, ಭಂಡ ಧೈರ್ಯಗಳ ವಿನಹ ಉಳಿದೆಲ್ಲ ಭಾವನೆಗಳೂ ಸತ್ತಿವೆ. 'ಸ್ವಲ್ಪ ಹೊತ್ತು ಬಿಟ್ಟು ಸತ್ತಿದ್ದರೆ ಪೂರ್ತಿ ಆಟ ನೋಡಬಹುದಾಗಿತ್ತಲ್ಲ!' ಎನ್ನುವಂತೆ ಮಾತನಾಡುತ್ತಾನೆ! ಆ ಕ್ಷಣ ಅವನಿಗೆ ಬದುಕು ಎಷ್ಟು ಕ್ಷಣಿಕ, ಎಷ್ಟು ವ್ಯರ್ಥ, ಅಲ್ಲಿ ಅರೆಗಳಿಗೆ ಕುಣಿದು ಮರೆಯಾಗುವ ಮಾನವ ಎಂತಹ ಬಡ ನಟ ಎನಿಸುತ್ತದೆ (ಪುಟ 223).

ಮೆಕ್‌ಬೆತ್‌ನನ್ನು ಗೆಲ್ಲಬೇಕಾದರೆ ಬರ್ನಮನ ಹೆಗ್ಗಾಡೇ ನಡೆದು ಬರಬೇಕಲ್ಲವೆ? ಅಸಾಧ್ಯವೆಂದು ತೋರುವ ಆ ಕಣಿ ಸಹ ತನ್ನದೇ ಒಂದು ರೀತಿಯಲ್ಲಿ ಸಾಧ್ಯವಾಗುತ್ತದೆ. ಶತ್ರು ಪಕ್ಷದವರು ತಮ್ಮ ಸೈನ್ಯಬಲದ ಗುಟ್ಟು ಗೊತ್ತಾಗದಿರಲೆಂದು ಬರ್ನಮನ ಕಾಡಿನಿಂದ ಒಂದೊಂದು ಕೊಂಬೆ ಕಡಿದು ಅದರಿಂದ ತಲೆಮರಸಿ ಮುನ್ನಡೆದಿದ್ದಾರೆ. ಕಾಡು ಕಾಲು ತಳೆದು ನಡೆದು ಬಂದಂತೆ ತೋರುತ್ತಿದೆ! ದ್ವಂದ್ವಾರ್ಥದ ಮಾತಿನಿಂದ ಸುಳ್ಳನ್ನು ಸತ್ಯವೆಂಬಂತೆ ನುಡಿದು ನಂಬಿಸಿ ಅಡ್ಡದಾರಿಗೆಳೆದ ಮಾಟಗಾತಿಯರನ್ನು ಶಪಿಸುತ್ತ ಮೆಕ್‌ಬೆತ್ ಕದನಕ್ಕಿಳಿಯುತ್ತಾನೆ. ಈಗ ಅವನ ವೈರಿ ಮನುಷ್ಯನಲ್ಲ, ದೈವ! ಹುಚ್ಚನಂತೆ ಸಿಕ್ಕಿದವರ ತಲೆ ತರಿದು ಹೋರಾಡುತ್ತಾನೆ. ಕೊನೆಗೆ ಮೆಕ್‌ಬೆತ್ ಮೆಕ್‌ಡಫರು ಎದುರಾಗುತ್ತಾರೆ. ಕೊನೆಯ ಕಣಿಯಂತೆ ಹೆಣ್ಣಿಗೆ ಹುಟ್ಟಿದ ಯಾವನೂ ತನ್ನನ್ನು ಕೊಲ್ಲಲಾರನೆಂದು ಮೆಕ್‌ಬೆತ್‌ನಿಗೆ ಇನ್ನೂ ಕುಟುಕು ಧೈರ್ಯ. ಆ ಮಾತಿನ ದ್ವಂದ್ವವೂ ಬಯಲಾಗುತ್ತದೆ. ಮೆಕ್‌ಡಫ್ ಸಾಧಾರಣ ಅರ್ಥದಲ್ಲಿ 'ಹುಟ್ಟಿ'ದವನೇ ಅಲ್ಲ. ತಾಯ ಹೊಟ್ಟೆ ಸೀಳಿ ತನ್ನನ್ನು ಅಕಾಲಿಕವಾಗಿ ಹೊರತೆಗೆಯಲಾಗಿತ್ತೆಂದು ಅವನು ಹೊರಗೆಡವಿದಾಗ ಮೆಕ್‌ಬೆತನ ತಲೆಯ ಮೇಲೆ ಆಕಾಶವೇ ಕಳಚಿ ಬೀಳುತ್ತದೆ. ಕೈಸೆರೆಯಾಗಲು ಇಚ್ಛಿಸದೆ ಘೋರವಾಗಿ ಕಾದುತ್ತ ಮೆಕ್‌ಡಫನ ಕತ್ತಿಗೆ ಬಲಿಯಾಗಿ ಸಾಯುತ್ತಾನೆ. ಗದ್ದುಗೆ ಮ್ಯಾಲ್ಕಂನದಾಗುತ್ತದೆ.

## 22. ಆ್ಯಂಟನಿ ಅಂಡ್ ಕ್ಲಿಯೊಪಾಟ್ರ

**ರಚನೆ:** 1606-7. **ಮೊದಲ ಪ್ರಕಟನೆ:** 1623.

**ಆಕರ:** ಪ್ಲೂಟಾರ್ಕನ 'ಪ್ಯಾರಲಲ್ ಲೈವ್ಸ್'ನಲ್ಲಿನ 'ಲೈಫ್ ಆಫ್ ಆಂಟೋನಿಯಸ್'. ಸರ್ ಥಾಮಸ್ ನಾರ್ತನ ಅನುವಾದದ ಮುಖೇಣ.

**ಕಥೆ:** ರೋಮನ್ ಚರಿತ್ರೆಯ ಆಧಾರದ ಮೇಲೆ ಕವಿ ಬರೆದ ಮೂರು ನಾಟಕಗಳಲ್ಲಿ ಇದು ಎರಡನೆಯದು. ಈ ನಾಟಕದ ಹರಹು ಅದರ ಹಿನ್ನೆಲೆಯಾದ ರೋಮಿನ ಸಾಮ್ರಾಜ್ಯದಂತೆಯೇ ವಿಶಾಲ; ಎತ್ತರ ಅದರ ನಾಯಕರ ಐತಿಹಾಸಿಕ ವ್ಯಕ್ತಿತ್ವದಂತೆಯೇ ಉನ್ನತ. ಒಬ್ಬ ಉದಾತ್ತ ವ್ಯಕ್ತಿ ಸ್ತ್ರೀವ್ಯಾಮೋಹಕ್ಕೆ ಬಲಿಬಿದ್ದು ಅನರಿಂದಾಗಿ ಪತನ ಕಾಣುವುದು ನಾಟಕದ ವಸ್ತು. ಸಂಕ್ತಿಪಂಕ್ತಿಗಳಲ್ಲಿಯೂ ಸುಂದರ, ಭಾವಪೂರ್ಣ

ಕಾವ್ಯವನ್ನು ತುಳುಕಿಸಿ, ಬಂಧದಲ್ಲಿ ಸೂಕ್ಷ್ಮತೆ ಸೂಸಿ ವಿಲಕ್ಷಣ ಕಳೆಯಿಂದ ಬೆಳಗಿದೆ ಈ ಕೃತಿರತ್ನ. ನಾಟಕ ಅತ್ಯಂತ ದೊಡ್ಡದು, ಐದು ಅಂಕಗಳಲ್ಲಿ ಒಟ್ಟು 41 ದೃಶ್ಯಗಳಿವೆ.

ಜೂಲಿಯಸ್ ಸೀಸರನ ಕೊಲೆಯಾಗಿ, ಆ ನಂತರದ ಕದನದಲ್ಲಿ ಕೊಲೆಗೆ ಕಾರಣರಾದ ಬ್ರೂಟಸ್, ಕ್ಯಾಷಿಯಸ್ ಮುಂತಾದವರು ಸೋತು ಸತ್ತ ನಂತರ ರೋಮ್ ಚಕ್ರಾಧಿಪತ್ಯ ದಂಗೆಕೋರರ ವಿರುದ್ಧ ಹೋರಾಡಿದ ಸೀಸರನ ಆಪ್ತಮಿತ್ರ ಮಾರ್ಕ್ ಆ್ಯಂಟನಿ, ಸೋದರಳಿಯ ಆಕ್ಟೇವಿಯಸ್ ಸೀಸರ್ ಮತ್ತು ಇಮಿಲಿಯಸ್ ಲೆಪಿಡಸರ ವಶಕ್ಕೆ ಬರುತ್ತದೆ. ಈ 'ತ್ರಿಮೂರ್ತಿ'ಗಳು ಚಕ್ರಾಧಿಪತ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿ ಒಬ್ಬೊಬ್ಬರು ಒಂದೊಂದು ವಿಭಾಗದ ಆಡಳಿತವನ್ನು ವಹಿಸಿಕೊಳ್ಳುತ್ತಾರೆ. ಪೂರ್ವದ ಗ್ರೀಸ್, ಈಜಿಪ್ಟ್ ಮುಂತಾದ ವಿಸ್ತಾರ ಪ್ರದೇಶಗಳೆಲ್ಲವೂ ಆ್ಯಂಟನಿಯ ಪಾಲಿಗೆ ಬರುತ್ತವೆ.

ಆ್ಯಂಟನಿ ಸೈನ್ಯ ಕೊಂಡು ತನ್ನ ಪಾಲಿನ ಪ್ರದೇಶಗಳ ವೀಕ್ಷಣೆ ಮಾಡಿ ಬರಲು ಹೊರಡುತ್ತಾನೆ. ಅಂಗರಾಜ್ಯಗಳೆಲ್ಲವನ್ನೂ ಒಂದೊಂದಾಗಿ ಮುಗಿಸಿ ಈಜಿಪ್ಟಿನ ರಾಜಧಾನಿಯಾದ ಅಲೆಕ್ಸಾಂಡ್ರಿಯವನ್ನು ತಲಪುವ ಹೊತ್ತಿಗೆ ರೋಮ್ ಬಿಟ್ಟು ಎರಡು ವರ್ಷಗಳೇ ಉರುಳಿವೆ. ಈಜಿಪ್ಟ್ ದೇಶ ರಾಣಿ ಕ್ಲಿಯೊಪಾತ್ರಳ ಅಧೀನದಲ್ಲಿದೆ. ಕ್ಲಿಯೊಪಾತ್ರ ನೈಲ್ ನದಿಯ ನೈದಿಲೆ. ಯೌವನ ಮೀರಿದ್ದರೂ ಅವಳು ವಿಲಕ್ಷಣ ಸುಂದರಿ; ವಯಸ್ಸು ಅವಳನ್ನು ಸುಕ್ಕಾಗಿಸದು, ಬಳಕೆಗೆ ಸಿಕ್ಕು ಅವಳ ಅನಂತ ವೈವಿಧ್ಯ ಹಳಸದು; ಬಿನ್ನಾಣದಲ್ಲಿ ಅವಳಿಗೆ ಸರಿದೊರೆಯಾದ ಇನ್ನೊಬ್ಬ ಹುಡುಗಿಯೇ ಹುಟ್ಟಿಲ್ಲ! ಹಿಂದೆ ಜೂಲಿಯಸ್ ಸೀಸರ್ ಈಜಿಪ್ಟಿಗೆ ಭೇಟಿಯಿತ್ತಿದ್ದಾಗ ಅವನಂತಹ ಸಂಯಮಶೀಲನೂ ಅಂದಿನ ಆ ಹದಿನೆಂಟರ ಚೆಲುವೆಗೆ ಮರುಳಾಗಿ ಅವಳ ತಲೆಗೆ ಚಿನ್ನದ ಕಿರೀಟ ತೊಡಿಸಿ, ಅವಳೊಡನೆ ಕೆಲ ಕಾಲ ಕಳೆದಿದ್ದ! ಅಂದಿನಿಂದ ಅವಳು ರಾಜಭೋಜ್ಯ! ಗಂಡಿನ ಕಲ್ಪನೆಯ ಅಳವಿಗೆ ಮೀರಿದ ಆ ಚದುರೆ ರೋಮಿನ ಹಿರಿಯ ನಾಯಕನನ್ನು ಅವನ ಘನತೆ ಹಾಗೂ ತನ್ನ ಖ್ಯಾತಿಗಳಿಗೆ ಒಪ್ಪುವಂತೆ ಬರಮಾಡಿಕೊಳ್ಳುತ್ತಾಳೆ. ಅವನನ್ನು ಎದುರುಗೊಳ್ಳಲು ಅವಳು ಕುಳಿತು ಬಂದ ನೌಕೆ ಒಪ್ಪಕೊಟ್ಟ ಸ್ವರ್ಣಸಿಂಹಾಸನದಂತೆ ನೀರ ಮೇಲೆ ಬೆಳಗಿದೆ; ಅದರ ಮಾಡಕ್ಕೆ ಹೊದಿಸಿದುದು ಚಿನ್ನದ ತಗಡು; ಹಾಯಿಗಳ ಬಣ್ಣ ಕೆನ್ನೀರಳೆ; ಅವುಗಳಿಂದ ತೀಡಿದ ಸುಗಂಧ ಗಾಳಿಯನ್ನೇ ಪ್ರೇಮದಿಂದ ಹುಚ್ಚಾಗಿಸಿದೆ.

ಕಣ್ಣು ಹರಿದೊಡನೆಯೇ ಆ್ಯಂಟನಿ ಕ್ಲಿಯೊಪಾತ್ರಳಿಗೆ ಮರುಳಾಗುತ್ತಾನೆ. ಅವಳೂ ಅವನಿಗೆ ಗಾಢವಾಗಿ ಒಲಿಯುತ್ತಾಳೆ. ಆ ಅಮಲಿನಲ್ಲಿ ಆ್ಯಂಟನಿಗೆ ಊರು, ಮನೆಮಠ, ಮಡದಿ—ಒಂದೂ ಬೇಕಾಗದು. ಸೀಸರನ ಕೊಲೆಯ ನಂತರ ಕೇವಲ ಬಾಯ ಬಲದಿಂದಲೇ ರೋಮಿನ ಮಹಾ ಇತಿಹಾಸದ ನಡೆಯನ್ನು ಬದಲಿಸಿದ ಆ ಶಕ್ತನಾಯಕ ಈಗ ರೋಮಿಗೂ ತನ್ನವರಿಗೂ ಸಲ್ಲಬೇಕಾದ ಕರ್ತವ್ಯವನ್ನು ಮರೆತು ಕ್ಲಿಯೊಪಾತ್ರಳ ಕೈಗೊಂಬೆಯಾಗಿ ಭೋಗವಿಲಾಸಗಳಲ್ಲಿ ಕಾಲಹಾಕಲು ತೊಡಗುತ್ತಾನೆ. ಸ್ಥಿತಿ ಅವನ ಕೈಕೆಳಗಿನವರೇ ಅವನ ಬಗ್ಗೆ ಲಾಘವವಾಗಿ ಆಡಿಕೊಳ್ಳುವವರೆಗೂ ಹೋಗುತ್ತದೆ.

ಆ್ಯಂಟನಿಯ ದುರ್ವ್ಯಾಮೋಹದ ಸುದ್ದಿ ರೋಮಿಗೂ ಮುಟ್ಟುತ್ತದೆ. ಈ ನಡುವೆ ಅಲ್ಲಿ ಸಾಮ್ರಾಜ್ಯದ ಭದ್ರತೆಗೆ ಧಕ್ಕೆ ತರುವಂತಹ ಹಲವು ಸಂಗತಿಗಳು ನಡೆದಿವೆ. ಹಿಂದೆ ಸೀಸರ್ ಸಹನಾಯಕರಲ್ಲೊಬ್ಬನಾದ ಹಿರಿಯ ಪಾಂಪೆಯನ್ನು ಕೊಂದಿದ್ದ. ಈಗ ಅವನ ಮಗ



ಕ್ಲಿಯೊಪಾಟ್ರಳ ಬೆಡಗುಬಿನ್ನಾಣಗಳ ಬಲೆಯಲ್ಲಿ ಆ್ಯಂಟನಿ

ಸೆಕ್ಸ್ಟಸ್ ಪಾಂಪೆಗೆ ಪಿತೃಹತ್ಯೆಯ ಸೇಡು ತೀರಿಸಿಕೊಳ್ಳಲು ಕೈಕಡಿಯುತ್ತಿದೆ. ಬಲವಾದ ನೌಕಾಸೈನ್ಯ ಕಟ್ಟಿ, ಸಿಸಿಲಿ ಸಾರ್ಡೀನಿಯಾಗಳಲ್ಲಿ ನೆಲೆಬಿಟ್ಟು ಅಲ್ಲಿಂದ ದಾಳಿಗೆ ಆರಂಭಿಸಿದ್ದಾನೆ. ಜೊತೆಗೆ ಸ್ವತಃ ಆ್ಯಂಟನಿಯ ಹೆಂಡತಿ ಫಲ್ವಿಯಾ ಅವನ ತಮ್ಮನೊಡನೆ ಕೈಗೂಡಿಸಿ ಆಕ್ಟೇವಿಯಸನ ಮೇಲೆ ಎದುರುಬಿದ್ದಿದ್ದಾಳೆ. ಅತ್ತ ಪೂರ್ವದಲ್ಲಿ ರೋಮಿನ ಹಳೆಯ ಶತ್ರುಗಳಾದ ಪಾರ್ಥಿಯನರು ನಿಗರಿ ನಿಂತಿದ್ದಾರೆ. ಪರಿಸ್ಥಿತಿ ಕೈ ಮೀರುತ್ತಿರುವುದನ್ನು ನೋಡಿ ಆಕ್ಟೇವಿಯಸ್ ಆ್ಯಂಟನಿಗೆ ತ್ವರೆಯ ಕರೆ ಕಳಿಸುತ್ತಾನೆ. ಹಿಂದೆಯೇ ಇವೆಲ್ಲಕ್ಕಿಂತ ಹೆಚ್ಚು ದಾರುಣವಾದ ಇನ್ನೂ ಒಂದು ಸುದ್ದಿ ಬರುತ್ತದೆ. ಹೆಂಡತಿ ಫಲ್ವಿಯಾ

ಹಠಾತ್ತನೆ ತೀರಿಕೊಂಡಿದ್ದಾಳೆ. ಸುದ್ದಿ ಕೇಳಿ ಆ್ಯಂಟನಿ ಒಂದು ಕ್ಷಣ ತಾನೇ ತಾನಾಗುತ್ತಾನೆ. ರೋಮ್ ಟೈಬರ್ ನದಿಯಲ್ಲಿ ಕರಗಿ ಮುಳುಗಿಹೋದರೆ ತನಗೇನಂತೆ ಎನ್ನುತ್ತಿದ್ದವನಿಗೆ ಈಜಿಪ್ಟಿನ ಪ್ರಬಲ ಶೃಂಖಲೆಗಳನ್ನು ಕಳಚಿ ಎಸೆಯಬೇಕೆನಿಸುತ್ತದೆ; ಕ್ಲಿಯೊಪಾಟ್ರಳ ಪರಿಚಯವೇ ಆಗದಿದ್ದರೆ ಎಷ್ಟು ಚೆನ್ನಿರುತ್ತಿತ್ತು ಎನಿಸುತ್ತದೆ. ರೋಮಿಗೆ ಹಿಂದಿರುಗಲು ಸಿದ್ಧನಾಗುತ್ತಾನೆ. ಆದರೆ ಕ್ಲಿಯೊಪಾಟ್ರ ಸುಲಭವಾಗಿ ಬಿಟ್ಟುಕೊಡಳು. ಅವನನ್ನು ವಂಚಕನೆಂದು ಹೀಯಾಳಿಸಿ, ಪ್ರೇಮವೆಂದರೆ ಇಷ್ಟೆಯೇ ಎಂದು ಚುಚ್ಚುತ್ತಾಳೆ. ಕೊನೆಗೆ ಆ್ಯಂಟನಿ ಸಿಟ್ಟುಗೊಂಡುದನ್ನು ನೋಡಿ, ಪಟ್ಟು ಬದಲಾಯಿಸಿ 'ಹೋಗಿ ಬಾ' ಎನ್ನುತ್ತಾಳೆ. ಆ್ಯಂಟನಿ ತನ್ನ ಹೃದಯವನ್ನು ಹಿಂದೆ ಬಿಟ್ಟು ರೋಮಿಗೆ ಹೊರಡುತ್ತಾನೆ.

ರೋಮಿನಲ್ಲಿ 'ತ್ರಿಮೂರ್ತಿ'ಗಳು ಸೇರಿದಾಗ ಆಕ್ಟೇವಿಯಸ್ ಆ್ಯಂಟನಿಯ ಕರ್ತವ್ಯ-ಭ್ರಷ್ಟತೆಯನ್ನು ಕುರಿತು ಹಲವಾರು ಆಪಾದನೆಗಳನ್ನು ತರುತ್ತಾನೆ. ಆ್ಯಂಟನಿ ಪಶ್ಚಾತ್ತಾಪ ವ್ಯಕ್ತಮಾಡುತ್ತಾನೆ. ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಅವರು ಮತ್ತೆ ಒಂದಾಗುತ್ತಾರೆ. ಗೆಳೆಯರ ಸಲಹೆಯಂತೆ ಆ ಐಕ್ಯದ ಸಂಕೇತವಾಗಿ ಆ್ಯಂಟನಿ ಆಕ್ಟೇವಿಯಸನ ತಂಗಿ ಆಕ್ಟೇವಿಯಾಳನ್ನು ಮದುವೆಯಾಗುತ್ತಾನೆ. ಆದರೆ ಈ ಶಾಂತಿ ಸಾಮರಸ್ಯ ಶಾಶ್ವತವಲ್ಲ. ಕಣಿಗಾರನೊಬ್ಬ ಬಂದು ಆಕ್ಟೇವಿಯಸನಿಂದ ದೂರವಿದ್ದಷ್ಟೂ ಕ್ಷೇಮವೆಂದು ಆ್ಯಂಟನಿಯನ್ನು ಎಚ್ಚರಿಸುತ್ತಾನೆ. ಆ್ಯಂಟನಿಯ ಮನಸ್ಸು ಕದಡುತ್ತದೆ, ಕ್ಲಿಯೊಪಾಟ್ರಳ ನೆನಪಾಗುತ್ತದೆ.

ಆ್ಯಂಟನಿ ತನ್ನ ಈಜಿಪ್ಟಿನ ವಿಲಾಸ ತೊರೆದು ರೋಮಿಗೆ ವಾಪಸಾಗಬಹುದೆಂದು ಪಾಂಪೆ ನಿರೀಕ್ಷಿಸಿರಲಿಲ್ಲ. ಅವನೆಂದರೆ ಪಾಂಪೆಗೆ ಕೊಂಚ ಅಂಜಿಕೆಯೇ; ಅವನ ಸಾಮರ್ಥ್ಯ ಉಳಿದಿಬ್ಬರ ತೂಕದ ಎರಡು ಪಟ್ಟು. ಈಗ ಹಿಂದಿರುಗಿರುವುದಷ್ಟೇ ಅಲ್ಲದೆ ಆಕ್ಟೇವಿಯಸನ ತಂಗಿಯ ಕೈಹಿಡಿದು, ಆ ರಕ್ತಸಂಬಂಧದಿಂದಾಗಿ ಆಕ್ಟೇವಿಯಸ್ ಆ್ಯಂಟನಿಯರ ನಡುವಿನ ಒಡಕು ಬೆಸೆದು, ಅವರು ಒಂದಾಗಿರುವುದು ಪಾಂಪೆಯನ್ನು ಧೃತಿಗೆಡಿಸುತ್ತದೆ. ಇತ್ತ 'ತ್ರಿಮೂರ್ತಿ'ಗಳೂ ಪಾಂಪೆಯ ವಿರೋಧವನ್ನು ಒಲ್ಲರು. ಹೀಗಾಗಿ ಎರಡು ಪಕ್ಷಗಳವರಿಗೂ ಸಂಧಾನವಾಗುತ್ತದೆ. ಆ ಸಂಧಾನದ ಕುರುಹಾಗಿ ನಾಲ್ವರು ನಾಯಕರೂ ಸೇರಿ, ಚೆನ್ನಾಗಿ ಕುಡಿದು, ಹಾಡು ಹರಟೆಗಳಲ್ಲಿ ತಣಿಯುತ್ತಾರೆ.

ಶತ್ರುಗಳಾದ ಪಾರ್ಥಿಯನರ ಮೇಲೆ ಸೈನ್ಯ ಕೊಂಡು ಹೋಗಿದ್ದ ಆ್ಯಂಟನಿಯ ಸೇನಾನಿ ವೆಂಟಿಡಿಯಸ್ ಅವರನ್ನು ಯಶಸ್ವಿಯಾಗಿ ಮಟ್ಟಹಾಕಿದನೆಂಬ ಸುದ್ದಿ ಬರುತ್ತದೆ. ರೋಮಿಗೆ ಬಂದ ಕೆಲಸಗಳೆಲ್ಲವೂ ಕೈಗೂಡಿದಂತಾಯಿತು, ಇನ್ನು ಆ್ಯಂಟನಿ ಹೆಂಡತಿ ಆಕ್ಟೇವಿಯಾಳೊಡನೆ ತನ್ನ ಆಧಿಪತ್ಯಕ್ಕೆ ವಾಪಸಾಗುವ ಯೋಚನೆ ಮಾಡುತ್ತಾನೆ. ಆಕ್ಟೇವಿಯಸ್ ತುಂಬ ಪ್ರೀತಿವಿಶ್ವಾಸಗಳಿಂದಲೇ ತಂಗಿ ಭಾವಂದಿರನ್ನು ಬೀಳ್ಕೊಡುತ್ತಾನೆ. ಆದರೆ ಕಲ್ಲೆದೆಯ ಆ ಯುವಕ ಬದುಕಿನಲ್ಲಿ ಭಾವನೆಗೆ ಅಷ್ಟಾಗಿ ಬೆಲೆ ಕೊಟ್ಟವನಲ್ಲ. ಅತ್ತ ಆ್ಯಂಟನಿ ಕಣ್ಮರೆಯಾದೊಡನೆಯೇ ರಾಜಸಂಬಂಧ, ರಕ್ತಸಂಬಂಧಗಳೆಲ್ಲವನ್ನೂ ಮರೆತು ಬಹಿರಂಗವಾಗಿಯೇ ಅವನ ಬಗ್ಗೆ ಅಗೌರವ ತೋರಿ ನಿಂದಿಸಲಾರಂಭಿಸುತ್ತಾನೆ. ಆ್ಯಂಟನಿಗೆ ಅಥೆನ್ಸ್‌ನಲ್ಲಿ ಇದು ತಿಳಿಯುತ್ತದೆ. ಹೆಂಡತಿಯ ಮುಂದೆ ಅವಳ ಅಣ್ಣನ ನಡತೆಯನ್ನು ಖಂಡಿಸಿ ಗುಡುಗಾಡುತ್ತಾನೆ, ಅವನ ಮೇಲೆ ಯುದ್ಧ ಹೂಡುವುದಾಗಿ ಹೆದರಿಸುತ್ತಾನೆ. ಪಾಪ ! ಆಕ್ಟೇವಿಯಾಳದು ಶೋಚನೀಯ ಸ್ಥಿತಿ. ಇತ್ತ ಗಂಡ, ಅತ್ತ

ಅಣ್ಣ — ಒಲವಿನ ಕತ್ತರಿಯಲ್ಲಿ ಸಿಕ್ಕುಬೀಳುತ್ತಾಳೆ. ಯಾರೊಬ್ಬರ ಪಕ್ಷ ಹಿಡಿದೂ ಸಿಲ್ಲುವಂತಿಲ್ಲ. ಅಣ್ಣನನ್ನು ಕಂಡು ಮಾತಾಡಿಬರುವೆನೆಂದು ರೋಮಿಗೆ ಹೊರಡುತ್ತಾಳೆ. ಅದೇ ತನ್ನ ಹಾಗೂ ಆ್ಯಂಟನಿಯ ದಾಂಪತ್ಯದ ಕೊನೆಯೆಂದು ಆ ಭಾಗ್ಯಹೀನೆ ಕಾಣಳು!

ಈ ನಡುವೆ ಆಕ್ಟೇವಿಯಸ್ ಇನ್ನೂ ಒಂದು ಹೆಜ್ಜೆ ಮುಂದುವರಿಯುತ್ತಾನೆ. ಲೆಪಿಡಸನನ್ನು ಒಪ್ಪಿಸಿ, ಪಾಂಪೆಯೊಡನೆ ಮಾಡಿಕೊಂಡಿದ್ದ ಒಪ್ಪಂದವನ್ನು ಮುರಿದು, ದಂಡೆತ್ತಿ ಹೋಗಿ ಅವನನ್ನು ಸೋಲಿಸಿ ಕೊಲ್ಲುತ್ತಾನೆ. ಆ ನಂತರ ಪಾಂಪೆಯೊಡನೆ ಸಂಚು ಹೂಡಿದ್ದನೆಂದು ಲೆಪಿಡಸನ ಮೇಲೆಯೇ ಸುಳ್ಳು ಆರೋಪ ತಂದು, ಅವನನ್ನು ಪದಚ್ಯುತಗೊಳಿಸಿ, ಸೆರೆಗೆ ತಳ್ಳಿ, ಅವನ ಆಧಿಪತ್ಯವನ್ನೂ ತಾನೇ ಕಬಳಿಸುತ್ತಾನೆ. ಇವೆಲ್ಲವೂ ಆ್ಯಂಟನಿಗೆ ತಿಳಿಯುತ್ತದೆ. ಈಗ ರೋಮ್ ಸಾಮ್ರಾಜ್ಯಕ್ಕೆ ತಾನೂ ಆಕ್ಟೇವಿಯಸ್ ಇಬ್ಬರೇ ಒಡೆಯರು. ತಮ್ಮಿಬ್ಬರ ನಡುವೆ ವಿರಸ ತಪ್ಪಿದ್ದಲ್ಲ. ಇಬ್ಬರಲ್ಲಿ ಯಾರಾದರೊಬ್ಬರು ಉಳಿಯಬೇಕು! ಆಕ್ಟೇವಿಯಸನ ಮೇಲಿನ ದ್ವೇಷ ಅವನ ತಂಗಿಯ ಮೇಲೂ ತಿರುಗುತ್ತದೆ. ಆ ಉಬ್ಬರದಲ್ಲಿ ಹೆಂಡತಿಯೊಡನಿದ್ದ ಬಂಧನ ಕಡಿದುಹೋಗುತ್ತದೆ. ಆ್ಯಂಟನಿ ಅಥೆನ್ಸ್ ಬಿಟ್ಟು ನೇರವಾಗಿ ಕ್ಲಿಯೊಪಾಟ್ರಳ ತೆಕ್ಕೆಗೆ ಬಂದು ಬೀಳುತ್ತಾನೆ. ಆ ಹೆಣ್ಣೂ ಅವನಿಗಾಗಿಯೇ ಕಾದಿದ್ದಾಳೆ. ಇಬ್ಬರೂ ತಮ್ಮದೇ ವಿಶಿಷ್ಟ ರೀತಿಯಲ್ಲಿ ಮದುವೆಯಾಗುತ್ತಾರೆ. ಆ್ಯಂಟನಿ ಅವಳಿಗೆ ಪರಮಾಧಿಕಾರ ಕೊಟ್ಟು ಈಜಿಪ್ಟಿನ ಸರ್ವತಂತ್ರ ಸ್ವತಂತ್ರ ರಾಣಿಯನ್ನಾಗಿ ಮಾಡುತ್ತಾನೆ. ಅಕ್ಕಪಕ್ಕದ ಕೆಲ ರಾಜ್ಯಗಳನ್ನೂ ಅವಳಿಗೆ ದಾನಕೊಟ್ಟು ಅವಳ ಮಕ್ಕಳಿಗೂ ಪಟ್ಟದ ಹಕ್ಕನ್ನು ಘೋಷಿಸುತ್ತಾನೆ. ಆ್ಯಂಟನಿಯ ಈ ನಿರಂಕುಶ ವರ್ತನೆ ಆಕ್ಟೇವಿಯಸನನ್ನು ರೊಚ್ಚಿಗೆಬ್ಬಿಸುತ್ತದೆ. ಅವನು ರೋಮ್ ಜನತೆಯ ಬೆಂಬಲ ಪಡೆದು ಆ್ಯಂಟನಿಯ ಮೇಲೆ ಯುದ್ಧ ಘೋಷಿಸಿ ಜಲಕದನಕ್ಕೆ ಕರೆ ಕೊಡುತ್ತಾನೆ. ಆ್ಯಂಟನಿಯ ಜಲಸೈನ್ಯ ಭೂಸೈನ್ಯದಷ್ಟು ಸಬಲವಿಲ್ಲ. ಜಲಕದನಕ್ಕೆ ಒಪ್ಪಕೂಡದೆಂಬ ಉಪನಾಯಕರ ಸಲಹೆಗೆ ಕ್ಲಿಯೊಪಾಟ್ರ ಅಡ್ಡಬಂದು ಅದೇ ಆಗಬೇಕೆಂದು ಹಟ ಹಿಡಿಯುತ್ತಾಳೆ. ತನ್ನಲ್ಲಿರುವ ಅರವತ್ತು ನೌಕೆಗಳ ನೆರವು ನೀಡಿ ತಾನೇ ಪಡೆ ನಡೆಸಲು ಮುಂದಾಗುತ್ತಾಳೆ. ಆ್ಯಂಟನಿ ಅವಳ ಮಾತಿಗೆ ಇಲ್ಲವೆನ್ನುವನೆ? ಜೊತೆಗೆ ಆತ್ಮಗೌರವದ ಪ್ರಶ್ನೆ ಬೇರೆ. ಆಕ್ಟೇವಿಯಸನ ಸವಾಲನ್ನು ಒಪ್ಪದಿದ್ದರೆ ಮರ್ಯಾದೆಗೆ ಕುಂದು! ಪ್ರೇಮಿಗಳಿಬ್ಬರೂ ನೌಕೆಯಲ್ಲಿ ಜೊತೆಜೊತೆ ಕುಳಿತು ಯುದ್ಧಕ್ಕೆ ಹೊರಡುತ್ತಾರೆ! ಆ್ಯಕ್ಟಿಯಮ್ ಕೊಲ್ಲಿಯಲ್ಲಿ ಭಾರೀ ಕದನವಾಗುತ್ತದೆ. ಗೆಲವು ಯಾರೊಬ್ಬರದೂ ಆಗಬಹುದಾದಂತಹ ಫಲನಿರ್ಣಯದ ವೇಳೆ ಕ್ಲಿಯೊಪಾಟ್ರ ಏಕಾಏಕಿ ಕದನರಂಗ ತೊರೆದು ವಾಪಸಾಗುತ್ತಾಳೆ, ಅವಳ ನೌಕೆಗಳೆಲ್ಲವೂ ಅವಳನ್ನು ಹಿಂಬಾಲಿಸುತ್ತವೆ. ಮರುಳ ಆ್ಯಂಟನಿ ತನ್ನ ಗೌರವವೈಭವಗಳೆಲ್ಲವನ್ನೂ ಗಾಳಿಗೆ ತೂರಿ ತಾನೂ ತನ್ನ ಬಾಳಿಗಂಟಿದ ಆ ದುರ್ವಿಧಿಯ ಬೆನ್ನಟ್ಟುತ್ತಾನೆ. ನಾಯಕನೇ ಹೇಡಿಯಂತೆ ಹಿಮ್ಮೆಟ್ಟಿದುದನ್ನು ಕಂಡು ಅವನ ಪಡೆ ದಿಕ್ಕಾಪಾಲಾಗುತ್ತದೆ. ಅವನ ವರ್ತನೆಗೆ ಹೇಸಿದ ಕೆಲವರು ಹೋಗಿ ಶತ್ರುಸೈನ್ಯವನ್ನು ಸೇರಿಕೊಳ್ಳುತ್ತಾರೆ!

ಆ್ಯಂಟನಿಯ ಬಾಳಿನಲ್ಲಿ ಮರುಳಿನ ಕಾರ್ಮೋಡವನ್ನು ಸೀಳಿ ಒಮ್ಮೊಮ್ಮೆ ವಿವೇಕ ಮಿಂಚದೇ ಇಲ್ಲ. ಸೋಲು ಅವಮಾನಗಳ ಎದುರಿನಲ್ಲಿ ತನ್ನ ವರ್ತನೆಗೆ ತಾನೇ ಹೇಸಿ, 'ಓ ಈಜಿಪ್ಟ್, ನನ್ನನ್ನು ಎತ್ತ ನಡಸಿರುವೆ?' ಎಂದು ಗೋಳಿಡುತ್ತಾನೆ, ರೇಗುತ್ತಾನೆ.

ಆದರೆ ಮರುಗಳಿಗೆ ಕ್ಲಿಯೊಪಾಟ್ರ ತಪ್ಪೊಪ್ಪಿ ಕಣ್ಣಿಂದ ಕಂಬನಿ ಮಿಡಿದಾಗ ಏನೂ ಆಗಲಿಲ್ಲ ವೆಂಬಂತೆ ಅವಳನ್ನು ಕ್ಷಮಿಸಿಬಿಡುತ್ತಾನೆ.

ಆ್ಯಂಟನಿ ಅಕ್ಟೇವಿಯಸನ ದಯಾಭಿಕ್ಷೆ ಬೇಡಿ ಈಜಿಪ್ಟಿನಲ್ಲಿ, ತಪ್ಪಿದರೆ ಗ್ರೀಸಿನಲ್ಲಿ ಸಾಮಾನ್ಯ ಪ್ರಜೆಯಂತೆ ಬಾಳು ನಡಸಿಕೊಂಡಿರಲು ಅವಕಾಶ ಬೇಡುತ್ತಾನೆ. ಕ್ಲಿಯೊಪಾಟ್ರ ತನ್ನ ಮಕ್ಕಳಿಗೆ ಪಟ್ಟ ತಪ್ಪದಂತಾದರೆ ಸಾಕೆಂದು ಗೋಗರೆಯುತ್ತಾಳೆ. ಅಕ್ಟೇವಿಯಸ್ ಆ್ಯಂಟನಿಯ ಯಾವೊಂದು ಮೊರೆಯನ್ನು ಕೇಳಲೂ ತಯಾರಿಲ್ಲ. ಆದರೆ ಕ್ಲಿಯೊಪಾಟ್ರ ಳಿಗಾದರೋ ಅವಳು ಆ್ಯಂಟನಿಯನ್ನು ಈಜಿಪ್ಟಿನಿಂದ ಹೊರಗಟ್ಟಲು ಇಲ್ಲವೇ ಕೊಲ್ಲಲು ಒಪ್ಪುವುದಾದರೆ ಅವಳೆಲ್ಲ ಬಯಕೆಗಳನ್ನೂ ಪೂರೈಸಲು ಸಿದ್ಧ ! ಹೇಗಾದರೂ ಅವಳ ಮನವೊಲಿಸಿ ಆ್ಯಂಟನಿಯಿಂದ ಅವಳನ್ನು ಸೆಳೆದುಕೊಳ್ಳಲು ರಾಯಭಾರಿಯನ್ನು ಕಳಿಸಿ ಕೊಡುತ್ತಾನೆ. ಕ್ಲಿಯೊಪಾಟ್ರ ಅನುಕೂಲಸಿಂಧು. ಅಕ್ಟೇವಿಯಸನಿಗೆ ರಾಜಭಕ್ತಿ ಸೂಚಿ ಸುವ ಉತ್ಸಾಹದಲ್ಲಿ ಅವನ ರಾಯಭಾರಿಗೆ ಚುಂಬಿಸಲೆಂದು ಕೈನೀಡುತ್ತಾಳೆ. ಪಾಂಪೆ, ಸೀಸರ್, ಆ್ಯಂಟನಿಯಂತಹ ಲೋಕವೀರರು ಮುತ್ತಿಟ್ಟ ಆ ಕೈ ಈಗ ಒಬ್ಬ ಸಾಧಾರಣ ರಾಯಭಾರಿಯನ್ನು ಮೆಚ್ಚಿಸಹೊರಟಿದೆ ! ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬಂದ ಆ್ಯಂಟನಿ ಆ ದೃಶ್ಯವನ್ನು ಕಂಡು ಸಿಡಿದೇಳುತ್ತಾನೆ. ಈ ಕೃತಘ್ನತೆ, ವಿಶ್ವಾಸದ್ರೋಹ ಕ್ಲಿಯೊಪಾಟ್ರ ಳಿಂದಲೆ ? ಕೈಹಿಡಿದವಳನ್ನು ಮರೆತು, ಸಂತಾನಾಪೇಕ್ಷೆ ತೊರೆದು, ಪಾಂಪೆ ಸೀಸರರ ಹಳಸಲನ್ನು, ಎಂಜಲನ್ನು ಕೈಗೆತ್ತಿ ತನ್ನದೆಂದುಕೊಂಡುದಕ್ಕೆ ಈ ಪ್ರತಿಫಲವೆ ? ಆ ರೋಷ ದಲ್ಲಿ ರಾಯಭಾರಿಗೆ ಚಾಟಿಯೇಟು ಬಿಗಿಸುತ್ತಾನೆ ; ಕ್ಲಿಯೊಪಾಟ್ರ ಚಂಚಲೆಯೆಂದು, ದ್ರೋಹಿಯೆಂದು ಕೂಗಾಡುತ್ತಾನೆ. ಆದರೆ ಈ ಬೆಳಕು, ತನ್ನತನ ಕ್ಷಣಿಕ. ಮರುಗಳಿಗೆ ಅವಳು ಮೋಹದ ಬಲೆ ಬೀಸಿದೊಡನೆಯೇ ಅವನು ಅದಕ್ಕೆ ಬಿದ್ದ ಮರುಳುಮೀನು !

ಮುದುಕ ಆ್ಯಂಟನಿಯಲ್ಲಿ ಮತ್ತೊಮ್ಮೆ ಪೌರುಷ ಕೆರಳುತ್ತದೆ. ಆ ಹುಚ್ಚುಹುರುಪಿ ನಲ್ಲಿ ಅಕ್ಟೇವಿಯಸನನ್ನು ಕತ್ತಿವರಸೆಗೆ ಕರೆದು ನಗೆಪಾಟಲಾಗುತ್ತಾನೆ. ಅವನ ಸೈನ್ಯ ದಲ್ಲಿ ಇನ್ನೂ ಒಂದಿಷ್ಟು ತುಂಡುತುಣುಕು ಉಳಿದಿದೆ. ಆ ಧೈರ್ಯದ ಮೇಲೆ ಮತ್ತೆ ಯುದ್ಧ ಕ್ಕಿಳಿಯುತ್ತಾನೆ. ಯುದ್ಧದ ಹಿಂದಿನ ರಾತ್ರಿ ಸೈನಿಕರೆಲ್ಲರೂ ಸೇರಿದ್ದಾಗ, ಆ್ಯಂಟನಿಯ ಮೈ ಗಾವಲಾಗಿದ್ದ ಹರ್ಕ್ಯುಲಿಸ್ ದೇವತೆ ಅವನನ್ನು ತೊರೆದುಹೋದ ಕುರುಹಾಗಿ ಗಾಳಿಯಲ್ಲಿ ವಿಚಿತ್ರ ಅತಿಮಾನುಷ ಸಂಗೀತದ ತರಂಗಗಳು ಎದ್ದು ತೇಲಿ ಮಾಯವಾಗುತ್ತವೆ. ಮಾರನೆ ದಿನದ ಕದನದಲ್ಲಿ ಆ್ಯಂಟನಿ ಮತ್ತು ಅವನ ಪಕ್ಷ ಪರಾಕ್ರಮದಿಂದ ಹೋರಾಡುತ್ತದೆ. ಮೊದಲ ಸುತ್ತು ಜಯ ಅವರದೇ. ಆದರೆ ಎರಡನೆ ಸುತ್ತಿನಲ್ಲಿ ಜಲಕದನಕ್ಕಿಳಿದಾಗ ಹಿಂದಿ ನದರ ಪುನರಾವರ್ತನೆಯೇ. ಕ್ಲಿಯೊಪಾಟ್ರಳ ಸೈನಿಕರು ವಿರೋಧ ತೋರದೆ ಶಸ್ತ್ರವೆಸೆದು ಶತ್ರುಸೈನ್ಯದೊಡನೆ ಕೈಗೂಡಿಸುತ್ತಾರೆ. ಆ್ಯಂಟನಿಯ ರೋಷ ಹೇಳತೀರದು. ಅವನೊಂದು ಅಗ್ನಿಪರ್ವತ ; ಅವನ ಎದೆಯೊಂದು ಸಜೀವ ಜ್ವಾಲಾಮುಖಿ. ಕ್ಲಿಯೊಪಾಟ್ರ ಅಕ್ಟೇವಿಯಸ ನೊಡನೆ ಗುಟ್ಟಾಗಿ ಒಂದಾಗಿ, ಬೇಕೆಂದೇ ತನಗೆ ಸೋಲು ತಂದಳೆಂದು ತೀರ್ಮಾನಿಸಿ, ಆ 'ಈಜಿಪ್ಟಿನ ಹುಸಿ ಆತ್ಮ'ವನ್ನು ಸಿಗಿಯುವುದಾಗಿ ಕೂಗಾಡುತ್ತಾನೆ. ಏನು ಮಾಡಿದರೂ ಅವನ ಕೋಪ ಆರದು. ಅವನ ದೌರ್ಬಲ್ಯವನ್ನು ಚೆನ್ನಾಗಿ ಅರಿತ ಚತುರೆ ಕ್ಲಿಯೊಪಾಟ್ರ ತಾನು ಸತ್ತಂತೆ ಸುದ್ದಿ ಹುಟ್ಟಿಸಿ, ಹೋಗಿ ಸಮಾಧಿಯೊಂದರಲ್ಲಿ ಅವಿತುಕೊಳ್ಳುತ್ತಾಳೆ.

ಅದನ್ನು ಕೇಳಿದೊಡನೆಯೇ ಆ್ಯಂಟನಿಯ ಕ್ರೋಧ ಆರಿ, ಆ ಪ್ರೇಮಿಯ ಹೃದಯದಲ್ಲಿ ವ್ಯಥೆ ತುಂಬುತ್ತದೆ. ದೀರ್ಘದಿನದ ಹೊರೆಗೆಲಸ ಮುಗಿದಂತಾಯಿತು. ಇನ್ನು ಮಲಗು ವುದೆಷ್ಟೋ ಅಷ್ಟೆ. ಹಿರಿದ ಕತ್ತಿಯ ಮೇಲೆ ಹಾಯ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆದರೆ ಹತ್ಯೆಯ ಆ ಪ್ರಯತ್ನ ಅವನ ರಾಜ್ಯವ್ಯವಹಾರದಂತೆಯೇ ಹಾಳುಗೆಡುತ್ತದೆ, ಅರ್ಧಮರ್ಧ ಗಾಯಗೊಂಡು ನೆತ್ತರು ಸುರಿಸುತ್ತ, ಜತೆಯವರಿಗೆ ತನ್ನನ್ನು ಮುಗಿಸಿರೆಂದು ಗೋಗರೆದಾಗ ಕ್ಲಿಯೊಪಾಟ್ರಳ ಸಾವಿನ ಸುದ್ದಿ ಸುಳ್ಳೆಂದು ವಾರ್ತೆ ಬರುತ್ತದೆ! ಕೇಳಿಕೆ ಯಂತೆ ಜತೆಯವರು ಅವನನ್ನು ಕ್ಲಿಯೊಪಾಟ್ರಳಲ್ಲಿಗೆ ಕರೆದೊಯ್ಯುತ್ತಾರೆ. ಪ್ರೇಮಿಗಳ ಪ್ರೇಮಿ ಆ್ಯಂಟನಿ ಕ್ಲಿಯೊಪಾಟ್ರಳ ತೋಳ್ತೆಕ್ಕೆ ಸೇರಿ ಅವಳ ಅಪ್ಪುಗೆಯಲ್ಲಿ ಪ್ರಾಣ ಬಿಡುತ್ತಾನೆ. ಆ ಕೊನೆಗಾಲದಲ್ಲೂ ಅವನಿಗೆ ಒಂದು ಸಂತೋಷ — ತಾನು ಬಲಿ ಯಾದದ್ದು ತನಗೇ, ಆಕ್ಟೇವಿಯಸನಿಗಲ್ಲ. ಸಾಯುವ ಮುನ್ನವೂ ಅವನಿಗೆ ಕ್ಲಿಯೊ ಪಾಟ್ರಳ ಭವಿತವ್ಯದ ಚಿಂತೆಯೇ. ಆಕ್ಟೇವಿಯಸನ ಬಗ್ಗೆ ಎಚ್ಚರಿಕೆಯಿಂದಿರುವಂತೆ ಹೇಳಿ ಕಣ್ಣುಮುಚ್ಚುತ್ತಾನೆ.

ಆ್ಯಂಟನಿ ಸತ್ತನಂತರ ಕ್ಲಿಯೊಪಾಟ್ರಳನ್ನು ಅಧೀನಪಡಿಸಿಕೊಳ್ಳಲು ಆಕ್ಟೇವಿಯಸ್ ಶತಪ್ರಯತ್ನ ಮಾಡುತ್ತಾನೆ. ತಾನೇ ಖುದ್ದಾಗಿ ಬರುತ್ತಾನೆ. ಅವಳನ್ನು ರೋಮಿನ ರಸ್ತೆಗಳಲ್ಲಿ ತನ್ನ ವಿಜಯದ ಸಂಕೇತವಾಗಿ ಪ್ರದರ್ಶಿಸುವುದು ಅವನ ಹಂಬಲ; ಹಾಗಾಗು ವುದೆಂದು ಅವಳ ಅಂಜಿಕೆ. ಆದರೆ ಆ ಮೋಹಿನಿ ಅವನ ತಂತ್ರಕ್ಕೆ ಬಲಿಯಾಗಳು. ಬದಲು ಪಾಂಪೆ, ಸೀಸರ್, ಆ್ಯಂಟನಿಯರಿಗೆ ಮಾಡಿದಂತೆ ಅವನನ್ನೂ ಮರುಳುಮಾಡಲು ಪ್ರಯತ್ನಿಸುತ್ತಾಳೆ. ಆದರೆ ಅವನು ರಾಜಕಾರಣಿ, ಕಲ್ಲು. ಅವಳ ಬೆಡಗಿನ ತಂತ್ರ ಸೋಲುತ್ತದೆ. ಹಾಗಾಗಬಹುದೆಂದು ನಿರೀಕ್ಷಿಸಿದ್ದ ಅವಳು ಮುಂದಿನದಕ್ಕೆ ಸಿದ್ಧತೆ ಮಾಡಿ ದ್ದಾಳೆ. ಬಾಳಿನ ಬೆಳುವೆಳಗು ಮುಗಿದಿದೆ, ಇನ್ನೆಲ್ಲ ಕತ್ತಲೆಯೆ. ಕೊಟ್ಟಕೊನೆಯ ಸಲ ಶೃಂಗಾರಮಾಡಿಕೊಳ್ಳುತ್ತಾಳೆ. ಪಟ್ಟಾಭಿಷೇಕಕ್ಕೋ ಎಂಬಂತೆ ವೈಭವದಿಂದ ರಾಜವಸ್ತ್ರ ಕಿರೀಟಗಳನ್ನು ತೊಡುತ್ತಾಳೆ. ರೈತನೊಬ್ಬ ಅವಳಿಗೆ ಕೊಡಲೆಂದು ಅಂಜೂರದ ಬುಟ್ಟಿ ತಂದಿದ್ದಾನೆ. ಕಾವಲಾಳುಗಳು ಅವನನ್ನು ಒಳಬಿಡುತ್ತಾರೆ. ಅದು ಅವಳ ಹಂಚಿಕೆ. ಬುಟ್ಟಿ ಯಲ್ಲಿರುವುದು ಹಣ್ಣಲ್ಲ,ಹಾವಿನ ಮರಿಗಳು! ಮಕ್ಕಳಂತೆ ಅವನ್ನು ಎದೆಗೆ ಹತ್ತಿಸಿ ಕಡಿಸಿ ಕೊಂಡು 'ಬಂದೆ, ಆ್ಯಂಟನಿ' ಎನ್ನುತ್ತ ಪ್ರಾಣಬಿಡುತ್ತಾಳೆ (ಪುಟ 224). ಎಲ್ಲವನ್ನೂ ಗೆದ್ದ ಆಕ್ಟೇವಿಯಸನಿಗೆ ಇತಿಹಾಸವಿರುವವರೆಗೂ ಒಂದು ಮಾತ್ರ ಸೋಲುಳಿಯುತ್ತದೆ— ಕ್ಲಿಯೊಪಾಟ್ರ ಅವನಿಗೆ ಅಧೀನಳಾಗಲಿಲ್ಲ! ಅವಳನ್ನು ಮೆಚ್ಚಿಕೊಂಡ ಅವನು ಆ್ಯಂಟನಿ ಕ್ಲಿಯೊಪಾಟ್ರರ ಸಂಸ್ಕಾರ ಒಂದೇ ಸಮಾಧಿಯಲ್ಲಾಗುವಂತೆ ಏರ್ಪಡಿಸುತ್ತಾನೆ.

## 23. ಕೊರಿಯೊಲೇನಸ್

**ರಚನೆ:** 1607-8. **ಮೊದಲ ಪ್ರಕಟನೆ:** 1623.

**ಆಕರ:** ಉಳಿದೆರಡು ರೋಮನ್ ನಾಟಕಗಳಾದ 'ಜೂಲಿಯಸ್ ಸೀಸರ್' ಮತ್ತು 'ಆ್ಯಂಟನಿ ಅಂಡ್ ಕ್ಲಿಯೊಪಾಟ್ರ'ಗಳಂತೆಯೇ ಇದಕ್ಕೂ ಪ್ಲೂಟಾರ್ಕನ 'ಪ್ಯಾರಲಲ್



**ದಂಗೆಯೆದ್ದ ಸಾಮಾನ್ಯರನ್ನು ಮೆನಿನಿಯಸ್ ಅಗ್ರಿಪ್ಪ ಸಮಾಧಾನಪಡಿಸುತ್ತಿದ್ದಾನೆ.**

ಲೈವ್ಸ್' ಆಕರ; ಸರ್ ಥಾಮಸ್ ನಾರ್ತ್ ಮಾಡಿದ ಅದರಲ್ಲಿನ 'ಲೈಫ್ ಆಫ್ ಕೊರಿಯೊ ಲೇನಸ್'ನ ಇಂಗ್ಲಿಷ್ ಭಾಷಾಂತರದ ಮೇಲೆ ನಾಟಕ ನೇರವಾಗಿ ಆಧಾರಿತವಾಗಿದೆ.

**ಕಥೆ:** ದೇಶಸೇವೆಗೆ ನಿಂತವನಲ್ಲಿ ಏನೇ ಉದಾತ್ತ ಗುಣವಿರಲಿ ಬಿಡಲಿ, ಒಂದಂತೂ ಅವಶ್ಯಕ. ಜನರನ್ನು ಮರುಳುಮಾಡಿ ಒಲಿಸಿಕೊಳ್ಳುವ ಕಲೆ ಅವನಿಗೆ ಅಗತ್ಯವಾಗಿ ತಿಳಿದಿರಬೇಕು. ಇಲ್ಲದಿದ್ದರೆ ಅವನು ಉಳಿಯಲಾರ — ಕಟುವ್ಯಂಗ್ಯವಾದರೂ ರಾಜ ಕಾರಣದ ಈ ನಿತ್ಯಸತ್ಯವನ್ನು ಕೊರಿಯೊಲೇನಸನ ದುರಂತದ ಮೂಲಕ ನಾಟಕ ಎತ್ತಿ ತೋರಿಸುತ್ತದೆ. ಕಂಡಂತೆಯೇ ಪ್ರಜಾತಂತ್ರಕ್ಕೊಳಪಟ್ಟ ಆಧುನಿಕ ಜಗತ್ತಿಗೆ ನಾಟಕ ಅರ್ಥಪೂರ್ಣ. 'ಜೂಲಿಯಸ್ ಸೀಸರ್'ನಂತೆ ಇಲ್ಲಿಯೂ ಜನತೆಯ ಮೂಢಬುದ್ಧಿಯ ಪರಿಣಾಮಕಾರಿಯಾದ ಚಿತ್ರಣವಿದೆ. ತಾಯ್ನಾಡನ್ನೇ ಸುಡಲು ಹೊರಟ ಕೊರಿಯೊ ಲೇನಸ್ ಮನುಷ್ಯರೂಪ ತಳೆದು ಬಂದ ಛಲಮಾರಿ. ಒಮ್ಮೆಲೇ ಅವನು ನಮಗೆ ಪ್ರಿಯ, ಅಪ್ರಿಯ. ನಾಟಕ ಮಾತಿನ ಬಿಗಿಗೆ, ಬಂಧದ ಐಕ್ಯಕ್ಕೆ, ಒಟ್ಟಿನ ಓಟಕ್ಕೆ ಹೆಸರಾಗಿದೆ.

ಪ್ರಾಚೀನ ರೋಮಿನ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರೀಮಂತರು (ಪೆಟ್ರಿಷನ್ಸ್) ಮತ್ತು ಸಾಮಾನ್ಯರು (ಪ್ಲಿಬೀಯನ್ಸ್) ಎಂಬ ಎರಡು ವರ್ಗಗಳು. ರಾಜ್ಯಸೂತ್ರವಿರುವುದು ಶ್ರೀಮಂತರ ಕೈಯಲ್ಲಿ, ದೇಶದ ಶಾಸಕರು ಅವರೇ. ಅವರ ಹಾಗೂ ಸಾಮಾನ್ಯರ ನಡುವೆ ಒಳಜಗಳ ಕಾಲಿಟ್ಟಿದೆ. ಈ ರಾಜಕೀಯ ಹಿನ್ನೆಲೆಯಲ್ಲಿ ನಾಟಕ ಶುರುವಾಗುತ್ತದೆ.

ರೋಮ್ ಸಾಮ್ರಾಜ್ಯವನ್ನು ಕ್ಷಾಮ ಕಾಡುತ್ತಿದೆ. ಕಾಳೆಲ್ಲವೂ ಶ್ರೀಮಂತರ ಕಣಜ ಗಳಲ್ಲಿ; ಸಾಮಾನ್ಯರ ಹೊಟ್ಟೆಗೆ ಕೂಳಿಲ್ಲ. ಒಂದರ ಹಿಂದೊಂದರಂತೆ ಹಲವಾರು ಯುದ್ಧ ಗಳನ್ನು ಎದುರಿಸಿ, ಅದರ ದುಷ್ಪರಿಣಾಮಗಳಿಗೆ ಬೇಸತ್ತು ಕೆರಳಿದ ಸಾಮಾನ್ಯರು ಕೈಯಲ್ಲಿ ಮಚ್ಚು ದೊಣ್ಣೆ ಹಿಡಿದು ದಂಗೆಯೆದ್ದಿದ್ದಾರೆ. ಅವರ ಮೊದಲ ಕಣ್ಣೇಟು ರೋಮಿನ ತರುಣ

ವೀರ ಕಯಸ್ ಮಾರ್ಷಸನ ಮೇಲೆ. ಅವರ ಗೋಳಿನ ಗಾಯಕ್ಕೆ ಉಪ್ಪು ಹಚ್ಚಿದಂತೆ ಅವನು ಅವರನ್ನು ತುಚ್ಛವಾಗಿ ಕಾಣುವುದೇ ಇದಕ್ಕೆ ಕಾರಣ. ಮಾರ್ಷಸ್ ಘನವಂತ, ವಯಸ್ಸಿನಲ್ಲಿ ಚಿಕ್ಕವನಾದರೂ ಮಹಾಪರಾಕ್ರಮಿ, ರಣವೀರ. ಆದರೆ ಅವನಲ್ಲಿ ಒಂದೇ ಕುಂದು — ಜನರನ್ನು ಒಲಿಸಿಕೊಳ್ಳುವ ಚಾಕಚಕ್ಯತೆಯಿಲ್ಲ. ಗರ್ವವೋ ಎನಿಸಿಕೊಳ್ಳು ವಷ್ಟರ ಮಟ್ಟಿನ ಸ್ವಾಭಿಮಾನ ಅವನದು. ಸಾಮಾನ್ಯರನ್ನು ಕಂಡರೆ ಅವನಿಗೆ ತಿರಸ್ಕಾರ, ದ್ವೇಷ. ಅವನ ಕಣ್ಣಲ್ಲಿ ಆ ಜನ 'ಚಿತ್ತ ಸ್ಥಿರವಿಲ್ಲದ ಗಬ್ಬು ಬೀರುವ ಮಂದೆ'!

ಶಾಸಕ ಮೆನಿನಿಯಸ್ ಅಗ್ರಿಪ್ಪ ಮಾರ್ಷಸನ ಕೆಲವೇ ಅಂತರಂಗವರ್ತಿಗಳಲ್ಲೊಬ್ಬ. ಆತ ವೃದ್ಧ ವಿವೇಕಿ, ಸರಸಿ, ಮಾತಿನಲ್ಲಿ ಚತುರ. ಅವನು ದಂಗೆಯೆದ್ದ ಜನತೆಯನ್ನು ಎದುರಿಸಿ, ದೇಶದ ದುರ್ಭಿಕ್ಷಕ್ಕೆ ಶಾಸಕರು ಕಾರಣರಲ್ಲವೆಂದೂ ಅದು ದೈವೇಚ್ಛೆಯೆಂದೂ ಅವರನ್ನು ಸಮಾಧಾನಗೊಳಿಸಲು ಪ್ರಯತ್ನಿಸುತ್ತಾನೆ.

ದಂಗೆಯೆದ್ದ ಸಾಮಾನ್ಯರ ಕಣ್ಣೊರೆಸಲೋ ಎಂಬಂತೆ ಶಾಸಕವರ್ಗ ಅವರಿಗೆ ತಮ್ಮ ಪರವಾಗಿ ಇಬ್ಬರು ಪ್ರತಿನಿಧಿಗಳನ್ನು ಆರಿಸಿ, ಅವರ ಮುಖಾಂತರ ಹಿತರಕ್ಷಣೆ ಸಾಧಿಸಿ ಕೊಳ್ಳುವ ಅಧಿಕಾರ ಕೊಡುತ್ತದೆ. ಇದು ಮಾರ್ಷಸನಿಗೆ ಹಿಡಿಸದು. ಅವನು ದೊಂಬಿ ಯನ್ನು ಕಂಡು ರೇಗಿ ಹೀನಾಯವಾಗಿ ಬಯ್ದು, ಇದ್ದಿದ್ದೂ ಅವರ ವೈರ ಬೆಳಸಿಕೊಳ್ಳುತ್ತಾನೆ.

ಇದೇ ಸಮಯಕ್ಕೆ ನೆರೆನಾಡಾದ ಆ್ಯಂಟಿಯಮ್ಮಿನ ವೋಲ್ಸ್‌ಕಿಗಳು ರೋಮಿನ ಮೇಲೆ ದಂಡೆತ್ತಿ ಬಂದಿದ್ದಾರೆಂಬ ಸುದ್ದಿ ಬರುತ್ತದೆ. ಅವರನ್ನು ಎದುರಿಸಿ ರೋಮಿನ ರಕ್ಷಣೆ ಮಾಡಲು ಶಾಸಕರು ಮಾರ್ಷಸನನ್ನು ಕಳಿಸಿಕೊಡುತ್ತಾರೆ. ಮಾರ್ಷಸನಿಗೆ ಇಂತಹ ಅವ ಕಾಶವೆಂದರೆ ತುಂಬ ಪ್ರಿಯ. ವೋಲ್ಸ್‌ಕಿಗಳ ಸೇನಾಪತಿಯಾದ ತುಲಸ್ ಆಫಿಡಿಯಸನೂ ಅವನೂ ಖಾಸಾ ವೈರಿಗಳು. ಒಬ್ಬನ ಪರಾಕ್ರಮವನ್ನು ಕಂಡು ಇನ್ನೊಬ್ಬನಿಗೆ ಕಣ್ಣುರಿ, ಒಬ್ಬ ಇನ್ನೊಬ್ಬನ ಸದೆಬಡಿಯಲು ಸಮಯ ಕಾಯುತ್ತಿದ್ದಾನೆ. ವೋಲ್ಸ್‌ಕಿಗಳ ದಾಳಿ ಯಿಂದಾಗಿ ಮಾರ್ಷಸನ ಬಯಕೆ ಈಡೇರಿದಂತಾಗುತ್ತದೆ.

ಎರಡು ರಾಜ್ಯಗಳ ನಡುವೆ ಘೋರ ಕದನವಾಗುತ್ತದೆ. ರೋಮನರು ವೋಲ್ಸ್‌ಕಿ ಗಳ ರಾಜಧಾನಿಯಾದ ಕೊರಿಯೋಲಿಗೆ ಮುತ್ತಿಗೆ ಹಾಕುತ್ತಾರೆ. ಮೊದಮೊದಲು ರೋಮನರಿಗೆ ಸೋಲಾಗಿ, ಅವರು ಹಿಮ್ಮೆಟ್ಟಬೇಕಾಗುತ್ತದೆ. ಆದರೆ ವೀರ ಮಾರ್ಷಸ್ ತನ್ನ ಪುಕ್ಕಲ ಪಡೆಯನ್ನು ಬಾಯಿ ತುಂಬ ಶಪಿಸಿ, ಎದುರಾಳಿಗಳನ್ನು ಅವರ ಕೊರಿ ಯೋಲಿಯ ಹೆಬ್ಬಾಗಿಲಿನ ಮೂಲಕವೇ ಬೆನ್ನಟ್ಟಿ ಹೋಗಿ ಏಕಾಕಿಯಾಗಿ ಕಾದುತ್ತಾನೆ. ಅವನ ಸಾಹಸದಿಂದ ಸ್ಫೂರ್ತಿಗೊಂಡ ರೋಮಿನ ಪಡೆ ಅವನನ್ನು ಹಿಂಬಾಲಿಸಿ ಶತ್ರುನಗರ ವನ್ನು ವಶಮಾಡಿಕೊಳ್ಳುತ್ತದೆ. ಆ ಹುರುಪಿನಲ್ಲಿ ಸೈನಿಕರು ಮಾರ್ಷಸನಿಗೆ ವಿಜಯಮಾಲೆ ಹಾಕಿ 'ಕೊರಿಯೊಲೇನಸ್' ಎಂಬ ಬಿರುದಿತ್ತು ಗೌರವಿಸುತ್ತಾರೆ.

ಮಾರ್ಷಸ್ ರೋಮಿನ ಕಣ್ಣಾಗಿ ಊರಿಗೆ ಹಿಂದಿರುಗುತ್ತಾನೆ. ಮಾರ್ಷಸನ ತಾಯಿ ವಾಲಮ್ನಿಯಾ ಹುಲಿಯನ್ನು ಹೆತ್ತು ಅದಕ್ಕೆ ವೀರದ ಹಾಲೂಡಿಸಿದ ತಾಯಿಹುಲಿ! ಮಗನ ಉಳಿವು-ಗೆಲವುಗಳ ಪ್ರಶ್ನೆ ಎದ್ದಾಗ ಅವಳು ಬೇಡಿದ್ದುದು ಅವನ ಗೆಲುವನ್ನು! ಈಗ ಅವಳಿಗೆ ಮೇರೆಮೀರಿಯದ ಹಿಗ್ಗು. ಮಹತ್ವಾಕಾಂಕ್ಷಿಯಾದ ಅವಳಲ್ಲಿ ಸ್ವತಃ ಕೊರಿಯೊ ಲೇನಸ್‌ನಲ್ಲೇ ಇಲ್ಲದ ಹಿರಿಯ ರಾಜಕೀಯ ಆಶೋತ್ತರಗಳು ಗರಿಗೆದರಿವೆ. ಮಗ ಮಹಾ



**ವಿಜಯಿಯಾಗಿ ರೋಮಿಗೆ ಹಿಂದಿರುಗಿದ ಕೊರಿಯೊಲೇನಸನನ್ನು ಹೆಂಡತಿ ವರ್ಜಿಲಿಯಾ ಮತ್ತು ತಾಯಿ ವಾಲಮ್ನಿಯಾ ಎದುರುಗೊಳ್ಳುತ್ತಿದ್ದಾರೆ.**

ಯೋಧನಾದರೆ ಸಾಕೆ? ರಾಜ್ಯಾಡಳಿತ ನಡಸುವ ದಂಡಾಧಿಕಾರಿ (ಕನ್ಸಲ್) ಆಗಬೇಡವೆ?

ಮಾರ್ಷಸನ ಅಸೀಮ ದೇಶಸೇವೆಗೆ ಮೆಚ್ಚಿದ ಶಾಸಕರು ಅವನನ್ನು ದಂಡಾಧಿಕಾರಿಯ ಪಟ್ಟಕ್ಕೆ ಉಮೇದುವಾರನನ್ನಾಗಿ ನಿಲ್ಲಿಸುತ್ತಾರೆ. ಹಾಗೆ ಉಮೇದುವಾರಿಕೆ ಪಡೆದವರು ಸಾಮಾನ್ಯರ ಮತ ಪಡೆದು ಗೆಲ್ಲಬೇಕು. ಅದಕ್ಕೆ ನಗರಚೌಕದಲ್ಲಿ 'ವಿನಯ ವಸ್ತ್ರ' ತೊಟ್ಟು ನಿಂತು, ಯುದ್ಧದಲ್ಲಿ ಸಂದ ಗಾಯಗಳನ್ನು ಜನಕ್ಕೆ ಪ್ರದರ್ಶಿಸಿ ಮತಕ್ಕೆ ಕೈ ಒಡ್ಡಬೇಕು. ಸ್ವಾಭಿಮಾನಿಯಾದ ಮಾರ್ಷಸನಿಗೆ ಇದು ಅಗೌರವದ ಸಂಗತಿ. ಆದರೂ ಆತ್ಮೀಯರ ಒತ್ತಾಯಕ್ಕೆ ಕಿವಿಗೊಟ್ಟು ಆ ನೇಮದ ಕರ್ಮವನ್ನು ಹೇಗೋ ಮಾಡಿ ಮುಗಿಸುತ್ತಾನೆ. ಸಾಮಾನ್ಯರನ್ನು ಅಣಕಿಸಿಯೇ ಅವರ ಮತ ಗೆಲ್ಲುತ್ತಾನೆ.

ಸಾಮಾನ್ಯರ ಪ್ರತಿನಿಧಿಗಳಾಗಿ ಆರಿಸಿ ಬಂದ ಸಿಸಿನಿಯಸ್, ಬ್ರೂಟಸರು ವಿಷಸರ್ಪಗಳು. ಕೊರಿಯೊಲೇನಸನನ್ನು ಹೇಗಾದರೂ ಮಟ್ಟಹಾಕಿಯೇ ತೀರುವೆವೆಂಬುದು ಅವರು ತೊಟ್ಟ ಪಣ. ಅವನಂತಹ ಜನತಾದ್ರೋಹಿ ದಂಡಾಧಿಕಾರಿಯಾದರೆ ಸಾಮಾನ್ಯರ ಸ್ವಾತಂತ್ರ್ಯ ಮೊಟಕಾಗಿ, ಹಕ್ಕುಬಾಧ್ಯತೆಗಳಿಗೆ ಚ್ಯುತಿ ಬರುವುದೆಂದೂ ಕೊಟ್ಟ ಮತವನ್ನು ಹಿಂದೆ ಪಡೆದು ಕೊರಿಯೊಲೇನಸನ ಆಯ್ಕೆಯನ್ನು ರದ್ದುಮಾಡಬೇಕೆಂದೂ ಜನತೆಯನ್ನು ಎತ್ತಿಕಟ್ಟುತ್ತಾರೆ. ಸ್ವತಂತ್ರವಿಚಾರಶಕ್ತಿಯಿಲ್ಲದ ಮೂರ್ಖಜನ ಅವರ ಮಾತಿಗೆ ಸೊಪ್ಪುಹಾಕುತ್ತಾರೆ.

ಪ್ರಜಾಪ್ರತಿನಿಧಿಗಳಿಗೂ ಕೊರಿಯೊಲೇನಸನಿಗೂ ಮುಖಾಮುಖಿಯಾಗುತ್ತದೆ. ಅವರು

ಅವನನ್ನು ವಿದ್ರೋಹಿಯೆಂದು ಕರೆಯುತ್ತಾರೆ. ಆ ಜನ ಅಡುಗೆಮನೆಯಲ್ಲಿ ಅಡಗಿ ಕುಳಿತಿದ್ದಾಗ, ರಕ್ತ ಸುರಿಸಿ ರೋಮಿಗೆ ವಿಜಯ ತಂದ ವೀರನಿಗೆ ದೊರೆತ ಕೃತಜ್ಞತೆಯ ಬಳುವಳಿ ಅದು! ಕೊರಿಯೊಲೇನಸ್ ಆ ಮಾತಿಗೆ ಉರಿದೆದ್ದು ಅವರನ್ನೂ ಅವರ ಕುರಿ ಹಿಂಡನ್ನೂ ಬಯ್ಯುತ್ತಾನೆ. ಪ್ರಜಾಪ್ರತಿನಿಧಿಗಳಿಗೆ ನ್ಯಾಯಾಧಿಕಾರವೂ ಇದೆ. ಅವರು ಅವನ ತಪ್ಪಿಗೆ ಮರಣದಂಡನೆಯಾಗಬೇಕೆನ್ನುತ್ತಾರೆ. ಜನತೆ ರೇಗಿಬಿದ್ದು ಅವನನ್ನು ಹರಿದು ಚೂರುಮಾಡುವುದರಲ್ಲಿದೆ. ಆಗ ವಿವೇಕಿ ಮೆನಿನಿಯಸ್ ಅಡ್ಡ ಬಂದು, ಕೊರಿಯೊಲೇನಸ್ ತನ್ನ ತಪ್ಪನ್ನು ತಿದ್ದುಕೊಳ್ಳುವಂತೆ ಮಾಡುವ ಜವಾಬ್ದಾರಿ ಹೊತ್ತು ಜನರನ್ನು ಸಮಾಧಾನಗೊಳಿಸುತ್ತಾನೆ. ಆದರೆ ಕೊರಿಯೊಲೇನಸ್ ಮೊಂಡ. ಸಾಮಾನ್ಯರೊಡನೆ ನಯವಾಗಿ ಮಾತಾಡಿ ಅವರನ್ನು ಒಲಿಸಿಕೊಳ್ಳುವಂತೆ ಯಾರು ಎಷ್ಟೇ ಗೋಗರೆದರೂ ಅವನು ಒಪ್ಪ. ತಾಯಿ ವಾಲಮ್ನಿಯಾ ವಾದ ಹೂಡುತ್ತಾಳೆ. ಅವಳಿಗೆ ಸಹ ಮೊದ ಮೊದಲು ಅದೇ ಉತ್ತರ. ಆದರೆ ಕೊನೆಯಲ್ಲಿ ಗೆಲವು ತಾಯಿಗೇ! ಕೊರಿಯೊಲೇನಸ್ ಜನರ ಮುಂದೆ ವಿನಮ್ರನಾಗಿ ಬಂದು ನಿಲ್ಲುತ್ತಾನೆ. ಎಲ್ಲವೂ ಶಾಂತವಾಗಿಯೇ ಮೊದಲಾಗುತ್ತದೆ. ಆದರೆ ಮತ್ತೆ ಅದೇ ಹಗರಣ. ಪ್ರಜಾಪ್ರತಿನಿಧಿಗಳು ಅವನ ಮೇಲೆ ಮತ್ತೊಮ್ಮೆ ಜನತಾ ದ್ವೇಷದ ಆರೋಪ ಹೊರಿಸಿ ವಿದ್ರೋಹಿಯೆನ್ನುತ್ತಾರೆ. ಅವನನ್ನು ಕೆರಳಿಸುವುದು ಮತ್ತೆ ಅದೇ ಪದ—'ವಿದ್ರೋಹಿ'. ಅವನು ಅವರನ್ನು ಮತ್ತೆ ತುಚ್ಛವಾಗಿ ಬಯ್ಯುತ್ತಾನೆ. ಜನತೆ ಅವನಿಗೆ ಗಡೀಪಾರಿನ ಶಿಕ್ಷೆ ವಿಧಿಸುತ್ತದೆ. 'ನೀವೂ ನನ್ನ ಪಾಲಿಗೆ ಗಡೀಪಾರೇ, ಇಂದಿನ ಅಕೃತ್ಯಕ್ಕೆ ತಕ್ಕ ಪ್ರತಿಫಲ ಪಡೆಯುವಿರಿ' ಎಂದು ರೋಮನ್ನು ಬಿಟ್ಟು ಹೊರಡುತ್ತಾನೆ.

ದೇಶಭ್ರಷ್ಟನಾದ ಕೊರಿಯೊಲೇನಸ್ ತನ್ನ ಕುಟುಂಬದ ಹಾಗೂ ಮಿತ್ರವರ್ಗದ ಬೀಳ್ಕೊಡುಗೆ ಪಡೆದು ಸಾಮಾನ್ಯನಂತೆ ವೇಷಧರಿಸಿ ಶತ್ರುರಾಜ್ಯವಾದ ಆ್ಯಂಟಿಯಮ್ಮಿಗೆ ಬರುತ್ತಾನೆ. ರೋಮಿನ ಮೇಲೆ ಹಳೆಯ ಹಗೆ ತೀರಿಸಿಕೊಳ್ಳಲು ಅಲ್ಲಿ ವೈರಿ ಆಫಿಡಿಯಸ್ ಹೊಸ ಸೈನ್ಯ ಕಟ್ಟುವುದರಲ್ಲಿ ಉದ್ಯುಕ್ತನಾಗಿದ್ದಾನೆ. ಕೊರಿಯೊಲೇನಸ್ ಗಂಡು ಹುಲಿ. ಎಳ್ಳಷ್ಟೂ ಜೀವಭಯವಿಲ್ಲದೆ ಆಫಿಡಿಯಸನ ಬಿಡಾರಕ್ಕೆ ನುಗ್ಗಿ, ವೈರಿಯ ಮುಂದೆ ನಿಂತು, ತನ್ನ ಜನ ತನಗೆ ಉಣಬಡಿಸಿದ ಕೃತಘ್ನತೆಯ ಪ್ರತಿಫಲವನ್ನು ಬಣ್ಣಿಸುತ್ತಾನೆ. ವೋಲ್ಸ್‌ಕಿಗಳೊಡನೆ ಕೈಗೂಡಿಸಿ ರೋಮಿನ ಮೇಲೆಯೇ ಹಗೆ ತೀರಿಸಿಕೊಳ್ಳುವ ಆತುರ ತೋರಿಸುತ್ತಾನೆ! ಆಫಿಡಿಯಸ್ ಕುತಂತ್ರಿ. ಅವನಿಗೆ ತನ್ನ ಸ್ವಾರ್ಥ ಸಾಧಿಸಿಕೊಳ್ಳಲು ಇದಕ್ಕಿಂತ ಒಳ್ಳೆಯ ಅವಕಾಶ ಬೇಕೆ? ಕೊರಿಯೊಲೇನಸ್ ನೀಡಿದ ಸ್ನೇಹದ ಕೈಕುಲುಕಿ, ಅವನೊಡನೆ ರೋಮಿನ ಮೇಲೆ ದಾಳಿಯಿಕ್ಕಲು ಒಪ್ಪಿ, ಸೇನಾಧಿಕಾರದಲ್ಲಿ ಅವನಿಗೆ ಸಮಾನ ಸ್ಥಾನ ಕೊಡುತ್ತಾನೆ. ಇಬ್ಬರೂ ಸೈನ್ಯ ನಡಸಿ ರೋಮಿನತ್ತ ನುಗ್ಗುತ್ತಾರೆ. ಈ ದಂಡಯಾತ್ರೆಯಲ್ಲಿ ಸಹ ವೈಯಕ್ತಿಕವಾಗಿ ಕೊರಿಯೊಲೇನಸನಿಗೇ ಯಶಸ್ಸು. ಅವನು ವೋಲ್ಸ್‌ಕಿಗಳ ಸೈನ್ಯದಲ್ಲೂ ಅಚ್ಚುಮೆಚ್ಚು. ಅವನ ಮುಂದೆ ಆಫಿಡಿಯಸ್ ಗ್ರಹಣ ಹಿಡಿದ ಚಂದ್ರ. ಅವನ ಕೆಚ್ಚು, ಜನಪ್ರಿಯತೆಗಳನ್ನು ಕಂಡು ಆಫಿಡಿಯಸ್ ಒಳಗೊಳಗೇ ಕಿಡಿ ಕಾರುತ್ತಾನೆ. ಆದರೆ ಸೇಡಿಗೆ ಕಾಲ ಇನ್ನೂ ಪಕ್ವವಾಗಿಲ್ಲ!

ದಾಳಿಯ ಸುದ್ದಿ ಕೇಳಿ ರೋಮನರ ಜಂಘಾಬಲ ಉಡುಗುತ್ತದೆ, ಕೊರಿಯೊಲೇನಸನ ಕ್ರೋಧಾಗ್ನಿಗೆ ಸಿಕ್ಕು ತಮ್ಮ ನಾಡು ಬದುಕಿ ಉಳಿಯಲಾರದೆಂದು ಅವರು ಬಲ್ಲರು. ಈ

ದುರವಸ್ಥೆಗೆಳೆದ ತನ್ನ ಮುಖಂಡರ ಮೇಲೆಯೇ ಜನತೆ ತಿರುಗಿಬೀಳುತ್ತದೆ. ಶತ್ರು-ಸೈನ್ಯ ಕೊರಿಯೊಲೇನಸನ ಸೇನಾಧಿಪತ್ಯದಲ್ಲಿ ರೋಮಿನ ಹೆಬ್ಬಾಗಿಲ ಬಳಿ ಬಂದಾಗ ಅವನ ಒಂದು ಕಾಲದ ಆತ್ಮೀಯರಾದ ಕಮಿನಿಯಸ್ ಮತ್ತು ಮೆನಿನಿಯಸರು ಅವನಿಗೆ ರೋಮಿನ ಪರವಾಗಿ ಮೊರೆಯಿಟ್ಟು ಶಾಂತಿ ಸಾಧಿಸಿ ಬರಲು ಹೋಗುತ್ತಾರೆ. ಆದರೆ ಕೊರಿಯೊಲೇನಸ್ ಅವರಿಗೆ ಕಿವಿಗೊಡಲು ಸಹ ಸಿದ್ಧನಿಲ್ಲ. ರೋಮನರ ಕೊನೆಯ ಕೈಪಟ್ಟೆಂದರೆ ಕೊರಿಯೊಲೇನಸನ ತಾಯಿ ಮತ್ತು ಹೆಂಡತಿ. ವಾಲಮ್ನಿಯಾ ಸೊಸೆ ವರ್ಜಿಲಿಯಾ ಮತ್ತು ಮೊಮ್ಮಗ ನೊಡನೆ ಹೋಗಿ ಮಗನನ್ನು ಕಾಣುತ್ತಾಳೆ, ರೋಮನ್ನು ಉಳಿಸಿ ಕಾಪಾಡುವಂತೆ ಬಗೆ ಬಗೆಯಾಗಿ ಬೇಡುತ್ತಾಳೆ. ತಾಯಿಯ ಪ್ರೀತಿ, ಹೆಂಡತಿಯ ಪ್ರೇಮ, ಮಗನ ಮುದ್ದು ಮಾತು — ಇವು ಯಾವದರಿಂದಲೂ ಕೊರಿಯೊಲೇನಸನ ಮನ ಕರಗದು; ಛಲ ಹರಿಯದು. ಮಗನ ರಕ್ತದಲ್ಲಿ ಆ ಛಲದ ಬೀಜವನ್ನು ಬಿತ್ತಿದ ತಾಯಿ ಬಿಟ್ಟಾಳೆ? ದೀರ್ಘ ಕಾಲ ವಾದಮಾಡಿ, ಬುದ್ಧಿತರ್ಕಗಳೆಲ್ಲವನ್ನೂ ಪ್ರಯೋಗಿಸಿ ಸಫಲವಾಗದೆ ಕೊನೆಗೆ ಭಾವನೆಯ ಬ್ರಹ್ಮಾಸ್ತ್ರವನ್ನು ಹೊರದೆಗೆಯುತ್ತಾಳೆ. ಸೊಸೆ ಮೊಮ್ಮಗನ ಜೊತೆಗೂಡಿ ಆ ಹಟವಾದಿಯ ಕಾಲಿಗೆರಗುತ್ತಾಳೆ! ತಾಯಿಯೇ ಮಗನ ಕಾಲಿಗೆ ಬೀಳುತ್ತಿರುವ ಅಸ್ವಾಭಾವಿಕ ದೃಶ್ಯ! ಯಾವ ಮಗ ತಾನೇ ಅದಕ್ಕೆ ಸೋಲದೆ ಇದ್ದಾನು? ಇಡೀ ರೋಮಿಗೆ ಸಾಧಿಸಲಸಾಧ್ಯವಾದ ಸಂಧಿ ವಾಲಮ್ನಿಯಾಳಿಗೆ ಸಾಧಿಸುತ್ತದೆ. ಅಫಿಡಿಯಸ್ ಸಮ್ಮತಿಸಿದ್ದಾದರೆ ಸೈನ್ಯವನ್ನು ಹಿಂದೆಗೆದುಕೊಳ್ಳಲು ಮಾರ್ಷಸ್ ಒಪ್ಪುತ್ತಾನೆ. ಅಫಿಡಿಯಸ್ ಕಪಟಿ, ಅದಕ್ಕೆ ಒಪ್ಪುವುದರಲ್ಲೇ ಅವನ ಗೆಲವು ಅಡಗಿದೆ!

ಕೊರಿಯೋಲಿಗೆ ಹಿಂದಿರುಗಿದ ನಂತರ ಅಫಿಡಿಯಸ್ ಬಣ್ಣ ಬದಲಾಯಿಸುತ್ತಾನೆ. ಅಲ್ಲಿನ ಶಾಸಕರ ಮುಂದೆ ಕೊರಿಯೊಲೇನಸನನ್ನು ಹೆಣ್ಣಿನ ಕಣ್ಣೀರಿಗೆ ಕರಗಿದ ಮಗುವೆಂದು ಅಣಕಿಸುತ್ತಾನೆ; ದ್ರೋಹಿಯೆಂದು ಹೀಯಾಳಿಸುತ್ತಾನೆ. ಮತ್ತೆ ಅದೇ ದ್ರೋಹದ ಮಾತು! ಕೊರಿಯೊಲೇನಸನ ಉದಾತ್ತತೆ ಆ ಸಲ್ಲದ ಆರೋಪವನ್ನು ಹೇಗೆ ತಾನೆ ಸಹಿಸೀತು? ಕೋಪ ಕೆರಳುತ್ತದೆ. ಅವನದು ಕಪಟತಂತ್ರಗಳನ್ನರಿಯದ ಜೀವ. ಹಿಂದೆ ಕೊರಿಯೋಲಿಯ ಮುತ್ತಿಗೆಯಲ್ಲಿ ತಾನು ರಣಹದ್ದಾಗಿ ಬಂದೆರಗಿದಾಗ ವೋಲ್ಸ್‌ಕಿಗಳು ಪಾರಿವಾಳಗಳಂತೆ ಬೆದರಿ ಚದುರಿ ಹೋದುದನ್ನು ಆ ಜನಕ್ಕೆ ನೆನಪು ಮಾಡಿಕೊಡುತ್ತಾನೆ. ಗದ್ದಲವೇಳುತ್ತದೆ ಮೊದಲೇ ಸಂಚುಮಾಡಿದ್ದಂತೆ ಅಫಿಡಿಯಸನೂ ಅವನ ಜತೆಗಾರರೂ ಕೊರಿಯೊಲೇನಸನ ಮೇಲೆ ಬಿದ್ದು ಅವನನ್ನು ಮೋಸದಿಂದ ಕೊಲ್ಲುತ್ತಾರೆ.

ಗದ್ದಲ ತಿಳಿದು ಶಾಂತಿ ಏರ್ಪಟ್ಟ ಮೇಲೆ ಅಫಿಡಿಯಸನಿಗೆ ತಾನು ಮಾಡಿದುದು ತಪ್ಪೆನಿಸುತ್ತದೆ. ಪಶ್ಚಾತ್ತಾಪ ವ್ಯಕ್ತಮಾಡುತ್ತಾನೆ. ವೋಲ್ಸ್‌ಕಿಗಳು ಕೊರಿಯೊಲೇನಸನ ಘನತೆ, ಪರಾಕ್ರಮಗಳಿಗೆ ಒಪ್ಪುವಂತೆ ಅವನ ಅಂತ್ಯಕ್ರಿಯೆ ನಡಸುತ್ತಾರೆ.

## 24. ಪೆರಿಕ್ಲಿಸ್, ಪ್ರಿನ್ಸ್ ಆಫ್ ಟೈರ್

**ರಚನೆ:** 1608-9. **ಮೊದಲ ಪ್ರಕಟನೆ:** 1609.

**ಆಕರ:** ಚಾಸರನ ಸಮಕಾಲೀನನಾಗಿದ್ದ ಜಾನ್ ಗೋಯರನ 'ಕನ್ಫೆಷಿಯೊ ಎಮ್ಯಾಂಟಿಸ್'

ಎಂಬ ಇಂಗ್ಲಿಷ್ ಕಾವ್ಯದಲ್ಲಿನ 'ಅಪೊಲೋನಿಯಸ್ ಆಫ್ ಟೈರ್' ಎಂಬ ಕಥೆ ಹಾಗೂ ಮುಂದೆ ಲಾರೆನ್ಸ್ ಟ್ವೈನ್ ಮಾಡಿದ ಅದರದೇ ಗದ್ಯ ರೂಪಾಂತರ, 'ದಿ ಪ್ಯಾಟರ್ನ್ ಆಫ್ ಪೇನ್‌ಫುಲ್ ಅಡ್ವೆಂಚರ್ಸ್'. ಷೇಕ್ಸ್ಪಿಯರ್ ಫಿಲಿಪ್ ಸಿಡ್ನಿಯ 'ಆರ್ಕೇಡಿಯಾ' ಕಾವ್ಯದಲ್ಲಿ ಬರುವ 'ಪೈರೊಕ್ಲಿಸ್' ಹೆಸರಿನಿಂದ ಸ್ಫೂರ್ತಿಗೊಂಡು, ನಾಯಕನ ಹೆಸರನ್ನು 'ಅಪೊಲೋನಿಯಸ್'ನಿಂದ 'ಪೆರಿಕ್ಲಿಸ್'ಗೆ ಮಾರ್ಪಡಿಸಿರಬಹುದೆಂದು ಊಹೆ.

**ಕಥೆ:** ಈ ಕೃತಿಯೊಂದಿಗೆ ಷೇಕ್ಸ್ಪಿಯರನ ನಾಟಕರಚನಾಕಲೆಯಲ್ಲಿ ಕೊನೆಯ ದಾದ ಇನ್ನೊಂದು ಹೊಸ ಮಜಲು — 'ರೊಮಾನ್ಸ್'ನದು, 'ಟ್ರ್ಯಾಜಿ-ಕಾಮಿಡಿ'ಯದು — ಆರಂಭವಾಗುತ್ತದೆ. ಕಿನ್ನರ ಕಥೆಗಳಂತೆ ಅಸಂಭವನೀಯವೆನಿಸುವ ಕಥೆ. ಉದ್ದಕ್ಕೂ ನಷ್ಟ, ಬಂಧುಹಾನಿ, ರಾಜ್ಯಹಾನಿ, ದುಃಖ, ರುದ್ರ: ಆದರೆ ಅಂತ್ಯದಲ್ಲಿ ಪುನರ್ಲಾಭ, ಪುನರ್ಮಿಲನ, ಸುಖ, ಶಾಂತಿ, ದಿವ್ಯ — ಇದು ಈ ಜಾತಿಗುಣ.

'ಪೆರಿಕ್ಲಿಸ್'ನಲ್ಲಿ ನಾವು ಕಾಣುವುದು ಕಥೆಗಿಂತ, ಸಂವಿಧಾನಕ್ಕಿಂತ ಹೆಚ್ಚಾಗಿ ಘಟನಾವಳಿ. ನಾಟಕೀಯತೆ, ಕಾವ್ಯಗುಣ, ಪಾತ್ರಪೋಷಣೆ ಸಾಧಾರಣ. ನಾಲ್ಕನೆ ಅಂಕದ ಸೂಳೆಮನೆಯ ದೃಶ್ಯಗಳು ವಾಸ್ತವತೆಯ ದೃಷ್ಟಿಯಿಂದ ಗಮನಾರ್ಹವಾಗಿವೆ. ಇದರ ಕೊನೆಯ ಮೂರು ಅಂಕಗಳಷ್ಟೇ ಷೇಕ್ಸ್ಪಿಯರನದು, ಮೊದಲ ಎರಡನ್ನು ಬೇರೆ ಒಬ್ಬ ಕರ್ತೃ, ಜಾರ್ಜ್ ವಿಲ್ಕಿನ್ಸ್, ಬರೆದನೆಂದು ಪಂಡಿತರಲ್ಲಿ ಏಕಾಭಿಪ್ರಾಯವಿದೆ. ರಂಗತಂತ್ರದ ದೃಷ್ಟಿಯಿಂದ ನಾಟಕದಲ್ಲಿ ಕವಿ ಗೋಯರನೇ ಏಕಪಾತ್ರವಾಗಿ ಬಂದು ಕಥೆ ಚಿತ್ರಿಸುವುದು, ನಡುನಡುವೆ ಮೂಕದೃಶ್ಯಗಳು ಹಾಯುವುದು ಇದರ ಒಂದು ವಿಶೇಷ.

ಹಿಂದೆ ಸಿರಿಯಾದ ಆ್ಯಂಟಿಯೋಕ್ ನಗರದಲ್ಲಿ ಆ್ಯಂಟಿಯೋಕಸ್ ಎಂಬೊಬ್ಬ ದೊರೆ. ಅವನ ಅರಸಿ ಹೆಣ್ಣುಮಗುವೊಂದನ್ನು ಹೆತ್ತು ಅದು ಕಣ್ಣು ತೆರೆಯುವ ಮೊದಲೇ ತೀರಿಕೊಂಡಿದ್ದಾಳೆ. ಮಗು ತಂದೆಯ ಪೋಷಣೆಯಲ್ಲಿ ಬೆಳೆದು ದೊಡ್ಡದಾಗುತ್ತದೆ: ಮೈ ಕೈ ತುಂಬಿಕೊಂಡು, ಕಂಡವರಲ್ಲಿ ಬಯಕೆ ಕೆರಳಿಸುವಂತಹ ಚೆಲುವೆ ಹುಡುಗಿಯಾಗುತ್ತದೆ.

ಆ್ಯಂಟಿಯೋಕಸ್ ದುಷ್ಟ, ಪಶು. ಅವನಿಗೆ ಮಗಳಲ್ಲೇ ಅಸ್ವಾಭಾವಿಕವಾದ ಲೈಂಗಿಕ ಸಂಬಂಧ ಬೆಳೆಯುತ್ತದೆ. ಮಗಳಿಂದ ದೂರಾಗಲೊಲ್ಲದೆ ಅವಳು ವಯಸ್ಸಿಗೆ ಬಂದರೂ ಮದುವೆ ಮಾಡುವುದಿಲ್ಲ. ಕೈಹಿಡಿಯಲು ಮುಂದಾದ ಯುವಕರಿಗೆ ಅವಳು ದಕ್ಕದಿರಲೆಂದು ಒಂದು ಒಗಟನ್ನು ಸೃಷ್ಟಿಸುತ್ತಾನೆ. ಒಗಟು ಬಿಡಿಸಿದವರಿಗೆ ಮಗಳನ್ನು ಕೊಟ್ಟು ಲಗ್ನ ಮಾಡಲು ಸಿದ್ಧ; ಬಿಡಿಸಲಾರದೆ ಸೋತವರು ತಮ್ಮ ತಲೆ ತೆರಬೇಕು! ಹುಡುಗಿಯ ಸೌಂದರ್ಯಕ್ಕೆ ಮರುಳಾಗಿ ಒಗಟು ಬಿಡಿಸಲು ಬಂದು ಪ್ರಾಣತೆತ್ತ ಯುವಕರು ಎಷ್ಟೋ!

ಆ್ಯಂಟಿಯೋಕಿಗೆ ಹತ್ತಿರದಲ್ಲೇ ಟೈರ್ ಎಂಬ ಇನ್ನೊಂದು ರಾಜ್ಯ. ಪೆರಿಕ್ಲಿಸ್ ಅದರ ದೊರೆಮಗ; ಅವನು ಜಾಣ, ಸಾಹಸಪ್ರೇಮಿ. ಆ್ಯಂಟಿಯೋಕಸನ ಚೆಲುವೆ ಮಗಳ ವಿಷಯ ಕೇಳಿ ತನ್ನ ಅದೃಷ್ಟ ಪರೀಕ್ಷಿಸಲೆಂದು ಆ್ಯಂಟಿಯೋಕಿಗೆ ಬರುತ್ತಾನೆ. ದೊರೆಯನ್ನು ಕಂಡು ಒಗಟನ್ನು ಕೇಳಿದೊಡನೆಯೇ ಪೆರಿಕ್ಲಿಸ್‌ಗೆ ಉತ್ತರ ಹೊಳೆಯುತ್ತದೆ. ವ್ಯಂಗ್ಯವೆಂದರೆ ದೊರೆ ಆ ಒಗಟಿನಲ್ಲೇ ತನ್ನ ಅನೀತಿಯ ಗುಟ್ಟನ್ನು ಅಡಗಿಸಿಟ್ಟಿದ್ದಾನೆ! ಪೆರಿಕ್ಲಿಸ್ ಬಾಯಿಬಿಟ್ಟು ದೊರೆಯ ಹೊಲಸನ್ನು ಅವನ ಮುಖಕ್ಕೇ ಆಡುವುದೆಂತು? ಒಗಟಿನಷ್ಟೇ ಒಗಟಾದ ಉತ್ತರ ಕೊಟ್ಟು ಒಗಟಿನ ಉತ್ತರ ತನಗೆ ಹೊಳೆದಿದೆಯೆಂಬುದನ್ನು ದೊರೆಗೂ ಅವನ

ಮಗಳಿಗೂ ಗೊತ್ತುಮಾಡಿಕೊಡುತ್ತಾನೆ. ಆ್ಯಂಟಿಯೋಕಸನಿಗೆ ಆತಂಕ. ಏನಾದರೂ ಮಾಡಿ ಪೆರಿಕ್ಲಿಸನನ್ನು ಮುಗಿಸದಿದ್ದರೆ ತನ್ನ ಗುಟ್ಟು ಬೀದಿಪಾಲಾಗುವುದು ಖಂಡಿತ. ಕುಟಿಲತೆಯಿಂದ ನಲವತ್ತು ದಿನದ ಗಡು ಕೊಟ್ಟು ಅಷ್ಟರಲ್ಲಿ ಪೆರಿಕ್ಲಿಸ್ ಒಗಟಿಗೆ ಉತ್ತರ ತಿಳಿಸುವ ನಿರ್ಧಾರ ಕೈಗೊಳ್ಳಬೇಕೆಂದು ಇಲ್ಲವೇ ಮರಣದಂಡನೆ ಎದುರಿಸಬೇಕೆಂದು ಅಪ್ಪಣೆ ಮಾಡುತ್ತಾನೆ; ಜೊತೆಗೇ ಅವನನ್ನು ಕೊಲ್ಲಲು ಜನರನ್ನು ಗೊತ್ತುಮಾಡುತ್ತಾನೆ! ತನಗೆ ಪ್ರಾಣಾಪಾಯ ಒದಗಿರುವುದನ್ನು ಊಹಿಸಿದ ಪೆರಿಕ್ಲಿಸ್ ಊರಿಗೆ ವಾಪಸು ಓಡಿ ಬರುತ್ತಾನೆ. ಆದರೆ ಅಲ್ಲಿ ಸಹ ಜೀವಭಯ ತಪ್ಪಿದ್ದಲ್ಲ. ಆ್ಯಂಟಿಯೋಕಸ್ ಬಲಶಾಲಿ, ಹಿಂಸಕ; ತನ್ನನ್ನು ಕೊಲ್ಲಲು ದೇಶಕ್ಕೇ ಮುತ್ತಿಗೆ ಹಾಕಬಹುದೆಂಬ ಅಂಜಿಕೆ ಪೆರಿಕ್ಲಿಸ್‌ನನ್ನು ಕಾಡುತ್ತದೆ. ಅದನ್ನು ತಪ್ಪಿಸಲು ರಾಜ್ಯವನ್ನು ನೆಚ್ಚಿನ ಆಸ್ಥಾನಿಕ ಹೆಲಿಕ್ಯಾನಸನ ವಶಕ್ಕೆ ಬಿಟ್ಟು, ತಾನು ದೂರದ ಥಾರ್ಸಸ್ ರಾಜ್ಯದ ದಾರಿ ಹಿಡಿದು ಹೊರಡುತ್ತಾನೆ.

ಪೆರಿಕ್ಲಿಸ್ ಥಾರ್ಸಸ್ ತಲಪಿದಾಗ ಆ ರಾಜ್ಯಕ್ಕೆ ಕೆಟ್ಟ ಬರಗಾಲ ಬಡಿದಿದೆ. ಜನರಿಗೆ ತಿನ್ನಲು ಕೂಳಿಲ್ಲ. ರಾಜ್ಯದ ಅಧಿಪತಿ ಕ್ಲಿಯಾನ್ ಮತ್ತು ಅವನ ಹೆಂಡತಿ ಡಯೊನೀಸ ದಿಕ್ಕು ತೋಚದೆ ಆತಂಕಿತರಾಗಿದ್ದಾರೆ. ಪೆರಿಕ್ಲಿಸನ ಹಡಗಿನಲ್ಲಿ ಕಾಳುಕಡ್ಡಿ ತುಂಬಿದೆ. ಬರ ಬಡಿದ ಥಾರ್ಸಸನ ಜನತೆಗೆ ಅದನ್ನು ಹಂಚಿ ಅವನು ಅವರ ಪಾಲಿನ ರಕ್ಷಣಾದೇವತೆಯಾಗುತ್ತಾನೆ. ಆ ಕೃತಜ್ಞ ಜನ ಪೆರಿಕ್ಲಿಸನನ್ನು ಕೆಲಕಾಲ ತಮ್ಮಲ್ಲೇ ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಹಿಂದೆಯೇ ಆ್ಯಂಟಿಯೋಕಸನ ಸಂಚುಗಾರರು ಪೆರಿಕ್ಲಿಸನ ಬೆನ್ನಟ್ಟುವುದನ್ನು ಬಿಟ್ಟಿಲ್ಲವೆಂದು, ಥಾರ್ಸಸ್‌ನಲ್ಲಿ ಸಹ ಅವನಿಗೆ ರಕ್ಷಣೆಯಿಲ್ಲವೆಂದು ಟೈರ್‌ನಿಂದ ಸುದ್ದಿ ಬರುತ್ತದೆ. ಪೆರಿಕ್ಲಿಸ್ ಮತ್ತೆ ಹಡಗು ಹತ್ತಿ ಹೊರಡುತ್ತಾನೆ. ದಾರಿಯಲ್ಲಿ ಹಡಗು ನೀರಪಾಲಾಗುತ್ತದೆ. ಪೆರಿಕ್ಲಿಸ್ ಒಬ್ಬನೇ ಅಲೆಗಳ ಕೊಚ್ಚಿಗೆ ಸಿಕ್ಕು ಗ್ರೀಸಿನ ಪೆಂಟಪೊಲಿಸ್ ನಗರದ ಕಡಲದಂಡೆಗೆ ಬಂದುಬೀಳುತ್ತಾನೆ. ಅಲ್ಲಿನ ಮೀನುಗಾರರು ಅವನನ್ನು ರಕ್ಷಿಸಿ ರಾಜ್ಯದ ದೊರೆ ಸೈಮನ್ಸೈಡ್ಸನ ಆಸ್ಥಾನಕ್ಕೆ ಕರೆದೊಯ್ಯುತ್ತಾರೆ.

ಅದೇ ದಿನ ಸೈಮನ್ಸೈಡ್ಸನ ಮಗಳು ಥೈಸಳ ಹುಟ್ಟುಹಬ್ಬದ ಅಂಗವಾಗಿ ಆಟ ಮೇಲಾಟಗಳು ನಡೆದಿವೆ. ಪೆರಿಕ್ಲಿಸ್ ಅವುಗಳಲ್ಲಿ ಭಾಗವಹಿಸಿ, ನೆರೆದಿದ್ದ ಇತರ ದೊರೆಮಕ್ಕಳನ್ನು ಸೋಲಿಸಿ ಸೈಮನ್ಸೈಡ್ಸ್ ಥೈಸರ ಅಚ್ಚುಮೆಚ್ಚಾಗುತ್ತಾನೆ. ಪೆರಿಕ್ಲಿಸನ ಶೌರ್ಯ ಸಾಹಸಗಳಿಗೆ ಮಾರುಹೋದ ಥೈಸ ಅವನನ್ನೇ ವರಿಸುತ್ತಾಳೆ.

ದಿನ ಉರುಳಿದಂತೆ ಥೈಸ ಗರ್ಭಿಣಿಯಾಗುತ್ತಾಳೆ. ಆ ಹೊತ್ತಿಗೆ ಆ್ಯಂಟಿಯೋಕಸ್ ಮತ್ತು ಅವನ ಮಗಳು ಸಿಡಿಲು ಬಡಿದು ಸತ್ತರೆಂಬ ಸುದ್ದಿ ಬರುತ್ತದೆ. ಕಾಡಿದ್ದ ಕುತ್ತ ಕಳೆಯಿತು, ತಾನಿನ್ನು ಧೈರ್ಯದಿಂದ ಊರು ಸೇರಬಹುದೆಂದು ಪೆರಿಕ್ಲಿಸ್ ಸೈಮನ್ಸೈಡ್ಸ್‌ನಿಂದ ಬೀಳ್ಕೊಂಡು ಥೈಸಳೊಡನೆ ಹಡಗು ಹತ್ತಿ ಊರಿನ ದಾರಿ ಹಿಡಿಯುತ್ತಾನೆ. ಆದರೆ ಅವನ ಶನಿಕಾಲವಿನ್ನೂ ಮುಗಿದಿಲ್ಲ. ನಡುದಾರಿಯಲ್ಲಿ ಭಯಂಕರ ಬಿರುಗಾಳಿಯೆದ್ದು ಹಡಗು ತತ್ತರಿಸುತ್ತದೆ. ಇದರಿಂದ ಗರ್ಭಿಣಿ ಥೈಸಳ ಮನಸ್ಸಿನ ಮೇಲೆ ತೀವ್ರ ಆಘಾತವಾಗುತ್ತದೆ; ಅವಳು ಹೆಣ್ಣು ಮಗುವೊಂದನ್ನು ಹೆತ್ತು, ವಿಚಿತ್ರವಾಗಿ ಪ್ರಜ್ಞೆ ತಪ್ಪುತ್ತಾಳೆ. ಅವಳ ದೈಹಿಕ ಅವಸ್ಥೆಯನ್ನು ಕಂಡು ಅವಳು ಸತ್ತಳೆಂದೇ ಎಲ್ಲರೂ ಭಾವಿಸುತ್ತಾರೆ. ಹಡಗಿನ ಮೇಲೆ ಯಾರಾದರೂ ಮೃತರಾದರೆ ಅವರ ಅಂತ್ಯಕ್ರಿಯೆ ಸಮುದ್ರದಲ್ಲೇ

ಆಗಬೇಕೆಂಬುದು ನಾವಿಕಜನರ ಮೂಢ ನಂಬಿಕೆ. ಥೈಸಳ 'ಶವ'ವನ್ನು ಸಮುದ್ರಕ್ಕೆ ಒಪ್ಪಿಸುವವರೆಗೆ ಅದರ ಕಲ್ಲೋಲ ನಿಲ್ಲದೆಂದು ಆ ಜನ ಪಟ್ಟು ಹಿಡಿಯುತ್ತಾರೆ. ಪೆರಿಕ್ಲಿಸ್ ವಿಧಿಯಿಲ್ಲದೆ ಅವರ ಮಾತಿಗೆ ಒಪ್ಪಬೇಕಾಗುತ್ತದೆ. 'ಶವ'ವನ್ನು ನೀರು ತಾಗದಂತೆ ಮರದ ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿ ಸಮುದ್ರದಲ್ಲಿ ತೇಲಿಬಿಡುತ್ತಾನೆ. ಆ ಪೆಟ್ಟಿಗೆ ನೀರಿನಲ್ಲಿ ತೇಲುತ್ತ ಎಫಿಸಸ್ ಪಟ್ಟಣದ ದಂಡೆ ಮುಟ್ಟುತ್ತದೆ. ಆ ನಗರದಲ್ಲಿ ಸೆರಿಮಾನ್ ಎಂಬೊಬ್ಬ ಪ್ರತಿಭಾವಂತ ವೈದ್ಯ. ಅವನು ಥೈಸಳ ಮೃತಭಾಸವಾದ ಶರೀರಕ್ಕೆ ಚಿಕಿತ್ಸೆ ಮಾಡಿ ಮತ್ತೆ ಚೇತನ ಬರಿಸುತ್ತಾನೆ. ಗಂಡ ಮಗುವಿನಿಂದ ಬೇರಾದ ಥೈಸ ವೈರಾಗ್ಯ ತಾಳಿ, ಅಲ್ಲಿನ ಡಯಾನಾ ದೇವಿಯ ಮಂದಿರದ ಪೂಜಾರಿಣಿಯಾಗಿ ಕಾಲ ಹಾಕುತ್ತಾಳೆ.

ಪೆರಿಕ್ಲಿಸ್‌ನಿಗೆ ಈಗ ತನ್ನ ಹಸುಗೂಸಿನ ಸುರಕ್ಷಣೆಯ ಬಗ್ಗೆ ತೀವ್ರ ಚಿಂತೆ. ಮುರಿದು ಹರಿದ ಹಡಗಿನ ಮೇಲೆ ಮಗುವೂ ತಾಯಿಯಂತೆ ನೀರಪಾಲಾಗುವುದನ್ನು ಅವನು ಕಲ್ಪಿಸಿಕೊಳ್ಳಲಾರ. ಈ ಹೊತ್ತಿಗೆ ಹಡಗು ಅವನು ಹಿಂದೆ ಭೇಟಿ ಕೊಟ್ಟಿದ್ದ ಥಾರ್ಸಸನ ಬಳಿ ಬಂದಿದೆ. ಪೆರಿಕ್ಲಿಸ್‌ನಿಗೆ ಕ್ಲಿಯಾನ್-ಡಯೊನೀಸರ ನೆನಪಾಗುತ್ತದೆ. ಮಗುವನ್ನು ಅವರ ಪೋಷಣೆಯಲ್ಲಿ ಬಿಡಲು ನಿಶ್ಚಯಿಸಿ ಹಡಗನ್ನು ಥಾರ್ಸಸನ ಕಡೆಗೆ ತಿರುಗಿಸುತ್ತಾನೆ.

ಥಾರ್ಸಸ್ ತಲಪಿ ಅಲ್ಲಿ ಸುಮಾರು ವರ್ಷಕಾಲ ಕಳೆಯುವ ಹೊತ್ತಿಗೆ ಪೆರಿಕ್ಲಿಸ್‌ನಿಗೆ ತಾಯ್ನಾಡಿನ ನೆನಪು ಒತ್ತರಿಸಿಬಂದು, ಅಲ್ಲಿಗೆ ಹಿಂದಿರುಗುವ ಹಂಬಲ ಬಲವಾಗುತ್ತದೆ. ಮಗು — ಮರೀನಾ ಎಂದು ಹೆಸರಿಟ್ಟಿದ್ದಾನೆ — ಚೆನ್ನಾಗಿ ಬೆಳೆಯುತ್ತಿದೆ. ಅದನ್ನು ಕ್ಲಿಯಾನ್-ಡಯೊನೀಸರ ಆಶ್ರಯದಲ್ಲೇ ಬಿಟ್ಟು ತಾನು ಟೈರ್‌ಗೆ ಪ್ರಯಾಣಮಾಡುತ್ತಾನೆ.

ವರ್ಷಗಳು ಉರುಳುತ್ತವೆ. ಅತ್ತ ಪೆರಿಕ್ಲಿಸ್ ಟೈರ್ ಸೇರಿ ನಿಶ್ಚಿಂತೆಯಿಂದ ರಾಜ್ಯಭಾರ ನಡಸಿದ್ದಾನೆ. ಇತ್ತ ಮರೀನಾ ಇಡೀ ಥಾರ್ಸಸ್‌ನಲ್ಲೇ ರೂಪ ಗುಣ ಪ್ರತಿಭೆಗಳಲ್ಲಿ ಅವಳಿಗೆ ಸರಿಗಟ್ಟುವ ಇನ್ನೊಬ್ಬ ಹುಡುಗಿಯಿಲ್ಲವೆಂಬಂತೆ ಎಲ್ಲರನ್ನೂ ಬೆರಗುಗೊಳಿಸಿ ಬೆಳೆದು ದೊಡ್ಡವಳಾಗುತ್ತಾಳೆ. ರಾಣಿ ಡಯೊನೀಸಳಿಗೂ ಅದೇ ವಯಸ್ಸಿನ ಒಬ್ಬ ಮಗಳಿದ್ದಾಳೆ. ಆದರೆ ಮರೀನಾಳ ಮುಂದೆ ಅವಳು ಹಂಸದ ಎದುರು ನಿಂತ ಕಾಗೆ! ಸ್ವಾಭಾವಿಕವಾಗಿ ಡಯೊನೀಸಳ ಮತ್ಸರ ಕೆರಳುತ್ತದೆ. ತಾನು ಸಾಕಿದ ಹುಡುಗಿ ತನ್ನ ಹೊಟ್ಟೆಯ ಮಗಳಿಗೇ ಗ್ರಹಣ ಬಡಿಸಿರುವುದನ್ನು ಅವಳ ಹೆಣ್ಣು ಹೃದಯ ಸಹಿಸದು. ಗುಟ್ಟಾಗಿ ಮರೀನಾಳ ಕೊಲೆಗೆ ಏರ್ಪಾಡು ಮಾಡುತ್ತಾಳೆ. ಅವಳ ಸಂಚಿನಂತೆ ಕೊಲೆಗಡಿಕನೊಬ್ಬನು ಮರೀನಾಳನ್ನು ವಾಯುವಿಹಾರದ ನೆಪದಲ್ಲಿ ಸಮುದ್ರತೀರಕ್ಕೆ ಕರೆದೊಯ್ದು ಅವಳ ಕುತ್ತಿಗೆಗೆ ಕೈ ಹಾಕುವ ಹೊತ್ತಿಗೆ ಸರಿಯಾಗಿ ಹಡಗುಗಳ್ಳರ ಒಂದು ಪಡೆ ಅಲ್ಲಿಗೆ ಬರುತ್ತದೆ. ಆ ಕಳ್ಳರು ಕೊಲೆಗಡಿಕನ ಮೇಲೆ ಬಿದ್ದು ಹೆದರಿಸಿ ಓಡಿಸಿ, ಮರೀನಾಳನ್ನು ತಮ್ಮ ಜೊತೆ ಮೈಟಿಲಿನ್ ನಗರಕ್ಕೆ ಕರೆದೊಯ್ದು ಅಲ್ಲಿ ಒಂದು ವೇಶ್ಯಾವಾಟಿಗೆ ಮಾರುತ್ತಾರೆ.

ನೀರಿನಲ್ಲಿರಲಿ ಕೊಚ್ಚೆಯಲ್ಲಿರಲಿ ಹಂಸ ಹಂಸವೇ. ಮರೀನಾ ವೇಶ್ಯಾವಾಟಿಗೆ ಬಿದ್ದರೂ ದಾರಿಗೆಡುವುದಿಲ್ಲ. ಬದಲು ಸುತ್ತುಮುತ್ತಿನವರಿಗೇ ನೀತಿಬೋಧೆ ಮಾಡಿ, ವಿಟರಾಗಿ ಬಂದವರನ್ನೂ ಗೃಹಸ್ಥರನ್ನಾಗಿ ಪರಿವರ್ತಿಸಿ ಕಳಿಸುತ್ತಾಳೆ. ಅವರಲ್ಲಿ ಮೈಟಿಲಿನಿನ ದೊರೆ ಲೈಸಿಮ್ಯಾಕಸನೂ ಒಬ್ಬ. ಒಮ್ಮೆ ಅವನು ವೇಷ ಮರಸಿ ಮರೀನಾಳಿದ್ದ ಸೂಳೆಮನೆಗೆ ಸಿಹಿ ಅರಸಿ ಬರುತ್ತಾನೆ. ಮನೆಯ ಮಾಲಿಕ ಹೊಸ ಮಾಲೆಂದು ಹೇಳಿ ಮರೀನಾ

ಳನ್ನು ತಂದು ನಿಲ್ಲಿಸುತ್ತಾನೆ. ಮರೀನಾ ದೊರೆಗೇ ಬುದ್ಧಿ ಹೇಳಿ ಅವನ ಕಣ್ಣು ತೆರಸಿ ಕಳಿಸುತ್ತಾಳೆ. ಇಂತಹ ನೀತಿವಂತ ಹುಡುಗಿಯಿದ್ದರೆ ತನ್ನ ಧಂಧೆ ಊರ್ಜಿತವಾಗದೆಂದು ಸೂಳೆಮನೆಯ ಮಾಲಿಕ ಅವಳನ್ನು ಬಾಗಿಲಾಳಿನ ಸುಪರ್ದಿಗೆ ಒಪ್ಪಿಸುತ್ತಾನೆ. ಮರೀನಾ ಬಾಗಿಲಾಳಿನ ಮನವೊಲಿಸಿ ಅಲ್ಲಿಂದ ಪಾರಾಗಿ ಹೋಗುತ್ತಾಳೆ. ಊರ ಹೆಣ್ಣು ಮಕ್ಕಳಿಗೆ ಹಾಡು ಹೊಲಿಗೆಗಳಲ್ಲಿ ಶಿಕ್ಷಣ ಕೊಡಲಾರಂಭಿಸಿ, ಆ ಸಂಪಾದನೆಯಿಂದ ಬಾಗಿಲಾಳಿನ ಹೊಟ್ಟೆಗೆ ಹಾಕಿ ಅವನನ್ನೂ ಸನ್ಮಾರ್ಗಕ್ಕೆ ತರುತ್ತಾಳೆ.

ಈ ನಡುವೆ ಥಾರ್ಸಸ್‌ನಲ್ಲಿ ಮರೀನಾಳ ಕೊಲೆ ಮಾಡಲು ನೇಮಕವಾಗಿದ್ದವನು ಅವಳ ಕೊಲೆಯಾಯಿತೆಂದೇ ಡಯೊನೀಸಳನ್ನು ನಂಬಿಸಿದ್ದಾನೆ. ಡಯೊನೀಸ ಅವಳು ಸ್ವಾಭಾವಿಕವಾಗಿ ಸತ್ತಳೆಂದು ಸಾರಿ, ಅವಳ ನೆನಪಿಗೆ ಒಂದು ಸ್ಮಾರಕವನ್ನು ಕಟ್ಟಿಸಿ ಚಿನ್ನದ ಅಕ್ಷರಗಳಲ್ಲಿ ಅದರ ಶಿಲಾಲೇಖವನ್ನು ಕೆತ್ತಿಸಿದ್ದಾಳೆ! ಪೆರಿಕ್ಲಿಸ್ ಮಗಳ ನೆನಪಾಗಿ ಅವಳನ್ನು ನೋಡುವ ತವಕದಿಂದ ಥಾರ್ಸಸ್‌ಗೆ ಬಂದಾಗ ಮಗಳು ಸತ್ತ ವಿಷಯ ತಿಳಿದು ಅವನ ಬಗೆಗೆಡುತ್ತದೆ, ದುಃಖ ಉಮ್ಮಳಿಸುತ್ತದೆ, ಬದುಕೇ ಬೇಡವಾಗುತ್ತದೆ. ರಾಜವೈಭವಗಳನ್ನು ತೊರೆದು, ಮೌನಧಾರಣೆಮಾಡಿ, ಹುಚ್ಚನಂತೆ ಊರೂರು ಅಲೆಯುತ್ತಾನೆ. ಆ ಅಲೆದಾಟದಲ್ಲೊಮ್ಮೆ ಮೈಟಿಲಿನಿಗೂ ಬರುತ್ತಾನೆ. ಅಲ್ಲಿನ ದೊರೆ ಲೈಸಿಮ್ಯಾಕಸ್ ಪೆರಿಕ್ಲಿಸ್‌ನನ್ನು ಕಂಡು ಮಾತಾಡಲು ಪಡುವ ಪ್ರಯತ್ನ ವ್ಯರ್ಥ; ಪೆರಿಕ್ಲಿಸ್ ಯಾರೊಡನೆಯೂ ಬಾಯಿ ತೆರೆಯಲೊಲ್ಲ. ಮರೀನಾ ತನ್ನ ಮಧುರಸ್ವಭಾವಕ್ಕೆ ಹೆಸರಾದವಳು. ಅವಳನ್ನು ಪೆರಿಕ್ಲಿಸ್‌ನಿಗೆ ಭೇಟಿ ಮಾಡಿಸಿದರೆ ಅವಳು ಅವನ ವ್ಯಥೆ ಕಳೆದು ಹರ್ಷಚಿತ್ತನನ್ನಾಗಿ ಮಾಡಬಹುದೆಂದೆನಿಸಿ ಲೈಸಿಮ್ಯಾಕಸ್ ಅವಳನ್ನು ಪೆರಿಕ್ಲಿಸ್‌ನಲ್ಲಿಗೆ ಕಳಿಸುತ್ತಾನೆ. ಮರೀನಾಳನ್ನು ಕಂಡೊಡನೆಯೇ ಪೆರಿಕ್ಲಿಸ್‌ನಿಗೆ ಅವಳ ಚಹರೆಯಲ್ಲಿ ತನ್ನ ಸತ್ತ ಹೆಂಡತಿಯ ಛಾಯೆ ಕಾಣಿಸುತ್ತದೆ. ಕೆದಕಿ ನೋಡಿದಾಗ ಅವಳು ಮಗಳೆಂಬುದು ತಿಳಿಯುತ್ತದೆ. ತಂದೆಮಕ್ಕಳ ಹರ್ಷಕ್ಕೆ ಮಿತಿಪಾರವಿಲ್ಲ.

ಇದೇ ಹೊತ್ತಿಗೆ ಡಯಾನಾ ದೇವತೆ ಪೆರಿಕ್ಲಿಸ್‌ನಿಗೆ ಕನಸಿನಲ್ಲಿ ಕಾಣಿಸಿಕೊಂಡು ಎಫಿಸಸ್‌ನಲ್ಲಿರುವ ತನ್ನ ಮಂದಿರದಲ್ಲಿ ಪೂಜೆ ಸಲ್ಲಿಸಿ ಬರುವಂತೆ ಆಜ್ಞೆಮಾಡುತ್ತಾಳೆ. ಅದರಂತೆ ಪೆರಿಕ್ಲಿಸ್ ಎಫಿಸಸ್‌ಗೆ ಬರುತ್ತಾನೆ; ಡಯಾನಾ ಮಂದಿರದಲ್ಲಿ ಪೂಜೆ ಸಲ್ಲಿಸಹೋದಾಗ ಅಲ್ಲಿನ ಪೂಜಾರಿಣಿಯಲ್ಲಿ ತನ್ನ ಸತ್ತ ಹೆಂಡತಿ ಥೈಸಳನ್ನು ಕಾಣುತ್ತಾನೆ, ಪರಸ್ಪರ ಗುರುತು ಹತ್ತುತ್ತದೆ. ಹೆಂಡತಿ ಬದುಕಿ ಉಳಿದ ನಂಬಲಾರದ ಕಥೆಯನ್ನು ಕೇಳಿ ಪೆರಿಕ್ಲಿಸ್‌ನಿಗೆ ಮಹದಾನಂದ. ಗಂಡ ಹೆಂಡತಿ ಮಗಳನ್ನು ವಿಧಿ ಮತ್ತೆ ಒಂದುಗೂಡಿಸಿದೆ, ಇನ್ನಿಲ್ಲವೆಂದುಕೊಂಡ ಸಂತೋಷ ಮತ್ತೆ ಅವರದಾಗಿದೆ.

ಈ ಪುನರ್ಮಿಲನದ ಸಮಯಕ್ಕೆ ಪೆಂಟಪೊಲಿಸ್‌ನಲ್ಲಿ ಥೈಸಳ ತಂದೆ ಸೈಮನೈಡ್ಸ್ ಮೃತನಾದ ವಾರ್ತೆ ಬರುತ್ತದೆ. ಪೆರಿಕ್ಲಿಸ್ ಮಗಳನ್ನು ಲೈಸಿಮ್ಯಾಕಸ್‌ನಿಗೆ ಕೊಟ್ಟು ಮದುವೆ ಮಾಡಿ, ಆ ಮದುಮಕ್ಕಳಿಗೆ ತನ್ನ ಟೈರ್ ರಾಜ್ಯವನ್ನು ವಹಿಸಿಕೊಡುತ್ತಾನೆ. ತಾನು ಥೈಸಳೊಂದಿಗೆ ಪೆಂಟಪೊಲಿಸ್‌ಗೆ ಹೋಗಿ ನೆಲಸಿ ಸುಖದಿಂದಿರುತ್ತಾನೆ.

ಅತ್ತ ಥಾರ್ಸಸ್‌ನಲ್ಲಿ ಡಯೊನೀಸಳ ಕ್ರೌರ್ಯವರ್ತನೆ ಜನತೆಗೆ ತಿಳಿದಾಗ ಅವರು ಅರಮನೆಗೆ ಬೆಂಕಿ ಹಚ್ಚಿ ಅವಳನ್ನೂ ಕ್ಲಿಯಾನನನ್ನೂ ಜೀವಂತ ಸುಟ್ಟುಹಾಕುತ್ತಾರೆ.

## 25. ಸಿಂಬೆಲೈನ್

**ರಚನೆ:** 1609-10. **ಮೊದಲ ಪ್ರಕಟನೆ:** 1623.

**ಆಕರಗಳು:** ದೊರೆ ಸಿಂಬೆಲೈನ್‌ಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳಿಗೆ ಹಾಲಿನ್‌ಷೆಡ್‌ನ 'ಕ್ರಾನಿಕಲ್ಸ್'; ಇಯಾಕಿಮೊ ತೊಡುವ ಪಣದ ಪ್ರಸಂಗಕ್ಕೆ ಬೋಕಾಚಿಯೊನ 'ಡಿಕಾಮೆರಾನ್'ನಲ್ಲಿನ 'ಜಿನೋವದ ಬರ್ನಬೊ' ಎಂಬ ಕಥೆ; ಬೆಲೇರಿಯಸನ ಕಥಾಭಾಗಕ್ಕೆ 'ದಿ ರೇರ್ ಟ್ರೈಯುಂಫ್ಸ್ ಆಫ್ ಲವ್ ಅಂಡ್ ಫಾರ್ಚೂನ್' ಎಂಬ ಅಜ್ಞಾತಕರ್ತೃತ್ವದ ಸಮಕಾಲೀನ ನಾಟಕ — ಹೀಗೆ ಹಲವೆಡೆಗಳಿಂದ ಸಾಮಗ್ರಿ ತಂದು ಕವಿ ಈ ನಾಟಕವನ್ನು ಹಣಿಸಿದ್ದಾನೆ. ವಿಮರ್ಶಕರು ಬೋಮಾಂಟ್ ಮತ್ತು ಫ್ಲೆಚರರ 'ಫಿಲಾಸ್ಟರ್' ನಾಟಕ ಹಾಗೂ ಇದರ ನಡುವೆ ಕೆಲವಾರು ಸಾಮ್ಯಗಳನ್ನು ಗುರುತಿಸಿದ್ದಾರೆ. ಇವೆರಡರಲ್ಲಿ ಯಾವುದು ಮೊದಲು ಸೃಷ್ಟಿಯಾಯಿತೆಂದು ಹೇಳಬರುವಂತಿಲ್ಲ.

**ಕಥೆ:** ಹಿನ್ನೆಲೆಯಲ್ಲಿ ಅರಮನೆಯ ಹಾಗೂ ದೇಶದೇಶಗಳ ನಡುವಣ ಸಂಚಿನ ರಾಜಕಾರಣ, ಮುನ್ನೆಲೆಯಲ್ಲಿ ಬೇರ್ಪಟ್ಟು ಮತ್ತೆ ಒಂದಾಗುವ, ಒಂದಕ್ಕೊಂದು ಒಲಿದ ಎರಡು ಜೀವಗಳ ಮಾನವೀಯ ನಾಟಕ — ಇದು ಕೃತಿ. ಇಲ್ಲಿನ ಕಟ್ಟಡ ಸಡಿಲ, ಕವಿತೆ ಜಗಿ, ಮಾತು ಖಚಿತ, ಎಷ್ಟೋ ಅಷ್ಟು. ಆದರೂ ಕೃತಿ ಅದರ ಸೌಂದರ್ಯಕ್ಕೆ, ಮೃದುತೆಗೆ, ಸ್ಪಷ್ಟವಾಗಿ ಕಡೆದ ಕೆಲವು ಪಾತ್ರಗಳಿಗೆ ಹೆಸರಾಗಿದೆ. ಎರಡು ಸುಪ್ರಸಿದ್ಧ ಗೀತೆಗಳಿವೆ.

ಹಿಂದೆ ಆಗಸ್ಟಸ್ ಚಕ್ರವರ್ತಿ ರೋಮ್ ಸಾಮ್ರಾಜ್ಯವನ್ನು ಆಳುತ್ತಿದ್ದಾಗ ಬ್ರಿಟನ್ನಿನಲ್ಲಿ ಸಿಂಬೆಲೈನ್ ದೊರೆ ರಾಜ್ಯಭಾರ ನಡಸಿದ್ದ. ಸಿಂಬೆಲೈನ್‌ಗೆ ಅವನ ಮೊದಲ ಹೆಂಡತಿಯಲ್ಲಿ ಇಮೊಜೆನ್ ಎಂಬ ಮಗಳು. ಮೊದಲ ಹೆಂಡತಿ ತೀರಿಕೊಂಡ ಮೇಲೆ ಸಿಂಬೆಲೈನ್ ಮತ್ತೆ ಮದುವೆಯಾಗಿದ್ದ. ಈಗಿನ ಎರಡನೆಯ ರಾಣಿ ದುಷ್ಟೆ, ಕುಳಿತುಕುಳಿತಲ್ಲೇ ಸಂಚು ಹೊಸೆಯುವುದರಲ್ಲಿ ನಿಸ್ಸೀಮಳು. ಸಿಂಬೆಲೈನ್ ಅವಳ ಕೈಗೊಂಬೆಯಾಗಿ ಅವಳು ಕುಣಿಸಿದಂತೆ ಕುಣಿದಿದ್ದಾನೆ. ಅವಳಿಗೆ ಅವಳಷ್ಟೇ 'ಸುಗುಣಿ'ಯಾದ ಒಬ್ಬ ಮಗ, ಹೆಸರು ಕ್ಲಾಟೆನ್, ರಾಣಿಯ ಮೊದಲ ಸಂಬಂಧದಿಂದ ಹುಟ್ಟಿದವನು. ಇಮೊಜೆನಳನ್ನು ಕ್ಲಾಟೆನ್‌ಗೆ ತಂದುಕೊಳ್ಳಬೇಕೆಂದು ರಾಣಿಯ ಆಸೆ. ಹಾಗಾದರೆ ತನ್ನ ಹೊಟ್ಟೆಯ ಮಗ ಬ್ರಿಟನ್ನಿನ ಗದ್ದುಗೆ ಹತ್ತಲು ಅವಕಾಶವಾಗುವುದೆಂದು ಅವಳ ಎಣಿಕೆ. ಆದರೆ ಇಮೊಜೆನ್ ಅರಮನೆಯಲ್ಲಿ ತನ್ನ ಜೊತೆಜೊತೆ ಬೆಳೆದ ರೋಮಿನ ಪಾಸ್ತುಮಸ್ ಎಂಬ ಸಾಮಾನ್ಯನನ್ನು ಯಾರಿಗೂ ಸುಳಿವು ಕೊಡದೆ ಗುಟ್ಟಾಗಿ ಮದುವೆಯಾಗುತ್ತಾಳೆ. ಸುದ್ದಿ ತಿಳಿದಾಗ ಸಿಂಬೆಲೈನ್‌ಗೂ ರಾಣಿಗೂ ಕೋಪ ಕುದಿಯುತ್ತದೆ. ದೊರೆ ಪಾಸ್ತುಮಸ್‌ನನ್ನು ಗಡಿಪಾರು ಮಾಡುತ್ತಾನೆ. ಪಾಸ್ತುಮಸ್ ಇಮೊಜೆನಳಿಗೆ ಎಂದೆಂದಿಗೂ ಪ್ರಾಮಾಣಿಕನಾಗಿರುವ ಭರವಸೆ ಕೊಟ್ಟು ಅದರ ಕುರುಹಾಗಿ ಅವಳಿಗೆ ವಿಶಿಷ್ಟ ಕಟ್ಟಡದ ಒಂದು ಕೈಬಳೆ ತೊಡಿಸಿ, ಅವಳಿಂದಲೂ ಪ್ರೇಮಸಂಕೇತವಾಗಿ ಒಂದು ವಜ್ರದ ಉಂಗುರ ಪಡೆದು ರೋಮಿಗೆ ಹೊರಡುತ್ತಾನೆ.

ಪಾಸ್ತುಮಸ್ ರೋಮ್ ತಲಪಿ ತನ್ನ ತಂದೆಯ ಹಳೆಯ ಗೆಳೆಯನೊಬ್ಬನ ಮನೆಯಲ್ಲಿ ಇಳಿದುಕೊಳ್ಳುತ್ತಾನೆ. ಅಲ್ಲಿ ಇಯಾಕಿಮೊ ಎಂಬೊಬ್ಬನ ಪರಿಚಯವಾಗುತ್ತದೆ. ಇಯಾಕಿಮೊ ದುರಾಚಾರಿ, ಕಪಟಿ, ಕುತಂತ್ರಿ. ಒಮ್ಮೆ ಅವರ ನಡುವೆ ಸ್ತ್ರೀಯರ ಶೌಶೀಲ್ಯದ ಬಗ್ಗೆ ಮಾತು ಬಂದು ಪಾಸ್ತುಮಸ್ ತನ್ನ ನಲ್ಲೆ ಇಮೊಜೆನಳಷ್ಟು ಚೆಲುವೆ,



ಇಮೊಜೆನಳ ಮಲಗುವ ಕೋಣೆಯಲ್ಲಿ ಕಪಟ ಇಯಾಕಿಮೊ

ಸುಶೀಲೆ ಇನ್ನೊಬ್ಬಳಿಲ್ಲವೆಂದು ಅಭಿಮಾನ ಪಡುತ್ತಾನೆ. ಇಯಾಕಿಮೊ ಇಡೀ ಸ್ತ್ರೀಕುಲದಲ್ಲೇ ಅದುವರೆಗೆ ಒಬ್ಬ ಸುಶೀಲೆ ಹುಟ್ಟಿಲ್ಲವೆಂದು ನಂಬಿ ಅದರಂತೆ ಹೆಂಗಸರೊಡನೆ ನಡೆಯುತ್ತಿರುವ ಲಂಪಟ. ಎಂತಹ ಗರತಿಯನ್ನಾದರೂ ಕ್ಷಣಮಾತ್ರದಲ್ಲಿ ಒಲಿಸಿಕೊಂಡು ಅವಳ ಶೀಲಭಂಗ ಮಾಡಬಲ್ಲೆ, ಅವಳು ನೀನು ಹೊಗಳಿಕೊಳ್ಳುವ ಹೆಂಡತಿಯಾದರೂ ಸರಿಯೆ ಎಂದು ಜಂಬ ಕೊಚ್ಚುತ್ತಾನೆ. ಮಾತು ಹದ್ದು ಮೀರಿ ಛಲವಾಗಿ, ಪಣವಾಗಿ ಪರಿಣಮಿಸುತ್ತದೆ. ಹಾಗೆ ಮಾಡಿ ಗೆದ್ದದ್ದಾದರೆ ತನ್ನ ಕೈಬೆರಳಿನಲ್ಲಿರುವ ಇಮೊಜೆನ್ ಕೊಟ್ಟ ಅಮೂಲ್ಯ ವಜ್ರದುಂಗುರವನ್ನು ಕೊಡುವುದಾಗಿ ಪಾಸ್ತುಮಸ್, ಸೋತರೆ ಹತ್ತು ಸಾವಿರ ಡಕೆಟ್‌ಗಳ ತನ್ನ ಆಸ್ತಿ ಬಿಟ್ಟುಕೊಡುವುದಾಗಿ ಇಯಾಕಿಮೊ ಬಾಜಿ ಕಟ್ಟುತ್ತಾರೆ.

ಇಯಾಕಿಮೊ ಬ್ರಿಟನ್ನಿಗೆ ಬರುತ್ತಾನೆ. ಬರುವಾಗಲೇ ಪಾಸ್ತುಮಸ್ ಬರೆದು ಕಳಿಸಿದಂತೆ ಒಂದು ಸುಳ್ಳು ಪರಿಚಯಪತ್ರ ಸಿದ್ಧಮಾಡಿ ತಂದು, ಅವನ ಆಪ್ತಮಿತ್ರನೆಂಬಂತೆ ತೋರಿಸಿಕೊಳ್ಳುತ್ತಾನೆ. ಇಮೊಜೆನ್ ವಿಶ್ವಾಸದಿಂದ ಬರಮಾಡಿಕೊಳ್ಳುತ್ತಾಳೆ. ಮುಖದರ್ಶನವಾದೊಡನೆಯೇ ಅವಳು ಶೀಲಸಿಧಿಯೆಂಬುದು ಇಯಾಕಿಮೊಗೆ ಸ್ಪಷ್ಟವಾಗುತ್ತದೆ. ಅವಳು ತಟ್ಟಿದರೆ ತೆರೆಯುವ ಬಾಗಿಲಲ್ಲವೆಂದು ಅರಿತ ಇಯಾಕಿಮೊ ತನ್ನ ತಂತ್ರಗಳನ್ನು

ಹೊರತೆಗೆಯುತ್ತಾನೆ. ಇಮೊಜೆನ್ ಗಂಡನ ಯೋಗಕ್ಷೇಮ ವಿಚಾರಿಸಿದಾಗ ವ್ಯಂಗ್ಯ, ದ್ವಂದ್ವಾರ್ಥಗಳ ಮಾತಿನಿಂದ ಅವನು ದಾರಿಗೆಟ್ಟಿರುವಂತೆ ಬಣ್ಣಿಸುತ್ತಾನೆ. ಗಂಡನೇ ಕೊಟ್ಟ ಭಾಷೆ ಮರೆತು ನಂಬಿಕೆಗೇಡಿಯಾಗಿರುವಾಗ ಅವನ ಮೇಲಿನ ಸೇಡಿಗಾಗಿ ನೀನೂ ಹಾಗೆಯೇ ಏಕೆ ಮಾಡಬಾರದೆಂದು ಸೂಚನೆ ಕೊಟ್ಟು ಅವಳನ್ನು ಸೆಳೆದುಕೊಳ್ಳಲು ಪ್ರಯತ್ನಿಸುತ್ತಾನೆ. ಇಮೊಜೆನ್ ಸಾಧ್ವೀಮಣಿ. ಅವನ ಸುಳ್ಳು ಕಪಟಗಳ ಬಲೆಗೆ ಬೀಳಳು, ಸಿಟ್ಟಾಗುತ್ತಾಳೆ. ಇಯಾಕಿಮೊ ಪಟ್ಟು ಬದಲಾಯಿಸಿ ಅವಳ ಸತ್ವಪರೀಕ್ಷೆಗಾಗಿ ಹಾಗೆ ಆಡಿದೆನೆಂದು ಹೇಳಿ ಅವಳನ್ನೂ ಪಾಸ್ತುಮಸ್‌ನನ್ನೂ ಹೊಗಳುತ್ತಾನೆ. ತನ್ನ ಜೊತೆ ಅಮೂಲ್ಯ ಆಭರಣಗಳ ಒಂದು ಪೆಟ್ಟಿಗೆಯನ್ನು ತಂದಿರುವುದಾಗಿ ಹೇಳಿ ಇಮೊಜೆನ್ ಅದನ್ನು ಆ ರಾತ್ರಿ ತನ್ನ ಕೋಣೆಯಲ್ಲಿರಿಸಿಕೊಳ್ಳಲು ಒಪ್ಪಬೇಕೆಂದು ಕೇಳಿಕೊಳ್ಳುತ್ತಾನೆ. ಇಮೊಜೆನ್ ಆಗಲೆನ್ನುತ್ತಾಳೆ.

ಇಮೊಜೆನಳ ಕೋಣೆಗೆ ಪೆಟ್ಟಿಗೆ ಬರುತ್ತದೆ. ಆದರೆ ಅದರಲ್ಲಿರುವ 'ಆಭರಣ' ಇಯಾಕಿಮೊನೆ! ತನ್ನ ದುರುದ್ದೇಶ ಸಾಧಿಸಿಕೊಳ್ಳಲು ಹೊಸ ತಂತ್ರ ಹೂಡಿ ಅವನು ಅದರಲ್ಲಿ ಅವಿತು ಕುಳಿತು ಬಂದಿದ್ದಾನೆ. ನಡುರಾತ್ರಿ ಇಮೊಜೆನ್ ನಿದ್ದೆಹೋದ ಮೇಲೆ ಇಯಾಕಿಮೊ ಪೆಟ್ಟಿಗೆಯಿಂದ ಹೊರಬಂದು ಮಲಗುವ ಕೋಣೆಯ ವಿವರಗಳನ್ನೂ ಅವಳ ಮೈಮೇಲಿನ ಗುಪ್ತಚಿಹ್ನೆಗಳನ್ನೂ ಗುರುತು ಮಾಡಿಕೊಂಡು ಅವಳಿಗೆ ಪಾಸ್ತುಮಸ್ ಕೊಟ್ಟಿದ್ದ ಕೈಬಳೆಯನ್ನು ಕದಿಯುತ್ತಾನೆ. ಇಮೊಜೆನ್ ನೀತಿಭ್ರಷ್ಟಳೆಂದು ಸಾಧಿಸಲು ಸಾಕಷ್ಟು ಪ್ರಮಾಣಗಳಾದವು! ಇಯಾಕಿಮೊ ರೋಮಿಗೆ ಹಿಂದಿರುಗುತ್ತಾನೆ.

ಈ ಪ್ರಮಾಣಗಳನ್ನು ಕಂಡಾಗ ಪಾಸ್ತುಮಸ್‌ನಿಗೆ ಹೆಂಡತಿಯ ಅನೀತಿಯ ಬಗ್ಗೆ ಸ್ವಲ್ಪವೂ ಸಂಶಯವುಳಿಯುವುದಿಲ್ಲ. ಇಮೊಜೆನಳ ಊಳಿಗದಲ್ಲಿರುವ ತನ್ನ ಆಪ್ತಸೇವಕ ಪಿಸಾನಿಯೊಗೆ ವಿಷಯ ತಿಳಿಸಿ, ಅವಳನ್ನು ಕೊಲ್ಲುವಂತೆ ಆದೇಶ ಕಳಿಸುತ್ತಾನೆ. ಅದಕ್ಕೆ ಅನುವಾಗಲೆಂದು ಇಮೊಜೆನ್ ಪಿಸಾನಿಯೊನನ್ನು ಮೈಗಾವಲು ಮಾಡಿಕೊಂಡು ತನ್ನನ್ನು ಮಿಲ್‌ಫರ್ಡ್ ಹೇವನ್‌ನಲ್ಲಿ ಕೂಡಬೇಕೆಂದು ಕಾಗದ ಬರೆಯುತ್ತಾನೆ. ಮಿಲ್‌ಫರ್ಡ ನಡು ವೆಲ್ಷ್ ಪರ್ವತಗಳ ಗುಡ್ಡಗಾಡಿನ ಹಾದಿ; ಆ ನಿರ್ಜನ ಪ್ರದೇಶವಲ್ಲಿ ಕೊಲೆ ಸುಲಭ!

ಸುದ್ದಿ ಕೇಳಿ ಇಮೊಜೆನಳ ಸಂತೋಷ ತುಂಬಿ ಹರಿಯುತ್ತದೆ. ಒಂದು ಕಡೆ ತಂದೆ, ಮಲತಾಯಿ, ಮೇಲಾಗಿ ತನ್ನನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ಮಲತಾಯಿಯ ಮಗ ಕ್ಲಾಟೆನ್ ಕೊಡುತ್ತಿರುವ ಕಾಟದಿಂದ ಬಿಡುಗಡೆ ಸಿಗುವುದಷ್ಟೇ ಅಲ್ಲದೆ ಇನ್ನೊಂದು ಕಡೆ ಗಂಡನನ್ನು ಕೂಡುವ ಸೌಭಾಗ್ಯ ದೊರೆತಿದೆ. ಪಿಸಾನಿಯೊನ ಜೊತೆ ಹೊರಡುತ್ತಾಳೆ. ಪಿಸಾನಿಯೊ ಯಜಮಾನಿಯನ್ನು ಚೆನ್ನಾಗಿ ಬಲ್ಲನ. ಯಾರದೋ ಕುಹಕ ಪಾಸ್ತುಮಸ್‌ನನ್ನು ಕೆರಳಿಸಿ, ಇಮೊಜೆನಳ ಬಗ್ಗೆ ನಂಬಿಕೆ ಕೆಡಿಸಿದೆಯೆಂದು ತರ್ಕ ಮಾಡಲು ಅವನಿಗೆ ಕಷ್ಟವಾಗದು. ದಣಿ ಏನೇ ಹೇಳಲಿ ಆ ಸಾಧ್ವೀಮಣಿಯನ್ನು ಕೊಲ್ಲಲು ಅವನಿಗೆ ಕೈ ಬಾರದು. ತನಗೆ ಬಂದ ಆದೇಶಪತ್ರ ತೋರಿಸಿ ಅವಳ ಸಂರಕ್ಷಣೆಗೆ ದಾರಿಮಾಡುತ್ತಾನೆ. ಅದೇ ಸಮಯಕ್ಕೆ ರೋಮಿನ ದಂಡಾಧಿಪತಿ ಲೂಷಿಯಸ್ ತನ್ನ ಚಕ್ರವರ್ತಿ ಅಗಸ್ಟಸ್‌ನಿಗೆ ಸಿಂಬೆಲೈನ್ ಕಪ್ಪಕಾಣಿಕೆ ಕೊಡಲು ನಿರಾಕರಿಸಿದನೆಂದು ಬ್ರಿಟನ್ನಿನ ಮೇಲೆ ದಂಡೆತ್ತಿ ಬರಲಿದ್ದಾನೆ. ಇಮೊಜೆನ್ ಗಂಡುವೇಷ ತೊಟ್ಟು ಲೂಷಿಯಸನ ಸೈನ್ಯ ಸೇರಬೇಕೆಂದು

ಪಿಸಾನಿಯೊ ಸಲಹೆ ಕೊಡುತ್ತಾನೆ. ಇನೊಜೆನ್ ಒಪ್ಪಿ ಹೊರಡುತ್ತಾಳೆ. ಹೋಗುವ ಮುನ್ನ ಕಷ್ಟಕಾಲಕ್ಕಿರಲೆಂದು ಒಂದು ಸಣ್ಣ ಸೀಸೆ 'ಸಂಜೀವನಿ' ದ್ರವ್ಯವನ್ನು ಅವಳ ಕೈಗಿಡುತ್ತಾನೆ. ಆ ದ್ರವ್ಯ ಹೆಸರಿಗಷ್ಟೇ ಸಂಜೀವನಿ; ಆದರೆ ಅದರ ಗುಣ ಸಂಮೋಹಕ, ಕುಡಿದವರನ್ನು ದೀರ್ಘಕಾಲ ಸತ್ತಂತೆ ಮೈ ಮರಸುವ ಶಕ್ತಿ ಅದರದು. ಅದು ಪಿಸಾನಿಯೊಗೆ ಬಂದದ್ದು ರಾಣಿಯಿಂದ. ರಾಣಿ ಪಾಸ್ತುಮುಸನ ನೆಚ್ಚಿನ ಆಳೊಬ್ಬನು ಆಸ್ಥಾನದಲ್ಲಿರು ವುವನ್ನು ಸಹಿಸಲಾರದೆ ತನಗೆ ಏಕೋ ಬೇಕೆಂದು ಹೇಳಿ ನಿಧಾನವಾಗಿ ಸಾವು ತರುವ ಔಷಧ ಸಿದ್ಧಮಾಡಿಕೊಡೆಂದು ರಾಜವೈದ್ಯನಿಗೆ ಆಜ್ಞಾಪಿಸಿದ್ದಳು. ರಾಣಿ ಕಪಟಬುದ್ಧಿ ಯುವಳೆಂದು ಬಲ್ಲ ಆ ವೈದ್ಯ ವಿಷದ ಬದಲು ಆ ಸಂಮೋಹನಿಯನ್ನು ತಯಾರಿಸಿಕೊಟ್ಟಿದ್ದ, ಅದು ಸಂಜೀವನಿಯೆಂದು ಸುಳ್ಳು ಹೇಳಿ ರಾಣಿ ಪಿಸಾನಿಯೊಗೆ ಕೊಟ್ಟಿದ್ದಳು.

ಲೂಷಿಯಸನ ಸೈನ್ಯ ಸೇರಹೊರಟ ಇನೊಜೆನ್ ವೇಲ್ಸ್ ಗುಡ್ಡಗಳಲ್ಲಿ ದಾರಿ ತಪ್ಪಿ ಒಂದು ಗುಹೆಗೆ ಬರುತ್ತಾಳೆ. ಅಲ್ಲಿ ಬೆಲೇರಿಯಸ್ ಎಂಬ ಮುದುಕ ವಾಸಿಸುತ್ತಿದ್ದಾನೆ. ಇಪ್ಪತ್ತು ವರ್ಷಗಳ ಹಿಂದೆ ದೊರೆಯಿಂದ ಗಡಿಪಾರಾದ ಆಸ್ಥಾನಿಕ ಅವನು. ದೊರೆಯ ಮೇಲಿನ ಸೇಡಿಗಾಗಿ ಅವನ ಇಬ್ಬರು ಹಸುಗೂಸುಗಳನ್ನು ಕದ್ದುಕೊಂಡು ಹೋಗಿ ಅವು ತನ್ನವೇ ಎಂಬಂತೆ ಬೆಳಸಿದ್ದಾನೆ. ಆ ಹುಡುಗರ ಹೆಸರು ಎರ್ವಿರೇಗಸ್ ಮತ್ತು ಗಿಡೇರಿ ಯಸ್. ಗಂಡುವೇಷದ ಇನೊಜೆನ್ ಫಿಡೆಲ್ ಎಂಬ ಹೆಸರಿನಿಂದ ಅವರ ಆಶ್ರಯ ಸೇರು ತ್ತಾಳೆ. ಹುಡುಗರಿಬ್ಬರಿಗೂ ಇನೊಜೆನಳಲ್ಲಿ ಅವಳು ತಮ್ಮ ಒಡಹುಟ್ಟೀ ಎಂಬಷ್ಟು ಗಾಢ ವಾದ ಪ್ರೀತಿ ಬೆಳೆಯುತ್ತದೆ. ವಾಸ್ತವವಾಗಿ ತಾವು ಅಕ್ಕತಮ್ಮಂದಿರೆಂದು ಅವರು ಅರಿಯರು.

ಅತ್ತ ಬ್ರಿಟನ್ನಿನಲ್ಲಿ ಇನೊಜೆನ್‌ಳಿಂದ ಮುಖ ಮುರಿಸಿಕೊಂಡ ಕ್ಲಾಟೆನನ ಮಾನ ಮುಕ್ಕಾಗಿದೆ, ಅವಳ ಮೇಲೆ ಸೇಡು ತೀರಿಸಿಕೊಳ್ಳಲು ಅವನ ಕೈ ತುರಿಸುತ್ತಿದೆ. ಇನೊಜೆನ್ ಳನ್ನು ಬೀಳ್ಕೊಟ್ಟು ಊರಿಗೆ ಹಿಂದಿರುಗಿದ ಪಿಸಾನಿಯೊ ಕ್ಲಾಟೆನನ ಕಾಟ ತಡೆಯಲಾರದೆ ಅವಳು ಪಾಸ್ತುಮುಸ್‌ನನ್ನು ಕೂಡಲು ಮಿಲ್‌ಫರ್ಡಿಗೆ ಹೋದಳೆಂದು ಹೇಳಿ ಅವನ ಕಾಗದ ತೋರಿಸುತ್ತಾನೆ. ಕ್ಲಾಟೆನ್ ಕೂಡಲೇ ಪಾಸ್ತುಮುಸನಂತೆ ವೇಷ ತೊಟ್ಟು ಅವಳ ಬೆನ್ನಟ್ಟಿ ತ್ತಾನೆ. ಪಾಸ್ತುಮುಸ್‌ನನ್ನು ಕೊಂದು ಅವಳ ಮಾನಭಂಗ ಮಾಡುವುದು ಅವನ ಉದ್ದೇಶ. ಆದರೆ ಹೊರಟಿರುವುದು ತನ್ನ ಸಾವಿನ ತೆಕ್ಕೆಗೇ ಎಂದು ಆ ದುರುಳ ಕಾಣ! ದಾರಿ ತಪ್ಪಿ ಅವನೂ ಬೆಲೇರಿಯಸನ ಗುಹೆಗೇ ಬರುತ್ತಾನೆ. ಬೆಲೇರಿಯಸ್ ಅವನನ್ನು ರಾಣಿಯ ಮಗನೆಂದು ಗುರುತಿಸಿ ಅವನು ತನ್ನ ಕೈಸೆರೆ ಹಿಡಿಯಬಂದಿರುವನೆಂದು ತಪ್ಪು ತಿಳಿಯು ತ್ತಾನೆ. ಜಗಳ ಹತ್ತುತ್ತದೆ. ಗಿಡೇರಿಯಸ್ ಕ್ಲಾಟೆನನ ತಲೆಕಡಿಯುತ್ತಾನೆ.

ಈ ನಡುವೆ ಗುಹೆಯಲ್ಲಿ ಇನೊಜೆನ್ ಮನೋವ್ಯಾಕುಲತೆ ತಡೆಯಲಾರದೆ ಪಿಸಾನಿಯೊ ಕೊಟ್ಟಿದ್ದ 'ಸಂಜೀವನಿ'ಯನ್ನು ಸೇವಿಸಿದ್ದಾಳೆ, ಪ್ರಜ್ಞೆ ತಪ್ಪಿ ಮೈಮರೆತಿದೆ, ಮುಖಕ್ಕೆ ಸಾವಿನ ಛಾಯೆ ಬಂದಿದೆ. ಗುಹೆಗೆ ಹಿಂದಿರುಗಿದ ಎರ್ವಿರೇಗಸ್ ಗಿಡೇರಿಯಸರು ಅವಳ ಸ್ಥಿತಿಯನ್ನು ಕಂಡು ತಮ್ಮ ಪ್ರೀತಿಯ ಹೊಸ ಗೆಳೆಯ ಸತ್ತಿರುವನೆಂದೇ ನಂಬಿ ಎದೆ ಕರಗಿ ದುಃಖಿಸುತ್ತಾರೆ (ಪುಟ 181), ಶವಸಂಸ್ಕಾರಕ್ಕೆ ಅಣಿಮಾಡುತ್ತಾರೆ. ಕ್ಲಾಟೆನ್ ರಾಜಕುಲದವನಾದ್ದರಿಂದ ಅವನ ಶವಕ್ಕೂ ಯೋಗ್ಯಸಂಸ್ಕಾರವಾಗಬೇಕೆಂದು ಹೇಳಿ ಬೆಲೇರಿಯಸ್ ಅದನ್ನು ತಂದು ಇನೊಜೆನಳದರ ಬದಿ ಮಲಗಿಸುತ್ತಾನೆ. ಅಂತ್ಯಗೌರವ

ಸಲ್ಲಿಸಿ ಅವರು ಎರಡು ಶವಗಳ ಮೇಲೂ ಹೂಚೆಲ್ಲಿ ಹೋಗುತ್ತಾರೆ. ಕೊಂಚ ಹೊತ್ತಿನ ಮೇಲೆ ದ್ರವ್ಯದ ಸಂಮೋಹಕ ಶಕ್ತಿ ಕುಗ್ಗಿ ಇಮೊಜೆನ್ ಕಣ್ತೆರೆಯುತ್ತಾಳೆ. ಪಕ್ಕದಲ್ಲಿನ ರುಂಡ ಕಳೆದ ಶವವನ್ನು ಕಂಡು, ತೊಟ್ಟ ಬಟ್ಟೆಯ ಮೇಲೆ ಅದು ಗಂಡ ಪಾಸ್ತುಮಸನ ದೆಂದೇ ತಪ್ಪು ಬಗೆದು ಗೋಳಿಡುತ್ತಾಳೆ. ಅದೇ ಸಮಯಕ್ಕೆ ಬ್ರಿಟನ್ನಿನ ಮೇಲೆ ದಾಳಿಗೆ ಹೊರಟ ಲೂಷಿಯಸ್ ಎದುರಾಗುತ್ತಾನೆ. ಗಂಡುವೇಷದ ಇಮೊಜೆನ್ ತನ್ನ ದಣಿಯನ್ನು ಯಾರೋ ಕೊಂದಿದ್ದಾರೆಂದೂ ತನಗೆ ದಿಕ್ಕಿಲ್ಲವೆಂದೂ ಹೇಳಿಕೊಳ್ಳುತ್ತಾಳೆ. ಲೂಷಿಯಸ್ ಮರುಕ ಹುಟ್ಟಿ ಇಮೊಜೆನಳನ್ನು ತನ್ನ ಸೇವೆಗೆ ಇರಿಸಿಕೊಳ್ಳುತ್ತಾನೆ.

ಅತ್ತ ಬ್ರಿಟನ್ನಿನಲ್ಲಿ ಮಗನನ್ನು ಕಳೆದುಕೊಂಡ ಕೊರಗಿನಲ್ಲಿ ರಾಣಿ ಹುಚ್ಚು ಹಿಡಿದು ಸಾಯುತ್ತಾಳೆ. ಸಿಂಬೆಲೈನನ ವಿರುದ್ಧ ಲೂಷಿಯುಸನ ಸೈನ್ಯ ದಂಡೆತ್ತಿ ಬರುತ್ತದೆ. ಆ ರೋಮನ್ ಸೈನ್ಯದಲ್ಲಿ ಇಯಾಕಿಮೊ ಇದ್ದಾನೆ; ದೇಶಬಾಹಿರನಾದ ಪಾಸ್ತುಮಸನೂ ಇದ್ದಾನೆ. ತನ್ನ ಆದೇಶದಂತೆ ಇಮೊಜೆನ್ ಪಿಸಾನಿಯೊಸಿಂದ ಹತಳಾದಳೆಂದೇ ಅವನು ನಂಬಿದ್ದಾನೆ. ತಾನು ಮಾಡಿದುದು ಅಕೃತ್ಯವೆಂದು ಅರಿವಾಗಿ ಅವನ ಹೃದಯ ಪಶ್ಚಾತ್ತಾಪದಿಂದ ದಹಿಸಿದೆ. ಬ್ರಿಟನ್ನಿನ ನೆಲ ತಾಕಿದಾಗ ಅವಳ ನವಿನೆನಪುಕ್ಕಿ ಬರುತ್ತದೆ. ಆ ದೊರೆಮಗಳ ಜೀವ ಕೊಂಡದ್ದೊಂದೇ ಸಾಲದೆಂಬಂತೆ ಯುದ್ಧದ ಹೆಸರಿನಲ್ಲಿ ಅವಳ ಅಸಂಖ್ಯಾತ ದೇಶಬಾಂಧವರ ಜೀವಕ್ಕೆ ಎರವಾಗಲು ಮನಸ್ಸು ರೋಸುತ್ತದೆ. ರೋಮನ ರನ್ನು ತೊರೆದು ರೈತನ ವೇಷ ತೊಟ್ಟು ಬ್ರಿಟನ್ನಿನ ಪರವಾಗಿ ಹೋರಾಡಲು ನಿಶ್ಚಯಿಸು ತ್ತಾನೆ. ಆ ಹೋರಾಟದಲ್ಲೇ ಪ್ರಾಣವಿಡುವುದು ಅವನ ಸಂಕಲ್ಪ. ಎರ್ವಿರೇಗಸ್ ಗಿಡೇರಿ ಯುಸರದು ಅವರಿಗೆ ತಿಳಿಯದಿದ್ದರೂ ಬ್ರಿಟನ್ನಿನ ರಾಜರಕ್ತ. ಬೆಲೇರಿಯಸ್ ಬೇಡ ಬೇಡ ವೆಂದರೂ ದೇಶರಕ್ಷಣೆಗೆ ಕಂಕಣ ತೊಡುತ್ತಾರೆ. ಅವರ ಕೆಚ್ಚಿಗೆ ಮೆಚ್ಚಿ ಆ ಮುದುಕನೂ ಅವರೊಡನೆ ಕೈಗೂಡಿಸುತ್ತಾನೆ. ಹೀಗೆ ನಾಲ್ವರೂ ಬ್ರಿಟನ್ನಿನ ಪರವಾಗಿ ವೀರಾವೇಶ ದಿಂದ ಹೋರಾಡುತ್ತಾರೆ. ಇವರ ಪ್ರಯತ್ನದ ಫಲವಾಗಿ ಕೈಸೆರೆಯಾಗಿದ್ದ ಸಿಂಬೆಲೈನ್ ಬಿಡುಗಡೆ ಪಡೆಯುತ್ತಾನೆ; ಸೋತು ಹಿಮ್ಮೆಟ್ಟಿದ್ದ ಬ್ರಿಟಿಷ್ ಸೈನ್ಯ ಮತ್ತೆ ಹುರಿಗೊಂಡು ಸಾಹಸದಿಂದ ಕಾದುತ್ತದೆ. ಪರಿಣಾಮವಾಗಿ ಬ್ರಿಟನ್ನಿಗೆ ಸೋಲು ತಪ್ಪಿ ಅದ್ಭುತ ಜಯ ದೊರೆಯುತ್ತದೆ. ಇವರು ದೇವದೂತರೆಂದೇ ಜನ ನಂಬುತ್ತಾರೆ.

ಬಯಸಿದಂತೆ ಪಾಸ್ತುಮಸ್‌ಸಿಗೆ ಸಾವು ದೊರೆಯದು. ಮತ್ತೊಮ್ಮೆ ಸಾವರಸಿ ತಾನು ಹಿಂದೆ ರೋಮನರ ಪರವಾಗಿದ್ದುದನ್ನು ತಿಳಿಸಿಕೊಟ್ಟು ಸೆರೆ ಸೇರಿ ಮರಣದಂಡನೆ ಯನ್ನು ಎದುರು ನೋಡುತ್ತಾನೆ.

ಕೈಸೆರೆಯಾದ ರೋಮನರ ಲೂಷಿಯಸ್, ಅವನ ಗಂಡಾಳಿನ ವೇಷದಲ್ಲಿರುವ ಇಮೊಜೆನ್ ಮತ್ತು ಇಯಾಕಿಮೊ ಸಿಂಬೆಲೈನನ ಮುಂದೆ ವಿಚಾರಣೆಗೆ ಬರುತ್ತಾರೆ. ಅಲ್ಲಿ ಇಯಾಕಿಮೊನ ಕೈಬೆರಳಿನಲ್ಲಿ ಗಂಡನ ಉಂಗುರವಿರುವುದು ಇಮೊಜೆನಳ ಕಣ್ಣಿಗೆ ಬೀಳು ತ್ತದೆ; ಅದರ ವಿಚಾರಣೆಯಾಗಲೆಂದು ಕೋರುತ್ತಾಳೆ. ಇಯಾಕಿಮೊ ಅದು ತನಗೆ ದೊರೆತ ಬಗೆಯನ್ನು ವಿವರಿಸಿ ಹೇಳಿ, ತನ್ನ ಕುಹಕಗಳೆಲ್ಲವನ್ನೂ ಒಪ್ಪಿಕೊಂಡು ಪಶ್ಚಾತ್ತಾಪ ಪಡುತ್ತಾನೆ. ಅವನ ತಪ್ಪೊಪ್ಪಿಗೆಯಿಂದ ಇಮೊಜೆನಳ ನಿರಪರಾಧ ಸಿದ್ಧವಾಗಿ, ಅವಳನ್ನು ಅಕಾರಣವಾಗಿ ಕೊಲ್ಲಿಸಿದುದಕ್ಕೆ ಪಾಸ್ತುಮಸನ ದುಃಖ, ಪಶ್ಚಾತ್ತಾಪಗಳು ಇಮ್ಮಡಿಸು

ತ್ತವೆ. ಆ ಉದ್ವಿಗ್ನ ಸ್ಥಿತಿಯಲ್ಲಿ ನಡುವೆ ಅಡ್ಡ ಬಂದ ಗಂಡಾಳಿನ ವೇಷದ ಇಮೊಜೆನ್‌ಳಿಗೇ ಏಟು ಬಿಗಿಯುತ್ತಾನೆ! ಅಷ್ಟರಲ್ಲಿ ಅಲ್ಲೇ ಹಾಜರಿದ್ದ ಪಿಸಾನಿಯೊ ಆ ಹುಡುಗನೇ ಇಮೊಜೆನ್ ಎಂದು ತಿಳಿಸಿ, ಅವಳು ಕೊಲೆಯಾಗದೆ ಉಳಿದ ಸಂಗತಿಯನ್ನು ಹೊರಗೆಡವುತ್ತಾನೆ. ಬಿಲೇರಿಯಸ್ ತಾನಾರೆಂಬುದನ್ನು ತಿಳಿಸಿ ತನ್ನೊಡನಿರುವ ಮಕ್ಕಳು ದೊರೆಯ ಮಕ್ಕಳೇ ಎಂಬುದನ್ನು ಬಯಲುಮಾಡುತ್ತಾನೆ. ಮುಸುಕು ಹರಿಯಿತು, ಎಲ್ಲರ ಎಲ್ಲ ಕೋಟಲೆಗಳೂ ಕಳೆದವು. ಗಂಡ-ಹೆಂಡತಿ, ತಂದೆ-ಮಕ್ಕಳು, ಅಕ್ಕ-ತಮ್ಮಂದಿರು ಮತ್ತೆ ಒಂದಾಗುತ್ತಾರೆ. ಸಿಂಬೆಲೈನ್ ರೋಮನರನ್ನು ಜಯಿಸಿದ್ದರೂ ಅವರೊಡನೆ ಕೈಕುಲುಕಿ ಎರಡೂ ದೇಶಗಳ ಶಾಂತಿ ಸಾಧಿಸುತ್ತಾನೆ. ಎಲ್ಲರನ್ನೂ ಆನಂದ ಹರಸುತ್ತದೆ.

## 26. ದಿ ವಿಂಟರ್ಸ್ ಟೇಲ್

**ರಚನೆ:** 1610-11. **ಮೊದಲ ಪ್ರಕಟನೆ:** 1623.

**ಆಕರ:** ರಾಬರ್ಟ್ ಗ್ರೀನನ 'ಪ್ಯಾಂಡೊಸ್ಟೊ ಆರ್ ದಿ ಟ್ರೈಯುಂಫ್ ಆಫ್ ಟೈಮ್' (ಪುನರ್ಮುದ್ರಣದ ಹೆಸರು: 'ಡೊರಾಸ್ಟಸ್ ಅಂಡ್ ಫಾನಿಯಾ') ಎಂಬ ರಮ್ಯಕ.

**ಕಥೆ:** 'ಆಥೆಲ್ಲೊ'ವಂತೆ ಇಲ್ಲಿಯೂ ಮನುಷ್ಯನ ಎದೆಯಲ್ಲಿ ಮೊಟ್ಟೆಯಿಟ್ಟು ಕೇಡಿನ ಭೂತವನ್ನು ಮರಿ ಹಾಕುವ ಮತ್ಸರಭಾವನೆ ನಾಟಕದ ಮುಖ್ಯ ಪ್ರಚೋದನೆ. ಆದರೆ ಅದರಂತೆ ಇದು ರುದ್ರವಲ್ಲ; ರುದ್ರವಾಗಬೇಕಾಗಿದ್ದುದು ಕೈತಪ್ಪಿ ವಿಧಿಯ ಕರುಣೆಯಿಂದ ಸುಖಾಂತವಾಗಿ, ರಮ್ಯಕವಾಗಿ ಪರಿಣಮಿಸುತ್ತದೆ. ಕೃತಿ ಅಚ್ಚುಕಟ್ಟಿಗೆ, ಸೊಗಸಿಗೆ, ಪರಿಪೂರ್ಣತೆಗೆ ಹೆಸರಾಗಿದೆ. ನಾಟಕದ ಉತ್ತರಾರ್ಧದಲ್ಲಿ ಬರುವ ಹಳ್ಳಿಗಾಡಿನ ಜೀವನ ಚಿತ್ರಣ, ಅದರ ಹುಲ್ಲುಗಾವಲಿನ ಕಂಪು, ಮೃದುತೆ, ಮನೋಹರತೆಗಳು, ಅಲ್ಲಿ ಬಾಳ್ವೆ ನಡಸುವ ಕುರುಬರ ಸರಳತೆ, ಮುಗ್ಧತೆಗಳು, ಫ್ಲಾರಿಜೆಲ್-ಪರ್ಡಿಟಾರ ರಮ್ಯಪ್ರೇಮ, ತುಡುಗ ಆಟೋಲಿಕಸನ ಪಾತ್ರ — ಇವು ನಾಟಕಕ್ಕೆ ಮೆರುಗಿತ್ತಿವೆ.

ಲಿಯಾಂಟೆಸ್ ಸಿಸಿಲಿಯಾ ದೇಶದ ದೊರೆ. ಹರ್ಮಿಯೋನ್ ಅವನ ಚೆಲುವೆ ಹೆಂಡತಿ, ಮ್ಯಾಮಿಲಿಯಸ್ ಮುದ್ದು ಮಗ. ಸುಖಸಂತೋಷಗಳು ತುಂಬಿದ ನಲವಿನ ಸಂಸಾರ ಅವರದು. ಸಿಸಿಲಿಯಾಗೆ ಹತ್ತಿರದಲ್ಲೇ ಬೊಹೀಮಿಯಾ ಎಂಬ ಇನ್ನೊಂದು ರಾಜ್ಯ. ಅದರ ದೊರೆ ಪಾಲಿಕ್ಸೆನೀಸ್. ಅವನೂ ಲಿಯಾಂಟೆಸನೂ ಬಾಲ್ಯದ ಗೆಳೆಯರು.

ಒಮ್ಮೆ ಪಾಲಿಕ್ಸೆನೀಸ್ ಲಿಯಾಂಟೆಸನ ಅತಿಥಿಯಾಗಿ ಸಿಸಿಲಿಯಾಗೆ ಬರುತ್ತಾನೆ. ಸಂತೋಷಸತ್ಕಾರಗಳಲ್ಲಿ ದಿನ ಕಳೆಯುತ್ತದೆ. ಕೊನೆಗೆ ಪಾಲಿಕ್ಸೆನೀಸ್ ಊರಿನ ನೆನಪಾಗಿ ವಾಪಸು ಹೊರಡಲು ನಿಶ್ಚಯಿಸುತ್ತಾನೆ. ಅವನು ಇನ್ನೂ ಕೆಲವು ದಿನ ತನ್ನ ಜೊತೆ ಇದ್ದು ಹೋಗಲೆಂದು ಲಿಯಾಂಟೆಸನ ಆಸೆ. ಎಷ್ಟೇ ಗೋಗರೆಯಲಿ, ಬಲಾತ್ಕರಿಸಲಿ ಪಾಲಿಕ್ಸೆನೀಸ್ ಒಪ್ಪ. ನೀನೂ ಒಂದು ಮಾತು ಹೇಳಿನೋಡೆಂದು ಲಿಯಾಂಟೆಸ್ ರಾಣಿ ಹರ್ಮಿಯೋನಳಿಗೆ ತಿಳಿಸುತ್ತಾನೆ. ಪಾಲಿಕ್ಸೆನೀಸ್ ರಾಣಿಯ ಅರಿಕೆಗೆ ಇಲ್ಲವೆನ್ನುವುದಿಲ್ಲ, ಉಳಿಯಲು ಒಪ್ಪುತ್ತಾನೆ. ಮೊದಮೊದಲು ಲಿಯಾಂಟೆಸ್‌ನಿಗೆ ಆನಂದ. ಆದರೆ ಹಿಂದೆಯೇ ಗೆಳೆಯ ತನ್ನ ಮಾತಿಗೆ ಬೆಲೆಕೊಡದೆ ರಾಣಿಯ ಮಾತಿಗೆ ಸಮ್ಮತಿಸಿದುದೇಕೆಂಬ ಪ್ರಶ್ನೆ ಮೊಳೆಯುತ್ತದೆ,

ನೋಳೆತಷ್ಟೇ ಬೇಗ ಭೂತವಾಗಿ, ಸಂಶಯಪಿಶಾಚವಾಗಿ ಬೆಳೆದು ಲಿಯಾಂಟೆಸ್‌ನನ್ನು ಹಿಡಿದು ಆಡಿಸುತ್ತದೆ. ಪಾಲಿಕ್ಸಿನೀಸ್ ಹರ್ಮಿಯೋನ್ ಪರಸ್ಪರ ಪ್ರೇಮಿಸಿದ್ದಾರೆಂದು ತರ್ಕಿಸಿ ಹೆಂಡತಿ ಹಾದರಗಿತ್ತಿಯೆಂಬ ತೀರ್ಮಾನಕ್ಕೆ ಬರುತ್ತಾನೆ.

ಲಿಯಾಂಟೆಸ್ ಈಗ ಹುಚ್ಚ. ಮತ್ಸರ ತುಂಬಿದ ಮನಸ್ಸು ಸೇಡಿಗೆ ಹಾತೊರೆಯುತ್ತದೆ. ನೆಚ್ಚಿನ ಮಂತ್ರಾಲೋಚಕ ಕ್ಯಾಮಿಲೊಗೆ ಸಂಶಯ ತಿಳಿಸಿ ಪಾಲಿಕ್ಸಿನೀಸನಿಗೆ ವಿಷವಿಟ್ಟು ಕೊಲ್ಲೆನ್ನುತ್ತಾನೆ. ಪಾಲಿಕ್ಸಿನೀಸ್ ಹರ್ಮಿಯೋನರು ಪಾಪದೂರರೆಂದು ಮನವರಿಕೆಗೊಂಡ ಕ್ಯಾಮಿಲೊ ದೊರೆಯ ಸಂಶಯ ಸಾಧುವಲ್ಲವೆಂದು ವಾದಿಸುತ್ತಾನೆ. ಆ ವಾದ ವ್ಯರ್ಥ. ದೊರೆ ಕ್ಯಾಮಿಲೊನ ಮೇಲೆಯೇ ತಿರುಗಿಬೀಳುತ್ತಾನೆ. ಕ್ಯಾಮಿಲೊ ದೊರೆಯ ಸಲಹೆಗೆ ಒಪ್ಪಿದಂತೆ ಮಾಡಿ, ಅವನ ದುರುದ್ದೇಶವನ್ನು ಪಾಲಿಕ್ಸಿನೀಸನಿಗೆ ತಿಳಿಸುತ್ತಾನೆ. ಅದೇ ರಾತ್ರಿ ಅವರಿಬ್ಬರೂ ಗುಟ್ಟಾಗಿ ಬೊಹೀಮಿಯಾಗೆ ಹೊರಡುತ್ತಾರೆ.

ಪಾಲಿಕ್ಸಿನೀಸನ ಪಲಾಯನ ದೊರೆಯ ಸಂಶಯಕ್ಕೆ ಇದ್ದಿದ್ದೂ ಪುಷ್ಟಿ ಕೊಡುತ್ತದೆ. ಕ್ಯಾಮಿಲೊನ ನೆರವಿನಿಂದ ಅವನು ತನ್ನ ಕೊಲೆಗೆ ಹದಿ ಹಾಕಿದ್ದನೆಂದು ಕಲ್ಪಿಸಿಕೊಳ್ಳುತ್ತಾನೆ. ಇದೇ ಸಮಯಕ್ಕೆ ಹರ್ಮಿಯೋನ್ ಗರ್ಭಿಣಿಯಾಗಿದ್ದಾಳೆ. ಅವಳ ಹೊಟ್ಟೆಯ ಕೂಸು ಪಾಲಿಕ್ಸಿನೀಸನದೇ ಎಂದು ದೊರೆಯ ನಂಬಿಕೆ. ಅವನ ಕಿಚ್ಚು ಈಗ ಹರ್ಮಿಯೋನಳ ಮೇಲೆ ತಿರುಗುತ್ತದೆ. ತಾಯಿ ಮಗನ ಮುಖ ನೋಡದಂತೆ ಮ್ಯಾಮಿಲಿಯಸ್‌ನನ್ನು ಅವಳಿಂದ ದೂರವಿಟ್ಟು, ಅವಳು ಹಾದರಗಿತ್ತಿಯೆಂದು ಬಹಿರಂಗವಾಗಿ ಆರೋಪ ಹೊರಿಸಿ ಸೆರೆಗೆ ತಳ್ಳುತ್ತಾನೆ. ಹರ್ಮಿಯೋನ್ ಸಹನೆಯ ಮೂರ್ತಿವಂತ ಸ್ವರೂಪ. ಈ ಎಲ್ಲ ಅವಮಾನಗಳನ್ನೂ ತಾಳ್ಮೆಯಿಂದ ಸಹಿಸಿ ತಾನು ನಿಷ್ಕಳಂಕಳೆಂದು ಅರಿಕೆ ಮಾಡಿಕೊಳ್ಳುತ್ತಾಳೆ; ಆಸ್ಥಾನದ ಜನ ರಾಣಿಗೆ ಬೆಂಬಲಿಗರಾಗಿ ದೊರೆಯ ವರ್ತನೆಯನ್ನು ಖಂಡಿಸುತ್ತಾರೆ. ಆದರೆ ಇವು ಯಾವವೂ ಅವನ ಮನಸ್ಸನ್ನು ಬದಲಿಸವು. ಡೆಲ್ಫಿಯ ದೇವಮಂದಿರ ಶಕುನಕ್ಕೆ ಹೆಸರಾದ ಸ್ಥಳ. ಅಲ್ಲಿ ಕಣಿ ಕೇಳಿ ಬರಲು ದೊರೆ ಜನರನ್ನು ಕಳಿಸುತ್ತಾನೆ. ಅವರು ತರುವ ಶಕುನ ತನ್ನ ಸಂಶಯವನ್ನು ಖಚಿತಗೊಳಿಸಿಯೇ ತೀರುವುದೆಂದು ಅವನ ವಿಶ್ವಾಸ!

ಲಿಯಾಂಟೆಸನ ಆಸ್ಥಾನಿಕರಲ್ಲಿ ಆ್ಯಂಟಿಗೋನಸ್ ಎಂಬೊಬ್ಬ ಹಿರಿಯ. ಪಾಲಿನಾ ಅವನ ಹೆಂಡತಿ. ಅವಳಿಗೆ ರಾಣಿಯಲ್ಲಿ ತುಂಬ ಪ್ರೀತಿ. ಸೆರೆಮನೆ ಕಂಡ ಆ ಗರ್ಭಿಣಿಗೆ ನ್ಯಾಯ ದೊರಕಿಸಲು ಸತತ ಪ್ರಯತ್ನ ಮಾಡುತ್ತಾಳೆ. ಕೆಲ ದಿನಗಳಲ್ಲೇ ರಾಣಿಗೆ ಒಂದು ಹೆಣ್ಣು ಮಗುವಾಗುತ್ತದೆ. ಆ ಮಗು ತದ್ವತ್ ಲಿಯಾಂಟೆಸ್‌ನಂತೆಯೇ ಇದೆ. ಅದನ್ನು ನೋಡಿಯಾದರೂ ದೊರೆಯ ಸಂಶಯ ಕಳೆದು ವಿವೇಕ ಮೂಡಬಹುದೆಂದು ಪಾಲಿನಾಳ ಆಸೆ. ಅದನ್ನೆತ್ತಿಕೊಂಡು ದೊರೆಯ ಮುಂದೆ ಬರುತ್ತಾಳೆ. ಆದರೆ ಮನೋವಿಕಾರದಿಂದ ಕುರುಡನಾದ ಲಿಯಾಂಟೆಸ್ ಅದರ ಮುಖವನ್ನು ಸಹ ನೋಡುವುದಿಲ್ಲ. ಆ್ಯಂಟಿಗೋನಸನನ್ನು ಕರೆಸಿ, ಮಗುವನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಆಜ್ಞೆ ಮಾಡುತ್ತಾನೆ. ಆ್ಯಂಟಿಗೋನಸ್ ನಿರ್ವಾಹವಿಲ್ಲದೆ ದೊರೆಯ ಅಪ್ಪಣೆಯನ್ನು ಪಾಲಿಸಲು ಹೊರಡಬೇಕಾಗುತ್ತದೆ.

ಡೆಲ್ಫಿಗೆ ಕಣಿ ಕೇಳಿ ಬರಲು ಹೋಗಿದ್ದ ಜನ ಹಿಂದಿರುಗುವಂದು ಲಿಯಾಂಟೆಸ್ ಹರ್ಮಿಯೋನಳ ಬಹಿರಂಗ ವಿಚಾರಣೆಗೆ ಏರ್ಪಡಿಸಿ, ಆಸ್ಥಾನ ನೆರೆಸಿದ್ದಾನೆ. ರಾಣಿ ತನ್ನ ಮೇಲಿನ ಆರೋಪಗಳನ್ನು ಅಲ್ಲಗಳೆಯುತ್ತಾಳೆ. ದೊರೆ ಅವಳ ಮಗುವಿಗೊದಗಿದ

ದುರ್ಗತಿಯನ್ನು ಹೊರಗೆಡವಿ ಅವಳಿಗೂ ಸಾವು ಕಾದಿದೆಯೆನ್ನುತ್ತಾನೆ. ಅದೇ ಹೊತ್ತಿಗೆ ಡೆಲ್ಫಿಯಿಂದ ಶಕುನ ಬರುತ್ತದೆ. ಅದರಲ್ಲಿ ತಾನು ಅಂದುಕೊಂಡಂತೆಯೇ ಇರುವುದೆಂದು ಲಿಯಾಂಟೆಸನ ಭರವಸೆ. ಆದರೆ ಅದರ ಒಕ್ಕಣೆ ಹೀಗಿದೆ — 'ಹರ್ಮಿಯೋನ್ ಶೀಲವತಿ, ಪಾಲಿಕ್ಸೆನೀಸ್ ನಿರ್ದೋಷಿ, ಕ್ಯಾಮಿಲೊ ನಿಷ್ಠಾವಂತ ಪ್ರಜೆ, ಲಿಯಾಂಟೆಸ್ ಸಂಶಯ ಗ್ರಸ್ತ ಹಿಂಸಕ, ಹುಟ್ಟಿದ ಮಗು ಅವನದೇ, ಅದನ್ನು ಹುಡುಕಿ ತರಿಸದಿದ್ದರೆ ದೊರೆ ವಾರಸ ದಾರರಿಲ್ಲದೇ ಸಾಯಬೇಕಾಗುತ್ತದೆ!'

ತಾನು ಸತ್ಯವೆಂದು ದೃಢವಾಗಿ ನಂಬಿರುವುದನ್ನು ಶಕುನ ಸುಳ್ಳೆಂದರೆ ದೊರೆ ಒಪ್ಪುವನೆ? ಶಕುನದಲ್ಲೇ ಸತ್ಯವಿಲ್ಲವೆಂದು ಹಾರಾಡುತ್ತಾನೆ. ಅವನ ಅಪಚಾರಕ್ಕೆ ದೈವವೇ ಮುನಿಸಿಕೊಂಡಿತೊ ಎಂಬಂತೆ ಅದೇ ಹೊತ್ತಿಗೆ ಮಗ ಮ್ಯಾಮಿಲಿಯಸ್ ತಾಯಿಯ ಚಿಂತೆಯಲ್ಲಿ, ಅವಳಿಂದ ದೂರವಾದ ಕೊರಗಿನಲ್ಲಿ ಪ್ರಾಣ ಬಿಟ್ಟನೆಂದು ಅರಮನೆಯ ಆಳುಗಳು ಸುದ್ದಿ ತರುತ್ತಾರೆ. ದೊರೆಗೆ ಮಗನೆಂದರೆ ತುಂಬ ಅಕ್ಕರೆ. ಅವನು ತನ್ನ ಹುಚ್ಚಿಗೆ ಬಲಿಯಾಗಿ ಸತ್ತನೆಂದು ಕೇಳಿ ದೊರೆಯ ಪೊರೆ ಹರಿದು ಕಣ್ತೆರೆ ಯುತ್ತದೆ. ತನ್ನ ಅವಿವೇಕಕ್ಕೆ ಪಶ್ಚಾತ್ತಾಪಪಟ್ಟು ಗೋಳಿಡುತ್ತಾನೆ. ಅಷ್ಟರಲ್ಲೇ ಅತ್ತ ರಾಣಿ ದುಃಖ ತಾಳಲಾರದೆ ಮೂರ್ಛೆ ಹೋಗುತ್ತಾಳೆ. ಅವಳ ಜೀವಕ್ಕೂ ಅಪಾಯ ತಟ್ಟಬಹುದೆಂದು ಹೆದರಿದ ದೊರೆ ತಕ್ಕ ಔಷಧೋಪಚಾರಗಳಿಂದ ಅವಳನ್ನು ಉಳಿಸೆಂದು ಪಾಲಿನಾಳನ್ನು ಕೇಳಿಕೊಳ್ಳುತ್ತಾನೆ. ಆದರೆ ಪೂರ್ಣ ಪ್ರಾಯಶ್ಚಿತ್ತವಾಗದೆ ಪಾಪದ ಪರಿಹಾರವೆಂತು? ಸ್ವಲ್ಪ ಹೊತ್ತಿನಲ್ಲೇ ಪಾಲಿನಾ ಹಿಂದಿರುಗಿ ಬಂದು ವ್ಯಥೆಯ ಭಾರಕ್ಕೆ ರಾಣಿಯೂ ಮೃತಳಾದಳೆಂದು ತಿಳಿಸುತ್ತಾಳೆ. ದೊರೆ ಎದೆಬಡಿದುಕೊಂಡು ಅಳುತ್ತಾನೆ, ಸೇಚಾಡುತ್ತಾನೆ, ತನ್ನನ್ನು ತಾನು ಶಪಿಸಿಕೊಳ್ಳುತ್ತಾನೆ. ತಾಯಿಮಗ ಇಬ್ಬರನ್ನೂ ಒಂದೇ ಸಮಾಧಿಯಲ್ಲಿ ಸಂಸ್ಕಾರ ಮಾಡಿ ಜೀವನಪೂರ್ತಿ ಅದರ ಬಳಿ ಕಣ್ಣೀರಿಡುತ್ತ ಕಾಲ ಕಳೆದು ಆ ಮೂಲಕ ಪ್ರಾಯಶ್ಚಿತ್ತ ಸಲ್ಲಿಸುವುದಾಗಿ ತೀರ್ಮಾನಿಸುತ್ತಾನೆ.

ಅತ್ತ ರಾಜಾಜ್ಞೆಯಂತೆ ರಾಣಿಯ ಎಳೆಗೂಸನ್ನು ಕಾಡುಪಾಲು ಮಾಡಿ ಬರಲು ಹೋದ ಆ್ಯಂಟಿಗೋನಸ್ ಬೊಹೀಮಿಯಾದ ದಂಡೆ ತಲಪಿದ್ದಾನೆ ಹರ್ಮಿಯೋನ್ ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡು ಮಗುವಿಗೆ ಪರ್ಡಿಟಾ ಎಂದು ಹೆಸರಿಟ್ಟು ಅದನ್ನು ಬೊಹೀಮಿಯಾದಲ್ಲೇ ಬಿಡಬೇಕೆಂದು ಆದೇಶ ನೀಡುತ್ತಾಳೆ. ಅದರಂತೆ ಅವನು ಸಮುದ್ರ ತೀರದ ನಿರ್ಜನ ಪ್ರದೇಶದಲ್ಲಿ ಮಗುವಿಗೆ ರತ್ನಖಚಿತವಾದ ಬಟ್ಟೆ ಹೊದಿಸಿ ಮಲಗಿಸುತ್ತಾನೆ; ಬದಿಯಲ್ಲಿ ಚಿನ್ನ ತುಂಬಿದ ಪೆಟ್ಟಿಗೆಯಿಟ್ಟು ಅದರಲ್ಲಿ ಅದರ ಹೆಸರನ್ನೂ ಜನ್ಮವೃತ್ತಾಂತ ವನ್ನೂ ಬರೆದಿರಿಸಿ ಹಿಂದಿರುಗುತ್ತಾನೆ. ಆ್ಯಂಟಿಗೋನಸ್ ಮತ್ತೆ ಹಡಗಿನ ಮುಖ ಕಾಣು ವುದಿಲ್ಲ. ತೋಳವೊಂದು ಅಟ್ಟಿ ಬಂದು ಅವನನ್ನು ಸಿಗಿದು ಕೊಲ್ಲುತ್ತದೆ. ಮುಂದೆ ಅವನ ದೋಣಿ ಬಿರುಗಾಳಿಗೆ ಸಿಕ್ಕಿ ಜತೆಗಾರರೆಲ್ಲರೂ ನೀರಪಾಲಾಗುತ್ತಾರೆ. ಲಿಯಾಂಟೆಸ್ ನಿಗೆ ತನ್ನ ಮಗುವಿನ ಗತಿ ಏನಾಯಿತೆಂಬುದೇ ತಿಳಿಯದೆ ಹೋಗುತ್ತದೆ. ಹೆಂಡತಿ, ಮಗ, ಮಗಳು ಎಲ್ಲರನ್ನೂ ಕಳೆದುಕೊಂಡ ಆ ಏಕಾಕಿ ದುಃಖದಲ್ಲಿ ಕಾಲ ತಳ್ಳುತ್ತಾನೆ.

ಆ್ಯಂಟಿಗೋನಸ್ ಬಿಟ್ಟು ಹೋದ ಮಗು ಬೊಹೀಮಿಯಾದ ಒಬ್ಬ ಮುದಿ ಕುರುಬ ನಿಗೆ ಸಿಗುತ್ತದೆ. ಅವನು ಅದನ್ನು ತನ್ನದನ್ನಾಗಿಸಿಕೊಂಡು, ಮಗಳಂತೆ ಬೆಳಸುತ್ತಾನೆ.



**ಹರ್ಮಿಯೋನ್ ಮತ್ತು ಲಿಯಾಂಟಸ್**

ಹದಿನಾರು ವರ್ಷಗಳು ಉರುಳುತ್ತವೆ. ಪರ್ಡಿಟಾ ದೊಡ್ಡವಳಾಗುತ್ತಾಳೆ. ಅವಳು ಹೂವಿನ ಹುಡುಗಿ, ಕೆನೆಮೊಸರಿನ ರಾಣಿ; ಆ ಸುತ್ತುಮುತ್ತಿನಲ್ಲೆಲ್ಲೂ ಅವಳನ್ನು ಮೀರಿಸಿದ ಚೆಲುವೆ ಇನ್ನೊಬ್ಬಳಿಲ್ಲ. ಜನ ಅವಳು ಕುರುಬನ ಸ್ವಂತ ಮಗಳೆಂದೇ ನಂಬಿದ್ದಾರೆ.

ಬೊಹೀಮಿಯಾದ ದೊರೆ ಪಾಲಿಕ್ಸಿನೀಸನಿಗೆ ಫ್ಲಾರಿಜೆಲ್ ಎಂಬ ಮಗ. ಪರ್ಡಿಟಾ ಅವನ ಕಣ್ಣಿಗೆ ಬೀಳುತ್ತಾಳೆ, ಹುಡುಗ ಹುಚ್ಚಾಗುತ್ತಾನೆ. ಪ್ರೇಮಕ್ಕೆ ಕುರುಬಿತಿ ದೊರೆ-ಮಗನೆಂಬ ಭೇದವೆಲ್ಲಿಯದು? ಅರಮನೆಯಿಂದ ಕಣ್ಣು ತಪ್ಪಿಸಿ ಬಂದು ಪರ್ಡಿಟಾಳೊಡನೆ ಒಲಿದಾಡುತ್ತ ಮುದಿಕುರುಬನ ಹಟ್ಟಿಯಲ್ಲಿ ಕಾಲ ತಳ್ಳುತ್ತಿರುತ್ತಾನೆ. ಇದು ದೊರೆಯ ಕಿವಿಗೂ ಬೀಳುತ್ತದೆ. ಸುದ್ದಿ ನಿಜವೋ ಸುಳ್ಳೋ ಎಂದು ಪರೀಕ್ಷಿಸಿ ನೋಡಲು ದೊರೆ

ನೆಚ್ಚಿನ ಸಖ ಕ್ಯಾಮಿಲೊನ ಜೊತೆ ಕುರುಬರ ಹಟ್ಟಿಗೆ ಬರುತ್ತಾನೆ. ಗುರುತು ಸಿಕ್ಕದಿರಲೆಂದು ಇಬ್ಬರೂ ಕುರುಬರಂತೆಯೇ ವೇಷ ಮರಸಿಕೊಂಡಿದ್ದಾರೆ. ಅವತ್ತು ತುಪ್ಪಟ ಕೊಯ್ಯುವ ದಿವಸ, ಕುರುಬರಿಗೆ ದೊಡ್ಡ ಹಬ್ಬ. ಉತ್ಸವ ನಡೆದಿದೆ. ಎಲ್ಲೆಲ್ಲೂ ಹಾಡು, ಕುಣಿತ, ಊಟ, ಉಣಿಸುಗಳ ಸುಗ್ಗಿ. ಪರ್ಡಿಟಾ ಫ್ಲಾರಿಜೆಲ್ ತಂದುಕೊಟ್ಟ ನಾಜೂಕಿನ ಉಡುಪು ಧರಿಸಿ ದೊರೆಮಗಳಂತೆಯೇ ಕಾಣುತ್ತಿದ್ದಾಳೆ. ಉತ್ಸವದಲ್ಲಿ ಅವರಿಬ್ಬರೂ ಜೊತೆ ಬಿಡರು, ಕೈಕೈ ಕೂಡಿಸಿ ಕುಣಿಯುತ್ತಾರೆ, ನಲಿಯುತ್ತಾರೆ. ಫ್ಲಾರಿಜೆಲ್ ಥಟ್ಟನೆ ಅಲ್ಲೇ ತಮ್ಮ ಮದುವೆಯ ನಿಶ್ಚಿತಾರ್ಥವಾಗಲೆನ್ನುತ್ತಾನೆ. ಮುದಿಕುರುಬನಿಗೆ ಮಗಳು ಸುಖಿಯಾಗಿರುವುದೇ ಬೇಕು, ಒಪ್ಪುತ್ತಾನೆ. ಆಗ ದೊರೆ ಪಾಲಿಕ್ಸಿನೀಸ್ ಅಡ್ಡ ಬಂದು ತಾನು ಯಾರೆಂಬುದನ್ನು ಹೊರಗೆಡವಿ ಮಗ ತನ್ನ ರಾಜಮನೆತನವನ್ನು ಕೀಳು ಮಾಡಿ ಕುರುಬಿತಿಯೊಬ್ಬಳನ್ನು ಮದುವೆಯಾಗಲು ಮುಂದಾದುದಕ್ಕೆ ಸಿಟ್ಟಾಗುತ್ತಾನೆ. ಫ್ಲಾರಿಜೆಲ್ ಪುನಃ ಪರ್ಡಿಟಾಳನ್ನು ಕಾಣುವ ಪ್ರಯತ್ನಮಾಡಿದರೆ ಅವನಿಗೆ ಸಿಂಹಾಸನದ ಹಕ್ಕಿಲ್ಲವೆಂದೂ ಅದಕ್ಕೆ ಆಸ್ಪದ ಕೊಟ್ಟರೆ ಪರ್ಡಿಟಾಳಿಗೂ ಮುದಿಕುರುಬನಿಗೂ ಮರಣದಂಡನೆಯೆಂದೂ ಸಾರುತ್ತಾನೆ. ಆದರೆ ಫ್ಲಾರಿಜೆಲನ ಪ್ರೇಮ ಈ ಬೆದರಿಕೆಗಳ ಭಾರಕ್ಕೆ ಮುರಿದುಬೀಳುವಷ್ಟು ಟೊಳ್ಳಲ್ಲ. ಅವನಿಗೆ ಸಿಂಹಾಸನಕ್ಕಿಂತ ಪರ್ಡಿಟಾಳ ಒಲವು ಹೆಚ್ಚು ಪ್ರಿಯ, ಅಮೂಲ್ಯ. ಅವಳೊಡನೆ ಎಲ್ಲಾದರೂ ದೂರದೇಶಕ್ಕೆ ಓಡಿಹೋಗಿ ನೆಲಸುವ ಆಲೋಚನೆ ಮಾಡುತ್ತಾನೆ. ಈ ಸಾಹಸದಲ್ಲಿ ಅವನಿಗೆ ಸ್ವತಃ ಕ್ಯಾಮಿಲೊನಿಂದಲೇ ಸಹಕಾರ ಸಹಾಯಗಳು ಒದಗುತ್ತವೆ. ಕ್ಯಾಮಿಲೊ ಸಿಸಿಲಿಯಾದ ಮುಖ ಕಂಡು ದಶಕಗಳೇ ಉರುಳಿವೆ, ತಾಯ್ನಾಡಿಗೆ ಹಿಂದಿರುಗಲು ಮನಸ್ಸು ಹಾತೊರೆಯುತ್ತಿದೆ. ಆದರೆ ಅವನಿಂದ ದೂರವಾಗಲಿಚ್ಛಿಸದ ದೊರೆ ಪಾಲಿಕ್ಸಿನೀಸ್ ಹೋಗಗೊಡುತ್ತಿಲ್ಲ. ಫ್ಲಾರಿಜೆಲ್-ಪರ್ಡಿಟಾರನ್ನು ಸಿಸಿಲಿಯಾಗೆ ಸಾಗಹಾಕಿದರೆ ಅವರನ್ನು ಹುಡುಕಿ ತರಲು ದೊರೆ ತನ್ನನ್ನೇ ಕಳಿಸುವನೆಂದು, ಆಗಲಾದರೂ ತಾಯ್ನಾಡನ್ನು ಮತ್ತೆ ಕಾಣುವ ಅವಕಾಶ ಸಿಗುವುದೆಂದು ಕ್ಯಾಮಿಲೊನ ಹವಣಿಕೆ. ಸ್ವತಃ ಕೈಯಿಂದ ಹಣ ಕೊಟ್ಟು ಅವರ ಪ್ರವಾಸಕ್ಕೆ ಏರ್ಪಾಡು ಮಾಡುತ್ತಾನೆ; ಲಿಯಾಂಟೀಸ್‌ನಲ್ಲಿಗೆ ಹೋಗಿ ಪಾಲಿಕ್ಸಿನೀಸನಿಂದ ಮೈತ್ರಿಸಂದೇಶ ತಂದವರಂತೆ ತೋರಿಸಿಕೊಳ್ಳಲು ಹೇಳುತ್ತಾನೆ.

ಈ ನಡುವೆ ಮುದಿಕುರುಬನಿಗೆ ಪರ್ಡಿಟಾಳ ಪ್ರೇಮಪ್ರಸಂಗದಿಂದಾಗಿ ತನ್ನ ತಲೆ ಹೋಗುವುದೆಂಬ ಅಂಜಿಕೆ. ಎಷ್ಟೇ ಅಂದರೂ ಅವಳು ಸ್ವಂತ ಮಗಳಲ್ಲ, ಸಾಕುಮಗಳು. ಆ ಗುಟ್ಟನ್ನು ದೊರೆಗೆ ತಿಳಿಸಿದರೆ ತನ್ನ ಜೀವ ಉಳಿಯಬಹುದೆಂದು ತರ್ಕಿಸಿ, ಅದರ ಪ್ರಮಾಣವಾಗಿ ಅವಳೊಂದಿಗೆ ದಕ್ಕಿದ್ದ ಅವಳ ಹೆಸರು ಐತಿಹ್ಯಗಳನ್ನುಳ್ಳ ಆ್ಯಂಟಿಗೋನಸನ ಪತ್ರ, ರತ್ನವಸ್ತ್ರಗಳೊಡನೆ ದೊರೆಯನ್ನು ಕಾಣಲು ಹೋಗುತ್ತಾನೆ. ಆದರೆ ಆಟೋಲಿಕಸ್ ಎಂಬೊಬ್ಬ ತುಡುಗನ ಕುಚೇಷ್ಟೆಯಿಂದಾಗಿ ಆಸ್ಥಾನದ ಬದಲು ಫ್ಲಾರಿಜೆಲ್-ಪರ್ಡಿಟಾರನ್ನು ಕರೆದೊಯ್ಯಲು ಸಿದ್ಧವಾಗಿ ನಿಂತಿದ್ದ ಹಡಗು ಹತ್ತಿ ಅವನೂ ಸಿಸಿಲಿಯಾ ಸೇರುತ್ತಾನೆ.

ಫ್ಲಾರಿಜೆಲ್-ಪರ್ಡಿಟಾ ಸಿಸಿಲಿಯಾ ತಲಪುತ್ತಾರೆ. ಹಿಂದೆಯೇ ಪಾಲಿಕ್ಸಿನೀಸ್ ಕ್ಯಾಮಿಲೊ ಬೆನ್ನಟ್ಟಿ ಬರುತ್ತಾರೆ. ಮುದಿಕುರುಬ ತನಗೆ ಪರ್ಡಿಟಾ ಸಿಕ್ಕ ಬಗೆಯನ್ನು ಲಿಯಾಂಟೀಸ್‌ನಿಗೆ ವಿವರಿಸಿ ಪ್ರಮಾಣಗಳನ್ನು ಮುಂದಿಡುತ್ತಾನೆ. ಲಿಯಾಂಟೀಸ್ ಪರ್ಡಿಟಾ ತಂದೆಮಗಳೆಂಬುದು ಸಿದ್ಧವಾಗುತ್ತದೆ. ಅವರಿಗೆ ಪುನರ್ಮಿಲನದ ಮಹದಾನಂದ.

ಹಾಗೆಯೇ ಲಿಯಾಂಟೆಸ್-ಪಾಲಿಕ್ಸಿನೀಸರಿಗೆ ಸಹ. ಅವರು ಮತ್ತೆ ಒಂದಾಗಿ ಹಳೆಯ ಗೆಳೆತನ ಸ್ಥಾಪಿಸುತ್ತಾರೆ. ಆ ನಂಟನ್ನು ಶಾಶ್ವತಗೊಳಿಸಲೋ ಎಂಬಂತೆ ಫ್ಲಾರಿಜೆಲ್ ಪರ್ಡಿಟಾರ ಮದುವೆಯಾಗುತ್ತದೆ. ಇಷ್ಟೆಲ್ಲ ಸಂತೋಷಗಳ ನಡುವೆ ಲಿಯಾಂಟೆಸ್‌ನಿಗೆ ತನ್ನ ಸುಖ ಪೂರ್ಣಗೊಳಿಸಲು ಹರ್ಮಿಯೋನ್ ಬದುಕಿಲ್ಲವಲ್ಲ ಎಂಬ ಒಂದೇ ಕೊರಗು.

ಪಾಲಿನಾ ಹರ್ಮಿಯೋನಳ ಒಂದು ವಿಗ್ರಹ ಮಾಡಿಸಿರುವುದಾಗಿ ಹೇಳಿ ಅದನ್ನು ತೋರಿಸಲು ಅವರೆಲ್ಲರನ್ನೂ ಕರೆದೊಯ್ಯುತ್ತಾಳೆ. ತೆರೆ ಸರಿದು ವಿಗ್ರಹ ಕಣ್ಣಿಗೆ ಬಿದ್ದಾಗ ಅಲ್ಲಿ ನೆರೆದ ಲಿಯಾಂಟೆಸ್ ಮತ್ತು ಇತರರಿಗೆ ಅಚ್ಚರಿ. ವಿಗ್ರಹ ಜೀವಂತವಾಗಿದೆಯೋ ಎಂಬಷ್ಟು ಸಹಜವಾಗಿದೆ. ಅದರ ರೂಪ, ಆಕಾರ, ಮೈಬಣ್ಣ, ಮುಖದ ಕಳೆ — ಎಲ್ಲವೂ ಅಷ್ಟು ವಾಸ್ತವ! ಲಿಯಾಂಟೆಸ್ ಭಾವಪರವಶನಾಗುತ್ತಾನೆ, ಪರ್ಡಿಟಾ ಮೊಣಕಾಲೂರಿ ತಾಯಿಯ ಆಶೀರ್ವಾದ ಬೇಡುತ್ತಾಳೆ. ಪಾಲಿನಾ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಿಗ್ರಹಕ್ಕೆ ಚಲನೆ ಬರುವಂತೆ ಮಾಡುವೆನೆನ್ನುತ್ತಾಳೆ. ಅದು ಮೆಟ್ಟಿಲಿಳಿದು ಬರುತ್ತದೆ. ಲಿಯಾಂಟೆಸ್ ಮುನ್ನುಗ್ಗಿ ಅದರ ಕೈಹಿಡಿಯುತ್ತಾನೆ. ಅದು ಕಲ್ಲಿನ ಬೊಂಬೆಯಲ್ಲ; ಸಾಕ್ಷಾತ್ ಹರ್ಮಿಯೋನಳೇ! ಹಿಂದೆ ಅವಳು ಮೂರ್ಛೆ ಹೋದಾಗ ಪಾಲಿನಾ ಅವಳು ಸತ್ತಳೆಂದು ಸುದ್ದಿ ಹುಟ್ಟಿಸಿ, ಮಗಳು ಮತ್ತೆ ಸಿಗುವ ಈ ದಿನದವರೆಗೆ ಅವಳ ತಲೆ ಮರಸಿ ಕಾಪಾಡಿದ್ದಳು. ಅವರ ಸುಖ ಈಗ ಪೂರ್ಣ, ಸ್ವರ್ಗತಮ.

ಅವರ ನಡುವೆ ಒಬ್ಬಳೇ ದುಃಖಿಯೆಂದರೆ ಲಿಯಾಂಟೆಸ್‌ನಿಂದಾಗಿ ಗಂಡ ಆ್ಯಂಟಿಗೋನಸ್‌ನನ್ನು ಕಳೆದುಕೊಂಡಿದ್ದ ಪಾಲಿನಾ. ಅವಳಿಗೆ ಸಹ ಸುಖ ದೊರೆಯದೆ ಹೋಗುವುದಿಲ್ಲ. ಕ್ಯಾಮಿಲೊ ಎಂದಿನಿಂದಲೂ ಅವಳನ್ನು ಗುಟ್ಟಾಗಿ ಬಯಸಿದ್ದವನು, ಈಗ ಅವಳ ಕೈ ಹಿಡಿಯಲು ಮುಂದಾಗುತ್ತಾನೆ. ಮದುವೆ ಗೊತ್ತಾಗುತ್ತದೆ.

ಅವರೆಲ್ಲರ 'ಮಾಗಿಯ ಕತೆ' ಮುಗಿದು ಬದುಕು ಮತ್ತೊಮ್ಮೆ ವಸಂತವಾಗುತ್ತದೆ!

## 27. ದಿ ಟೆಂಪೆಸ್ಟ್

**ರಚನೆ:** 1611-12. **ಮೊದಲ ಪ್ರಕಟನೆ:** 1623.

**ಆಕರಗಳು:** ನಿರ್ದಿಷ್ಟವಾದ ಯಾವ ಆಕರವೂ ಪತ್ತೆಯಾಗಿಲ್ಲ. ಜರ್ಮನ್ ನಾಟಕಕಾರ ಜೇಕಬ್ ಐರರನ 'ಡೀ ಷೋನೆ ಸೀಡಿಯೆ' ಮತ್ತು ಇದರ ಕಥಾವಸ್ತುಗಳಲ್ಲಿ ಕೆಲವು ಸಾಮ್ಯತೆಗಳಿವೆ. ಇದರ ರಚನೆಗೆ ಮೊದಲೇ ಐರರ್ ತೀರಿಕೊಂಡಿದ್ದನಾದ್ದರಿಂದ ಅವನ ಕೃತಿ ಆಕರವಿರಬಹುದೆಂದು ಒಂದು ಊಹೆ; ಈಗ ನಷ್ಟವಾಗಿರುವ ಎರಡಕ್ಕೂ ಸಾಮಾನ್ಯವಾದ ಬೇರೆ ಒಂದು ಆಕರವಿದ್ದಿರಬಹುದೆಂದು ಇನ್ನೊಂದು ಊಹೆ. ದ್ವೀಪದ ಹಿನ್ನೆಲೆಗೆ 1609ರಲ್ಲಿ ಬರ್ಮುಡಾಸ್‌ನಲ್ಲಾದ ನೌಕಾಘಾತದ ಹಲವು ಸಮಕಾಲೀನ ವರದಿಗಳು ಸಾಮಗ್ರಿ ಒದಗಿಸಿರಬಹುದು. ಕ್ಯಾಲಿಬಾನನ ಪಾತ್ರಕ್ಕೆ ಹಾಗೂ ಗೊನ್ಸಾಲೊ ಚಿತ್ರಿಸುವ ಆದರ್ಶರಾಜ್ಯಕ್ಕೆ ಫ್ರೆಂಚ್ ಲೇಖಕ ಮಿಷೇಲ್ ದ ಮಾಂತೇನನ ಪ್ರಬಂಧಗಳು ಆಧಾರ.

**ಕಥೆ:** ಕವಿ ಸಂಪೂರ್ಣವಾಗಿ ತಾನೇ ರಚಿಸಿದ ಕೃತಿಗಳಲ್ಲಿ ಇದು ಕೊಟ್ಟಕೊನೆಯದು, ಆಸ್ಥಾನದ ವ್ಯವಹಾರಗಳ ಮೇಲೆ ಬೆಳಕಿದ ಸುಂದರ, ಸ್ವಪ್ನಸದೃಶ ರಮ್ಯಕ. ಬಂಧ ಸರಳ,

ಭದ್ರ. ಉದ್ದಕ್ಕೂ ಸ್ಮರಣೀಯವಾದ ಪಂಕ್ತಿಗಳಿಂದ ತುಂಬಿದ್ದು ಅತ್ಯಂತ ಕಾವ್ಯಮಯ ವಾಗಿದೆ. ಹಲವು ವಿಮರ್ಶಕರ ಪ್ರಕಾರ ಕೃತಿ ಸಂಕೇತಾತ್ಮಕ: ಇಲ್ಲಿನ ಪ್ರಾಸ್ಪೆರೊ ಷೇಕ್ಸ್ಪಿಯರನೇ; ಅವನ ಮಂತ್ರಶಕ್ತಿ ಕವಿಯ ಕಾವ್ಯಪ್ರತಿಭೆಯ ಪ್ರತೀಕ; ಕೊನೆಯಲ್ಲಿ ಅದರ ವರ್ಜನೆ ಕವಿ ನಾಟಕಪ್ರಪಂಚದಿಂದ ಪಡೆದ ವಿದಾಯ.

ಹಿಂದೆ ಮಿಲಾನಿನಲ್ಲಿ ಪ್ರಾಸ್ಪೆರೊ ಎಂಬೊಬ್ಬ ದೊರೆ, ಅವನಿಗೆ ಆ್ಯಂಟೋನಿಯೊ ಎಂಬ ತಮ್ಮ. ಪ್ರಾಸ್ಪೆರೊನ ಹೆಂಡತಿ ಒಂದು ಹೆಣ್ಣುಮಗುವನ್ನು ಹೆತ್ತು ತೀರಿಕೊಂಡಿದ್ದಾಳೆ. ಅವನಿಗೆ ಮಂತ್ರತಂತ್ರ, ತತ್ವಶಾಸ್ತ್ರಗಳಲ್ಲಿ ಗಾಢವಾದ ಆಸಕ್ತಿ ಬೆಳೆದು ರಾಜ್ಯ-ವ್ಯವಹಾರದಲ್ಲಿ ಒಲವು ಕಡಿಮೆಯಾಗುತ್ತದೆ. ತಮ್ಮ ಆ್ಯಂಟೋನಿಯೊಗೆ ಆಡಳಿತ ವಹಿಸಿ ತಾನು ಮಂತ್ರವಿದ್ಯೆಯ ಅಧ್ಯಯನಸಾಧನೆಗಳಲ್ಲಿ ಮುಳುಗುತ್ತಾನೆ. ತಮ್ಮ ದುಷ್ಟ, ನಿಷ್ಕರುಣಿ. ಸಿಂಹಾಸನದ ಮೇಲೆ ಕಾಕದೃಷ್ಟಿ ಬೀರಿದ್ದ ಆ ಮಹತ್ವಾಕಾಂಕ್ಷಿ ಬಯಸಿದ್ದುದೂ ಇಂತಹ ಅವಕಾಶವನ್ನೇ. ನೇಪಲ್ಸಿನ ದೊರೆ ಅಲೊನ್ಸೊನ ನೆರವು ಪಡೆದು ಪ್ರಾಸ್ಪೆರೊನನ್ನು ಕೆಳತಳ್ಳಿ ರಾಜ್ಯ ಕಸಿದುಕೊಳ್ಳುತ್ತಾನೆ. ಅವನನ್ನೂ ಅವನ ಎಳೆಯ ಮಗುವನ್ನೂ ಹುಟ್ಟು ಹಾಯಿಗಳಿಲ್ಲದ ಮುರಿದ ದೋಣಿಯಲ್ಲಿ ಕೂರಿಸಿ ನಡುಗಡಲಲ್ಲಿ ತಳ್ಳಿಬಿಡುತ್ತಾನೆ. ಅವರು ಮುಳುಗಿಯೋ ಹೊಟ್ಟೆಗಿಲ್ಲದೆಯೋ ಸಾಯುವರೆಂದು ಅವನ ಎಣಿಕೆ. ಆದರೆ ವಿಧಿಯ ಇಚ್ಛೆ ಬೇರೆ ಬಗೆಯಾಗಿದೆ. ಪ್ರಾಸ್ಪೆರೊನ ನೆಚ್ಚಿನ ಮಂತ್ರಿ ಗೊನ್ಸಾಲೊ ಗುಟ್ಟಾಗಿ ದೋಣಿಯಲ್ಲಿ ಆಹಾರಸಾಮಗ್ರಿಗಳನ್ನು ತುಂಬುತ್ತಾನೆ; ಪ್ರಾಸ್ಪೆರೊಗೆ ಅವನ ಮಂತ್ರದಂಡ, ಕವಚಗಳನ್ನು ಒದಗಿಸುತ್ತಾನೆ. ಅವುಗಳ ನೆರವಿನಿಂದ ತಂದೆ ಮಗು ಬದುಕಿ ಉಳಿದು, ಉಷ್ಣವಲಯದ ಹೆಸರಿಲ್ಲದ ಒಂದು ದ್ವೀಪ ಸೇರುತ್ತಾರೆ. ಅಲ್ಲಿ ಕ್ಯಾಲಿಬಾನ್ ಎಂಬ ಕಾಡುಮನುಷ್ಯನ ಹೊರತು ಬೇರೆ ನಾಗರಿಕ ಮಾನವನ ಸುಳಿವೇ ಇಲ್ಲ. ಕ್ಯಾಲಿಬಾನ್ ಸೈಕೊರ ಎಂಬ ಯಕ್ಷಿಣಿ ಹೆತ್ತ ಮೃಗ. ಅವನದು ಪಶುರೂಪ, ಪಶುಬುದ್ಧಿ. ನೀರು ನೆಲಗಳ ಸತ್ವದ ಸಂಕೇತದಂತಿದ್ದಾನೆ. ಪ್ರಾಸ್ಪೆರೊ ಅವನನ್ನು ತಿದ್ದಿ ನಾಗರಿಕನನ್ನಾಗಿಸಲು ಮಾಡುವ ಪ್ರಯತ್ನಗಳೆಲ್ಲವೂ ವ್ಯರ್ಥ. ದಣಿಯ ಮೇಲೆ ಸದಾ ವಿಷ ಕಾರುತ್ತ ಸೌದೆ ಹೊರುವುದಕ್ಕಷ್ಟೇ ಲಾಯಕ್ಕಾಗಿದ್ದಾನೆ ಆ ಬರ್ಬರ. ಕ್ಯಾಲಿಬಾನನ್ನಲ್ಲದೆ ಪ್ರಾಸ್ಪೆರೊ ತನ್ನ ಮಂತ್ರಶಕ್ತಿಯಿಂದ ಇನ್ನೂ ಒಂದು ಚೇತನವನ್ನು ಪಳಗಿಸಿ, ತನ್ನ ಸೇವೆಗೆ ಇರಿಸಿಕೊಂಡಿದ್ದಾನೆ. ಅವನು ಏರಿಯಲ್, ಮುಗಿಲಿನ ಮಗು, ಆಕಾಶಾಗ್ನಿಗಳ ದಿವ್ಯಸತ್ವ. ಹಿಂದೆ ಯಕ್ಷಿಣಿ ಸೈಕೊರ ಅವನನ್ನು ಮರದ ಟೊಂಗೆಯೊಂದರೊಳಗೆ ಕ್ರೂರವಾಗಿ ಬಂಧಿಸಿಟ್ಟಿದ್ದಳು, ಪ್ರಾಸ್ಪೆರೊ ಅವನನ್ನು ಅವಳ ಬಂಧನದಿಂದ ಬಿಡಿಸಿ ತನ್ನ ಸೇವೆಗೆ ತೊಡಗಿಸಿಕೊಂಡ. ಏರಿಯಲ್‌ಗೆ ಅವನಿಂದಲೂ ಬಿಡುಗಡೆ ಪಡೆದು ಗಾಳಿಯಂತೆ ತಾನೇ ತಾನಾಗಿರುವ ಆಸೆ. ಬೇಗನೆ ಸ್ವಾತಂತ್ರ್ಯ ಕೊಡುವುದಾಗಿ ಅವನಿಗೆ ಪ್ರಾಸ್ಪೆರೊ ಆಶ್ವಾಸನೆಯಿತ್ತಿದ್ದಾನೆ.

ಹನ್ನೆರಡು ವರ್ಷಗಳು ಉರುಳುತ್ತವೆ. ಮಗಳು ಮಿರ್‍ಯಾಂಡ ತಂದೆಯ ಹೊರತು ಬೇರಾವ ಮನುಷ್ಯಪ್ರಾಣಿಯ ಮುಖವನ್ನೂ ನೋಡುವ ಭಾಗ್ಯವಿಲ್ಲದೆ ಬೆಳೆದು ದೊಡ್ಡವಳಾಗುತ್ತಾಳೆ. ಒಂದು ದಿನ ತಂದೆ-ಮಗಳು ಸಮುದ್ರತೀರದಲ್ಲಿ ನಿಂತಿರುವಾಗ ದೂರದಲ್ಲಿ ಹಡಗೊಂದು ಹಾದುಹೋಗುತ್ತಿರುವುದು ಕಾಣಿಸುತ್ತದೆ. ಇದ್ದಕ್ಕಿದ್ದಂತೆ ಸಮುದ್ರದಲ್ಲಿ ಭಯಂಕರ ಬಿರುಗಾಳಿಯೆದ್ದು, ಅಲ್ಲೋಲಕಲ್ಲೋಲವುಂಟಾಗಿ, ಹಡಗು ಮುಳುಗಿದಂತಾಗು

ತ್ತದೆ. ಹಡಗಿನ ಜನ ದಿಕ್ಕೆಟ್ಟು ಹುಚ್ಚೆದ್ದ ನೀರಿಗೆ ಧುಮುಕುತ್ತಾರೆ. ಇದನ್ನೆಲ್ಲ ನೋಡಿದ ಮಿರ್ಯಾಂಡ ಅಳಲು ಮೊದಲಿಡುತ್ತಾಳೆ. ಆದರೆ ಪ್ರಾಸ್ಪೆರೊಗೆ ತೃಪ್ತಿ: ಆ ಬಿರುಗಾಳಿ ಎದ್ದಿರುವುದು ಅವನ ಮಂತ್ರಶಕ್ತಿಯ ಪ್ರಭಾವದಿಂದಲೇ! ನೇಪಲ್ಸಿನ ದೊರೆ ಅಲೊನ್ಸೊ ಮಗಳ ಮದುವೆ ಮುಗಿಸಿಕೊಂಡು ಪರಿವಾರಸಮೇತ ಊರಿಗೆ ಹಿಂದಿರುಗುತ್ತಿರುವುದನ್ನು ಮಂತ್ರಬಲದಿಂದ ಅರಿತ ಪ್ರಾಸ್ಪೆರೊ ಅವನೊಡನೆ ಹಳೆಯ ಲೆಕ್ಕ ತೀರಿಸಲು ಕಾಲ ಪಕ್ವಾಯಿತೆಂದು ಆ ನೌಕಾಘಾತವನ್ನು ಸೃಷ್ಟಿಸಿದ್ದಾನೆ. ಚಿಂತೆಗೀಡಾದ ಮಗಳಿಗೆ ಇದನ್ನು ತಿಳಿಸಿ, ಹಿಂದಿನ ಆಗುಹೋಗುಗಳೆಲ್ಲವನ್ನೂ ವಿವರಿಸಿ ಸಂತೈಸುತ್ತಾನೆ.

ಅಲೊನ್ಸೊನ ಬಳಗದಲ್ಲಿ ಅವನ ತಮ್ಮ ಸಿಬಸ್ಟಿಯನ್, ಮಗ ಫರ್ಡಿನಂಡ್, ಪ್ರಾಸ್ಪೆರೊನ ದುಷ್ಟ ತಮ್ಮ ಆ್ಯಂಟೋನಿಯೊ, ಹಿಂದೆ ಪ್ರಾಸ್ಪೆರೊ ಮಿರ್ಯಾಂಡರ ಜೀವ ಕಾಪಾಡಿದ್ದ ಗೊನ್ಸಾಲೊ, ಜೊತೆಗೆ ಅಡಿಗೆಯಾಳು ಸ್ಟಿಫ್ಯಾನೊ, ನಕಲಿ ಟ್ರಿಂಕುಲೊರು ಇದ್ದಾರೆ. ಏರಿಯಲನ ಮಾಟದಿಂದಾಗಿ ಅವರು ಹಲವು ಗುಂಪುಗಳಾಗಿ ದ್ವೀಪ ಸೇರುತ್ತಾರೆ.

ಏರಿಯಲ್ ದಣಿಯ ಆಣತಿಯಂತೆ ಹಾಡಿನ ಮೋಡಿ ಬೀರಿ ದೊರೆಮಗ ಫರ್ಡಿನಂಡ್‌ನನ್ನು ಅವನ ಗುಹೆಯ ಹಳದಿಯ ಮರಳಿನ ಅಂಗಳಕ್ಕೆ ಕರೆತರುತ್ತಾನೆ. ಫರ್ಡಿನಂಡ್ ಸುಕುಮಾರ, ಧೀರ. ಮಿರ್ಯಾಂಡ ಮತ್ತು ಫರ್ಡಿನಂಡ್ ಒಬ್ಬರನ್ನೊಬ್ಬರು ಕಂಡೊಡನೆಯೇ ಪ್ರೀತಿಸುತ್ತಾರೆ. ಪ್ರಾಸ್ಪೆರೊನ ಹೂಟವೂ ಅದೇ! ಆದರೆ ಪ್ರೇಮ ಅಷ್ಟು ಸುಲಭಲಭ್ಯವಾದರೆ ಅದಕ್ಕೆ ಬೆಲೆಯೆಲ್ಲಿ, ರುಚಿಯೆಲ್ಲಿ? ಪ್ರಾಸ್ಪೆರೊ ಫರ್ಡಿನಂಡನ ಮೇಲೆ ಸಿಟ್ಟಾದಂತೆ ತೋರಿಸಿಕೊಂಡು, ಅವನನ್ನು ದಣಿವಿನ ದುಡಿಮೆಗೆ ಹಚ್ಚುತ್ತಾನೆ. ಫರ್ಡಿನಂಡ್ ಎದೆಗೆಡುವುದಿಲ್ಲ; ಪಾಲಿಗೆ ಬಂದದ್ದನ್ನು ಧೈರ್ಯದಿಂದ ಎದುರಿಸುತ್ತಾನೆ. ಮಿರ್ಯಾಂಡ ಉದ್ದಕ್ಕೂ ಅವನಿಗೆ ಬೆಂಬಲವಾಗಿ ನಿಂತು, ಒಲಿದು ಒಲಿಸಿಕೊಳ್ಳುತ್ತಾಳೆ. ಫರ್ಡಿನಂಡನ ಅಚಲತೆ ನಿಷ್ಠೆಗಳಿಗೆ ಮೆಚ್ಚಿದ ಪ್ರಾಸ್ಪೆರೊ ಅವನನ್ನು ಬಂಧವಿಮುಕ್ತನನ್ನಾಗಿ ಮಾಡುತ್ತಾನೆ. ಪ್ರಾಸ್ಪೆರೊನ ಮಂತ್ರಚೇತನಗಳು ಜೂನೊ, ಸಿರಿಸ್ ಮುಂತಾದ ದೇವತೆಗಳ ರೂಪ ಧರಿಸಿ ಬಂದು ಗೀತನೃತ್ಯಗಳಿಂದ ಆ ಯುವಪ್ರೇಮಿಗಳನ್ನು ಸತ್ಕರಿಸಿ ಹರಸುತ್ತಾರೆ.

ಈ ನಡುವೆ ಆ ದ್ವೀಪದ ಇನ್ನೊಂದು ಕಡೆ ದೊರೆ ಅಲೊನ್ಸೊ ಸಿಬಸ್ಟಿಯನ್, ಆ್ಯಂಟೋನಿಯೊ, ಗೊನ್ಸಾಲೊರೊಡನೆ ಫರ್ಡಿನಂಡ್‌ನಿಗಾಗಿ ಹುಡುಕುತ್ತ ಅಲೆದಲೆದು ಬೇಸತ್ತು, ಕೊನೆಗೆ ಅವನು ಸಾವಿಗೆ ತುತ್ತಾಗಿರಬೇಕೆಂಬ ತೀರ್ಮಾನಕ್ಕೆ ಬಂದಿದ್ದಾನೆ. ಏರಿಯಲ್ ಅವರ ಮಧ್ಯೆ ಅದೃಶ್ಯನಾಗಿ ಬಂದು ತನ್ನ ಮಂತ್ರನಾದದಿಂದ ಆ್ಯಂಟೋನಿಯೊ ಸಿಬಸ್ಟಿಯನ್ನರ ಹೊರತು ಉಳಿದವರನ್ನು ನಿದ್ರೆ ಹೋಗಿಸುತ್ತಾನೆ. ದುಷ್ಟ ಆ್ಯಂಟೋನಿಯೊ ಈ ಸಮಯ ಸಾಧಿಸಿ ಸಿಬಸ್ಟಿಯನ್‌ಗೆ ಪಟ್ಟದ ಆಸೆ ಹುಟ್ಟಿಸಿ, ಅವನ ಮೂಲಕ ದೊರೆಯ ಮತ್ತು ವೃದ್ಧ ಗೊನ್ಸಾಲೊರ ಕೊಲೆಗೆ ಸಂಚುಮಾಡುತ್ತಾನೆ. ಇದನ್ನು ತಿಳಿದ ಏರಿಯಲ್ ಹೊತ್ತಿಗೆ ಮುಂಚೆ ಮಲಗಿದವರನ್ನು ಎಬ್ಬಿಸಿ ಅವರ ಕೊಲೆಯನ್ನು ತಡೆಯುತ್ತಾನೆ. ಈ ಪ್ರಸಂಗ ಸಿಬಸ್ಟಿಯನ್ ಆ್ಯಂಟೋನಿಯೊರ ಸ್ವಭಾವಕ್ಕೆ ಕನ್ನಡಿ ಹಿಡಿಯುತ್ತದೆ.

ದ್ವೀಪದ ಮತ್ತೊಂದು ಕಡೆ ಕ್ಯಾಲಿಬಾನ್ ಕುಡಿದು ಮತ್ತರಾದ ಸ್ಟಿಫ್ಯಾನೊ ಮತ್ತು ಟ್ರಿಂಕುಲೊರಿಗೆ ಎದುರಾಗುತ್ತಾನೆ. ಆ ಭೂಪರು ಮುಳುಗುವ ಹಡಗಿನಿಂದಲೂ ಹೆಂಡದ ಪೀಪಾಯಿ ಉಳಿಸಿಕೊಂಡು ತಮ್ಮ ಜೊತೆ ತಂದಿದ್ದಾರೆ. ಅವರು ಕ್ಯಾಲಿಬಾನನಿಗೂ ಕಳ್ಳಿನ

ರುಚಿ ತೋರಿಸುತ್ತಾರೆ. ರುಚಿ ಕಂಡುಕೊಂಡ ಆ ವ್ಯಗ ಪ್ರಾಸ್ಪೆರೊನನ್ನು ಕೊಂದು ತನ್ನನ್ನು ಅವನ ಬಂಧನದಿಂದ ಬಿಡಿಸಿದ್ದಾದರೆ ಅವರ ತೊತ್ತಾಗಿ ಸೇವೆ ಸಲ್ಲಿಸಲು ಮುಂದಾಗುತ್ತಾನೆ. ಪ್ರಾಸ್ಪೆರೊ ಸತ್ತ ಮೇಲೆ ಸ್ಟಿಫ್ಯಾನೊಗೆ ದ್ವೀಪದ ದೊರೆತನ ಕಟ್ಟುವುದೆಂದು ಕ್ಯಾಲಿಬಾನನ ಆಲೋಚನೆ! ಅವರು ಕೊಲೆ ಮಾಡಬಂದಾಗ ಅದರ ಸುಳಿವು ತಿಳಿದ ಏರಿಯಲ್ ದಣಿಯ ಆದೇಶದಂತೆ ಸ್ಟಿಫ್ಯಾನೊ ಟ್ರಿಂಕುಲೊರ ಮುಂದೆ ಬಣ್ಣಬಣ್ಣದ ಬಟ್ಟೆಗಳನ್ನು ಹರವಿ ಅವರ ಮನಸೆಳೆದು ಗುರಿಕೆಡಿಸುತ್ತಾನೆ. ಬೇಟೆನಾಯಿಗಳನ್ನು ಸೃಷ್ಟಿಸಿ ಅವರ ಹಿಂದೆ ಛೂ ಬಿಡುತ್ತಾನೆ. ಆ ಮೂರ್ಖರು ನಿಂತಲ್ಲಿ ನಿಲ್ಲಲಾರದೆ ನೋವಿನಿಂದ ತೊಳಲುತ್ತ ಪಾಡುಪಡುತ್ತಾರೆ.

ಅಲೊನ್ಸೊನ ಬಳಗಕ್ಕೆ ಪ್ರಾಸ್ಪೆರೊನ ಗುರುತು ಹತ್ತದು. ಅವರಿಗೆ ತಕ್ಕ ಬುದ್ಧಿ ಕಲಿಸಲು ಅವನು ಒಂದು ಮಂತ್ರದ ಮೇಜವಾನಿಯನ್ನು ಏರ್ಪಡಿಸುತ್ತಾನೆ. ಅಲ್ಲಿ ಬಗೆಬಗೆಯ ಭಕ್ಷ್ಯಭೋಜ್ಯಗಳು. ಅಲೊನ್ಸೊನ ಬಳಗ ತಿನ್ನಲು ಕೈಯಿಟ್ಟರೆ ಆ ತಿಂಡಿಗಳೆಲ್ಲವೂ ಮಂಗಮಾಯ! ಏರಿಯಲ್ ಸ್ತ್ರೀಮುಖಪಕ್ಷಿಯಾಗಿ ಬಂದು ಹಿಂದೆ ಪ್ರಾಸ್ಪೆರೊ ಹಾಗೂ ಅವನ ಅರಿಯದ ಮಗಳನ್ನು 'ಕೊಲ್ಲಿಸಿದುದಕ್ಕೆ' ಇಂದಿನ ಈ ಬವಣೆ ಶಿಕ್ಷೆಯೆಂದು ತಿಳಿಸಿಕೊಡುತ್ತಾನೆ. ಅಲೊನ್ಸೊನ ಅಂತರಂಗ ಕಲಕಿ ಪಶ್ಚಾತ್ತಾಪ ಮೂಡಿ ಕಣ್ಣು ತೆರೆಯುತ್ತದೆ.

ಏರಿಯಲ್ ಅಲೊನ್ಸೊನ ಬಳಗವನ್ನು ಮಂತ್ರವಿಮುಕ್ತರನ್ನಾಗಿ ಮಾಡಿ ದಣಿಯ ಗುಹೆಯ ಅಂಗಳಕ್ಕೆ ಕರೆತರುತ್ತಾನೆ. ಪ್ರಾಸ್ಪೆರೊ ತಾನು ಯಾರೆಂಬುದನ್ನು ಅವರಿಗೆ ಅರಿವು ಮಾಡಿಕೊಟ್ಟು ಕೈಬಿಟ್ಟದ್ದ ಮಿಲಾನಿನ ದೊರೆತನ ಮತ್ತೆ ತನ್ನದಾಗಬೇಕೆನ್ನುತ್ತಾನೆ. ಅಲೊನ್ಸೊ ಹಿಂದಿನ ತಪ್ಪಿಗೆ ಕ್ಷಮೆ ಕೇಳಿ, ಅದಕ್ಕೆ ಒಪ್ಪುತ್ತಾನೆ. ಮಗನನ್ನು ಕಳೆದುಕೊಂಡ ದುಃಖ ಅವನನ್ನು ಬಾಧಿಸುತ್ತಿದೆ. ಅದನ್ನು ಅರಿತ ಪ್ರಾಸ್ಪೆರೊ ಥಟ್ಟನೆ ಗುಹೆಯ ಬಾಗಿಲು ತೆರಸುತ್ತಾನೆ. ಸ್ವಪ್ನವೊ ಎಂಬಂತೆ ಒಳಗೆ ಫರ್ಡಿನಂಡ್ ಮಿರ್‍ಯಾಂಡ ಚತುರಂಗವಾಡುತ್ತ ಕುಳಿತಿದ್ದಾರೆ. ಅಲೊನ್ಸೊಗೆ ಇನ್ನಿಲ್ಲವೆಂದುಕೊಂಡ ಮಗನಷ್ಟೇ ಅಲ್ಲದೆ ಸ್ವತಃ ಪ್ರಾಸ್ಪೆರೊನ ಮಗಳೇ ಸೊಸೆಯಾಗಿ ದೊರೆತಿದ್ದಾಳೆ. ದುಃಖ ಸುಖವಾಗುತ್ತದೆ.

ಆ್ಯಂಟೋನಿಯೊ ಸಿಬಸ್ಟಿಯನ್ನರಿಬ್ಬರಿಗೂ ಪ್ರಾಸ್ಪೆರೊ ಮತ್ತೆ ತಪ್ಪುಮಾಡದಂತೆ ಎಚ್ಚರಿಕೆ ಕೊಟ್ಟು ವಿವೇಕ ಹೇಳುತ್ತಾನೆ. ಕ್ಯಾಲಿಬಾನ್, ಸ್ಟಿಫ್ಯಾನೊ ಮತ್ತು ಟ್ರಿಂಕುಲೊರು ಬುದ್ಧಿ ತಿಳಿದು ಪ್ರಾಸ್ಪೆರೊನ ಕ್ಷಮೆ ಬೇಡುತ್ತಾರೆ. ಆ ಹೊತ್ತಿಗೆ ಹಡಗಿನ ನಾವಿಕರು ಬಂದು ತಾವು ಒಡೆದು ಮುಳುಗಿತೆಂದುಕೊಂಡ ಹಡಗು ಸುಸ್ಥಿತಿಯಲ್ಲಿದ್ದು ಪ್ರಯಾಣ-ಯೋಗ್ಯವಾಗಿರುವ ಅಚ್ಚರಿಯನ್ನು ತಿಳಿಸುತ್ತಾರೆ. ಇನ್ನು ಪ್ರಾಸ್ಪೆರೊನ ಕೆಲಸ ಮುಗಿಯಿತು; ಆಶ್ವಾಸನೆಯಂತೆ ಏರಿಯಲ್‌ಗೆ ಸ್ವಾತಂತ್ರ್ಯ ಕೊಟ್ಟು, ಮಂತ್ರದಂಡ ಕವಚಗಳನ್ನು ಎಸೆದು ಎಲ್ಲರೊಡನೆ ಕೂಡಿ ಮಿಲಾನಿನ ದಾರಿ ಹಿಡಿಯುತ್ತಾನೆ.

## 28. ದಿ ಟು ನೋಬಲ್ ಕಿನ್ಸ್‌ಮೆನ್

**ರಚನೆ:** 1613-14. **ಮೊದಲ ಪ್ರಕಟನೆ:** 1634.

**ಆಕರ:** ಇಟಾಲಿಯನ್ ಕಾದಂಬರಿ ಬೋಕಾಚಿಯೊನ 'ತೆಸೆಯೀದ್'ನ ಆಧಾರದ ಮೇಲೆ ಕವಿ ಚಾಸರ್ ರಚಿಸಿದ 'ದಿ ನೈಟ್ಸ್ ಟೇಲ್'.

**ಕಥೆ :** ಯೌವನದ ಪ್ರೇಮಸಾಹಸಗಳನ್ನು ಕುರಿತ ಈ ರಮ್ಯಕ 'ಹೆನ್ರಿ ದಿ ಏಟ್ತ್'ನಂತೆ ಇಬ್ಬರು ಕವಿಗಳು ಒಟ್ಟುಗೂಡಿ ರಚಿಸಿದ ಕೃತಿ. ಅವರು ಜಾನ್ ಫ್ಲೆಚರ್ ಮತ್ತು ಷೇಕ್‌ಸ್ಪಿಯರ್ ಎಂದು ವಿಮರ್ಶಕರ ದೃಢ ಮತ. 'ಪೆರಿಕ್ಲಿಸ್'ನಂತೆ ಇದಕ್ಕೂ ಮೊದಲ ಫೋಲಿಯೊ (ಷೇಕ್‌ಸ್ಪಿಯರ್ ರಚನಾವಳಿಯ ಮೊದಲ ಸಂಸ್ಕರಣ) ದಲ್ಲಿ ಸ್ಥಾನ ದೊರೆತಿಲ್ಲ.

ಹಿಂದೆ ಗ್ರೀಸಿನಲ್ಲಿ ಪ್ಯಾಲಮಾನ್ ಮತ್ತು ಆರ್ಸೈಟ್ ಎಂಬ ಇಬ್ಬರು ದಾಯಾದಿಗಳು. ಅವರಿಗೆ ತಂದೆಯಿಲ್ಲ, ಚಿಕ್ಕಪ್ಪನಾದ ಥೀಬ್ಸಿನ ದೊರೆ ಕ್ರಿಯಾನನ ಆಸ್ಥಾನದಲ್ಲಿ ಬೆಳೆಯುತ್ತಿದ್ದಾರೆ. ಕ್ರಿಯಾನ್ ಕ್ರೂರಿ, ಹಿಂಸಕ. ಆ ದುಷ್ಟನ ಸ್ವಭಾವಕ್ಕೆ ಹೇಸಿದ ಪ್ಯಾಲಮಾನ್ ಮತ್ತು ಆರ್ಸೈಟ್ ಥೀಬ್ಸನ್ನು ಬಿಟ್ಟುಹೋಗುವ ಆಲೋಚನೆ ಮಾಡುತ್ತಾರೆ. ಆದರೆ ಅಷ್ಟರಲ್ಲೇ ನೆರೆಯ ಅಥೆನ್ಸ್ ರಾಜ್ಯದ ದೊರೆ ಥೀಸ್ಯೂಸ್ ಥೀಬ್ಸಿನ ಮೇಲೆ ದಂಡೆತ್ತಿ ಬಂದಿರುವನೆಂದು ಸುದ್ದಿ ಬರುತ್ತದೆ. ಪ್ಯಾಲಮಾನ್ ಆರ್ಸೈಟರು ನಿರ್ಧಾರ ಬದಲಾಯಿಸಿ ಥೀಸ್ಯೂಸನ ವಿರುದ್ಧ ಹೋರಾಡಲು ಥೀಬ್ಸಿನಲ್ಲೇ ಉಳಿಯುತ್ತಾರೆ. ಕದನದಲ್ಲಿ ಥೀಸ್ಯೂಸನಿಗೆ ಗೆಲುವಾಗುತ್ತದೆ. ಪ್ಯಾಲಮಾನ್ ಆರ್ಸೈಟರು ಅವನಿಗೆ ಸೆರೆಸಿಗುತ್ತಾರೆ.

ಥೀಸ್ಯೂಸನ ಹೆಂಡತಿ ಹಿಪಾಲಿಟ; ಅವಳಿಗೆ ಇಮಿಲಿಯಾ ಎಂಬೊಬ್ಬ ಚೆಲುವೆ ತಂಗಿ. ಪ್ಯಾಲಮಾನ್ ಆರ್ಸೈಟರು ಸೆರೆಯಲ್ಲಿ ಕಾಲ ತಳ್ಳುತ್ತಿರುವಾಗೊಮ್ಮೆ ಕಾರಾಗೃಹದ ಕಿಟಕಿಯ ಕಂಡಿಯ ಮೂಲಕ ಇಮಿಲಿಯಾ ಅವರ ಕಣ್ಣಿಗೆ ಬೀಳುತ್ತಾಳೆ. ಆ ಹುಡುಗರಿಬ್ಬರಿಗೂ ಅವಳಲ್ಲಿ ಪ್ರೇಮವುಂಟಾಗುತ್ತದೆ. ಸರಿ, ಹೆಣ್ಣು ಅಡ್ಡವಾದ ಮೇಲೆ ಕೇಳಬೇಕೆ? ಒಂದು ಜೀವ, ಎರಡು ದೇಹವನ್ನುವಂತಿದ್ದವರು ಆಜನ್ಮಶತ್ರುಗಳಂತೆ ಕಚ್ಚಾಡುತ್ತಾರೆ.

ಕೆಲವೇ ದಿನಗಳಲ್ಲಿ ಆರ್ಸೈಟನಿಗೆ ಅಥೆನ್ಸನ್ನು ಬಿಟ್ಟುಹೋಗಬೇಕೆಂಬ ಆಜ್ಞೆಯ ಮೇಲೆ ಬಿಡುಗಡೆಯಾಗುತ್ತದೆ. ಸೆರೆಯಿಂದ ಹೊರಬಂದ ಅವನು ವೇಷ ಮರಸಿಕೊಂಡು ಇಮಿಲಿಯಾಳಲ್ಲಿ ಊಳಿಗಕ್ಕೆ ಸೇರಿ, ಪ್ರೇಮೋಪಾಸನೆಯನ್ನು ಮುಂದುವರಿಸುತ್ತಾನೆ.

ಸೆರೆಯ ಕಾವಲಾಳಿಗೆ ಒಬ್ಬ ಮಗಳಿದ್ದಾಳೆ. ಅವಳಿಗೆ ಪ್ಯಾಲಮಾನ್‌ನಲ್ಲಿ ಒಲವುಂಟಾಗುತ್ತದೆ. ಪ್ಯಾಲಮಾನ್ ಅವಳ ನೆರವು ಪಡೆದು ಸೆರೆಯಿಂದ ತಪ್ಪಿಸಿಕೊಂಡು ಹೋಗುತ್ತಾನೆ. ವೇಷ ಮರಸಿಕೊಂಡಿರುವ ಆರ್ಸೈಟ್ ಅವನಿಗೆ ಎದುರಾಗುತ್ತಾನೆ. ದಾಯಾದಿಗಳಲ್ಲಿ ತಿಕ್ಕಾಟ ಹತ್ತಿ ಹೋರಾಟವಾಗುತ್ತದೆ. ಇಬ್ಬರೂ ಥೀಸ್ಯೂಸನಿಗೆ ಸಿಕ್ಕಿಬೀಳುತ್ತಾರೆ. ಅವನು ಅವರಿಗೆ ಮರಣದಂಡನೆ ವಿಧಿಸುವುದರಲ್ಲಿರುವಾಗ ಹಿಪಾಲಿಟ ಇಮಿಲಿಯಾರು ಅಡ್ಡ ಬಂದು ಅವರ ಜೀವ ಉಳಿಯಲೆಂದು ಬೇಡುತ್ತಾರೆ. ಪ್ಯಾಲಮಾನ್ ಆರ್ಸೈಟರು ಜೀವ ಹೋದರೂ ಇಮಿಲಿಯಾಳ ಆಸೆ ಬಿಡುವುದಿಲ್ಲವೆನ್ನುತ್ತಾರೆ. ಥೀಸ್ಯೂಸ್ ಅನನಿಬ್ಬರ ನಡುವೆ ಕುದುರೆ ಕಾಳಗ ನಡೆಯಲೆಂದು ಗೊತ್ತುಮಾಡುತ್ತಾನೆ. ಗೆದ್ದವನಿಗೆ ಇಮಿಲಿಯಾ; ಸೋತವನು ದಂಡವಾಗಿ ತಲೆ ತೆರಬೇಕು!

ಸ್ಪರ್ಧೆಯಲ್ಲಿ ಆರ್ಸೈಟ್ ಗೆಲ್ಲುತ್ತಾನೆ. ಪ್ಯಾಲಮಾನನಿಗೆ ಇನ್ನೇನು ಶಿರಚ್ಛೇದನೆಯಾಗಬೇಕೆನ್ನುವಷ್ಟರಲ್ಲಿ ಆರ್ಸೈಟ್ ಕುದುರೆಯಿಂದ ಬಿದ್ದು ತೀವ್ರವಾಗಿ ಗಾಯಗೊಂಡನೆಂದು ಸುದ್ದಿ ಬರುತ್ತದೆ. ಸಾವಿನ ತೆಕ್ಕೆಯಲ್ಲಿ ಇಮಿಲಿಯಾಳನ್ನು ಪ್ಯಾಲಮಾನ್‌ನಿಗೆ ಒಪ್ಪಿಸಿಕೊಟ್ಟು ಅವನು ಕಣ್ಣು ಮುಚ್ಚುತ್ತಾನೆ. ಥೀಸ್ಯೂಸ್ ವಧೂವರರನ್ನು ಹರಸುತ್ತಾನೆ.



# ಕವಿಯೊ ಮಾಂತ್ರಿಕನೊ ?*

ಎಸ್. ವಿ. ರಂಗಣ್ಣ

ಅತ್ಯುತ್ಕೃಷ್ಟ ಕವಿವಾಣಿಯೆಲ್ಲ ರಮಣೀಯ ಶಬ್ದಪುಷ್ಪಾರ್ಥಗಳ ಧ್ವನಿಯುಕ್ತ ಸಂಯೋಗ, ನಿಜ; ಆದರೆ ಹಾಗೆಂದರೆ ಸಾಲದು. ಅದು ಲಯಬದ್ಧವೂ ಕಿವಿಗಿಂಪೂ ಆದ ಗದ್ಯ ಅಥವಾ ಪದ್ಯ, ನಿಜ; ಆದರೆ ಹಾಗೆಂದರೂ ಸಾಲದು. ಅದು ಪೂರಾ ಸಂಗೀತವಲ್ಲ, ತನ್ನದೇ ಆದ ಸಂಗೀತ ಸೂಚನೆಯಿಂದ ನಾದಪೂರ್ಣವಾಗಿದೆ, ನಿಜ; ಆದರೆ ಹಾಗೆಂದರೂ ಸಾಲದು. ಇವೆಲ್ಲ ಲಕ್ಷಣಗಳನ್ನು ಒಳಗೊಂಡು, ಮೀರಿ ಮುಂದೆ ಹೋಗಿ, ಒಂದು ವಿಧದ ವಿಲಕ್ಷಣ ಸಮ್ಮಿಶ್ರಣವಾದ್ದರಿಂದ ಅದನ್ನು ಲೌಕಿಕ 'ಮಂತ್ರ'ವೆಂದೇ ಕರೆಯಬೇಕು. ಮಹೋನ್ನತ ಕವಿ ಒಬ್ಬ ಮಂತ್ರನಿರ್ಮಾಪಕ, ವಿಶಿಷ್ಟವಾದ ಗೌರವಾರ್ಥದಲ್ಲಿ ಒಬ್ಬ 'ಮಾಂತ್ರಿಕ'. ಇದನ್ನು ಒಪ್ಪಿದರೆ, ಷೇಕ್‌ಸ್ಪಿಯರ್ ಒಬ್ಬ ಮಹಾಮಾಂತ್ರಿಕ; ವಚನ ಮಾಟಗಾರರಲ್ಲಿ ಅವನು ಮುಖ್ಯಸ್ಥ. ಕಾದಂಬರಿಕಾರ ವಾಲ್ಟರ್ ಸ್ಕಾಟನಿಗೆ 'ಉತ್ತರದ ಗಾರುಡಿ'ಯೆಂಬ ಉಪನಾಮವಿತ್ತು; ಷೇಕ್‌ಸ್ಪಿಯರ್ ದಿಟವಾಗಿ ವಸುಂಧರೆಯ ಗಾರುಡಿ. ಅವನ ಮೋಡಿಗೆ ಸಿಕ್ಕಿ ಮರುಳಾಗದವರು ಅಪರೂಪ; ಸಿಕ್ಕಿದ ಮೇಲೆ ಒಲಿಯುತ್ತ ನಲಿಯುತ್ತ ಉತ್ಸಾಹದಿಂದ ಆ ಸ್ವರ್ಗತುಲ್ಯ ಸೆರೆಯನ್ನು ಅನುಭೋಗಿಸುತ್ತ ಆನಂದಿಸದವರು ಇನ್ನೂ ಅಪರೂಪ. ವಾಲ್ಮೀಕಿ ಹೋಮರ್ ಇತ್ಯಾದಿ ಸಾವಿರಾರು ಸಂವತ್ಸರಗಳ ಹಿಂದಿನ ಸರಸ್ವತಿಯ ವರಪುತ್ರರಿದ್ದರೂ ಅವರೊಡನೆ ಸ್ಪರ್ಧೆ ನಿಲ್ಲಬಲ್ಲ ಕೇವಲ ನಾನೂರು ವರ್ಷಗಳ ಹಿಂದಿನವನಾದ ಅರ್ವಾಚೀನ ಷೇಕ್‌ಸ್ಪಿಯರ್ ಧನ್ಯ; ಅವನಿಂದ, ಅವನ ಸಾರಸ್ವತ ದತ್ತಿಯಿಂದ ವಾಠಕ ಸಹಸ್ರಸಹಸ್ರವೂ ಧನ್ಯ.

ಇಷ್ಟೊಂದು ಎತ್ತರದ ಪ್ರಶಂಸೆ ಸ್ವಲ್ಪ ಹೆಚ್ಚೆಂದು ತೋರಬಹುದಲ್ಲವೆ? ನಿಷ್ಠುರ ದೃಷ್ಟಿಯಿಂದ ಅಂಶಅಂಶವನ್ನೂ ಚಿತ್ತವಿಟ್ಟು ಲಕ್ಷಿಸಿ ಸಮಗ್ರ ವಿಮರ್ಶೆಯನ್ನು ಕೈಗೊಂಡ

* ಈ ಲೇಖನ ಕೈಸೇರುವ ಹೊತ್ತಿಗೆ ಲೇಖನವಿಭಾಗದ ಅಚ್ಚು ಮುಗಿದಿತ್ತಾದ ಕಾರಣ ಇದನ್ನು ಕೊನೆಗೆ ಅನುಬಂಧವಾಗಿ ಕೊಡಲಾಗಿದೆ. — ಸಂ.

ತರುವಾಯ ತಥ್ಯ ಸಂಗತಿ ಅರಿವಾದೀತು, ನಿರ್ಧಾರವಾದೀತು. ಶ್ರೇಷ್ಠ ಕವಿ ಯಾವನೂ ಪ್ರಶ್ನೋತ್ತರಕ್ಕೆ ಅಂಜಲಾರ; ಅಂಥ ನಿರ್ಭೀತರಲ್ಲಿ ನಿರ್ಭೀತ ಷೇಕ್‌ಸ್ಪಿಯರ್.

ಸಣ್ಣ ಕಥೆ ಕಾದಂಬರಿಯೇ ಅಲ್ಲ, ಸಕಲ ಸಾಹಿತ್ಯಪ್ರಭೇದಗಳೂ ಒಂದಲ್ಲ ಒಂದು ಬಗೆಯಲ್ಲಿ ಕಥಾನಿರೂಪಣೆ. ಭಾವಗೀತೆ ಯಾವುದೋ ಒಂದು ನಿಮಿಷಾನುಭವದ ಆತ್ಮಕಥೆ. ಪ್ರಬಂಧವೆಂಬುದು ಕ್ಷಣಕ್ಕಿಂತ ಹೆಚ್ಚು ಸಮಯ ಮನಸ್ಸು ಅತ್ತಿತ್ತ ತೂಗಾಡುವ ವ್ಯವಹಾರವನ್ನು ವಿವರಿಸುವ ಕಥಾನಕವಲ್ಲದೆ ಬೇರೆ ಏನು? ಪ್ರಕೃತಿ ವರ್ಣನೆಯೂ ಕೂಡ ಪ್ರಕೃತಿಯ ಚಲನೆವಲನೆಗಳ ಸಂಕ್ಷಿಪ್ತ ಉಪಾಖ್ಯಾನ. ಸಮೋವಾದ ನಿವಾಸಿಗಳು ಆರ್. ಎಲ್. ಸ್ಟೀವನ್‌ಸನ್ನಿಗೆ 'ತುಸಿತಲ' (ಕಥೆಗಾರ)ನೆಂಬ ಹೆಸರನ್ನು ಇಟ್ಟಿದ್ದರು. ಕವಿಗಳೆಲ್ಲ ಕಥೆಗಾರರೆ! ಆದ್ದರಿಂದ ವಿಮರ್ಶೆಯಲ್ಲಿ, ಅದರಲ್ಲೂ ರೂಪಕ ವಿಮರ್ಶೆಯಲ್ಲಿ, ಕಥಾವಿನ್ಯಾಸಕ್ಕೆ ಪ್ರಧಾನ ಸ್ಥಾನವನ್ನೀಯುವುದು ನ್ಯಾಯ. ಅರಿಸ್ಟಾಟಲನ ಸೂಕ್ತಿ, 'ವಸ್ತುಸಂವಿಧಾನ ಗಂಭೀರನಾಟಕದ ಆತ್ಮ', ಮನನಯೋಗ್ಯ. ಷೇಕ್‌ಸ್ಪಿಯರನ್ನು ಸರಿಗಟ್ಟುವ ಕಥೆಗಾರನನ್ನು ಎಲ್ಲಿ ಹುಡುಕೋಣ? ಮೂಲಕಥೆಯ ಗುಪ್ತ ಸತ್ವಸ್ವಾರಸ್ಯವೆಲ್ಲವನ್ನೂ ಕಂಡುಹಿಡಿದು ಹೊರತರುವುದರಲ್ಲೂ, ನವೀನಾಂಗಗಳು ಅದರ ದೇಹದಿಂದ ಸ್ವಾಭಾವಿಕವಾಗಿ ಮೂಡಿ ಬೆಳೆಯುವಂತೆ ಎಸಗುವುದರಲ್ಲೂ, ಎರಡು ಮೂರು ಕೊನೆಗೆ ನಾಲ್ಕು ಕಥಾವಸ್ತುಗಳನ್ನು ಅಚ್ಚುಕಟ್ಟಾಗಿ ಸೇರಿಸಿ ಮನವೊಪ್ಪುವಂತೆ ಎವೆ ತಣಿಯುವಂತೆ ರಂಗೋಲಿ ಹಸೆಯನ್ನು ಸಿಂಗರಿಸುವುದರಲ್ಲೂ ಅವನು ನಿಸ್ಸೀಮ. 'ಕಿಂಗ್ ಲಿಯರ್' ಅನ್ನೂ, 'ದಿ ಮರ್ಚೆಂಟ್ ಅಫ್ ವೆನಿಸ್', 'ಆ್ಯಸ್ ಯು ಲೈಕ್ ಇಟ್'ಗಳನ್ನೂ ಮಿಶ್ರಸಂವಿಧಾನದ ನಾಟಕಗಳೆನ್ನುವುದಕ್ಕಿಂತ ನಾಟಕೀಯ ಪವಾಡಗಳೆನ್ನುವುದು ಉಚಿತ. ಬಾಹ್ಯಾಕಾರದಿಂದ ಅವು ನಾನಾ ಆಖ್ಯಾಯಿಕೆಗಳ ಅತ್ಯಂತ ನಿಪುಣ ಸಂಯೋಜನೆ; ಒಳಗಡೆಯಲ್ಲಾದರೊ, ಮನುಷ್ಯಜೀವನದ ವೈವಿಧ್ಯ ವಿಸ್ತಾರ ವೈಭವಗಳ ರಾಗಮಯ ಚಿತ್ರಣ. ಕಲೆಯ ಲಾವಣ್ಯವನ್ನೂ ಯೋಚನಾಪರತೆಯ ದರ್ಶನವನ್ನೂ ಒಂದು ನಾಣ್ಯದ ಎರಡು ಮುಖವನ್ನಾಗಿ ಪರಿವರ್ತಿಸುವ ರಸಕೌಶಲ ಷೇಕ್‌ಸ್ಪಿಯರಿಗೆ ಮೀಸಲು.

ಅವನು ಕೆತ್ತಿ ಸ್ಥಾಪಿಸಿ ನಮಗಾಗಿ ಬಿಟ್ಟು ಹೋಗಿರುವ ಸ್ತ್ರೀಪುರುಷ ಸಮೂಹದ ಭಾರಿ ವೈಚಿತ್ರ್ಯ ಮೂರು ಶತಮಾನಗಳಿಂದ ಭಾಷ್ಯ, ಮರುಭಾಷ್ಯ, ವ್ಯಾಖ್ಯಾನ, ಪುನರ್ ವ್ಯಾಖ್ಯಾನ, ಟಿಪ್ಪಣಿ, ಮತ್ತೊಂದು ಟಿಪ್ಪಣಿ, ಟೀಕೆ, ಅದರ ಮೇಲೆ ಟೀಕೆ ಮುಂತಾದ ಅವಿಶ್ರಾಂತ ಲೇಖನನದಿಗಳಿಗೆ ಆಧಾರಚಿಲುಮೆಯಾಗಿದೆ. ನಿತ್ಯವೂ ಮೇಲೆ ಗಗನದಲ್ಲಿ ಮೆರೆಯುವ ದೊಡ್ಡ ನಕ್ಷತ್ರಗಳೂ ಒಂದೇ, ಷೇಕ್‌ಸ್ಪಿಯರ್ ನಿರ್ಮಿಸಿರುವ ವ್ಯಕ್ತಿಗಳೂ ಹೆಚ್ಚು ಕಡಿಮೆ ಒಂದೆ. ನಕ್ಷತ್ರಗಳನ್ನು ಎಣಿಸಲಾಗದು, ಷೇಕ್‌ಸ್ಪಿಯರನ ವ್ಯಕ್ತಿಗಳ ಸಂಖ್ಯೆ ಗೊತ್ತಾಗಿದೆ: ಅದೊಂದು ವ್ಯತ್ಯಾಸವನ್ನುಳಿದು ಎರಡು ಸೃಷ್ಟಿಗಳೂ ಏಕರೀತಿಯಲ್ಲಿ ಅದ್ವಿತೀಯ, ಅವರ್ಣನೀಯ, ರಹಸ್ಯಮಯ, ಸತ್ಯಮಯ. ಉಸಿರೆಳೆಯುತ್ತ ಆಡುತ್ತ ಕಾದುತ್ತ ಕೆಲ ಕಾಲ ಬಾಳಿ ಅಳಿದು ಬೀಳುವ, ವಾಸ್ತವಿಕವಾದರೂ ನಿಜವಲ್ಲದ ನಮ್ಮ ಲೋಕ ಕಡಿಮೆ, ಅವಾಸ್ತವಿಕವಾದರೂ ನಿಜವಾದ ಷೇಕ್‌ಸ್ಪಿಯರನ ವಿಭಾವನಾಲೋಕದೊಂದಿಗೆ ಹೋಲಿಸಿ ನೋಡಿದರೆ. ಹಲಕೆಲವು ಪುರುಷಪುಂಗವರನ್ನುಳಿದು ಮಿಕ್ಕೆಲ್ಲ ನರರೂ ಮಾನವೀಯತೆಯ ಹೊರ ತೋರ್ಕೆಗಳು, ತುಸು ಹೊತ್ತು ಸುಳಿದಾಡಿ ಕಾಣದೇ

ಹೋಗುವ ಛಾಯೆಗಳು. ಷೇಕ್‌ಸ್ಪಿಯರನ ಪಾತ್ರ ಒಂದೊಂದೂ ಅತಿ ಆಳದ ಗಾಢ ಮಾನವೀಯತೆಯ ಸಮರ್ಪಕವೂ ಸ್ಥಿರವೂ ಆದ ಪ್ರತಿಮೆ. ಮೆಕ್‌ಬೆತ್, ಅಥೆಲ್ಲೊ, ಕಾರ್ಡೀಲಿಯ, ಮೂರನೆ ರಿಚರ್ಡ್, ಫಾಲ್‌ಸ್ಟಾಫ್, ಆರ್ಲ್ಯಾಂಡೊ, ಪಯೋಲ, ಟಚ್‌ಸ್ಟನ್, ಲಿಯರನ ವಿದೂಷಕ ಮೊದಲಾದವರು ಹಾಗಿರಲಿ, ನಾಳ್ಪ್ರಭು ಕಾರ್ನ್‌ವಾಲನ ಸೇವಕ, ಜೂಲಿಯೆಟ್ಟಳ ದಾದಿ ಮುಂತಾದ ಸಣ್ಣಪುಟ್ಟವರೂ ತಮ್ಮ ತಮ್ಮ ವ್ಯಕ್ತಿವರ್ಚಸ್ಸಿನಿಂದಲೂ 'ಪರಿಪೂರ್ಣ' ಜೀವನದಿಂದಲೂ ಹೇಗೆ ಚಿರಂಜೀವಿಗಳಾಗಿದ್ದಾರೆ ಬಗೆಯಿರಿ. ರೂಪಕವೆಂಬ ಸಾಹಿತ್ಯಪ್ರಕಾರ ಕೇವಲ ಎರಡೂವರೆ ಅಥವಾ ಮೂರು ಘಂಟೆಗಳ ರಂಗಪ್ರದರ್ಶನದ ಕಾಲಪರಿಮಿತಿಗೆ ಒಳಪಟ್ಟಿರುವುದರಿಂದ ಅದನ್ನು ನಡೆಸಿ ಕೊಡುವ ಪಾತ್ರವರ್ಗ ತಮ್ಮ ಇಡೀ ಸ್ವಭಾವ ಚರ್ಯೆಗಳ ಪೂರ್ತಿ ಪರಿಚಯವನ್ನು ಒದಗಿಸ ಬೇಕಾಗಿಲ್ಲ; ನಾಟಕದ ಸಂಕುಚಿತ ಭೂಮಿಕೆಗೆ ಎಷ್ಟು ಅಗತ್ಯವೊ ಅಷ್ಟನ್ನು ಮಾತ್ರ ಅವು ಪ್ರಕಾಶಗೊಳಿಸಿದರೆ ಸಾಕು. ಹೀಗಿದ್ದರೂ, ಷೇಕ್‌ಸ್ಪಿಯರನ ಹಸ್ತಸಂಜೀವನದ ಫಲವಾಗಿ ಹೆಚ್ಚು ಕಡಿಮೆ ಅವನ ಪ್ರತಿಯೊಂದು ಪಾತ್ರಕ್ಕೂ ಬಹುಮುಖದ ಆಳ್ತನವೂ ತುಂಬು ಬಾಳಿನ ಆದಿ-ಮಧ್ಯ-ಮುಕ್ತಾಯವೂ ದೊರಕುತ್ತದೆ. ಅದೇನೊ ಪಾತ್ರಚಿತ್ರಣದ ಅತಿವ್ಯಾಪ್ತಿಯಂತೆ ತೋರಬಹುದು: ಆದರೆ ಷೇಕ್‌ಸ್ಪಿಯರ್ ಕೊಡುಗೈ ದಾನಿ, ಶೇಕಡ ನೂರಕ್ಕೂ ಮಿಗಿಲಾದ ಸಮೃದ್ಧಿ ಅವನ ಕೃತಿಗಳ ಸಮ್ಮೋಹಕ ಸದ್ಗುಣ, 'ಬೇಕಾದ್ದನ್ನು ತೆಗೆದುಕೊಳ್ಳಿ, ಬೇಡವಾದ್ದನ್ನು ಆ ಕಡೆಗೆ ತಳ್ಳಿ' ಎನ್ನುತ್ತದೆ ಅವನ ನಗುಮುಖ.

ಗ್ಲಾಸ್ಟರನ ನೇತ್ರವನ್ನು ತಿವಿದು ಹಾಕುವ ಘೋರ ದೃಶ್ಯವನ್ನು ನೋಡಲಾರದೆ, ತನ್ನ ದಣಿ ಕಾರ್ನ್‌ವಾಲನ ಕಟುಕ ಕೃತ್ಯಕ್ಕೆ ರೋಸಿಹೋಗಿ ಸೇವಕನೊಬ್ಬ — ಅವನ ಹೆಸರನ್ನು ಹೇಳಿಲ್ಲ ಕವಿ — ಆತನ ಮೇಲೆರಗಿ ಗಾಸಿಮಾಡಿ, ರೀಗನಳ ಇರಿತಕ್ಕೆ ಬಲಿ ಬಿದ್ದು, ತಾನೂ ಸಾಯುತ್ತಾನೆ. ಅಷ್ಟೇ ಅಲ್ಲ ಅವನ ಹಿರಿಮೆ. ಕ್ರೌರ್ಯತಮಸ್ಸು ತಾನೇ ತಾನಾಗಿ ಮುಸುಕಿ ಮುತ್ತುತ್ತಿರುವ ಕರಾಳ ಘಳಿಗೆಯಲ್ಲಿ ಮರುಕದ ಜ್ಯೋತಿಯನ್ನು ಬೆಳಗಿಸಿ, 'ಗಂಡುಗಳೆಲ್ಲ ಕಾರ್ನ್‌ವಾಲರಲ್ಲ, ಹೆಣ್ಣುಗಳೆಲ್ಲ ರೀಗನರಲ್ಲ' ಎಂದು ಸಾರಿ, ನಿರಾಶೆಯಿಂದ ಆಶಾವಾದಕ್ಕೆ ನಮ್ಮನ್ನು ಎತ್ತುತ್ತಾನೆ, ಮಾರ್ಗದರ್ಶಿಯಾಗುತ್ತಾನೆ ಬರಿ ಜೀತದವನಾದರೂ. ಸಾಚಾ ಮಾನವತೆ ಎಲ್ಲಿ ಕಂಗೊಳಿಸಿದರೇನು, ಷೇಕ್‌ಸ್ಪಿಯರ್ ಕಾಣಿಕೆ ಅರ್ಪಿಸಿಯೇ ಅರ್ಪಿಸುತ್ತಾನೆ ಅದಕ್ಕೆ. ಜೂಲಿಯೆಟ್ಟಳ ದಾದಿ ವಯಸ್ಸಾದವಳು, ಕಷ್ಟನಷ್ಟಗಳನ್ನು ಉಂಡವಳು, ಬಲು ವಾಚಾಳಿ, ಶ್ರೀಮಂತ ಪರಿಸರದಲ್ಲಿ ದಿವಸಗಳನ್ನು ನೂಕಿದ್ದರೂ ಅವಳಲ್ಲಿ ಮನೆ ಮಾಡಿದ ಗ್ರಾಮ್ಯತೆಗೆ ಕೊಂಚವೂ ಕುಂದಿಲ್ಲ. ಗತಿಸಿಹೋದ ಗಂಡನ ಪೋಕರಿತನ ಅವಳಿಗೊಂದು ಹೆಮ್ಮೆ. ಅದನ್ನು ನೆನೆಸಿಕೊಂಡು ಗಹಗಹಿಸುತ್ತಾಳೆ ಆಕೆ ಈಗಲೂ. ಆದರೆ, ಆಪತ್ತಿಗೆ ಗುರಿಯಾದ ಮರಿಕೋಗಿಲೆಗೆ ಎಲೆಯ ಮರೆಯನ್ನು ಸಜ್ಜುಗೊಳಿಸುವ ಫಣಿಯಾಲ ಅವಳು. ಒಟ್ಟಿನಲ್ಲಿ 'ಏನೇ ಆಗಲಿ, ಬದುಕೇ ಬದುಕು' ಎಂಬ ತತ್ವಕ್ಕೆ ಅವಳು ಪಾದರಸದಂಥ ಸಾಕ್ಷಿ. 'ಬಾಳನ್ನು ನಂಬು' ಎಂಬುದೇ ಷೇಕ್‌ಸ್ಪಿಯರನ ಉದಾತ್ತ ಸಂದೇಶ. ಇನ್ನೊಂದು ಸೋಜಿಗವೇನೆಂದರೆ ಪಾತ್ರ ಬಹಳ ಮಾತನಾಡಲಿ, ಅಲ್ಪ ಸ್ವಲ್ಪ ಆಡಲಿ, ಮೌನವನ್ನೇ ಅಧಿಕವಾಗಿ ಸಾಧಿಸಲಿ ಅದು ಹೇಗೊ ಸ್ಫುಟವಾಗಿ ಮೈದುಂಬಿ ಎದ್ದು ನಿಂತು ಓಡಿಯಾಡುತ್ತದೆ ಷೇಕ್‌ಸ್ಪಿಯರನ ಕೈಚಳಕದಿಂದ.

ಅವನ ಇತಿಹಾಸ ನಾಟಕಗಳೆಲ್ಲ ಆದರ್ಶರಾಜ ಯಾರು ಎಂಬ ಪ್ರಶ್ನೆಗೆ ಉತ್ತರ ಗೊತ್ತುಹಿಡಿಯುವ ಪ್ರಯತ್ನ; ಅವನ ಹರ್ಷನಾಟಕಗಳೆಲ್ಲ ಸುಮ್ಮನೆ ವಿನೋದಕ್ಕಾಗಿ ಕಟ್ಟಿದ ಲಘು ಕಲ್ಪನೆಗಳು, ಆದರೂ ಅವು ಪ್ರಕೃತಿಸಹಜ; ಗಂಭೀರ ನಾಟಕಗಳೆಲ್ಲ ರುದ್ರ ದುರ್ಘಟನೆಗಳ ಮೇಳ, ಪ್ರಕೃತಿವಿರುದ್ಧ — ಮುಂತಾದ ಹೇಳಿಕೆಗಳ ಸುರಿಮಳೆಯನ್ನು ಎದುರಿಸಬೇಕು ನಾವು, ಷೇಕ್‌ಸ್ಪಿಯರನ ಮೇಲಣ ವಿಮರ್ಶೆಯನ್ನು ಗಮನಿಸ ತೊಡಗಿದರೆ. ಶೀಲಧರ್ಮದ ಕಡೆಗೆ ಷೇಕ್‌ಸ್ಪಿಯರನ ಆಸಕ್ತಿ ತಿರುಗಲೇ ಇಲ್ಲವೆಂದು ಒಬ್ಬ ಪಂಡಿತವರ್ಯ ಘೋಷಿಸಿದರೆ, ಅವನ ಒಂದೊಂದು ರಚನೆಯೂ ಒಂದೊಂದು ನೀತಿಸೂತ್ರದ ಉದಾಹರಣೆಯೆಂದು ಮತ್ತೊಬ್ಬನ ತೀರ್ಮಾನ. ಕೆಲವರ ನೋಟಕ್ಕೆ, ಅವನ ಯಾವ ನಾಟಕವೇ ಆಗಲಿ, ಒಂದು ಸಾದೃಶ್ಯವನ್ನೊ ಪ್ರತಿಮೆಯನ್ನೊ ಐದಂಕದ ವೈಶಾಲ್ಯಕ್ಕೆ ವಿಶದವಾಗಿ ಲಂಬಿಸುವ ಸಾಹಿತ್ಯ. ಜಾಡನ್ನೇ ವ್ಯಕ್ತಪಡಿಸದ ಗುಪ್ತಗಾಮಿನಿಯಂತೆ ಪ್ರವಹಿಸುತ್ತದೆ ಜೀವನ ಅವನ ಕೃತಿಗಳಲ್ಲಿ, ಎಂದು ತೆಪ್ಪಗಾಗಿದ್ದಾರೆ ಅನೇಕ ಮಂದಿ. ತನ್ನ ಪ್ರಮುಖಾಭಿಪ್ರಾಯವನ್ನು ಮುಚ್ಚಿಟ್ಟು, ನಮ್ಮನ್ನೂ ನಮ್ಮ ಹಗರಣವನ್ನೂ ಕಂಡು ನಗುತ್ತಾನಂತೆ ಷೇಕ್‌ಸ್ಪಿಯರ್! ಎಂದರೆ, ಷೇಕ್‌ಸ್ಪಿಯರನ ದರ್ಶನದ ವಿಷಯವಾಗಿ ಏನನ್ನೂ ಆಡಬಾರದೇನು ನಾವು? ಹಾಗೆ ಹತಾಶರಾಗಬೇಕಾದ್ದಿಲ್ಲ. ಇದೇ ಅವನ ಕಡೆಯ ತೀರ್ಪೆಂದು ಹೇಳುವುದು ದುರ್ಧೈರ್ಯವಾದರೂ ಒಳ್ಳೆಯದು – ಕೆಟ್ಟದು, ಸುಖ – ದುಃಖ, ಮನುಷ್ಯ – ಅದೃಶ್ಯ ಶಕ್ತಿಗಳು, ಪುರುಷಕಾರ – ಅದೃಷ್ಟ ಇತ್ಯಾದಿ ದ್ವಂದ್ವಭಾವಗಳನ್ನು ಕುರಿತು ಅವನ ನಂಬಿಕೆ ಅಭಿಮತ ಬಯಕೆ ಯಾವುದಾಗಿತ್ತೆಂಬುದನ್ನು ಅಷ್ಟಿಷ್ಟು ಸ್ಪಷ್ಟವಾಗಿ ಅರಿಯುವುದು ಸಾಧ್ಯ. ಯಾವೊಂದು ಉಕ್ತಿಯನ್ನೂ ಅತಿಗೆ ಕೊಂಡೊಯ್ಯಬಾರದು, ಅಷ್ಟೆ. ಸತ್ಯಗ್ರಹಿಕೆಯ ಜೊತೆಗೆ ಸಹನೆಯೂ ಪರಿಹಾಸದ ಜೊತೆಗೆ ಹೃದಯ ವೈಶಾಲ್ಯವೂ ಷೇಕ್‌ಸ್ಪಿಯರನ ಹೆಗ್ಗುರುತಾದುವು; ಏತಕ್ಕೆಂದರೆ, ಹೆದರದೆ ಹಿಂಜರಿಯದೆ ಕೊಂಕದೆ ಕುಗ್ಗದೆ ಹಿಗ್ಗದೆ ಹೇಸದೆ ಜೀವನವನ್ನು ಸಾಕ್ಷಾತ್ತಾಗಿ ಈಕ್ಷಿಸುವುದು ಅವನ ಉದ್ದೇಶವಾಗಿತ್ತು, ಉದ್ಯೋಗವಾಗಿತ್ತು.

ಆ ವಿಚಾರ ಈ ವಿಚಾರವನ್ನು ತೆಗೆದುಕೊಂಡು ಹೀಗೆ ಎಷ್ಟು ಹೊತ್ತು ಬೇಕಾದರೂ ಷೇಕ್‌ಸ್ಪಿಯರನ್ನು ಕುರಿತ 'ಹರಿಕಥೆ'ಯನ್ನು ಮುಂದುವರಿಸಬಹುದು. 'ಕಿಂ ಬಹುನಾ?' ಅವನ ಶೈಲಿಯ ಪರಮಾದ್ಭುತದ ಮೇಲೆ ಒಂದೆರಡು ನುಡಿಗಳನ್ನು ಉಸುರಿ ತೃಪ್ತರಾಗೋಣ. ವರ್ಜಿಲನನ್ನು 'ಭಾಷೆಯ ಭೂಪಾಲ'ನೆಂದು ನುತಿಸಿದ್ದಾರೆ. ಆ ಭವ್ಯಕವಿಯ ಭಾಷೆ ಲ್ಯಾಟಿನ್. ನಾಟಕವನ್ನು ನಾಟಕವಾಗಿಯೇ ಇರಿಸಿ, ಹಾಗೂ ಭವ್ಯಕಾವ್ಯದ ಭಾರವನ್ನು ಔಚಿತ್ಯಭಂಗವಿಲ್ಲದಂತೆ ಅದರ ಹೆಗಲ ಮೇಲೆ ಹೊರಿಸಿ, ಜಯಶಾಲಿಯಾದ ಷೇಕ್‌ಸ್ಪಿಯರನ ಭಾಷೆ ಇಂಗ್ಲಿಷ್. ಸಮಕಾಲೀನನಾದ ಬೇಕನ್ನನ ಮುಂಗಾಣ್ಕೆಯಂತೆ, ಇಂಗ್ಲಿಷ್ ಜನಸಾಮಾನ್ಯರ ಮಾತು, ಬೇಗ ಹಿಂದಕ್ಕೆ ಸರಿದು ಮೂಲೆಗುಂಪಾಗುವುದು ಖಂಡಿತ; ಚಿರಕಾಲ ನಿಲ್ಲತಕ್ಕ ವಾಕ್ಕು ಲ್ಯಾಟಿನ್ನೇ! ಬೇಕನ್ ಮಹಾಮೇಧಾವಿ, ಆದರೂ ಅವನ ಭವಿಷ್ಯವಾದ ಬಹಳ ಊನ. ಈಗ ಲ್ಯಾಟಿನ್ನನ್ನು ಓದಿ ಅರ್ಥಮಾಡಿಕೊಳ್ಳುವಾತ ಒಬ್ಬನಿದ್ದರೆ, ಇಂಗ್ಲಿಷನ್ನು ವ್ಯಾಸಂಗ ಮಾಡುವವರು ನೂರಾರು, ಸಾವಿರ ಸಾವಿರ. ಇಂಗ್ಲಿಷ್ ವಾಣಿಗೆ ಕಳಶವಿಟ್ಟದ್ದಾನೆ ಷೇಕ್‌ಸ್ಪಿಯರ್. ಆರಿಸಿ ತಂದವುಗಳಾದರೂ ಸ್ವಾಭಾ

ವಿಕವಾಗಿ ಹೊರಬಂದಂತೆ ಶೋಭಿಸುವ ಪದಗಳು; ಅರ್ಥ ಗಿಡಿದು ತುಂಬಿದ್ದರೂ ಅವು ಸುಲಭ, ಸುರಮ್ಯ, ಸೂಕ್ತ; ಒಂದಕ್ಕೊಂದರ ಹೊಂದಾಣಿಕೆಯಲ್ಲಿ ಅನ್ಯಾದೃಶ ಮೈತ್ರಿ; ಅನಾಯಾಸವೂ ಮಧುರವೂ ಆದ ಶಬ್ದಗತಿ; ಅಕ್ಲಿಷ್ಟವೂ ಅಪೂರ್ವವೂ ಸರಾಗವೂ ಸ್ವತಂತ್ರವೂ ಆದ ಕಾವ್ಯಗಾನ; ವಚನದ ಸುತ್ತ ಧ್ವನಿಪೂರಿತವಾದ ದಿವ್ಯ ಪ್ರಪಂಚ — ಷೇಕ್‌ಸ್ಪಿಯರನ ಬರವಣಿಗೆಯನ್ನು ವಾಕ್ಯಜಾಲವೆನ್ನೋಣವೊ ವಿಸ್ಮಯವೆನ್ನೋಣವೊ? ಪಹರೆ ತೀರಿಸಿಕೊಂಡು ಮನೆಗೆ ಹೊರಡಲಿರುವ ಸಿಪಾಯಿ ಎನ್ನುತ್ತಾನೆ: 'ಇದೊ ಅತಿ ಕೊರೆತ, ನನ್ನೆದೆಯೊಳಗೆ ಅಸ್ವಾಸ್ಥ್ಯ'. ಅವನಾಡತಕ್ಕ ನುಡಿ ಅದು, ಹಾಗೂ ಇಡೀ ನಾಟಕದ ಕಪ್ಪು ವಾತಾವರಣಕ್ಕೆ ಅದೊಂದು ವ್ಯಂಗ್ಯ ವ್ಯಾಖ್ಯೆ. ಹ್ಯಾಮ್ಲೆಟನ 'ಬಾಳೊ ಸಾವೊ — ಅದೆ ನನ್ನ ಸಮಸ್ಯೆ', ಅಥವಾ 'ಮಿಕ್ಕುದೆಲ್ಲ ಮೌನಕ್ಕೆ': ಇವುಗಳಲ್ಲಿ ವಾಮನ ನಂಥ ಚಿಕ್ಕ ಮಾತು, ಭಾವಾರ್ಥದ ಬೀಸಾದರೊ ತ್ರಿವಿಕ್ರಮಾವತಾರ! ಹರ್ಷನಾಟಕ ಗಳಲ್ಲಿ ಕೂಡ ವಚನವಜ್ರಗಳಿಗೆ ಕೊರತೆಯಿಲ್ಲ. ಹಳ್ಳಿಗಿತ್ತಿ ಫೀಬಿಯನ್ನು ನಿಂದಿಸುತ್ತ ಹೇಳುತ್ತಾಳೆ ನಾಯಕಿ ರಾಸಲಿಂಡ್: 'ಮಂಡಿಯೂರಿ ವಂದನೆ ಸಲ್ಲಿಸು ದೇವರಿಗೆ, ಸತ್ಪು ರುಷನ ನಲ್ಮೆ ನಿನ್ನದಾಗಿದೆ.' ದುರಹಂಕಾರಿ ಮ್ಯಾಲ್ವೋಲಿಯೊಗೆ ಸರಸಜಾಯಮಾನದ ಸರ್ ಟೋಬಿಯ ಸವಾಲು: 'ನೀನೊಬ್ಬನು ಸಂಯಮಿಯಾದ ಮಾತ್ರಕ್ಕೆ ಜಗತ್ತಿನಲ್ಲೆಲ್ಲ ಮದ್ಯ ಮಿಠಾಯಿ ರದ್ದಾಗಬೇಕೊ ಇನ್ನು ಮುಂದೆ?' ಪ್ರಾಸ್ಪೆರೊವಿನ ಬಾಯಿನಿಂದ ಉದುರುವ ವಿಖ್ಯಾತ ನಾಟುನುಡಿ: 'ಸ್ವಪ್ನವನ್ನು ಸೃಜಿಸುವ ದ್ರವ್ಯದಿಂದಲೇ ನಮ್ಮನ್ನೂ ಮಾಡಲಾಗಿದೆ; ನಮ್ಮ ಅಲ್ಪ ಬಾಳಿಗೆ ಅದೊಂದು ನಿದ್ರೆಯಿಂದಲೇ ಸಮಾಪ್ತಿ.' ಯಾವ ವ್ಯಕ್ತಿಯ ವದನದಿಂದ ಎಂಥ ಆಣಿಮುತ್ತು ಯಾವಾಗ ಬೀಳುತ್ತದೊ ನಿರೀಕ್ಷಿಸುವುದೇ ಅಸಾಧ್ಯ; ಷೇಕ್‌ಸ್ಪಿಯರನ ಧಾರಾಳ ಅಪ್ಪುವಾಯುಗಳ ಧಾರಾಳ. ಆದರೂ ಎಲ್ಲೂ ಅಸಮಂಜಸವೆಂಬ ಸೊಲ್ಲಿಗೆ ಎಡೆಯಿಲ್ಲ. ಮತ್ತೆಲ್ಲಿ ನೋಡೋಣ ಇಂಥ ಬರವಣಿಗೆಯನ್ನ?





# ಷೇಕ್‌ಸ್ಪಿಯರನ ಕೃತಿಗಳ ಕನ್ನಡ ಭಾಷಾಂತರ ರೂಪಾಂತರಗಳು

## ಗ್ರಂಥಸೂಚಿ

[ಕಲ್ಕತ್ತದ ನೇಷನಲ್ ಲೈಬ್ರರಿಯವರು 1964ರಲ್ಲಿ ಪ್ರಕಟಿಸಿದ 'ಷೇಕ್‌ಸ್ಪಿಯರ್ ಇನ್ ಇಂಡಿಯ' ಮತ್ತು ಇತರ ಹಲವಾರು ಆಧಾರಗಳ ಮೇಲೆ ಈ ಪಟ್ಟಿಯನ್ನು ಸಿದ್ಧ ಮಾಡಲಾಗಿದೆ. ಪಟ್ಟಿ ಹಾಗೂ ಅದರಲ್ಲಿ ಕೊಟ್ಟಿರುವ ವಿವರಗಳು ಅಪೂರ್ಣ. ವಿವರಗಳನ್ನು ನೇರವಾಗಿ ಮೂಲಗ್ರಂಥಗಳೊಡನೆ ತಾಳೆ ನೋಡಿ ಪೂರ್ಣಗೊಳಿಸುವ ಅನುಕೂಲವಿಲ್ಲದೆ ಹೋದ ಕಾರಣ, ಗ್ರಂಥಗಳಲ್ಲಿ ಯಾವವು ಭಾಷಾಂತರ, ಯಾವವು ರೂಪಾಂತರ ಎಂದು ಎಲ್ಲ ಸಂದರ್ಭಗಳಲ್ಲೂ ತೋರಿಸುವುದು ಸಾಧ್ಯವಾಗಿಲ್ಲ. ಕೆಲವು ಕೇವಲ ಪರಿಚಯಗ್ರಂಥಗಳೋ ಕಥಾರೂಪಗಳೋ ಇರಬಹುದು. — ಸಂ.]


**ಅಥೆಲ್ಲೊ**

ಅಥೆಲ್ಲೊ
ಕೃಷ್ಣಶಾಸ್ತ್ರಿ, ಎ. ಆರ್.

ಅಥೆಲ್ಲೊ
ಷಣ್ಮುಖಯ್ಯ, ವೈ. ಎಂ.

ರಾಘವೇಂದ್ರರಾವ್ ನಾಟಕ
ಚುರಮುರಿ, ಗುಂಡೋ ಕೃಷ್ಣ. 1885.

ಶೂರಸೇನ ಚರಿತ್ರೆ
ಬಸವಪ್ಪಶಾಸ್ತ್ರಿ, ಮಹದೇವಶಾಸ್ತ್ರಿ ಮತ್ತು ಸುಬ್ಬರಾವ್, ಸಿ. ಜಿ. ಟಿ. ಎ. ಪ್ರೆಸ್, ಮೈಸೂರು. 1895.

**ಆ್ಯಸ್ ಯು ಲೈಕ್ ಇಟ್**

ಆ್ಯಸ್ ಯು ಲೈಕ್ ಇಟ್
ಶಾಸ್ತ್ರಿ, ಎ. ವಿ.

ಕಮಲಾವತಿ ಪರಿಣಯ
ರಾಮರಾಯ, ವೆಂಕಟಾದ್ರಿ.

ದೊರೆಮಗಳು (ನೀಳ್ಗತೆ)
ಭಾರತೀಸುತ.
ಕನ್ನಡ ಪ್ರಪಂಚ ಪ್ರಕಾಶನ, ಕದ್ರಿ, ಮಂಗಳೂರು. 1959.

**ಆಲ್ಸ್ ವೆಲ್ ದಟ್ ಎಂಡ್ಸ್ ವೆಲ್**

ಸತೀಮಣಿ ವಿಜಯ
ಸೋಮನಾಥಯ್ಯ, ಜೆಳ್ಳಾವೆ ಸೋಮಪ್ಪ. 1897. ವೀರೇಶಲಿಂಗಂ ಪಂಥುಲು ಅವರ ತೆಲುಗು ಭಾಷಾಂತರದಿಂದ ಅನುವಾದಿತ.

**ಆ್ಯಂಟನಿ ಅಂಡ್ ಕ್ಲಿಯೊಪಾಟ್ರ**

ಆ್ಯಂಟೊನಿ ಮತ್ತು ಕ್ಲಿಯೋಪಾತ್ರ (ಅಪ್ರಕಟಿತ)
ಕೆ. ಮಲ್ಲರಾಜೀ ಅರಸು.

**ದಿ ಕಾಮಿಡಿ ಅಫ್ ಎರರ್ಸ್**

ಭ್ರಾಂತಿವಿಲಾಸ (ಗದ್ಯರೂಪಾಂತರ)
ವೆಂಕಟಾಚಾರ್ಯ, ಬಿ. ಮೈಸೂರು. 1876.

ಈಶ್ವರಚಂದ್ರ ವಿದ್ಯಾಸಾಗರರ ಬಂಗಾಳಿ ಭಾಷಾಂತರದಿಂದ ಅನುವಾದಿತ.

ವಿಪರ್ಯಾಸ
'ಪರ್ವತವಾಣಿ'.

**ಕಿಂಗ್ ಹೆನ್ರಿ ದಿ ಸಿಕ್ಸ್ತ್**

ಜಾಕ್ ಕೇಡ್ (ಆರಿಸಿದ ಭಾಗಗಳ ಭಾಷಾಂತರ) ಗುಂಡಪ್ಪ, ಡಿ. ವಿ.
ಕಾವ್ಯಾಲಯ, ಮೈಸೂರು. 1959.

**ಕಿಂಗ್ ಲಿಯರ್**

ಲಿಯರ್ ಮಹಾರಾಜ (ಭಾಷಾಂತರ)
ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಜೀವನ ಕಾರ್ಯಾಲಯ, ಬೆಂಗಳೂರು. 1959.

ಹೇಮಚಂದ್ರರಾಜವಿಲಾಸ
ಪುಟ್ಟಣ್ಣ, ಎಂ. ಎಸ್.
ಬೆಂಗಳೂರು. 1899.

**ಜೂಲಿಯಸ್ ಸೀಸರ್**

ಜೂಲಿಯಸ್ ಸೀಸರ್
ಇನಾಂದಾರ್, ವಿ. ಎಂ.

ಜೂಲಿಯಸ್ ಸೀಸರ್
ಶರ್ಮ, ತಿರುಮಲೆ ತಾತಾಚಾರ್ಯ
ಕರ್ನಾಟಕ ಸಾಹಿತ್ಯ ಪ್ರಕಟನ ಮಂದಿರ, ಬೆಂಗಳೂರು. 1931.

ಜೂಲಿಯಸ್ ಸೀಸರ್
ಷಣ್ಮುಖಯ್ಯ, ವೈ. ಎಂ.

**ದಿ ಟು ಜೆಂಟಲ್‌ಮೆನ್ ಆಫ್ ವೆರೋನ**

ಕುಸುಮಾಕರ (ಗದ್ಯರೂಪಾಂತರ)
ಅಣ್ಣಾಜಿರಾವ್, ಆರ್.
ಬೆಂಗಳೂರು. 1897.

**ದಿ ಟೆಂಪೆಸ್ಟ್**

ಚಂಡಮಾರುತ
ಕರ್ನಾಟಕ ಗ್ರಂಥಮಾಲಾ, ಮೈಸೂರು. 1893. ಚಾರ್ಲ್ಸ್ ಲ್ಯಾಂಬ್‌ನ 'ಟೇಲ್ಸ್ ಫ್ರಮ್ ಷೇಕ್ಸ್‌ಪಿಯರ್'ನಿಂದ.

ಚಂಡಮಾರುತ (ಭಾಷಾಂತರ)
ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಜೀವನ ಕಾರ್ಯಾಲಯ, ಬೆಂಗಳೂರು, 1959.

ಬಿರುಗಾಳಿ
ಕುವೆಂಪು (ಕೆ. ವಿ. ಪುಟ್ಟಪ್ಪ)
ಕಾವ್ಯಾಲಯ, ಮೈಸೂರು. 1930.

**ದಿ ಟೇಮಿಂಗ್ ಆಫ್ ದಿ ಷ್ರೂ**

ಗಯ್ಯಾಳಿಯನ್ನು ಸಾಧುಮಾಡುವಿಕೆ
ನರಸಿಂಹಾಚಾರ್, ಎಸ್. ಜಿ.

ಗಯ್ಯಾಳಿಯನ್ನು ಸಾಧುಮಾಡುವಿಕೆ
ಸೋಮನಾಥಯ್ಯ, ಬೆಳ್ಳಾವೆ ಸೋಮಪ್ಪ. ಬೆಂಗಳೂರು. 1897. ವೀರೇಶಲಿಂಗಂ ಪಂತುಲು ಅವರ ತೆಲುಗು ಭಾಷಾಂತರದಿಂದ ಅನುವಾದಿತ.

ಚಂಡೀಮದಮರ್ದನ ನಾಟಕಂ
ಲಕ್ಷ್ಮಣರಾವ್, ಕೆ. ಕರ್ನಾಟಕ ಗ್ರಂಥಮಾಲಾ. 1910.

ಚಂಡೀಮರ್ದನ
ರಾಮಶಾಸ್ತ್ರಿ, ಗೋಡಪಲ್ಲಿ.

ತ್ರಾಟಿಕಾ ನಾಟಕ (ಗದ್ಯರೂಪಾಂತರ)
ಗದಿಗಯ್ಯ, ಹುಚ್ಚಯ್ಯ ಹೊನ್ನಾಪುರಮಠ. 1920. ಪ್ರೊ॥ ವಾಸುದೇವ ಬಾಲಕೃಷ್ಣ ಕೇಳ್ಕರರ ಮರಾಠೀ ಭಾಷಾಂತರದಿಂದ ಅನುವಾದಿತ.

ಬಹದ್ದೂರ್ ಗಂಡ
'ಪರ್ವತವಾಣಿ'

**ಟ್ವೆಲ್ಫ್ತ್ ನೈಟ್**

ದ್ವಾದಶರಾತ್ರಿ (ಭಾಷಾಂತರ)
ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಜೀವನ ಕಾರ್ಯಾಲಯ. ಬೆಂಗಳೂರು. 1960.

**ದಿ ಮರ್ಚೆಂಟ್ ಆಫ್ ವೆನಿಸ್**

ಪಾಂಚಾಲೀ ಪರಿಣಯಂ
ಆನಂದರಾವ್, ಎ. ಬೆಂಗಳೂರು. 1890.

ಮರ್ಚೆಂಟ್ ಆಫ್ ವೆನಿಸ್
ಜಯರಾಯಾಚಾರ್ಯ.

ದಿ ಮರ್ಚೆಂಟ್ ಆಫ್ ವೆನಿಸ್
ಸೀತಾರಾಮಯ್ಯ, ವಿ.

ದಿ ಮರ್ಚೆಂಟ್ ಆಫ್ ವೆನಿಸ್
ಷಣ್ಮುಖಯ್ಯ, ವೈ. ಎಂ.
ವೆನಿಸ್‌ನ ವ್ಯಾಪಾರಿ (ಭಾಷಾಂತರ)
ಗುಂಡಣ್ಣ, ಜಿ. ಚಿತ್ರದುರ್ಗ. 1959.
ವೆನಿಸು ನಗರದ ವಣಿಕ
ವೆಂಕಟಾಚಾರ್, ಬಿಂಡಿಗನವಲೆ ಗರುಡಾಚಾರ್. ಮೈಸೂರು. 1906.
ವೆನಿಸ್ ನಗರದ ವಣಿಕ
ಕೃಷ್ಣಶಾಸ್ತ್ರಿ, ಎ. ಆರ್.
ವೇಣುಪುರಿಯ ವರ್ತಕ
ಹನುಮಂತಗೌಡ. 1928.
ಸುರತನಗರದ ಶ್ರೇಷ್ಠಿ
ವಾಸುದೇವಾಚಾರ್ಯ, ಕೆರೂರು ಸ್ವಾಮಿರಾಚಾರ್ಯ. ಬಾಗಲಕೋಟೆ. 1929.

ಎ ಮಿಡ್‌ಸಮ್ಮರ್-ನೈಟ್ಸ್ ಡ್ರೀಮ್
ಪ್ರಮೀಳಾರ್ಜುನೀಯ
ಶ್ರೀಕಂಠೇಶಗೌಡ, ಎಂ. ಎಲ್.
ಜಿ. ಟಿ. ಎ. ಪ್ರೆಸ್, ಮೈಸೂರು.
ವಸಂತಯಾಮಿನೀ ಸ್ವಪ್ನಚಮತ್ಕಾರ ನಾಟಕ
ವಾಸುದೇವಾಚಾರ್ಯ, ಕೆರೂರು ಸ್ವಾಮಿರಾಚಾರ್ಯ.

ಮೆಕ್‌ಬೆತ್
ಪ್ರತಾಪರುದ್ರದೇವ
ಶ್ರೀಕಂಠೇಶಗೌಡ, ಎಂ. ಎಲ್.
ಜಿ. ಟಿ. ಎ. ಪ್ರೆಸ್, ಮೈಸೂರು. 1895.
ಮ್ಯಾಕ್‌ಬೆತ್ (ಭಾಷಾಂತರ)
ಗುಂಡಪ್ಪ, ಡಿ. ವಿ.
ಕರ್ಣಾಟಕ ಪ್ರಕಟನಾಲಯ, ಬೆಂಗಳೂರು. ಅಕ್ಟೋಬರ್, 1936.
ಮ್ಯಾಕ್‌ಬೆತ್
ಚನ್ನಬಸಪ್ಪ, ಧಾರವಾಡ ಬಸಲಿಂಗಪ್ಪ.
ಸುಮಾರು 1870-80ರ ನಡುವಿನದು.

ರೋಮಿಯೊ ಅಂಡ್ ಜೂಲಿಯೆಟ್
ಕಮಲಾಕ್ಷ ಪದ್ಮಗಂಧಿಯರ ಕಥೆ
ವೆಂಕಟೇಶ, ಭೀಮರಾವ್
ಭಂಡಿವಾಡ. 1881.
ರಾಮವರ್ಮ ಲೀಲಾವತಿ
ಎ. ವಿ. ವರದಾಚಾರ್. ಜನರಲ್ ಏಜೆನ್ಸಿ, ಮೈಸೂರು.
ರಾಮವರ್ಮ ಲೀಲಾವತಿ ಚರಿತ್ರೆ
ಆನಂದರಾವ್, ಎ.
ಗೌರ್ನಮೆಂಟ್ ಬ್ರಾಂಚ್ ಪ್ರೆಸ್, ಮೈಸೂರು. 1889.
ರಾಮವರ್ಮ ಲೀಲಾವತಿ ಚರಿತ್ರೆ
ಜಯರಾಯಾಚಾರ್ಯ, ನರಹರಿ.
ರೋಮಿಯೊ ಅಂಡ್ ಜೂಲಿಯೆಟ್
ಬಸವಪ್ಪಶಾಸ್ತ್ರಿ.
ರೋಮಿಯೊ ಮತ್ತು ಜೂಲಿಯೆಟ್ (ಕಥೆ)
ಶಂಕರನಾರಾಯಣರಾವ್, ಹೆಚ್. ಎಮ್.
ರೋಮಿಯೊ ಅಂಡ್ ಜೂಲಿಯೆಟ್
ಶ್ರೀಕಂಠೇಶಗೌಡ, ಕೆ. ಎಲ್.
ರೋಮಿಯೊ ಜೂಲಿಯೆಟ್
ಷಣ್ಮುಖಯ್ಯ, ವೈ. ಎಂ.
ಈಸ್ಟರ್ನ್ ಪ್ರೆಸ್, ಬೆಂಗಳೂರು. 1952.

ದಿ ವಿಂಟರ್ಸ್ ಟೇಲ್
ಮಂಜುಘೋಷ
ರಂಗಾಚಾರ್ಯ, ಮುದ್ಗಲ್.
ಮಂಜುವಾಣಿ
ಶ್ರೀಕಂಠ ಶಾಸ್ತ್ರಿ, ನಂಜನಗೂಡು.
ಜಿ. ಟಿ. ಎ. ಪ್ರೆಸ್, ಮೈಸೂರು. 1914.
ವೀರೇಶಲಿಂಗಂ ಪಂಥುಲು ಅವರ ತೆಲುಗು ಭಾಷಾಂತರ 'ಸುಮಿತ್ರ ಚರಿತಂ'ನಿಂದ ಅನುವಾದಿತ.

ಸಿಂಬೆಲೈನ್
ಜಯಸಿಂಹರಾಜ ಚರಿತ್ರೆ
ನಂಜಪ್ಪ, ಚಕ್ರಪುರಿ ಮಲ್ಲಪ್ಪ.
ಟೌನ್ ಪ್ರೆಸ್, ಬೆಂಗಳೂರು. 1907.
ಜಯಸಿಂಹರಾಜ ಚರಿತ್ರೆ
ಪುಟ್ಟಣ್ಣ, ಎಂ. ಎಸ್. ಮತ್ತು ಶ್ರೀನಿವಾಸ ಅಯ್ಯಂಗಾರ್, ಎಂ. ಬಿ. ಸಿಟಿ ಪ್ರೆಸ್, ಬೆಂಗಳೂರು. 1881.

ಹ್ಯಾಮ್ಲೆಟ್
ಸಂತಾಪಕ

ಅಮೃತಾಚಾರಿ, ಟಿ.
ಬೆಂಗಳೂರು. 1937.

ಹ್ಯಾಮ್ಲೆಟ್
ಆನಂದರಾವ್, ಎ. (ಮೈಸೂರು ದೇಶೀಯ). 05.

ಹ್ಯಾಮ್ಲೆಟ್ (ಅಪ್ರಕಟಿತ)
ಕಾರಂತ, ಶಿವರಾಮ
1930 ?

ಹ್ಯಾಮ್ಲೆಟ್
ಕುಲಕರ್ಣಿ, ಎ. ಎಸ್.
ಸರಸ್ವತೀ ಪುಸ್ತಕ ಭಂಡಾರ, ಬೆಳಗಾವಿ.

ಹ್ಯಾಮ್ಲೆಟ್
ಜಯರಾಯಾಚಾರ್ಯ, ನರಹರಿ

ಹ್ಯಾಮ್ಲೆಟ್
ಜೀವಣ್ಣರಾಯ, ಗೋಡೆ

ಹ್ಯಾಮ್ಲೆಟ್
ಶಿವಲಿಂಗಸ್ವಾಮಿ, ಸಾವಳಗಿಮಠ

ಹ್ಯಾಮ್ಲೆಟ್
ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಜೀವನ ಕಾರ್ಯಾಲಯ, ಬೆಂಗಳೂರು. 1958.

ಹ್ಯಾಮ್ಲೆಟ್
ಷಣ್ಮುಖಯ್ಯ, ವೈ. ಎಂ. 1954.

ಹ್ಯಾಮ್ಲೆಟ್
ಹೇಮಂತಕುಮಾರ

### ಸಂಕಲಿತ

ಆರಿಸಿದ ದೃಶ್ಯಗಳು (ಭಾಷಾಂತರ)
ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್). ಜೀವನ ಕಾರ್ಯಾಲಯ, ಬೆಂಗಳೂರು. 1963.

### ಕವಿತೆಗಳು

ಆಂಗ್ಲ ಕವಿತಾವಳಿ
ನಾರಾಯಣರಾವ್, ಹಟ್ಟಿಯಂಗಡಿ.
ಸದಾನಂದ ಕೋ-ಆಪರೇಟಿವ್ ಪ್ರೆಸ್, ಪುತ್ತೂರು. 1919.

ಇಂಗ್ಲಿಷ್ ಗೀತಗಳು
'ಶ್ರೀ' (ಬಿ. ಎಂ. ಶ್ರೀಕಂಠಯ್ಯ)
ಕರ್ನಾಟಕ ಸಂಘ, ಬೆಂಗಳೂರು. 1926.

### ಕಥಾಸಂಗ್ರಹ

ಮನೋರಂಜಕ ಕಥೆಗಳು
ಸಿಂಗಿತ, ಬಿ. ಎಂ.
ಹಿಂದೂ ಪ್ರೆಸ್, ಧಾರವಾಡ. 1891.

ನಾಟಕ ಕಥೆಗಳು
ಲಕ್ಷ್ಮೀನರಸಿಂಹ ಶಾಸ್ತ್ರಿ, ವಿ. ಕರ್ಣಾಟಕ ಪ್ರಕಟನಾಲಯ, ಬೆಂಗಳೂರು. 1934.
'ಹ್ಯಾಮ್ಲೆಟ್,' 'ಮೆಕ್‌ಬೆತ್', 'ಆಥೆಲ್ಲೊ', 'ಜೂಲಿಯಸ್ ಸೀಸರ್'ಗಳ ಕಥೆಗಳು

### ವಿಮರ್ಶನಾತ್ಮಕ ಕೃತಿಗಳು

ಷೇಕ್ಸ್‌ಪಿಯರ್, ಪೂರ್ವಭಾಗ
ಮೂರ್ತಿರಾವ್, ಎ. ಎನ್.
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. 1962.

ಷೇಕ್ಸ್‌ಪಿಯರ್
ರಾಮರಾವ್, ಎಂ.
ಉಷಾ ಪ್ರಕಟನಾಲಯ, ಮೈಸೂರು. 1964.

### ಜೀವನ ಚರಿತ್ರೆ

ಇಂಗ್ಲಂಡ್ ದೇಶದ ಮಹಾಕವಿಯಾದ ವಿಲಿಯಂ ಷೆಕ್ಸಪಿಯರ್ ಚರಿತ್ರೆ
ರಾಮರಾವ್, ಅನವಟ್ಟಿ

# ಷೇಕ್ಸ್ಪಿಯರನ ಜೀವನ-ಘಟನಾವಳಿ

## ಮುಖ್ಯಸಂಗತಿಗಳ ದಾಖಲೆಗಳು

ಇಂಗ್ಲಂಡಿನ ಸ್ಟ್ರಾಟ್‌ಫರ್ಡ್-ಆನ್-ಏವನ್‌ನ ಪ್ಯಾರಿಷ್ ಚರ್ಚಿನಲ್ಲಿ ಬ್ಯಾಪ್ಟಿಸಂ ಅಥವಾ ಧರ್ಮಸ್ನಾನ. ಪ್ರಾಯಶಃ ಅದಕ್ಕೆ ಮೂರು ದಿನ ಮೊದಲು ಜನನ 26 ಏಪ್ರಿಲ್ 1564

ಆ್ಯನ್ ಹ್ಯಾತವೆಯೊಂದಿಗೆ ಮದುವೆ 1582

ಮಗಳು ಸುಸ್ಯಾನಳ ಜನನ 1583

ಅವಳಿ ಮಕ್ಕಳು ಜೂಡಿತ್ ಮತ್ತು ಹ್ಯಾಮ್ನೆಟರ ಜನನ 1585

'ಎ ಗ್ರೋಟ್ಸ್‌ವರ್ತ್ ಆಫ್ ವಿಟ್ ಬಾಟ್ ವಿತ್ ಎ ಮಿಲಿಯನ್ ಆಫ್ ರಿಪೆಂಟನ್ಸ್' ಹೊತ್ತಗೆಯಲ್ಲಿ ರಾಬರ್ಟ್ ಗ್ರೀನನ ನಿಂದನೆ 1592

'ವೀನಸ್ ಅಂಡ್ ಆ್ಯಡೋನಿಸ್'ನ ಪ್ರಕಟನೆ, ಸೌತ್ಯಾಂಪ್ಟನ್‌ನಿಗೆ ಅರ್ಪಣೆ 1593

'ರೇಪ್ ಆಫ್ ಲೂಕ್ರೀಸ್'ನ ಪ್ರಕಟನೆ, ಸೌತ್ಯಾಂಪ್ಟನ್‌ನಿಗೆ ಅರ್ಪಣೆ 1594

ಲಾರ್ಡ್ ಚೇಂಬರ್‌ಲೆನನ ನಾಟಕಮಂಡಳಿಯಲ್ಲಿ ನಟನೆಂದು ನಮೂದು 1594

ಅಪ್ಪ ಜಾನ್ ಷೇಕ್ಸ್ಪಿಯರಿಗೆ ಮನೆತನದ ಲಾಂಛನ ('ಕೋಟ್ ಆಫ್ ಆರ್ಮ್ಸ್') ದೊರೆತದ್ದು 1596

ಸ್ಟ್ರಾಟ್‌ಫರ್ಡ್‌ನಲ್ಲಿ 'ನ್ಯೂ ಪ್ಲೇಸ್' ಕೊಂಡದ್ದು 1597

'ಪಲ್ಲಾಡಿಸ್ ಟೇಮಿಯ'ದಲ್ಲಿ ಫ್ರಾನ್ಸಿಸ್ ಮಿಯರ್ಸ್‌ನಿಂದ ಪ್ರಶಂಸೆ 1598

ಗ್ಲೋಬ್ ಥಿಯೇಟರಿನ ನಿರ್ಮಾಣ; ಆ ಸೊತ್ತಿನಲ್ಲಿ ಷೇಕ್ಸ್ಪಿಯರನ ಹತ್ತನೆ ಒಂದು ಅಂಶ ಪಾಲುಗಾರಿಕೆ 1599

ಅಪ್ಪ ಜಾನ್‌ನ ಮರಣ 1601

ಲಾರ್ಡ್ ಚೇಂಬರ್‌ಲೆನನ ಮಂಡಳಿಗೆ ಒಂದನೆ ಜೇಮ್ಸ್‌ನಿಂದ ಮನ್ನಣೆ ದೊರೆತು 'ಕಿಂಗ್ಸ್ ಕಂಪನಿ'ಯೆಂದು ಅದರ ನಾಮಪರಿವರ್ತನೆಯಾದದ್ದು 1603

ಜೇಮ್ಸ್‌ನ ಪಟ್ಟದ ಮೆರವಣಿಗೆಯಲ್ಲಿ ಭಾಗವಹಿಸಲು ಆಯ್ಕೆಗೊಂಡದ್ದು 1604

ಬ್ಲ್ಯಾಕ್ ಫ್ರೈಯರ್ಸ್ ಥಿಯೇಟರನ ಏಳನೆ-ಒಂದು ಅಂಶ ಪಾಲುಗಾರಿಕೆ 1608

ಸಾನೆಟ್ಟುಗಳ ಪ್ರಕಟನೆ 1609

ಸ್ಟ್ರಾಟ್‌ಫರ್ಡಿಗೆ ಹಿಂದಿರುಗಿ ಹೋಗಿ ನೆಲಸಿದ್ದು 1610

ಗ್ಲೋಬ್‌ಗೆ ಬೆಂಕಿ ಬಿದ್ದದ್ದು 1613

ಮರಣ 23 ಏಪ್ರಿಲ್ 1616

ಮೊದಲ ಫೋಲಿಯೊದ ಪ್ರಕಟನೆ 1623

**ಹೊರಹೊದಿಕೆಯ ಮುಂಬದಿ :**

ರಿಚರ್ಡ್ ಬರ್ಬೇಜ್ ಚಿತ್ರಿಸಿದ್ದೆಂದು ಹೇಳಲಾದ 'ಷ್ಯಾಂಡೋಸ್ ಷೇಕ್‌ಸ್ಪಿಯರ್' ಛವಿಚಿತ್ರದ ಪ್ರತಿಕೃತಿ, ಶ್ರೀ ಆರ್. ಎಸ್. ಎನ್. ಮಾಡಿದ್ದು.

**ಹಿಂಬದಿ :**

ಗ್ಲೋಬ್ ನಾಟಕಶಾಲೆಯ ರೇಖಾಚಿತ್ರ

ಒಳರಟ್ಟಿನ ಮುಂಬದಿಯ ಮೇಲಿರುವ ಷೇಕ್‌ಸ್ಪಿಯರನ ಸಹಿ ಅವನ ಉಯಿಲಿನಲ್ಲಿಯದು.

